# ಮೈಸೂರು ಒಡೆಯರ ಚರಿತ್ರೆ: ಚರಿತ್ರಲೇಖನಶಾಸ್ತ್ರದ ಹಿನ್ನೆಲೆಯಲ್ಲಿ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)


ಸಂಶೋಧಕರು

ವಿಜಯಲಕ್ಷ್ಮಮ್ಮ ಜಿ.

ಮಾರ್ಗದರ್ಶಕರು

ಡಾ.ಎನ್.ಚಿನ್ನಸ್ವಾಮಿ ಸೋಸಲೆ

ಪ್ರಾಧ್ಯಾಪಕರು





ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೫

# ಮೈಸೂರು ಒಡೆಯರ ಚರಿತ್ರೆ: ಚರಿತ್ರೆಲೇಖನಶಾಸ್ತ್ರದ ಹಿನ್ನೆಲೆಯಲ್ಲಿ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ.ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧಕರು

ವಿಜಯಲಕ್ಷ್ಮಮ್ಮ ಜಿ.

ಮಾರ್ಗದರ್ಶಕರು

ಡಾ.ಎನ್.ಚಿನ್ನಸ್ವಾಮಿ ಸೋಸಲೆ

ಪ್ರಾಧ್ಯಾಪಕರು



ಚರಿತ್ರೆ ವಿಭಾಗ

ಸಮಾಜವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೫

# ಮಾರ್ಗದರ್ಶಕರ ದೃಢೀಕರಣ ಪತ್ರ

**ವಿಜಯಲಕ್ಷ್ಮಮ್ಮ ಜಿ.** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಮೈಸೂರು ಒಡೆಯರ ಚರಿತ್ರೆ : ಚರಿತ್ರೆಲೇಖನಶಾಸ್ತ್ರದ ಹಿನ್ನೆಲೆಯಲ್ಲಿ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಚರಿತ್ರೆ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

14.09.15

**ಡಾ.ಎನ್.ಚಿನ್ನಸ್ವಾಮಿ ಸೋಸಲೆ**
ಪ್ರಾಧ್ಯಾಪಕರು
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** 14.09.15

Dr. N. Chinnaswamy Sosale
Professor
Department of History
Kannada University, Hampi.
Vidyaranya - 583 276.

# ಸಂಶೋಧಕರ ಘೋಷಣಾ ಪತ್ರ

**ಮೈಸೂರು ಒಡೆಯರ ಚರಿತ್ರೆ : ಚರಿತ್ರೆಲೇಖನಶಾಸ್ತ್ರದ ಹಿನ್ನೆಲೆಯಲ್ಲಿ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಚರಿತ್ರೆ ವಿಭಾಗದ ಪ್ರಾಧ್ಯಾಪಕರಾದ **ಡಾ.ಎನ್.ಚಿನ್ನಸ್ವಾಮಿ ಸೋಸಲೆ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

ವಿಜಯಲಕ್ಷ್ಮಮ್ಮ ಜಿ.

**ವಿಜಯಲಕ್ಷ್ಮಮ್ಮ ಜಿ.**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

ಸ್ಥಳ : ವಿದ್ಯಾರಣ್ಯ
ದಿನಾಂಕ : 14/09/2015

# ಪರಿವಿಡಿ

## ಅಧ್ಯಾಯ ಒಂದು

# ಪ್ರಸ್ತಾವನೆ

ಚರಿತ್ರೆ ಬರವಣಿಗೆ ಅಥವಾ ಲೇಖನಶಾಸ್ತ್ರ ಎನ್ನುವುದು ವಿವಿಧ ದೃಷ್ಟಿಕೋನದಿಂದ ಚರಿತ್ರೆಯನ್ನು ಅಧ್ಯಯನ ನಡೆಸುವ ಒಂದು ಕ್ರಮ. ಚರಿತ್ರೆಯನ್ನು ಕಾಲಕಾಲಕ್ಕೆ ಅನುಗುಣವಾಗಿ ಸಮಾಜದ ಆಶೋತ್ತರಗಳಿಗೆ ಸ್ಪಂದಿಸುವ ರೀತಿಯಲ್ಲಿ ಶಿಸ್ತುಬದ್ಧವಾಗಿ ಅಧ್ಯಯನ ನಡೆಸಲಾಗುತ್ತದೆ. ಏಕೆಂದರೆ ಸಮಾಜ ಹೇಗಿರುತ್ತದೆಯೋ ಅದೇ ರೀತಿ ಚರಿತ್ರೆ ನಿರ್ಮಾಣವಾಗುತ್ತಿರುತ್ತದೆ. ಚರಿತ್ರೆಕಾರರು ಆಕರಗಳ ಮೂಲಕ ತಮಗೆ ದಕ್ಕಿದ ಮಾಹಿತಿಯ ಅರಿವನ್ನು ಇಲ್ಲಿ ನೇಯುತ್ತಾರೆ. ಚರಿತ್ರೆ ವಿವಿಧ ಕಾಲಘಟ್ಟಗಳಲ್ಲಿ ಹೇಗೆ ರೂಪುಗೊಂಡಿತು ಎಂಬುದರ ಬಗೆಗೆ ಚರಿತ್ರೆಕಾರರು ಹೊಸ ನೋಟಗಳನ್ನು ನೀಡಲು ಪರಾಮರ್ಶೆಯನ್ನು ಕೈಗೊಳ್ಳಬೇಕು. ಆಯಾಯ ವಿಷಯದ ಬಗೆಗೆ ಇದುವರೆಗೆ ಏನೇನು ಸಂಶೋಧನೆ ನಡೆದಿದೆ? ಹೇಗೆ ನಡೆದಿದೆ? ಇನ್ನೂ ಆಗಬೇಕಾದ ಸಂಶೋಧನೆಗಳೇನು? ಇವೇ ಮುಂತಾದ ಪರಾಮರ್ಶೆಯನ್ನು ಮಾಡಬೇಕಾಗುತ್ತದೆ. ವರ್ತಮಾನದ ನೆಲೆಯಲ್ಲಿ ಹಿಂದಿನ ಅಧ್ಯಯನಗಳನ್ನು ಸಮಸ್ಯೆ ಮತ್ತು ಸಾಧ್ಯತೆಗಳ ಮೂಲಕ ಮರುಚಿಂತನೆಗೆ ಒಳಪಡಿಸಬೇಕಾಗಿರುವುದು ಅನಿವಾರ್ಯವಾಗಿದೆ.

ಲೇಖನಶಾಸ್ತ್ರ ಎನ್ನುವುದು ವಿಜ್ಞಾನ ಮತ್ತು ತಂತ್ರಜ್ಞಾನಗಳ ಮುನ್ನಡೆಯಿಂದ ಪ್ರಯೋಜನ ಪಡೆದು ಹೊಸಹೊಸ ಆಲೋಚನೆಗಳ ಮೂಲಕ ತನ್ನ ವಿಧಾನಗಳನ್ನು ಪರಿಷ್ಕರಿಸುತ್ತಾ ಒಂದು ಜ್ಞಾನಶಿಸ್ತಾಗಿ ಬೆಳೆದುಬಂದಿದೆ. ಪ್ರಾರಂಭಿಕ ಕಾಲದಿಂದ ಇಂದಿನವರೆಗೂ ಬೆಳೆದುಕೊಂಡು ಬಂದ ವಿಧಿವಿಧಾನಗಳನ್ನು ಅನುಸರಿಸಿ, ವಿಷಯವನ್ನು ಸಂಶೋಧನೆ ನಡೆಸಿ ವಿಮರ್ಶೆ, ವಿಶ್ಲೇಷಣೆಗೆ ಒಳಪಡಿಸಿ ಒಂದು ತೀರ್ಮಾನಕ್ಕೆ ಬಂದು ರಚಿಸಿರುವುದೇ ಚರಿತ್ರೆಲೇಖನಶಾಸ್ತ್ರ. ಅಂದರೆ ಒಂದು ವಿಷಯವು ಅಧ್ಯಯನಕಾರರ ಗ್ರಹಿಕೆ, ತಾತ್ವಿಕತೆ, ದೃಷ್ಟಿಕೋನ ಮುಂತಾದ ಸೈದ್ಧಾಂತಿಕತೆಯ ನಿಲುವುಗಳಲ್ಲಿ ಸಮಕಾಲೀನವಾಗಿ ಕವಲೊಡೆಯುವುದೇ ಚರಿತ್ರೆಲೇಖನಶಾಸ್ತ್ರ. ಈ ಲೇಖನಶಾಸ್ತ್ರ ಎನ್ನುವುದು ಮರು ಓದಿನ ಮೂಲಕ ವಿಷಯವನ್ನು ಹೊಸ ಪರಿಪ್ರೇಕ್ಷ್ಯದಲ್ಲಿ ಕಟ್ಟುತ್ತದೆ. ಹಾಗೆಯೇ ರಚನೆಯಾಗಿರುವ ವಿಷಯವು ನಿರಚನೆ(De-construction) ಮತ್ತು ಪುನಾರಚನೆ(Re-Construction) ಆಗಿ ಸಾಗುತ್ತಿರುತ್ತದೆ. ಹಿಂದಿನ ಬರಹವನ್ನು ಪ್ರಶ್ನಿಸುವುದರಲ್ಲಿ ಪುನಾರಚನೆ ಅಡಗಿದೆ. ರಚನೆ, ನಿರಚನೆ ಮತ್ತು ಪುನಾರಚನೆ ಇವುಗಳೆಲ್ಲವೂ ಗತವನ್ನು ಮೌಲ್ಯೀಕರಣ

ಮಾಡುವ ಪ್ರಯತ್ನಗಳೇ ಆಗಿವೆ. ಇವು ಹಾಗೆಯೇ ಮುಂದುವರಿದುಕೊಂಡು ಹೋಗುತ್ತವೆ. ಇದರಿಂದ ಚರಿತ್ರೆಯ ವಿಭಿನ್ನ ಚಹರೆಗಳನ್ನು ಗ್ರಹಿಸಲು ಸಾಧ್ಯವಾಗುತ್ತದೆ. ವಿಷಯವು ಮುಖ್ಯವಾಗಿ ಚರಿತ್ರೆಕಾರರ ಮತ್ತು ಅಧ್ಯಯನ ವಿಷಯದ ಮನಸ್ಸುಕೇಂದ್ರಿತ ನೆಲೆಯಲ್ಲಿ ರೂಪುಗೊಳ್ಳುವ ಚಿಂತನೆ ಆಗಿರುತ್ತದೆ.

ಚರಿತ್ರೆ ಬರವಣಿಗೆಯಲ್ಲಿ ಮುಖ್ಯವಾಗಿರುವುದು ಗ್ರಹಿಕೆ, ತಾತ್ವಿಕತೆ(ಐಡಿಯಾಲಜಿ), ದೃಷ್ಟಿಕೋನ ಮುಂತಾದ ಸೈದ್ಧಾಂತಿಕ ಪ್ರಶ್ನೆಗಳು. ಚರಿತ್ರೆರಚನೆಯನ್ನು ಕುರಿತು ಅನೇಕ ವಿದ್ವಾಂಸರು ತಮ್ಮ ವಾದಗಳನ್ನು ಮಂಡಿಸಿದ್ದಾರೆ. ಆರ್.ಜಿ.ಕಾಲಿಂಗ್‌ವುಡ್ ಅವರು **ದಿ ಐಡಿಯಾ ಆಫ್ ಹಿಸ್ಟರಿ** ಎಂಬ ಕೃತಿಯಲ್ಲಿ ಚರಿತ್ರೆ ಬರವಣಿಗೆ ಬೆಳೆದುಬಂದ ಬಗೆ ಹಾಗೂ ಬದಲಾವಣೆಗಳನ್ನು ವಿವರಿಸುತ್ತಾರೆ. ಹಾಗೆಯೇ ಚರಿತ್ರೆರಚನಾಶಾಸ್ತ್ರಕ್ಕೆ ಸಂಬಂಧಿಸಿದಂತೆ ಚರಿತ್ರೆಯ ತಾತ್ವಿಕತೆಯನ್ನು ಯಾವ ರೀತಿ ಅರ್ಥೈಸಿಕೊಳ್ಳಲಾಗಿದೆ ಮತ್ತು ಬಳಸಿಕೊಳ್ಳಲಾಗಿದೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಘಟನೆಗಳ ಬಗ್ಗೆ ಚರಿತ್ರೆಕಾರ ವಿಶ್ಲೇಷಣೆ ನಡೆಸಬಾರದೆನ್ನುವ ರಾಷ್ಟ್ರೀಯವಾದಿ ನಿಲುವುಗಳನ್ನು ಆರ್.ಜಿ. ಕಾಲಿಂಗ್‌ವುಡ್ ವಿರೋಧಿಸಿದರು.[೧] ಇವರ ದೃಷ್ಟಿಕೋನದಲ್ಲಿ ಚರಿತ್ರೆ ಅಧ್ಯಯನದಲ್ಲಿ ಘಟನೆಗಳನ್ನು ದಾಖಲಿಸುವುದಷ್ಟೇ ಚರಿತ್ರೆಕಾರರ ಕೆಲಸವಲ್ಲ. ಆ ಘಟನೆಗಳನ್ನು ಅರಿತು ಅದರಲ್ಲಿರುವ ಆಲೋಚನೆ ಗಳನ್ನು ಗುರುತಿಸುವುದು ಚರಿತ್ರೆಕಾರರ ಉದ್ದೇಶವಾಗಿರಬೇಕು ಎಂದಿದ್ದಾರೆ. ಚರಿತ್ರೆಕಾರರು ತಾವು ಅಧ್ಯಯನ ಮಾಡುತ್ತಿರುವ ವಸ್ತುವಿಷಯವನ್ನು ಅರಿಯುವುದು ವರ್ತಮಾನದ ಸಂದರ್ಭದಲ್ಲಿ. ಹಾಗಾಗಿ ಚರಿತ್ರೆಕಾರರು ತಮ್ಮ ಕಾಲದ ಜನಜೀವನ ರೂಪಿಸಿದ ಮೌಲ್ಯಗಳಿಂದ ಪ್ರಭಾವಿತನಾಗಿರುತ್ತಾರೆ. ಹಿಂದಿನ ಇತಿಹಾಸವನ್ನು ಅರಿಯಲು ವರ್ತಮಾನದ ಬದುಕು ಚರಿತ್ರೆಕಾರರಿಗೆ ಮಾನದಂಡ ವಾಗಿರುತ್ತದೆ ಎನ್ನುವುದು ಕಾಲಿಂಗ್‌ವುಡ್ ಅವರ ಅಭಿಪ್ರಾಯವಾಗಿದೆ. ಚರಿತ್ರೆಕಾರರು ತಮ್ಮ ವಿಶ್ಲೇಷಣೆಗೆ ತಕ್ಕ ಹಾಗೆ ಆಕರಗಳನ್ನು ಹೊಂದಿಸಿಕೊಳ್ಳುತ್ತಾ, ಪರಸ್ಪರ ಪೂರಕವಾಗಿ ಕ್ರಿಯೆ ನಡೆಯುವಂತೆ ಮಾಡುತ್ತಾರೆ ಎಂದಿದ್ದಾರೆ.[೨] ಗತದ ಪುನರ್‌ವ್ಯಾಖ್ಯಾನ ಅಥವಾ ಹಿಂದೆ ನಡೆದ ಘಟನೆಗಳ ಕುರಿತು ಮರು ಆಲೋಚಿಸುವುದು ಚರಿತ್ರೆಯ ಉದ್ದೇಶವಾಗಿರಬೇಕು. ಚರಿತ್ರೆಯನ್ನು ಒಂದು ಉತ್ಪನ್ನ ಅಥವಾ ಸಿದ್ಧಗೊಂಡ ವಸ್ತು ಎಂಬುದಾಗಿ ತೀರ್ಮಾನಿಸದೆ ಅದನ್ನು ಒಂದು ಪ್ರಕ್ರಿಯೆಯನ್ನಾಗಿ ನೋಡಿರುವುದು ಕಾಲಿಂಗ್‌ವುಡ್ ಅವರ ಅಧ್ಯಯನದ ವಿಶೇಷ.

ಚರಿತ್ರೆರಚನೆ ಕುರಿತು ಇ.ಎಚ್.ಕಾರ್ ಅವರು ತಮ್ಮ ಕೃತಿ **ವಾಟ್ ಈಸ್ ಹಿಸ್ಟರಿ** ಎಂಬುದರಲ್ಲಿ ಇತಿಹಾಸಕಾರ ಚಿಂತನೆಗಳು ಸತ್ಯದಿಂದ ಕೂಡಿರುತ್ತವೆ. ತಮ್ಮ ತತ್ವಶಾಸ್ತ್ರ ಸೂಕ್ತಿಯನ್ನು ಅಳವಡಿಸಿ ಕೊಂಡಿರುವುದೇ ಸಮಕಾಲೀನ ಇತಿಹಾಸ ಎಂದು ತಿಳಿಸಿದ್ದಾರೆ.[೩] ಯೂನಿವರ್ಸಲ್ ಆದ ಸರ್ವಮಾನವ ಚರಿತ್ರೆಯ ರಚನೆ ಇ.ಎಚ್.ಕಾರ್‌ರ ಆದರ್ಶ. ವಿಷಯದ ವ್ಯಾಖ್ಯಾನವೇ ಚರಿತ್ರೆಯ ರಚನೆ. ವಿಷಯದ ಸಂಪರ್ಕ, ಗತಕಾಲವನ್ನು ವರ್ತಮಾನ ಕಾಲದ ದೃಷ್ಟಿಯಿಂದ ನೋಡಬೇಕು ಎಂದಿದ್ದಾರೆ. ಚರಿತ್ರೆ ಕಾಲಕಾಲಕ್ಕೆ ಅನುಗುಣವಾಗಿ ಮುಂದುವರಿದುಕೊಂಡು ಹೋಗುತ್ತದೆ. ಸಮಾಜದ ಮೇಲೆ ಯಾವ ರೀತಿಯ ಪ್ರಭಾವವನ್ನು ಬೀರುತ್ತದೆ ಎಂಬುದನ್ನು ವರ್ತಮಾನದಲ್ಲಿ ನಿಂತು ನೋಡಬೇಕಾಗುತ್ತದೆ.[೪] ಆದರೆ ಚರಿತ್ರೆ ಬದಲಾವಣೆಯ ಪ್ರಜ್ಞೆ ಮತ್ತು ತಾತ್ವಿಕತೆಯಲ್ಲಿ ನಂಬಿಕೆ

ಇರಬೇಕು ಎಂಬುದಾಗಿ ಇ.ಎಚ್.ಕಾರ್ ತಿಳಿಸಿದ್ದಾರೆ. ಹೀಗೆ ಆರ್.ಜಿ.ಕಾಲಿಂಗ್‌ವುಡ್ ಮತ್ತು ಇ.ಎಚ್.ಕಾರ್ ಅವರು ಚರಿತ್ರೆರಚನಾಶಾಸ್ತ್ರಕ್ಕೆ ಸಂಬಂಧಿಸಿದಂತೆ ತಮ್ಮ ಕೃತಿಗಳಲ್ಲಿ ಮೌಲ್ಯಯುತ ಚಿಂತನೆಗಳ ಮೂಲಕ ತಾತ್ವಿಕ ಚರ್ಚೆಗಳನ್ನು ನಡೆಸಿದ್ದಾರೆ.

ಚರಿತ್ರೆಯ ಲೇಖನಪರಂಪರೆಗೆ ಒಂದು ದೀರ್ಘ ಚರಿತ್ರೆ ಇದೆ. ಈ ಚರಿತ್ರೆಲೇಖನ ಪರಂಪರೆಯನ್ನು ಮೊದಲು ಪ್ರಾರಂಭಿಸಿದವರೇ ಗ್ರೀಕರು. ಪ್ರಮುಖವಾಗಿ ಚರಿತ್ರೆರಚನೆಗೆ ಅಡಿಪಾಯ ಹಾಕಿದವನೇಂದರೆ ಹೆರೊಡೋಟಸ್. ಮೊದಲು ಚರಿತ್ರೆ ಎಂದರೆ ಅದು ಮಾನವನ ಕ್ರಿಯೆಗಳಿಗೆ ಸಂಬಂಧಿಸಿದ್ದಲ್ಲ ಅದು ದೈವಿಕ ಕ್ರಿಯೆ ಎಂಬ ನಂಬಿಕೆ ಇತ್ತು. ದೇವಕೇಂದ್ರಿತ ಚರಿತ್ರೆ ಎಂದು ಗ್ರಹಿಸಲಾಗಿತ್ತು. ದೇವರೇ ನೇರವಾಗಿ ಆಳುತ್ತಾನೆ ಎನ್ನುವ ಪ್ರಭುತ್ವ ಸೃಷ್ಟಿಯಾಗಿತ್ತು. ಈ ಗ್ರಹಿಕೆಯನ್ನು ಹೆರೊಡೋಟಸ್ ಮತ್ತು ಥೂಸಿಡೈಡ್ಸ್ ಬದಲಾಯಿಸಿದರು. ಚರಿತ್ರೆ ದೈವಿಕ ಕೇಂದ್ರಿತವಲ್ಲ, ಅದು ಮಾನವಕೇಂದ್ರಿತ ಎಂಬುದಾಗಿ ತಿಳಿಸಿದರು.

ಹೆರೊಡೋಟಸ್‌ನ **ಹಿಸ್ಟರಿ ಆಫ್ ದಿ ಪರ್ಶಿಯನ್ ವಾರ್ಸ್** ಕೃತಿಯಲ್ಲಿ ಗ್ರೀಕ್ ಮತ್ತು ಪರ್ಶಿಯನ್ನರ ನಡುವಣ ಯುದ್ಧವು ಹೆರೊಡೋಟಸ್‌ನ ಚರಿತ್ರೆರಚನೆಯ ಕೇಂದ್ರವಸ್ತುವಾಯಿತು. ಇದರಲ್ಲಿ ಕೇವಲ ಯುದ್ಧದ ನಿರೂಪಣೆ ಅಲ್ಲದೇ ಒಂದು ಜನಾಂಗದ ಚರಿತ್ರೆಯೇ ಆಯಿತು. **ಹಿಸ್ಟೋರಿಸ್** ಗ್ರಂಥದಲ್ಲಿ ದಂತಕಥೆಗಳ ಮಿತಿಯನ್ನು ತಿಳಿಸುತ್ತಾನೆ. ಸಮಕಾಲೀನ ಸಂದರ್ಭವನ್ನು ಗ್ರಹಿಸಿ, ವಸ್ತುನಿಷ್ಠವಾಗಿ ಬರೆಯಲು ಪ್ರಯತ್ನಿಸುತ್ತಾನೆ. ಥೂಸಿಡೈಡ್ಸ್‌ನು **ದಿ ಹಿಸ್ಟರಿ ಆಫ್ ದಿ ಪೆಲೋಪೋನೇಶಿಯಸ್ ವಾರ್** ಎಂಬ ಕೃತಿಯಲ್ಲಿ ತನ್ನ ಸಮಕಾಲೀನ ಯುದ್ಧ ಸಂದರ್ಭಗಳನ್ನು ಮಾತನಾಡುವಾಗ ಯುದ್ಧದ ಅನ್ವೇಷಣೆಗೆ ತೊಡಗಿದ್ದರೂ, ಮಾನವನ ಸ್ವಭಾವವನ್ನು ಗಮನಿಸಬೇಕು. ಮಾನವನ ಚಟುವಟಿಕೆಗಳು ಮುಖ್ಯ ಎಂದು ಈ ಚರಿತ್ರೆಕಾರರು ಹೇಳಿದರು. ಇವರು ರಾಜಕೀಯ ವಿವರಣೆಗೆ ಕಟ್ಟುಬಿದ್ದು ಚರಿತ್ರೆಯನ್ನು ರಚಿಸಿದರು. ರೋಮನ್ ಚರಿತ್ರೆಲೇಖನ ಪರಂಪರೆಯಲ್ಲಿ ಪೊಲಿಬಿಯಾಸ್ **ಯುನಿವರ್ಸಲ್ ಹಿಸ್ಟರಿ** ಎಂಬ ೪೦ ಸಂಪುಟಗಳಲ್ಲಿ ಅನೇಕ ವಿಚಾರಗಳನ್ನು ಚರ್ಚಿಸಿರುತ್ತಾನೆ. ಆದರೆ ಎಲ್ಲಾ ಸಂಪುಟಗಳು ಲಭ್ಯವಾಗಿಲ್ಲ. ಚರಿತ್ರೆರಚನೆಗೆ ಮೂಲಾಧಾರಗಳು ಮುಖ್ಯ ಎಂದು ಹೇಳುತ್ತಾನೆ. ಈ ಚರಿತ್ರೆಲೇಖನ ಪರಂಪರೆಯಲ್ಲಿ ಸೆನ್ಸರ್ ಕ್ಯಾಟೋ ಪ್ರಮುಖನು.

ಸೆನ್ಸರ್ ಕ್ಯಾಟೋ ಲ್ಯಾಟಿನ್ ಭಾಷೆಯಲ್ಲಿ ಮೊದಲು ಚರಿತ್ರೆಯನ್ನು ಬರೆದನು. ಆದರೆ ತನ್ನ **ದಿ ಆರಿಜನ್ಸ್** ಕೃತಿಯಲ್ಲಿ ರಾಜರ ಮತ್ತು ದಂಡನಾಯಕರ ಅಂಕಿತವನ್ನು ಬಳಸಿಲ್ಲ. ಆದರೆ ಯುದ್ಧದಲ್ಲಿ ಭಾಗವಹಿಸಿದ ಸೈನಿಕರು, ಆನೆಗಳು, ಕುದುರೆಗಳ ಹೆಸರುಗಳನ್ನು ತಿಳಿಸಿದ್ದಾನೆ. ಅವನ ಕೃತಿಯಲ್ಲಿ 'ಸುರಸ್' ಎನ್ನುವ ಹೆಸರು ಬರುವುದು ಕೂಡ ಒಂದು ಆನೆಯ ಹೆಸರಾಗಿದೆ. ಯುದ್ಧದಲ್ಲಿ ಭಾಗವಹಿಸಿದ ಅಧಿಕಾರಿಗಳನ್ನು ಅಧಿಕಾರಸೂಚಕ ನಾಮಪದಗಳಲ್ಲಿಯೇ ಹೆಸರಿಸುತ್ತಾನೆಯೇ ವಿನಾ ಅವರ ಹೆಸರುಗಳಿಂದಲ್ಲ. ಇಂದಿನ ಸಬಾಲ್ಟರ್ನ್ ಚರಿತ್ರೆಕಾರರ ಕಾಳಜಿಗಳ ಪ್ರಾರಂಭವನ್ನು ಇವನಲ್ಲಿಯೇ ಕಾಣಬಹುದು. ಆದರೆ ಈತನ ಕೃತಿ ಕಳೆದುಹೋಗಿದೆ.[೫] ಲಿವಿಯು ರೋಮ್‌ನಲ್ಲಿದ್ದ ಜನತಾಂತ್ರಿಕ ವ್ಯವಸ್ಥೆಯ ಪತನ, ರೋಮನ್ ಸಾಮ್ರಾಜ್ಯದ ಉದಯ ಹಾಗೂ ಆಗಸ್ಟೈನ್‌ನ ಆಳ್ವಿಕೆಯ ಆರಂಭ ಕಾಲದ ವೈಭವವನ್ನು ಕಣ್ಣಾರೆ ಕಂಡಿದ್ದನು. ಲಿವಿ ಚರಿತ್ರೆ

ರಚಿಸಲು ಸರ್ಕಾರಿ ಹಾಗೂ ಖಾಸಗಿ ದಾಖಲೆಗಳನ್ನು ಬಳಸಿಕೊಂಡಿದ್ದಾನೆ. ಆದರೆ ಮೇಲ್ನೋಟಕ್ಕೆ ಕಾಣಿಸುವುದೆಲ್ಲ ಸತ್ಯ ಎಂದು ಹೇಳುತ್ತಾನೆಯೇ ಹೊರತು ಪುನರ್‌ವ್ಯಾಖ್ಯಾನಕ್ಕೆ ಒಳಪಡಿಸುವುದಿಲ್ಲ. ಟ್ಯಾಸಿಟಸ್‌ನು ಯುದ್ಧಗಳ ಒಳಗಡೆಯ ಕ್ರೌರ್ಯ, ಅಮಾನವೀಯತೆ, ವಾಸ್ತವ ಮುಂತಾದವುಗಳನ್ನು ಗ್ರಹಿಸದೇ ಯುದ್ಧ ಜಯವನ್ನು ಹೊಗಳಿಕೆ ಮಾಡಿ ಬರೆಯುತ್ತಾನೆ. ಈತನು ಸಾರ್ವಜನಿಕ ಮತ್ತು ವೈಯಕ್ತಿಕ ದಾಖಲೆಪತ್ರ ಮತ್ತು ಗೌಣವಾಗಿದ್ದ ಸಾಹಿತ್ಯ ಕೃತಿಗಳನ್ನು ವಿವೇಚನೆಯಿಂದ ಮೂಲಾಧಾರ ಗಳಾಗಿ ಬಳಸಿಕೊಂಡು ಅವನು ವಿಷಯಗಳನ್ನು ವಿಮರ್ಶೆ ಮಾಡುವುದರಲ್ಲಿ ಪರಿಣತಿ ಪಡೆದಿದ್ದನು. ಅವನ ಕೃತಿಗಳಲ್ಲಿ **ಹಿಸ್ಟೋರಿಸ್ ಆಂಡ್ ಆ್ಯನಲ್ಸ್** ವಿಶ್ಲೇಷಣಾತ್ಮಕವಾಗಿದೆ. ಇವರ ಬರವಣಿಗೆ ವಿಧಾನಗಳು ಬೇರೆಬೇರೆ ಆಗಿದ್ದರೂ ದೇಶದ ಚರಿತ್ರೆ ನಿರ್ಮಾಣದಲ್ಲಿ ಅವಶ್ಯಕ.[೬] ಹೀಗೆ ಗ್ರೀಕ್ ಮತ್ತು ರೋಮನ್ ಚರಿತ್ರೆ ಲೇಖನ ಸಂಪ್ರದಾಯಗಳು ಮಾನವತಾವಾದದ ಚರಿತ್ರೆಯನ್ನು ಕಟ್ಟಿಕೊಡುತ್ತವೆ.

ಜಗತ್ತಿನ ಎಲ್ಲಾ ಆಗುಹೋಗುಗಳಿಗೆ ಯೇಸುಕ್ರಿಸ್ತನೇ ಕಾರಣ ಎಂಬುದು ಚರ್ಚ್ ಲೇಖನ ಪರಂಪರೆಯ ಮುಖ್ಯ ತಿರುಳು. ಚರ್ಚ್ ಚರಿತ್ರೆಲೇಖನ ಕಲೆಯನ್ನು ಸಮರ್ಥಿಸಿ ಕೊಂಡವರಲ್ಲಿ ಸಂತ ಆಗಸ್ಟೈನ್ ಪ್ರಮುಖನು. ಅವನ **ಸಿಟಿ ಆಫ್ ಗಾಡ್** ಕೃತಿಯಲ್ಲಿ ಕ್ಯಾಥೋಲಿಕ್ ಲೇಖನ ಪರಂಪರೆ ಹಾಗೂ ದೇವರ ಕಲ್ಪನೆಯು ಚರಿತ್ರೆಯ ಕೇಂದ್ರಬಿಂದುವಾಯಿತು. ಕ್ರೈಸ್ತನು ಸಾವಿನಿಂದ ಪುನಃ ಜೀವ ಪಡೆದು ಬಂದ ಕ್ರಿಸ್ತ ಸಾಯುವುದಿಲ್ಲ. ಕಾಲಚಕ್ರ ನಿಯಮಕ್ಕೆ ವಿರುದ್ಧವಾದ ಸಿದ್ಧಾಂತವನ್ನು ಪ್ರತಿಪಾದಿಸಿದನು. ಮಾನವನ ಪ್ರತಿಯೊಂದು ಕ್ರಿಯೆಯು ದೈವದತ್ತ ಎನ್ನುತ್ತಾರೆ.

ಚರಿತ್ರೆ ಬರವಣಿಗೆ ಒಂದು ಅವಧಿಯಿಂದ ಇನ್ನೊಂದು ಅವಧಿಗೆ ಬದಲಾವಣೆ ಆಗುತ್ತದೆ. ಮಹಮ್ಮದ್ ಬಿನ್ ಇಶಾಕ್‌ನು ಅರಬ್ ಚರಿತ್ರೆಲೇಖನ ಪರಂಪರೆಯ ಪಿತಾಮಹನೆನಿಸಿಕೊಂಡಿದ್ದಾನೆ. ಇವನು **ಡಿಮಾಸ್ಕಸ್‌ನ ಉಮಯ್ಯದ್ ವಂಶ** ಎಂಬ ಕೃತಿಯಲ್ಲಿ ಮಹಮ್ಮದ್‌ನ ಯುದ್ಧಗಳನ್ನು ಕುರಿತು ರಚಿಸಿದ್ದಾನೆ. ಅಲ್‌ಬರೂನಿ, ಇಬನ್ ಬತೂತ, ಇಬನ್ ಖಾಲ್ದೂನ್‌ರು ಮಧ್ಯಕಾಲೀನ ಯುಗದ ರಾಜಕೀಯ ಬೆಳವಣಿಗೆ, ಸಾಮಾಜಿಕ ಸ್ಥಿತಿಗತಿಗಳು, ತರ್ಕ, ಕಾವ್ಯ, ವಿಜ್ಞಾನದ ಆವಿಷ್ಕಾರಗಳನ್ನು ತಿಳಿಸುತ್ತಾರೆ. ಮನುಷ್ಯನ ಸುತ್ತ ಅವನ ಚಟುವಟಿಕೆಗಳು ಸುತ್ತುತ್ತಿರುತ್ತವೆ ಎಂದಿದ್ದಾರೆ.

ಪುನರುಜ್ಜೀವನ ಕಾಲದ ಚರಿತ್ರೆಕಾರರು ಗ್ರೀಕ್ ಮತ್ತು ರೋಮನ್ ಹಳೆಯ ಕೃತಿಗಳ ಚಿಂತನೆಗಳಿಗೆ ಮರುಹುಟ್ಟು ನೀಡಿದರು. ಮತ್ತೊಮ್ಮೆ ಮಾನವಕೇಂದ್ರಿತ ಕಾಳಜಿಗಳು ಬೆಳೆಯಲಾರಂಭಿಸಿದವು. ಪ್ರಮುಖ ಚರಿತ್ರೆಕಾರನಾದ ಮೆಕೈವಲ್ಲಿಯು **ದಿ ಪ್ರಿನ್ಸ್** ಕೃತಿಯನ್ನು ರಾಜಕೀಯ ಚಿಂತನೆಯ ಅಡಿಯಲ್ಲಿ ರಚಿಸಿದನು. ಗ್ಯೂಸಿಯಾರ್ಡಿನಿಯಾ, ಬೇನ್ ಬೋದಿನ್, ಫ್ರಾನ್ಸಿಸ್ ಬೇಕನ್ ಮೊದಲಾದವರು ಮಾನವಕೇಂದ್ರಿತ ಚರಿತ್ರೆಯ ಅಧ್ಯಯನವನ್ನು ಕೈಗೊಂಡರು. ಡೆಕಾರ್ಟೆ ಕಾರ್ಟೇಸಿಯನ್ ಈ ಚಿಂತನೆಗೆ ಅಡಿಪಾಯ ಹಾಕಿದನು. ಇವನು ಗತದ ಘಟನೆಗಳಿಗೆ ಸಂದೇಹವನ್ನು ವ್ಯಕ್ತಪಡಿಸುತ್ತಾ ಅವು ಚರಿತ್ರೆಕಾರ ರಚಿಸಿದ ಹಾಗೇ ಇರುವುದಿಲ್ಲ ಎನ್ನುತ್ತಾನೆ. ಇದನ್ನು ವಿಕೋ, ಲಾಕ್, ಬರ್ಕ್ಲಿ ಮತ್ತು ಹ್ಯೂಮ್ ವಿರೋಧಿಸುತ್ತಾರೆ. ವಿಕೋ ಡೆಕಾರ್ಟೆಯ ಸಂದೇಹವಾದವನ್ನು ವಿರೋಧಿಸುತ್ತಾ, ಚರಿತ್ರೆಯಲ್ಲಿ ಗತ ಎನ್ನುವುದು ಪ್ರಾಚೀನವಾಗಿರದೇ ನಾವು ವಾಸಿಸುವ ಸಮಾಜದ

ಚಿತ್ರಣವೇ ಆಗಿದೆ ಎಂದಿದ್ದಾನೆ.[೭] ಸಮಾಜ ಹೇಗಿರುತ್ತದೆಯೋ ಹಾಗೆಯೇ ಚರಿತ್ರೆ ನಿರ್ಮಾಣ ವಾಗುತ್ತದೆ.

ಜ್ಞಾನೋದಯ ಯುಗವನ್ನು 'ವೈಚಾರಿಕತೆಯ ಯುಗ' ಎಂದು ಘೋಷಿಸಲಾಯಿತು. ಈ ಕಾಲದಲ್ಲಿ ಡೇವಿಡ್ ಹ್ಯೂಂ, ವಾಲ್ಟೈರ್ ಮತ್ತು ಎಡ್ವರ್ಡ್ ಗಿಬ್ಬನ್ ಪ್ರಮುಖರು. ಡೇವಿಡ್ ಹ್ಯೂಂ ಗತಕಾಲದ ಘಟನೆಗಳನ್ನು ಅರಿಯಲು ಬೌದ್ಧಿಕ ಸಾಧನೋಪಾಯಗಳನ್ನು ಉಪಯೋಗಿಸಿ ಕೊಂಡನು. ವಾಲ್ಟೈರ್ ಧರ್ಮ, ಪುರೋಹಿತ ವರ್ಗ, ಮಧ್ಯಕಾಲೀನ ಯುಗ, ಅನಾಗರಿಕತೆ ಮುಂತಾದ ಪದಗಳು ಜನಸಾಮಾನ್ಯರನ್ನು ಶೋಷಿಸುವ ಪದಗಳು ಎಂದು ಅರ್ಥೈಸಿ ನಿರೂಪಿಸಿದನು. ಆದರೆ ಕಾಲಿಂಗ್‌ವುಡ್ ಅವರು ಈ ಪರಿಕಲ್ಪನೆಗಳು ಆಯಾಮ ಕಾಲಘಟ್ಟದಲ್ಲಿ ಅವರದ್ದೇ ಆದ ಮೌಲ್ಯಗಳನ್ನು ಹೊಂದಿವೆ ಎಂದಿದ್ದಾರೆ(ಕಾಲಿಂಗ್‌ವುಡ್, ಪು.೭೬-೭೭). ಎಡ್ವರ್ಡ್ ಗಿಬ್ಬನ್ **ದಿ ಡಿಕ್ಲೈನ್ ಆ್ಯಂಡ್ ಫಾಲ್ ಆಫ್ ದಿ ರೋಮನ್ ಎಂಪೈಯರ್** ಕೃತಿಯಲ್ಲಿ ರೋಮ್‌ನ ಪತನವು ಅದರ ಅತಿಯಾದ ಪ್ರಸಿದ್ಧತೆಯ ಸ್ವಾಭಾವಿಕ ಹಾಗೂ ಅನಿವಾರ್ಯವಾದ ಪರಿಣಾಮವಾಗಿತ್ತು ಎಂದಿದ್ದಾರೆ.[೮] ಬಹುಮುಖ್ಯವಾಗಿ ಇವರು ಇತಿಹಾಸದ ಬದಲಾವಣೆಗೆ ಮಾನವನ ಸ್ವಭಾವ ಕಾರಣ ಎಂದು ಹೇಳಿದ್ದಾರೆ.

ಈ ಹಂತದಲ್ಲಿ ವೈಜ್ಞಾನಿಕ ಚರಿತ್ರೆ ಬರವಣಿಗೆಯ ಆರಂಭಿಕ ಘಟ್ಟ ಪ್ರಾರಂಭವಾಯಿತು. ಹೆಗಲ್ ಆದರ್ಶವಾದದಲ್ಲಿ ಗುರುತಿಸಿಕೊಂಡನು. ಹೆಗಲ್ ಇತಿಹಾಸವು ನಿತ್ಯ ಬದಲಾವಣೆ ಮತ್ತು ಸ್ವಾತಂತ್ರ್ಯದ ಬೆಳವಣಿಗೆ ಎನ್ನುತ್ತಾ ಸ್ವಾತಂತ್ರ್ಯವೇ ರಾಜ್ಯದ ಅತಿಶಯವಾದ ನಿಯಮ ಎಂದು ತಿಳಿಸಿದನು. ರಾಜಕೀಯ ಚರಿತ್ರೆಗೆ ಇವನು ಹೆಚ್ಚು ಒತ್ತುಕೊಟ್ಟನು. ಇದರಿಂದ ಪ್ರೇರಿತನಾದ ಕಾರ್ಲ್ ಮಾರ್ಕ್ಸ್ ಆರ್ಥಿಕ ಚರಿತ್ರೆಯನ್ನು ಹೊಸ ಸಿದ್ಧಾಂತವಾಗಿ ಬೆಳಕಿಗೆ ತಂದನು. ಉತ್ಪಾದನಾ ವಿಧಾನಗಳಲ್ಲಿ ಉಂಟಾಗುವ ಬದಲಾವಣೆಗಳು ವರ್ಗಕಲಹಗಳನ್ನು ತರುತ್ತವೆ ಹಾಗೂ ಆರ್ಥಿಕ ವಿಷಯವೇ ಸಾಮಾಜಿಕ ಪರಿವರ್ತನೆಯ ಸಂಕೀರ್ಣ ಪ್ರಕ್ರಿಯೆ ಮತ್ತು ಸಾಮಾಜಿಕ ರಚನೆ, ಸಾಂಸ್ಕೃತಿಕ ಮಾದರಿಗಳ ಜಟಿಲ ಸ್ವರೂಪವನ್ನು ತಿಳಿಸುತ್ತದೆ ಎನ್ನುತ್ತಾನೆ.[೯] ಆಗಸ್ಟ್ ಕಾಮ್ಟ್ ಮಾನವನ ಬುದ್ಧಿ, ಚಿಂತನೆ ಮತ್ತು ಸಾಮಾಜಿಕ ರಚನೆ ಮುಖ್ಯ ಎಂದಿದ್ದಾನೆ. ಸಮಾಜದ ಅಧ್ಯಯನಕ್ಕೆ ಚರಿತ್ರೆಯು ಅವಶ್ಯಕವಾದ ಅಕರಗಳನ್ನು ಒದಗಿಸುತ್ತದೆ ಎಂದು ಅಭಿಪ್ರಾಯ ಪಟ್ಟಿದ್ದಾನೆ. ನೆಬರ್ ಆಧಾರಗಳೊಂದಿಗೆ ವ್ಯವಹರಿಸುವ ರೀತಿ ಹಾಗೂ ಭಾಷಾಶಾಸ್ತ್ರದ ವಿಮರ್ಶೆಗೆ ಒಂದು ಹೊಸ ವಿಧಾನವನ್ನು ರೂಪಿಸಿದವರಲ್ಲಿ ಮೊದಲಿಗನು. ಇಂಗ್ಲೆಂಡಿನಲ್ಲಿ ಬ್ರಾಡ್ಲಿ, ಬ್ಯೂರಿ, ಓಕ್‌ಶೂಟ್, ಟಾಯನ್‌ಬಿ ಪ್ರಮುಖ ಇತಿಹಾಸಕಾರರಾಗಿದ್ದಾರೆ. ಟಾಯನ್‌ಬಿ ಅವರು ನಾಗರಿಕತೆಯನ್ನು ಒಂದು ರೀತಿಯ ಸಾಮಾಜಿಕ ಪಂಗಡ ಅಥವಾ ವರ್ಗದೊಂದಿಗೆ ಹೋಲಿಸುತ್ತಾರೆ. ಒಂದು ಪಂಗಡವು ತನ್ನ ಜೀವಿತ ಕಾಲದಲ್ಲಿ ಸತತವಾಗಿ ಪ್ರತಿಭಟನೆಗಳನ್ನು ಎದುರಿಸಿ ಪ್ರತ್ಯುತ್ತರಗಳನ್ನು ಕೊಡುತ್ತಿರ ಬೇಕಾಗುತ್ತದೆ. ಇದನ್ನು ಸವಾಲು(ಪ್ರತಿಭಟನೆ) ಮತ್ತು ಜವಾಬು(ಪ್ರತ್ಯುತ್ತರ) ಸಿದ್ಧಾಂತ ಎಂದು ಕರೆದರು. ಜರ್ಮನಿಯಲ್ಲಿ ರಾಂಕೆ ಅವರು ಇತಿಹಾಸಕಾರನು ವಿಮರ್ಶೆ, ಸ್ಪಷ್ಟತೆ ಹಾಗೂ ನಿಜಗಳನ್ನು ಭೇದಿಸಬೇಕು ಎಂದಿದ್ದಾರೆ. ಸ್ಪೆಂಗ್ಲರ್ ಜೈವಿಕ ಸಿದ್ಧಾಂತದಲ್ಲಿ ನಾಗರಿಕತೆಯು ಬಾಲ್ಯ, ಯೌವ್ವನ

ಮತ್ತು ಮುಪ್ಪಿನ ಹಂತದಲ್ಲಿ ಅವನತಿ ಹೊಂದುತ್ತದೆ ಎಂದು ತಿಳಿಸಿದ್ದಾನೆ. ಗತಕಾಲವನ್ನು ಪುನಾರಚಿಸುವುದು ಮಾತ್ರವಲ್ಲದೇ, ಇತಿಹಾಸದಲ್ಲಿ ಇನ್ನೂ ಗೋಚರವಾಗದ ವಿಷಯವನ್ನು ಹುಡುಕಬೇಕು ಎಂದಿದ್ದಾನೆ.[೧೦] ಫ್ರಾನ್ಸ್‌ನಲ್ಲಿ ವಾಲ್ಟೈರ್ ಪ್ರಮುಖ ಇತಿಹಾಸಕಾರನಾಗಿ ಗುರುತಿಸಿಕೊಂಡು ರಾಜಕೀಯ ಘಟನೆಗಳಿಗಿಂತ ಮಾನವಬುದ್ಧಿಯ ಇತಿಹಾಸವನ್ನು ಬೆಳಕಿಗೆ ತರಬೇಕು ಎಂದಿದ್ದಾನೆ. ಕ್ರೋಚೆ ಇಟಲಿಯಲ್ಲಿ ಗುರುತಿಸಿಕೊಂಡ ಇತಿಹಾಸಕಾರ: ಇವನು ಆರ್ಥಿಕ ಮತ್ತು ನೈತಿಕ ಅಂಶಗಳು ಚರಿತ್ರೆಗೆ ಮುಖ್ಯ ಎಂದಿದ್ದಾನೆ. ಈ ಹಿನ್ನೆಲೆಯಲ್ಲಿ ಇತಿಹಾಸವು ಸಮಕಾಲೀನ ಚರಿತ್ರೆಯಾಗಿರುತ್ತದೆ ಎಂಬುದನ್ನು ತಿಳಿಯಬಹುದಾಗಿದೆ.

ಭಾರತ ದೇಶದ ಚರಿತ್ರೆಲೇಖನ ಪರಂಪರೆಯಲ್ಲಿ ಪ್ರಾಚೀನದಲ್ಲಿ ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಇದ್ದಿತೇ ಅಥವಾ ಇಲ್ಲವೇ ಎಂಬುದರ ಬಗೆಗೆ ಚರ್ಚೆ ನಡೆದಿದೆ. ಪ್ರಾಚೀನ ಭಾರತೀಯರು ನಿರ್ದಿಷ್ಟ ಇತಿಹಾಸವನ್ನು ರಚಿಸಿಲ್ಲವಾದರೂ ಪರಂಪರೆಯಾಗಿ ಬಂದಿರುವ ಐತಿಹ್ಯ, ಕಾಲ್ಪನಿಕ ಕಥನ, ದಂತಕಥೆ, ವೇದಸಾಹಿತ್ಯ, ಮಹಾಕಾವ್ಯ, ಪುರಾಣ ಮುಂತಾದ ಅನೇಕ ರೀತಿಯ ಸಾಹಿತ್ಯ ದಾಖಲೆಗಳಲ್ಲಿ ಅಪಾರವಾಗಿರುವ ಐತಿಹಾಸಿಕ ವಿಷಯ ಸಾಮಗ್ರಿಗಳಿವೆ ಎಂಬುದನ್ನು ತಿಳಿಯಸುತ್ತದೆ. ಈ ಹಂತದಲ್ಲಿ ವಂಶಾವಳಿಗಳು, ಕಲ್ಹಣನ ರಾಜತರಂಗಿಣಿ, ಬಾಣಭಟ್ಟನ ಹರ್ಷಚರಿತ್ರೆ, ಬಿಲ್ಹಣನ ವಿಕ್ರಮಾಂಕದೇವ ಚರಿತ, ಮೂರನೇ ಸೋಮೇಶ್ವರನ ಮನಸೋಲ್ಲಾಸ ಕೃತಿಗಳು ಮುಖ್ಯವಾದವು. ಕರ್ನಾಟಕದ ಸಂದರ್ಭದಲ್ಲಿ ಹನ್ನೆರಡನೆಯ ಶತಮಾನದ ವಚನಕಾರರ ಸಾಹಿತ್ಯ, ಅನಂತರದ ದಾಸ ಸಾಹಿತ್ಯಗಳು ಮುಖ್ಯವಾದವುಗಳು. ಇವುಗಳೆಲ್ಲವೂ ತನ್ನ ಕಾಲದ ಸಾಮಾಜಿಕ ಸಂಘರ್ಷ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ವಲಯಗಳ ಬಗೆಗೆ ಬೆಳಕನ್ನು ಚೆಲ್ಲುತ್ತವೆ. ಸಂಘಮ್ ಸಾಹಿತ್ಯವು ತಮಿಳು ಪ್ರದೇಶದಲ್ಲಿ ಚಲನೆಯನ್ನು ಉಂಟುಮಾಡಿತು. ಇವುಗಳೆಲ್ಲವೂ ದಕ್ಷಿಣ ಭಾರತದ ಚರಿತ್ರೆಯ ಪುನಾರಚನೆಗೆ ಅಮೂಲ್ಯ ಸಾಮಗ್ರಿಗಳನ್ನು ಒದಗಿಸುತ್ತವೆ. ಈ ಹಂತದಲ್ಲಿ ಮಧ್ಯಕಾಲೀನ ಭಾರತೀಯ ಚರಿತ್ರೆಲೇಖನ ಪರಂಪರೆಯಲ್ಲಿ ವಂಶಾವಳಿಗಳು, ಅಮೀರ್ ಖುಸ್ರುನ ಖಿರಾನುಷ್-ಸಾದೈನ್, ಬರೋನಿಯ ತಾರೀಖ್-ಇಫಿರೋಜಾ ಷಾಹಿ, ಬಾಬರ್‌ನಾಮ, ಫಜಲ್ ಅಲಿಯ ತಬಕಲ್ಹತ್ ಇ ಅಕ್ಬರಿ, ಅಕ್ಬರ್ ನಾಮ, ಐನಿ ಅಕ್ಬರಿ ಕೃತಿಗಳು ಪ್ರಮುಖ ಪಾತ್ರ ವಹಿಸಿವೆ.[೧೧] ಈ ಕೃತಿಗಳಿಂದ ಗ್ರಹಿಕೆಯ ನೆಲೆಗಳಲ್ಲಿ ಹೊಸ ದಾರಿಗಳನ್ನು ಹುಡುಕುವ ಪ್ರಯತ್ನವನ್ನು ಇಲ್ಲಿ ಮಾಡಬಹುದಾಗಿದೆ.

ಭಾರತದಲ್ಲಿ ನಾವು ಇಂದು ಕಲಿಯುತ್ತಿರುವ ಹಾಗೂ ಸಂಶೋಧಿಸುತ್ತಿರುವ ಚರಿತ್ರೆಲೇಖನ ಪ್ರಾರಂಭವಾದುದ್ದು ವಸಾಹತುಯುಗದಲ್ಲಿ. ಭಾರತಕ್ಕೆ ಪಾಶ್ಚಾತ್ಯರ ಆಗಮನ ಮೊದಲು ವ್ಯಾಪಾರದ ಉದ್ದೇಶದ ಆರಂಭವಾಗಿ ನಂತರ ಈ ಸಂಪರ್ಕ ಕ್ರಮೇಣ ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಎಡೆ ಮಾಡಿಕೊಟ್ಟಿತು. ಈ ಸಂದರ್ಭದಲ್ಲಿ ಪಾಶ್ಚಾತ್ಯ ಚರಿತ್ರೆಲೇಖನವೂ ಇಲ್ಲಿ ತಳವೂರಿ, ಇವರಿಂದಲೇ ಭಾರತೀಯ ಇತಿಹಾಸವನ್ನು ಪಾಶ್ಚಾತ್ಯ ಚರಿತ್ರೆಲೇಖನ ವಿಧಾನದ ಸ್ವರೂಪದಲ್ಲಿ ಬರೆಯುವ ಪ್ರಕ್ರಿಯೆ ಪ್ರಾರಂಭವಾಯಿತು. ಆಧುನಿಕ ಕಾಲದಲ್ಲಿ ವಸಾಹತುಶಾಹಿ ಚರಿತ್ರೆಲೇಖನ, ರಾಷ್ಟ್ರೀಯವಾದಿ ಚರಿತ್ರೆಲೇಖನ, ಮಾರ್ಕ್ಸ್ ಅಥವಾ ಎಡಪಂಥೀಯ ಹಾಗೂ ಸಬಾಲ್ಟರ್ನ್ ಚರಿತ್ರೆಲೇಖನಗಳೆಂಬ

ವಿಭಾಗಳನ್ನು ಮಾಡಲಾಗಿದೆ. ಚರಿತ್ರೆಲೇಖನ ಪರಂಪರೆಗೆ ಈ ವರ್ಗೀಕರಣಗಳೇ ಅಂತಿಮವಾಗ ಬೇಕಿಲ್ಲ. ನಿರ್ದಿಷ್ಟ ಸಂಶೋಧನೆಯನ್ನು ಕೈಗೊಳ್ಳಲು ಬಯಸಿದ ವಿದ್ವಾಂಸರು ತಮ್ಮ ತಮ್ಮ ಅಧ್ಯಯನಕ್ಕೆ ಪ್ರಸ್ತುತವಾಗುವಂತೇ ಈ ಹೊಸ ಪ್ರಭೇದಗಳನ್ನು ಅಳವಡಿಸಿಕೊಂಡಿದ್ದಾರೆ. ರಚನೋತ್ತರ ವಾದ, ಆಧುನಿಕೋತ್ತರವಾದ ಮತ್ತು ವಸಾಹತೋತ್ತರವಾದ ಇವು ಪ್ರಸ್ತುತವಾಗಿ ಚರಿತ್ರೆಯಲ್ಲಿ ಗುರುತಿಸಲ್ಪಡುತ್ತಿವೆ. ಆಧುನಿಕೋತ್ತರವಾದದ ಒಂದು ಭಾಗವಾಗಿ ನವಚಾರಿತ್ರಿಕವಾದ ತನ್ನ ಬೇರುಗಳನ್ನು ಚರಿತ್ರೆಯಲ್ಲಿ ಬಿಟ್ಟಿದೆ. ಈ ಲೇಖನ ಪರಂಪರೆಯಲ್ಲಿ ವಿಭಿನ್ನ ಐತಿಹಾಸಿಕ ರಾಜ್ಯಗಳ ಕುರಿತು, ಪ್ರಾದೇಶಿಕ ವಿಭಾಗಗಳ ಕುರಿತು, ಚಳವಳಿಗಳ ಕುರಿತು, ಸಾಹಿತ್ಯ, ಕಲೆ, ಸಂಸ್ಕೃತಿ ಮುಂತಾದ ಸಂಪ್ರದಾಯಗಳ ಕುರಿತು ಇಲ್ಲಿಯವರೆಗೆ ಏನೇನು ಲೇಖನಗಳು ಬಂದಿವೆ ಎಂಬುದನ್ನು ಕೂಡ ಪರಾಮರ್ಶೆಗೆ ಆಯ್ಕೆ ಮಾಡಿಕೊಂಡು ತಾತ್ವಿಕ ಚರ್ಚೆಗಳನ್ನು ನಡೆಸಬಹುದಾಗಿದೆ.[೧೨]

ಭಾರತದ ಚರಿತ್ರೆ ವಸಾಹತುಶಾಹಿ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿ ರಚನೆಗೊಂಡ ಬಗ್ಗೆ ಹಲವು ಚರಿತ್ರೆಕಾರರು ಸೈದ್ಧಾಂತಿಕ ನಿಲುವುಗಳ ಮೂಲಕ ಚರ್ಚೆ ನಡೆಸಿದ್ದಾರೆ. ವಸಾಹತು ಶಾಹಿ ಕಾಲಘಟ್ಟದ ಸನ್ನಿವೇಶದಲ್ಲಿ ಬ್ರಿಟಿಷ್ ಹಾಗೂ ಪಾಶ್ಚಾತ್ಯ ವಿದ್ವಾಂಸರ ಸೈದ್ಧಾಂತಿಕತೆಗಳಿಗೆ ಒಳಗಾದ ನಮ್ಮ ಮನೋಚಿಂತನೆಗಳು ಇಂದಿಗೂ ಮುಂದುವರಿದಿದೆ. ಸಾಮಾನ್ಯವಾಗಿ ಚರಿತ್ರೆಯನ್ನು ಅರಸುಮನೆತನಗಳಿಗಷ್ಟೇ ಸೀಮಿತಗೊಳಿಸಿ ಅದೊಂದು ನಡೆದುಹೋದ ಘಟನೆ ಎನ್ನುವ ತೀರ್ಮಾನವನ್ನು ಕೊಡುವ ಅಧ್ಯಯನಗಳ ಸಂಖ್ಯೆಯೇ ಹೆಚ್ಚಿನದು. ಈ ಬೃಹತ್ ಅರಸು ಮನೆತನಗಳ ಚರಿತ್ರೆ ನಿರ್ಮಾಣವು ರಾಜಕೀಯ ಚರಿತ್ರೆಗಷ್ಟೇ ಸೀಮಿತಗೊಂಡಿತು. ಇದರಿಂದಾಗಿ ಚರಿತ್ರೆ ಎಂಬುದು ರಾಜರ ಚರಿತ್ರೆ ಎಂಬ ಸಂಕುಚಿತ ಅರ್ಥ ಪಡೆಯಿತು. ಬೃಹತ್ ಅರಸು ಮನೆತನಗಳಿಗಿಂತ ಚಿಕ್ಕಪುಟ್ಟ ಅರಸುಮನೆತನಗಳ ರಾಜಕೀಯ ಬದಲಾವಣೆಗಳು ಜನಸಾಮಾನ್ಯರ ಬದುಕಿನ ಮೇಲೆ ಹೆಚ್ಚಿನ ಪರಿಣಾಮವನ್ನುಂಟು ಮಾಡಿದವು. ಆದರೆ ಅವುಗಳ ಕುರಿತಾಗಿ ಹೆಚ್ಚಿನ ಅಧ್ಯಯನ ನಡೆದಿಲ್ಲ. ಪ್ರಸ್ತುತವಾಗಿ ಜನಮುಖಿ ಅಧ್ಯಯನಗಳು ನಡೆಯಬೇಕಾಗಿದೆ. ಲಿಖಿತ ದಾಖಲೆಗಳೇ ಉತ್ಕೃಷ್ಟವಾದವು ಎಂದು ಭಾವಿಸಿದ್ದ ಪಾಶ್ಚಾತ್ಯ ಚರಿತ್ರೆರಚನಾಶಾಸ್ತ್ರವು ನಮ್ಮಲ್ಲಿದ್ದ ಮೌಖಿಕ ಪರಂಪರೆಯನ್ನು ನಗಣ್ಯವೆಂದು ಪರಿಗಣಿಸಿತು. ಈ ದಿಶೆಯಲ್ಲಿಯೇ ಬ್ರಿಟಿಷ್ ಮತ್ತು ಪಾಶ್ಚಾತ್ಯ ಇತಿಹಾಸಕಾರರು 'ಭಾರತೀಯರಿಗೆ ಚರಿತ್ರೆಯೇ ಇಲ್ಲ, ಐತಿಹಾಸಿಕ ಜ್ಞಾನವಿಲ್ಲ, ಅವರು ಪುರಾಣಪ್ರಿಯರು' ಎಂದು ಹೇಳಿದರು. ಆದರೆ ಇಲ್ಲಿ ಪುರಾಣ, ಐತಿಹ್ಯ, ಕಥೆ, ಲಾವಣಿ, ದಂತಕಥೆ, ಒಗಟು, ಗಾದೆ, ಜಾನಪದ ಹಾಡು, ಕಾವ್ಯ, ನಾಟಕ ಮೊದಲಾದ ಪ್ರಕಾರಗಳಲ್ಲಿ ಚರಿತ್ರೆಯು ಬಾಯಿಂದ ಬಾಯಿಗೆ ಹರಿದುಬಂದು ಜೀವಂತವಾಗಿತ್ತು. ವಸಾಹತೀಕರಣಕ್ಕೆ ಒಳಪಟ್ಟ ಇಲ್ಲಿನ ವಿದ್ವಾಂಸರು ಈ ಜೀವಂತ ಮೌಖಿಕ ದಾಖಲೆಗಳನ್ನು ನಿರ್ಲಕ್ಷಿಸಿದರು.[೧೩] ಕೇವಲ ಲಿಖಿತ ದಾಖಲೆಗಳಿಂದ ಕಟ್ಟಿದ ಚರಿತ್ರೆಯನ್ನು ಸಾಂಪ್ರದಾಯಿಕ ರಾಜಕೀಯ ಚರಿತ್ರೆಯೆಂದು, ಇಂದಿಗೂ ಭಾರತದಲ್ಲಿ ಸಾಂಪ್ರದಾಯಿಕ ಚರಿತ್ರೆ ಹಲವು ಬಗೆಯ ಟೀಕೆ, ಪ್ರಕ್ರಿಯೆಗಳಿಗೆ ಒಳಗಾಗಿದೆ. ಈ ನಿಟ್ಟಿನಲ್ಲಿ ಬ್ರಿಟಿಷ್ ಮತ್ತು ಪಾಶ್ಚಾತ್ಯ ಇತಿಹಾಸಕಾರರಿಂದ ಲಿಖಿತ ದಾಖಲೆಗಳ ಮೂಲಕ ಇತಿಹಾಸವನ್ನು ರಚನೆ ಮಾಡಲಾಗಿತ್ತು. ಪ್ರಸ್ತುತವಾಗಿ ಜನರೊಂದಿಗೆ ನೇರವಾಗಿ ಮಾತನಾಡುವ ರೀತಿಯಲ್ಲಿ ಚರಿತ್ರೆ ಮೂಡಿಬರಬೇಕಾಗಿದೆ.

೧೭ ಮತ್ತು ೧೮ನೇ ಶತಮಾನದಲ್ಲಿ ಪಾಶ್ಚಾತ್ಯರು ಪೂರ್ವದ ದೇಶಗಳನ್ನು ತಮ್ಮ ವಸಾಹತು ಚಟುವಟಿಕೆಗಳಿಂದ ರಾಜಕೀಯ, ಆರ್ಥಿಕ ಹಿತಾಸಕ್ತಿಗಳಿಂದ ಶೋಧಿಸುವ ಪ್ರಕ್ರಿಯೆ ಆರಂಭವಾಯಿತು. ಸರ್ ವಿಲಿಯಂ ಜೋನ್ಸ್, ಎಫ್.ಮ್ಯಾಕ್ಸ್‌ಮುಲ್ಲರ್, ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಮ್ ಮುಂತಾದ ಸಂಶೋಧಕರು ಪ್ರತಿನಿಧಿಸುವ ಪಂಥವನ್ನು ಓರಿಯಂಟಲಿಸ್ಟ್(ಪೌರಸ್ತ್ಯವಾದ) ಎಂದು ಕರೆಯಲಾಗಿದೆ. ಈ ವಿದ್ವಾಂಸರು ಪೌರ್ವಾತ್ಯ ದೇಶಗಳ ಸಾಂಸ್ಕೃತಿಕ ಜನಜೀವನ ಹಾಗೂ ಪರಂಪರೆಯ ಕುರಿತು ಜಗತ್ತಿಗೆ ಹರಡಿದರು. ೧೭೮೪ರಲ್ಲಿ ಸರ್.ವಿಲಿಯಂ ಜೋನ್ಸ್ ಅವರು ಹುಟ್ಟುಹಾಕಿದ 'ರಾಯಲ್ ಏಶಿಯಾಟಿಕ್ ಸೊಸೈಟಿ' ಈ ದೇಶದ ಸಂಸ್ಕೃತಿಯನ್ನು ಹರಡಿತು. ಪಾಶ್ಚಾತ್ಯರು ಪೂರ್ವದೇಶಗಳ ಹಿಂದುಳಿದ ವ್ಯವಸ್ಥೆಯನ್ನು 'ನಿರಂಕುಶ ಪ್ರಭುತ್ವ' ಎಂದು ಬಣ್ಣಿಸಿದರು. ಈ ವಿದ್ವಾಂಸರು ಪ್ರಾಚೀನ ಚರಿತ್ರೆಯನ್ನು ಅಧ್ಯಯನ ವಸ್ತುವನ್ನಾಗಿ ಆಯ್ಕೆ ಮಾಡಿಕೊಂಡರು. ಈ ಚರಿತ್ರೆಕಾರರು 'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ, ಭಾರತವು ಆಧ್ಯಾತ್ಮಿಕ, ಅಲೌಕಿಕ ಚಿಂತನೆಗಳಿಂದ ಕೂಡಿದ ದೇಶ ಎಂಬುದಾಗಿ ಚಿತ್ರಿಸಿದರು.[೧೪] ಈ ಅಧ್ಯಯನಗಳಿಂದ ಎಡ್ವರ್ಡ್ ಸೈದ್ ಅವರು ತಮ್ಮ **ಓರಿಯಂಟಲಿಸಂ** ಕೃತಿಯಲ್ಲಿ ತಮ್ಮ ವಾದವನ್ನು ಮಂಡಿಸಿದ್ದಾರೆ. ಸೈದ್ ಅವರು ತಮ್ಮ ವಾದಕ್ಕೆ ಅನುಗುಣವಾಗಿ ಪಾಶ್ಚಾತ್ಯ ಪ್ರಭುತ್ವ ನಿರ್ಮಾಣದ ಒಂದು ಅವಿಭಾಜ್ಯ ಅಂಗಗಳಾಗಿದ್ದವು ಎನ್ನುತ್ತಾರೆ. ಈ ವಾದ ಯುರೋಪಿಯನ್ನರು ಭಾರತದ ಬಗೆಗೆ ತಳೆದಿದ್ದ ಪೂರ್ವಗ್ರಹಗಳನ್ನು ಮುಂದುವರಿಸುತ್ತದೆ.[೧೫] ಸೈದ್ ಅವರು ಪೌರ್ವಾತ್ಯ ಜ್ಞಾನವು ಹೇಗೆ ಸಾಮ್ರಾಜ್ಯಶಾಹಿ ಶಕ್ತಿಯಾಗಿ ಪರಿವರ್ತನೆಯಾಯಿತು ಎಂಬುದನ್ನು ತಿಳಿಸಿದ್ದಾರೆ.

ಭಾರತೀಯ ಚರಿತ್ರೆ ರಚನೆಯಲ್ಲಿ ಜ್ಞಾನಪರ್ವದ ಚಿಂತನೆಗಳು ಹಾಗೂ ರೊಮ್ಯಾಂಟಿಸಿಸ್ಟ್ ಚಿಂತನೆಗಳು ಪ್ರಭಾವ ಬೀರಿವೆ. ಜ್ಞಾನಪೂರ್ವದ ಚಿಂತನೆಗಳು ಬ್ರಿಟಿಷ್ ಸ್ವಯಂತಂತ್ರವಾದಿ (ಲಿಬರಲ್) ಚರಿತ್ರೆಲೇಖನದಲ್ಲಿ ಕಂಡುಬರುತ್ತವೆ. ಪ್ರಭುತ್ವಕ್ಕೆ ಸಮರ್ಥನೆ ಬರುವಂತೆ ಯುಟಿಲಿ ಟೇರಿಯನ್ ಚಿಂತಕರು ಪ್ರತಿಪಾದಿಸಿದ್ದರು. ಇತಿಹಾಸವು ಮಾನವ ಸಮಾಜದ ಪ್ರಗತಿಯ ಕಥನವಾಗಿದ್ದು, ಮನುಷ್ಯ ಸ್ವಾತಂತ್ರ್ಯ, ವೈಚಾರಿಕತೆ, ಐಹಿಕ ಅಭಿವೃದ್ಧಿ, ವಾಣಿಜ್ಯದ ಬೆಳವಣಿಗೆ ಇವುಗಳ ವಿಕಾಸವನ್ನು ಎತ್ತಿ ಹಿಡಿದ ಈ ಚರಿತ್ರೆಕಾರರು ಮಧ್ಯಯುಗವನ್ನು ಅಂಧಶ್ರದ್ಧೆ ಹಾಗೂ ವ್ಯಕ್ತಿಸ್ವಾತಂತ್ರ್ಯದ ದಮನದ ಯುಗ ಎಂದು ಗ್ರಹಿಸಿದ್ದರು. ವಿಗ್ ಚರಿತ್ರೆಕಾರರು ಆಧುನಿಕ ಪಾಶ್ಚಾತ್ಯರೆಂದೇ ಈ ನಾಗರಿಕ ಹಂತವನ್ನು ತಲುಪಿದವರಾಗಿದ್ದು ಉಳಿದೆಲ್ಲ ಸಮಾಜಗಳು ಇನ್ನೂ ಅನಾಗರಿಕ ಹಂತದಲ್ಲೇ ಇವೆ ಎಂದು ಭಾವಿಸಿದ್ದರು. ಇವರು ಪ್ರಪಂಚದಲ್ಲಿನ ಮಾನವ ಸಮಾಜಗಳನ್ನು ತಮ್ಮಂತೆ ನಾಗರಿಕ ಹಂತಕ್ಕೆ ತರುವುದು ಐರೋಪ್ಯರ ಕರ್ತವ್ಯ ಎಂದೂ ಭಾವಿಸಿದ್ದರು. ಚರಿತ್ರೆಯ ಮಾಹಿತಿಗಳನ್ನು ಆಕರಗಳಿಂದ ತೆಗೆಯುವ ವಿಮರ್ಶಾ ಪದ್ಧತಿಗಳನ್ನು ವೈಜ್ಞಾನಿಕವಾಗಿ ಬೆಳೆಸಿದರು. ಚರಿತ್ರೆಯ ಜ್ಞಾನ ಮಾನವ ಚರಿತ್ರೆಯ ಅಂತರ್ಗತ ನಿಯಮಗಳನ್ನು ದರ್ಶನ ಮಾಡಿಸಬೇಕು ಹಾಗೂ ವಿಜ್ಞಾನದಂತೇ ಚರಿತ್ರೆ ಕೂಡ ಭವಿಷ್ಯವನ್ನು ರೂಪಿಸಲು ಅನುಕೂಲವಾದ ಸತ್ಯಗಳನ್ನು ಕಂಡುಹಿಡಿಯಬೇಕು ಎಂದು ವಾದಿಸಿದರು. ಇವರನ್ನು ಪಾಸಿಟಿವಿಸ್ಟ್ ಚರಿತ್ರೆಕಾರರೆಂದು ಕರೆಯುತ್ತಾರೆ.[೧೬] ಐರೋಪ್ಯ ರೊಮ್ಯಾಂಟಿಸಿಸ್ಟ್ ಸಂಪ್ರದಾಯದವರು ಭಾರತೀಯ ಗತಕಾಲದ ವೈಭವೀಕರಣಕ್ಕೆ ಹೆಚ್ಚು ಒತ್ತು ನೀಡಿದರು. ಅನಂತರ ವಸಾಹತುಶಾಹಿ ನೆಲೆಯು ಪ್ರಾರಂಭವಾಯಿತು.

ಜೇಮ್ಸ್ ಮಿಲ್, ವಿನ್ಸೆಂಟ್ ಸ್ಮಿತ್ ಮತ್ತು ಮಾರ್ಕ್ ವಿಲ್ಕ್ಸ್ ಮುಂತಾದ ಸಾಮ್ರಾಜ್ಯಶಾಹಿ ಚರಿತ್ರೆಕಾರರು ಭಾರತದಲ್ಲಿ ಬ್ರಿಟಿಷರ 'ಒಡೆದು ಆಳುವ ನೀತಿ'ಗೆ ಪೂರಕವಾಗಿ ಚರಿತ್ರೆಯನ್ನು ರಚಿಸಿದರು. ಧಾರ್ಮಿಕ ಕೋಮುಭಾವನೆಗಳು ಮೂಡುವಂತೆ ಮಾಡಿದರು. ಭಾರತದಲ್ಲಿ ವಸಾಹತುಶಾಹಿ ಆಳ್ವಿಕೆಯನ್ನು ಬಲಪಡಿಸುವುದು ಇವರ ಉದ್ದೇಶವಾಗಿತ್ತು. ಜೇಮ್ಸ್‌ಮಿಲ್ ೧೮೧೭ರಲ್ಲಿ **ಎ ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ** ಎಂಬ ಕೃತಿಯನ್ನು ರಚಿಸಿದನು. ಇದರಲ್ಲಿ ಭಾರತದ ಚರಿತ್ರೆಯನ್ನು ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಎಂಬುದಾಗಿ ಹಿಂದೂ, ಮುಸ್ಲಿಂ ಹಾಗೂ ಬ್ರಿಟಿಷ್ ನೆಲೆಯಲ್ಲಿ ವಿಂಗಡಿಸಲಾಯಿತು.[೧೭] ಪ್ರಾಚೀನ ಹಾಗೂ ಮಧ್ಯಕಾಲೀನ ಹಿಂದೂ ಹಾಗೂ ಮುಸ್ಲಿಂ ಎನ್ನುವ ಧಾರ್ಮಿಕ ನೆಲೆಯಲ್ಲಿ ವಿಂಗಡನೆಗೊಂಡಂತೆ ಆಧುನಿಕ ಅವಧಿಯು ಕ್ರಿಶ್ಚಿಯನ್(ಕ್ರೈಸ್ತ) ಎನ್ನುವ ಧಾರ್ಮಿಕ ನೆಲೆಗಟ್ಟಿನಲ್ಲಿ ವಿಂಗಡನೆಗೊಳ್ಳಲಿಲ್ಲ. ಆ ಅವಧಿಯನ್ನು ಆಧುನಿಕ ಅಥವಾ ಬ್ರಿಟಿಷ್ ಎಂಬುದಾಗಿ ಕರೆಯಲಾಯಿತು. ಇದು ವಿಭಜಿಸಿ ಆಳುವ ನೀತಿಗೆ ಅನುಗುಣವಾದ ವಿಂಗಡಣೆಯಾಗಿದೆ. ವಿನ್ಸೆಂಟ್ ಸ್ಮಿತ್ ಅವರು ೧೯೦೪ರಲ್ಲಿ **ಅರ್ಲಿ ಹಿಸ್ಟರಿ ಆಫ್ ಇಂಡಿಯಾ** ಎಂಬ ಕೃತಿಯ ಮೂಲಕ ಪ್ರಾಚೀನ ಇತಿಹಾಸ ಅಥವಾ ಭಾರತದ ಚರಿತ್ರೆಯ ಗತಿಯನ್ನು ನಿರೂಪಿಸಿದವರಲ್ಲಿ ಮೊದಲಿಗರು.[೧೮] ವಿವಿಧತೆಯಲ್ಲಿ ಏಕತೆಯನ್ನು ತರುವಲ್ಲಿ ಶ್ರಮಿಸಿದರು. ಭಾರತೀಯರಿಗೂ ಚಾರಿತ್ರಿಕತೆಯ ಜ್ಞಾನ ಅವಶ್ಯಕವಾಗಿ ಇತ್ತು ಎಂಬುದನ್ನು ಇವರ ವಾದದಲ್ಲಿ ತಿಳಿಸಿದರು. ಮಾರ್ಕ್ ವಿಲ್ಕ್ಸ್ ಅವರು **ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ** ಕೃತಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಮಹಾವಂಚಕರು, ಆಕ್ರಮಣಕಾರರು ಎಂದು ಬರೆಯುತ್ತಾರೆ. ಸಿಂಹಾಸನಕ್ಕಾಗಿ ಅರಮನೆಯಲ್ಲಿ ನಡೆದ ರಕ್ತಪಾತ, ಹಲವಾರು ಕೊಲೆ, ಸಂಘರ್ಷಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಈ ರೀತಿಯ ಹಿಂಸಾತ್ಮಕ ಘಟನೆಗಳನ್ನು ಚಿತ್ರಿಸುವ ಮೂಲಕ ಒಡೆಯರು, ಹೈದರ್ ಹಾಗೂ ಟಿಪ್ಪು ಆಡಳಿತಕ್ಕೆ ಪರ್ಯಾಯವಾದ ಬ್ರಿಟಿಷ್ ಆಡಳಿತ, ಜನರ ಹಿತದೃಷ್ಟಿಯಿಂದ ಅನಿವಾರ್ಯವಾಗಿತ್ತು ಎಂಬುದನ್ನು ಸಮರ್ಥಿಸುತ್ತಾರೆ.[೧೯] ಈ ಅಂಶಗಳು ಇಂದಿಗೂ ಸಂಶೋಧನೆಗೆ ಒಳಪಡುತ್ತಿವೆ. ಎಲಿಯೆಟ್ ಅವರು ಭಾರತೀಯ ಇತಿಹಾಸ ಕುರಿತು ಎಂಟು ಸಂಪುಟಗಳು, ಹಂಟರ್ ಅವರು **ರೂಲರ್ಸ್ ಆಫ್ ಇಂಡಿಯಾ** ಎಂಬ ಇಪ್ಪತ್ತೆಂಟು ಸಂಪುಟಗಳು, ಎಲ್‌ಫಿನ್‌ಸ್ಟನ್ ಅವರು **ಹಿಸ್ಟರಿ ಆಫ್ ಹಿಂದೂ ಅ್ಯಂಡ್ ಮಹಮ್ಮಡನ್ ಇಂಡಿಯಾ** ಹಾಗೂ ಮೋರೆಲ್ಯಾಂಡ್ ಅವರು ಆರ್ಥಿಕ ಚರಿತ್ರೆಗೆ ಸಂಬಂಧಿಸಿದ ಕೃತಿಗಳನ್ನು ರಚಿಸಿದರು. ಇವರು ಬ್ರಿಟಿಷರ ಆಳ್ವಿಕೆಯು ಭಾರತದ ಆರ್ಥಿಕತೆಯನ್ನು ಶಿಥಿಲ ಮಾಡಿದರು ಎಂದು ಮೊಘಲರ ಕಾಲದ ಆರ್ಥಿಕತೆಯ ಮೂಲಕ ವಿವರಿಸಿದ್ದಾರೆ.[೨೦]

ಅನಿಲ್ ಸೀಲ್, ಜ್ಯೂಡಿಲ್ ಬ್ರೌನ್, ಡೇವಿಡ್ ವಾಶ್‌ಬ್ರೂಕ್, ಸೂಸಾನ್ ಬೇಲಿ, ಕ್ರಿಸ್ ಬೇಲಿ, ರುಡಾಲ್ಫ್, ಓ.ಹ್ಯಾನಲನ್ ಮೊದಲಾದವರು ಕೇಂಬ್ರಿಡ್ಜ್‌ನ ಚರಿತ್ರೆಕಾರರಾಗಿ ಗುರುತಿಸಿ ಕೊಂಡಿದ್ದಾರೆ. ಭಾರತ ಒಂದು ಏಕಸಂಸ್ಕೃತಿಯ, ಮತದ ನಾಡಲ್ಲವಾದ್ದರಿಂದ ರಾಷ್ಟ್ರೀಯತೆ ಸಾಧ್ಯವಿಲ್ಲ ಎಂಬ ವಾದ ವಸಾಹತುಶಾಹಿ ಅಧಿಕಾರಿಗಳಲ್ಲಿ ಬಲವಾಗಿತ್ತು ಹಾಗೂ ಆ ನಿಟ್ಟಿನಲ್ಲಿ ರಾಜಕೀಯವನ್ನು ಕೂಡ ಬ್ರಿಟಿಷರು ಬೆಳೆಸಿದ್ದರು. ರಾಷ್ಟ್ರೀಯ ಕಾಂಗ್ರೆಸ್ ನೇತಾರರು ಕೂಡ ಭಾರತೀಯರನ್ನೆಲ್ಲ ಪ್ರತಿನಿಧಿಸುವುದಿಲ್ಲ ಹಾಗೂ ಇವರ ಹೋರಾಟಗಳು ಸಾಮ್ರಾಜ್ಯಶಾಹಿಯ

ದಮನದಿಂದ ವಿಮೋಚನೆ ಪಡೆಯುವ ಉದ್ದೇಶಕ್ಕಿಂತ ತಾವು ಅಧಿಕಾರವನ್ನು ಪಡೆಯುವ ಉದ್ದೇಶವನ್ನು ಹೊಂದಿದ್ದರು ಎಂಬ ವಾದವನ್ನು ಕೇಂಬ್ರಿಡ್ಜ್ ಚರಿತ್ರೆಕಾರರು ೨೦ನೇ ಶತಮಾನದ ಮಧ್ಯಭಾಗದಲ್ಲಿ ರೂಪಿಸತೊಡಗಿದರು.[೨೧] ವಸಾಹತುಶಾಹಿ ಆಗಮನವನ್ನು ವಸಾಹತುಪೂರ್ವ ಯುಗದ ನಾಶವಾಗಿ ನೋಡುವುದಿಲ್ಲ. ಬದಲಿಗೆ ಮುಂದುವರಿಕೆಯಾಗಿ ನೋಡುತ್ತಾರೆ. ಸ್ಥಳೀಯರು ಕೂಡ ಸಾಮ್ರಾಜ್ಯಶಾಹಿಗಳ ಜೊತೆ ಕೈ ಜೋಡಿಸಿದ್ದನ್ನು ತಿಳಿಯಬಹುದು.

ವಸಾಹತುಶಾಹಿಯ ನಿಲುವುಗಳನ್ನು ಎದುರಿಸಲು ರಾಷ್ಟ್ರೀಯವಾದಿ ಪಂಥ ಹುಟ್ಟಿಕೊಂಡಿತು. ಆದರೂ ಈ ಪಂಥದ ಚರಿತ್ರೆಕಾರರು ಸಾಮ್ರಾಜ್ಯಶಾಹಿ ಚರಿತ್ರೆಕಾರರ ಹಲವು ಅಂಶಗಳನ್ನು ತನ್ನ ಸಿದ್ಧಾಂತದೊಳಗೆ ಸೇರಿಸಿಕೊಂಡರು. ಇವರ ಅಂತಿಮ ಉದ್ದೇಶ ಭಾರತವೂ ಒಂದು ರಾಷ್ಟ್ರ ಎಂಬುದನ್ನು ಸಾಧಿಸಿ ಬ್ರಿಟಿಷ್ ಆಳ್ವಿಕೆಯಿಂದ ವಿಮೋಚನೆ ಪಡೆಯುವುದಾಗಿತ್ತು. ಕೆ.ಪಿ.ಜಯಸ್ವಾಲ್, ಆರ್.ಜಿ.ಭಂಡಾರ್ಕರ್, ಹೆಚ್.ಸಿ.ರಾಯ್‌ಚೌಧರಿ, ಆರ್.ಸಿ.ಮಜುಂದಾರ್, ಆರ್.ಕೆ.ಮುಖರ್ಜಿ, ಆನಂದ ಕುಮಾರಸ್ವಾಮಿ, ಗೋಪಿನಾಥರಾವ್, ಕೆ.ಎ.ನೀಲಕಂಠಶಾಸ್ತ್ರಿ, ಜಾದೂನಾಥ್ ಸರ್ಕಾರ್, ವಿ.ವಿ.ಕಾಣೆ, ಮುಂತಾದ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸು ಕೇಂದ್ರಿತ ಮತ್ತು ಧರ್ಮ ಕೇಂದ್ರಿತ ಚಿಂತನೆಗಳಿಗೆ ಹೆಚ್ಚು ಮಹತ್ವವನ್ನು ನೀಡಿದರು. ಆನಂದ ಕುಮಾರಸ್ವಾಮಿ ಅವರು ರಾಷ್ಟ್ರೀಯ ಜಾಗೃತಿಗಾಗಿ ಪ್ರಯತ್ನಿಸಿದ್ದರು. ಕೆ.ಪಿ.ಜಯಸ್ವಾಲ್ ಅವರು ತಮ್ಮ ಕೃತಿ **ಹಿಂದೂ ಪಾಲಿಟಿ**ಯಲ್ಲಿ ಭಾರತೀಯರು ಬ್ರಿಟಿಷರಿಗಿಂತಲೂ ಮೊದಲೇ ಗಣತಂತ್ರ ವ್ಯವಸ್ಥೆಯನ್ನು ಹೊಂದಿದ್ದರು ಎಂಬುದನ್ನು ತಿಳಿಸಿದರು.[೨೨] ಆರ್.ಜಿ. ಭಂಡಾರ್ಕರ್ ಅವರು ಪ್ರಾಚೀನ ಭಾರತವನ್ನು ಯುರೋಪಿನ ಲೇಖಕರಿಗಿಂತ ವಿಮರ್ಶಾತ್ಮಕವಾಗಿ ತಮ್ಮ ಆಧಾರ ಗ್ರಂಥಗಳನ್ನು ಪರಿಶೀಲಿಸಿದರು. ಆರ್.ಸಿ. ಮಜುಂದಾರ್ ಅವರು ಆಧುನಿಕ ಭಾರತದ ಚರಿತ್ರೆ ಲೇಖನವು ಯಾವ ರೀತಿ ಬೆಳೆದು ಬಂದಿತು ಎಂಬುದನ್ನು ತಿಳಿಸುತ್ತಾ, ಹೇಗೆ ಯುರೋಪಿಯನ್ ಚರಿತ್ರೆಕಾರರು ಭಾರತದ ಚರಿತ್ರೆಯನ್ನು ಅಲ್ಲಗಳೆದರು ಎಂಬುದನ್ನು ವಿಶ್ಲೇಷಿಸುತ್ತಾ ಹೋಗುತ್ತಾರೆ. ಕೆ.ಎ.ನೀಲಕಂಠಶಾಸ್ತ್ರಿ ಅವರು ದಕ್ಷಿಣ ಭಾರತೀಯ ಇತಿಹಾಸವನ್ನು ರಚಿಸಿ, ರಾಷ್ಟ್ರೀಯ ಚರಿತ್ರೆಯಲ್ಲಿ ಗುರುತಿಸಿಕೊಂಡಿದ್ದಾರೆ. ಆರ್.ಕೆ. ಮುಖರ್ಜಿ ಅವರು ಭಾರತವು ವೈವಿಧ್ಯತೆಯ ಸಂಸ್ಕೃತಿಯನ್ನು ಹೊಂದಿತ್ತು ಎಂದಿದ್ದಾರೆ. ಹೆಚ್.ಸಿ.ರಾಯ್‌ಚೌಧರಿ ಅವರು ಪ್ರಾಚೀನ ರಾಜವಂಶಗಳನ್ನು ವಿವಿಧತೆಯಲ್ಲಿ ಏಕತೆಯ ಮೂಲಕ ಗುರುತಿಸಿರುವುದನ್ನು ಕಾಣಬಹುದು. ಗೋಪಿನಾಥ್ ರಾವ್ ಅವರು 'ಹಿಂದೂ ಮೂರ್ತಿಶಾಸ್ತ್ರದ' ವಿವರಗಳನ್ನು ತಿಳಿಸಿದ್ದಾರೆ. ಜಾದೂನಾಥ್ ಸರ್ಕಾರ್ ಅವರು ಮೊಘಲ್ ಕಾಲದ ಚರಿತ್ರೆಯಲ್ಲಿ ಗುರುತಿಸಿಕೊಂಡಿದ್ದು, ಮುಸ್ಲಿಂ ಅರಸರು ಹಿಂದೂಗಳ ಬಗೆಗೆ ದಮನಕಾರಿ ಮನೋಭಾವನೆ ಹೊಂದಿದ್ದರು ಎನ್ನುತ್ತಾರೆ.[೨೩] ಪಿ.ವಿ.ಕಾಣೆ ಅವರು **ಹಿಸ್ಟರಿ ಆಫ್ ಧರ್ಮಶಾಸ್ತ್ರಾಸ್** ಕೃತಿಯಲ್ಲಿ ಬ್ರಿಟಿಷ್ ಪಂಡಿತರ ಅಂಶಗಳನ್ನು ಯಥಾವತ್ತಾಗಿ ಅನುಸರಿಸಿದರು. ಈ ನಿಟ್ಟಿನಲ್ಲಿ ಭಾರತೀಯ ಚರಿತ್ರೆಯ ವಿಭಿನ್ನ ಅಂಶಗಳಿಂದ ಆಡಳಿತ, ಮತ ಸಂಪ್ರದಾಯಗಳು, ತತ್ವಶಾಸ್ತ್ರ, ಸಾಹಿತ್ಯ, ಕಲೆ, ವಾಸ್ತುಶಿಲ್ಪ ಹಾಗೂ ಮೂರ್ತಿಶಿಲ್ಪ ಮುಂತಾದ ಭಾರತೀಯತೆಯ ಹೆಮ್ಮೆಯ ವಿಷಯಗಳನ್ನು ಹೊಗಳಿದರು. ಇವರು ಸುವರ್ಣಯುಗದ ವೈಭವವನ್ನು ತಿಳಿಸಿದರು.

ಮಾರ್ಕ್ಸ್‌ವಾದಿ ಪಂಥವು ವಸಾಹತುಶಾಹಿ ಮತ್ತು ರಾಷ್ಟ್ರೀಯವಾದಿ ಪಂಥಗಳಿಗಿಂತ ಭಿನ್ನವಾದ ರೀತಿಯಲ್ಲಿ ಚರಿತ್ರೆಯನ್ನು ವ್ಯಾಖ್ಯಾನಿಸಿತು. ಚರಿತ್ರೆಯಲ್ಲಾದ ಬದಲಾವಣೆಗಳಿಗೆ ಆಯಾಯ ಸಂದರ್ಭದಲ್ಲಾದ ಉತ್ಪಾದನಾ ವಿಧಾನವೇ ಕಾರಣ ಎಂಬ ವಾದವನ್ನು ಮಾರ್ಕ್ಸ್‌ವಾದಿ ಚರಿತ್ರೆಕಾರರು ಮುಂದಿಟ್ಟರು. ಉತ್ಪಾದನಾವ್ಯವಸ್ಥೆ ವರ್ಗಸಂಘರ್ಷದಿಂದಾಗಿ ಬದಲಾಗುತ್ತಲೇ ಬಂದಿದೆ. ಗುಲಾಮ ಪದ್ಧತಿಯ ನಂತರ ಊಳಿಗಮಾನ್ಯ(ಫ್ಯೂಡಲ್)ವ್ಯವಸ್ಥೆ ಬಂದಿತು ಹಾಗೂ ನಂತರ ಫ್ಯೂಡಲ್ ವ್ಯವಸ್ಥೆ ನಾಶವಾಗಿ ಬಂಡವಾಳಶಾಹಿ ವ್ಯವಸ್ಥೆ ಬಂದಿತು. ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಉತ್ಪಾದಕ ವರ್ಗವಾದ ಕಾರ್ಮಿಕರು, ಶ್ರಮಿಕರು ಕ್ರಾಂತಿಯನ್ನು ಮಾಡುತ್ತಾರೆ. ಪರಿಣಾಮವಾಗಿ ಬಂಡವಾಳಶಾಹಿ ವ್ಯವಸ್ಥೆ ಕೊನೆಗೊಂಡು ಸಮತಾಸಮಾಜ ಬರುತ್ತದೆ. ಈ ನಿಟ್ಟಿನಲ್ಲಿ 'ಆರ್ಥಿಕ ನಿರ್ಣಯಕತೆ'ಯಲ್ಲಿ ಉತ್ಪಾದನಾ ವಿಧಾನ ಪ್ರಮುಖವಾದುದು. ಭಾರತದಲ್ಲಿ ಎಸ್.ಎ.ಡಾಂಗೆ, ಡಿ.ಡಿ.ಕೊಸಾಂಬಿ, ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಆರ್.ಎಸ್.ಶರ್ಮ, ಡಿ.ಎನ್.ಝಾ, ಬಿ.ಎನ್.ಎಸ್.ಯಾದವ, ಆರ್.ಎನ್.ನಂದಿ, ದೇವಾಂಗೂ ದೇಸಾಯಿ, ರೋಮಿಲಾ ಥಾಪರ್, ಬಿ.ಡಿ.ಚಟ್ಟೋಪಾಧ್ಯಾಯ, ಇರ್ಫಾನ್ ಹಬೀಬ್, ಆರ್.ಪಾಮೆದತ್, ಎ.ಆರ್.ದೇಸಾಯಿ, ಇ.ಎಂ.ಎಸ್. ನಂಬೂದರಿಪಾಡ್, ಬಿಪನ್‌ಚಂದ್ರ, ಸುಮಿತ್ ಸರ್ಕಾರ್ ಮುಂತಾದವರು ಮಾರ್ಕ್ಸ್‌ವಾದಿ ಪಂಥದ ಚರಿತ್ರೆಕಾರರಾಗಿದ್ದಾರೆ. ಇವರು ರಾಜಕೀಯದಿಂದ ದೂರವಾದ ಚರಿತ್ರೆಯತ್ತ ಒಲವು ತೋರಿದರು. ಅರಸರ ಚರಿತ್ರೆ, ಮೇಲ್ವರ್ಗದ ಚರಿತ್ರೆ ಎನ್ನುವ ಪೂರ್ವಗ್ರಹ ಪೀಡಿತ ಸಿದ್ಧಾಂತಗಳನ್ನು ಒಡೆಯುವುದರಲ್ಲಿ ಇವರ ಬರವಣಿಗೆಗಳು ಯಶಸ್ವಿಯಾದವು. ಸಾಮಾಜಿಕ ಮತ್ತು ಆರ್ಥಿಕ ನೆಲೆಯಿಂದ ಚರಿತ್ರೆ ರಚಿಸುವ ಇವರ ಪ್ರಯತ್ನವು ಅಲಕ್ಷಿತ ಸಮುದಾಯಕ್ಕೆ ನ್ಯಾಯ ಒದಗಿಸಿತು.

ಭಾರತದ ಚರಿತ್ರೆಯ ಕುರಿತು ಭಾರತೀಯರಿಂದಲೇ ಬಂದ ಪ್ರಥಮ ಕೃತಿ ಎಂದರೆ ಎಸ್.ಎ.ಡಾಂಗೆ ಅವರ **ಇಂಡಿಯಾ ಫ್ರಮ್ ಪ್ರಿಮಿಟಿವ್ ಕಮ್ಯುನಿಸಂ ಟು ಸ್ಲೇವರಿ**. ಇದು ರಷ್ಯಾದ ಮಾರ್ಕ್ಸ್‌ವಾದಿ ಚರಿತ್ರೆಯ ಪುನರುತ್ಪಾದನೆಯಾಗಿದೆ. ಡಿ.ಡಿ.ಕೊಸಾಂಬಿ ಅವರು **ಇಂಟ್ರಡಕ್ಷನ್ ಟು ಇಂಡಿಯನ್ ಹಿಸ್ಟರಿ** ಕೃತಿಯಲ್ಲಿ ರಷ್ಯಾದ ಮಾರ್ಕ್ಸ್‌ವಾದವನ್ನು ವಿರೋಧಿಸುತ್ತಾ, ಭಾರತೀಯ ಚರಿತ್ರೆಯು ಸಾಮಾಜಿಕ ವಿಕಾಸ ಹೊಂದಿದೆ ಎನ್ನುತ್ತಾರೆ. **ಮಿಥ್ ಆ್ಯಂಡ್ ರಿಯಾಲಿಟಿ** ಕೃತಿಯಲ್ಲಿ ರಾಷ್ಟ್ರೀಯವಾದಿ ಸಾಂಸ್ಕೃತಿಕ ಇತಿಹಾಸದ ವೈದಿಕ ಹಾಗೂ ಸಂಸ್ಕೃತಪ್ರಧಾನ ನಿರೂಪಣೆಗಳನ್ನು ನಿರಾಕರಿಸಿ ಜಾನಪದ ಅಧ್ಯಯನ, ಪ್ರಾಕ್ತನಶಾಸ್ತ್ರ ಹಾಗೂ ಕ್ಷೇತ್ರಕಾರ್ಯಗಳ ಮೂಲಕ ವರ್ತಮಾನವನ್ನು ಗ್ರಹಿಸಿ ಬರೆದರು. ಅವರ ಚರಿತ್ರೆ ರಾಜವಂಶಗಳ ಚರಿತ್ರೆ ಆಗಿರದೇ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ನಿರ್ಮಾಣಗಳ ಚರಿತ್ರೆಯಾಗಿದೆ. ದೇವಿಪ್ರಸಾದ್ ಚಟ್ಟೋಪಾಧ್ಯಾಯರು ಭಾರತದ ತಾತ್ವಿಕ ಸಂಪ್ರದಾಯಗಳಲ್ಲಿ ಭೌತವಾದದ ಎಳೆಗಳನ್ನು ಗುರುತಿಸಿದರು. ಆರ್.ಎಸ್.ಶರ್ಮ ಅವರು ಭಾರತೀಯ 'ಫ್ಯೂಡಲಿಸಂ' ಯುಗದ ಕುರಿತು ವಿಶೇಷವಾಗಿ ಸಂಶೋಧನೆ ನಡೆಸಿದರು. ಅವರಲ್ಲಿ ಡಿ.ಎನ್.ಝಾ, ಬಿ.ಎನ್.ಎಸ್.ಯಾದವ, ಆರ್.ಎನ್.ನಂದಿ, ದೇವಾಂಗೂ ದೇಸಾಯಿ ಮುಂತಾದವರು ಪ್ರಮುಖರಾಗಿದ್ದಾರೆ. ರೋಮಿಲಾ ಥಾಪರ್ ಅವರು ಎಡಪಂಥೀಯವಾಗಿದ್ದು, ಬಿ.ಡಿ.ಚಟ್ಟೋಪಾಧ್ಯಾಯ ಅವರು ಭಾರತೀಯ ಚರಿತ್ರೆಲೇಖನ ಈ 'ಫ್ಯೂಡಲಿಸಂ' ಚರ್ಚೆಗಿಂತ ವಾಸ್ತವವನ್ನು ಗ್ರಹಿಸಬೇಕು ಎಂದಿದ್ದಾರೆ. ಮಧ್ಯಕಾಲೀನ ಭಾರತದ ಚರಿತ್ರೆಯ ಕುರಿತು ಮಹಮ್ಮದ್

ಹಬೀಬ್ ಮತ್ತು ಇರ್ಫಾನ್ ಹಬೀಬ್ ಮೊಘಲ್ ಕಾಲದ ಆಡಳಿತ, ಕೃಷಿ, ವಾಣಿಜ್ಯವ್ಯವಸ್ಥೆಯನ್ನು ಕುರಿತು ಅಧ್ಯಯನ ನಡೆಸಿದ್ದಾರೆ. ಆರ್.ಪಾಮೆದತ್ ಅವರ **ಇಂಡಿಯಾ ಟುಡೆ** ಕೃತಿಯಲ್ಲಿ ವಸಾಹತುಶಾಹಿಯ ಆರ್ಥಿಕ ಅಂಶಗಳನ್ನು ವಿಶ್ಲೇಷಿಸಿದ್ದಾರೆ. ಎ.ಆರ್.ದೇಸಾಯಿ ಅವರು **'ಸೋಶಿಯಲ್ ಬ್ಯಾಕ್‌ಗ್ರೌಂಡ್ ಆಫ್ ಇಂಡಿಯನ್ ನ್ಯಾಶನಲಿಸಂ'** ಎಂಬ ಕೃತಿ ರಾಷ್ಟ್ರೀಯ ಚಳವಳಿಯ ವರ್ಗ ವಿಶ್ಲೇಷಣೆಯಾಗಿದೆ. ಇ.ಎಂ.ಎಸ್. ನಂಬೂದರಿಪಾಡ್ ಅವರು ಭಾರತೀಯ ರಾಷ್ಟ್ರೀಯ ಚಳವಳಿ ಬೂರ್ಜ್ವಾ ವರ್ಗದವರು ತಮ್ಮ ಅಧಿಕಾರಕ್ಕಾಗಿ ನಡೆಸಿದ ಹೋರಾಟ ಎಂದು ಅರ್ಥೈಸಿದರು. ಬಿಪನ್ ಚಂದ್ರ ಅವರು ರಾಷ್ಟ್ರೀಯ ಹೋರಾಟ ವಸಾಹತುಶಾಹಿಯನ್ನು ಕೊನೆಗಾಣಿಸಲಿಕ್ಕೆ ಅಗತ್ಯವಾಗಿತ್ತು ಎಂದಿದ್ದಾರೆ. ಇವರು 'ಸೆಕ್ಯುಲರಿಸಂ' ವಕ್ತಾರರಾಗಿ ಗುರುತಿಸಿಕೊಂಡರು.[೨೪] ಇವರು ರಾಷ್ಟ್ರೀಯವಾದಿ ಚರಿತ್ರೆಕಾರರ ಅತ್ಯಂತ ದೊಡ್ಡ ದೌರ್ಬಲ್ಯ ಎಂದರೆ ಅವರು ಮಿಲ್ ಮಾಡಿದ ಕಾಲಾವಧಿಯ ಬಗೆಗೆ ಚಕಾರವೆತ್ತುವುದಿಲ್ಲ. ರಾಷ್ಟ್ರೀಯವಾದಿ ಚರಿತ್ರೆಕಾರರ ಸಾಮಾಜಿಕ ಹಾಗೂ ಆರ್ಥಿಕ ವಿಷಯಗಳನ್ನು ಪರಿಶೀಲಿಸುವುದನ್ನು ಬಿಟ್ಟುಕೊಟ್ಟು ರಾಜಮನೆತಗಳ ಆಡಳಿತ ಹಾಗೂ ರಾಜಕೀಯ ವಿಷಯಗಳನ್ನಷ್ಟೇ ಅಧ್ಯಯನ ಮಾಡಿದರು.[೨೫] ಈ ರೀತಿಯಾಗಿ ಆದ ಕಾಲಾವಧಿಯು ಕೋಮುಭಾವನೆಯನ್ನು ಹಾಗೆಯೇ ಮುಂದುವರಿಸಿತು. ಅನಂತರ ಸೆಕ್ಯುಲರಿಸಂನ ವಕ್ತಾರರಾಗಿ ಕೆ.ಎನ್.ಫಣಿಕ್ಕರ್, ಸರ್ವಪಳ್ಳಿ ಗೋಪಾಲ, ಸುಮಿತ್ ಸರ್ಕಾರ್ ಮುಂತಾದವರನ್ನು ಹೆಸರಿಸಬಹುದು. ಬರ್ಟನ್ ಸ್ಟೇನ್ ಅವರು ಮಾರ್ಕ್ಸ್‌ವಾದಿ ಸಂಪ್ರದಾಯ 'ಫ್ಯೂಡಲ್' ವ್ಯವಸ್ಥೆಯ ಪ್ರತಿಪಾದನೆಯನ್ನು ಅಲ್ಲಗಳೆದು ಮಧ್ಯಕಾಲೀನ ದಕ್ಷಿಣ ಭಾರತೀಯ ರಾಜ್ಯದ ರಚನೆ 'ಸೆಗ್ಮೆಂಟರಿ'ಸ್ವರೂಪವನ್ನು ಹೊಂದಿತ್ತೆಂದು ವಾದಿಸಿದರು. ಈ ಸೆಗ್ಮೆಂಟರಿ ಪ್ರಭುತ್ವದಲ್ಲಿ ಒಂದು ಸಾಮ್ರಾಜ್ಯದಲ್ಲಿನ ಆಳ್ವಿಕೆಯ ಘಟಕಗಳು ಕೇಂದ್ರೀಕೃತ ಪ್ರಭುತ್ವಕ್ಕೆ ಒಳಪಟ್ಟಿರದೇ ಬಿಡಿಬಿಡಿಯಾದ ಸ್ವಯಂಪೂರ್ಣವಾದ ಆಡಳಿತ ವ್ಯವಸ್ಥೆಗಳಾಗಿ ಅಸ್ತಿತ್ವವನ್ನು ಉಳಿಸಿಕೊಂಡಿರುತ್ತವೆ.

ಇಟಲಿಯ ಆ್ಯಂಟೋನಿಯೋ ಗ್ರಾಂಸಿಯು ಸಬಾಲ್ಟರ್ನ್ ಪಂಥಕ್ಕೆ ಅಡಿಪಾಯ ಹಾಕಿದನು. ಇದರ ಅರ್ಥ ಕೆಳಸ್ತರದ ಚರಿತ್ರೆ ಎಂಬುದಾಗಿದೆ. ವಸಾಹತು ಇತಿಹಾಸವನ್ನು 'ಹೆಜೆಮೊನಿ'ಯ ಪರಿಕಲ್ಪನೆಯಲ್ಲಿ ಸಬಾಲ್ಟರ್ನ್ ಅಧ್ಯಯನಕಾರರು ಅಧ್ಯಯನ ಪ್ರಾರಂಭಿಸಿದರು. ಇವರು ರಾಷ್ಟ್ರೀಯವಾದಿ ಇತಿಹಾಸದಂತೆ ಮಾರ್ಕ್ಸ್‌ವಾದಿ ಇತಿಹಾಸವೂ ಹೇಗೆ ಆಳುವವರ ಇತಿಹಾಸವನ್ನು ಕಟ್ಟಿಕೊಟ್ಟಿದೆ ಎಂಬುದನ್ನು ವಿಶ್ಲೇಷಿಸಿದರು. ಮಾರ್ಕ್ಸ್‌ವಾದವನ್ನು 'ಒಂದು ಸ್ಥಾಪಕ ತತ್ವ' ಎಂದು ಸಬಾಲ್ಟರ್ನ್ ಇತಿಹಾಸಕಾರರು ತಿರಸ್ಕರಿಸುತ್ತಾರೆ. ದಲಿತ, ಕಾರ್ಮಿಕ, ರೈತ, ಮಹಿಳೆ, ಆದಿವಾಸಿ(ಬುಡಕಟ್ಟು)ಗಳು ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿದ್ದಾರೆ. ಸಮಾಜದ ಕೆಳಸ್ತರದ ಬಹುಸಂಖ್ಯಾತ ಜನರ ಚರಿತ್ರೆಯು ನಿಜವಾದ ಚರಿತ್ರೆಯಾಗಿದ್ದು, ಅದು ಶೋಷಣೆಗೆ ಒಳಗಾಗಿದೆ ಎಂಬುದನ್ನು ಆ್ಯಂಟೋನಿಯೋ ಗ್ರಾಂಸಿಯು ಅಭಿಪ್ರಾಯ ತಿಳಿಸಿದ್ದಾರೆ.[೨೬] ರಣಜಿತ್ ಗುಹಾ, ಸುಮಿತ್ ಸರ್ಕಾರ್, ದೀಪೇಶ್ ಚಕ್ರವರ್ತಿ, ಪಾರ್ಥ ಚಟರ್ಜಿ, ಗ್ಯಾನೇಂದ್ರ ಪಾಂಡೆ, ಡೇವಿಡ್ ಹರ್ಡಿಮನ್, ಗಾಯಿತ್ರಿ ಸ್ಪಿವಾಕ್ ಮುಂತಾದವರನ್ನು ಭಾರತದಲ್ಲಿ ಸಬಾಲ್ಟರ್ನ್ ಚರಿತ್ರೆಕಾರರಾಗಿ ಉದಾಹರಿಸಬಹುದಾಗಿದೆ.

ರಣಜಿತ್ ಗುಹಾ ಅವರು ಸಬಾಲ್ಟರ್ನ್ ಸ್ಟಡೀಸ್ ಎಂಬ ಸಂಪುಟಗಳನ್ನು ಹೊರತಂದಿದ್ದಾರೆ. ಗುಜರಾತಿನ ಪಾರ್ಸಿ ಭೂಮಾಲೀಕರ ಆರ್ಥಿಕ ದಬ್ಬಾಳಿಕೆಯನ್ನು ಕಿತ್ತೊಗೆಯಲು ಅಲ್ಲಿನ

ಆದಿವಾಸಿಗಳು ಸ್ವಾಯತ್ತ ಹೋರಾಟವನ್ನು ನಡೆಸಿದರು. ಕಾಂಗ್ರೆಸ್ ನಾಯಕರು ಈ ಆದಿವಾಸಿಗಳಿಗೆ ಗಾಂಧೀಜಿಯ ಕಾರ್ಯಕ್ರಮಗಳನ್ನು ಅನುಸರಿಸಲು ಕರೆ ನೀಡಿದರು. ಇದಕ್ಕೆ ರಣಜಿತ್ ಗುಹಾ ಅವರ ಥಿಯರಿಗೆ ಡೇವಿಡ್ ಹರ್ಡಿಮನ್ ವಿವರಣೆ ನೀಡಿದ್ದಾರೆ. ಭೂಮಾಲೀಕರ ವಿರುದ್ಧದ ಹಿಂಸಾತ್ಮಕ ದಂಗೆಯಲ್ಲಿ ರೈತರು ಪಾಲ್ಗೊಂಡಿರುವುದನ್ನು ನೋಡ ಬಹುದಾಗಿದೆ ಎಂದು ಗ್ಯಾನೇಂದ್ರ ಪಾಂಡೆ, ರಣಜಿತ್ ಗುಹಾ ಅವರು ತಿಳಿಸಿದ್ದಾರೆ. ಪಾರ್ಥ ಚಟರ್ಜಿ ಅವರ ಕೃತಿಗಳು ಹೇಗೆ 'ಸಬಾಲ್ಟರ್ನ್'ನಿಂದ ಪ್ರಾರಂಭವಾಗಿ 'ರೈತ ಸಮುದಾಯ ಪ್ರಜ್ಞೆಗೆ' ಅನಂತರ 'ಸಮುದಾಯಗಳ' ಅಧ್ಯಯನಕ್ಕೆ ಮೀಸಲಾಗಿದ್ದನ್ನು ನೋಡಬಹುದು. ೧೯೮೦ರ ದಶಕದಲ್ಲಿ ಸಬಾಲ್ಟರ್ನ್ ಅಧ್ಯಯನಗಳು ಸಾಂಪ್ರದಾಯಿಕ ಮಾರ್ಕ್ಸಿಸ್ಟ್ ನಡವಳಿಕೆ ಮತ್ತು ಸಿದ್ಧಾಂತಗಳನ್ನು ಕಟುವಿಮರ್ಶೆ ಮಾಡುತ್ತಲೇ ಮಾರ್ಕ್ಸಿಸ್ಟ್ ಭಿನ್ನಮತೀಯರಾಗಿ ಒಂದು ಬಗೆಯ ವಿಶಾಲವಾದ ಸೋಷಿಯಲಿಸ್ಟ್ ವಿಚಾರಧಾರೆಯನ್ನು ಬಿಂಬಿಸಿದವು ಎಂದು ಸುಮಿತ್ ಸರ್ಕಾರ್ ಅವರು ಅಭಿಪ್ರಾಯ ಪಡುತ್ತಾರೆ. ಗ್ರಾಮೀಣ ಪ್ರದೇಶಗಳ ಮೊದಲ ಸಂಗ್ರಹಣೆ ಮೂಲಕ ಡೇವಿಡ್ ಹರ್ಡಿಮನ್ ಅವರು ಗುಜರಾತ್‌ನ ರೈತ ರಾಷ್ಟ್ರೀಯ ವಾದಿಗಳ ಚರಿತ್ರೆಯನ್ನು ಬರೆದರು. ಉತ್ತರ ಪ್ರದೇಶದ ಸ್ಥಳೀಯ ಕಾಂಗ್ರೆಸ್ ಸಂಘಟನೆಗಳ ಮತ್ತು ಮಿಲಿಟೆಂಟ್ ರೈತರ ನಡುವಿದ್ದ ಸಂಕೀರ್ಣ ಸಂಬಂಧಗಳನ್ನು ವಿಮರ್ಶಿಸುವ ಮೂಲಕ ಗ್ಯಾನೇಂದ್ರ ಪಾಂಡೆ ಅವರು ಚರಿತ್ರೆಯನ್ನು ನಿರ್ವಚಿಸಿದರು. ಗಾಂಧೀಜಿ ಅವರು ಕಾರ್ಯಕರ್ತರಿಗೆ ಪವಾಡಪುರುಷ ಎಂದು ಭಾವಿಸಿದ ವಿವರಗಳನ್ನು ಶಾಹಿದ ಅಮಿನ್ ಅವರು ಉತ್ತರ ಪ್ರದೇಶದ ಸಂದರ್ಭದಲ್ಲಿ ವಿವರಿಸಿದರು. ಮುಖ್ಯವಾಹಿನಿಯ ರಾಷ್ಟ್ರೀಯತೆಯನ್ನು ಈ ಸಂದರ್ಭದಲ್ಲಿ ಪುನರ್ ವ್ಯಾಖ್ಯಾನಿಸಿದ ದೀಪೇಶ್ ಚಕ್ರವರ್ತಿ ಅವರ ಪ್ರಯತ್ನಗಳನ್ನು ಗಮನಿಸಬಹುದು. ಆ ಮೂಲಕ ಅವರು ಬುಡಕಟ್ಟುಗಳ ಚಳವಳಿಗಳನ್ನು ಮತ್ತು ಕಲ್ಟ್‌ಗಳ ಭೂಮಿಕೆಯನ್ನು ಚರಿತ್ರೆ ಅಧ್ಯಯನದಲ್ಲಿ ಬಳಸಿಕೊಂಡರು. ಆಶ್ಚರ್ಯ ಎನ್ನುವಂತೆ ಪಾಶ್ಚಾತ್ಯ ಶೈಕ್ಷಣಿಕ ವಲಯದಲ್ಲಿ ಪ್ರಭಾವಿಯಾಗಿರುವ ಪೋಸ್ಟ್ ಮಾಡರ್ನ್(ಆಧುನಿಕೋತ್ತರ) ವಿದ್ವಾಂಸರು ಸಬಾಲ್ಟರ್ನ್ ಅಧ್ಯಯನಗಳಿಗೆ ಮಾರು ಹೋದರು. ವಸಾಹತು ಮತ್ತು ವಸಾಹತೋತ್ತರ ಅಧ್ಯಯನಗಳಲ್ಲಿ ಅತೀವ ಆಸಕ್ತಿ ತೋರಿಸುತ್ತಿರುವ ಈ ವಿದ್ವಾಂಸರಿಗೆ ಸಬಾಲ್ಟರ್ನ್ ಅಧ್ಯಯನಗಳು ಹಿಡಿಸಿದವು. ಆಯಾ 'ಸಂದರ್ಭದಲ್ಲಿ' ಮುನ್ನುಗ್ಗುವ ಚಾತುರ್ಯವಿರುವ ಈ ವಿದ್ವಾಂಸರು ೧೯೬೦-೭೦ರ ದಶಕದಲ್ಲಿ 'ಜನ ಹೋರಾಟಗಳ' ಅಧ್ಯಯನದ ಸ್ವರೂಪವನ್ನು 'ಅಧಿಕಾರ-ಜ್ಞಾನ'(ಪವರ್-ನಾಲೆಡ್ಜ್) ಸಂಕಥನಕ್ಕೆ ಸ್ಥಿತ್ಯಂತರಗೊಳಿಸಿದರು. ಇದು 'ಆಧುನಿಕ' ಅಧಿಕಾರಶಾಹಿ ರಾಷ್ಟ್ರಗಳನ್ನು ಅವುಗಳ ಅನಗತ್ಯ 'ಆರ್ಥಿಕ' ಹಿನ್ನೆಲೆಯ ವಿನ್ಯಾಸಗಳನ್ನು ವಿಮರ್ಶೆ ಮಾಡಿತು. ಆ ಮೂಲಕ "ಮಾರ್ಕ್ಸಿಸಂ" ಅನ್ನು ಮೂಲೆಗೊತ್ತಲು ಈ ವಿದ್ವಾಂಸರು ಪ್ರಯತ್ನವನ್ನು ಮಾಡಿದರು.[೨೭] ಈ ನಿಟ್ಟಿನಲ್ಲಿ ಸಬಾಲ್ಟರ್ನ್ ಅಧ್ಯಯನವು ಮಾರ್ಕ್ಸ್‌ವಾದವನ್ನು ಮೂಲೆಗುಂಪು ಮಾಡಿತು. ಈ ಅಧ್ಯಯನವು ಚರಿತ್ರೆ ಬರವಣಿಗೆಗೆ ಒಂದು ಹೊಸ ನೋಟವನ್ನು ನೀಡಿತು.

ಜನರನ್ನು ಕುರಿತು ಅಧ್ಯಯನ ನಡೆಸುವಾಗ ವಿವಿಧ ಪಂಥಗಳು ಯಾವ ಯಾವ ರೀತಿಯ ಜನರ ಅಧ್ಯಯನ ನಡೆಸಿವೆ ಎಂಬುದನ್ನು ಗಮನಿಸುವುದು ಅನಿವಾರ್ಯ. ವಸಾಹತುಶಾಹಿ ಚರಿತ್ರೆಕಾರರು ಬಿಳಿ ಜನರ ದೃಷ್ಟಿಯಿಂದ ಭಾರತದ ಜನರ ಅಧ್ಯಯನ ನಡೆಸಿದರು. ರಾಷ್ಟ್ರೀಯವಾದಿ ಚರಿತ್ರೆಕಾರರು ಮೇಲ್ವರ್ಗದ ಜನರ ದೃಷ್ಟಿಯಿಂದ ಚರಿತ್ರೆ ರಚಿಸಿದರು. ಮಾರ್ಕ್ಸ್‌ವಾದಿ ಚರಿತ್ರೆಕಾರರು

ಶೋಷಿತ ವರ್ಗದ ಜನರ ದೃಷ್ಟಿಯಿಂದ ಚರಿತ್ರೆ ನಿರ್ಮಿಸಿದರು. ಸಬಾಲ್ಟರ್ನ್ ಚರಿತ್ರೆಕಾರರು ಸಮಾಜದ ಕೆಳಸ್ತರದ, ಅಲಕ್ಷಿತ ಜನರ ಕುರಿತು ಚರಿತ್ರೆಯನ್ನು ರೂಪಿಸಿದರು. ಇದು ವಿವಿಧ ಕಾಲಘಟ್ಟಗಳಲ್ಲಿ ಜನರ ಚರಿತ್ರೆ ರಚನೆಗೊಂಡಿರುವುದನ್ನು ಸೂಕ್ಷ್ಮವಾಗಿ ತಿಳಿಸುತ್ತದೆ.

ವಸಾಹತುಶಾಹಿಯ ಅಂತಿಮ ವೇಳೆಗೆ ಸಮಾಜವಾದ, ಪ್ರಜಾಪ್ರಭುತ್ವ ಸಿದ್ಧಾಂತಗಳು ಜಾರಿಗೆ ಬಂದು ರಾಜಮನೆತನಗಳಲ್ಲದೇ ಜನರ ಧರ್ಮ, ಜಾತಿ, ವರ್ಗ ಮತ್ತು ಸಂಘಗಳ ಕುರಿತು ಅಧ್ಯಯನಗಳಾದವು. ಜನರ ಸಾಮಾಜಿಕ, ಆರ್ಥಿಕ ಮತ್ತು ಸಂಸ್ಕೃತಿ ಅಂಶಗಳನ್ನು ಅಧ್ಯಯನ ಮಾಡಲಾಯಿತು. ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ, ರೈತರ ಚರಿತ್ರೆ, ಕಾರ್ಮಿಕರ ಚರಿತ್ರೆ, ದಲಿತ ಚರಿತ್ರೆ, ಮಹಿಳಾ ಚರಿತ್ರೆ, ತಳಸಮುದಾಯದ ಚರಿತ್ರೆ ಬರವಣಿಗೆಗಳು ಲೇಖನಶಾಸ್ತ್ರದಲ್ಲಿ ಸೇರಿದವು. ಆನಂತರ ನಾಗರಿಕತೆ, ಆಧುನೀಕರಣ, ಜಾಗತೀಕರಣ ಅಂಶಗಳು ಪ್ರೇರಣೆ ನೀಡಿವೆ.

ಭಾರತವನ್ನು ಕುರಿತು ೧೯೭೦, ೧೯೮೦ರ ದಶಕದಲ್ಲಿ ಬರೆದ ಕೆಲ ಪಾಶ್ಚಾತ್ಯ ಚರಿತ್ರೆಕಾರರು ಸಬಾಲ್ಟರ್ನ್ ಸಂಪ್ರದಾಯಕ್ಕಿಂತ ವಿಭಿನ್ನವಾದ ಆಧುನಿಕೋತ್ತರವಾದ, ವಸಾಹತೋತ್ತರ ವಾದಗಳನ್ನು ಮೈಗೂಡಿಸಿಕೊಂಡರು. ಆಧುನಿಕ ಪರಿಕಲ್ಪನೆ ಹಾಗೂ ಆಧುನೀಕರಣ ವಾದದಲ್ಲಿ ಪಾಶ್ಚಿಮಾತ್ಯ ಸಮಾಜಗಳ ಮೌಲ್ಯಗಳನ್ನಾಧರಿಸಿದ ವಸ್ತುನಿಷ್ಠತೆ, ಜಾಗತೀಕರಣ, ತಂತ್ರಜ್ಞಾನದ ಮೇಲೆ ಪೂರ್ಣಾವಲಂಬನೆ, ವೈಜ್ಞಾನಿಕ ದೃಷ್ಟಿಕೋನ ಮುಂತಾದವು ಅಡಗಿಕೊಂಡಿದ್ದು, ಈ ವಾದವನ್ನು ಒಪ್ಪಿದ ಮರುಕ್ಷಣವೇ 'ಪಾಶ್ಚಿಮಾತ್ಯರ ನಾಡು-ನುಡಿ-ಸಂಸ್ಕೃತಿಗಳು ಪೌರ್ವಾತ್ಯ ನಾಡುನುಡಿ, ಸಂಸ್ಕೃತಿಗಳಿಗಿಂತ ಶ್ರೇಷ್ಠವಾದವು ಎಂಬ ತತ್ವಾದರ್ಶವನ್ನು ಒಪ್ಪುವುದು ಅನಿವಾರ್ಯವಾಗಿ ಬಿಡುತ್ತದೆ. ಈ ಸಮಸ್ಯೆಯಿಂದ ಹೊರಬಂದು ಸಾಮಾಜಿಕ ವೈವಿಧ್ಯತೆ, ವಿಭಿನ್ನತೆಗಳನ್ನು ಒಪ್ಪಿ ಮಾನವನ ಅಭಿವೃದ್ಧಿ ಹಾಗೂ ವಿಕಾಸಕ್ಕೆ ಬೇರೊಂದು ಆಯಾಮವನ್ನು 'ಆಧುನಿಕೋತ್ತರವಾದ'ವು ನೀಡಿದೆ.[೨೮] ಇದು ಮಾರ್ಕ್ಸ್‌ವಾದಕ್ಕೆ ವಿಮರ್ಶೆಯಾಗಿ ಬಂದಿರುತ್ತದೆ. ಬಂಡವಾಳಶಾಹಿ ಮತ್ತು ಜಾಗತೀಕರಣ ಎರಡನ್ನು ವಿಮರ್ಶೆಗೆ ಒಳಪಡಿಸಿರುವುದು. ಇತಿಹಾಸವನ್ನು ತಂತ್ರಜ್ಞಾನಕ್ಕೆ ತರುವುದು ಬಂಡವಾಳ ಶಾಹಿ. ಇದನ್ನು ವಿರೋಧಿಸುವುದು ಆಧುನಿಕೋತ್ತರವಾದ. "ಇಡೀ ಸಮಾಜವನ್ನು ಬಿಡಿಬಿಡಿಯಾಗಿ ಕಾಲಕ್ಕೆ ಸಂದರ್ಭಕ್ಕೆ ಅನುಗುಣವಾಗಿ ಏಕತೆಯಾಗಿ ನೋಡುವುದು ಆಧುನಿಕೋತ್ತರವಾದ." ಆಧುನಿಕೋತ್ತರವಾದ ಎಂಬ ಪರಿಕಲ್ಪನೆಯನ್ನು ಈಹಬ್ ಹಸನ್ ಎಂಬುವರು ಮೊದಲಿಗೆ ಪ್ರಚಾರಕ್ಕೆ ತಂದರು. ರೇಮಂಡ್ ವಿಲಿಯಮ್ಸ್, ರೆವಿಡೋ ಭಾರತೀಶ್, ರಿಚರ್ಡ್ ಹೂಗಾರ್ಡ್ (Hoggard), ಡೆರಿಡಾ, ಫುಕೋ, ನೀಷೆ ಮೊದಲಾದವರು ರಚನೋತ್ತರವಾದದ ಚಿಂತನೆಗಳಲ್ಲಿ ಗುರುತಿಸಿಕೊಂಡು ಮುಂದುವರಿದಿದ್ದಾರೆ. ವ್ಯಕ್ತಿ ಸ್ವತಂತ್ರನಾಗಿರದೇ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳಿಂದ ಬಂಧಿಸಲ್ಪಟ್ಟ 'ಸಾಮಾಜಿಕ ಕ್ರಿಯಾಕಾರ'ನಾಗಿರುತ್ತಾನೆ ಎಂಬುದು ಇವರ ವಾದ.[೨೯] ಸಮಾಜದ ಬೃಹತ್ ಕಥನವಾಗಿ ನೋಡಲಾಗುತ್ತದೆ.

ಆಧುನಿಕ ಎಂಬುದು ಸಿದ್ಧಾಂತವನ್ನು ಸೃಷ್ಟಿ ಮಾಡುವುದು, ಆಧುನಿಕತೆಯು ಸಿದ್ಧಾಂತವನ್ನು ಅನುಷ್ಠಾನಕ್ಕೆ ತರುವುದು, ಆಧುನಿಕೋತ್ತರವಾದವು ಸಿದ್ಧಾಂತವನ್ನು ಪ್ರಚಾರ ಮಾಡುವುದಾಗಿದೆ. ಕ್ಲಿಷ್ಟ ಸಮಾಜವನ್ನು ಸೃಷ್ಟಿ ಮಾಡುವುದು ಇದರ ಉದ್ದೇಶ. ಈ ಹಂತದಲ್ಲಿ ಫುಕೋ ಅವರ

ಅಧಿಕಾರ(Power) ಮತ್ತು ಜ್ಞಾನ(Knowledge) ಕುರಿತ ವಿಚಾರ ಪ್ರಮುಖವಾದದ್ದಾಗಿದೆ. ಯಾವುದು ಆ ಸಂದರ್ಭದಲ್ಲಿ ಮುಂಚೂಣಿಯಲ್ಲಿರುವುದೋ ಅದೇ ಅಧಿಕಾರ. ಇದರ ಮೂಲಕ ಜ್ಞಾನವನ್ನು ಬಳಸಿಕೊಳ್ಳುತ್ತದೆ. ಇತಿಹಾಸ ಎಂಬುದಕ್ಕೆ ಒಂದು ಗತಿಯಿಲ್ಲ. ಒಂದು ನಿಶ್ಚಿತ ಪಥವಿಲ್ಲ. ಅನೇಕ ಭಿನ್ನ ಪರಸ್ಪರ ವಿರುದ್ಧವಾದ ಪದಗಳಲ್ಲಿ ಭಿನ್ನಗತಿಗಳಲ್ಲಿ ಇತಿಹಾಸ ಚಲಿಸುತ್ತದೆ ಎಂದು ಫುಕೋ ಅವರ ಕೃತಿ 'ಇತಿಹಾಸದ ಪುರಾತತ್ವಶಾಸ್ತ್ರ' ಉಲ್ಲೇಖಿಸುತ್ತದೆ.

ಡೆರಿಡಾ ಸಾಹಿತ್ಯ ತತ್ವಚಿಂತಕನಾಗಿ ಸಂರಚನೋತ್ತರವಾದವನ್ನು ಮಂಡಿಸಿದ್ದಾನೆ. ಇವನ ಚಿಂತನೆಗಳು ಸಾಹಿತ್ಯ ಮತ್ತು ಚರಿತ್ರೆಯ ಜ್ಞಾನಶಿಸ್ತುಗಳಲ್ಲಿ ಮಿಳಿತವಾಗಿವೆ. ಸಂರಚನವಾದ ಒಂದು ಚಿಂತನಾಕ್ರಮವಾಗಿ ಗ್ರಹಿಕೆ ಮತ್ತು ವಿವರಣೆಯನ್ನು ಹೊಂದಿದೆ. ಒಂದು ವಿಷಯವು ಆ ಕೃತಿಯಲ್ಲಿ ಬಿಂಬಿತವಾಗಿರುವುದು ಅಂದರೆ ಸತ್ಯವು ಕೃತಿಕೇಂದ್ರಿತವಾಗಿರುತ್ತದೆ ಎಂಬ ವಿಷಯವನ್ನು ಡೆರಿಡಾ ಚರ್ಚಿಸುತ್ತಾನೆ.[೩೦] ನಿರಚನೆ(De-construction) ಎನ್ನುವುದು ವಿಮರ್ಶಾ ವಿಧಾನವಲ್ಲ. ಅದು ವಿಮರ್ಶಾ ಪಂಥದ ಕ್ರಮವಾಗಿ ಕೃತಿಗಳ ಮೇಲೆ ಪ್ರಯೋಗಿಸಿದಾಗ ಹೊಸಹೊಸ ವಿಚಾರಗಳು ಹೊರಬರುತ್ತವೆ ಎಂದಿದ್ದಾರೆ.[೩೧] ಡೆರಿಡಾನ 'Of Grammatology' ಗ್ರಂಥದ ಅಧ್ಯಯನದ ಹೆಸರು ಪುಸ್ತಕದ ಮುಕ್ತಾಯವೂ ಬರವಣಿಗೆಯ ಆರಂಭವೂ ಎಂಬುದಾಗಿದೆ. ವಿಮರ್ಶಾ ನೆಲೆಗಟ್ಟಿನಲ್ಲಿ ಯಾವ ಬರವಣಿಗೆಯೂ ಮುಗಿಯುವುದಿಲ್ಲ.[೩೨] ಅದು ಹಾಗೆಯೇ ಮುಂದುವರಿದುಕೊಂಡು ಹೋಗುತ್ತದೆ ಮತ್ತು ಪುನರ್ ವ್ಯಾಖ್ಯಾನಕ್ಕೆ ಒಳಗಾಗುತ್ತಲೇ ಇರುತ್ತದೆ. ಈ ನಿಟ್ಟಿನಲ್ಲಿ ಆಧುನಿಕೋತ್ತರ ವಾದ ಇತಿಹಾಸ ಲೇಖನಶಾಸ್ತ್ರದ ಮಹತ್ವವನ್ನು ಹೆಚ್ಚಿಸಿತು. ಆಧುನಿಕೋತ್ತರವಾದದ ಚಿಂತಕರು ಆಧುನಿಕ ವಾದಗಳ ಸುಳ್ಳುಗಳನ್ನು ಬಯಲು ಮಾಡಲು ಚಿಂತನೆಯ ಚರಿತ್ರೆಯನ್ನೇ ಪುನಾರಚಿಸಿದರು. ವಸಾಹತೋತ್ತರ ವಾದವು ಚಿಂತನೆ ಮತ್ತು ಚರಿತ್ರೆಯನ್ನು ಹೇಗೆ ಕಟ್ಟಲಾಗಿದೆ ಎಂಬುದನ್ನು ತಿಳಿಸುತ್ತದೆ. ರೋನಾಲ್ಡ್ ಇಂಡೆನ್, ನಿಕೋಲಸ್ ಡೆರ್ಕ್ಸ್, ಶೆಲ್ಡನ್ ಪೊಲಾಕ್, ಡೆವಿಡ್ ಲಡನ್ ಮುಂತಾದವರು ಈ ವಾದದಲ್ಲಿ ಇದ್ದಾರೆ.

ವಸಾಹತೋತ್ತರಕಾಲೀನ ಇತಿಹಾಸದ ಪುನಾರಚನಾ ಪ್ರಕ್ರಿಯೆಯಲ್ಲಿ ಸೈದ್‌ನ ಚಿಂತನೆಗಳು ಪ್ರಭಾವ ಬೀರಿವೆ. ಆಧುನಿಕೋತ್ತರ ವಾದದಲ್ಲಿ ಇತಿಹಾಸ ವಿಷಯದ ಪುನಾರಚನೆಗಳು ಒಂದಲ್ಲ ಒಂದು ರೀತಿ ಬಹುನೆಲೆಯ ವ್ಯಾಖ್ಯಾನಗಳೊಂದಿಗೆ ಮುಂದುವರಿದುಕೊಂಡು ಹೋಗುತ್ತವೆ. ಚರಿತ್ರೆ ಒಂದು ಸೃಜನಶೀಲ ಕಲೆ. ಇದೊಂದು ಭಾಷಿತ ಸಂಕಥನ ಎಂದು ಸೈದ್ ಹೇಳುತ್ತಾರೆ.[೩೩] ಹಿಂದಿನ ಬರಹವನ್ನು ಪ್ರಶ್ನಿಸುವುದರಲ್ಲಿ ಪುನಾರಚನೆ ಅಡಗಿದೆ. ರಚನೆ, ನಿರಚನೆ, ಪುನಾರಚನೆ ಇವುಗಳೆಲ್ಲವೂ ಗತವನ್ನು ಮೌಲ್ಯೀಕರಣ ಮಾಡುವ ಪ್ರಯತ್ನಗಳೇ ಆಗಿವೆ. ಇವು ಹಾಗೆಯೇ ಮುಂದುವರಿದುಕೊಂಡು ಹೋಗುತ್ತವೆ.

ಚರಿತ್ರೆಯನ್ನು ವಿರೋಧಿಸುವುದಕ್ಕಿಂತ ಅದನ್ನು ಮರು ಸಾಂದರ್ಭೀಕರಣಗೊಳಿಸುವ ಮತ್ತು ಮರುಸೃಷ್ಟಿಸುವ ಕೆಲಸ ಮಾಡಬೇಕು. ಪಾಶ್ಚಾತ್ಯ ಚಿಂತನೆಯ ಮೇಲಾಗುತ್ತಿರುವ ತೀವ್ರ ಪ್ರಭಾವಗಳ ನಡುವಿನ ಸಂಬಂಧಗಳನ್ನು ಆಧುನಿಕೋತ್ತರ, ವಸಾಹತ್ತೋತರ ಮತ್ತು ರಾಚನಿಕೋತ್ತರ ಮೊದಲಾದ ಚಿಂತನೆಗಳಿಂದ ನಿಯಂತ್ರಿಸಲಾಗುತ್ತಿದೆ ಎಂದು ಸೈದ್ ತಿಳಿಸುತ್ತಾರೆ.[೩೪]

೧೯೨೯ರ ವೇಳೆಗೆ ಪ್ರಾನ್ಸ್‌ನಲ್ಲಿ ಹುಟ್ಟಿದ ಆ್ಯನಲ್ಸ್ ಚರಿತ್ರೆಯು ೧೯೯೦ ಸುಮಾರಿಗೆ ಭಾರತೀಯ ಚರಿತ್ರೆಕಾರರ ಮೇಲೆ ಪ್ರಭಾವ ಬೀರಿತು. ಮಾರ್ಕ್‌ಬ್ಲಾಕ್ ಮತ್ತು ಲ್ಯೂಸಿಯನ್ ಫೇಬರ್ ಅವರು ಆ್ಯನಲ್ಸ್ ಎಕಾನಮಿಕ್ ಸೊಸೈಟಿಸ್ ಹಾಗೂ ಸಿವಿಲೈಜನ್ಸ್ ನಿಯತಕಾಲಿಕೆಗಳು ಹುಟ್ಟಿ ಹಾಕಿದ ಹೊಸ ಚರಿತ್ರೆಯನ್ನು ಕಟ್ಟಿದರು. ಫರ್ಡಿನಾಂಡ್ ಬ್ರಾದೆಲ್ ಹಾಗೂ ಲದೂರೆ ಅವರು ರಾಷ್ಟ್ರೀಯ ಚರಿತ್ರೆ ಬಿಟ್ಟು ವಿಷಯ ವ್ಯಾಪ್ತಿಗೆ ಮಹತ್ವ ನೀಡಿದರು. ಗತಕಾಲವನ್ನು ಸಮಗ್ರವಾಗಿ ಅಭ್ಯಸಿಸಬೇಕು ಎಂಬುದು ಮುಖ್ಯ ಸಬಾಲ್ಟರ್ನ್ ಚರಿತ್ರೆಯಂತೆ ಇದೂ ಕೂಡ ಭಾರತದ ಎಡಪಂಥೀಯ ಚರಿತ್ರೆಕಾರರು ಮಾರ್ಕ್ಸ್‌ವಾದಿ ಚೌಕಟ್ಟಿನಿಂದ ಹೊರಬರಲು ನಡೆಸಿದ ಪ್ರಯತ್ನವಾಗಿ ಇದನ್ನು ಗುರುತಿಸಬಹುದು. ಇದು ಸಂಪೂರ್ಣ ಚರಿತ್ರೆ ಎನ್ನುವುದನ್ನು ಪ್ರತಿಪಾದಿಸಿತು.

ಆಧುನಿಕೋತ್ತರ ಚಿಂತನೆಗಳಲ್ಲಿ 'ನವಚಾರಿತ್ರಿಕವಾದ'ವೂ ಒಂದು. ಕಳೆದ ಶತಮಾನದ ಹೊಸ ವಿಮರ್ಶಾ ಪಂಥವಾಗಿಯೇ ತನ್ನ ನೆಲೆಗಳನ್ನು ಕಂಡುಕೊಂಡಿತು. ಈಗಾಗಲೇ ಪರಿಚಿತವಿರುವ ಅರ್ಥ, ಪರಿಕರ, ವಿಧಿವಿಧಾನಗಳಿಂದ ಹೊರತುಪಡಿಸಿಯೂ ಹೊಸ ನೋಟದಲ್ಲಿ ಮಾನವನ ಮನೋಚಟುವಟಿಕೆಗಳನ್ನು ನೋಡಲು ಸಾಧ್ಯವಿದೆ ಎಂಬುದು ಈ ವಾದದ ತಿರುಳು. ಅಂದರೆ ಸಾಹಿತ್ಯದ ಪಠ್ಯವೊಂದು ಚಾರಿತ್ರಿಕ ಸಂದರ್ಭದಲ್ಲಿ ಬೆರೆತು ತನ್ನ ಅನ್ಯೋನ್ಯ ಸಂಬಂಧವನ್ನು ಪಡೆದಿರುತ್ತದೆ ಎಂಬ ವಾದವನ್ನು ನವಚರಿತ್ರೆಕಾರರು ಮಂಡಿಸಿದರು. ಚರಿತ್ರೆಯನ್ನು ಹೊಸದಾಗಿ ನೋಡಿ, ಗ್ರಹಿಸಿ, ವಿಶ್ಲೇಷಿಸುವ ಚಿಂತನೆಯನ್ನು ನವಚರಿತ್ರೆಕಾರರು ಹುಟ್ಟು ಹಾಕಿದರು. ಇದರಿಂದ ಸಾಹಿತ್ಯ ಮತ್ತು ಚರಿತ್ರೆಯ ಅಂತರ್‌ಶಿಸ್ತೀಯ ನೆಲೆಗಳು ಸಹ ಅಸ್ತಿತ್ವಕ್ಕೆ ಬಂದವು. ಇದರ ಪ್ರತಿಪಾದಕರೆಂದರೆ ಸ್ಟೀಫನ್ ಗ್ರೀನ್ ಬ್ಲಾಟ್. ಈ ವಾದಕ್ಕೆ ಸಾಹಿತ್ಯ ತತ್ವಚಿಂತಕರಾದ ಜಾಕ್ವೃಸ್ ಡೆರಿಡಾ, ಮಿಖಾಯಿಲ್ ಭಕ್ತಿನ್ ಹಾಗೂ ಹೈಡೆನ್ ವೈಟ್ ಅವರಿಂದಲೂ ಹೊಸ ಸಾಂಸ್ಕೃತಿಕ ಚರಿತ್ರೆಯ ಚಹರೆಗಳು ಅನಾವರಣಗೊಂಡಿದ್ದು ಗಮನಾರ್ಹ.[೩೫] ಹೈಡೆನ್ ವೈಟ್ ಅವರು 'ಮೆಟಾ ಹಿಸ್ಟರಿ' ಎಂಬ ಪರಿಕಲ್ಪನೆಯಿಂದ ಗತವನ್ನು ಕುರಿತು ಹೊಸ ಆಲೋಚನಾಕ್ರಮಗಳನ್ನು ಜಗತ್ತಿಗೆ ಪರಿಚಯಿಸಿದನು. ಇದರ ಪ್ರಕಾರ ಇತಿಹಾಸ ಎಂಬುದು ಐತಿಹಾಸಿಕ ನಿರೂಪಣೆಯಲ್ಲಿ ಇತಿಹಾಸಕಾರನು ನೀಡಿದ ವೈಯಕ್ತಿಕ ನಿರ್ಣಾಯಕತೆ ಆಗಿರುತ್ತದೆ. ಅದು ಭಾಷೆಯ ಮೂಲಕ ಸಾಗುತ್ತದೆ ಎಂದಿದ್ದಾರೆ. ಸಮಕಾಲೀನ ಸನ್ನಿವೇಶಗಳು ಈ ನಿರೂಪಣೆಗೆ ಪ್ರಭಾವ ಬೀರುತ್ತವೆ ಎಂಬುದು ಮುಖ್ಯವಾದುದು ಎನ್ನುತ್ತಾರೆ.[೩೬] ಇಲ್ಲಿ ಇತಿಹಾಸಕಾರನ ಅಭಿಪ್ರಾಯ ಪ್ರಮುಖವಾದುದು.

ಸ್ಟೀಫನ್ ಗ್ರೀನ್ ಬ್ಲಾಟ್ ಅವರು ರಚನೆಯಾದ ಒಂದು ಕೃತಿಯು ಅಂದಿನ ಸಂದರ್ಭದ ಸಾಮಾಜಿಕ, ಸಾಂಸ್ಕೃತಿಕ ವಲಯಗಳನ್ನು ಅವಲಂಬಿಸಿರುತ್ತದೆ ಎಂದಿದ್ದಾರೆ. ಈ ನಿಟ್ಟಿನಲ್ಲಿ ಆಯಾಯ ಸಂದರ್ಭದ ಲಾಭ ಮತ್ತು ನಷ್ಟಗಳ ನಡುವೆ ಇರುವ ಗೊಂದಲಗಳನ್ನು ವಿಮರ್ಶಕ ಬಗೆಹರಿಸಬೇಕು. ಇಲ್ಲಿ ಬಹುಮುಖಿ ಅಧ್ಯಯನ ಮುಖ್ಯ. ಈ ಬಹುಮುಖಿ ನೆಲೆಯಲ್ಲಿ ವಿಚಾರಗಳು ಹೊರಬರುವಂತೆ ಮಾಡಿದ್ದಾರೆ.[೩೭] ಇದು ಸಾಹಿತ್ಯವಲ್ಲದೇ, ಸಮಾಜ, ರಾಜಕಾರಣ, ಚರಿತ್ರೆ, ಸಂಸ್ಕೃತಿ ಅಧ್ಯಯನ ಮೊದಲಾದ ಜ್ಞಾನಶಾಖೆಗಳಲ್ಲಿನ ಸಮಸ್ಯೆಗಳನ್ನು ಅರ್ಥ ಮಾಡಿಕೊಳ್ಳಲು ಇದು ಸಹಕರಿಸುತ್ತದೆ ಎಂದಿದ್ದಾರೆ. ಸಾಹಿತ್ಯ ಮತ್ತು ಚರಿತ್ರೆಯ ನಡುವಿನ ವಿಚಾರಗಳನ್ನು ಇದು ವಿಶ್ಲೇಷಿಸುತ್ತದೆ. ಆದರೆ ಬರಹಗಾರರ ಓದು, ಗ್ರಹಿಕೆಯನ್ನು ಅವಲಂಬಿಸಿರುತ್ತದೆ. ಹಾಗೆಯೇ ಚಾರಿತ್ರಿಕ ಸಂದರ್ಭ,

ಸಮಾಜ ವಿಮರ್ಶಾ ನೆಲೆಗಳ ಮೇಲೆ ಪ್ರಭಾವ ಇರುತ್ತದೆ ಎಂಬುದನ್ನು ತಿಳಿಸುತ್ತಾರೆ.[೩೮] ಬರಹಗಾರನ ಗ್ರಹಿಕೆ ಮತ್ತು ವ್ಯಾಖ್ಯಾನ ಮುಖ್ಯ. ಒಪ್ಪಿತ ಚರಿತ್ರೆಯನ್ನು ಮರು ಓದಿನ ಮೂಲಕ ಮರು ವ್ಯಾಖ್ಯಾನಕ್ಕೆ ಒಳಪಡಿಸಬೇಕು. 'ದಿ ಎಂಡ್ ಆಫ್ ಹಿಸ್ಟರಿ'(Fukuyama)ಯಲ್ಲಿ ಚರಿತ್ರೆ ಎನ್ನುವುದು ಯಾವಾಗ ಹುಟ್ಟುತ್ತದೆ ಮತ್ತು ಯಾವಾಗ ಕೊನೆಗೊಳ್ಳುತ್ತದೆ ಎಂಬುದರ ವಿವರವನ್ನು ಗಮನಿಸಬಹುದು. ವಿಷಯದ ಗ್ರಹಿಕೆಯ ಮೇಲೆ ವಿವಿಧ ಜನಸಮುದಾಯಗಳು ಬೇರೆ ಬೇರೆ ರೀತಿ ಅರ್ಥೈಸಿಕೊಳ್ಳುತ್ತಾರೆ. ಇದರಿಂದ ಒಂದು ಚರಿತ್ರೆ ಸಿಗದೇ ಹಲವು ಚರಿತ್ರೆಗಳು ಸಿಗುತ್ತವೆ. ಅಂದರೆ ಇವತ್ತಿನ ಸಂದರ್ಭದಲ್ಲಿ ಗ್ರಹಿಕೆಯ ಮೇಲೆ ಚರಿತ್ರೆ ಅನ್ನುವುದು ಚರಿತ್ರೆಗಳು ಆಗುತ್ತಿವೆ.

ಚರಿತ್ರೆಯ ಸಂದರ್ಭದಲ್ಲಿ ಬರವಣಿಗೆಯೇ ಬೇರೆ ಮತ್ತು ಅಧ್ಯಯನ ವಿಧಾನವೇ ಬೇರೆ ಎನ್ನುವ ಕಂದಕಗಳು ಸ್ಪಷ್ಟವಾಗಿ ಗೋಚರಿಸುತ್ತವೆ. ಇದನ್ನು ಆಧುನಿಕತೆ ಮತ್ತು ಆಧುನಿಕತೆಯ ಬಗೆಗಿನ ವಿಮರ್ಶೆಗಳ ನಡುವೆ ತಿಳಿಯಬಹುದು. ಭಾರತದ ಚರಿತ್ರೆಯನ್ನು 'ಕಾಲದ' ಮೂಲಕ ವಿವರಿಸಲು ಯತ್ನಿಸಿದ ರೋಮಿಲಾ ಥಾಪರ್ ಅವರ 'ಟೈಮ್ ಆ್ಯಸ್ ಎ ಮೆಟಾಫರ್ ಹಿಸ್ಟರಿ: ಅರ್ಲಿ ಇಂಡಿಯಾ"(೧೯೭೭) ಎನ್ನುವ ಕೃತಿಯಲ್ಲಿ ಈಗ ಚಾಲ್ತಿಯಲ್ಲಿರುವ ಚರಿತ್ರೆ ಬರವಣಿಗೆ ಕ್ರಮದ ಅಧ್ಯಯನ ವಿಧಾನವನ್ನೇ ಪ್ರಶ್ನಿಸಿರುವುದು ಕಂಡುಬರುತ್ತದೆ. ಪಾಶ್ಚಾತ್ಯರ 'ಸರಳರೇಖಾತ್ಮಕ ಕಾಲಮಾನ'ದ ಕ್ರಮವನ್ನೇ ಭಾರತೀಯರು ಬಳಸುತ್ತಾರೆ. ಆದರೆ ಭಾರತೀಯರಲ್ಲಿನ ಇತಿಹಾಸ ಪ್ರಜ್ಞೆ ಸರಳರೇಖಾತ್ಮಕ ನೆಲೆಯಲ್ಲಿ ಇಲ್ಲದಿರುವುದನ್ನು ತೋರಿಸುತ್ತಾರೆ. ಭಾರತೀಯರ ಕಾಲದ ಅನುಭವವು ಚಕ್ರದೋಪಾದಿಯಾಗಿದ್ದು, ಅವು ಚಕ್ರದಂತೆ ನಿರಂತರವಾಗಿ ತಿರುಗುತ್ತಿರುತ್ತವೆ. ಇದಕ್ಕೆ ಕೊನೆಯೇ ಇಲ್ಲ. ಹೀಗಾಗಿ 'ಚಾರಿತ್ರಿಕ ಬದಲಾವಣೆಯನ್ನು' ನೋಡುವುದು ಕಷ್ಟ ಇದರಿಂದಾಗಿ ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆ ಇಲ್ಲ. ಅವರಿಗೆ ಮಿಥ್‌ಗಳು ಮತ್ತು ಚರಿತ್ರೆಯ ನಡುವೆ ವ್ಯತ್ಯಾಸಗಳಿರುವುದಿಲ್ಲ ಎಂದಿದ್ದಾರೆ. ಚಕ್ರದೋಪಾದಿ ಕಾಲಮಾನದ ಮೂಲಕ 'ಚರಿತ್ರೆಯನ್ನು' ಅಭ್ಯಸಿಸಲು ಹೊರಟರೆ ಅದರ ಸ್ವರೂಪವನ್ನೇ ಬದಲಿಸುವ ಸಾಧ್ಯತೆಗಳೂ ಇವೆ. ವರ್ತಮಾನದ ವ್ಯವಸ್ಥೆಯಲ್ಲಿ ಬಲಾಢ್ಯವಾಗಿರುವ ವಿಜ್ಞಾನಸಂಬಂಧಿ ವಿಷಯಗಳ ಜೊತೆಜೊತೆಗೆ ಮಿಥ್‌ಗಳನ್ನು ಸಂವಾದಿಯಾಗಿಸುವ ವಿಧಾನಕ್ರಮವು ಚರಿತ್ರೆ ಬರವಣಿಗೆ ಹೊಸ ಮಗ್ಗಲುಗಳನ್ನು ನೋಡಲು ಸಹಾಯಕವಾಗಬಹುದು. ಬರವಣಿಗೆ ಕ್ರಮದಿಂದ ಚರಿತ್ರೆ ವಿಧಾನಗಳು ರೂಪುಗೊಳ್ಳುತ್ತವೇ ಹೊರತು ವಿಧಾನಕ್ರಮಗಳಿಂದಲ್ಲ. ವಿದ್ಯಾರ್ಥಿಗಳ/ ಸಂಶೋಧಕರ ಹಿತದೃಷ್ಟಿಯಿಂದ ಚರಿತ್ರೆ ವಿಧಾನವನ್ನು ಪ್ರತ್ಯೇಕವಾಗಿ ಅಭ್ಯಸಿಸುವುದು ಇಂದಿನ ಅನಿವಾರ್ಯವಾದರೂ ವಿವಿಧ ಆಯಾಮಗಳನ್ನು ವಿಮರ್ಶೆಗೆ ಒಳಪಡಿಸುವುದಾಗಿದೆ. ಹೀಗಾಗಿಯೇ ಚರಿತ್ರೆ ಬರವಣಿಗೆ ಕ್ರಮದ ಅವಿಭಾಜ್ಯ ಅಂಗವಾಗಿ ಚರಿತ್ರೆ ಅಧ್ಯಯನ ವಿಧಾನವೂ ರೂಪುಗೊಳ್ಳುತ್ತದೆ. ಕಾಲದಿಂದ ಕಾಲಕ್ಕೆ, ಘಟನೆಯಿಂದ ಘಟನೆಗೆ, ಸ್ಥಳದಿಂದ ಸ್ಥಳಕ್ಕೆ ವ್ಯಾಪ್ತಿಯಲ್ಲಿ ಭಿನ್ನತೆ ಕಂಡುಬಂದರೂ ಅವುಗಳ ಆಶಯ ಒಂದೇ ಆಗಿರುತ್ತದೆ.[೩೯] ಈ ಹಿನ್ನೆಲೆಯಲ್ಲಿ ಚರಿತ್ರೆ ಅಧ್ಯಯನದಲ್ಲಿ ಬರವಣಿಗೆ ಕ್ರಮ ಮತ್ತು ವಿಧಾನ ಎರಡೂ ಮುಖ್ಯ.

ಚರಿತ್ರೆ ಬರವಣಿಗೆಯಲ್ಲಿ ಒಂದು ಪಂಥ ಇನ್ನೊಂದು ಪಂಥವನ್ನು ಪ್ರಶ್ನಿಸುತ್ತಲೇ ಬಂತು. ಇದರಿಂದ ರಚನೆ ಹಾಗೂ ನಿರಚನೆಗೆ ನಿರಂತವಾಗಿ ನಡೆಯಿತು. ಪ್ರಭುತ್ವಮುಖಿಯಾಗಿದ್ದ ಚರಿತ್ರೆಯನ್ನು ಜನಮುಖಿಯನ್ನಾಗಿಸುವ ಪ್ರಯತ್ನಗಳು ಹಾಗೂ ಗ್ರಹಿಸುವ ಹಿನ್ನೆಲೆಯಲ್ಲಿ ಚರಿತ್ರೆಯನ್ನು ಚರಿತ್ರೆಗಳು

ಎಂಬುದಾಗಿ ವ್ಯಾಖ್ಯಾನಿಸುವ ಪ್ರಯತ್ನಗಳು ಕೂಡ ನಿರಂತರವಾಗಿ ನಡೆಯಲಾರಂಭಿಸಿದವು. ಚರಿತ್ರೆಯ ವ್ಯಾಪ್ತಿ ವಿಸ್ತಾರಗೊಳ್ಳುತ್ತಾ ಹೋದಂತೆ ಪ್ರವೇಶ ಪಡೆಯದ ಅದೆಷ್ಟೋ ವಿಚಾರಗಳು ಪ್ರವೇಶ ಪಡೆದವು. ಅಲಕ್ಷಿತ ಸಮುದಾಯದ ಐಡೆಂಟಿಟಿಯ ಪ್ರಶ್ನೆಗಳು ಅಲಕ್ಷಿತ ಸಮುದಾಯಗಳೊಳಗೆ ಹುಟ್ಟಿಕೊಳ್ಳಲು ಪ್ರಾರಂಭವಾದ ನಂತರ ಸಮುದಾಯಕೇಂದ್ರಿತ ಚರ್ಚೆಗಳು ಚರಿತ್ರೆ ಬರವಣಿಗೆಯಲ್ಲಿ ಕಾಣಿಸಿಕೊಂಡು ನೆಲೆ ನಿಂತವು. ಈಗಾಗಲೇ ಹಂಚಿಕೆಯಾದ ಚರಿತ್ರೆ ಎಂದರೆ ವೈದಿಕಕೇಂದ್ರಿತ, ಅರಸುಕೇಂದ್ರಿತ, ವಸಾಹತುಕೇಂದ್ರಿತ, ಬಂಡವಾಳಕೇಂದ್ರಿತ ಮುಂತಾದ ಸ್ಥಾಪಿತ ಹಿತಾಸಕ್ತಿಗಳ ಅಶೋತ್ತರಗಳಿಗೆ ಅನುಗುಣವಾಗಿ ನಿರ್ಮಾಣಗೊಂಡ ಚರಿತ್ರೆ. ಇಂತಹ ಚರಿತ್ರೆಯನ್ನು ಮರುಹಂಚಿಕೆಗೆ ಒಳಪಡಿಸಿ ಪ್ರಜಾಪ್ರಭುತ್ವ ಬಂದ ನಂತರ ದೇಶ, ರಾಜ್ಯಗಳ ಗಡಿ ಸಮಸ್ಯೆಗಳನ್ನು ಬಗೆಹರಿಸಲಾಯಿತು. ಬಿಡಿಬಿಡಿಯಾಗಿ ಮರುಹಂಚಿಕೆ ಆದವು.[೪೦] ಈ ನಿಟ್ಟಿನಲ್ಲಿ ಹಂಚಿಕೆ ಮರುಹಂಚಿಕೆ ಸಾಗುತ್ತಲೇ ಇರುತ್ತದೆ.

ಚರಿತ್ರೆಯು ಮಾನವನ ಮನಸ್ಸುಕೇಂದ್ರಿತ ಚಟುವಟಿಕೆಗಳ ಕೇಂದ್ರಸ್ಥಾನ. ಮಾನವನು ಗತದ ಬದುಕಿನಲ್ಲಿ ನಡೆದಿರುವ ಘಟನೆಯನ್ನು ವರ್ತಮಾನದ ಬದುಕಿನಲ್ಲಿ ಮೆಲುಕು ಹಾಕುತ್ತಾ, ಗತದಲ್ಲಿ ಆದ ತಪ್ಪನ್ನು ಭವಿಷತ್ ಕಾಲದಲ್ಲಿ ಆಗಬಾರದು ಎಂದು ಒಳ್ಳೆಯ ಅಂಶಗಳನ್ನು ಸೇರಿಸಿಕೊಂಡು ನಡೆಯುವುದೇ ಆಗಿದೆ. ಚರಿತ್ರೆಯನ್ನು ಅಧ್ಯಯನ ನಡೆಸುವ ಸಂದರ್ಭದಲ್ಲಿ ಮಾನವನ ಮನಃಸ್ಥಿತಿಯನ್ನು ಚಾರಿತ್ರಿಕವಾಗಿ ಅರ್ಥೈಸಿಕೊಳ್ಳುವುದು ಮತ್ತು ಅದರ ಕುರಿತಾದ ಚರಿತ್ರೆಕಾರರ ಗ್ರಹಿಕೆ ಅಥವಾ ಮನಸ್ಸನ್ನು ತಿಳಿಯುವುದು ಮುಖ್ಯವಾಗಿದೆ. ಚರಿತ್ರೆಲೇಖನ ಎನ್ನುವುದು ಇವೆರಡರ ಮರು ಓದು ಆಗಿದೆ. ಏನನ್ನು ಗ್ರಹಿಸಲಾಗಿದೆ, ಹೇಗೆ ಗ್ರಹಿಸಲಾಗಿದೆ ಅಥವಾ ಇನ್ನೂ ಏನನ್ನು ಗ್ರಹಿಸಬೇಕಾಗಿತ್ತು ಎಂಬುದನ್ನು ತಿಳಿಯುವುದೂ ಆಗಿದೆ. ಈ ಕಾರಣದಿಂದಲೇ ಸ್ವಯಂ ಮೌಲ್ಯಮಾಪನ ಎಂಬುದು ಹುಟ್ಟಿಕೊಂಡಿದೆ. ಅದು ಮಾನವ ಹಾಗೂ ಚರಿತ್ರೆಕಾರ ಇವರಿಬ್ಬರಿಗೂ ಸಮಾನವಾಗಿ ಅನ್ವಯಿಸುವಂಥದ್ದು.[೪೧] ಸ್ವಯಂಮೌಲ್ಯಮಾಪನದಿಂದ ಮರುಬರವಣಿಗೆ ಸಾಗುತ್ತದೆ.

ಚರಿತ್ರೆಕಾರರು ಕೃತಿಗಳ ಮೂಲಕ ಮಾಡಿದ ಸಂಶೋಧನೆಯ ಮೌಲ್ಯವನ್ನು ಮರುಚಿಂತನೆಗೆ ಒಳಪಡಿಸಿದಾಗ ಹೊಸಹೊಸ ವಿಚಾರಗಳು ಹೊರಬರುತ್ತವೆ ಎಂಬುದು ಮುಖ್ಯ. ಸತ್ಯ ಮತ್ತು ವಸ್ತುನಿಷ್ಠತೆಯ ಪ್ರಮಾಣ ಹೇಗಿರಬೇಕು ಎಂಬುದನ್ನು ತಿಳಿದಿರಬೇಕು. ಸಾಂಪ್ರದಾಯಿಕ ಚರಿತ್ರೆಯಿಂದ ಸೈದ್ಧಾಂತಿಕವಾಗಿ ಚರಿತ್ರೆ ಬರವಣಿಗೆ ಹೇಗೆ ಸಾಗಿತು ಎಂಬುದು ಮರುಚಿಂತನೆಯಲ್ಲಿ ಪ್ರಮುಖವಾದುದು.[೪೨]

ಪುನರ್‌ಚಿಂತನೆಯು ಚರಿತ್ರೆಕಾರರಲ್ಲಿ ಹೊಸ ವಿಚಾರಗಳನ್ನು ಹುಟ್ಟುಹಾಕುತ್ತದೆ. ವಿಚಾರಗಳನ್ನು ವಿಶ್ಲೇಷಣಾತ್ಮಕವಾಗಿ ರೂಪಿಸಬೇಕು. ಚರಿತ್ರೆಕಾರನು ಕೃತಿಯಲ್ಲಿ ಏನನ್ನು ನಿರೂಪಿಸಿದ್ದಾರೆ? ಆ ಸನ್ನಿವೇಶ ಮತ್ತು ನಿರೂಪಿಸಬೇಕಾದದ್ದು ಯಾವುದು? ಎಂಬುದನ್ನು ತಿಳಿಯಬೇಕು. ಈ ಕಾರಣದಿಂದಾಗಿಯೇ ಚರಿತ್ರೆಯೆಂದರೆ ಅದೊಂದು ಸ್ವಯಂಮೌಲ್ಯಮಾಪನವೇ ಆಗಿದೆ.[೪೩] ಆದರೆ ಸ್ವಯಂಮೌಲ್ಯಮಾಪನ ಮಾಡಿಕೊಳ್ಳಲು ಚರಿತ್ರೆಯಲ್ಲಿ ಯಾರು ಸಿದ್ಧರಿದ್ದರು ಎನ್ನುವುದು ಮುಖ್ಯ. ಸಾಂದರ್ಭಿಕವಾಗಿ ಕೆಲವರು ತಾವು ಬರೆದ ಕೆಲವು ಕೃತಿಗಳನ್ನು ಹಿಂತೆಗೆದುಕೊಂಡಿರುವುದನ್ನು

ನೋಡಬಹುದು. ರೋಮಿಲಾ ಥಾಪರ್ ಅವರು ತಮ್ಮ ಕೃತಿಗಳಲ್ಲಿ ಸ್ವಯಂಮೌಲ್ಯಮಾಪನ ಮಾಡಿದ್ದಾರೆ. ರೋಮಿಲಾ ಥಾಪರ್ ಅವರು 'ಫ್ರಂ ಲೀನಿಯೇಟ್ ಟು ಸ್ಟೇಜ್' ಕೃತಿಯಲ್ಲಿ ಭಾರತದಲ್ಲಿ ಸ್ಟೇಟ್ ನಿರ್ಮಾಣದ ಹಂತಗಳನ್ನು ಗುರುತಿಸಿ ಮೌರ್ಯ ರಾಜ್ಯವು ಅದರ ಮುಕ್ತಾಯ ಎಂಬಂತೆ ಚಿತ್ರಿಸಿದ್ದರು. ಅದನ್ನು ಮರುಚಿಂತನೆ ಮಾಡಿ 'ಮೌರ್ಯಾಸ್ ರಿ ವಿಸಿಟೆಡ್'ಎನ್ನುವ ಕಿರು ಹೊತ್ತಿಗೆಯನ್ನು ಹೊರತಂದರು. ರಾಜ್ಯದ ವಿಭಾಗಗಳನ್ನು ತಿಳಿಸಿದ್ದಾರೆ. ಇಲ್ಲಿ ಹೊಸ ಆಕರಗಳೊಂದಿಗೆ ಸ್ವಯಂಮೌಲ್ಯಮಾಪನ ಮತ್ತು ಮರುಚಿಂತನೆಯನ್ನು ನಡೆಸಿರುವುದನ್ನು ಗಮನಿಸಬಹುದು.

ಕರ್ನಾಟಕ ಚರಿತ್ರೆಯಲ್ಲಿ ರಾಷ್ಟ್ರೀಯವಾದಿ ಚರಿತ್ರೆಕಾರರಾದ ಸೂರ್ಯನಾಥ ಕಾಮತ್, ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್ಟ, ಎಂ.ಹೆಚ್.ಕೃಷ್ಣ, ಬಿ.ಎ.ಸಾಲೆತ್ತೂರ್, ಬಿ.ಆರ್.ಗೋಪಾಲ್, ಜಿ.ಎಸ್.ದೀಕ್ಷಿತ್, ಕೆ.ವಿ.ರಮೇಶ್ ಮುಂತಾದವರು ಕೃತಿಗಳನ್ನು ರಚಿಸಿದ್ದಾರೆ. ಇವರ ಕೃತಿಗಳು ನೇರವಾಗಿ ಮೈಸೂರು ಸಂಸ್ಥಾನದ ಚರಿತ್ರೆಗೆ ಸಂಬಂಧಿಸಿರದಿದ್ದರೂ, ಕರ್ನಾಟಕದ ಚರಿತ್ರೆಯ ಭಾಗವಾಗಿ ಮೈಸೂರಿನ ಚರಿತ್ರೆಯನ್ನು ಕಟ್ಟುತ್ತವೆ. ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ ಅವರು **ಕರ್ನಾಟಕ ಇತಿಹಾಸ ದರ್ಶನ** ಎಂಬ ಕೃತಿಯಲ್ಲಿ ಕರ್ನಾಟಕದ ಚರಿತ್ರೆಯ ಭಾಗವಾಗಿ ಮೈಸೂರಿನ ಚರಿತ್ರೆಯನ್ನು ವಿವರಿಸಿದ್ದಾರೆ. ಎಂ.ಹೆಚ್.ಕೃಷ್ಣ ಅವರು ಶಾಸನಶಾಸ್ತ್ರ ಇಲಾಖೆಯ ನಿರ್ದೇಶಕ ಮತ್ತು ಇತಿಹಾಸ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದವರು. ಎಫಿಗ್ರಾಫಿಯಾ ಕರ್ನಾಟಿಕದ ಅಕಾರಾದಿ ಸೂಚಿ, ಅದರ ೧೪ ಹಾಗೂ ೧೫ ಸಂಪುಟಗಳು, ಮೈಸೂರು ಪ್ರಾಚ್ಯ ಶೋಧನೆಯ ವಾರ್ಷಿಕ ವರದಿಗಳನ್ನು ಹೊರಡಿಸಿ, ಶಾಸನಗಳ ಮೂಲಕ ಚರಿತ್ರೆಯನ್ನು ಕಟ್ಟಿದರು. ಸೂರ್ಯನಾಥ ಯು. ಕಾಮತ್ ಅವರು **ಎ ಕನ್‌ಸೈಸ್ ಹಿಸ್ಟರಿ ಆಫ್ ಕರ್ನಾಟಕ** ಕೃತಿ, ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂಪುಟಗಳು ಹಾಗೂ ಮೈಸೂರು ಡಿಸ್ಟ್ರಿಕ್ಟ್ ಗ್ಯಾಸೆಟಿಯರ್‌ಗಳು ಮೈಸೂರಿನ ಒಡೆಯರ ಚರಿತ್ರೆಗೆ ಕರ್ನಾಟಕದ ಚರಿತ್ರೆಯ ಒಂದು ಭಾಗವಾಗಿ ಪೂರಕ ಮಾಹಿತಿಗಳನ್ನು ಒದಗಿಸುತ್ತವೆ.

ಕರ್ನಾಟಕದಲ್ಲಿ ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವ ಚರಿತ್ರೆಕಾರರ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವ ಇತಿಹಾಸಕಾರರೆಂದರೇ ಎಸ್.ಶೆಟ್ಟರ್, ಕೇಶವನ್ ವೆಲುತಟ್, ಬಿ.ಸುರೇಂದ್ರರಾವ್, ಎಸ್.ಚಂದ್ರಶೇಖರ್, ಸೆಬಾಸ್ಟಿಯನ್ ಜೋಸೆಫ್, ಆರ್.ಎನ್.ನಂದಿ, ಎಸ್.ಎ.ಬಾರಿ, ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್, ಲಕ್ಷ್ಮಣ್ ತೆಲಗಾವಿ, ವಿಜಯ್ ಪೂಣಚ್ಚ ತಂಬಂಡ, ಕೆ. ಮೋಹನ್‌ಕೃಷ್ಣ ರೈ, ಎಂ.ವಿ.ವಸು, ಬಿ.ಉದಯ, ಎನ್.ಚಿನ್ನಸ್ವಾಮಿ ಸೋಸಲೆ, ವಿರೂಪಾಕ್ಷಿ ಪೂಜಾರಹಳ್ಳಿ ಮುಂತಾದವರು.

ಎಸ್.ಶೆಟ್ಟರ್ ಅವರು **ಶಂಗಂ ತಮಿಳಗಂ ಮತ್ತು ಕನ್ನಡ ನಾಡು-ನುಡಿ** ಎಂಬ ಕೃತಿಯಲ್ಲಿ ದಕ್ಷಿಣ ಭಾರತದಲ್ಲಿ ಪ್ರಾಚೀನ ಘಟ್ಟದ ಭಾಷೆ, ಲಿಪಿ, ಸಾಹಿತ್ಯ, ಪ್ರಭುತ್ವ ವ್ಯವಸ್ಥೆಯ ಐಡೆಂಟಿಟಿಗಳು ಮತ್ತು ವಿಭಿನ್ನ ಭೌಗೋಳಿಕ ಘಟಕಗಳಲ್ಲಿದ್ದ ಜನವರ್ಗಗಳನ್ನು ತಿಳಿಸಲೆತ್ನಿಸುತ್ತಾರೆ. ಬಿ.ಸುರೇಂದ್ರರಾವ್ ಅವರು ಬದಲಾದ ಚಾರಿತ್ರಿಕ ಘಟ್ಟದಲ್ಲಿ ಅಲಕ್ಷಿತ ಸಮುದಾಯಗಳು ಮುಖ್ಯವಾಹಿನಿಗೆ ಬಂದು ತಮ್ಮ ಸ್ಥಾನಗಳನ್ನು ಬಲಗೊಳಿಸಿಕೊಳ್ಳಬೇಕು ಎಂಬುದನ್ನು ಅವರ ಲೇಖನಗಳಲ್ಲಿ ತಿಳಿಸಿದ್ದಾರೆ.

ರಾಜಾರಾಮ ಹೆಗಡೆ ಅವರು ಬದಲಾದ ಸಮಾಜದಲ್ಲಿ ಚರಿತ್ರೆ ಹೇಗೆ ಗುರುತಿಸಲ್ಪಡುತ್ತದೆ ಎಂಬುದನ್ನು **ಲೌಕಿಕ-ಅಲೌಕಿಕ** ಕೃತಿಯಲ್ಲಿ ತಿಳಿಸಿದ್ದಾರೆ. ತಳಸಮುದಾಯಗಳು ವಸಾಹತೋತ್ತರ ಚಿಂತನೆಗೆ ಒಳಗಾಗಿ ಹೇಗೆ ಪ್ರತಿಗಾಮಿ ಶಕ್ತಿಯನ್ನು ಪಡೆಯುತ್ತಿವೆ ಎಂಬುದನ್ನು **ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ** ಎಂಬ ಕ್ರೋಢೀಕೃತ ಲೇಖನಗಳ ಕೃತಿಯ ಸಂಪಾದಕತ್ವದಲ್ಲಿ ಚರ್ಚಿಸಿರುತ್ತಾರೆ. ಅಶೋಕ ಶೆಟ್ಟರ್ ಅವರು **ಚರಿತ್ರೆ-ಸಮಾಜ-ಸಾಹಿತ್ಯ** ಕೃತಿಯ ಲೇಖನಗಳಲ್ಲಿ ಚರಿತ್ರೆ-ಸಮಾಜ-ಸಾಹಿತ್ಯದ ಅಂತರ್ ಸಂಬಂಧಗಳನ್ನು ಗ್ರಹಿಸಿ ಬರೆದಿರುವುದನ್ನು ನೋಡಬಹುದು. ಇಲ್ಲಿ ಚರಿತ್ರೆ ಸಮಾಜದ ಜನಮುಖಿ ಅಧ್ಯಯನ ಎಂಬುದನ್ನು ತಿಳಿಯಬಹುದು. ಲಕ್ಷ್ಮಣ್ ತೆಲಗಾವಿ ಅವರು **ಹಿಂದುಳಿದ ವರ್ಗಗಳ ಮತ್ತು ದಲಿತ ಚಳವಳಿಗಳು** ಎಂಬ ಕೃತಿಯಲ್ಲಿ ತುಳಿತಕ್ಕೆ ಒಳಪಟ್ಟ ಹಿಂದುಳಿದ ವರ್ಗ ಮತ್ತು ದಲಿತ ಮೀಸಲಾತಿ ಹೋರಾಟಗಳ ಹಿನ್ನೆಲೆಯನ್ನು ಚರ್ಚಿಸಿದ್ದಾರೆ. **ಸ್ಥಳೀಯ ಚರಿತ್ರೆ ಅಧ್ಯಯನದ ತಾತ್ವಿಕತೆ ಮತ್ತು ಸ್ವರೂಪ** ಎಂಬ ಸಂಪಾದಕತ್ವದ ಕೃತಿಯಲ್ಲಿ ನಗಣ್ಯವಾದ ಮೌಖಿಕ ಆಕರ, ಕೈಫಿಯತ್ತು, ಇತರ ಆಕರಗಳನ್ನು ಮುಖ್ಯವಾಹಿನಿಗೆ ಪರಿಚಯಿಸಿ, ಸ್ಥಳೀಯ ಚರಿತ್ರೆಯನ್ನು ಕಟ್ಟುವಿಕೆಯ ಬಗೆಗೆ ತಿಳಿಸಿದ್ದಾರೆ. ವಿಜಯ್ ಪೂಣಚ್ಚ ತಂಬಂಡ ಅವರು ಸಬಾಲ್ಟರ್ನ್ ಚರಿತ್ರೆಯ ಬರವಣಿಗೆ ಕ್ರಮ ಮತ್ತು ವಿಮರ್ಶೆ ಮಾಡುತ್ತಾ ಕೆಳವರ್ಗಗಳ ಪ್ರತಿಭಟನೆಯನ್ನು **ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ** ಕೃತಿಯಲ್ಲಿ ಚರ್ಚಿಸಿ, ವಿಶ್ಲೇಷಿಸಿದ್ದಾರೆ. **ರೈತರ ಹೋರಾಟ** ಕೃತಿಯಲ್ಲಿ ರೈತರ ಸಮಸ್ಯೆಗಳ ಅಸ್ಮಿತೆಗಳನ್ನು ಗುರುತಿಸಿದ್ದಾರೆ. ಅವರ **ಪಳಮೆ** ಕೃತಿಯಲ್ಲಿ ಮೌಖಿಕ ಆಕರಗಳ ಮೂಲಕ ಕನ್ನಡ-ಕೊಡಗು-ತುಳುನಾಡಿನ ಚರಿತ್ರೆಯನ್ನು ಕಟ್ಟಿಕೊಟ್ಟಿರುವುದನ್ನು ತಿಳಿಯಬಹುದು. ಈ ನಿಟ್ಟಿನಲ್ಲಿ ತಳಸಮುದಾಯಗಳ ಐಡೆಂಟಿಗಳನ್ನು ಗುರುತಿಸಿ, ಮುಖ್ಯವಾಹಿನಿಯಲ್ಲಿ ತರುವ ಕಾರ್ಯದಲ್ಲಿ ತೊಡಗಿದ್ದಾರೆ. ಹಾಗೆಯೇ ವಿಜಯ್ ಪೂಣಚ್ಚ ತಂಬಂಡ ಅವರ ಪ್ರಧಾನ ಸಂಪಾದಕತ್ವ ಹಾಗೂ ಎನ್.ಚಿನ್ನಸ್ವಾಮಿ ಸೋಸಲೆ, ಕೆ.ಮೋಹನ್‌ಕೃಷ್ಣ ರೈ, ವಿರೂಪಾಕ್ಷಿ ಪೂಜಾರಹಳ್ಳಿ ಅವರುಗಳ ಸಂಪುಟ ಸಂಪಾದಕತ್ವದಲ್ಲಿ **ಚರಿತ್ರೆಯ ಎಂಟು ಸಂಪುಟಗಳು** ಹೊರಬಂದಿವೆ. ಈ ಸಂಪುಟಗಳು ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನ ವಿಧಾನ, ಭಾರತ ಉಪಖಂಡದ ಆಧುನಿಕಪೂರ್ವ ಚರಿತ್ರೆ, ಭಾರತ ಉಪಖಂಡದ ಆಧುನಿಕ ಚರಿತ್ರೆ, ಏಷ್ಯಾ: ಚರಿತ್ರೆಯ ವಿವಿಧ ಆಯಾಮಗಳು, ಯುರೋಪ್: ಚರಿತ್ರೆಯ ವಿವಿಧ ಆಯಾಮಗಳು, ಸಮಕಾಲೀನ ಕರ್ನಾಟಕ ಚರಿತ್ರೆಯ ವಿವಿಧ ಆಯಾಮಗಳು, ಆಫ್ರಿಕಾ: ಚರಿತ್ರೆಯ ವಿವಿಧ ಆಯಾಮಗಳು, ಅಮೆರಿಕಾ: ಚರಿತ್ರೆಯ ವಿವಿಧ ಆಯಾಮಗಳು ಎಂಬ ವಿಷಯಗಳನ್ನು ಚರ್ಚಿಸಿವೆ. ಈ ಸಂಪುಟಗಳಲ್ಲಿನ ವಿಚಾರಗಳು ಜನಮುಖಿಯಾಗಿರುವುದನ್ನು ನೋಡಬಹುದು. ಕೆ.ಮೋಹನ್‌ಕೃಷ್ಣ ರೈ ಅವರು **ಪ್ರಭುತ್ವ ಮತ್ತು ಜನತೆ** ಎಂಬ ಕೃತಿಯಲ್ಲಿ ಹೇಗೆ ಪ್ರಭುತ್ವ ಮತ್ತು ಜನತೆಯು ಮುಖಾಮುಖಿ ಆಗುತ್ತದೆ ಎಂಬುದನ್ನು ಚರ್ಚಿಸಿದ್ದಾರೆ. ಕೇಂದ್ರೀಕೃತ ಅಧಿಕಾರದಲ್ಲಿ ಜನತೆಯ ನಿರ್ಲಕ್ಷತೆಯ ಅಂಶಗಳನ್ನು ತಿಳಿಸಿದ್ದಾರೆ. ಜನಮುಖಿ ಅಧ್ಯಯನಗಳ ಕಡೆಗೆ ಹೆಚ್ಚು ಗಮನ ಹರಿಸಿದ್ದಾರೆ. ವಸು ಎಂ.ವಿ. ಅವರು ತಮ್ಮ ಸಂಪಾದಕತ್ವದ **ದಕ್ಷಿಣ ಕರ್ನಾಟಕದ ಅರಸುಮನೆತನಗಳು** ಎಂಬ ಕೃತಿಯಲ್ಲಿ ಕರ್ನಾಟಕದಲ್ಲಿ ಆಳ್ವಿಕೆ ನಡೆಸಿದ ಮನೆತನ, ಆಡಳಿತ, ಅವರ ಜನಪರ ಕಾರ್ಯಗಳನ್ನು ತಿಳಿಸಿದ್ದಾರೆ. ಅಗಣ್ಯವಾಗಿದ್ದ ಮೌಖಿಕ ಆಕರಗಳ

ಕಡೆಗೆ ಒತ್ತನ್ನು ನೀಡಿ **ಮೌಖಿಕ ಚರಿತ್ರೆ** ಕೃತಿಯನ್ನು ರಚಿಸಿದ್ದಾರೆ. ಬಿ.ಉದಯ ಅವರು ಸಮುದಾಯದ ವಾಸ್ತವದ ತೊಡಗುಗಳನ್ನು ತಿಳಿಸಿದ್ದಾರೆ. **ಹೈದರಾಲಿ–ಟಿಪ್ಪು ಇತಿಹಾಸ ಕಥನ** ಕೃತಿಯ ಮೂಲಕ ಚರಿತ್ರೆಯಲ್ಲಿ ಇವರಿಬ್ಬರ ಬಗೆಗೆ ಇರುವ ಚರಿತ್ರೆಕಾರರ ಧೋರಣೆಗಳನ್ನು ಚರ್ಚಿಸಿದ್ದಾರೆ. ವಿರೂಪಾಕ್ಷಿ ಪೂಜಾರಹಳ್ಳಿ ಅವರು ಬುಡಕಟ್ಟು ಜನಾಂಗ, ಬೇಡ ಸಮುದಾಯಗಳನ್ನು ಕುರಿತು ಕೃತಿಗಳನ್ನು ರಚಿಸಿದ್ದಾರೆ. ಇವರ **ಬ್ರಿಟಿಷರ ವಿರುದ್ಧ ಬೇಡ ನಾಯಕರ ಹೋರಾಟಗಳು** ಕೃತಿಯು ಬ್ರಿಟಿಷರ ವಿರುದ್ಧ ಹೋರಾಟದ ಬೇಡನಾಯರ ಚಿತ್ರಣವನ್ನು ನೀಡುತ್ತದೆ. ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರ **ದಲಿತರ ಬದುಕು–ಮೆಲುಕು, ದಲಿತರ ಮೇಲೆ ದೌರ್ಜನ್ಯ, ಸಾಮಾಜಿಕ ನ್ಯಾಯದ ಪ್ರಶ್ನೆಗಳು, ಅಂಬೇಡ್ಕರ್ ದೃಷ್ಟಿಯಲ್ಲಿ ದಲಿತರು ಮತ್ತು ಮತಾಂತರ, ಭಾರತೀಯ ಸಮಾಜ ಮತ್ತು ದಲಿತರು** ಇತ್ಯಾದಿ ಕೃತಿಗಳು ಅಂಬೇಡ್ಕರ್ ವಾದದ ಹಿನ್ನೆಲೆಯಲ್ಲಿ ಅಸ್ಪೃಶ್ಯ ವರ್ಗದವರ ಬದುಕು–ಬವಣೆಗಳ ಕುರಿತು ಮಾರ್ಕ್ಸ್‌ವಾದ ಮತ್ತು ಸಬಾಲ್ಟರ್ನ್ ವಾದದ ಹಿನ್ನೆಲೆಯಲ್ಲಿ ಚರ್ಚಿಸುತ್ತವೆ. ಹೀಗೆ ಕರ್ನಾಟಕದಲ್ಲಿ ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥದ ನೆಲೆಯಲ್ಲಿ ಗುರುತಿಸಿಕೊಂಡ ಚರಿತ್ರೆಕಾರರ ಬರವಣಿಗೆಗಳನ್ನು ಗುರುತಿಸಬಹುದು.

ಆಧುನಿಕ ಭಾರತದ ಚರಿತ್ರೆಲೇಖನ ಮತ್ತು ಸಿದ್ಧಾಂತಗಳ ಅಧ್ಯಯನ ನಡೆದಿದ್ದು, ತನ್ನ ಸೈದ್ಧಾಂತಿಕ ವಿಚಾರಗಳಿಂದ ಪ್ರಭಾವಿತಗೊಂಡ ಚರಿತ್ರೆರಚನೆಗೆ ಪ್ರಯತ್ನಿಸಿರುವುದರಿಂದ ಚರಿತ್ರೆಯ ಸತ್ಯಾಸತ್ಯತೆಯ ವಾಸ್ತವ ಒಳನೋಟಗಳನ್ನು ಸ್ಪಷ್ಟವಾಗಿ ವ್ಯಕ್ತಪಡಿಸಿದಂತಾಯಿತು. ಈ ನಿಟ್ಟಿನಲ್ಲಿ ಮೈಸೂರು ಒಡೆಯರ ಚರಿತ್ರೆ ಕುರಿತ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕರ್ನಾಟಕದ ಚರಿತ್ರೆಯಲ್ಲಿ ಮಾತ್ರವಲ್ಲ, ಭಾರತದ ಚರಿತ್ರೆಯಲ್ಲೂ ಮೈಸೂರು ಸಂಸ್ಥಾನ ಬೇರೆಬೇರೆ ಕಾರಣಗಳಿಂದ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇದರ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಂಪರೆಗಳು ಬಹುಮುಖಿ ವಿಚಾರಧಾರೆಗಳಲ್ಲಿ ಅನನ್ಯತೆಯನ್ನು ಮೆರೆದಿದೆ. ಜೊತೆಗೆ ಒಟ್ಟು ಭಾರತೀಯ ಸಂಸ್ಕೃತಿಯ ಭಾಗವಾಗಿ ಅಂತರ್ಗತಗೊಂಡಿದೆ. ಈ ಕಾರಣದಿಂದಲೇ ಮೈಸೂರು ಸಂಸ್ಥಾನ ಇಂದಿಗೂ ಸಂಶೋಧಕರ ಆಸಕ್ತಿಯನ್ನು ತನ್ನೆಡೆಗೆ ಉಳಿಸಿಕೊಂಡಿರುವುದು. ಅಲ್ಲದೇ ವಿವಿಧ ವಿಚಾರಧಾರೆಗಳಲ್ಲಿ ಸಂಶೋಧನೆಗೆ ಒಳಗಾಗುತ್ತಲೇ ಇದೆ.

ಕ್ರಿ.ಶ.೧೩೯೯ರಲ್ಲಿ ಸ್ಥಾಪನೆಯಾದ ಮೈಸೂರು ಸಂಸ್ಥಾನವು ವಿಜಯನಗರದ ಅರಸರ ಸಮಕಾಲೀನರಾಗಿ, ಸಾಮಂತರಾಗಿ ಅವರ ನೆರಳಿನಲ್ಲಿಯೇ ಬೆಳೆದು ನಿಂತರು. ವಿಜಯನಗರದ ಅವನತಿಯ ನಂತರ ಅಂದಿನ ಎಲ್ಲಾ ರೀತಿಯ ಸಂಸ್ಕೃತಿಯನ್ನು ಪಾಲಿಸಿಕೊಂಡು ಬಂದವರು ಮೈಸೂರಿನ ಒಡೆಯರು. ಮೈಸೂರು ಒಡೆಯರು ತಮ್ಮ ಆಡಳಿತ, ಆರ್ಥಿಕ ಪದ್ಧತಿ, ವಾಣಿಜ್ಯ, ಹಬ್ಬ–ಹರಿದಿನಗಳ ಆಚರಣೆ, ದಸರಾ ಹಬ್ಬದ ವೈಭವದ ದಿನಗಳನ್ನು ವಿಜಯನಗರದ ಅರಸರಿಂದ ಪ್ರಭಾವಿತರಾಗಿ ಬೆಳೆಸಿ ಉಳಿಸಿಕೊಂಡು ಬಂದರು. ಈ ದೃಷ್ಟಿಯಿಂದಾಗಿ ಇಡೀ ಭರತಖಂಡದಲ್ಲಿ ಮಾತ್ರವಲ್ಲದೇ ವಿಶ್ವದಲ್ಲಿಯೇ ಮೈಸೂರು ಸಂಸ್ಥಾನ ಸಾಂಸ್ಕೃತಿಕ ಪರಂಪರೆಯಲ್ಲಿ ಗುರುತಿಸಿಕೊಂಡಿದೆ. ಇಂದಿಗೂ ನಡೆಯುತ್ತಿರುವ ವಿಶ್ವವಿಖ್ಯಾತ ದಸರಾ ಉತ್ಸವ ಪ್ರಮುಖವಾದುದು. ಮೈಸೂರು ಸಂಸ್ಥಾನವು ೧೭ನೇ ಶತಮಾನದ ಪ್ರಾರಂಭದ ನಂತರ ಒಂದು ಪ್ರಮುಖ ರಾಜಕೀಯ ಶಕ್ತಿಯಾಗಿ ಬೆಳೆಯಲಾರಂಭಿಸಿತು. ಈ ರಾಜಕೀಯ ವ್ಯವಸ್ಥೆಯ ನೆಲೆಯಲ್ಲಿ ಪ್ರತ್ಯೇಕವಾದ ರಾಜ್ಯಶಾಹಿ

ವ್ಯವಸ್ಥೆ ರೂಪುಗೊಂಡಿತು. ಹೀಗೆ ರೂಪುಗೊಂಡ ಈ ಸಂಸ್ಥಾನವು ಕ್ರಮೇಣ ಅನೇಕ ಸ್ಥಿತ್ಯಂತರಗಳಿಗೆ ಒಳಗಾಯಿತು.[೪೪] ಮೈಸೂರು ಪೂರ್ತಿಯಾಗಿ ಬ್ರಿಟಿಷ್ ವಸಾಹತುಶಾಹಿಯ ಸೃಷ್ಟಿಯಾಯಿತು. ಈ ರೀತಿಯಾಗಿ ಬ್ರಿಟಿಷ್ ವ್ಯವಸ್ಥೆಯ ಪ್ರಯೋಗಕ್ಕೆ ತುತ್ತಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು, ಬ್ರಿಟಿಷರು ಒಂದೊಂದಾಗಿ ವಶಪಡಿಸಿಕೊಂಡ ದೇಶಿ ಸಂಸ್ಥಾನಗಳಲ್ಲಿ ಮೈಸೂರು ಅತ್ಯಂತ ಸಂಪದ್ಭರಿತವಾದದ್ದು, ಹಾಗೆಯೇ ವಿಶಾಲವಾದುದು. ಮೈಸೂರು ಸಂಸ್ಥಾನ ಮರುಹುಟ್ಟು ಪಡೆದು, ತನ್ನದೇ ಆದ ರಾಜಕೀಯ ಅಸ್ತಿತ್ವವನ್ನು ಉಳಿಸಿಕೊಂಡು, ವಸಾಹತುಶಾಹಿ ಕಾಲದ ಚರಿತ್ರೆಯ ವಿಶೇಷ ಘಟನೆಯಾಗಿ ಹೊಸ ಆಯಾಮಗಳನ್ನು ಸೃಷ್ಟಿಸಿತು. ೧೯೪೭ರವರೆಗೂ ಅದು ಹಾಗೆಯೇ ಉಳಿಯಿತು. ತದನಂತರ ಅದು ರಾಷ್ಟ್ರೀಯ ಜನತಾಂತ್ರಿಕ ಭಾರತದಲ್ಲಿ ಸೇರ್ಪಡೆಯಾಗಿ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳಬೇಕಾಯಿತು. ಆದರೂ ಇಂದಿಗೂ ಮೈಸೂರು ಒಡೆಯರ ಸಾಂಸ್ಕೃತಿಕ ಚಹರೆಗಳು ಹಾಗೆಯೇ ಮುಂದುವರಿದುಕೊಂಡು ಬಂದಿವೆ.

ಬಹುತೇಕವಾಗಿ ೫೭೦ ವರ್ಷಗಳ ಕಾಲ ಮೈಸೂರು ಸಂಸ್ಥಾನವು ಪ್ರತ್ಯೇಕವಾಗಿ ಮತ್ತು ಪರೋಕ್ಷವಾಗಿ ಒಡೆಯರ ಆಳ್ವಿಕೆಗೆ ಒಳಪಟ್ಟಿತ್ತು. ಮೈಸೂರು ಸಂಸ್ಥಾನದಲ್ಲಿ ಆಳ್ವಿಕೆ ಮಾಡಿದ ೨೫ ಒಡೆಯರುಗಳು ಸಮರ್ಥರೆಂದು ಹೇಳಲಾಗುವುದಿಲ್ಲ. ಇವರ ಅಸಕ್ತರೂ, ಅನಾಮಧೇಯರೂ ಆಗಿರುವವರು ಹೆಚ್ಚಾಗಿಯೇ ಇದ್ದಾರೆ. ಒಡೆಯರ ಮೂಲಪುರುಷನಾದ ಯದುರಾಯನು ಈ ಸಂಸ್ಥಾನವನ್ನು ಕ್ರಿ.ಶ.೧೩೯೯ರಲ್ಲಿ ಸ್ಥಾಪಿಸಿದನಾದರೂ ನಂತರ ಮೈಸೂರು ಸಂಸ್ಥಾನವು ಮತ್ತೆ ಬೆಳಕಿಗೆ ಬಂದದ್ದು ಕ್ರಿ.ಶ.೧೫೭೮ರಲ್ಲಿ ಅಧಿಕಾರಕ್ಕೆ ಬಂದ ರಾಜ ಒಡೆಯರಿಂದಲೇ. ಇವರ ನಂತರ ಬಂದ ಕಂಠೀರವ ನರಸರಾಜ ಒಡೆಯರು, ಚಿಕ್ಕದೇವರಾಜ ಒಡೆಯರು ರಾಜ್ಯವನ್ನು ವಿಸ್ತಾರಗೊಳಿಸಿದರು. ಅನಂತರ ರಾಜ್ಯ ಅಧೀನದ ದಳವಾಯಿಗಳಾದ ಮಲ್ಲರಾಜಯ್ಯ, ದೇವರಾಜಯ್ಯ, ನಂಜರಾಜಯ್ಯ ಅವರು ಮೈಸೂರಿನ ರಾಜ್ಯದ ರಾಜಕೀಯದಲ್ಲಿ ಪ್ರಾಬಲ್ಯ ಮೆರೆದರು. ಒಡೆಯರಾದ ೧ನೇ ಚಾಮರಾಜ, ೬ನೇ ಚಾಮರಾಜ, ೧ನೇ ಕೃಷ್ಣರಾಜ ಮತ್ತು ೨ನೇ ಕೃಷ್ಣರಾಜರು ಅಸಮರ್ಥರಾಗಿದ್ದರು. ದಳವಾಯಿಯಾದ ನಂಜರಾಜಯ್ಯನ ಕಾಲದಲ್ಲಿ ಹೈದರಾಲಿ ಏಳಿಗೆಗೆ ಬಂದನು. ಇವನ ನಂತರ ಟಿಪ್ಪು ಸುಲ್ತಾನ ಆಳ್ವಿಕೆ ನಡೆಸಿ ಮೈಸೂರು ಒಡೆಯರ ಚರಿತ್ರೆಯಲ್ಲಿ ಒಂದು ರೀತಿಯ ಡಿಸ್‌ಕೋರ್ಸ್‌ಗೆ ಒಳಗಾದನು. ಟಿಪ್ಪು ಸುಲ್ತಾನನಿಂದ ಪಡೆದ ಒಡೆಯರ ಪ್ರದೇಶವನ್ನು ಪುನಃ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಬ್ರಿಟಿಷರು ನೀಡಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲಾವಧಿಯಲ್ಲಿ ದಿವಾನ್ ಪೂರ್ಣಯ್ಯ ಅವರು ಮೈಸೂರು ಸಂಸ್ಥಾನದ ಆಡಳಿತವನ್ನು ಪ್ರಗತಿ ಪಥದಲ್ಲಿ ಮುಂದುವರಿಸಿದರು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಡೆದ ನಗರದಂಗೆಯಿಂದ ಒಡೆಯರು ಪುನಃ ಅಧಿಕಾರ ಕಳೆದುಕೊಂಡರು. ವಿಲಿಯಂ ಬೆಂಟಿಂಕ್‌ನು ಈ ಆಡಳಿತವನ್ನು ಕಮೀಷನರುಗಳ ಆಳ್ವಿಕೆಗೆ ಒಳಪಡಿಸಿದನು. ಮೈಸೂರು ಒಡೆಯರ ಚರಿತ್ರೆಯಲ್ಲಿ ಮಾರ್ಕ್ ಕಬ್ಬನ್ ಮತ್ತು ಲೂಯಿ ಬೆಂಥಾಮ್ ಬೌರಿಂಗ್ ಎಂಬ ಕಮೀಷನರರು ಪ್ರಮುಖರಾದವರು. ಏಕೆಂದರೆ ಮೈಸೂರಿನ ಅಭಿವೃದ್ಧಿ ಕಾರ್ಯಗಳನ್ನು ಹೆಚ್ಚಿನ ಮಟ್ಟದಲ್ಲಿ ಕಾರ್ಯಗತಗೊಳಿಸಿದರು. ಆನಂತರ ಒಡೆಯರ ಅಧಿಕಾರವನ್ನು ಹತ್ತನೇ ಚಾಮರಾಜ ಒಡೆಯರಿಗೆ ಹಸ್ತಾಂತರಿಸಿದರು. ದಿವಾನರಾದ ಸಿ.ರಂಗಾಚಾರ್ಲು, ಕೆ.ಶೇಷಾದ್ರಿ ಅಯ್ಯರ್ ಅವರುಗಳು

ಆಡಳಿತವನ್ನು ನಡೆಸಿದರು. ನಾಲ್ವಡಿ ಕೃಷ್ಣರಾಜ ಒಡೆಯರು ಆಡಳಿತದ ಸೂತ್ರ ಹಿಡಿದಾಗ ದಿವಾನರಾಗಿ ಪಿ.ಎನ್.ಕೃಷ್ಣಮೂರ್ತಿ, ವಿ.ಪಿ.ಮಾಧವರಾವ್, ಟಿ.ಆನಂದರಾವ್, ಸರ್ ಎಂ. ವಿಶ್ವೇಶ್ವರಯ್ಯ, ಕಾಂತರಾಜ ಅರಸ್, ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್, ಆಲ್ಬಿಯನ್ ಬ್ಯಾನರ್ಜಿ ಆಡಳಿತಕ್ಕೆ ಕೈ ಜೋಡಿಸಿ ಮೈಸೂರನ್ನು ಪ್ರಗತಿಯತ್ತ ಕೊಂಡೊಯ್ದುದರು ಎಂಬುದನ್ನು ತಿಳಿಯಬಹುದು.

ನಾಲ್ವಡಿ ಕೃಷ್ಣರಾಜ ಒಡೆಯರು ಅವರ ಆಳ್ವಿಕೆಯ ಕಾಲವು ಮೈಸೂರು ಸಂಸ್ಥಾನವನ್ನು ಭರತಖಂಡದಲ್ಲಿಯೇ "ಮಾದರಿ ಸಂಸ್ಥಾನ" ಎಂದು ಗುರುತಿಸುವಂತೆ ಮಾಡಿದ ಕಾರ್ಯಗಳು ಮುಖ್ಯ.[೪೫] ರಾಷ್ಟ್ರೀಯ ಚಳವಳಿಯು ತೀವ್ರಗೊಂಡು ಭಾರತವು ಸ್ವಾತಂತ್ರ್ಯವನ್ನು ಪಡೆಯಿತು. ಪ್ರಾರಂಭದಲ್ಲಿ ಜಯಚಾಮರಾಜ ಒಡೆಯರು ಸಹಜವಾಗಿ ಬಂದಿದ್ದ ಅಧಿಕಾರದ ವ್ಯಾಪ್ತಿಯಲ್ಲಿ ಸ್ವಾತಂತ್ರ್ಯವನ್ನು ಇಚ್ಛಿಸದೇ ತನ್ನ ಅಧಿಕಾರದ ಆಸೆಗೆ ಅಣಿಯಾದರು. ಅನಂತರ ಜಯಚಾಮ ರಾಜೇಂದ್ರ ಒಡೆಯರು ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಮೈಸೂರು ಚಲೋ ಚಳವಳಿಯಿಂದ ಮೈಸೂರು ಒಡೆಯರ ಅಧಿಕಾರವನ್ನು ಪ್ರಜಾಪ್ರಭುತ್ವದ ಅಡಿಯಲ್ಲಿ ವಿಲೀನ ಗೊಳಿಸಿದರು. ಹೀಗೆ ಆಳ್ವಿಕೆ ಮಾಡಿದ ಒಡೆಯರು ಮೈಸೂರು ಸಂಸ್ಥಾನವನ್ನು ಭರತಖಂಡದಲ್ಲಿ ಕೀರ್ತಿ, ಪ್ರತಿಷ್ಠೆಗಳು ಬೆಳೆಯುವಂತೆ ಮಾಡಿದರು. ತಮ್ಮ ಸಂಸ್ಥಾನದ ಗಡಿಯ ಎಲ್ಲೆಯನ್ನು ವಿಸ್ತರಿಸಿ, ಕರ್ನಾಟಕ ಸಂಸ್ಕೃತಿ, ಸಾಹಿತ್ಯಗಳ ಆಶ್ರಯದಾತರಾಗಿ, ಪ್ರಜಾಹಿತವನ್ನು ಕಾಪಾಡುವ ಧ್ಯೇಯ ಹೊಂದಿರುವ ಒಡೆಯರು ಮಾಡಿದ ಸಾಧನೆಗಳು ಅಪಾರ. ಈ ಎಲ್ಲಾ ಸಾಧನೆಗಳನ್ನು ತಿಳಿಸಲು ಅನೇಕ ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳೊಂದಿಗೆ ದೇಶಿ ಮತ್ತು ವಿದೇಶಿ ಬರಹಗಾರರ ಕೃತಿಗಳು ಹೊರಬಂದಿವೆ. ಇವುಗಳ ವ್ಯವಸ್ಥಿತ ಅಧ್ಯಯನ, ಕಡೆಗಣಿಸಿರುವ ವಿಚಾರ ಗಳನ್ನು ಕುರಿತು ಮರುಪರಿಶೀಲನೆ ಮಾಡಿ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಉದ್ದೇಶಗಳು

ವಿಜಯನಗರ ಸಾಮ್ರಾಜ್ಯದ ನಂತರ ಹೆಚ್ಚು ಸಂಶೋಧನೆಗಳಿಗೆ ಒಳಪಟ್ಟ ಸಂಸ್ಥಾನ ಎಂದರೆ ಮೈಸೂರು ಒಡೆಯರ ಸಂಸ್ಥಾನ. ಮೊದಲಿನಿಂದಲೂ ರಾಜಕೀಯ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕವಾಗಿ ಮುಂದುವರಿದ ಸಂಸ್ಥಾನವಾಗಿದೆ. ಇದಕ್ಕೆ ಪೂರಕವಾಗಿ ರಾಜಕೀಯ ಸ್ಥಾನಪಲ್ಲಟಗಳೂ ಆಗಿವೆ. ಈ ಕಾಲಮಾನದಲ್ಲಿ ಸಂಶೋಧನೆಗೆ ಒಳಪಟ್ಟ ಅನೇಕ ಕೃತಿಗಳು ಹೊರಬಂದಿವೆ. ಈ ಕೃತಿಗಳಲ್ಲಿ ದೇಶಿ ಮತ್ತು ವಿದೇಶಿ ಬರಹಗಾರರ ಕೃತಿಗಳು ವಿಶಿಷ್ಟವಾಗಿವೆ. ಒಂದು ದೃಷ್ಟಿಯಲ್ಲಿ ಈ ಅಧ್ಯಯನಗಳು ಪ್ರಸ್ತುತವಾಗಿ ಮುಖಾಮುಖಿಯಾಗಿವೆ.

ಇಪ್ಪತ್ತೊಂದನೇ ಶತಮಾನದಲ್ಲಿ ಕರ್ನಾಟಕ ರಾಜ್ಯ, ರಾಷ್ಟ್ರಮಟ್ಟದಲ್ಲಿ ಅಭಿವೃದ್ಧಿಯತ್ತ ಮುಖ ಮಾಡುತ್ತಿರುವುದು ತಿಳಿದಿರುವುದೇ ಆಗಿದೆ. ಆದರೆ ರಾಜಕೀಯ, ಆರ್ಥಿಕ, ಸಾಮಾಜಿಕ ಪ್ರಗತಿಪರ ಕೆಲಸಗಳನ್ನು ಹತ್ತೊಂಬತ್ತನೇ ಮತ್ತು ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲೇ ಮೈಸೂರು ಸಂಸ್ಥಾನ ಸಾಧನೆಯತ್ತ ಕೊಂಡೊಯ್ದಿರುವುದು ಚರ್ಚೆಗೆ ಪ್ರಮುಖವಾಗಿದೆ. ಸ್ವಾತಂತ್ರ್ಯ ಬಂದ

ನಂತರ ಭಾರತದಲ್ಲಿ ಪ್ರಜಾಪ್ರಭುತ್ವ ಜಾರಿಗೊಂಡರೂ ಈ ಪ್ರಜಾಪ್ರಭುತ್ವಕ್ಕೆ ಮುನ್ನುಡಿ ಬರೆದವರು ಆಧುನಿಕ ಮೈಸೂರಿನ ಸಂಸ್ಥಾನಿಕರು ಎಂಬುದು ಚರಿತ್ರೆಯಲ್ಲಿ ದಾಖಲಾಗಿದೆ. ಬಹುಮುಖ್ಯವಾಗಿ ಆಧುನಿಕ ಮೈಸೂರಿನ ಚರಿತ್ರೆಯಲ್ಲಿ ಕೃಷಿ, ನೀರಾವರಿ, ಶಿಕ್ಷಣ, ಮಹಿಳೆಯರ ಪ್ರಗತಿ, ದೀನ-ದಲಿತರ ಪ್ರಗತಿ, ಅರಣ್ಯ ಸಂರಕ್ಷಣೆ, ಸಣ್ಣ ಮತ್ತು ಬೃಹತ್ ಕೈಗಾರಿಕೆಗಳ ಅಭಿವೃದ್ಧಿ ಇತ್ಯಾದಿ, ಇತ್ಯಾದಿ ಅಭಿವೃದ್ಧಿ ಕೆಲಸಗಳ ಪ್ರಗತಿ ಕುರಿತು ಅನೇಕ ಪ್ರಾಥಮಿಕ ಹಾಗೂ ದ್ವಿತೀಯ ಆಕರಗಳು ಲಭ್ಯವಿದೆ. ಈ ಎಲ್ಲದರ ಕುರಿತು ರಚನೆಗೊಂಡ ಪ್ರಾಥಮಿಕ ಹಾಗೂ ಆನುಷಂಗಿಕ ಆಕರಗಳ ಸಮಗ್ರ ಅಧ್ಯಯನದ ಜೊತೆಗೆ ಸಮಕಾಲೀನ ಚರಿತ್ರೆಯನ್ನು ಮುಖಾಮುಖಿಯನ್ನಾಗಿಸುವುದೇ ಈ ಅಧ್ಯಯನದ ಮುಖ್ಯ ಉದ್ದೇಶ.

ಮೈಸೂರು ಒಡೆಯರ ಚರಿತ್ರೆಗೂ ಸಂಬಂಧಿಸಿದಂತೆ ಪೌರಸ್ತ್ಯವಾದ, ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಮಾದರಿಯ ಅಧ್ಯಯನಗಳು ನಡೆದಿದ್ದು, ಈ ಹಿನ್ನೆಲೆಯಲ್ಲಿ ಅನೇಕ ಕೃತಿಗಳು ಹೊರಬಂದಿವೆ. ಆದರೆ ಇವುಗಳಲ್ಲಿ ಬಹುತೇಕ ಕೃತಿಗಳು ಚರಿತ್ರೆಯ ಶಿಸ್ತು ಅಪೇಕ್ಷಿಸುವ ಕ್ರಮದಿಂದ ಸೃಷ್ಟಿಯಾದ ಕೃತಿಗಳಲ್ಲ. ಹಾಗೆ ನೋಡಿದರೆ ಹೊಸ ಚೌಕಟ್ಟಿನಲ್ಲಿ ಕಟ್ಟಿಕೊಡುವ ಕೃತಿಗಳು ಬೆರಳೆಣಿಕೆಯಷ್ಟೇ ಎಂದೇ ಹೇಳಬೇಕು. ಇದು ಇತ್ತೀಚೆಗೆ ಅನ್ವಯಿಸುತ್ತದೆ. ಅಂದರೆ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಹೊಸ ಚೌಕಟ್ಟಿನಲ್ಲಿ ಹೊರಬರುತ್ತಿರುವ ಕೃತಿಗಳು ಕಡಿಮೆಯಾಗುತ್ತಿವೆ. ಈ ಮಾದರಿಯಲ್ಲಿ ಅಧ್ಯಯನಗಳು ಪ್ರಬಂಧದಲ್ಲಿ ಮುಂದುವರಿಯುತ್ತವೆ.

ಆರಂಭದಲ್ಲಿ ಕೇವಲ ಚರಿತ್ರೆಯ ದಾಖಲೆಗಳನ್ನು ಕಲೆ ಹಾಕಿ ಅವುಗಳಿಗೆ ಬೌದ್ಧಿಕ ಶಿಸ್ತಿನ ರೂಪ ಕೊಡುವ ಪ್ರಯತ್ನಗಳು ನಡೆದವು. ಅಂದರೆ ಕೇವಲ ಸಮೀಕ್ಷೆಯ ವರದಿ ರೂಪವಾಗಿತ್ತು. ಭಾರತಕ್ಕೆ ವಸಾಹತುಶಾಹಿ ಕಾಲಿರಿಸಿದ ನಂತರ ಅದರ ಸಾಂಸ್ಕೃತಿಕ ಮತ್ತು ಬೌದ್ಧಿಕ ಯಾಜಮಾನ್ಯತೆಯನ್ನು ಐರೋಪ್ಯರು ಪ್ರಶ್ನಿಸಿದರು. ಇದರ ಪರಿಣಾಮವಾಗಿ ಪೌರಸ್ತ್ಯ ಚಿಂತನೆಯ ಮಾದರಿ ಹುಟ್ಟಿಕೊಂಡಿತು. ಈ ಹಂತದಿಂದ ಭಾಷೆ ಮತ್ತು ಗ್ರಂಥಗಳ ಅಧ್ಯಯನದ ಪ್ರಯತ್ನಗಳು ಹೆಚ್ಚಾಗತೊಡಗಿದವು. ಹೀಗೆ ನಡೆದ ಸಂಶೋಧನಾತ್ಮಕ ಪ್ರಯತ್ನಗಳೇ ಮೈಸೂರು ಸಂಸ್ಥಾನದ ಚರಿತ್ರೆಯನ್ನು ಬರೆಯುವುದಕ್ಕೂ ಪ್ರೇರಣೆಯಾಗಿತ್ತು ಎಂಬುದು ಮುಖ್ಯವಾಗಿ ಗಮನಿಸುವ ಸಂಗತಿ. ಹೀಗೆ ಮುಂದಿನ ಹಂತದಲ್ಲಿ ಮೈಸೂರು ಒಡೆಯರ ಚರಿತ್ರೆ ಲೇಖನದ ಪರಂಪರೆಯನ್ನು ನೇರವಾಗಿ ಗ್ರಹಿಸಲು ಪ್ರಯತ್ನಿಸಲಾಯಿತು ಎಂಬುದನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ಈ ಅಧ್ಯಯನವು ಮೈಸೂರು ಒಡೆಯರ ಚರಿತ್ರೆ ಬರವಣಿಗೆಗಳಲ್ಲಿ ವಿದ್ವಾಂಸರು ಬರೆದಿರುವ ಕೃತಿಗಳನ್ನು ಸೂಕ್ಷ್ಮವಾಗಿ ಅವಲೋಕಿಸುವುದಾಗಿದೆ. ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ಮೊದಲ ಬರವಣಿಗೆಗಳಲ್ಲಿ ತಾಂತ್ರಿಕ ಪರಿಣತಿ ಇಲ್ಲದಿದ್ದರೂ ದೊರೆತ ಮಾಹಿತಿಗಳನ್ನು ಒಂದೆಡೆ ಕಲೆ ಹಾಕಿ ಚರಿತ್ರೆಯನ್ನು ರೂಪಿಸಿಕೊಡುವ ಪರಿಣತಿಯನ್ನು ಗಮನಿಸಬಹುದು. ಅನಂತರ ಇದಕ್ಕೆ ಸಂಬಂಧಿಸಿದ ಅನೇಕ ವಿವರಗಳನ್ನು ತಾಂತ್ರಿಕವಾಗಿ ಪರಿಣತಿಯನ್ನು ಪಡೆದ ಚರಿತ್ರೆಕಾರರು ಬರೆದಿರುವ ವಿಚಾರಗಳನ್ನು ಕ್ರೋಡೀಕರಿಸಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ರಚನೆಯಾದ ಕೃತಿಗಳು ಬಹುತೇಕವಾಗಿ ಸಾಂಪ್ರದಾಯಿಕ ರಚನಾ ಮಾದರಿಯಲ್ಲಿರುವುದು ಕಂಡುಬರುತ್ತದೆ. ರಚನೆಯಾದ ಕೃತಿಗಳು ಯಾವ ವಿಚಾರಗಳನ್ನು ಹೇಳಲು ಪ್ರಯತ್ನಿಸಿವೆ ಮತ್ತು ಆ ಕೃತಿಗಳು ಯಾವ ವಿಚಾರಗಳನ್ನು ಕೈಬಿಟ್ಟಿವೆ ಎನ್ನುವುದನ್ನು ಗಮನಿಸಿ, ಕಡೆಗಣಿಸಲ್ಪಟ್ಟ ವಿಚಾರಗಳನ್ನು ಮೇಲೆತ್ತಿಕೊಂಡು ಚರಿತ್ರೆಯನ್ನು ಪುನಾರಚನೆ ಮಾಡುವುದರ ಮೂಲಕ ಚರಿತ್ರೆಯಲ್ಲಿ ಮರೆಯಾದ ಸತ್ಯಾಸತ್ಯತೆಗಳನ್ನು ಪತ್ತೆ ಹಚ್ಚುವ ಉದ್ದೇಶವನ್ನು ಪ್ರಸ್ತುತ ಅಧ್ಯಯನವು ಹೊಂದಿದೆ. ಗಾಯತ್ರಿ ಸ್ಪೀವಾಕ್ ಅವರು ಹೇಳಿರುವಂತೆ ಒಂದು ಕೃತಿಯನ್ನು ತನ್ನ ಸಂಗಾತಿಯಂತೆ ನೋಡಬೇಕೇ ಹೊರತು ರೋಗದಂತೆ ಅಲ್ಲ. ಕೃತಿಯೊಳಗೆ ಇರುವ ಬಿರುಕನ್ನು ತೋರಿಸಿಕೊಡುವುದರ ಜೊತೆಜೊತೆಗೆ ಒಬ್ಬ ಚಿಕಿತ್ಸಕರಂತೆಯೂ ವರ್ತಿಸಬೇಕು ಎನ್ನುತ್ತಾರೆ. ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಚರಿತ್ರೆಯ ಪಂಥಗಳಿಂದ ಪೌರಸ್ತ್ಯ (ಓರಿಯಂಟಲಿಸಂ), ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥಗಳ ನೆಲೆಯಲ್ಲಿ ಅಧ್ಯಯನ ನಡೆದು ಕೃತಿಗಳು ಹೊರಬಂದಿವೆ. ಹಾಗೆಯೇ ಸ್ಥಳೀಯತೆಗೆ ಮತ್ತು ಮೌಖಿಕ ಚರಿತ್ರೆಗೆ ಒತ್ತು ನೀಡಿರುವ ಕೃತಿಗಳು ಹೊರಬಂದಿವೆಯೇ ಎಂಬುದನ್ನು ಗಮನಿಸಿ ಈ ಎಲ್ಲಾ ಪಂಥಗಳ ನೆಲೆಯಲ್ಲಿ ಬಂದ ಕೃತಿಗಳನ್ನು ಚರ್ಚಿಸುವ ಉದ್ದೇಶವನ್ನು ಹೊಂದಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಪ್ರಸ್ತುತವಾಗಿ ಹೊಸ ಐಡೆಂಟಿಟಿಗಳನ್ನು ತಿಳಿಸುವ ಕೃತಿಗಳು ಹೊರಬರುತ್ತಿವೆಯೇ ಎಂಬ ಹಿನ್ನೆಲೆಯಲ್ಲಿ ಬಹುಮುಖ್ಯವಾಗಿ ಪ್ರಾದೇಶಿಕತೆ, ಭಾಷೆ, ಸಮುದಾಯದ ಐಡೆಂಟಿಟಿಗಳ ಕೃತಿಗಳು ಪ್ರಮುಖವಾಗಿ ಕಂಡುಬರುತ್ತವೆ. ಆದರೆ ಭಾಷೆ, ಸಮುದಾಯದ ಐಡೆಂಟಿಟಿಯ ಕೃತಿಗಳು ಎನ್ನಬಹುದು. ಸಮಾಜದ ಆಶೋತ್ತರಗಳಿಗೆ ಸ್ಪಂದಿಸಿರುವ ರೀತಿಯಲ್ಲಿ ಕೃತಿಗಳ ಅಧ್ಯಯನವನ್ನು ಕೈಗೊಳ್ಳುವ ರೀತಿಯು ಮುಖ್ಯ. ಈ ಐಡೆಂಟಿಟಿಗಳ ಕೃತಿಗಳನ್ನು ಶೋಧಿಸುವುದು ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಮೈಸೂರು ಒಡೆಯರ ಚರಿತ್ರೆಯಲ್ಲಿ ರಚನೆ(Construct) ಆಗಿರುವ ಕೃತಿಗಳಲ್ಲಿ ಯಾವ ವಿಚಾರಗಳು ಮರೆಯಾಗಿವೆ, ಅದರ ಗ್ರಹಿಕೆ, ತಾತ್ವಿಕತೆ ದೃಷ್ಟಿಕೋನ ಮುಂತಾದ ಸೈದ್ಧಾಂತಿಕತೆಯ ಸಿದ್ಧಾಂತಗಳಿಗನುಗುಣವಾಗಿ ಸಮಕಾಲೀನವಾಗಿ ನಿರಚನೆ(De-Construction) ಮತ್ತು ಪುನಾರಚನೆ (Re-Construction) ಮಾಡುವ ಉದ್ದೇಶವನ್ನು ಈ ಅಧ್ಯಯನವು ಮೂಲಧಾತುವನ್ನಾಗಿ ಹೊಂದಿದೆ.

ಪ್ರಸ್ತುತ ಅಧ್ಯಯನವು ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ವಸಾಹತು, ವಸಾಹತೋತ್ತರ ಅಥವಾ ಆಧುನಿಕ ಕಾಲಘಟ್ಟಗಳಲ್ಲಿ ರಚನೆಯಾದ ಕೃತಿಗಳ ವಿಶ್ಲೇಷಣೆಯನ್ನು ಮಾಡುವುದಾಗಿದೆ. ಅವು ದೇಶಿ ಅಥವಾ ವಿದೇಶಿ ಸಂಶೋಧಕರ ಬರವಣಿಗೆಯ ಕೃತಿಗಳಾಗಿರ ಬಹುದು. ಈ ಕೃತಿಗಳ ವಿಶ್ಲೇಷಣೆ ಮಾಡುತ್ತಾ ಇದನ್ನು ಅಧ್ಯಯನ ಮಾಡಿದ ಬರಹಗಾರರ ಸನ್ನಿವೇಶ, ಅವರ ದೃಷ್ಟಿಕೋನ ಏನಿತ್ತು? ಜನರ ಮೇಲಿನ ಪ್ರಭಾವ ಮತ್ತು ಮುಂದಿನ ಪೀಳಿಗೆಯ ಮೇಲೆ ಬೀರಿದ ಪರಿಣಾಮಗಳು ಇವೇ ಮೊದಲಾದ ಅಂಶಗಳನ್ನು ಚರ್ಚಿಸುವುದಾಗಿದೆ.

ಈ ಅಧ್ಯಯನವು ಕಾಲಘಟ್ಟಗಳಿಗನುಗುಣವಾಗಿ ದೇಶಿ ಮತ್ತು ವಿದೇಶಿ ಬರವಣಿಗೆಯು ವಿಮರ್ಶೆ ಮತ್ತು ವಿಶ್ಲೇಷಣೆಯಲ್ಲಿ ಚರಿತ್ರೆರಚನಾಶಾಸ್ತ್ರಕ್ಕೆ ಅನುಗುಣವಾಗಿ ಚರ್ಚೆಗೆ ಒಳಪಡುತ್ತದೆ.

ಆಸ್ಥಾನ ಕವಿ, ಅಧಿಕಾರಿಗಳು, ಕಾರ್ಯದರ್ಶಿಗಳು ಮತ್ತು ರಾಜರಿಂದ ಉಪಯೋಗ ಪಡೆದ ಪುರೋಹಿತರು ರಚಿಸಿದ್ದು ದೇಶಿ ಬರವಣಿಗೆ ಎನಿಸಿಕೊಳ್ಳುತ್ತದೆ. ಈ ಬರವಣಿಗೆ ಪ್ರಭುತ್ವಕ್ಕೆ ಪೂರಕವಾಗಿ ಬಂದಿರುತ್ತದೆ. ಅವುಗಳಿಂದಲೂ ಅನೇಕ ಐತಿಹಾಸಿಕ ವಿಷಯಗಳನ್ನು ಹುಡುಕಿ ತೆಗೆಯಬಹುದಾಗಿದೆ. ಹಾಗೆಯೇ ದೇಶೀಯ ಬರಹಗಾರರು ಕಣ್ಣಾರೆ ಕಂಡ ವಿಷಯಗಳನ್ನು ನೇರವಾಗಿ ಬರೆಯುತ್ತಾರೆ ಎಂಬುದು ಒಂದು ಕಡೆ ಆದರೆ, ಅದೇ ರೀತಿಯಲ್ಲಿ ಒಡೆಯರ ಆಶ್ರಯದ ದೃಷ್ಟಿಯಲ್ಲಿ ಅನೇಕ ಸತ್ಯಾಸತ್ಯತೆಗಳನ್ನು ಮರೆಮಾಚುತ್ತಾರೆ ಎಂಬುದು ಮತ್ತೊಂದು ವಾದವೂ ಇದೆ. ಈ ಹಿನ್ನೆಲೆಯಲ್ಲಿ ಅನೇಕ ದೇಶಿ ಬರಹಕಾರರು ಕೆಲವೊಂದು ವಿಚಾರಗಳನ್ನು ಚರ್ಚಿಸಿ, ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಆದರೆ ವಿದೇಶಿ ಬರಹಗಾರರು ಕೂಡ ತಮ್ಮ ಅಧಿಕಾರ ಧೋರಣೆ ನೀತಿಗೆ ಅನುಕೂಲವಾಗುವಂತೆ ಕೃತಿಗಳನ್ನು ಹೇಗೆ ಬರವಣಿಗೆ ಮಾಡಿದರು ಎಂಬುದು ಮುಖ್ಯ. ಇದರಿಂದ ಮೈಸೂರು ಒಡೆಯರ ಚರಿತ್ರೆಯನ್ನು ರಚಿಸಲು ಸಾಮ್ರಾಜ್ಯಶಾಹಿಗಳ ಅಜೆಂಡಾ(ಧೋರಣೆ) ಏನಿತ್ತು ಎಂಬುದನ್ನು ತಿಳಿಯಬಹುದು. ಇದಕ್ಕೆ ಯಾವ ರೀತಿಯ ಸ್ಥಳೀಯ ಜ್ಞಾನವನ್ನು ಬಳಸಿಕೊಂಡರು, ಅಲ್ಲದೇ ಸ್ಥಳೀಯ ಮೇಲ್ವರ್ಗ ತಮ್ಮ ಸ್ವಾರ್ಥಕ್ಕಾಗಿ ಸಾಮ್ರಾಜ್ಯಶಾಹಿಗಳ ಅಜೆಂಡಾಗಳನ್ನು ಒಪ್ಪಿಕೊಂಡರು ಎಂಬುದು ಪ್ರಮುಖವಾದುದು. ಈ ಸಾಮ್ರಾಜ್ಯಶಾಹಿ ಬರಹಗಾರರು ಪ್ರಭುತ್ವದೊಳಗೆ ಅಧಿಕಾರಕ್ಕಾಗಿ ನಡೆಯುವ ಆಂತರಿಕ ಕಲಹಗಳನ್ನು ಚರ್ಚಿಸಿದ್ದಾರೆ. ಆದರೆ ಪ್ರಭುತ್ವದೊಳಗೆ ಇರುವ ದೇಶಿ ಬರಹಗಾರರು ಈ ಆಂತರಿಕ ಕಲಹಗಳನ್ನು ಚರ್ಚಿಸಿಲ್ಲ. ಈ ಅಂಶಗಳ ಸತ್ಯಾಸತ್ಯತೆಗಳನ್ನು ಚರ್ಚಿಸಲಾಗಿದೆ.

ವಸಾಹತುಶಾಹಿ ಕಾಲಘಟ್ಟದಲ್ಲಿ ಸಾಮ್ರಾಜ್ಯಶಾಹಿಗಳು(ಬ್ರಿಟಿಷರು) ತಮ್ಮ ಒಡೆಯ ಆಳುವ ನೀತಿಗೆ ಅನುಗುಣವಾಗಿ ಮೈಸೂರು ಒಡೆಯರ ಕೃತಿಗಳನ್ನು ರಚಿಸಿ, ಆಡಳಿತದ ಅನುಕೂಲ ಪಡೆದರು. ಆದರೆ ಇಂದಿಗೂ ಆ ಕೃತಿಗಳ ಧೋರಣೆಗಳು ಸಂಶೋಧನೆಗಳಿಗೆ ಒಳಗಾಗುತ್ತಲೇ ಇವೆ. ಇದರಿಂದ ಈ ಕೃತಿಗಳ ವಾಸ್ತವ ಅಂಶಗಳನ್ನು ತಿಳಿಯಲು ಇತ್ತ ಕಡೆ ಗಮನ ಹರಿಸಬೇಕಾಗುವ ಉದ್ದೇಶವನ್ನು ಹೊಂದಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಹೊರಬಂದಿರುವ ಕೃತಿಗಳು ಮಾಹಿತಿ ಪ್ರಧಾನ, ವಿವರಣಾತ್ಮಕ ಮತ್ತು ವಿಶ್ಲೇಷಣಾತ್ಮಕವಾಗಿಯೇ ಎಂಬುದನ್ನು ಚರ್ಚಿಸುವ ಅಗತ್ಯವಿದೆ. ಅಲ್ಲದೇ ಬರಹಗಾರರು ತಮ್ಮ ಕೃತಿಗಳ ರಚನೆಯಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಎಷ್ಟರ ಮಟ್ಟಿಗೆ ಅಧ್ಯಯನಕ್ಕೆ ಅಳವಡಿಸಿಕೊಂಡಿದ್ದಾರೆ ಎಂಬುದನ್ನು ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ.

ಪ್ರಾರಂಭದಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಒಡೆಯರ ಮನೆತನದ ರಾಜಕೀಯ ವಿಚಾರಗಳಿಗಷ್ಟೇ ಸೀಮಿತಗೊಳಿಸಿದ್ದು, ಅನಂತರದ ಕಾಲಘಟ್ಟದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳ ಹಿನ್ನೆಲೆಯಲ್ಲಿ ನೋಡಲಾಯಿತು. ಈ ಆರ್ಥಿಕ ಮತ್ತು ಸಾಮಾಜಿಕ ಸಂಬಂಧಗಳ ವಿಚಾರಗಳಲ್ಲಿ  ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥಗಳ ಅಧ್ಯಯನಕ್ಕೆ ಇಂದು ಹೆಚ್ಚಿನ ಗಮನ ಕೊಡುವ ಸಂದರ್ಭ ಬಂದಿದೆ. ಇಂದಿನ ಅಧ್ಯಯನದ ಸಂದರ್ಭದಲ್ಲಿ ಭಿನ್ನ ನೆಲೆಯನ್ನು

ಗುರುತಿಸುವುದು ಅಗತ್ಯವಾಗಿದೆ. ಪ್ರಭುತ್ವಮುಖಿಯಾಗಿದ್ದ ಚರಿತ್ರೆಯನ್ನು ಜನಮುಖಿಯನ್ನಾಗಿಸುವ ಪ್ರಯತ್ನಗಳು ಈ ಕೃತಿಗಳಲ್ಲಿ ನಡೆದಿವೆಯೇ ಎಂಬುದನ್ನು ಪತ್ತೆ ಹಚ್ಚುವುದು ಅಧ್ಯಯನದ ಪ್ರಮುಖ ಉದ್ದೇಶ ಗಳಲ್ಲೊಂದಾಗಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತಹ ಕೃತಿಗಳ ಬರವಣಿಗೆಯಲ್ಲಿ ಮುಖ್ಯವಾಗಿ ಇರುವ ಗ್ರಹಿಕೆ, ತಾತ್ವಿಕತೆ, ದೃಷ್ಟಿಕೋನ ಮುಂತಾದ ಸೈದ್ಧಾಂತಿಕತೆಯ ಪ್ರಶ್ನೆಗಳನ್ನು ಅಧ್ಯಯನ ಶಿಸ್ತಿಗೆ ಒಳಪಡಿಸುವುದರ ಮೂಲಕ ಕೃತಿಗಳಲ್ಲಿ ಮೂಡಿಬಂದಿರುವ 'ಐಡಿಯಾಲಜಿ' ಏನು? ಆ ಕೃತಿಗೂ ಬೇರೆ ಕೃತಿಗಳಿಗೂ ಯಾವ ರೀತಿಯ 'ಐಡಿಯಾಲಜಿಕಲ್ ಡಿಫ್ರೆನ್ಸಸ್' ಇದೆ ಎಂಬುದನ್ನು ಗುರುತಿಸುವುದು. ಕೃತಿ ರಚನಾಕಾರರಿಗೂ ಒಂದೊಂದು ಸಿದ್ಧಾಂತವಿದ್ದು, ಅವರ ಆ ಕೃತಿಯ 'ಕೇಂದ್ರಿಯ ವಿಷಯ' ಅಥವಾ 'ಸೆಂಟ್ರಲ್ ಆರ್ಗ್ಯುಮೆಂಟ್'(Centural argument)ಏನು ಎಂಬುದನ್ನು ಚರ್ಚಿಸುವುದಾಗಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಬರಹಗಾರರು ರಚಿಸಿದ ಕೃತಿಗಳನ್ನು ಸಾಂದರ್ಭಿಕವಾಗಿ ಹಿಂತೆಗೆದುಕೊಂಡು, ಹೊಸದಾಗಿ ದೊರೆತ ಆಕರಗಳೊಂದಿಗೆ ಸ್ವಯಂ ಮೌಲ್ಯಮಾಪನ ಮತ್ತು ಮರುಚಿಂತನೆಗೆ ಒಳಪಡಿಸಿದ್ದಾರೆಯೇ ಎಂಬುದನ್ನು ಪತ್ತೇ ಹಚ್ಚುವುದಾಗಿದೆ. ಕೃತಿಯ ವಿಮರ್ಶಕರು ಕೃತಿಯೊಳಗಿನ ಸಾಧಕ–ಬಾಧಕತೆಯನ್ನು ತೋರಿಸಿಕೊಡುವುದರ ಜೊತೆ ಜೊತೆಗೆ ಒಬ್ಬ ಸಮಾಜಮುಖಿ ಚಿಂತಕರಂತೆ ವಿಮರ್ಶೆ ಮಾಡಿದ್ದಾರೆಯೆ ಎಂಬುದನ್ನು ಗುರುತಿಸು ವುದಾಗಿದೆ.

ಮೈಸೂರು ಒಡೆಯರ ಚರಿತ್ರೆಯ ಲೇಖನಪರಂಪರೆಗೆ ಸಂಬಂಧಿಸಿದಂತೆ ವಿವಿಧ ವಿಶ್ವವಿದ್ಯಾಲಯಗಳಲ್ಲಿನ ಎಂ.ಫಿಲ್. ಮತ್ತು ಪಿಎಚ್.ಡಿ. ಮಹಾಪ್ರಬಂಧಗಳ ಅಧ್ಯಯನ ನಡೆದಿರು ವುದಾಗಿದೆ. ಯಾವ ಪಂಥಗಳ ನೆಲೆಯಲ್ಲಿ ಸಂಶೋಧನೆ ಕೈಗೊಳ್ಳಲಾಗಿದೆ. ಕಾಲಘಟ್ಟ, ಅವರು ಬಳಸಿರುವ ಭಾಷೆ, ವಿಷಯವು ವಿವರಣಾತ್ಮಕ ಅಥವಾ ವಿಶ್ಲೇಷಣಾತ್ಮಕವಾದುದೇ ಎಂಬುದನ್ನು ಗುರುತಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಜೊತೆಗೆ ಅವರು ಬಳಸಿರುವ ಆಕರಗಳು, ಅವರ ಗ್ರಹಿಕೆ, ತಾತ್ವಿಕತೆ, ದೃಷ್ಟಿಕೋನ, ಕೇಂದ್ರೀಯ ವಿಷಯಗಳ ಬಗ್ಗೆ ಅಧ್ಯಯನ ಕೈಗೊಳ್ಳುವ ಉದ್ದೇಶವನ್ನು ಹೊಂದಿದೆ.

## ಅಧ್ಯಯನದ ವಿಧಿ–ವಿಧಾನಗಳು ಮತ್ತು ವ್ಯಾಪ್ತಿ

ಪ್ರಸ್ತುತ ಅಧ್ಯಯನವು ಮೈಸೂರು ಒಡೆಯರ ಚರಿತ್ರೆ ಬರವಣಿಗೆಗೆ ಸಂಬಂಧಿಸಿದಂತೆ ಇಂದಿನ ಚರಿತ್ರೆ 'ಪ್ರಸ್ತುತದಿಂದ ಪ್ರಾಚೀನ ನೋಡು' ಎನ್ನುವ ಹಾಗೆ ರೂಪುಗೊಳ್ಳಬೇಕಾಗಿದೆ. ಮೈಸೂರು ಒಡೆಯರ ಚರಿತ್ರೆಯ ಕೃತಿಗಳನ್ನು ಪೌರಸ್ತ್ಯ(ಓರಿಯಂಟಲಿಸಂ), ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥಗಳ ನೆಲೆಯಲ್ಲಿ ಅಧ್ಯಯನ ಕೈಗೊಳ್ಳಲಾಗಿದೆ. ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ ಮತ್ತು ಅಲಕ್ಷಿತ ಸಮುದಾಯಗಳ ಚರಿತ್ರೆ ಬರವಣಿಗೆಯ ಆಲೋಚನೆಗಳು ಸೇರಿಕೊಂಡಿವೆ. ನವಚಿಂತನೆಗಳಿಂದ ರಾಚನಿಕೋತ್ತರವಾದ, ಆಧುನಿಕೋತ್ತರವಾದ, ವಸಾಹತೋತ್ತರವಾದ, ಅಧಿಚರಿತ್ರೆ, ನವಚಾರಿತ್ರಿಕವಾದಗಳು ಕೂಡ ಚರ್ಚೆಗೆ

ಒಳಗಾಗಿವೆ. ಅದೇ ರೀತಿ ಈ ಅಧ್ಯಯನವು ವಸಾಹತು, ವಸಾಹತೋತ್ತರ ಅಥವಾ ಆಧುನಿಕ ಕಾಲಘಟ್ಟಗಳಲ್ಲಿ ರಚನೆಯಾದ ಕೃತಿಗಳ ವಿಶ್ಲೇಷಣೆಯ ಮಾದರಿಯಲ್ಲಿ ಮುಂದುವರಿಯುವುದು. ಇದು ಈ ಕಾಲಘಟ್ಟಗಳಲ್ಲಿನ ದೇಶಿ ಮತ್ತು ವಿದೇಶಿ ಬರವಣಿಗೆಯನ್ನು ಒಳಗೊಂಡಿರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ಹಾಗೂ ಆನುಷಂಗಿಕ ಆಕರಸಾಮಗ್ರಿಗಳನ್ನು ಬಳಸಿಕೊಳ್ಳಲಾಗಿದೆ. ಈ ಹಿನ್ನೆಲೆಯಲ್ಲಿ ಹೆಚ್ಚು ಕೃತಿಗಳ ಮೂಲಕ ನೋಡುವುದಾದರೂ ಇದಕ್ಕೆ ಪೂರಕವಾಗಿ ಗ್ಯಾಸೆಟಿಯರ್‌ಗಳು, ಆಡಳಿತಾತ್ಮಕ ದಾಖಲೆಗಳು, ಕಡತಗಳು, ವರದಿಗಳು, ವಿಶ್ವಕೋಶಗಳು, ಪತ್ರಿಕೆಗಳು, ಲೇಖನಗಳು, ಪ್ರಕಟಿತ ಮತ್ತು ಅಪ್ರಕಟಿತ ಎಂ.ಫಿಲ್. ನಿಬಂಧಗಳು ಮತ್ತು ಪಿಎಚ್.ಡಿ. ಮಹಾಪ್ರಬಂಧಗಳು ಮುಂತಾದ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಒಂದು ವಿಧದಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಕುರಿತು ಬಂದ ಲೇಖನಪರಂಪರೆಯನ್ನು ಗುರುತಿಸುತ್ತಾ ಸಂಶೋಧನೆಯ ಕಾಲಾನುಕ್ರಮಣಿಕೆಯಲ್ಲಿ ಆಯ್ದ ಆಕರಗಳನ್ನು ಮಾತ್ರ ಬಳಸಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನವು ಮೈಸೂರು ಒಡೆಯರ ಚರಿತ್ರೆಯನ್ನು ಕುರಿತು ಬಂದಿರುವ ಕೃತಿಗಳನ್ನು ಕಾಲಘಟ್ಟಗಳಿಗೆ ಅನುಗುಣವಾಗಿ ಅಧ್ಯಯನ ಉದ್ದೇಶವನ್ನು ಹೊಂದಿದೆ. ಇದರಲ್ಲಿ ಅನೇಕ ಅಂಶಗಳು ಸ್ಪಷ್ಟವಾಗುತ್ತಾ ಹೋಗುತ್ತವೆ. ಮೊದಲನೆಯದಾಗಿ ವಿಜಯನಗರದ ಪತನದ ನಂತರ ಇಲ್ಲಿನ ಪುರೋಹಿತವರ್ಗ ಅಥವಾ ಅಕ್ಷರ ಕಲಿತ ವರ್ಗ ಉತ್ತರ ಭಾಗದ ಕಡೆಗೆ ಪಲಾಯನ ಮಾಡಲಿಲ್ಲ. ಬಿಜಾಪುರದ ಸುಲ್ತಾನರ ಆಳ್ವಿಕೆ, ಪಾಳೆಯಗಾರರ ಆಳ್ವಿಕೆ ಇದ್ದಿತು. ಆದರೆ ಇಲ್ಲಿನ ಪುರೋಹಿತವರ್ಗದವರು ಮೈಸೂರು ಒಡೆಯರ ಅಧಿಕಾರದಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದರು. ಈ ಹಿನ್ನೆಲೆಯಲ್ಲಿ ರಾಜಪ್ರಭುತ್ವಕೇಂದ್ರಿತ ಕೃತಿಗಳ ರಚನೆ ಮಾಡಿದರು. ಎರಡನೆಯದಾಗಿ 'ಓರಿಯಂಟಲ್' ಚಿಂತನೆಯ ಕ್ರಮದ ಭಾಗವಾಗಿ ಭಾಷೆ, ಸಾಹಿತ್ಯ, ಚರಿತ್ರೆ, ಸಾಂಸ್ಕೃತಿಕ ಆಸಕ್ತಿಗಳು ಬೆಳೆದವು. ಇಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರ ಮುಖ್ಯ. ಇವುಗಳ ಭಾಗವಾಗಿ ಮೈಸೂರಿನ ಚರಿತ್ರೆಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಕೆಲಸಗಳು ಪ್ರಾರಂಭವಾಗಿ ಒಂದು ರೀತಿಯಲ್ಲಿ ಮೈಸೂರಿನ ಚರಿತ್ರೆಗೆ ಅಸ್ತಿಭಾರವನ್ನು ಹಾಕುವುದರ ಮೂಲಕ ಅನೇಕ ಕೃತಿಗಳು ಬರಲು ಸಾಧ್ಯವಾಯಿತು. ಬ್ರಿಟಿಷರು ವಸಾಹತುಶಾಹಿ ನೀತಿಗೆ ಅನುಗುಣವಾಗಿ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಕಥನಗಳನ್ನು ಅರಿಯುವುದು ಅವರಿಗೆ ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ೧೮ನೇ ಶತಮಾನದ ಈ ರಾಜಕೀಯ ಜರೂರುಗಳು ಚರಿತ್ರೆಲೇಖನ ಪರಂಪರೆಗೆ ಅಸ್ತಿಭಾರವನ್ನು ಹಾಕಿದವು.

ಮೂರನೆಯ ಹಂತದಲ್ಲಿ ಬ್ರಿಟಿಷ್ ವಸಾಹತುಶಾಹಿ ಹಾಗೂ ಒಡೆಯರ ಭಾಗವಾದ ಅಧಿಕಾರಿಗಳು ಅಧಿಕಾರ ಕೇಂದ್ರಕ್ಕೆ ಇದ್ದ ತಮ್ಮ ನಿಷ್ಠೆಯ ಸಂಕೇತವಾಗಿ ಮೈಸೂರಿನ ಚರಿತ್ರೆಯನ್ನು ಬರೆದರು. ಮೇಲ್ವರ್ಗದ ಹಿತಾಸಕ್ತಿಗೆ ಅನುಗುಣವಾಗಿ ಕೃತಿಗಳನ್ನು ರಚಿಸಿದರು. ಆದರೆ ಅವರು ಸಂಘರ್ಷದ ಸಂದರ್ಭಗಳನ್ನು ಈ ಕೃತಿಗಳಲ್ಲಿ ಬರೆಯಲಿಲ್ಲ. ಕರ್ನಾಟಕ ಏಕೀಕರಣದ ನಂತರ ಮೈಸೂರು ಒಡೆಯರ ಚರಿತ್ರೆಯು ಕರ್ನಾಟಕ ಚರಿತ್ರೆಯ ಭಾಗವಾಗಿ ಕೃತಿಗಳ ರಚನೆ ಪ್ರಾರಂಭವಾಯಿತು.

ನಾಲ್ಕನೆಯದಾಗಿ ೧೯೭೦ರ ದಶಕದಲ್ಲಿ ಪ್ರಕಟಗೊಂಡ ಸಂಶೋಧನಾ ಕೃತಿಗಳು ಸಾಮಾಜಿಕ–ರಾಜಕೀಯ ಸಂಘರ್ಷಗಳನ್ನು ತೀವ್ರವಾಗಿ ಚರ್ಚಿಸುತ್ತವೆ. ಮೈಸೂರು ಒಡೆಯರ ಚರಿತ್ರೆಯ

ಕೃತಿಗಳಲ್ಲಿ ೧೯೩೦, ೧೯೪೦ ಮತ್ತು ೧೯೭೦ರ ದಶಕ ಪ್ರಮುಖವಾದುದು. ೧೯೩೦ ಮತ್ತು ೧೯೪೦ರಲ್ಲಿ ಬಂದ ಕೃತಿಗಳು ಡಿಸ್ಕ್ರಿಪ್ಟೀವ್(ವಿವರಣಾತ್ಮಕ) ಮಾದರಿಯ ಕೃತಿಗಳು. ಈ ಕಾಲಘಟ್ಟದಲ್ಲಿ ಬರಹಗಾರರು ತಮ್ಮ ಕೃತಿಗಳನ್ನು ಮಾಹಿತಿಯ ಮೂಲಕ ಕಟ್ಟಿ ಕೊಡುತ್ತಾರೆ. ವಿಶ್ಲೇಷಣೆಯ ವ್ಯಾಪ್ತಿಗೆ ಹೋಗುವುದಿಲ್ಲ. ಆದರೆ ಮೈಸೂರು ಚರಿತ್ರೆಯನ್ನು ಕಟ್ಟುವಿಕೆಯ ಕೃತಿಗಳಲ್ಲಿನ ೧೯೭೦ರ ದಶಕದಲ್ಲಿ ಒಂದು ಬದಲಾವಣೆ ಕಾಣುತ್ತೇವೆ. ಭಾರತದ ೧೯೭೦ರ ದಶಕವು ಅನೇಕ ಚಳವಳಿಗಳನ್ನು ಕಂಡ ಕಾಲ. ರೈತ ಚಳವಳಿಗಳು, ಸಮಾಜವಾದಿ ಚಳವಳಿ, ಜೆ.ಪಿ.ಚಳವಳಿ, ಭೂಸುಧಾರಣೆಗಳು, ಜಾತಿವಿನಾಶ ಸಮಾವೇಶಗಳು ಚರಿತ್ರೆಯ ಸಂವಾದಕ್ಕೆ ರೂಪಿಸಿಕೊಂಡ ಕಾಲ. ಹೀಗಾಗಿ ೧೯೭೦ ಮತ್ತು ೧೯೮೦ರ ದಶಕದಲ್ಲಿ ಬಂದ ಕೃತಿಗಳು ಸಾಮಾಜಿಕ ಚರಿತ್ರೆಗೆ ವಿಶೇಷವಾಗಿ ಮುಖಾಮುಖಿಯಾಗಿ ಭಿನ್ನ ಧಾರೆಗಳಲ್ಲಿ ಒಟ್ಟು ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿ, ಬಹುಮಟ್ಟಿಗೆ ಸಫಲರಾಗಿದ್ದಾರೆ. ಒಟ್ಟಾರೆ ಕೆಲವೇ ಕೆಲವು ವಿದೇಶಿ ಮತ್ತು ದೇಶಿ ಸಂಶೋಧಕರು ಮೈಸೂರು ಚರಿತ್ರೆಗೆ ಹೊಸ ಭಾಷೆಯ ಆಯಾಮವನ್ನು ತಂದುಕೊಟ್ಟು, ವಿಶ್ಲೇಷಣಾತ್ಮಕ ಆಲೋಚನೆಗಳನ್ನು ಕಟ್ಟಿಕೊಟ್ಟರು. ಆದರೂ ಕೂಡ ಸಮಕಾಲೀನ ಸಂಶೋಧನೆಗಳಲ್ಲೂ ವಿಶ್ಲೇಷಣಾತ್ಮಕ ಕ್ರಮಗಳಿಂದ ನೋಡುವ ಪ್ರಯತ್ನಗಳಿಲ್ಲ. ಕೆಲವು ವಿವರಣೆಗಳ ಮಾದರಿಯನ್ನೇ ಅನುಸರಿಸಿವೆ. ೧೯೯೦, ೨೦೦೦, ೨೦೧೦ರ ದಶಕದಲ್ಲಿ ಸಬಾಲ್ಟರ್ನ್ ನೆಲೆಯ ಸಮುದಾಯ ಕೇಂದ್ರಿತ ಕೃತಿಗಳು ಹೊರಬರುತ್ತಿವೆ. ಜನಮುಖಿ ಅಧ್ಯಯನ ಪ್ರಸ್ತುತವಾಗಿದೆ. ವಿಶ್ವವಿದ್ಯಾಲಯಗಳಲ್ಲಿನ ಮಹಾಪ್ರಬಂಧಗಳು ಕೂಡ ವಿವರಣೆಗಳ ಮಾದರಿಯನ್ನು ಅನುಸರಿಸಿವೆಯೇ ಹೊರತು ವಿಶ್ಲೇಷಣಾತ್ಮಕ ಆಲೋಚನೆ ಇರುವುದಿಲ್ಲ. ಅಲ್ಲೊಂದು ಇಲ್ಲೊಂದರಂತೆ ವಿಶ್ಲೇಷಣಾತ್ಮಕ ಮಹಾಪ್ರಬಂಧಗಳು ಹೊರಬರುತ್ತಿವೆ. ಹೀಗೆ ಮೈಸೂರು ಒಡೆಯರ ಚರಿತ್ರೆಲೇಖನ ಪರಂಪರೆಯು ಬೇರೆಬೇರೆ ಕಾಲಘಟ್ಟಗಳಲ್ಲಿ ಬೆಳೆದುಬಂದಿದೆ ಎಂಬುದನ್ನು ಇಲ್ಲಿ ಅಧ್ಯಯನ ಮಾಡಲಾಗುತ್ತದೆ.

## ಅಧ್ಯಯನದ ಸ್ವರೂಪ

ಮೈಸೂರು ಒಡೆಯರ ಚರಿತ್ರೆ ಬೇರೆಬೇರೆ ಸಂದರ್ಭದಲ್ಲಿ ವಿವಿಧ ಕೃತಿಕಾರರಿಂದ ವಿಭಿನ್ನ ರೀತಿಯಲ್ಲಿ ಕೃತಿಗಳು ರಚನೆ(Construction)ಯಾಗಿವೆ. ಪ್ರಭುತ್ವಪೂರಕವಾಗಿ ಬಂದ ಚರಿತ್ರೆಯು ಕಾಲಘಟ್ಟಗಳಿಗುಣವಾಗಿ ಬದಲಾಗುತ್ತಾ ಬರುತ್ತಿದೆ. ಜನಮುಖಿ ಅಧ್ಯಯನದ ಕೃತಿಗಳು ಕೂಡ ಹೆಚ್ಚಾಗಿ ಬರಬೇಕಾಗಿದೆ. ಮೈಸೂರು ಒಡೆಯರ ಚರಿತ್ರೆಯಲ್ಲಿ ಹೊರಬಂದಿರುವ ಕೃತಿಗಳನ್ನು ಲೇಖನಪರಂಪರೆಯೊಳಗೆ ಸಂದರ್ಭಕ್ಕೆ ಹೊಂದಿಕೊಳ್ಳುವಂತೆ(Contexlization) ಮಾಡುವ ಪ್ರಯತ್ನ ಮಾಡಲಾಗಿದೆ. ಪ್ರಸ್ತುತ ಸಂದರ್ಭದ ಅಧ್ಯಯನಕಾರರಿಗೆ ನಮ್ಮ ಅರಿವಿನ ವಿಸ್ತಾರವನ್ನು ಈ ಕೃತಿಗಳು ಹೇಗೆ ಮಾಡುತ್ತವೆ ಎನ್ನುವುದೂ ಮುಖ್ಯ. ಈ ಹಿನ್ನೆಲೆಯಲ್ಲಿ ಹೊಸ ಆಲೋಚನೆಗಳು ನಿರಚನೆ(De-Construction) ಮತ್ತು ಪುನಾರಚನೆ(Re-Construction) ದಾರಿ ಮಾಡಿಕೊಟ್ಟಿವೆ. ಪುನರ್‌ವ್ಯಾಖ್ಯಾನಕ್ಕೆ ಒಳಗಾಗುತ್ತಲೇ ಇರುತ್ತವೆ. ಯಾವ ವ್ಯಾಖ್ಯಾನವೂ ಅಂತಿಮವಲ್ಲ. ಅದು ಇನ್ನೊಂದು ವ್ಯಾಖ್ಯಾನಕ್ಕೆ ಎಡೆ ಮಾಡಿಕೊಟ್ಟು ಹಾಗೆಯೇ ಮುಂದುವರಿದುಕೊಂಡು ಹೋಗುತ್ತದೆ.

ಮೊದಲನೆಯ ಅಧ್ಯಾಯದಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶಗಳು, ವಿಧಿ-ವಿಧಾನಗಳು ಮತ್ತು ವ್ಯಾಪ್ತಿಯನ್ನು ತಿಳಿಸುವುದರ ಮೂಲಕ ಅಧ್ಯಯನದ ಸ್ವರೂಪವನ್ನು ಚರ್ಚಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳು ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರದ ಪರಿಧಿಯೊಳಗೆ ಸೇರಿಕೊಂಡು ಅವು ನೀಡಿರುವ ಸೈದ್ಧಾಂತಿಕ ದೃಷ್ಟಿಕೋನ ಏನು ಎಂಬುದನ್ನು ವಿಶ್ಲೇಷಿಸಲಾಗುತ್ತದೆ. ಹಾಗೆಯೇ ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಕೈಫಿಯತ್ತುಗಳ ಕೃತಿಗಳ ಜೊತೆಗೆ ಸಾಹಿತ್ಯ ಕೃತಿಗಳನ್ನು ವಿಶ್ಲೇಷಣೆಗೆ ತರಲಾಗಿದೆ. ಇವುಗಳಿಂದ ವಾಸ್ತವಿಕತೆಯ ವಿಚಾರಗಳನ್ನು ಸಮಕಾಲೀನವಾಗಿ ಚರ್ಚಿಸುವುದಾಗಿದೆ.

ಮೂರನೆಯ ಅಧ್ಯಾಯದಲ್ಲಿ ಪತ್ರಾಗಾರ ಇಲಾಖೆಯ ದಾಖಲೆಗಳ ವಿಶ್ಲೇಷಣೆ ಮಾಡಲಾಗಿದೆ. ಮೈಸೂರು ಒಡೆಯರ ಚರಿತ್ರೆಯಲ್ಲಿ ಒಡೆಯರು ನಡೆಸಿದ ಆಡಳಿತ, ಅಭಿವೃದ್ಧಿ ಕಾರ್ಯಗಳು ಮೊದಲಾದವುಗಳನ್ನು ಕಡತ ಮತ್ತು ದಾಖಲೆಗಳಲ್ಲಿ ದಾಖಲಾದ ವಿಷಯಗಳನ್ನು ಚರ್ಚಿಸಲಾಗಿದೆ. ಹಾಗೆಯೇ ಚಾರಿತ್ರಿಕತೆಯನ್ನು ಗುರುತಿಸುವ ಪತ್ರಿಕೆಗಳ ಪಾತ್ರವನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಗ್ಯಾಸೆಟಿಯರುಗಳ ವಿಶ್ಲೇಷಣೆ ಮಾಡಲಾಗಿದೆ. ವಸಾಹತುಶಾಹಿ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿ ಗ್ಯಾಸೆಟಿಯರ್‌ಗಳು ಯಾವ ಹಿನ್ನೆಲೆಯಲ್ಲಿ ರಚನೆ ಆದವು, ಅವುಗಳ ರಚನೆಯ ಸಂದರ್ಭದಲ್ಲಿನ ಮೂಲಧೋರಣೆಗಳು ಈಡೇರಿವೆಯೇ? ಸಮಕಾಲೀನ ಚರಿತ್ರೆ ರಚನೆಗೆ ಇವು ಯಾವ ರೀತಿ ಬಳಕೆಯಾಗುತ್ತಿವೆ? ಅಧಿಕಾರ ಮತ್ತು ಜ್ಞಾನದ ಪರಿಧಿಯೊಳಗೆ ಹೇಗೆ ಕೆಲಸ ಮಾಡುತ್ತಿವೆ ಹಾಗೂ ಮೈಸೂರು ಒಡೆಯರ ಚರಿತ್ರೆಯಲ್ಲಿ ಅವು ನಿರ್ವಹಿಸಿದ ಪಾತ್ರವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಲಾಗಿದೆ.

ಐದನೆಯ ಅಧ್ಯಾಯದಲ್ಲಿ ಮಾಹಿತಿಪ್ರಧಾನ ಮತ್ತು ವಿಶ್ಲೇಷಣಾತ್ಮಕ ಕೃತಿಗಳನ್ನು ವಿಶ್ಲೇಷಣೆ ಮಾಡಲಾಗಿದೆ. ವಸಾಹತು ಕಾಲಘಟ್ಟದಲ್ಲಿ ಸಾಮ್ರಾಜ್ಯಶಾಹಿಗಳು ತಮ್ಮ ಆಡಳಿತದ ಅನುಕೂಲಕ್ಕಾಗಿ ಅಲ್ಲಿನ ಭೂಪ್ರದೇಶಗಳ ಮಾಹಿತಿ ಪಡೆದು, ದಾಖಲಿಸುತ್ತಾ ಹೋದರು. ಇವು ಮಾಹಿತಿ ನೀಡುತ್ತವೆಯೇ ಹೊರತು ವಿಶ್ಲೇಷಿಸುವುದಿಲ್ಲ. ರಾಜಕೀಯ ವಿಚಾರಗಳಿಗಷ್ಟೇ ಸೀಮಿತವಾಗಿರುವ ಅಂಶಗಳನ್ನು ಈ ಕೃತಿಗಳು ತಿಳಿಸುತ್ತವೆ. ಆಧುನಿಕ ಕಾಲಘಟ್ಟದ ಕೃತಿಗಳು ವಿಶ್ಲೇಷಣೆಗೆ ಒಳಗಾಗಿ ಸಾಮಾಜಿಕ ಮತ್ತು ಆರ್ಥಿಕ ಅಂಶಗಳತ್ತ ಗಮನ ಹರಿಸಿವೆ. ಈ ಕೃತಿಗಳು ಯಾವ ವಿಷಯಗಳತ್ತ ಗಮನ ಹರಿಸಿಲ್ಲ ಎಂಬುದನ್ನು ವಿಶ್ಲೇಷಿಸುವುದಾಗಿದೆ.

ಆರನೆಯ ಅಧ್ಯಾಯದಲ್ಲಿ ಸಂಶೋಧನಾತ್ಮಕ ಮಹಾಪ್ರಬಂಧಗಳ ವಿಶ್ಲೇಷಣೆ ಮಾಡುವುದಾಗಿದೆ. ಇದರಲ್ಲಿ ಎಂ.ಫಿಲ್. ಮತ್ತು ಪಿಎಚ್.ಡಿ. ಸಂಶೋಧನಾತ್ಮಕ ಮಹಾಪ್ರಬಂಧಗಳ ಸಂಶೋಧನಾ ವಿಧಾನ, ಬಳಸಿರುವ ಆಕರಗಳು, ವಿಷಯದ ಚರ್ಚೆ, ವಿಶ್ಲೇಷಣೆಯನ್ನು ಗುರುತಿಸುವುದು.

ಏಳನೆಯ ಅಧ್ಯಾಯ 'ಉಪಸಂಹಾರ'ದಲ್ಲಿ ಒಟ್ಟು ಅಧ್ಯಯನಕ್ಕೆ ಸಂಬಂಧಿಸಿದಂತೆ ಎದುರಾದ ದ್ವಂದ್ವಗಳನ್ನು ಹೇಳುತ್ತಲೇ ಇನ್ನೂ ಆಗಬೇಕಾದ ಸಂಶೋಧನೆಗಳೇನು ಎಂಬುದನ್ನು ತಿಳಿಸುತ್ತಾ, ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹೇಳುವ ಪ್ರಯತ್ನ ಮಾಡಲಾಗಿದೆ.

## ಚರಿತ್ರೆಲೇಖನ ಪರಂಪರೆಯ ವಿವಿಧ ಆಯಾಮಗಳು

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಅನೇಕ ಕೃತಿಗಳು ಹೊರಬಂದಿವೆ. ಈ ಕೃತಿಗಳ ಮೂಲಕ ಮೈಸೂರು ಒಡೆಯರ ಚರಿತ್ರೆಲೇಖನ ಪರಂಪರೆಯನ್ನು ಗುರುತಿಸುತ್ತಾ, ಸಂಶೋಧನೆಯಲ್ಲಿ ಆಯ್ದ ಆಕರ ಕೃತಿಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ವಿಜಯನಗರ ಪತನದ ನಂತರ ಇಲ್ಲಿನ ಪುರೋಹಿತ ವರ್ಗ ಅಥವಾ ಅಕ್ಷರ ಕಲಿತ ವರ್ಗ ಉತ್ತರ ಭಾಗದ ಕಡೆಗೆ ಪಲಾಯನ ಮಾಡಲಿಲ್ಲ. ಈ ಭಾಗದಲ್ಲಿ ಬಿಜಾಪುರದ ಸುಲ್ತಾನರ ಆಳ್ವಿಕೆ, ಪಾಳೆಯಗಾರರ ಅಳ್ವಿಕೆ ಇದ್ದಿತು. ಆದರೆ ಇಲ್ಲಿನ ಪುರೋಹಿತ ವರ್ಗ ಮೈಸೂರು ಒಡೆಯರ ಅಧಿಕಾರದಲ್ಲಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನ ಮಾಡಿದರು. ಈ ಹಿನ್ನೆಲೆಯಲ್ಲಿ ರಾಜಪ್ರಭುತ್ವಕೇಂದ್ರಿತ ಕೃತಿಗಳ ರಚನೆ ಮಾಡಿದರು. ಚಿದಾನಂದ ಕವಿಯ **ಮುನಿವಂಶಾಭ್ಯುದಯ,** ಗೋವಿಂದ ವೈದ್ಯನ **ಕಂಠೀರವ ನರಸರಾಜ ವಿಜಯ,** ತಿರುಮಲಾರ್ಯನ **ಚಿಕ್ಕದೇವರಾಜ ವಂಶಾವಳಿ,** ಸೋಸಲೆ ಅಯ್ಯಶಾಸ್ತ್ರಿ ಅವರ **ಮಹಿಶೂರ ಮಹಾರಾಜ ಚರಿತ್ರಂ** ಇವೇ ಮೊದಲಾದ ಕೃತಿಗಳು ರಾಜಪ್ರಭುತ್ವಕೇಂದ್ರಿತ ಕೃತಿಗಳಾಗಿವೆ.

ಅನಂತರ ಮೈಸೂರಿನ ಚರಿತ್ರೆ ಲೇಖನ ಪರಂಪರೆಯ ಆರಂಭಿಕ ಗೆರೆಗಳನ್ನು ಮೂಡಿಸಿದವರು ಕಾಲಿನ್ ಮೆಕೆಂಝಿ ಮತ್ತು ಬುಕಾನನ್. ಮೊದಲು ಕಾಲಿನ್ ಮೆಕೆಂಝಿ ಮತ್ತು ಬುಕಾನನ್ ಸರ್ವೇ ಕಾರ್ಯಗಳನ್ನು ಕೈಗೊಂಡು ಜನಮುಖಿ ಅಧ್ಯಯನಗಳ ಮೂಲಕ ಶಾಸನಗಳು, ಹಸ್ತಪ್ರತಿ, ಪುರಾತತ್ವ ವಸ್ತುಗಳು, ಸ್ಥಳಪುರಾಣ, ಐತಿಹ್ಯಗಳನ್ನು ಕಲೆ ಹಾಕಿ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿದರು. ಬುಕಾನನ್ ಸಮೀಕ್ಷೆ ವರದಿಯನ್ನು **ಎ ಜರ್ನಿ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್** ಎಂಬ ಮೂರು ಸಂಪುಟಗಳಲ್ಲಿ ವಿವರಿಸಿದ್ದಾನೆ. ಬ್ರಿಟಿಷ್ ಆಡಳಿತಗಾರ, ಚರಿತ್ರೆಕಾರನೂ ಆದ ಮಾರ್ಕ್ಸ್ ವಿಲ್ಕ್ಸ್‌ನು ಮೈಸೂರಿನ ಸರ್ವೇ ಕಾರ್ಯದಲ್ಲಿ ಮೆಕೆಂಝಿ ಸಂಗ್ರಹಿಸಿದ ಶಾಸನಗಳು, ಹಸ್ತಪ್ರತಿಗಳು ಮತ್ತು ದಾಖಲೆಗಳನ್ನು **ಮೆಕೆಂಝಿ ಸಂಗ್ರಹ** ಎನ್ನುವ ಪುಸ್ತಕ ರೂಪದಲ್ಲಿ ಸಂಗ್ರಹಿಸಿದನು. ಅವನ ಕೃತಿ **ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ** ಮೂರು ಸಂಪುಟಗಳಾಗಿ ಹೊರಬಂದಿವೆ. ವಿಲ್ಕ್ಸ್‌ನು ಟಿಪ್ಪು ಮತ್ತು ಹೈದರಾಲಿ ಬಗೆಗೆ ಆಕ್ರಮಣಕಾರರು ಎಂಬ ಆಲೋಚನೆಯಲ್ಲಿ ವಿವರಿಸಿದ್ದಾನೆ. ಅಧಿಕಾರಕ್ಕಾಗಿ ಅರಮನೆಯಲ್ಲಿ ನಡೆಯುತ್ತಿದ್ದ ಆಂತರಿಕ ಕಲಹಗಳನ್ನು ವಿವರಿಸಿದ್ದಾನೆ. ಬಿ.ಎಲ್.ರೈಸ್ ೧೨ ಸಂಪುಟಗಳ **ಎಪಿಗ್ರಾಫಿಯ ಕರ್ನಾಟಿಕ** ಎಂಬ ಶಾಸನಗಳ ಸಂಪಾದನೆಯನ್ನು ಪ್ರಕಟಿಸಿದರು. **ಮೈಸೂರು ಗ್ಯಾಸೆಟಿಯರ್**‌ನ ಎರಡು ಸಂಪುಟಗಳನ್ನು ಹೊರತಂದು ಒಡೆಯರ ರಾಜಕೀಯ ಚರಿತ್ರೆಯ ಗತಿಯನ್ನು ಗುರುತಿಸಿದರು. ಇವರೆಲ್ಲರೂ ವಸಾಹತುಶಾಹಿಗಳ ಆಡಳಿತದ ಅನುಕೂಲಕ್ಕಾಗಿ ಇಲ್ಲಿನ ಮಾಹಿತಿ ಒದಗಿಸಲು ಈ ಕೃತಿಗಳನ್ನು ರಚಿಸಿದ್ದು ಇವು ಮಾಹಿತಿಪ್ರಧಾನ ಕೃತಿಗಳಾಗಿವೆ.

ಮೈಸೂರು ಒಡೆಯರ ಸರ್ಕಾರದ ಅಧಿಕಾರಿಗಳು ಮತ್ತು ಚರಿತ್ರೆಕಾರರೂ ಆಗಿದ್ದ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ಮೈಸೂರು ಒಡೆಯರ ಚರಿತ್ರೆಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡವರು. ಸಿ.ಹಯವದನರಾವ್ ಅವರು ಐದು ಸಂಪುಟಗಳ **ಮೈಸೂರು**

**ಗ್ಯಾಸೆಟಿಯರ್**(೧೯೩೦) ಮತ್ತು ಮೂರು ಸಂಪುಟಗಳ **ಹಿಸ್ಟರಿ ಆಫ್ ಮೈಸೂರು**(೧೯೪೩-೪೬) ಎಂಬ ಗ್ರಂಥಗಳನ್ನು ಪ್ರಕಟಿಸಿದರು. ಈ ಗ್ಯಾಸೆಟಿಯರ್‌ಗಳಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಆಳ್ವಿಕೆ ಮಾಡಿದ ಸಾಮ್ರಾಜ್ಯಗಳು, ಆಡಳಿತ, ಆರ್ಥಿಕ ಅಭಿವೃದ್ಧಿ, ದಿವಾನರ ಆಡಳಿತದ ಪ್ರಗತಿ, ಬ್ರಿಟಿಷರ ಒಡೆದು ಆಳುವ ನೀತಿಗೆ ಅನುಗುಣವಾಗಿ ಹೈದರ್ ಮತ್ತು ಟಿಪ್ಪು ಅವರ ಮತಾಂಧರು, ಆಕ್ರಮಣಕಾರಿಗಳು ಎನ್ನುವ ಒಕ್ಕಣೆಯನ್ನು ತಿಳಿಸುತ್ತಾರೆ. ಎಲ್ಲಾ ಜಿಲ್ಲೆಗಳ ಮಾಹಿತಿಗಳು ಈ ಗ್ಯಾಸೆಟಿಯರ್‌ಗಳಲ್ಲಿ ತಿಳಿಯುತ್ತದೆ. **ಹಿಸ್ಟರಿ ಆಫ್ ಮೈಸೂರು** ಮೂರು ಸಂಪುಟಗಳಲ್ಲಿ ೧೩೯೯ರ ಮೈಸೂರು ಆಳ್ವಿಕೆಯಿಂದ ೧೭೯೯ರ ಟಿಪ್ಪು ಸುಲ್ತಾನನ ಆಳ್ವಿಕೆ, ಅನಂತರದ ಒಡೆಯರ ಆಳ್ವಿಕೆಯ ಅಂಶಗಳನ್ನು ಚರ್ಚಿಸುತ್ತಾರೆ. ಎಂ.ಶಾಮರಾವ್ ಅವರು **ಮಾಡರ್ನ್ ಮೈಸೂರು** ಎಂಬ ಎರಡು ಸಂಪುಟಗಳನ್ನು ೧೯೩೬ರಲ್ಲಿ ಹೊರತಂದರು. ಯದುರಾಯನು ಒಡೆಯರ ಸಂಸ್ಥಾನವನ್ನು ಸ್ಥಾಪಿಸಿದ್ದರಿಂದ ಹಿಡಿದು, ಹೈದರಾಲಿ ಮತ್ತು ಟಿಪ್ಪು ಇವರುಗಳ ಮೂಲಕ ಮುಸ್ಲಿಂ ರಾಜಕೀಯ ಪ್ರಭುತ್ವವು ಹೇಗೆ ಆವರಿಸಿತು ಎಂಬುದನ್ನು ವಿವರಿಸುತ್ತಾರೆ. ಅಲ್ಲದೆ ಎರಡನೇ ಸಂಪುಟದಲ್ಲಿ ೧೦ನೇ ಚಾಮರಾಜ ಒಡೆಯರು ಅಧಿಕಾರ ವಹಿಸಿಕೊಂಡಿದ್ದರಿಂದ ಹಿಡಿದು, ೧೯೩೫ರ ಕಾಯ್ದೆ ಅನುಷ್ಠಾನದವರೆಗೆ ವಿವರಣೆಯನ್ನು ನೀಡಿದ್ದಾರೆ. ಬಿ.ರಾಮಕೃಷ್ಣರಾವ್ ಅವರ **ಆ್ಯನ್ನಲ್ಸ್ ಆಫ್ ಮೈಸೂರು ರಾಯಲ್ ಫ್ಯಾಮಿಲಿ** ಎಂಬ ಎರಡು ಸಂಪುಟಗಳು ಒಡೆಯರ ಆಡಳಿತದ ವಿವರಗಳನ್ನು ತಿಳಿಸುತ್ತದೆ. ವಸಾಹತುಕಾಲದ ಚರಿತ್ರೆ ಕುರಿತಾದ ಕೃತಿಗಳಲ್ಲಿ ಕೆ.ಎನ್.ವೆಂಕಟಸುಬ್ಬಾಶಾಸ್ತ್ರಿ ಅವರು ೧೯೩೨ರಲ್ಲಿ ಪ್ರಕಟಿಸಿದ **ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರು ಅಂಡರ್ ಸರ್ ಮಾರ್ಕ್‌ಕಬ್ಬನ್** (೧೮೩೪-೧೮೬೧) ಪ್ರಮುಖವಾದುದು. ಇದು ಕಬ್ಬನ್‌ನ ಆಡಳಿತವನ್ನು ವಿವರಿಸುತ್ತಾ ಒಂದು ರೀತಿಯಲ್ಲಿ ವಿಲ್ಕ್ಸನ ಪ್ರಯತ್ನದ ಮುಂದುವರಿದ ಭಾಗವಾಗಿದೆ. ಈ ನಿಟ್ಟಿನಲ್ಲಿ ೧೯೪೭ರವರೆಗೂ ಬಂದಿರುವ ಕೃತಿಗಳು ಸಾಮ್ರಾಜ್ಯಶಾಹಿ ಮತ್ತು ಒಡೆಯರ ವಿವರಣಾತ್ಮಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡಿದವು.

೧೯೬೦ರ ನಂತರ ಕರ್ನಾಟಕ ಚರಿತ್ರೆಗೆ ಸಂಬಂಧಿಸಿ ಬಂದ ಗ್ರಂಥಗಳು ನೇರವಾಗಿ ಒಡೆಯರ ಚರಿತ್ರೆಗೆ ಅಥವಾ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿರದಿದ್ದರೂ, ಕರ್ನಾಟಕದ ಚರಿತ್ರೆಯ ಭಾಗವಾಗಿ ಮೈಸೂರನ್ನು ಕುರಿತು ಬರೆದಿದ್ದಾರೆ. ಆರ್.ಆರ್.ದಿವಾಕರ್ ಅವರು ಸಂಪಾದಿಸಿರುವ **ಕರ್ನಾಟಕ ಥ್ರೂ ದ ಏಜಸ್** ಕೃತಿ ೧೯೬೮ರ ವೇಳೆಗೆ ಇಂಗ್ಲಿಷ್‌ನಲ್ಲಿ ಪ್ರಕಟವಾಗಿ ಇದರ ಕನ್ನಡ ಆವೃತ್ತಿ ಎರಡು ಸಂಪುಟಗಳಲ್ಲಿ ೧೯೭೦ರಲ್ಲಿ ಪ್ರಕಟಗೊಂಡವು. ಹಾಗೆಯೇ ಎಂ.ವಿ.ಕೃಷ್ಣರಾವ್ ಮತ್ತು ಎಂ.ಕೇಶವಭಟ್ಟ ಅವರ **ಕರ್ನಾಟಕ ಇತಿಹಾಸ ದರ್ಶನ**, ಪಿ.ಬಿ.ದೇಸಾಯಿ, ಎಸ್.ಎಚ್.ರಿತ್ತಿ ಮತ್ತು ಬಿ.ಆರ್.ಗೋಪಾಲ್ ಅವರ **ಎ ಹಿಸ್ಟರಿ ಆಫ್ ಕರ್ನಾಟಕ**(೧೯೭೦), ಸೂರ್ಯನಾಥ ಕಾಮತ್ ಅವರ **ಎ ಕನ್‌ಸೈಸ್ ಹಿಸ್ಟರಿ ಆಫ್ ಕರ್ನಾಟಕ**(೧೯೮೦) ಮುಂತಾದವು. ಇವು ಸಾಂಪ್ರದಾಯಿಕ ದೃಷ್ಟಿಕೋನದಲ್ಲಿ ಮೈಸೂರಿನ ಚರಿತ್ರೆಯನ್ನು ಕಟ್ಟಿ ಕೊಡುತ್ತವೆ. ರಾಜಕೀಯ ಚರಿತ್ರೆಯು ಇಲ್ಲಿ ಅನಾವರಣಗೊಳ್ಳುತ್ತದೆ. ಸೂರ್ಯನಾಥ ಕಾಮತ್ ಅವರು ಸಂಪಾದಿಸಿರುವ **ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್** ಎರಡು ಸಂಪುಟಗಳಲ್ಲಿ ೧೯೮೨-೮೩ರಲ್ಲಿ ಪ್ರಕಟಗೊಂಡು, ಇದನ್ನೇ ಕನ್ನಡದಲ್ಲಿ ಮೂರು ಆವೃತ್ತಿಗಳಲ್ಲಿ ಪ್ರಕಟಿಸಲಾಯಿತು. ಇವು ಎಲ್ಲಾ ಅಂಶಗಳನ್ನೊಳಗೊಂಡ ಹಳೆಯ ಗ್ಯಾಸೆಟಿಯರ್‌ಗಳ ಮುಂದುವರಿದ ಭಾಗಗಳಾಗಿವೆ.

ಆಧುನಿಕ ಮೈಸೂರಿನ ಬಗೆಗೆ ಅನೇಕ ಕೃತಿಗಳು ಪ್ರಕಟವಾಗಿವೆ. ಜೇಮ್ಸ್ ಮೇನರ್‌ನ **ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು: ೧೯೧೭-೧೯೫೫**(೧೯೭೮) ಕೃತಿಯಲ್ಲಿ ಮೈಸೂರಿನ ಸಾಮಾಜಿಕ ಸಂರಚನೆಯ ರಾಜಕೀಯ ಆಂದೋಲನದ ಸಂವೇದನೆಗಳನ್ನು ನಿರ್ಧರಿಸಿದ ಅಂಶಗಳ ಬಗೆಗೆ ತಿಳಿಸುತ್ತದೆ. ಬಿ.ಹೆಟ್ನೆ ಅವರ **ದಿ ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೂಲ್ ಇನ್ ಮೈಸೂರ್** ೧೮೮೧-೧೯೪೭(೧೯೭೮) ಕೃತಿಯು ಈ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಾದ ಆರ್ಥಿಕ ಮತ್ತು ರಾಜಕೀಯ ಬದಲಾವಣೆಯ ಪ್ರಕ್ರಿಯೆಯನ್ನು ತಿಳಿಸುತ್ತದೆ. ಎಸ್.ಚಂದ್ರಶೇಖರ್ ಅವರ **ಡೈಮೆನ್ಷನ್ ಆಫ್ ಸೋಶಿಯಾ ಪೊಲಿಟಿಕಲ್ ಚೇಂಜ್ ಇನ್ ಮೈಸೂರು ೧೯೧೮-೪೦**(೧೯೮೫) ಕೃತಿಯು ಮೈಸೂರಿನ ಸಮಾಜದ ಸಂರಚನೆಯನ್ನು ಅಲ್ಲಿನ ಸಾಮಾಜಿಕ ರಾಜಕೀಯ ಸ್ಥಿತ್ಯಂತರಗಳ ಚರ್ಚೆಗೆ ಹಿನ್ನೆಲೆಯಾಗಿ ವಿಶ್ಲೇಷಿಸುತ್ತಾರೆ. ದಲಿತ ಸಮುದಾಯಗಳ **ಸಾಮಾಜಿಕ ಚಲನಶೀಲತೆಯ** ಬಗ್ಗೆ ಚರ್ಚಿಸುತ್ತಾರೆ. ಕೆ.ವೀರತಪ್ಪ ಅವರ **ರೀಡಿಂಗ್ ಇನ್ ಮಾಡರ್ನ್ ಹಿಸ್ಟರಿ ಆಫ್ ಮೈಸೂರು**(೧೯೮೫) ಎಂಬ ಕೃತಿಯು ೧೬ ಬಿಡಿ ಲೇಖನಗಳ ಸಂಗ್ರಹವಾಗಿದೆ. ವಸಾಹತುಶಾಹಿ ವ್ಯವಸ್ಥೆಯಲ್ಲಿ ಉಂಟಾದ ಅನೇಕ ಬದಲಾವಣೆಗಳನ್ನು ಚರ್ಚಿಸುತ್ತದೆ. ಪ್ರಜಾಪ್ರತಿನಿಧಿ ಸಭೆ, ಬ್ರಾಹ್ಮಣೇತರ ಚಳವಳಿ, ರಾಷ್ಟ್ರೀಯ ಹೋರಾಟ ಮೊದಲಾದ ವಿಚಾರಗಳ ಚರ್ಚೆಯನ್ನು ಅನಾವರಣಗೊಳಿಸುತ್ತದೆ. ಸೆಬಾಸ್ಟಿಯನ್ ಜೋಸೆಫ್ ಅವರು ಮೈಸೂರು ಸಂಸ್ಥಾನದಲ್ಲಿ ವಸಾಹತುಶಾಹಿಯ ಆಗಮನ, ಇಲ್ಲಿನ ಜನಸಮುದಾಯವಾದ ರೈತರು, ಅವರ ಬಂಡಾಯ, ತೆರಿಗೆ, ಮುಂತಾದ ಆರ್ಥಿಕ ವ್ಯವಸ್ಥೆಯ ಮೇಲೆ ಬೀರಿದ ಪ್ರಭಾವವನ್ನು ವಿಶ್ಲೇಷಿಸಿದ್ದಾರೆ. ಸಾಕಿ ಅವರು **ಮೇಕಿಂಗ್ ಹಿಸ್ಟರಿ** ಕೃತಿಯಲ್ಲಿ ಪ್ರಮುಖವಾಗಿ ಟಿಪ್ಪು ಅವನತಿಯ ನಂತರ ಒಡೆಯರು ಕಂಪನಿಯ ಹಿಡಿತದಲ್ಲಿದ್ದು, ಮೈಸೂರು ಸಂಸ್ಥಾನ ವಸಾಹತುಶಾಹಿ ನೆಲೆಯಲ್ಲಿ ಯಾವ ರೀತಿಯಲ್ಲಿ ರೂಪಾಂತರ ಹೊಂದಿತು ಎಂಬುದನ್ನು ಚರ್ಚಿಸಿದ್ದಾರೆ. ಜನರ ಹೋರಾಟಗಳನ್ನು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ. ಸಿದ್ಧಲಿಂಗಸ್ವಾಮಿ ಅವರ **ಅಗ್ರೇರಿಯನ್ ರಿಲೇಶನ್ಸ್ ಇನ್ ಮೈಸೂರು ೧೮೮೯-೧೮೮೧**(೧೯೯೭) ಎಂಬ ಕೃತಿ ಮೈಸೂರಿನ ಕೃಷಿ, ರೈತ, ಭೂಸಂಬಂಧಗಳ ಬಗೆಗೆ ಮಾರ್ಕ್ಸ್‌ವಾದಿ ನೆಲೆಯಲ್ಲಿ ಚರ್ಚಿಸುತ್ತದೆ. ಜಾನಕಿ ನಾಯರ್ ಅವರು **ಮೈನರ್ ಆ್ಯಂಡ್ ಮಿಲ್‌ಹಾಂಡ್ಸ್, ವರ್ಕ್, ಕಲ್ಚರ್ ಆ್ಯಂಡ್ ಪಾಲಿಟಿಕ್ಸ್ ಇನ್ ಪ್ರಿನ್‌ಸ್ಲಿ ಮೈಸೂರು**(೧೯೯೮) ಎಂಬ ಕೃತಿಯಲ್ಲಿ ಚಿನ್ನದ ಅದಿರಿನ ನಿಕ್ಷೇಪ ಇರುವ ಕೆ.ಜಿ.ಎಫ್.ಬ್ರಿಟಿಷರ ಅಧೀನಕ್ಕೆ ಒಳಪಟ್ಟಿದ್ದು, ಕಾರ್ಮಿಕ ವರ್ಗದ ಹೋರಾಟ, ಸೌಲಭ್ಯ, ನಗರೀಕರಣಕ್ಕೆ ಒಳಗಾದ ರೀತಿ ಎಲ್ಲವೂ ಚರ್ಚೆಗೆ ಒಳಪಡಿಸಿದ್ದಾರೆ. ಇವರ **ದಿ ಪ್ರಾಮಿಸ್ ಆಫ್ ದಿ ಮೆಟ್ರೋಪಾಲಿಸ್ ಬೆಂಗಳೂರ್ ಟ್ವೆಂಟಿಯತ್ ಸೆಂಚುರಿ** ಕೃತಿ ೨೦೦೫ರಲ್ಲಿ ಪ್ರಕಟವಾಯಿತು. ಬೆಂಗಳೂರು ನಗರ 'ಮೆಟ್ರೋಪಾಲಿಟನ್' ಕೇಂದ್ರವಾಗಿ ಬೆಳೆಯಿತು ಎಂದು ನಗರೀಕರಣದ ಪ್ರಕ್ರಿಯೆಯನ್ನು ಚರ್ಚಿಸುತ್ತಾರೆ. ಇವರ ಮತ್ತೊಂದು ಕೃತಿ **ಮೈಸೂರು ಮಾಡರ್ನ್(ರೀ ಥಿಂಕಿಂಗ್ ದಿ ರೀಜನ್ ಅಂಡರ್ ಪ್ರಿನ್ಸಿ ರೂಲ್)** (೨೦೧೨). ೨೦ನೇ ಶತಮಾನದಲ್ಲಿ ಮೈಸೂರು ಪ್ರಾಂತ್ಯ ಹೇಗೆ ಮಾದರಿ ರಾಜ್ಯ ಎಂದು ಕರೆಯಿಸಿಕೊಂಡಿತು, ಜಾತಿ ಮತ್ತು ಸಮುದಾಯಗಳು ಯಾವ ಚಲನಶೀಲತೆಯನ್ನು ಪಡೆದವು ಎಂಬುದನ್ನು ಮೊದಲು ಈ ಕೃತಿಯಲ್ಲಿ

ವಿಶ್ಲೇಷಿಸುತ್ತಾ ಹೋಗುತ್ತಾರೆ. ಇದರಲ್ಲಿನ ಒಂದೊಂದು ಲೇಖನವು ಬೇರೆಬೇರೆ ಅಂಶಗಳನ್ನು ತಿಳಿಸುತ್ತವೆ.

ರಾಷ್ಟ್ರೀಯ ಚಳವಳಿಯ ಸಂದರ್ಭದಲ್ಲಿ ಪತ್ರಿಕೆಗಳು ನಿರ್ವಹಿಸಿದ ಪಾತ್ರವನ್ನು ಆರ್.ರಾಮಕೃಷ್ಣನ್ ಅವರು ತಮ್ಮ **ಪ್ರೆಸ್ ಆ್ಯಂಡ್ ಪಾಲಿಟಿಕ್ಸ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರ್ ೧೮೫೯–೧೯೪೭** (೧೯೯೭) ಎಂಬ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಷಡಕ್ಷರಯ್ಯ ಅವರು ಬರೆದಿರುವ **ಮೈಸೂರ್ ಸ್ಟೇಟ್ ರೈಲ್ವೇಸ್ ಆ್ಯಂಡ್ ದಿ ಬ್ರಿಟಿಷ್ ೧೮೬೪–೧೯೪೭**(೨೦೦೩) ಎಂಬ ಕೃತಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಜಾರಿಯಾದ ರೈಲ್ವೆ ವ್ಯವಸ್ಥೆಯನ್ನು ಕುರಿತು ಚರ್ಚಿಸಿದ್ದಾರೆ.

ಎನ್. ಚಿನ್ನಸ್ವಾಮಿ ಸೋಸಲೆ ಅವರು **ನಾಲ್ವಡಿ ಕೃಷ್ಣನ ಮೈಸೂರು(ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯ ಅಧ್ಯಯನ)** ಎಂಬ ಕೃತಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲಾವಧಿಯ ತಳಸಮುದಾಯಗಳಾದ ದಲಿತರು, ಶೋಷಿತರು, ಕೆಳವರ್ಗದವರು, ಮಹಿಳೆಯರು ಮತ್ತು ಬುಡಕಟ್ಟು ಸಮುದಾಯಗಳ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯಲ್ಲಿ ಕೈಗೊಂಡ ಕಾರ್ಯಗಳನ್ನು ಚರ್ಚಿಸಿದ್ದಾರೆ. ಇವರ **ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ** ಎಂಬ ಕೃತಿಯಲ್ಲಿ ಮೈಸೂರಿನ ಒಡೆಯರು ಮತ್ತು ದಿವಾನರು ವಸಾಹತುಶಾಹಿಗಳ ಬಿಗಿ ಮುಷ್ಟಿಯಲ್ಲಿದ್ದು, ಕಮೀಷನರರ ಆಳ್ವಿಕೆಯು ಸಂಸ್ಥಾನವನ್ನು ಪ್ರಗತಿಯ ಹಾದಿಗೆ ಕೊಂಡೊಯ್ದರು ಎಂಬ ಅಂಶಗಳನ್ನು ಚರ್ಚಿಸಿದ್ದಾರೆ. ಇವರ ಸಂಪಾದಕತ್ವದಲ್ಲಿ ಹೊರಬಂದ ಕೃತಿಯಾದ **ದಿವಾನ್ ಸರ್ ಮಿರ್ಜಾ ಎಂ.ಇಸ್ಮಾಯಿಲ್ ಕಾಲಘಟ್ಟದ ಮೈಸೂರು ಸಂಸ್ಥಾನ** ಎಂಬುದರಲ್ಲಿ ಅವರ ಆಡಳಿತದ ಎಲ್ಲಾ ಅಭಿವೃದ್ಧಿ ಕಾರ್ಯಗಳ ವಿವಿಧ ಮಜಲುಗಳನ್ನು ಅನಾವರಣಗೊಳಿಸಿದ್ದಾರೆ. ಇತ್ತೀಚೆಗೆ ಹೊರಬಂದ ಇವರ ಕೃತಿ **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು** ಎಂಬುದು ಪ್ರಮುಖವಾದುದು. ಈ ಕೃತಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದಲ್ಲಿ ದಲಿತರ ಏಳಿಗೆಗಾಗಿ ಕೈಗೊಂಡ ಕಾರ್ಯಗಳನ್ನು ವಿಸ್ತೃತವಾಗಿ ಚರ್ಚಿಸುತ್ತಾರೆ.

ಅಶ್ವತ್ಥನಾರಾಯಣ(ಮೈಸೂರು ವಿಶ್ವವಿದ್ಯಾನಿಲಯ) ಅವರ **ಮೈಸೂರು ಸಂಸ್ಥಾನದಲ್ಲಿನ ರಾಷ್ಟ್ರೀಯ ಚಳವಳಿಯ ನೋಟಗಳು ೧೮೭೦–೧೯೪೦**(೨೦೦೮) ಎಂಬ ಕೃತಿಯು ರಾಷ್ಟ್ರೀಯ ಚಳುವಳಿಯಲ್ಲಿ 'ಪ್ರಾದೇಶಿಕತೆ, ಜಾತಿ ಮತ್ತು ಭಾಷೆ' ನೆಲೆಯಲ್ಲಿನ ಈ ಐಡೆಂಟಿಟಿಗಳನ್ನು ಶೋಧಿಸಿ, ವಿಶ್ಲೇಷಿಸಿದ್ದಾರೆ.

ಮೈಸೂರಿನ ಚರಿತ್ರೆಯಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನ್ ಇವರ ಕಾಲಾವಧಿಯು ಮುಖ್ಯ. ಈ ಕಾಲಾವಧಿ ದಾಟಲು ಸಾಧ್ಯವಾಗುವುದಿಲ್ಲ. ಮೈಸೂರಿನ ಚರಿತ್ರೆಯನ್ನು ಕುರಿತು ಬರೆದ ಆರಂಭಿಕ ಸ್ಥಳೀಯ ಇತಿಹಾಸಕಾರರು ಟಿಪ್ಪುವನ್ನು ಮತಾಂಧ ಎಂದು ಚಿತ್ರಿಸಿದ್ದಾರೆ. ನಂತರದ ಬರಹಗಾರರು ಅವನನ್ನು ಅಪ್ರತಿಮ ನಾಯಕ ಎಂದು ಚಿತ್ರಿಸಿದ್ದಾರೆ. ಇವರ ಬಗೆಗೆ ಹಲವಾರು ಕೃತಿಗಳು ರಚನೆಯಾಗಿವೆ. ಹಾಗೆಯೇ ಇಂದಿಗೂ ಸಂಶೋಧನೆಗೆ ಒಳಗಾಗಿ ಅನೇಕ ಕೃತಿಗಳು ಹೊರಬರುತ್ತಿವೆ. ಕಿರ್ಮಾನಿ **ಟಿಪ್ಪು ಸುಲ್ತಾನ್** ಎಂಬ ಕೃತಿಯಲ್ಲಿ ಟಿಪ್ಪುನ ಬಗೆಗೆ ಪ್ರಶಂಸೆಯ ಮಾತುಗಳನ್ನು ಹೇಳುತ್ತಾನೆ. ಅವನ ಮಾತುಕತೆಗಳು ಮತ್ತು ರೀತಿ ನೀತಿ

ಸಂತೋಷಕರವಾಗಿದ್ದವು ಎನ್ನುತ್ತಾರೆ. ಮೊಹಿಬುಲ್ ಹಸನ್‌ಖಾನ್ ಬರೆದಿರುವ **ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್**(೧೯೫೧) ಎಂಬ ಕೃತಿಯಲ್ಲಿ ಟಿಪ್ಪು ಸಾಮ್ರಾಜ್ಯಶಾಹಿ ವ್ಯವಸ್ಥೆಯ ವಿರುದ್ಧ ಹೋರಾಡಿದ ಅಪ್ರತಿಮ ನಾಯಕ ಎಂಬಂತೆ ವಿವರಿಸುತ್ತಾ ಹೋಗುತ್ತಾರೆ. ಬಿ.ಷೇಕ್ ಅಲಿ ಅವರು **ಟಿಪ್ಪು ಸುಲ್ತಾನ್: ಎ ಗ್ರೇಟ್ ಮಾರ್ಟಿಯರ್**(೧೯೯೩) ಎಂಬ ಕೃತಿಯಲ್ಲಿ ಟಿಪ್ಪುವನ್ನು ಅಪ್ರತಿಮ ವೀರನಾಯಕ ಎಂದು ಅವನ ಆಡಳಿತ ವೈಖರಿಯನ್ನು ಅನಾವರಣ ಮಾಡಿದ್ದಾರೆ. ಬಿ.ಉದಯ ಅವರು **ಹೈದರಾಲಿ-ಟಿಪ್ಪು: ಇತಿಹಾಸ ಕಥನ** ಎಂಬ ಕೃತಿಯಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಮೇಲೆ ಇರುವ ಆರೋಪಗಳ ವಾಸ್ತವ ಅಂಶಗಳತ್ತ ಗಮನ ಹರಿಸಿ ಕೃತಿಗಳ ಮೂಲಕ ಚರ್ಚಿಸುತ್ತಾ ಹೋಗುತ್ತಾರೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಸಂಶೋಧನೆಗೊಂಡು ಪ್ರಕಟವಾಗಿದೆಯೇ ಉಳಿದಿರುವ ಎರಡು ಸಂಶೋಧನಾ ಮಹಾಪ್ರಬಂಧಗಳು ಆಧುನಿಕ ಮೈಸೂರಿನ ಒಡೆಯರ ಕೃತಿಗಳಿಗೆ ಅಡಿಪಾಯವನ್ನು ಹಾಕಿದವು. ಮೊದಲನೆಯದಾಗಿ ಡಿ.ಆರ್.ಗಸ್ಟೇವ್‌ಸನ್ ಅವರು ೧೯೬೮ರಲ್ಲಿ ಅಮೆರಿಕದ ವಿಸ್‌ಕಾನ್‌ಸಿನ್ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಪಿಎಚ್.ಡಿ. ಮಹಾಪ್ರಬಂಧ **ಮೈಸೂರು ೧೮೮೧-೧೯೦೨: ದಿ ಮೇಕಿಂಗ್ ಆಫ್ ಎ ಮಾಡೆಲ್ ಸ್ಟೇಟ್** ಮತ್ತು ಲೇಲಾದಕ್ಷಿನ್ ಅವರು ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ೧೯೭೪ರಲ್ಲಿ ಸಲ್ಲಿಸಿರುವ ಮಹಾಪ್ರಬಂಧ **ನಾನ್ ಬ್ರಾಹ್ಮಿನ್ ಮೂವ್‌ಮೆಂಟ್ ಇನ್ ಪ್ರಿನ್ಸ್ಲಿ ಮೈಸೂರು** ಪ್ರಮುಖವಾದವು. ಮೊದಲನೆಯದು ಬ್ರಿಟೀಷ್ ಆಡಳಿತದ ವೈಖರಿಯನ್ನು ಒಪ್ಪಿಕೊಂಡು ಅನುಸರಿಸಿದ ರಾಜ್ಯಗಳೇ 'ಮಾಡೆಲ್ ಸ್ಟೇಟ್' ಎಂಬುದನ್ನು ತಿಳಿಸುತ್ತಾ, ಇದರ ರಾಜಕೀಯ ಆಯಾಮಗಳನ್ನು ವಿಶ್ಲೇಷಿಸುತ್ತಾರೆ. ಎರಡನೆಯದು ಮೈಸೂರಿನಲ್ಲಿ ಡಾಮಿನೆಂಟ್ ಆಗಿದ್ದ ಗುಂಪುಗಳು ಎಲ್ಲಾ ಸೌಲಭ್ಯಗಳನ್ನು ಪಡೆದವು. ಆಗ ಇತರ ಬ್ರಾಹ್ಮಣೇತರರು ಚಳವಳಿಯ ಮೂಲಕ ಅದರ ಯಜಮಾನಿಕೆಯನ್ನು ವಿರೋಧಿಸಿದರು ಎಂಬುದನ್ನು ವಿಶ್ಲೇಷಿಸುತ್ತಾರೆ.

ದೇಶಿ ಸಂಶೋಧಕರು ಕೂಡ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಸಂಶೋಧನೆ ಕೈಗೊಂಡು ತಮ್ಮ ಮಹಾಪ್ರಬಂಧಗಳನ್ನು ಮಂಡಿಸಿದ್ದಾರೆ. ಓ.ಅನಂತರಾಮಯ್ಯ ಅವರು **ಸೋಷಿಯೋ-ಎಕಾನಮಿಕ್ ಚೇಂಜ್ ಆಫ್ ಡಿಪ್ರೆಸ್ಡ್ ಕ್ಲಾಸಸ್ ಇನ್ ಮೈಸೂರು ಸ್ಟೇಟ್ ೧೯೦೨-೧೯೫೬**(೧೯೮೮) ಎಂಬ ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ನಿಮ್ನವರ್ಗಗಳು ಯಾವ ರೀತಿ ಹಿಂದುಳಿದಿದ್ದವು? ಅನಂತರ ಈ ವರ್ಗಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಬದಲಾವಣೆಗಳನ್ನು ಹೊಂದಿದವು ಎಂಬುದನ್ನು ಚರ್ಚಿಸಿದ್ದಾರೆ. ಅಲ್ಲಿನ ಸಾಮಾಜಿಕ ಕಾನೂನುಗಳ ಪಾತ್ರ, ಆರ್ಥಿಕ ಯೋಜನೆಗಳು ಮತ್ತು ಸಂವಿಧಾನಾತ್ಮಕ ಬೆಳವಣಿಗೆಯಲ್ಲಿ ಈ ವರ್ಗಗಳು ಪಡೆದ ಸೌಲಭ್ಯ-ಸವಲತ್ತುಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಇನ್ನೂ ಹಲವಾರು ಪಿಎಚ್.ಡಿ. ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಜಮುನಾ ಎಂ. ಅವರು **ಸೋಷಿಯಲ್ ಚೇಂಜ್ ಇನ್ ಮೈಸೂರ್ ವಿತ್ ಸ್ಪೆಷಲ್ ರೆಫರೆನ್ಸ್ ಟು ವುಮೆನ್ ೧೮೮೦-೧೯೪೭** ಎಂಬ ಪಿಎಚ್.ಡಿ. ಮಹಾಪ್ರಬಂಧದಲ್ಲಿ ಪ್ರಥಮ ಭಾರಿಗೆ ಮೈಸೂರಿನಲ್ಲಾದ ಮಹಿಳೆಯರ ಸಾಮಾಜಿಕ ಸುಧಾರಣ ಕಾರ್ಯಗಳನ್ನು ಚರ್ಚಿಸುತ್ತಾ

ಹೋಗುತ್ತಾರೆ.

ಅಶ್ವತ್ಥನಾರಾಯಣ ಅವರು **ಸೋಷಿಯಲ್ ರೀಫಾರ್ಮ್ ಮೂಮೆಂಟ್ಸ್ ಇನ್ ಪ್ರಿನ್ಲಿ ಮೈಸೂರು ೧೮೬೦-೧೯೪೦** ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ರಚಿಸಿದ್ದಾರೆ. ಮೈಸೂರಿನಲ್ಲಿ ಆದ ಸಾಮಾಜಿಕ ಸುಧಾರಣ ಚಳವಳಿಗಳ ಕಾರ್ಯ ವೈಖರಿಯನ್ನು ತಿಳಿಸಿದ್ದಾರೆ. ಇನ್ನೂ ಅನೇಕ ಮಹಾ ಪ್ರಬಂಧಗಳನ್ನು ನೋಡಬಹುದು. ಡಿ.ಎಸ್. ಅಚ್ಯುತರಾವ್ ಅವರ **ಅಡ್ಮಿಷ್ಟ್ರೇಟಿವ್ ಆ್ಯಂಡ್ ಸೋಷಿಯಲ್ ಹಿಸ್ಟ್ರಿ ಆಫ್ ಮೈಸೂರ್ ಅಂಡರ್** ದಿ ಒಡೆಯರ್ಸ್ ೧೬೦೦-೧೮೦೦ ಎಂಬ ಮಹಾಪ್ರಬಂಧದಲ್ಲಿ ಮೈಸೂರು ಒಡೆಯರ ಕಾಲದ ಸಾಮಾಜಿಕ ಆಡಳಿತ ಸುಧಾರಣೆಯ ಅಂಶಗಳನ್ನು ತಿಳಿಸಿದ್ದಾರೆ. ಮಹಾದೇವಿ ಅವರು **ಮೈಸೂರು ಒಡೆಯರ ಕಾಲದ ಸಮಾಜ ಮತ್ತು ಸಂಸ್ಕೃತಿ ೧೭೦೪-೧೭೬೧** ಎಂಬ ಮಹಾಪ್ರಬಂಧವು ಸಮಾಜದ ಸ್ಥಿತಿಗತಿ, ಆಚರಣೆಗಳು, ರೂಢಿ ಸಂಪ್ರದಾಯಗಳ ಅಂಶಗಳನ್ನು ತಿಳಿಸುತ್ತಾ ಹೋಗುತ್ತಾರೆ. ಹೀಗೆ ಇನ್ನೂ ಬಹಳಷ್ಟು ಮಹಾಪ್ರಬಂಧಗಳನ್ನು ನೋಡಬಹುದು.

ಕೃತಿಗಳ ಅಧ್ಯಯನದ ಜೊತೆಗೆ ಆಡಳಿತಾತ್ಮಕ ಕಡತ, ದಾಖಲೆಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕೃತಿಗಳಲ್ಲಿ ಬಂದಿರುವ ವಿವಿಧ ಲೇಖನಗಳತ್ತ ಗಮನ ಹರಿಸಿದಾಗ ಎಸ್. ಚಂದ್ರಶೇಖರ್ ಅವರು ಬರೆದಿರುವ **ವಸಾಹತುಕಾಲೀನ ಕರ್ನಾಟಕ** ಕೃತಿಯಲ್ಲಿ **ಒಡೆಯರ ಚರಿತ್ರೆಗಳು: ಒಂದು ಅವಲೋಕನ** ಎಂಬ ಲೇಖನ ಪ್ರಮುಖವಾದುದು. ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿದ ಪ್ರಾರಂಭಿಕ ವಿದೇಶಿ ಚರಿತ್ರಕಾರರಾದ ಮಾರ್ಕ್ ವಿಲ್ಕ್ಸ್, ಬಿ.ಎಲ್.ರೈಸ್ ಮತ್ತು ದೇಶಿ ಚರಿತ್ರಕಾರರಾದ ಸಿ.ಹಯವದನರಾವ್, ಎಂ.ಶಾಮರಾವ್ ಅವರ ಕೃತಿಗಳ ವಿಶ್ಲೇಷಣೆ ಮಾಡಿದ್ದಾರೆ. ಹಾಗೆಯೇ ಇತ್ತೀಚಿಗೆ ಎಂ.ವಿ.ವಸು ಅವರ ಸಂಪಾದಕತ್ವದಲ್ಲಿ ಪ್ರಕಟವಾದ **ಕನ್ನಡದೊಳ್ ಭಾವಿಸಿದ ಜನಪದಂ** ಕೃತಿಯ ಭಾಗ-೪ರ **ಚರಿತ್ರೆ ಕಟ್ಟಿದ ಮೈಸೂರು** ಎಂಬ ವಿಷಯದಡಿಯಲ್ಲಿ ಅಶ್ವತ್ಥನಾರಾಯಣ (ಬೆಂಗಳೂರು ವಿಶ್ವವಿದ್ಯಾಲಯ) ಅವರು ಬರೆದಿರುವ 'ಸಂಶೋಧನಾ ನೆಲೆಗಳಲ್ಲಿ ಮೈಸೂರು ಚರಿತ್ರೆ' ಎಂಬ ಲೇಖನವು ಮುಖ್ಯವಾದುದಾಗಿದೆ. ಈ ಲೇಖನದಲ್ಲಿ ಮೈಸೂರು ಒಡೆಯರ ಚರಿತ್ರೆಯ ಕೃತಿಗಳನ್ನು ಚರ್ಚಿಸುತ್ತಾ, ವಿವಿಧ ಕಾಲಘಟ್ಟದಲ್ಲಿ ಬೆಳೆದುಬಂದ ಮೈಸೂರು ಸಂಸ್ಥಾನದ ಒಡೆಯರ ಲೇಖನಪರಂಪರೆಯನ್ನು ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಹೀಗೆ ಈ ಎಲ್ಲಾ ಆಕರಗಳ ಮೂಲಕ ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರವನ್ನು ಅಧ್ಯಯನ ಮಾಡುವುದಾಗಿದೆ.

**ಅಡಿಟಿಪ್ಪಣಿಗಳು**

೧. ಕಾಲಿಂಗ್‌ವುಡ್ ಆರ್.ಜಿ., ೧೯೯೩, ದಿ ಐಡಿಯಾ ಆಫ್ ಹಿಸ್ಟರಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್, ಪು.೧೩೩.

೨. ಅದೇ, ಪು.೨೮೨.

೩. ಕಾರ್ ಇ.ಎಚ್., ೧೯೬೧(ಮರುಮುದ್ರಣ ೨೦೦೧), ವಾಟ್ ಈಸ್ ಹಿಸ್ಟರಿ, ಮ್ಯಾಕ್ ಮಿಲನ್, ಲಂಡನ್, ಪು.೨೧.

೪. ಅದೇ, ಪು.೧೨೭.

೫. ವಿಜಯ್ ಪೂಣಚ್ಚ ತಂಬಂಡ(ಪ್ರಸಂ.), ಅಶ್ವತ್ಥನಾರಾಯಣ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧, (ಅಮೂರ್ತದಿಂದ ಮೂರ್ತದೆಡೆಗೆ–ಆರಂಭಿಕ ಚರಿತ್ರೆಲೇಖನ ಪರಂಪರೆಗಳೊಂದಿಗೆ ಅನುಸಂಧಾನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೨–೨೧.

೬. ಅದೇ, ಪು.೨೩.

೭. ಗೋವಿಂದರಾಜು ಸಿ.ಆರ್.(ಸಂ), ಮೋಹನ್‌ಕೃಷ್ಣ ರೈ ಕೆ.(ಲೇ), ಚರಿತ್ರೆ ಅಧ್ಯಯನ, ಸಂಪುಟ ೨, ಸಂಚಿಕೆ ೧ ಜುಲೈ–ಡಿಸೆಂಬರ್ ೨೦೦೬(ಆರ್.ಜಿ.ಕಾಲಿಂಗ್‌ವುಡ್ ಅವರ ಸಂಶೋಧನೆಯಲ್ಲಿ ಚರಿತ್ರೆ ಮತ್ತು ಚರಿತ್ರೆಕಾರ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೦.

೮. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ಶ್ರೀನಿವಾಸಮೂರ್ತಿ ಎಚ್.ವಿ.(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಆಧುನಿಕ ಐರೋಪ್ಯ ಚರಿತ್ರೆಲೇಖನ ಪರಂಪರೆಯ ಆಯಾಮಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯೮–೧೦೪.

೯. ವೆಂಕಟರತ್ನಂ ಎ.ವಿ., ಪದ್ಮ ಎಂ.ಬಿ., ೧೯೮೫(ಮರುಮುದ್ರಣ ೨೦೦೩), ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು ಪ್ರೆಸ್, ಬೆಂಗಳೂರು, ಪು.೩೮೩–೩೮೫.

೧೦. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ಶ್ರೀನಿವಾಸಮೂರ್ತಿ ಎಚ್.ವಿ.(ಲೇ.), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಆಧುನಿಕ ಐರೋಪ್ಯ ಚರಿತ್ರೆಲೇಖನ ಪರಂಪರೆಯ ಆಯಾಮಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೨೯.

೧೧. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ಅಶ್ವತ್ಥನಾರಾಯಣ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಅಮೂರ್ತದಿಂದ ಮೂರ್ತದೆಡೆಗೆ–ಆರಂಭಿಕ ಚರಿತ್ರೆಲೇಖನ ಪರಂಪರೆಗಳೊಂದಿಗೆ ಅನುಸಂಧಾನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೫–೭೧.

೧೨. ವಿಜಯ್ ಪೂಣಚ್ಚ ತಂಬಂಡ(ಪ್ರಸಂ.), ರಾಜಾರಾಮ ಹೆಗಡೆ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೪೪.

೧೩. ಮೋಹನ್‌ಕೃಷ್ಣ ರೈ ಕೆ., ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨.

೧೪. ಅದೇ ಪು.೪.

೧೫. ಎಡ್ವರ್ಡ್ ಸೈದ್, ೧೯೭೭, ಓರಿಯಂಟಲಿಸಂ, ಲಂಡನ್, ಪೆಂಗ್ವಿನ್, ಪು.೩.

೧೬. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ರಾಜಾರಾಮ ಹೆಗಡೆ(ಲೇ), ೨೦೧೦, ಚರಿತ್ರೆ ಬರವಣಿಗೆ

ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೪೮.

೧೭. ಶ್ರೀಧರನ್ ಈ., ೨೦೦೪, ಎ ಟೆಕ್ಸ್ಟ್ ಬುಕ್ ಆಫ್ ಹಿಸ್ಟೋರಿಯೋಗ್ರಫಿ(ಕ್ರಿ.ಪೂ.೫೦೦ರಿಂದ ಕ್ರಿ.ಶ.೨೦೦೦), ಓರಿಯಂಟ್ ಲಾಂಗ್‌ಮನ್, ನ್ಯೂಡೆಲ್ಲಿ, ಪು.೪೦೨-೪೦೫.

೧೮. ಮಜುಂದಾರ್ ಆರ್.ಸಿ., ೧೯೭೦, ಹಿಸ್ಟೋರಿಯೋಗ್ರಫಿ ಇನ್ ಮಾಡರ್ನ್ ಇಂಡಿಯಾ, ಏಶಿಯಾ ಪಬ್ಲಿಷಿಂಗ್ ಹೌಸ್, ಬಾಂಬೆ, ಪು.೪೧-೪೩.

೧೯. ಮಾರ್ಕ್ ವಿಲ್ಕ್ಸ್, ೧೮೧೦-೧೮೧೭(ಪರಿಷ್ಕೃತ ೧೯೩೦), ಹಿಸ್ಟರಿ ಆಫ್ ಮೈಸೂರು ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ-ಮೂರು ಸಂಪುಟಗಳು, ನವದೆಹಲಿ.

೨೦. ಷೇಕ್ ಅಲಿ ಬಿ., ೧೯೭೮(ಎರಡನೇ ಆವೃತ್ತಿ, ಮರುಮುದ್ರಣ ೨೦೦೧), ಹಿಸ್ಟರಿ: ಇಟ್ಸ್ ಥಿಯರಿ ಆ್ಯಂಡ್ ಮೆಥೆಡ್, ಮ್ಯಾಕ್‌ಮಿಲನ್, ನವದೆಹಲಿ, ಪು.೩೩೬-೩೪೧.

೨೧. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ರಾಜಾರಾಮ ಹೆಗಡೆ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೫೩-೪೫೪.

೨೨. ಮಜುಂದಾರ್ ಆರ್.ಸಿ., ೧೯೭೦, ಹಿಸ್ಟೋರಿಯೋಗ್ರಫಿ ಇನ್ ಮಾಡರ್ನ್ ಇಂಡಿಯಾ, ಏಶಿಯಾ ಪಬ್ಲಿಷಿಂಗ್ ಹೌಸ್, ಬಾಂಬೆ, ಪು.೪೭-೫೦.

೨೩. ವೆಂಕಟರತ್ನಂ ಎ.ವಿ., ಪದ್ಮ ಎಂ.ಬಿ., ೧೯೮೫(ಮರುಮುದ್ರಣ ೨೦೦೩), ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು ಪ್ರೆಸ್, ಬೆಂಗಳೂರು, ಪು.೪೯೨-೪೯೭.

೨೪. ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ.), ರಾಜಾರಾಮ ಹೆಗಡೆ(ಲೇ.)., ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೫೮-೪೬೪.

೨೫. ರೋಮಿಲಾ ಥಾಪರ್, ಹರ್ಬನ್ಸ್ ಮುಖಿಯ ಮತ್ತು ಬಿಪನ್ ಚಂದ್ರ(ಮೂಲ), ಗೋಪಾಲಕೃಷ್ಣ ರಾವ್ ಕೆ.ಎಲ್.(ಕನ್ನಡಕ್ಕೆ), ೨೦೧೦, ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ, ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು.೧೨.

೨೬. ಫಣಿರಾಜ್ ಕೆ., ೨೦೦೩, ಆಂಟೋನಿಯೋ ಗ್ರಾಮ್ಷಿ, ಜಿ., ರಾಜಶೇಖರ್(ಪ್ರಧಾನ ಸಂಪಾದಕರು), ಬೆಂಗಳೂರು: ಶತಮಾನ ಚಿಂತನೆ, ಪು.೩೫.

೨೭. ವಿಜಯ್ ಪೂಣಚ್ಚ ತಂಬಂಡ, ೨೦೦೯, ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೦-೬೨.

೨೮. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ವಿಘ್ನೇಶ್ ಭಟ್(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಹೊಸ ಕಲಿಕೆಯ ಯುಗ: ಪ್ರಮುಖ

ದೃಷ್ಟಿಕೋನಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೮೨.

೨೯. ಕಿರಿತ್ ಕೆ. ಶಾಹ, ಮೆಹೆರ್‌ಜ್ಯೋತಿ ಸಾಂಗಲೆ(ಸಂ.), ಸಿ.ಆರ್.ದಾಸ್(ಲೇ.), ೨೦೦೫, ಹಿಸ್ಟೋರಿಯೋ ಗ್ರಫಿ ಫಾಸ್ಟ್ ಅಂಡ್ ಪ್ರೆಸೆಂಟ್, ಪೋಸ್ಟ್ ಮಾಡರ್ನಿಸಂ ಆ್ಯಂಡ್ ಹಿಸ್ಟ್ರಿ, ರಾಮ್ ಪಬ್ಲಿಕೇಷನ್ಸ್, ಜೈಪುರ, ಪು.೧೫೩–೧೫೪.

೩೦. ಡೇವಿಡ್‌ವುಡ್, ೧೯೭೯, ಆನ್ ಇಂಟ್ರೊಡಕ್ಷನ್ ಟು ಡೆರಿಡಾ, ರೆಡಿಕಲ್ ಫಿಲಾಸಫಿ ನಂ.೨೧, ಲಂಡನ್, ಪು.೧೮–೨೮.

೩೧. ಜೋನಾಥನ್ ಕುಲ್ಲರ್, ೧೯೮೨, ಆನ್ ಡಿ–ಕನ್‌ಸ್ಟ್ರಕ್ಷನ್, ರೂಟ್ಲೆಡ್ಜ್, ಲಂಡನ್, ಪು.೧೮೦.

೩೨. ಮಾಧವ ಪೆರಾಜೆ, ೨೦೦೩, ಡೆರಿಡಾ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೧೧೭–೧೧೮.

೩೩. ಶೆಲ್ಲಿ ವಾಲಿಯಾ, ೨೦೦೧, ಎಡ್ವರ್ಡ್ ಸೈದ್ ಆ್ಯಂಡ್ ದಿ ರೈಟಿಂಗ್ ಆಫ್ ಹಿಸ್ಟರಿ, ರೂಟ್ಲೆಡ್ಜ್, ಲಂಡನ್, ಪು.೧೨–೧೪.

೩೪. ಶೆಲ್ಲಿ ವಾಲಿಯಾ(ಮೂಲ), ರಾಮಲಿಂಗಪ್ಪ ಟಿ.ಬೇಗೂರು(ಕನ್ನಡಕ್ಕೆ), ೨೦೦೯, ಎಡ್ವರ್ಡ್ ಡಬ್ಲ್ಯು ಸೈದ್–ಎಡ್ವರ್ಡ್ ಸೈದ್ ಮತ್ತು ಆತನ ಇತಿಹಾಸದ ಬರವಣಿಗೆ, ಚಂದ್ರಗಿರಿ ಪ್ರತಿಷ್ಠಾನ, ಬೆಂಗಳೂರು, ಪು.೪೩.

೩೫. ಗೋವಿಂದರಾಜು ಸಿ.ಆರ್., ೨೦೦೯, ನವಚಾರಿತ್ರಿಕವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೦.

೩೬. ಹೈಡೆನ್ ವೈಟ್, ೧೯೭೩(ಮರುಮುದ್ರಣ ೧೯೮೭), ಮೆಟಾ ಹಿಸ್ಟರಿ: ದಿ ಹಿಸ್ಟಾರಿಕಲ್ ಇಮಾಜಿನೇಷನ್ ಇನ್ ನೈಂಟೀನ್ತ್ ಸೆಂಚುರಿ, ಯುರೋಪ್, ಬಾಲ್ಟಿಮೋರ್, ಪು.೨.

೩೭. ಸ್ಟೀಫನ್ ಗ್ರೀನ್ ಬ್ಲಾಟ್, ೧೯೯೦, ಲರ್ನಿಂಗ್ ಟು ಕರ್ಸ್: ಎಸ್ಸೇಸ್ ಇನ್ ಅರ್ಲಿ ಮಾಡರ್ನ್ ಕಲ್ಚರ್, ರೂಟ್ಲೆಡ್ಜ್, ಲಂಡನ್, ಪು.೧೫.

೩೮. ಗೋವಿಂದರಾಜು ಸಿ.ಆರ್., ೨೦೦೯, ನವಚಾರಿತ್ರಿಕವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೪.

೩೯. ವಿಜಯ್ ಪೂಣಚ್ಚ ತಂಬಂಡ(ಪ್ರಸಂ. ಮತ್ತು ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ ೧(ಚರಿತ್ರೆ ಬರವಣಿಗೆ ಮತ್ತು ವಿಧಾನ ಕ್ರಮಗಳ ನಡುವೆ) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೭೧–೫೭೬.

೪೦. ಮೋಹನ್‌ಕೃಷ್ಣ ರೈ ಕೆ.(ಸಂ. ಮತ್ತು ಲೇ), ಚರಿತ್ರೆ ಅಧ್ಯಯನ ಸಂಪುಟ ೭, ಸಂಚಿಕೆ ೧, ಜುಲೈ–ಡಿಸೆಂಬರ್ ೨೦೧೧(ಚರಿತ್ರೆ ರಚನೆಯ ವಿವಿಧ ಆಯಾಮಗಳು: ರಚನೆಯೊಳಗಿನ ಹಂಚಿಕೆ ಹಾಗೂ ಮರುಹಂಚಿಕೆಯ ಪ್ರಶ್ನೆಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧–೩.

೪೧. ವಿರೂಪಾಕ್ಷಿ ಪೂಜಾರಹಳ್ಳಿ(ಸಂ), ಮೋಹನ್‌ಕೃಷ್ಣ ರೈ ಕೆ.(ಲೇ), ಜುಲೈ–ಡಿಸೆಂಬರ್ ೨೦೧೨, ಚರಿತ್ರೆ ಅಧ್ಯಯನ ಸಂಪುಟ ೮, ಸಂಚಿಕೆ ೧(ಚರಿತ್ರೆ ಬರವಣಿಗೆಯಲ್ಲಿ ಮಾನವ ಹಾಗೂ ಚರಿತ್ರಕಾರನ 'ಮನಸ್ಸು' ಕೇಂದ್ರಿತ ನಿರೂಪಣೆಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧.

೪೨. ಸುರೇಂದ್ರರಾವ್ ಬಿ., ೨೦೧೦, ಹಿಸ್ಟರಿ ಆ್ಯಸ್ ಹಿಸ್ಟೋರಿಯೋಗ್ರಫಿ, ಐ.ಸಿ.ಎಚ್.ಆರ್. ಪ್ರಾದೇಶಿಕ ಕಚೇರಿ, ಬೆಂಗಳೂರು, ಪು.೧೬-೧೭.

೪೩. ಕೀತ್ ಜೆಂಕಿನ್ಸ್, ೧೯೯೧(ಮರುಮುದ್ರಣ ೨೦೦೩), ರಿ-ಥಿಂಕಿಂಗ್ ಹಿಸ್ಟರಿ, ರೂಟ್ಲೆಡ್ಜ್, ಲಂಡನ್, ಪು.೩೮.

೪೪. ವಸು ಎಂ.ವಿ.(ಸಂ.), ಅಶ್ವತ್ಥನಾರಾಯಣ(ಲೇ.), ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ (ಸಂಶೋಧನಾ ನೆಲೆಗಳಲ್ಲಿ ಮೈಸೂರು ಚರಿತ್ರೆ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು, ಪು.೧೮೧-೧೮೨.

೪೫. ಚಿನ್ನಸ್ವಾಮಿ ಸೋಸಲೆ ಎನ್., ೨೦೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೨೬.

## ಅಧ್ಯಾಯ ಎರಡು

# ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ವಿಶ್ಲೇಷಣೆ

ಒಂದು ವಿಷಯವನ್ನು ಕುರಿತು ಸತ್ಯಾಸತ್ಯತೆಯನ್ನು ಹುಡುಕುವ ಪ್ರಕ್ರಿಯೆಯ ಪ್ರಧಾನ ಅಂಶಗಳೇ ಆಕರಗಳ ಸಂಗ್ರಹ ಮತ್ತು ಆಕರಗಳ ವಿಶ್ಲೇಷಣೆ. ಇಲ್ಲಿ ಸಂಗ್ರಹಿಸಿದ ಆಕರಗಳನ್ನು ಇವುಗಳ ಸತ್ಯಾಸತ್ಯತೆಗೆ ಒಳಪಡಿಸುವುದು ಮುಖ್ಯವಾಗಿದೆ. ಅಂದರೆ ಆಕರವನ್ನು ಯಾವುದಕ್ಕೆ ಸಂಬಂಧಿಸಿದ್ದೆಂದು ತಿಳಿದಿದ್ದೇವೊ ಅದು ನಿಜವಾಗಿಯೂ ಅದೇ ಆಕರವೇ ಅಥವಾ ನಕಲಿಯೇ ಎಂಬುದನ್ನು ತಿಳಿಯುವುದು ಅಗತ್ಯ. ಈ ಹಂತದಲ್ಲಿ ಆಕರಗಳ ಬಾಹ್ಯವಿಶ್ಲೇಷಣೆ ಪ್ರಮುಖವಾದುದಾಗಿದೆ. ಇಲ್ಲಿ ಆಕರವನ್ನು ಯಾರು ಬರೆದರು, ಯಾವ ಸ್ಥಳದಲ್ಲಿ ಆಯಿತ್ತೆಂಬುದನ್ನು ಗಮನಿಸಬೇಕು. ಈ ಆಕರ ಸೃಷ್ಟಿಯಾದ ಕಾಲ ಯಾವುದು, ಆಕರದಲ್ಲಿರುವ ಮಾಹಿತಿಯು ಒಂದೇ ಕಾಲಕ್ಕೆ ಅಥವಾ ಬೇರೆಬೇರೆ ಕಾಲದಲ್ಲಿ ಬರೆಯಲ್ಪಟ್ಟಿದೆಯೇ ಎಂಬುದನ್ನು ತಿಳಿಯಬೇಕು. ಕೃತಿಯ ರಚನಾಕಾರರು ಯಾರು ಎಂಬುದನ್ನು ಪತ್ತೆ ಹಚ್ಚಬೇಕು. ಬಳಸಿದ ಭಾಷೆ ಯಾವ ಕಾಲಮಾನಕ್ಕೆ ಸೇರಿದ್ದು ಎಂಬುದು ಮುಖ್ಯ. ಈ ನಿಟ್ಟಿನಲ್ಲಿ ಆಕರಗಳ ಬಾಹ್ಯವಿಮರ್ಶೆಯಿಂದ ಆಕರಗಳ ಕಾಲಮಾನ, ಕರ್ತೃ, ಸ್ಥಳ ಮುಂತಾದ ವಿಚಾರಗಳು ತಿಳಿಯುತ್ತವೆ. ಈ ಆಕರಗಳಿಂದ ದೊರೆಯುವ ಮಾಹಿತಿ ಮೇಲ್ನೋಟಕ್ಕೆ ಸಂಬಂಧಿಸಿದ್ದಾಗಿರುತ್ತದೆ. ಆಕರಗಳ ಆಂತರಿಕ ವಿಶ್ಲೇಷಣೆಯಲ್ಲಿ ಕೃತಿಕಾರರು ಬಳಸಿದ ವಿಷಯ, ಪದಬಳಕೆ, ಚಿಂತನೆಗಳು ಏನು? ವಿಚಾರಗಳು ಏನು? ಏನನ್ನು ಹೇಳಲು ಹೊರಟ್ಟಿದ್ದಾರೆ, ಏನನ್ನು ಮುಚ್ಚಿಡುತ್ತಿದ್ದಾರೆ ಎಂಬುದನ್ನು ಪತ್ತೇ ಹಚ್ಚಬೇಕು.[೧] ಈ ನೆಲೆಯಲ್ಲಿ ಅಧ್ಯಯನ ಸಾಗುತ್ತದೆ.

ಒಂದು ವಸ್ತು ವಿಷಯಕ್ಕೆ ಪ್ರಾಥಮಿಕ ಆಕರಗಳು ಮುಖ್ಯ. ಪ್ರಾಥಮಿಕ ಆಕರಗಳನ್ನು ಬಳಸಿ ಮಾಡಿದ ಸಂಶೋಧನೆ ಹೆಚ್ಚು ಮಹತ್ವ ಪಡೆಯುತ್ತವೆ. ಇಲ್ಲಿ ಲಿಖಿತ ಸಾಹಿತ್ಯ, ಅಲಿಖಿತ ಸಾಹಿತ್ಯ, ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಕೈಫಿಯತ್ತುಗಳು, ಕಡತಗಳು, ದಾಖಲೆಗಳು, ಪತ್ರಗಳು, ಸಾಹಿತ್ಯ ಕೃತಿಗಳು ಮುಖ್ಯವಾದವು. ಇವುಗಳನ್ನು ಪ್ರಾಥಮಿಕ ಆಕರಗಳೆಂದು ಕರೆಯಬಹುದು. ಈ ಮೂಲ ಆಕರಗಳಲ್ಲಿ ದೊರಕಿದ ಮಾಹಿತಿ ಎಲ್ಲವೂ ವಸ್ತುನಿಷ್ಠವಾಗಿರುತ್ತದೆ ಎಂದೇನೂ ಇಲ್ಲ. ಏಕೆಂದರೆ ಈ ದಾಖಲೆಯನ್ನು ಬರೆದವರು ಕೂಡ ಸಂಶೋಧಕರಂತೆ ಮನುಷ್ಯರು. ಅವರು ಅವರ ಕಾಲದ ಸಮಾಜದ ಒಂದು ಅಂಶವನ್ನು ಇಲ್ಲಿ ತಿಳಿಸಿರುತ್ತಾರೆ. ಶಾಸನಗಳಲ್ಲಿರುವ ವಿಷಯವನ್ನು ಬೇರೆ ಬೇರೆ ರೀತಿಯಲ್ಲಿ ಇತಿಹಾಸಕಾರರು ಓದಿದ ಉಲ್ಲೇಖಗಳು

ದೊರಕುತ್ತವೆ. ಪದಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತಿರುತ್ತವೆ. ಸ್ಥಳದಿಂದ ಸ್ಥಳಕ್ಕೆ ಬೇರೆ ಅರ್ಥವನ್ನೂ ನೀಡುತ್ತವೆ. ಸಂಶೋಧಕರಿಗೆ ತಮಗೆ ದೊರಕಿದ ದಾಖಲೆಯನ್ನು ಅರ್ಥೈಸಲು ಆ ಕಾಲಮಾನದ ಸಾಹಿತ್ಯದ ವಿಶಾಲ ಓದು ಇರಬೇಕು. ಕೃತಿಕಾರರು ಪ್ರತ್ಯಕ್ಷವಾಗಿ ವಿಷಯವನ್ನು ಗ್ರಹಿಸಿರುತ್ತಾರೆಯೇ ಎಂಬುದು ಮುಖ್ಯ. ಒಂದು ವಿಷಯದ ಪುನಾರಚನೆಯು ಆಯಾಯ ಸಂದರ್ಭವನ್ನು ಅವಲಂಬಿಸಿರುತ್ತದೆ. ಆಕರಗಳನ್ನು ಮತ್ತೆ ಮತ್ತೆ ವಿಶ್ಲೇಷಣೆ ಒಳಗಪಡಿಸಬೇಕು. ಪ್ರಾಥಮಿಕ ಆಕರಗಳು ಮುಖ್ಯ ಆಧಾರಗಳಾಗಿ ಗುರುತಿಸಿಕೊಂಡಿವೆ. ಏಕೆಂದರೆ ಇವು ಅದೇ ಕಾಲದಲ್ಲಿ ಸೃಷ್ಟಿಯಾದವು. ಈ ಕಾರಣಕ್ಕಾಗಿ ಪ್ರಾಥಮಿಕ ಆಕರಗಳೇ ಸಂಶೋಧನೆಯಲ್ಲಿ ಪ್ರಧಾನವಾದವು ಎಂಬುದು ಚರಿತ್ರೆಕಾರರ ವಾದ.

ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಗಳನ್ನು ಎರಡು ಮೂಲಗಳಿಂದ ಸಂಗ್ರಹಿಸಲಾಗುತ್ತದೆ. ಅವುಗಳೆಂದರೆ ಪ್ರಾಥಮಿಕ ಆಕರಗಳು ಹಾಗೂ ಆನುಷಂಗಿಕ ಆಕರಗಳು. ಆಕರಗಳ ಈ ವರ್ಗೀಕರಣ ಸಾಂಪ್ರದಾಯಿಕವಾಗಿ ಕಂಡುಬಂದರೂ ಮಾಹಿತಿ ಸಂಗ್ರಹಣೆಯ ದೃಷ್ಟಿಯಿಂದ ಅನಿವಾರ್ಯವಾದದ್ದೇ ಆಗಿದೆ. ಈ ಸಂಶೋಧನೆಯಲ್ಲಿ ಕಡತಗಳು, ದಾಖಲೆಗಳು, ಡೈರಿಗಳು, ಪತ್ರಗಳು, ನಾಣ್ಯಗಳು, ಶಾಸನಗಳು, ಸ್ಮಾರಕಗಳು, ಮೌಖಿಕ ಕಾವ್ಯಗಳು, ಸಾಹಿತ್ಯ ಕೃತಿಗಳು ಮುಂತಾದ ದಾಖಲೆಗಳು ಪ್ರಾಥಮಿಕ ಮಾಹಿತಿ ಮೂಲಗಳಾದರೆ, ಪ್ರಾಥಮಿಕ ಮೂಲಗಳಿಂದ ಮಾಹಿತಿ ಪಡೆದು ನಿರ್ಮಾಣಗೊಂಡ ಆಕರಗಳನ್ನು ಆನುಷಂಗಿಕ ಆಕರಗಳೆಂದು ಕರೆಯಲಾಗಿದೆ. ಪ್ರಾಥಮಿಕ ಆಕರ ಸಾಮಗ್ರಿಗಳನ್ನು ಬಳಸಿಕೊಂಡು ಇವು ನಿರ್ಮಾಣಗೊಳ್ಳುವುದರಿಂದಾಗಿ ಆನುಷಂಗಿಕ ಆಕರ ಗಳಾಗುತ್ತವೆ. ಸಮಾಜಶಾಸ್ತ್ರ, ಅರ್ಥಶಾಸ್ತ್ರ, ರಾಜಕೀಯ ಶಾಸ್ತ್ರದಂತಹ ಶಿಸ್ತುಗಳು ತಾವು ಸಂಶೋಧನೆ ನಡೆಸುವ ವಿಷಯಗಳಿಂದ ನೇರ ಮಾಹಿತಿ ಪಡೆಯುತ್ತವೆ. ಸಂಶೋಧನೆ ನಡೆಸುವ ವಿಷಯವೇ ಅವುಗಳಿಗೆ, ಪ್ರಾಥಮಿಕ ಮಾಹಿತಿಯ ಮೂಲಗಳಾಗಿರುತ್ತವೆ. ಈ ವಿಷಯ ಕುರಿತು ಈಗಾಗಲೇ ಪ್ರಕಟಗೊಂಡ ಮಾಹಿತಿಗಳನ್ನು ಬಳಸಿಕೊಂಡರೆ ಅದು ಆನುಷಂಗಿಕ ಮಾಹಿತಿಯಾಗುತ್ತದೆ. ಆನುಷಂಗಿಕ ದಾಖಲೆ ಮೂಲ ಆಕರಗಳನ್ನು ಅಥವಾ ಪ್ರಾಥಮಿಕ ಆಕರಗಳನ್ನು ಆಧಾರವನ್ನಾಗಿ ತೆಗೆದುಕೊಂಡಿರುತ್ತದೆ. ಮೂಲ ಆಕರಗಳನ್ನು ಬಳಸಿಕೊಂಡು ಇದು ರಚನೆಯಾಗಿರುತ್ತದೆ. ಎರಡನೆಯದಾಗಿ ಮೂಲ ಆಕರಗಳ ಕುರಿತಾದ ವಿಮರ್ಶೆಗಳನ್ನು ಹಾಗೂ ತನ್ನದೇ ಆದ ತೀರ್ಮಾನಗಳನ್ನು ಬಳಕೆಯಾದ ಮೂಲ ಆಕರಗಳ ಭಾಗವನ್ನು ಸಂಶೋಧಕರು ಯಥಾವತ್ತಾಗಿ ತೆಗೆದುಕೊಳ್ಳದೆ, ಅವುಗಳ ಮೂಲ ಆಶಯಗಳು ಏನು ಹಾಗೂ ಅವು ಆನುಷಂಗಿಕ ಆಕರಗಳಲ್ಲಿ ಯಾವ ರೀತಿ ಅಥವಾ ಯಾವ ಉದ್ದೇಶಕ್ಕೆ ಬಳಕೆಯಾಗಿವೆ ಎನ್ನುವುದನ್ನು ಸಂಶೋಧಕರು ಕಂಡುಹಿಡಿಯಬೇಕು. ಇಲ್ಲದಿದ್ದರೆ ತಪ್ಪು ಮಾಹಿತಿ ಇದ್ದರೆ, ಆ ತಪ್ಪು ಹಾಗೆಯೇ ಮುಂದು ವರಿಯುತ್ತದೆ. ಅನಂತರ ಯಾವ ಮಾಹಿತಿಯನ್ನು ಎಲ್ಲಿಂದ ಪಡೆಯಲಾಗಿದೆ ಎನ್ನುವ ವಿವರಣೆಯನ್ನು ಸಂಶೋಧಕರು ಕೊಡುವುದು ಅತ್ಯವಶ್ಯಕವಾಗಿದೆ.[3] ಈ ರೀತಿಯಾಗಿ ಆಕರಗಳ ಬಳಕೆ ಮುಖ್ಯ.

ತಮ್ಮ ವಿಷಯಕ್ಕೆ ತಕ್ಕಂತೆ ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳುವ ಸ್ವಾತಂತ್ರ್ಯ ಸಂಶೋಧಕರಿಗೆ ಇರುತ್ತದೆ. ಚರಿತ್ರೆ ಸಂಶೋಧನೆಯಲ್ಲಿ ವಿವಿಧ ಪಂಥಗಳ ಹಿನ್ನೆಲೆಯಲ್ಲಿ ಚರಿತ್ರೆ ನಿರ್ಮಾಣಗೊಳ್ಳುತ್ತಿರುವುದರಿಂದಾಗಿ ಆಕರಗಳು ಸಂಶೋಧಕರು ಉದ್ದೇಶಗಳಿಗೆ ಹೆಚ್ಚಾಗಿ

ಬಳಕೆಯಾಗುತ್ತಿರುತ್ತವೆ. ಸಂಶೋಧಕರು ಕೃತಿಯ ಧೋರಣೆಯನ್ನು ಅರ್ಥ ಮಾಡಿಕೊಳ್ಳುವುದರ ಮೂಲಕ ಆಕರಗಳ ಸ್ವರೂಪವನ್ನು ಕಂಡುಹಿಡಿಯಬೇಕಾಗುತ್ತದೆ. ಆಕರಗಳು ಸಂಶೋಧಕರ ಧೋರಣೆಗಳಿಗನುಗುಣವಾಗಿ ಬಳಕೆಯಾಗಿರುತ್ತವೆ. ಆನುಷಂಗಿಕ ಮಾಹಿತಿ ಸಂಗ್ರಹ ಸಂದರ್ಭದಲ್ಲಿ ಸಂಶೋಧಕರಿಗೆ ತಾವು ಯಾವ ವಿಷಯದ ಕುರಿತು ಮಾಹಿತಿ ಸಂಗ್ರಹಿಸಬೇಕೆಂದಿರುತ್ತಾರೋ ಅದರ ಕುರಿತು ಸ್ವಲ್ಪಮಟ್ಟಿಗೆ ಪರಿಚಯವಾದರೂ ಇರಬೇಕಾಗುತ್ತದೆ. ಆನುಷಂಗಿಕ ಆಕರಗಳು ಸಂಶೋಧಕರನ್ನು ಆಕರಗಳು ಸಿಗುವ ಕಡೆಗೆ ಒಯ್ಯುತ್ತವೆ. ಶಾಸನಗಳನ್ನು ಆಧರಿಸಿ ಒಂದು ಕೃತಿ ರಚನೆಯಾಗಿದ್ದರೆ, ಆ ಕೃತಿಯಲ್ಲಿ ಶಾಸನಗಳ ಸಂಪೂರ್ಣ ಪಾಠ ಬಂದಿರುತ್ತದೆ ಎಂಬುದಾಗಿ ತಿಳಿಯಲು ಸಾಧ್ಯವಾಗುವುದಿಲ್ಲ. ಶಾಸನಗಳನ್ನು ಅರಸಕೇಂದ್ರಿತ ಚರಿತ್ರೆ ನಿರ್ಮಾಣಕ್ಕೆ ಹೆಚ್ಚಾಗಿ ಬಳಸಿಕೊಳ್ಳಲಾಗಿದೆ. ಇದರರ್ಥ ಶಾಸನಗಳಲ್ಲಿ ಅಂದಿನ ಸಂದರ್ಭದ ಸಾಮಾಜಿಕ ಮತ್ತು ಆರ್ಥಿಕ ವಿವರಗಳು ಇಲ್ಲ ಎಂದಲ್ಲ. ಆ ವಿಚಾರಗಳನ್ನು ಪತ್ತೆ ಹಚ್ಚಬೇಕು. ಸಂಶೋಧಕರಿಗೆ ಶಾಸನಗಳನ್ನು ಓದಿ ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಇಲ್ಲದಿದ್ದರೆ ಶಾಸನತಜ್ಞರ ನೆರವನ್ನು ಪಡೆದು ಮಾಹಿತಿ ಸಂಗ್ರಹಿಸಬಹುದು. ಶಾಸನ ಪ್ರಾಥಮಿಕ ದಾಖಲೆಯಾದರೂ, ಅದನ್ನು ಉಪಯೋಗಿಸಿ ಕೃತಿ ರಚನೆಗೊಂಡಾಗ ಕೃತಿಯು ಆನುಷಂಗಿಕ ದಾಖಲೆಯಾಗುತ್ತದೆ. ಮೂಲ ಆಕರಗಳು ಆನುಷಂಗಿಕ ಆಕರಗಳಲ್ಲಿ ಉಲ್ಲೇಖಿತವಾಗಿರುತ್ತವೆ. ಈ ಆಕರಗಳ ಬಗೆಗೆ ಸಂಶೋಧಕರಲ್ಲಿ ಖಚಿತತೆ ಇರಬೇಕು. ದೋಷಗಳ ಬಗೆಗೆ ಗಮನ ಹರಿಸಬೇಕು. ತಮ್ಮ ಸಂಶೋಧನೆಗೆ ಬಳಸಿಕೊಂಡ ಆನುಷಂಗಿಕ ದಾಖಲೆಗಳ ಮಾಹಿತಿಯನ್ನು ನೀಡದಿದ್ದರೆ ಮೂಲಮಾಹಿತಿ ಪರಿಚಯವಾಗಲು ಸಾಧ್ಯವಿಲ್ಲ. ಅದೇ ರೀತಿ ಮೂಲಮಾಹಿತಿ ಯಾವುದು, ಅದರ ಆಶಯಗಳೇನು ಹಾಗೂ ಸಂಶೋಧಕರ ಅಭಿಪ್ರಾಯಗಳೇನು ಅಥವಾ ಸಂಶೋಧಕರು ಮೂಲಮಾಹಿತಿಗಳನ್ನು ನೋಡುವ ಬಗೆ ಹೇಗೆ ಅಥವಾ ಸಂಶೋಧಕರ ಅಧ್ಯಯನ ವಿಧಾನಗಳೇನು ಎನ್ನುವುದು ತಿಳಿಯಲು ಸಾಧ್ಯವಿಲ್ಲ. ಸಾಧ್ಯವಾದ ಮಟ್ಟಿಗೆ ಮೂಲ ಆಕರಗಳನ್ನು ನೋಡುವ ಹಾಗೂ ಅದರಲ್ಲಿರುವ ಮಾಹಿತಿಗಳನ್ನು ಸಂಗ್ರಹಿಸುವ ಕೆಲಸವನ್ನು ಸಂಶೋಧಕರು ಮಾಡಬೇಕಾಗುತ್ತದೆ. ವಸಾಹತು ಸಂದರ್ಭದ ವರದಿಗಳು ಹಾಗೂ ದಾಖಲೆಗಳಿಂದ ಮಾಹಿತಿ ಸಂಗ್ರಹಿಸುವಾಗ ಸಂಶೋಧಕರಿಗೆ ವಸಾಹತುಶಾಹಿ ಧೋರಣೆ ಏನು ಎನ್ನುವುದು ತಿಳಿದಿರಬೇಕು. ಅವು ಹೆಚ್ಚಾಗಿ ಅಧಿಕಾರಿಗಳ ದೃಷ್ಟಿಕೋನದ ಹಿನ್ನೆಲೆಯಲ್ಲಿ ನಿರ್ಮಾಣ ವಾದಂತವು. ಇವು ಅಧಿಕೃತ ದಾಖಲೆಯೆಂದು ಘೋಷಿಸಿಕೊಂಡವು. ಆದುದರಿಂದ ಇವುಗಳನ್ನು ಎಚ್ಚರಿಕೆಯಿಂದ ಅಭ್ಯಸಿಸಬೇಕು. ರಾಜಪ್ರಭುತ್ವದ ಸಂದರ್ಭದಲ್ಲಿನ ಆಕರಗಳನ್ನು ಪರೀಕ್ಷಿಸಲು ಸಮಕಾಲೀನ ಆಕರಗಳೊಂದಿಗೆ ತುಲನೆ ಮಾಡಬೇಕಾಗುತ್ತದೆ. ಮುಖ್ಯವಾಗಿ ಹೇಳಬೇಕಾದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ರಚನೆಗೊಳ್ಳುವ ಬಹುತೇಕ ಎಲ್ಲಾ ಪಿಎಚ್.ಡಿ. ಮಹಾಪ್ರಬಂಧಗಳು ಪ್ರಾಥಮಿಕ ಮತ್ತು ಆನುಷಂಗಿಕ ಮೂಲಗಳಿಂದ ಮಾಹಿತಿಗಳನ್ನು ಪಡೆದುಕೊಂಡು ನಿರ್ಮಾಣ ವಾಗಿರುವುಗಳೇ ಆಗಿವೆ. ಸಂಶೋಧಕರು ಸ್ಪಷ್ಟವಾದ ಉದ್ದೇಶವನ್ನು ಹೊಂದಿದ್ದು, ತಮ್ಮ ಅಧ್ಯಯನಕ್ಕೆ ಪೂರಕವಾದ ಮಾಹಿತಿಗಳೆಲ್ಲವನ್ನೂ ಆರಂಭದ ಅಧ್ಯಾಯದಲ್ಲಿ ಚರ್ಚಿಸಿರುತ್ತಾರೆ ಹಾಗೂ ಯಾವ ಉದ್ದೇಶಕ್ಕಾಗಿ ಆಯ್ಕೆ ಮಾಡಿಕೊಂಡೆವು ಎಂಬುದಕ್ಕೆ ಸ್ಪಷ್ಟೀಕರಣವನ್ನೂ ಕೊಟ್ಟಿರುತ್ತಾರೆ. ಪಿಎಚ್.ಡಿ. ಸಂಶೋಧನೆಯಲ್ಲಿ ಆಕರಗಳ ಲಭ್ಯತೆ ಬಹುಮುಖ್ಯವಾದದ್ದು. ಕೆಲವು ವಿಷಯಗಳಿಗೆ ಆನುಷಂಗಿಕ

ಆಕರಗಳು ಸಿಗದೇ ಇರಬಹುದು. ಅಂಥ ಸಂದರ್ಭಗಳಲ್ಲಿ ಪ್ರಾಥಮಿಕ ಆಕರಗಳಿಂದಲೇ ಮಾಹಿತಿಗಳನ್ನು ಸಂಗ್ರಹಿಸಬೇಕಾಗುತ್ತದೆ. ಆಕರಗಳು ಸಾಂಪ್ರದಾಯಿಕ ಮಾದರಿಯಿಂದ ಹೊರ ಬರುತ್ತಿವೆ. ಆಧುನಿಕ ಮತ್ತು ಆಧುನಿಕೋತ್ತರ ಚಿಂತನೆಗಳು ಚರಿತ್ರೆ ಅಧ್ಯಯನದ ಒಟ್ಟು ಸ್ವರೂಪವನ್ನೇ ಬದಲಾಯಿಸಿಬಿಟ್ಟಿವೆ. ಹೀಗಾಗಿ ಈ ಆಕರಗಳ ಸಂಗ್ರಹಣೆ, ವಿಂಗಡನೆ ಹಾಗೂ ವಿಶ್ಲೇಷಣೆ ಇವುಗಳೆಲ್ಲವೂ ಚಿಂತನೆಯ ಭಾಗಗಳಾಗಿ ಬೇರೆ ಬೇರೆ ಸಿದ್ಧಾಂತಗಳ ರೂಪುಗೊಳ್ಳುವಿಕೆಯಲ್ಲಿ ಮಹತ್ವವನ್ನು ಪಡೆದುಕೊಳ್ಳುತ್ತಿವೆ.[೩] ಈ ಹಿನ್ನೆಲೆಯಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ವಿಶ್ಲೇಷಣೆ ಪ್ರಮುಖವಾದುದು. ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಕೈಫಿಯತ್ತುಗಳು, ದಾಖಲೆಗಳು, ಕಡತಗಳು, ಪ್ರಾಥಮಿಕ ಆಕರಗಳಾಗಿ ಹಾಗೂ ಈ ಪ್ರಾಥಮಿಕ ಆಕರಗಳನ್ನು ಬಳಸಿಕೊಂಡು ರಚನೆ ಆದ ಕೃತಿಗಳನ್ನು ಆನುಷಂಗಿಕ ಆಕರಗಳಾಗಿ ಚರ್ಚೆ ಮಾಡಲಾಗಿದೆ.

### ೨.೧. ಶಾಸನಗಳು

ಇತಿಹಾಸದ ಪುನಾರಚನೆಗೆ ಇರುವ ಮೂಲ ಆಧಾರಗಳು ಎರಡು ಬಗೆಯವು. ಅವು ಅಲಿಖಿತ ಮತ್ತು ಲಿಖಿತ ಆಧಾರಗಳು. ಲಿಖಿತ ಆಧಾರಗಳಲ್ಲಿ ಅಗ್ರಸ್ಥಾನ ಸಲ್ಲಬೇಕಾದ್ದು ಶಾಸನಗಳಿಗೆ. ಇತಿಹಾಸ ಪುನಾರಚನೆಗೆ ಶಾಸನಗಳು ಮುಖ್ಯವಾದವು. ಮೈಸೂರು ವಿಶ್ವವಿದ್ಯಾನಿಲಯವು ಹೊರ ತಂದಿರುವ **ಎಫಿಗ್ರಾಫಿಯ ಕರ್ನಾಟಿಕ ಮಾಲೆಯ ೫ನೆಯ ಪರಿಷ್ಕೃತ ಸಂಪುಟದಲ್ಲಿ**(೧೯೭೬) ಮೈಸೂರು ತಾಲೂಕಿನ ೨೨೫ ಶಾಸನಗಳು ಪ್ರಕಟವಾಗಿವೆ. ಇವುಗಳಲ್ಲಿ ನಗರದ್ದೆ ೧೦೫ ಶಾಸನಗಳಿವೆ. ಮೈಸೂರಿನ ಶಾಸನಗಳು ವಿವಿಧ ರಾಜವಂಶಗಳಿಗೆ ಸೇರಿದವು. ಗಂಗ, ನೊಳಂಬ, ಚಾಲುಕ್ಯ, ಚೋಳ, ಹೊಯ್ಸಳ, ವಿಜಯನಗರ ಇತ್ಯಾದಿ. ಒಟ್ಟು ಶಾಸನಗಳಲ್ಲಿ ಸುಮಾರು ಅರ್ಧದಷ್ಟು ಶಾಸನಗಳು ಮೈಸೂರು ಒಡೆಯರ ಕಾಲದ್ದಾಗಿರುವುದು ಸ್ವಾಭಾವಿಕ. ಇವುಗಳಲ್ಲಿ ಎಂಟು ತಾಮ್ರ ಶಾಸನಗಳಿವೆ. ಅಲ್ಲದೆ, ಭಕ್ತ ವಿಗ್ರಹ, ಪೀಠ, ಲೋಹದ ತಗಡು, ಬೆಳ್ಳಿ ಮತ್ತು ಚಿನ್ನದ ವಸ್ತುಗಳು ಮೊದಲಾದ ಅನೇಕ ಸಾಮಗ್ರಿಗಳ ಮೇಲೆ ಶಾಸನಗಳಿವೆ. ಸಿಂಹಾಸನದ ಛತ್ರಿಯ ಮೇಲೆ, ಚಾಮುಂಡೇಶ್ವರಿಯ ನಕ್ಷತ್ರಮಾಲಿಕೆಯ ಮೇಲೆ ಕೂಡ ದೊಡ್ಡ ಶಾಸನಗಳಿವೆ. ಮೈಸೂರಿನ ಒಡೆಯರ ವಂಶಾವಳಿಯನ್ನು ವಿವರವಾಗಿ ನಿರೂಪಿಸುವ ಸಂತಾನಾಂಬುಜ ಜಗನ್ಮೋಹನ ಅರಮನೆಯಲ್ಲಿದೆ(ಶಾಸನ ಸಂಖ್ಯೆ-೨೬). ಈ ಶಾಸನಗಳಲ್ಲಿ ಪ್ರಧಾನವಾಗಿ ಬಳಕೆಯಾದ ಭಾಷೆ ಮತ್ತು ಲಿಪಿ ಕನ್ನಡವೇ. ತಮಿಳು, ಅರೇಬಿಕ್ ಮತ್ತು ಸಂಸ್ಕೃತ ಭಾಷೆಯ ಕೆಲವು ಶಾಸನಗಳಿವೆ. ನಾಗರಲಿಪಿಯನ್ನು ಬಳಸಿದ ಉದಾಹರಣೆಗಳುಂಟು.

ಚಿಕ್ಕದೇವರಾಜವೊಡೆಯನ ಆಳ್ವಿಕೆಗೆ ಸೇರಿದ, ಹತ್ತು ಹಲಗೆಗಳ ಮೇಲೆ ಕಂಡರಿಸಲಾದ ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿರುವ ತಾಮ್ರಶಾಸನವಿದೆ. ಕ್ರಿ.ಶ.೧೬೭೪ರ ಡಿಸೆಂಬರ್‌ನಲ್ಲಿ ಹಾಕಿಸಿರುವ ಈ ಶಾಸನವು ರಾಜನು ದಾದೋಜಿ, ಜೈ ತಜಿ, ಶಂಭು, ಕುತುಪಷಾಹ ಮತ್ತು ಬಸವರನ್ನು ಸೋಲಿಸಿದುದನ್ನು ತಿಳಿಸುತ್ತದೆ. ಇವರಲ್ಲಿ ಮೊದಲ ಮೂವರು ಬಿಜಾಪುರದ ಸುಲ್ತಾನನ ಕೈಕೆಳಗಿನ ಮರಾಠಾ ಸರದಾರರು, ಗೋಲ್ಕೊಂಡದ ಸುಲ್ತಾನನಾಗಿದ್ದ ಕುತುಬ್ ಷಾ ಮತ್ತು

ಬಸವನು ಇಕ್ಕೇರಿಯ ಬಸಪ್ಪನಾಯಕ ಚಿಕ್ಕದೇವರಾಯನ ಆಳ್ವಿಕೆಯಲ್ಲಿ ಇವರೆಲ್ಲರೂ ಮೈಸೂರಿನ ಮೇಲೆ ದಾಳಿ ಮಾಡಿ ಸೋತರು. ಇವರು ಅನುಭವಿಸಿದ ಇಂಥ ಒಂದು ಸೋಲನ್ನು ಈ ಶಾಸನ ಸೂಚಿಸುವಂತೆ ತೋರುತ್ತದೆ. ಚಿಕ್ಕದೇವರಾಜನು ಪಟ್ಟಕ್ಕೆ ಬಂದ ಮೇಲೆ ಹತ್ತು ವರ್ಷಗಳ ಕಾಲ ಇಂಥ ದಾಳಿ ನಡೆಯುತ್ತಲೇ ಇದ್ದುದು ತಿಳಿದುಬರುತ್ತದೆ. ಬಾಲೆಂದುನಗರದ(ಯಳಂದೂರು) ಪ್ರಭುಲಕ್ಷ್ಮ ವರ್ಮನ ಮಗಳು ದೇವಮಾಂಬಾ ಅವನ ಪತ್ನಿ. ಮೇಲುಕೋಟೆಯಲ್ಲಿ ವಜ್ರಮಕುಟಿ ಉತ್ಸವಕ್ಕೆ ಆದ್ಯತೆ ನೀಡಿದ್ದಲ್ಲದೇ ಗಜೇಂದ್ರೋತ್ಸವವನ್ನು ಈತ ಆರಂಭಿಸಿದನೆಂದು ತಿಳಿದು ಬರುತ್ತದೆ. ಪಿತೃಗಳಿಗೆ ವೈಕುಂಠ ಪ್ರಾಪ್ತಿಯಾಗಲೆಂದು ಕೌಂಡಿನೀ ತೀರದಲ್ಲಿ ಪರಮವಾಸುದೇವ ಆಲಯವನ್ನೂ ಗ್ರಾಮಸ್ಥರಿಗೆ ಅಗ್ರಹಾರವನ್ನೂ ಇವನು ಸ್ಥಾಪಿಸಿದ. ಚಿಕ್ಕದೇವೇಂದ್ರ ಶ್ರೀವೈಷ್ಣವ ಪ್ರಿಯನಂತೆ. ಆತನ ಆದೇಶದ ಮೇರೆಗೆ ವಿದ್ವಾಂಸನಾದ ರಾಮಾಯಣಂ ತಿರುಮಲಾರ್ಯ ಈ ತಾಮ್ರ ಶಾಸನವನ್ನು ರಚಿಸಿದನೆಂದು ಹೇಳಿದೆ. ದಾನ ನೀಡಲಾದ ಗ್ರಾಮಗಳ ವಾರ್ಷಿಕ ಆದಾಯ ೮೨೮ ನಿಷ್ಕಗಳು. ಉಕ್ಕಲ್ಗೆರೆಯ(ಸಂಖ್ಯೆ-೯೭) ಸೋಮನಾಥಪುರದಲ್ಲಿ ದೇವರಾಜ ಒಡೆಯನ ಮಗ ಕಂಠೀರವ ಅರಸು ಪಟ್ಟಾಭಿರಾಮ ದೇವಾಲಯವನ್ನು ಕಟ್ಟಿಸಿ ದೇವರಿಗೆ ಉಕ್ಕಲ್ಗೆರೆ ಗ್ರಾಮವನ್ನು ದತ್ತಿ ಬಿಟ್ಟಿದ್ದನ್ನು ತಿಳಿಸುತ್ತದೆ. ಶಾಸನದ ಕಾಲ ಕ್ರಿ.ಶ.೧೬೭೬ ಆಗಿದ್ದು, ಚಿಕ್ಕದೇವರಾಜನು ಆಳುತ್ತಿದ್ದ ಕಾಲ. ದಾನಿಯು ಚಿಕ್ಕದೇವರಾಯನ ತಮ್ಮನಾಗಿದ್ದ ಅದೇ ಕಂಠೀರವ ಅರಸನೆಂಬ ಹೆಸರಿನವನಾಗಿರ ಬಹುದು. ಇವರಿಬ್ಬರೂ ಮುಪ್ಪಿನ ದೇವರಾಜನ ಹಿರಿಯ ಮಗನಾದ ದೊಡ್ಡ ದೇವರಾಜವೊಡೆಯನ ಮಕ್ಕಳು. ಮುಪ್ಪಿನ ದೇವರಾಜವೊಡೆಯನು ರಾಜ್ಯವನ್ನು ತನ್ನ ತಮ್ಮ ದೇವರಾಜ(ಕೆಂಪದೇವರಾಜ)ನಿಗೆ ಬಿಟ್ಟುಕೊಟ್ಟಿದ್ದನು. ಈ ದೇವರಾಜನನ್ನು ಕಂಠೀರವ ನರಸಿಂಹರಾಜನು ದತ್ತು ಪಡೆದಿದ್ದನು. ದೇವರಾಜನ ನಂತರ ಅವನ ಇಬ್ಬರನ್ನು ದೇವರಾಜವೊಡೆಯನು ತನ್ನ ಮಕ್ಕಳಂತೆಯೇ ಭಾವಿಸಿದ್ದನು. ಈ ಶಾಸನದಲ್ಲಿ ದತ್ತು ಪಡೆದ ವಿಷಯ ಪ್ರಸ್ತಾಪವಾಗಿದೆ.

ಸಂಖ್ಯೆ-೨೧೩ ಚಿಕ್ಕದೇವರಾಯವೊಡೆಯನು ತನ್ನ ತಂದೆ ಸ್ಥಾಪಿಸಿದ್ದ ದೇವರಾಯ ಅಗ್ರಹಾರದ ಗೋಪಾಲಕೃಷ್ಣ ದೇವಾಲಯದಲ್ಲಿನ ದೀಪದ ಸೇವೆಗಳಿಗೆ ಭೂದಾನವಿತ್ತ. ಶ್ರೀಕೃಷ್ಣಜಯಂತಿಯಂದು ಈ ದಾನವನ್ನು ನೀಡಲಾಯಿತು. ಅರಮನೆ ಆವರಣದಲ್ಲಿರುವ ಶ್ವೇತವರಾಹ ಸ್ವಾಮಿ ದೇವಾಲಯದ ಉತ್ಸವ ವಿಗ್ರಹವನ್ನು ಮಾಡಿಸಿಕೊಟ್ಟದ್ದು ಈ ದೊರೆ ಎಂದು ತೋರುತ್ತದೆ. (ಸಂಖ್ಯೆ-೬೬). ಕ್ರಿ.ಶ.೧೭೨೫ರ(ಶಾಸನ ಸಂಖ್ಯೆ ೧) ಇಮ್ಮಡಿ ಕಂಠೀರವ ನರಸರಾಜನ ಮಗ ದೊಡ್ಡಕೃಷ್ಣರಾಜ ಎಂಬ ಹೆಸರಿನಿಂದ ಪ್ರಸಿದ್ಧನಾದ ಒಂದನೇ ಕೃಷ್ಣರಾಜ ಒಡೆಯನ ಆಳ್ವಿಕೆಗೆ ಸೇರಿದುದು. ಮೂಗೂರ ಪ್ರಭು ಸೋಮರಾಜವೊಡೆಯರ ಮೊಮ್ಮಗ ಕೃಷ್ಣೇ ಅರಸಿನ ಧರ್ಮಪತ್ನಿ ಚಾಮಮ್ಮಣ್ಣಿಯ ಮಂಟಪವೊಂದನ್ನು ಕಟ್ಟಿಸಿದ ವಿಷಯ ಇದರಲ್ಲಿದೆ. ಕ್ರಿ.ಶ.೧೭೪೧ರ(ಶಾಸನ ಸಂಖ್ಯೆ ೧೧೭) ಐದು ತಾಮ್ರದ ಹಲಗೆಗಳ ಮೇಲೆ ನಾಗರಲಿಪಿಯಲ್ಲಿ ಕಂಡರಿಸಲಾದ ಸಂಸ್ಕೃತ, ಕನ್ನಡ ಭಾಷೆಗಳಲ್ಲಿ ಇರುವ ಶಾಸನ, ದಳವಾಯಿ ದೇವರಾಜನ ತಮ್ಮ ಸರ್ವಾಧಿಕಾರಿ ಕಳಲೆಯ ನಂಜರಾಜನ ಕೋರಿಕೆಯ ಮೇರೆಗೆ ಕಣ್ವಪುರಿ(ಕನ್ನಂಬಾಡಿ)ಗೆ ಸೇರಿದ ನಂಜರಾಜಸಮುದ್ರ ಎಂಬ ಅಗ್ರಹಾರವನ್ನು ಇಮ್ಮಡಿ ಕೃಷ್ಣರಾಜವೊಡೆಯನು ದತ್ತಿ ಬಿಟ್ಟನೆಂದು ಇದರಲ್ಲಿ ಹೇಳಿದೆ. ಈ ನಂಜರಾಜನು ಬಸವರಾಜನ ಮಗ ನಂಜರಾಜನು ತೀರಿಕೊಂಡ ನಂತರ ಕ್ರಿ.ಶ.೧೭೩೯ರಲ್ಲಿ ಸರ್ವಾಧಿಕಾರಿಯಾದನು. ಮೈಸೂರಿನ

ಒಡೆಯರು ಮತ್ತು ಕಳಲೆ ಅರಸರ ವಂಶಾವಳಿಯನ್ನು ಈ ಶಾಸನ ಕೊಡುತ್ತದೆ. ಕ್ರಿ.ಶ.೧೭೪೯ರ(ಶಾಸನ ಸಂಖ್ಯೆ ೧೬) ದೀರ್ಘಶಾಸನಗಳಲ್ಲೊಂದು. ಹಲಗೆಯ ಒಂದೊಂದು ಮುಖದ ಮೇಲೂ ಸರಾಸರಿ ೪೫ ಸಾಲುಗಳಂತೆ ಒಟ್ಟು ೧೩೯೦ ಸಾಲುಗಳನ್ನು ಇದರ ಹದಿನಾರು ಹಲಗೆಗಳ ಮೇಲೆ ನಾಗರಿಯಲ್ಲಿ ಕಂಡರಿಸಿದೆ. ಇದರಲ್ಲಿಯೂ ಮೈಸೂರು ದೊರೆಗಳು ಮತ್ತು ಕಳಲೆ ಪಾಳೆಗಾರರ ವಂಶಾವಳಿಗಳಿವೆ(ಶಾಸನ ಸಂಖ್ಯೆ ೧೧೨).[೪] ಈ ಹಿನ್ನೆಲೆಯಲ್ಲಿ ಎಫಿಗ್ರಾಫಿಯ ಕರ್ನಾಟಿಕ ಮಾಲೆಯ ೫ನೇ ಪರಿಷ್ಕೃತ ಸಂಪುಟದಲ್ಲಿ ಮೈಸೂರು ಒಡೆಯರ ವಿಚಾರಗಳನ್ನು ತಿಳಿಸುವ ಶಾಸನಗಳನ್ನು ತಿಳಿಯಬಹುದು.

ಭಟ್ಟ ಜಿ.ಎಸ್., ಜೀನಹಳ್ಳಿ ಸಿದ್ಧಲಿಂಗಪ್ಪ ಅವರ ಸಂಪಾದಕತ್ವದಲ್ಲಿನ **ಮೈಸೂರು ದರ್ಶನ** ಕೃತಿಯಲ್ಲಿನ ಮೈಸೂರಿನ ಶಾಸನಗಳು ಎಂಬ ಲೇಖನವು ಮೈಸೂರಿನ ಚರಿತ್ರೆ ಕಟ್ಟುವಿಕೆಯಲ್ಲಿ ಬಹುಮುಖ್ಯವಾದುದು. ರಾಜ ಒಡೆಯರಿಂದ ಮೈಸೂರು ಸಂಸ್ಥಾನ ತನ್ನ ಸ್ವತಂತ್ರವಾದ ಅಸ್ತಿತ್ವವನ್ನು ಪಡೆದುಕೊಂಡಿತು. ಮೇಲುಕೋಟೆಯ ಚಲುವನಾರಾಯಣ ರಾಜವೊಡೆಯನ ಕುಲದೈವ. ಆತ ಆ ದೇವರಿಗೆ ಅರ್ಪಿಸಿದ ರಾಜಮುಡಿಯ ತೂಕ ರತ್ನಪಡಿ ಸಹಿತ-೧೪೪ ವರಹ ಮತ್ತು ೧ ಹಣ(ಸಂಖ್ಯೆ-೯೩) ತಿಳಿದುಬರುತ್ತದೆ. ಇದನ್ನು ೧೬೧೪ರಲ್ಲಿ ನೀಡಲಾಯಿತು. ಕ್ರಿ.ಶ.೧೬೬೦ರಲ್ಲಿ ದೇವರಾಜವೊಡೆಯ ಶ್ರೀರಂಗಪಟ್ಟಣದಿಂದ ರಾಜ್ಯವಾಳುತ್ತಿದ್ದನು(ಸಂಖ್ಯೆ-೯೨). ಅವನಿಗೆ ಹಿಂದೂರಾಯ ಸುರತ್ರಾಣ ಎಂಬ ವಿಜಯನಗರದ ಅರಸರ ಬಿರುದನ್ನು ಅನ್ವಯಿಸಿರುವುದು ಗಮನಾರ್ಹ. ಈ ದೊರೆಯು ತನ್ನ ತಂದೆ ತಾಯಿಗಳಿಗೆ ಪುಣ್ಯ ದೊರೆಯಬೇಕೆಂದು ಚಂದಕವಾಡಿ ಎಂಬ ಗ್ರಾಮವನ್ನು ಅದರ ಆರು ಉಪಗ್ರಾಮ ಸಹಿತವಾಗಿ ಮಂತ್ರಮೂರ್ತಿ ರಾಜೇಂದ್ರ ಭಾರತೀಸ್ವಾಮಿ ಎಂಬ ಯತಿಗೆ ನೀಡಿದನಂತೆ. ಆದರೆ ಈ ಯತಿಯನ್ನು ಗುರುತಿಸಲು ಸಾಧ್ಯವಾಗಿಲ್ಲ. ಇದೇ ದೊರೆಯು ಲಖಪ್ಪ ಎಂಬ ಜ್ಯೋತಿಷಿಗೆ ತೆರಕಣಾಂಬ ಸ್ಥಳಕ್ಕೆ ಸೇರಿದ ಲಕ್ಕೂರು ಗ್ರಾಮವನ್ನು ಸ್ವರ್ಣ ತುಲಾದನದ ಶುಭ ಸಂದರ್ಭದಲ್ಲಿ ಕ್ರಿ.ಶ.೧೬೬೫ರಲ್ಲಿ ದಾನ ನೀಡಿದನಂತೆ(ಸಂಖ್ಯೆ-೧೦೦). ಈ ರಾಜನ ಆಶ್ರಯ ಲಾಭವನ್ನು ಪಡೆದಿದ್ದ ಧನೋಜಿ ಎಂಬ ರತ್ನಪಡಿ ವ್ಯಾಪಾರಿಯು ಮಾಡಿದ ದಾನಗಳನ್ನು ಒಂದು ಶಾಸನದಲ್ಲಿ ವಿವರಿಸಿದೆ(ಸಂಖ್ಯೆ-೧೦೪). ಕನ್ನಂಬಾಡಿ ಸ್ಥಳದ ಹೊಸಕೋಟೆ ಗ್ರಾಮವನ್ನು ಅಗ್ರಹಾರವನ್ನಾಗಿ ಪರಿವರ್ತಿಸಿದ ಧನ್ನೋಜಿಯು ರಾಮೇಶ್ವರದಲ್ಲಿ ಅನ್ನಛತ್ರ, ಸುಬ್ರಹ್ಮಣ್ಯರಲ್ಲಿ ರಥೋತ್ಸವ, ಕಾಶಿಯಲ್ಲಿ ದಾನಧರ್ಮ ಮುಂತಾದ ಹಲವು ಪುಣ್ಯ ಕಾರ್ಯಗಳನ್ನು ಮಾಡಿಸಿದ ವಿಷಯ ತಿಳಿದುಬರುತ್ತದೆ. ಈತ ಲಂಬಖರ್ಣಗೋತ್ರಜ ಹಾಗೂ ಆಶ್ವಸಾಯನ ಸೂತ್ರಕ್ಕೆ ಸೇರಿದವನಾಗಿದ್ದು, ಗುಜರಾತಿನಿಂದ ಬಂದವನು. ನಾನೋಜಿಶರ್ಮ ಮತ್ತು ಶಿವೋಜೀ ಕ್ರಮವಾಗಿ ಇವನ ತಾತ ಮತ್ತು ತಂದೆ. ತಾನು ಮಾಡಿದ ಅಗ್ರಹಾರಕ್ಕೆ ಧನ್ನೋಜಿರಾಮಭಾಯಮ್ಮಪುರ ಎಂಬ ಪ್ರತಿ ನಾಮಧೇಯ ಮಾಡುತ್ತಾನೆ. ಈ ಶಾಸನವನ್ನು ರಚಿಸಿದವನು ಅಲಸಿಂಗರಾಯನ ಮಗನಾದ ತಿರುಮಲಾರ್ಯ ಎಂದು ತಿಳಿದುಬರುತ್ತದೆ.[೫] ಕಾವೇರಿ ನದಿಗೆ ಕಟ್ಟೆಯೊಂದನ್ನು ಟಿಪ್ಪು ಸುಲ್ತಾನ ಕಟ್ಟಿಸಿದ ವಿಷಯ ಇದರಲ್ಲಿದ್ದು, ಈ ಶಾಸನ ಸಯ್ಯಿದ್ ಜಾಫರ್ ಬರೆದವನಾಗಿದ್ದಾನೆ. ಮುಮ್ಮಡಿ ಕೃಷ್ಣರಾಜ ಒಡೆಯರ ಶಾಸನಗಳು ಸಮೃದ್ಧವಾಗಿವೆ. ಅವು ಕ್ರಿ.ಶ.೧೮೧೧ರಿಂದ ೧೮೬೦ರವರೆಗಿನ ತೇದಿಗಳನ್ನು ಹೊಂದಿವೆ. ಕೆಲವು

ತೇದಿರಹಿತವಾಗಿದ್ದರೂ ೧೯ನೆಯ ಶತಮಾನದ್ದೆಂಬುದು ನಿಶ್ಚಿತ. ಇವರ ಕಾಲದಲ್ಲಿ ಚಿನ್ನ ಮತ್ತು ಬೆಳ್ಳಿಯ ವಸ್ತುಗಳು, ಹಿತ್ತಾಳೆಯ ಬಾಗಿಲುವಾಡಗಳು, ಮೂರ್ತಿಗಳು, ವಾಹನಶಿಲ್ಪಗಳು, ರಥ, ವಜ್ರದ ತೊಟ್ಟಿಲು-ಹೀಗೆ ಹಲವು ಸಾಮಗ್ರಿಗಳ ಮೇಲೆ ಶಾಸನಗಳು ಅವರ ದಾನಶೀಲತೆಯನ್ನು ದೈವಭಕ್ತಿಯನ್ನು ಅಭಿವ್ಯಕ್ತಿಸುತ್ತವೆ. ಚಾಮುಂಡೇಶ್ವರಿ ದೇವಿಗೆ ಅರ್ಪಿಸಿದ ನಕ್ಷತ್ರಮಾಲಿಕೆಯಲ್ಲಿನ ಶ್ಲೋಕಗಳು(ಸಂಖ್ಯೆ ೧೫೭) ಅವರ ರಚನೆಗಳಾಗಿವೆ. ಪ್ರತಿ ಶ್ಲೋಕದ ಕೊನೆಯ ಪಾದವು 'ಚಾಮುಂಡಾಂಬಾಗತಿರ್ಮಮ' ಎಂದು ಅಂತ್ಯಗೊಳ್ಳುತ್ತದೆ. ಜಗನ್ಮೋಹನ ಅರಮನೆಯಲ್ಲಿರುವ ಹಿತ್ತಾಳೆಯಲ್ಲಿ ಕೆತ್ತಲಾದ ವಂಶಾಂಬುಜವು ಮೈಸೂರಿನ ಅರಸರ ವಿವರಗಳನ್ನು ನೀಡುವ ಅಪೂರ್ಣ ದಾಖಲೆಯಾಗಿದೆ(ಸಂಖ್ಯೆ ೨೬). ಮನೋರಂಜನ ಮಹಲು(ಸಂಖ್ಯೆ ೧೩೪), ತುಲಾಭಾರ ಸ್ತಂಭ (ಸಂಖ್ಯೆ ೬೩), ಸೂರ್ಯಮಂಡಲ(ಸಂಖ್ಯೆ ೭೫), ಮಠ(ಸಂಖ್ಯೆ ೧೬೩), ರಾಜಮುಡಿ(ಸಂಖ್ಯೆ ೯೫), ಶ್ರೀಕಂಠಮುಡಿ(ಸಂಖ್ಯೆ ೯೬), ಗೋಪುರ(ಸಂಖ್ಯೆ ೧೪೮) ಇವೇ ಮೊದಲಾದವು ಅವರ ಧರ್ಮಬುದ್ಧಿಗೆ ಸಾಕ್ಷಿಗಳಾಗಿವೆ.[೬] ಮೈಸೂರು ನಗರದಲ್ಲಿ ದೊರೆತ ಶಾಸನಗಳು, ದೇವಾಲಯಗಳ ನಿರ್ಮಾಣಕ್ಕೆ ಅಗ್ರಹಾರಗಳ ಸ್ಥಾಪನೆಗೆ ಸಂಬಂಧಿಸಿದಂತೆ ಕೆಲವು ಸ್ವಾರಸ್ಯಕರ ಸಂಗತಿಗಳನ್ನು ಹೇಳುತ್ತವೆ. ಮುಮ್ಮಡಿ ಕೃಷ್ಣರಾಜ ಒಡೆಯರ ಮೂವರು ಧರ್ಮಪತ್ನಿಯರಾದ ದೇವಮ್ಮಾಜಿ, ಲಿಂಗಾಜಮ್ಮಣ್ಣಿ ಮತ್ತು ಚೆಲುವಾಜಮ್ಮಣ್ಣಿ ಅವರು ತಮ್ಮ ತಮ್ಮ ಹೆಸರುಗಳಲ್ಲಿ ಕ್ರಮವಾಗಿ ದೇವಾಂಬಾ, ಲಿಂಗಾಂಬಾ ಮತ್ತು ಚಲುವಾಂಬಾ ಅಗ್ರಹಾರಗಳನ್ನು ತಾವುಗಳು ವಾಸಿಸುತ್ತಿದ್ದ ಅರಮನೆಯ ಭಾಗಗಳಿಂದ ಲಕ್ಷ್ಮೀವಿಲಾಸ ಮತ್ತು ರಮಾವಿಲಾಸಗಳೆಂಬ ಹೆಸರಿನಿಂದಲೂ ಸ್ಥಾಪಿಸಿದರು(ಶಾಸನ ಸಂಖ್ಯೆ ೧೬೬, ೨೦೫). ಕ್ರಿ.ಶ.೧೮೨೧ರಲ್ಲಿ ಲಕ್ಷ್ಮೀವಿಲಾಸದ ದೇವಮ್ಮಾಜಿ ಕೋಟೆಗೆ ಪಶ್ಚಿಮದಲ್ಲಿ ೨೧ ಮನೆಗಳನ್ನು ಮತ್ತು ಪ್ರಸನ್ನ ನಂಜುಡೇಶ್ವರ ದೇವಾಲಯವನ್ನು ಕಟ್ಟಿಸಿದರಲ್ಲದೆ ದೇವಾಂಬಾ ಅಗ್ರಹಾರವನ್ನು ಸ್ಥಾಪಿಸಿದರು(ಸಂಖ್ಯೆ ೧). ಲಿಂಗಾಜಮ್ಮಣ್ಣಿ ಪರಕಾಲ ಮಠವನ್ನು(ಸಂಖ್ಯೆ ३), ಮತ್ತು ಚೆಲುವಾಜಮ್ಮಣ್ಣಿ ಅಹೋಬಲ ಮಠವನ್ನು(ಸಂಖ್ಯೆ ೩) ಮಾಡಿಸಿಕೊಟ್ಟರು. ಕೆರೆ ನಿರ್ಮಾಣ ಪುಣ್ಯ ಕಾರ್ಯವೆಂಬ ಭಾವನೆ ನಮ್ಮಲ್ಲಿ ಇದ್ದುದು ಧರ್ಮದ ಸಾಮಾಜಿಕ ಸ್ವರೂಪವನ್ನು ತೋರಿಸಿಕೊಡುತ್ತದೆ.

ಸ್ಮಾರಕ ಶಾಸನಗಳಲ್ಲಿ ನಿಸಿಧಿಗಳು, ವೀರಗಲ್ಲು ಮತ್ತು ಸತಿಕಲ್ಲುಗಳು ಹಾಗೂ ಬೃಂದಾವನಗಳು ಸೇರಿವೆ. ಇವು ಕ್ರಿ.ಶ.೮ನೆಯ ಶತಮಾನದಿಂದ(ಸಂಖ್ಯೆ ೧೧೭) ೧೯ನೆಯ ಶತಮಾನದವರೆಗೆ (ಸಂಖ್ಯೆ ೨೮-೩೫) ವ್ಯಾಪಿಸಿವೆ. ಕ್ರಿ.ಶ.೧೨ನೆಯ ಶತಮಾನದ ವೀರಗಲ್ಲು ಶಾಸನವೊಂದರಲ್ಲಿ (ಸಂಖ್ಯೆ ೩೩) ಮೈಸೂರಿನ ಉಲ್ಲೇಖವಿದೆ. ಮೈಸುನಾಡು, ಮೈಸೆನಾಡು, ಮಯ್ಸೂರು ಮುಂತಾದವು ಇಂದಿನ ಮೈಸೂರಿನ ಪ್ರಾಚೀನ ರೂಪಗಳು. ವಾಸ್ತವವಾಗಿ ಮಹಿಷಾಸುರನ ಕಥೆ ಸೇರಿ ಮಹಿಷಪುರವಾದದ್ದು ಮುಂದಿನ ಕಾಲದ ಪರಿಕಲ್ಪನೆ. ಚಾಮುಂಡಿ ಬೆಟ್ಟ ಎಂಬ ಹೆಸರು ಚಾಲ್ತಿಗೆ ಬಂದದ್ದು ಮಬ್ಬಳದ ತೀರ್ಥ ಎಂಬ ಹೆಸರು ಬಂದ ಮೇಲೆ ಎನ್ನಬಹುದು.[೭]

ಮುಖ್ಯವಾಗಿ ಶಾಸನಗಳನ್ನು ಕುತೂಹಲದಿಂದ ವೀಕ್ಷಿಸಿ ದೇಶದ ಇತಿಹಾಸವನ್ನು ಬರೆಯುವುದರಲ್ಲಿ ಅವುಗಳಿಗಿರುವ ಮಹತ್ವದ ಸ್ಥಾನವನ್ನು ಗುರುತಿಸಿದವರಲ್ಲಿ ಕರ್ನಲ್ ಮೆಕೆಂಝಿ ಮೊದಲಿಗನು. ಇವನು ಸಂಗ್ರಹಿಸಿದ ಶಾಸನಗಳನ್ನು ಏಷಿಯಾಟಿಕ್ ಸೊಸೈಟಿಗೆ ಕಳುಹಿಸಿ ಪತ್ರಿಕೆಯ

೯ನೆಯ ಸಂಪುಟದಲ್ಲಿ ಶಾಸನಗಳನ್ನು ಹೆಸರಿಸಿದ್ದಾನೆ. ಆನಂತರ ಬಿ.ಎಲ್.ರೈಸ್ ಎಫಿಗ್ರಾಫಿಯಾ ಕರ್ನಾಟಿಕ ಸಂಪುಟವನ್ನು ಹೊರತಂದರು. ಒಟ್ಟಿನಲ್ಲಿ ಹೇಳುವುದಾದರೆ ಮೈಸೂರು ಸಂಸ್ಥಾನದ ಶಾಸನಗಳು ಒಡೆಯರ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಇತಿಹಾಸದ ಪುನಾರಚನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ ಎನ್ನಬಹುದು.

**ನಾಣ್ಯಗಳು:** ನರಸಿಂಹಮೂರ್ತಿ ಎ.ವಿ. ಅವರ **ಭಾರತೀಯ ನಾಣ್ಯ ಪರಂಪರೆ(೨೦೦೮)**[೮] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಕೃತಿಕಾರರು ಮೈಸೂರಿನ ಒಡೆಯರ ಚರಿತ್ರೆಯಲ್ಲಿ ನಾಣ್ಯಗಳ ಪಾತ್ರವನ್ನು ಚರ್ಚಿಸಿದ್ದಾರೆ. ಮೈಸೂರು ಒಡೆಯರು ವಿಜಯನಗರದ ದೊರೆಗಳ ಸಾಮಂತರಾಗಿದ್ದುದರಿಂದ, ವಿಜಯನಗರ ನಾಣ್ಯಪದ್ಧತಿಯನ್ನೇ ಅನುಸರಿಸಿ ನಾಣ್ಯಗಳನ್ನು ಟಂಕಿಸಿದರು. ಇವರು ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಹೊರ ತಂದಿದ್ದಾರೆ. ಇವರ ನಾಣ್ಯಗಳು ಪ್ರಾಚೀನ ಮತ್ತು ಆಧುನಿಕ ಕಾಲದ ನಾಣ್ಯಗಳಿಗೆ ಕೊಂಡಿಯಂತಿವೆ. ಶಿವ–ಪಾರ್ವತಿ, ವಿಷ್ಣು–ಲಕ್ಷ್ಮಿ, ಲಕ್ಷ್ಮೀ–ನರಸಿಂಹ, ಕೃಷ್ಣ ಮುಂತಾದ ದೇವತೆಗಳ ಚಿತ್ರಗಳಿರುವ ಹಾಗೂ ಚಾಮುಂಡಿಯ ವಾಹನ ಸಿಂಹ ಮತ್ತು 'ಚಾಮುಂಡಿ' ಎಂಬ ಬರಹವಿರುವ ನಾಣ್ಯಗಳನ್ನು ಇವರು ಮುದ್ರಿಸಿದರು. ಒಡೆಯರ್ ಅವರ ನಾಣ್ಯಗಳಲ್ಲಿ ನಾಗರಿ, ಕನ್ನಡ, ಪರ್ಶಿಯನ್ ಮತ್ತು ರೋಮನ್ ಲಿಪಿಯ ಬರಹವನ್ನು ಕಾಣಬಹುದು. ಒಡೆಯರ್ ಮನೆತನದಲ್ಲಿ ಮೊಟ್ಟ ಮೊದಲನೆಯ ಬಾರಿಗೆ ಟಂಕಶಾಲೆಯನ್ನು ಸ್ಥಾಪಿಸಿದವರು ಕಂಠೀರವ ನರಸರಾಜ ಒಡೆಯರ್. ಇವರ ವರಹ ಮತ್ತು ಅರ್ಧ ವರಹ ಚಿನ್ನದ ನಾಣ್ಯಗಳು ದೊರಕಿವೆ. ಇವುಗಳ ಮುಮ್ಮುಖದಲ್ಲಿ ಲಕ್ಷ್ಮಿಯೊಡನೆ ಕುಳಿತಿರುವ ಶಂಖ, ಚಕ್ರಧಾರಿಯಾಧ ನರಸಿಂಹನ ಚಿತ್ರವಿದೆ. ಹಿಮ್ಮುಖದಲ್ಲಿ 'ಶ್ರೀಕಂಠೀ/ರವನರ/ಸರಾಜ' ಎನ್ನುವ ಮೂರು ಸಾಲುಗಳ ನಾಗರಿ ಬರಹವಿದೆ. ಇದೇ ರೀತಿಯ ಚಿನ್ನದ ೫.೨ ಗ್ರೇನ್ ತೂಕದ ಹಣ ಮೌಲ್ಯದ ನಾಣ್ಯಗಳೂ ದೊರಕಿವೆ. ಈ ದೊರೆಯ ತಾಮ್ರದ ನಾಣ್ಯಗಳು ವಿವಿಧ ನಮೂನೆಗಳಲ್ಲಿ ದೊರಕಿವೆ. ಈ ನಾಣ್ಯಗಳ ಮುಮ್ಮುಖದಲ್ಲಿ ಕ್ರಮವಾಗಿ ಶಿವಲಿಂಗ, ನವಿಲು, ಮೀನು, ಕುಳಿತಿರುವ ಗಣಪತಿ, ಕಾರ್ತಿಕೇಯ, ಕಮಾನುಗಳ ಮಂಟಪದೊಳಗೆ ನಿಂತಿರುವ ದೇವತೆ, ವೈಷ್ಣವನಾಮದ ಚಿಹ್ನೆಯೊಡನೆ ಶಂಖ, ಚಕ್ರ, ವೃಷಭ ಮತ್ತು ಸೂರ್ಯ–ಚಂದ್ರ, ಆನೆಯ ಮೇಲಿನ ಸವಾರ ಮುಂತಾದ ಚಿತ್ರಗಳಿವೆ. ಈ ಎಲ್ಲಾ ನಾಣ್ಯಗಳ ಹಿಮ್ಮುಖದಲ್ಲಿಯೂ ವೃತ್ತದೊಳಗೆ 'ಕಂಟಿರವ'ಎನ್ನುವ ಕನ್ನಡ ಬರವಣಿಗೆ ಕಾಣಬರುತ್ತದೆ.

ಚಿಕ್ಕದೇವರಾಜ ಒಡೆಯರ್ ಅವರ ಕಾಲದ ಚಿನ್ನದ ನಾಣ್ಯಗಳು ಮುಖ್ಯ. ಬಾಲಕೃಷ್ಣನ ನಾಣ್ಯಗಳು ವಿಶೇಷವಾಗಿ ಜನಾನುರಾಗಿಯಾಗಿದ್ದವು. ಚಿನ್ನದ ನಾಣ್ಯದಲ್ಲಿ ಮುಮ್ಮುಖದಲ್ಲಿ ನಿಂತಿರುವ 'ಚಾಮುಂಡಿ' ಹಾಗೂ ಹಿಮ್ಮುಖದಲ್ಲಿ 'ಚಿಕ್ಕದೇವರಾಜ' ಎನ್ನುವ ಮೂರು ಸಾಲುಗಳ ನಾಗರಿ ಬರಹವಿದೆ. ಮುಮ್ಮಡಿ ಕೃಷ್ಣರಾಜ ಒಡೆಯರು ಸಂಗೀತ, ಸಾಹಿತ್ಯ ಮತ್ತು ಇತರ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ ದೊರೆ. ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಟಂಕಿಸಿದರು. ಇವರು ಟಂಕಿಸಿದ ಚಿನ್ನದ ವರಹದ ನಾಣ್ಯ ಇಕ್ಕೇರಿ ವರಹದ ಮಾದರಿಯಲ್ಲಿದ್ದುದರಿಂದ, ಅದಕ್ಕೆ ಹೊಸ ಇಕ್ಕೇರಿ ವರಹ ಎನ್ನುವ ಹೆಸರು ಬಂದಿತು. ಇದರ ಮುಮ್ಮುಖದಲ್ಲಿ ಕುಳಿತಿರುವ ಶಿವ–ಪಾರ್ವತಿಯರಿದ್ದಾರೆ. ಶಿವನ ಕೈಯಲ್ಲಿ ತ್ರಿಶೂಲ ಮತ್ತು ಮೃಗವಿದೆ. ಹಿಮ್ಮುಖದಲ್ಲಿ ಶ್ರೀ

ಎನ್ನುವ ಕನ್ನಡ ಅಕ್ಷರವಿದೆ. ಇನ್ನೊಂದು ನಾಣ್ಯದಲ್ಲಿ ಮುಮ್ಮುಖದಲ್ಲಿ ನೃತ್ಯ ಮಾಡುತ್ತಿರುವ ಬಾಲಕೃಷ್ಣನ ಚಿತ್ರವಿದೆ. ಅವನ ಕೈಯಲ್ಲಿ ಬೆಣ್ಣೆ ಮುದ್ದೆಯಿದೆ. ಹಿಮ್ಮುಖದಲ್ಲಿ 'ಜುಲುನ್ ೧೨೪೪ ಕಿಷನ್ ರಾಜ್ ವಡಿಯರ್ ಜರ್ಬ್ ಇ ಮಹಿಸೂರ್' ಎಂಬ ಪರ್ಶಿಯನ್ ಬರಹವಿದೆ. ಮುಮ್ಮಡಿ ಅವರ ತಾಮ್ರದ ನಾಣ್ಯಗಳಲ್ಲಿ ವೈವಿಧ್ಯತೆಯನ್ನು ಕಾಣುತ್ತೇವೆ. ವಿವಿಧ ಮೌಲ್ಯದ ಕಾಸುಗಳು, ೪೦ ರಿಂದ ೩ ಕಾಸಿನವರೆಗೆ ಈ ನಾಣ್ಯಗಳು ಈವರೆಗೆ ದೊರಕಿವೆ.[೯] ಹೀಗೆ ನಾಣ್ಯಗಳು ಒಡೆಯರ ಕಾಲದಲ್ಲಿ ವಿಶೇಷತೆಯನ್ನು ಹೊಂದಿವೆ.

ಮೈಸೂರಿನ ಚರಿತ್ರೆಯಲ್ಲಿ ಹೈದರ್ ಮತ್ತು ಟಿಪ್ಪು ಕಾಲ ಒಂದು ಪ್ರಮುಖವಾದ ಕಾಲಘಟ್ಟ, ನಾಣ್ಯಶಾಸ್ತ್ರ ದೃಷ್ಟಿಯಿಂದ ಇದು ಗಮನಾರ್ಹವಾದ ಕಾಲ. ಹೈದರ್‌ನ ಕಾಲದಲ್ಲಿ ಚಿನ್ನದ ವರಹವನ್ನು ಪಗೋಡ ಎಂದು ಕರೆಯಲಾಗುತ್ತಿತ್ತು. ಶಿವ ಮತ್ತು ಪಾರ್ವತಿಯ ಚಿತ್ರಗಳನ್ನು ಈ ನಾಣ್ಯಗಳ ಮೇಲೆ ಮುದ್ರಿಸಲಾಗುತ್ತಿತ್ತು. ಈ ರೀತಿ ಹೈದರ್‌ನು ಹಿಂದೂ ದೇವತೆಗಳ ಚಿತ್ರವಿರುವ ನಾಣ್ಯಗಳನ್ನು ತನ್ನ ಹೆಸರಿನ ಮೊದಲಕ್ಷರದ ಜೊತೆ ಸೇರಿಸಿ ಚಿನ್ನದ ಮತ್ತು ತಾಮ್ರದ ನಾಣ್ಯಗಳನ್ನು ಟಂಕಿಸಿದನು. ಇವನು ಆರಂಭಿಸಿದ ಆನೆಯ ನಮೂನೆಯ ನಾಣ್ಯವೇ ಟಿಪ್ಪುವಿನ ನಾಣ್ಯಗಳಿಗೆ ಮಾದರಿಯಾಯಿತು. ಟಿಪ್ಪುವಿನ ನಾಣ್ಯಗಳಲ್ಲಿ ವೈವಿಧ್ಯತೆ ಮತ್ತು ಕಲಾತ್ಮಕತೆ ಎದ್ದು ಕಾಣುತ್ತದೆ. ಪ್ರತಿಯೊಂದು ಟಂಕಶಾಲೆಗೂ ಪರ್ಶಿಯನ್ ಹೆಸರನ್ನು ಕೊಟ್ಟನು. ನಾಣ್ಯಕ್ಕೂ ಖಲೀಫರ ಹಾಗೂ ಗ್ರಹಗಳ ಹೆಸರನ್ನು ನೀಡಿ ಚಿನ್ನ, ಬೆಳ್ಳಿ ಮತ್ತು ತಾಮ್ರಗಳಲ್ಲಿ ನಾಣ್ಯಗಳನ್ನು ಟಂಕಿಸಿದನು. ಇವುಗಳ ಮೇಲೆ ಪರ್ಶಿಯನ್ ಪದ್ಯಗಳು, ಟಂಕಶಾಲೆಯ ಹೆಸರು, ಡಿಜಿರಾ ಮತ್ತು ಮೌಲೂದಿ ಕಾಲ ಮತ್ತು ಹಿಮ್ಮುಖದಲ್ಲಿ ಆನೆಯ ಚಿತ್ರ ಕಾಣಬರುತ್ತದೆ. ನಾಲ್ಕು ಮೌಲ್ಯದ ಚಿನ್ನದ ನಾಣ್ಯ ಮತ್ತು ಬೆಳ್ಳಿಯ ಏಳು ಮೌಲ್ಯದ ನಾಣ್ಯಗಳನ್ನು ಟಂಕಿಸಿದರು. ಹೆಚ್ಚು ಮೌಲ್ಯದ ಬೆಳ್ಳಿಯ ನಾಣ್ಯದ ಹೆಸರು ಹೈದರೀ. ಅನಂತರ ತಾಮ್ರದ ನಾಣ್ಯಗಳನ್ನು ಟಂಕಿಸಿದನು ಎಂಬುದು ಮುಖ್ಯ.



ಈ ಹಿನ್ನೆಲೆಯಲ್ಲಿ ಮೈಸೂರು ಒಡೆಯರ ಚರಿತ್ರೆಯಲ್ಲಿ ನಾಣ್ಯಗಳು ಪ್ರಮುಖ ಪಾತ್ರ ವಹಿಸುತ್ತವೆ. ನಾಣ್ಯಗಳಿಂದ ಆ ಮನೆತನದ ಆರ್ಥಿಕ ಪರಿಸ್ಥಿತಿ, ಧಾರ್ಮಿಕತೆ, ಸಾಮಾಜಿಕ ಜೀವನ, ಸಾಂಸ್ಕೃತಿಕ ಪಲ್ಲಟಗಳನ್ನು ತಿಳಿಯಬಹುದು.

**ಸ್ಮಾರಕಗಳು:** ಮೈಸೂರಿನ ಒಡೆಯರ ಚರಿತ್ರೆಗೆ ಸ್ಮಾರಕಗಳು ಪ್ರಮುಖ ಆಕರಗಳಾಗಿವೆ. ಪ್ರಭುತ್ವದ ಸ್ಮಾರಕಗಳಾದ ಅರಮನೆಗಳು, ದೇವಾಲಯಗಳು, ಕೋಟೆ-ಕೊತ್ತಲಗಳು ಮುಂತಾದವು ಮೈಸೂರಿನ ಒಡೆಯರ ಚರಿತ್ರೆಯಲ್ಲಿ ಸ್ಮಾರಕಗಳ ಸ್ಥಾನಮಾನವನ್ನು ಪಡೆದುಕೊಂಡವು. ಈ ಪ್ರಭುತ್ವದ ಸ್ಮಾರಕಗಳಾದ ಅರಮನೆಗಳು, ದೇವಾಲಯಗಳು, ಕೋಟೆ-ಕೊತ್ತಲಗಳು ಮುಂತಾದವುಗಳನ್ನು ವಸ್ತುಗಳನ್ನಾಗಿ ಆಯ್ಕೆ ಮಾಡಿಕೊಂಡು ಅನೇಕ ಅಧ್ಯಯನಗಳು ನಡೆದು ಅನೇಕ ಕೃತಿಗಳು ಹೊರಬಂದಿವೆ. ಈ ಕೃತಿಗಳಲ್ಲಿ ಮೈಸೂರು ಒಡೆಯರ ಅರಮನೆಗಳು, ದೇವಾಲಯಗಳು, ಕೋಟೆಗಳು ಹಾಗೂ ಇನ್ನಿತರ ಸ್ಮಾರಕಗಳನ್ನು ನಿರ್ಮಿಸಿದರು ಎಂಬುದನ್ನು ಚರ್ಚಿಸಿದ್ದಾರೆ. ಈ ಎಲ್ಲಾ ಸ್ಮಾರಕಗಳು ಪ್ರಭುತ್ವದ ಸ್ಮಾರಕಗಳಾಗಿ ಉಳಿದುಕೊಂಡು ಬಂದು ಅರಸಕೇಂದ್ರಿತ ಚರಿತ್ರೆ ನಿರ್ಮಾಣಕ್ಕೆ ಪೂರಕವಾದ ಸಾಮಗ್ರಿಗಳನ್ನು

ಒದಗಿಸಿಕೊಟ್ಟವು.[೧೦] ಇವುಗಳ ವಾಸ್ತುಶಿಲ್ಪವು ವಿಶೇಷತೆಯನ್ನು ಪಡೆದಿದೆ. ಅಂದಿನ ಧಾರ್ಮಿಕತೆಯನ್ನು ಬಿಂಬಿಸುತ್ತದೆ. ಅಲ್ಲದೇ ಅಧಿಕಾರ, ಭದ್ರತೆ, ಸವಲತ್ತುಗಳನ್ನು ಸಂಕೇತಿಸುತ್ತದೆ.

ವೆಂಕೋಬರಾವ್ ಬಿ. ಅವರು **ಮೈಸೂರು ದೇಶದ ವಾಸ್ತುಶಿಲ್ಪ(೧೯೫೯)**[೧೧] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ವಿವಿಧ ರಾಜಮನೆತನದ ಕಟ್ಟಡಗಳ ವಾಸ್ತುಶಿಲ್ಪದ ಅಂಶಗಳನ್ನು ವಿವರಿಸಿದ್ದಾರೆ. ಮೈಸೂರು ಒಡೆಯರ ಕಾಲಕ್ಕೆ ಸೇರಿದ ದೇವಾಲಯಗಳ ವಾಸ್ತುಶಿಲ್ಪವನ್ನು ಇಲ್ಲಿ ಮುಖ್ಯವಾಗಿ ಚರ್ಚೆಗೆ ಬಳಸಿಕೊಳ್ಳಲಾಗಿದೆ. ಶೈಲಿಯ ಕಡೆಗೆ ಗಮನಿಸಿದಾಗ ಮೈಸೂರಿನ ಕಟ್ಟಡಗಳು ಕರ್ನಾಟಕ ಶೈಲಿಯನ್ನು ಹೊಂದಿವೆ ಎಂಬುದು ಇಲ್ಲಿ ಮುಖ್ಯ. ಮೈಸೂರು ನಗರದ ಕೋಟೆಯ ಪ್ರಾಕಾರದಲ್ಲಿ ವರಾಹಸ್ವಾಮಿ ದೇವಾಲಯವಿದೆ. ಇದು ಕರ್ನಾಟಕ ಶೈಲಿಯ ಕಟ್ಟಡವಾಗಿದೆ ಎಂಬುದನ್ನು ತಿಳಿಸಿದ್ದಾರೆ. ಹೈದರ್ ಮತ್ತು ಟಿಪ್ಪುವಿನ ಕಾಲದ ಕಟ್ಟಡಗಳು ಒಂದು ರೀತಿಯ ವಿಶೇಷತೆ ಹೊಂದಿವೆ. ಮೈಸೂರಿನ ಪುರಾತನ ಕಟ್ಟಡಗಳಾದ ವೆಲ್ಲಿಂಗ್‌ಟನ್‌ಲಾಡ್ಜ್, ಜಗನ್ಮೋಹನ ಬಂಗಲೆ, ರಂಗಾಚಾರ್ಲು ಮೆಮೋರಿಯಲ್ ಹಾಲ್‌ಗಳ ವಿವರಗಳನ್ನು ತಿಳಿಸಿದ್ದಾರೆ. ಅನಂತರ ಅಠಾರಾ ಕಚೇರಿಯು ಗ್ರೀಸ್ ದೇಶದ ಶೈಲಿಯಲ್ಲಿದೆ. ಸೆಂಟ್ರಲ್ ಕಾಲೇಜು ಗ್ರಾಂಥಿಕ್ ಶೈಲಿಯಲ್ಲಿದೆ. ರೆಸಿಡೆಂಟ್‌ರ ಬಂಗ್ಲೆ, ಅರಮನೆ, ಸೇಂಟ್ ಮಾರ್ಕ್ಸ್ ಚರ್ಚ್, ಅಠಾರಾ ಕಚೇರಿ, ಮ್ಯೂಸಿಯಂ, ಮೇಯೋಹಾಲ್, ಟಾಟಾ ಇನ್‌ಸ್ಟಿಟ್ಯೂಟ್, ಸೆಂಟ್ರಲ್ ಕಾಲೇಜ್, ಟೌನ್‌ಹಾಲ್ ಮೊದಲಾದ ಕಟ್ಟಡಗಳ ವಾಸ್ತುಶಿಲ್ಪದ ವಿವರಗಳನ್ನು ತಿಳಿಸಿದ್ದಾರೆ.

ಮಂಜಪ್ಪಶೆಟ್ಟಿ ಮಸಗಲಿ ಎಂ.ಪಿ.ಅವರು **ಮೈಸೂರು ಅರಮನೆ(೨೦೦೩)**[೧೨] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯನ್ನು ಮೈಸೂರು ಅರಮನೆಯ ಚಿತ್ರಣ ನೀಡುವುದರ ಜೊತೆಗೆ ಅಲ್ಲಿನ ಕೋಟೆ, ದೇವಾಲಯಗಳು, ಮೈಸೂರು ದಸರಾ, ಹಬ್ಬ ಉತ್ಸವಗಳು, ಕಲೆ, ಅರಮನೆಯ ಆಡಳಿತ ವ್ಯವಸ್ಥೆಯ ವಿಚಾರಗಳನ್ನು ವಿವರಿಸಿದ್ದಾರೆ. ಮೊದಲು ಈ ಕೃತಿಯಲ್ಲಿ ಮೈಸೂರಿನ ಪುರಾಣ ಮತ್ತು ಜನಪದದ ವಿಚಾರಗಳನ್ನು ತಿಳಿಸಿದ್ದಾರೆ. ಮೈಸೂರಿನ ಪ್ರಾಚೀನತೆ ಮತ್ತು ಮೈಸೂರು ಹೆಸರಿನ ಚರಿತ್ರೆಯನ್ನು ವಿವರಿಸಿರುವುದನ್ನು ಇಲ್ಲಿ ನೋಡಬಹುದು. ಅರಮನೆಗೆ ಹತ್ತಿರವಿರುವ ಕೋಟೆಯ ಅಂಶಗಳನ್ನು ತಿಳಿಸಿದ್ದಾರೆ. ಅರಮನೆಗೆ ಹತ್ತಿರವಿರುವ ತೊಟ್ಟಿಗಳು, ಕೋಟೆ-ಕೊತ್ತಲಗಳ ಹತ್ತಿರವಿರುವ ಫಿರಂಗಿಗಳು, ಉಗ್ರಾಣಗಳು, ಆಯುಧ ಶಾಲೆಗಳ ಮಾಹಿತಿಗಳು ಮಿಳಿತವಾಗಿವೆ. ಅಲ್ಲಿರುವ ಹಳೆಯ ಅರಮನೆ, ಹೊಸ ಅರಮನೆ, ಚಿನ್ನದ ಅಂಬಾರಿ, ಕಲ್ಯಾಣಮಂಟಪದ ವಿವರಗಳನ್ನು ತಿಳಿಸಿದ್ದಾರೆ. ಭಿತ್ತಿಚಿತ್ರಗಳು ಆಕರ್ಷಣೀಯವಾಗಿವೆ. ಸರಸ್ವತಿ ಭಂಡಾರದಲ್ಲಿ ಪ್ರಾಚೀನ ಹಸ್ತಪ್ರತಿ ಮತ್ತು ಗ್ರಂಥಗಳನ್ನು ಕ್ರೋಢೀಕರಿಸಿದ್ದಾರೆ. ಹಾಗೆಯೇ ಜಗನ್ಮೋಹನ ಅರಮನೆ, ಲೋಕರರಂಜನ ಮಹಲ್ ಅರಮನೆ, ಲಲಿತಮಹಲ್ ಅರಮನೆ, ಜಯಲಕ್ಷ್ಮೀ ವಿಲಾಸ ಅರಮನೆ, ರಾಜೇಂದ್ರ ವಿಲಾಸ

ಅರಮನೆ, ಟಿಪ್ಪು ಸುಲ್ತಾನನ ಬೇಸಿಗೆ ಅರಮನೆ, ವಸಂತಮಹಲ್ ಅರಮನೆ, ಕಾರಂಜಿ ವಿಲಾಸ ಅರಮನೆ, ಚಾಮುಂಡಿ ವಿಹಾರ, ಚಲುವಾಂಬ ವಿಲಾಸ ಅರಮನೆ, ಚಿತ್ತರಂಜನ್ ಮಹಲ್ ಅರಮನೆ, ಫರ್ನ್‌ಹಿಲ್ ಪ್ಯಾಲೇಸ್, ಬೆಂಗಳೂರು ಅರಮನೆಯ ಮಾಹಿತಿಯನ್ನು ನೀಡಿದ್ದಾರೆ. ಈ ಅರಮನೆಗಳಲ್ಲಿರುವ ದರ್ಬಾರ್ ಹಾಲ್, ಅರಮನೆಯ ಸುತ್ತಲಿನ ತೋಟದ ವಿವರಗಳನ್ನು ನೀಡಿದ್ದಾರೆ. ರಂಗಾಚಾರ್ಲು ಮೆಮೋರಿಯಲ್ ಹಾಲ್, ಪ್ರಾಚ್ಯವಿದ್ಯಾ ಸಂಶೋಧನಾಲಯ, ಸರ್ಕಾರಿ ಅತಿಥಿಗೃಹ, ಮಹಾರಾಜ ಮತ್ತು ಮಹಾರಾಣಿ ಕಾಲೇಜು, ನೀರಾವರಿ ಮತ್ತು ಕೃಷಿ ಇಲಾಖೆ ಕಚೇರಿ, ನಗರಪಾಲಿಕೆ, ವೆಲ್ಲಿಂಗ್‌ಟನ್ ಲಾಡ್ಜ್, ಕ್ರಾಪರ್ಡ್‌ಭವನ, ಜಿಲ್ಲಾಧಿಕಾರಿ ಕಚೇರಿ, ನ್ಯಾಯಾಲಯ, ಮೆಟ್ರೋಪೋಲ್, ಲ್ಯಾನ್ಸ್‌ಡೌನ್ ಬಿಲ್ಡಿಂಗ್ ಇವೇ ಮೊದಲಾದ ಕಟ್ಟಡಗಳು ಮುಖ್ಯವಾಗಿವೆ. ಮಹಾರಾಜರ ಸ್ಮಾರಕಗಳಾದ ಚಾಮರಾಜ ಒಡೆಯರ ಪ್ರತಿಮೆ, ಕೃಷ್ಣರಾಜ ಒಡೆಯರ ಪ್ರತಿಮೆ, ದೊಡ್ಡ ಗಡಿಯಾರದ ಗೋಪುರ, ಸಣ್ಣಗಡಿಯಾರದ ಗೋಪುರ, ಮಧುವನ, ಚಂದ್ರವನ ವಿವರಗಳನ್ನು ಗಮನಿಸಬಹುದು. ವಿಶೇಷವಾಗಿ ನಾಯಿ ಸ್ಮಾರಕಗಳ ವಿಚಾರಗಳನ್ನು ತಿಳಿಸಿದ್ದಾರೆ.

**ದೇವಾಲಯಗಳು:** ಹಾಗೆಯೇ ಈ ಕೃತಿಯಲ್ಲಿ ಅರಮನೆಯ ಆವರಣದಲ್ಲಿ ಕೋಡಿ ಭೈರವೇಶ್ವರ, ಲಕ್ಷ್ಮೀರಮಣಸ್ವಾಮಿ ದೇವಾಲಯ, ಶ್ವೇತವರಾಹಸ್ವಾಮಿ ದೇವಾಲಯ, ತ್ರಿನಯನೇಶ್ವರಸ್ವಾಮಿ ದೇವಾಲಯ, ಪ್ರಸನ್ನ ಕೃಷ್ಣಸ್ವಾಮಿ ದೇವಾಲಯ, ಕೋಟೆ ವೆಂಕಟರಮಣಸ್ವಾಮಿ ದೇವಾಲಯ, ಭುವನೇಶ್ವರಿ ದೇವಾಲಯ, ಗಾಯತ್ರಿ ದೇವಾಲಯ, ಕೋಡಿ ಸೋಮೇಶ್ವರ ದೇವಾಲಯ, ಅಲಮೇಲಮ್ಮನ ನಿವಾಸ, ಕೋಟೆ ಆಂಜನೇಯಸ್ವಾಮಿ ದೇವಾಲಯ, ಸಂಜೀವಿನಿ ಆಂಜನೇಯ ದೇವಾಲಯ ಮುಂತಾದ ದೇವಾಲಯಗಳ ವಿವರಗಳನ್ನು ತಿಳಿಸಿದ್ದಾರೆ. ಇಲ್ಲಿನ ವಾಸ್ತುಶಿಲ್ಪದ ವಿಚಾರಗಳು ಮುಖ್ಯ. ದಸರಾ ಹಬ್ಬ-ಹರಿದಿನಗಳ ಅಂಶಗಳನ್ನು ತಿಳಿಸಿದ್ದಾರೆ. ಈ ದೇವಾಲಯಗಳಲ್ಲಿನ ಕಲೆ, ವಾಸ್ತುಶಿಲ್ಪಗಳ ವಿಚಾರಗಳು ಪ್ರಮುಖವಾದವು. ನೃತ್ಯಕಲೆ, ನಾಟಕ ಕಲೆ ಮತ್ತು ಚಿತ್ರಕಲೆಯ ವಿಚಾರಗಳು ಮಿಳಿತವಾಗಿವೆ. ಒಟ್ಟಾರೆಯಾಗಿ ಈ ಕೃತಿಯಲ್ಲಿ ಅರಮನೆಯ ಕಟ್ಟಡದ ಜೊತೆಗೆ ಅರಮನೆಯನ್ನು ನಿರ್ಮಿಸಿದವರ ಇತಿಹಾಸ, ಅವರ ವಂಶಾವಳಿ, ಸಂಸ್ಕೃತಿ, ಸಂಪ್ರದಾಯ, ಆಡಳಿತದ ವೈಖರಿ ಮೊದಲಾದ ವಿಚಾರಗಳನ್ನು ತಿಳಿಸಿದ್ದಾರೆ. ಅರಮನೆಯ ಸ್ಥೂಲ ಪರಿಚಯ ದೊಂದಿಗೆ ಸುತ್ತಲಿನ ಅರಮನೆ, ಕೋಟೆ, ಪ್ರಾಚೀನತೆ, ಹಬ್ಬ-ಉತ್ಸವಗಳು, ಕಲೆ, ಸಾಹಿತ್ಯದ ವಿಚಾರಗಳನ್ನು ಮುಖ್ಯವಾಗಿ ತಿಳಿಸಿದ್ದಾರೆ. ಅಲ್ಲದೆ ಒಡೆಯರು, ದಿವಾನರು, ಕಮೀಷನರ್‌ಗಳ ಕೊಡುಗೆಗಳ ವಿವರಗಳನ್ನು ನೀಡಿದ್ದಾರೆ. ಹೀಗೆ ಈ ಕೃತಿಯು ಅರಮನೆಯ ಸ್ಥೂಲಚಿತ್ರಣದೊಂದಿಗೆ ಕ್ಷೇತ್ರಕಾರ್ಯಕ್ಕೆ ಮುಖ್ಯವಾದುದಾಗಿದೆ.

ಪ್ರಜೆಗಳ ಸ್ಮಾರಕಗಳಲ್ಲಿ ಮುಖ್ಯವಾದುವುಗಳೆಂದರೆ ಗ್ರಾಮದೇವತೆಗಳ ಗುಡಿಗಳು, ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಬಲಿದಾನಕಲ್ಲುಗಳು, ಜನಪದರ ಮನೆಗಳು ಮುಂತಾದವು. ಇಲ್ಲಿ ಚಾಮುಂಡಿ, ಮಾದೇಶ್ವರ, ಮಂಟೇಸ್ವಾಮಿ ಮುಂತಾದ ದೇವತೆಗಳ ಆರಾಧನೆ ಇದೆ. ಈ

ದೇವತೆಗಳ ಆರಾಧನೆಗೆ ಗುಡಿಗಳು ರಚನೆಯಾದವು. ಇವು ಗಂಡನಿಗಾಗಿ, ಅರಸನಿಗಾಗಿ, ಭೂಮಿಗಾಗಿ, ಬಂಧುಗಳಿಗಾಗಿ, ಧರ್ಮಕ್ಕಾಗಿ ಅಥವಾ ಮೋಕ್ಷಪ್ರಾಪ್ತಿಗಾಗಿ ನಿರ್ಮಿಸಿದ ಮಾಸ್ತಿಕಲ್ಲು, ವೀರಗಲ್ಲು, ಬಲಿದಾನಕಲ್ಲು, ನಿಸಿಧಿಗಲ್ಲು ನಿರ್ಮಾಣವಾದವು. ಮನೆಗಳು ವಿವಿಧ ರೂಪ ಹೊಂದಿರುತ್ತವೆ. ಕೇರಿಗಳಾಗಿ ವಿವಿಧ ಜನಾಂಗದವರ ವಿವರಗಳನ್ನು ತಿಳಿದುಕೊಳ್ಳಬಹುದು. ಇವುಗಳ ಮೂಲಕ ಜನಸಾಮಾನ್ಯರ ಸಮಾಜಮುಖಿ ಅಧ್ಯಯನ ಮುಖ್ಯ.

**ಕೈಫಿಯತ್ತುಗಳು:** ಮೈಸೂರಿನ ಚರಿತ್ರೆಯಲ್ಲಿ ಕೈಫಿಯತ್ತುಗಳು ವಹಿಸುವ ಪಾತ್ರ ಬಹಳ ಮುಖ್ಯವಾದುದು. ಸ್ಥಳಪುರಾಣ, ಐತಿಹ್ಯ, ಜಾನಪದ ಮತ್ತು ಇತಿಹಾಸದ ಅಂಶಗಳನ್ನು ಒಳಗೊಂಡಂತಹ ಈ ಕೈಫಿಯತ್ತುಗಳು ೧೯ನೇ ಶತಮಾನದಲ್ಲಿ ಬೆಳಕಿಗೆ ಬಂದು ನಮ್ಮ ಚರಿತ್ರೆ ಅಧ್ಯಯನಕ್ಕೊಂದು ಹೊಸ ಆಯಾಮವನ್ನು ನೀಡಿವೆ. ಮೈಸೂರು, ಸಂಸ್ಥಾನದ ರಾಜಕೀಯ ಇತಿಹಾಸದ ಅಧ್ಯಯನಕ್ಕೆ ಕೈಫಿಯತ್ತುಗಳನ್ನು ಇತರ ಆಕರಗಳಿಗಿಂತ ಭಿನ್ನವಾಗಿ ಬಳಸಿಕೊಳ್ಳಬಹುದಾಗಿದೆ. ಪುಟ್ಟಸ್ವಾಮಿ ಬಿ.ಎಸ್. ಅವರು **ಕೈಫಿಯತ್ತು ಕಂಡ ಮೈಸೂರಿನ ರಾಜಕೀಯ ಚರಿತ್ರೆ(೨೦೦೭)**[೧೩] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ಕೈಫಿಯತ್ತುಗಳ ವಿವರಗಳನ್ನು ಚರ್ಚಿಸಿದ್ದಾರೆ. ಮೆಕೆಂಝಿ ಸಂಗ್ರಹಿಸಿದ ಕೈಫಿಯತ್ತುಗಳು ಮುಖ್ಯವಾಗಿವೆ. ಮೆಕೆಂಝಿ ಸುಮಾರು ೨೦೭೦ ಕೈಫಿಯತ್ತುಗಳನ್ನು ಸಂಗ್ರಹಿಸಿದ್ದಾನೆ. ಮೆಕೆಂಝಿ ಸ್ಥಳೀಯ ಅಧಿಕಾರಿಗಳಾದ ಕಾವಲಿ ಬೊರ್‍ರಯ್ಯ, ಈತನ ತಮ್ಮ ಲಕ್ಷ್ಮಯ್ಯ ಮತ್ತು ಪುಲಿಗುಡ್ಡ ಮಲ್ಲಯ್ಯ ಹಾಗೂ ಇತರ ಪಂಡಿತರು, ಶಾನುಭೋಗರು, ಪಟೇಲರು ಮೊದಲಾದವರನ್ನು ಬಳಸಿಕೊಂಡನು. ಕಾರಣ ಸ್ಥಳೀಯ ಜ್ಞಾನದ ನೆರವಿಲ್ಲದೇ ವಸಾಹತುಶಾಹಿ ತನ್ನನ್ನು ಸ್ಥಾಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಆದ್ದರಿಂದ ಮೆಕೆಂಝಿ ವಸಾಹತುಶಾಹಿ ಆಳ್ವಿಕೆಗೆ ಅಗತ್ಯವಾದ ಸ್ಥಳೀಯ ಮಾಹಿತಿಯನ್ನು ಕೈಫಿಯತ್ತುಗಳ ಮೂಲಕ ಒದಗಿಸುತ್ತಾನೆ. ಹಾಗೆಯೇ ಹಸ್ತಪ್ರತಿಗಳ ರೂಪದಲ್ಲಿ ಕೈಫಿಯತ್ತುಗಳನ್ನು ಪ್ರಕಟಿಸಿದರಲ್ಲಿ ಪ್ರಸಿದ್ಧರಾದರೆಂದರೆ ಎಂ.ಹೆಚ್.ಕೃಷ್ಣ, ತಿ.ತಾ.ಶರ್ಮ, ಬೆನಗಲ್ ರಾಮರಾವ್, ಹುಲ್ಲೂರು ಶ್ರೀನಿವಾಸ ಜೋಯಿಸ್ ಮತ್ತು ಎಂ.ಎಂ. ಕಲಬುರ್ಗಿ. ಇವರೆಲ್ಲರೂ ಇತಿಹಾಸ ಸಂಶೋಧಕರಿಗೆ ನೆರವಾಗಿದ್ದಾರೆ. ತಳಕಾಡು ಕೈಫಿಯತ್ತು-೧, ತಳಕಾಡು ಕೈಫಿಯತ್ತು-೨, ಅರಿಕುಟಾರ ಗ್ರಾಮ ಕೈಫಿಯತ್ತು, ಸೋಸಲೆ ಕೈಫಿಯತ್ತು-೧, ಸೋಸಲೆ ಅಗ್ರಹಾರದ ಕೈಫಿಯತ್ತು-೨, ಹೈದರ್‌ನ ಕೈಫಿಯತ್ತು-೧, ಹೈದರ್‌ನ ಕೈಫಿಯತ್ತು-೨, ಈ ಕೈಫಿಯತ್ತುಗಳು ಮೈಸೂರು ಒಡೆಯರ ಚರಿತ್ರೆಗೆ ನೇರವಾಗಿ ಪ್ರಭಾವ ಬೀರಿವೆ.

**ತಳಕಾಡು ಕೈಫಿಯತ್ತು ೧:** ಈ ಕೈಫಿಯತ್ತು ರಾಜ ಒಡೆಯರು ನಂಜರಾಜ-ಶ್ರೀರಂಗಮ್ಮಳ ಶಾಪ ಹಾಗೂ ವಂಶಾವಳಿಯನ್ನು ತಿಳಿಸುತ್ತದೆ. ಶ್ರೀರಂಗಪಟ್ಟಣದ ಶ್ರೀರಂಗನಾಯಕರು ನಾಲ್ಕು ರೋಗ ಬರಲಾಗಿ ಏನು ಉಪಚಾರ ಮಾಡಿದರೂ ವಾಸಿಯಾಗಿಲ್ಲವಾದ್ದರಿಂದ ಗಣರಾಜ್ಯ ಕ್ಷೇತ್ರ ಮಹಾತ್ಮೆ, ವೈದ್ಯೇಶ್ವರ ಮಹಾತ್ಮೆ ಕೇಳಿ ಶ್ರೀರಂಗರಾಯರು ಈ ವೈದ್ಯೇಶ್ವರ ಸ್ವಾಮಿ ಅವರ ಸೇವೆ ಮಾಡಿಕೊಂಡು ಕೆಲ ದಿನ ಇಲ್ಲೇ ಇದ್ದು ಹೋಗುವಾಗ ಪತ್ನಿ ಶ್ರೀರಂಗಮ್ಮಳಿಗೆ ಬುದ್ಧಿ ಹೇಳಿ ನಿರೂಪನ ಬರದು ಕಳಿಸಿ, ಮೈಸೂರು ಚಾಮರಾಜ ಒಡೆಯರಿಗೆ ಕರೆ ಕಳುಹಿಸಿ, ಶ್ರೀರಂಗಪಟ್ಟಣ ಸಂಸ್ಥಾನವನ್ನು ಅವರ ವಶಕ್ಕೆ ಕೊಟ್ಟು, ಸಂಸ್ಥಾನವನ್ನು ಕೊಟ್ಟರು. ಆದರೆ ಶ್ರೀರಂಗಮ್ಮ ಅಮೋಘವಾದ ಮೂಗುತಿಯಿಟ್ಟುಕೊಂಡು ಇರುವಾಗ, ಮೈಸೂರು ಅರಸು 'ನಮಗೆ ಮೂಗುತಿಯನ್ನು ಕೊಡು'

ಎಂದು ಪೀಡಿಸಿದ ಕಾರಣ ಕೋಪಯುಕ್ತಳಾಗಿ ಹೊರಟು ಬಂದಳು. ಇಲ್ಲಿ ಶ್ರೀರಂಗರಾಯರು ಸ್ವರ್ಗಸ್ಥರಾದರು. ಶ್ರೀರಂಗಮ್ಮ ಈ ಕ್ಷೇತ್ರದಲ್ಲೇ ವಾಸ ಮಾಡಲಾಗಿ ಮೂಗುತಿ ನಿಮಿತ್ತ 'ಶ್ರೀರಂಗಮ್ಮನವರನ್ನು ತಮ್ಮ ಸಂಸ್ಥಾನಕ್ಕೆ ಕಳುಹಿಸಿಕೊಡಿ' ಎಂಬುದಾಗಿ ಬರೆದು ಕಳುಹಿಸಿದಾಗ ಈಕೆ ಇದನ್ನು ವಿರೋಧಿಸಿ ನನ್ನ ಮೂಗುತಿ ನಿಮಿತ್ಯ ಮಾನಭಂಗ ಮಾಡುತ್ತಾರೆ ಎಂಬುದಾಗಿ ತಿಳಿದು ಬಹಳ ಕೋಪವಾಗಿ ಕಾವೇರಿ ನದಿ ತೀರಕ್ಕೆ ಹೋಗಿ "ನಾನು ಹೋಗಲಿ, ಮೈಸೂರು ಸಂಸ್ಥಾನದವರಿಗೆ ಮಕ್ಕಳು ಆಗಬೇಡಾ ನಾನು ಎಲ್ಲಿ ಪ್ರವೇಶವ ಮಾಡುತ್ತಾಯಿದ್ದೇನೋ ಆ ಸ್ಥಳವು ಮಡವು ಆಗಿ ಈ ಮೂಗುತಿಯು ಸಿಗಬೇಡ" ಎಂದು ಶಾಪ ಕೊಟ್ಟ ವಿವರವನ್ನು ತಿಳಿಯಬಹುದು.

ಕಲಬುರ್ಗಿ ಎಂ.ಎಂ. ಅವರ ಸಂಪಾದಕತ್ವದಲ್ಲಿ **ಕರ್ನಾಟಕದ ಕೈಫಿಯತ್ತುಗಳು**[೧೪] ಎಂಬ ಕೃತಿಯು ಹೊರಬಂದಿದೆ. ಈ ಕೃತಿಯಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ತಿಳಿಸುವ ಕೈಫಿಯತ್ತುಗಳ ವಿವರಗಳನ್ನು ತಿಳಿಯಬಹುದು.

**ತಲಕಾಡು ಕೈಫಿಯತ್ತು ೨:** ಸೋಮದತ್ತ ಋಷಿಗಳು ತಪಸ್ಸು ಮಾಡುತ್ತಿದ್ದಾಗ ಅರಣ್ಯದಲ್ಲಿ ಬೇಟೆಗೆಂದು ಬಂದ ತಲೆ-ಕಾಡು ಎಂಬ ಇಬ್ಬರು ಬೇಡರು ಋಷಿಗಳು ಪೂಜಿಸುತ್ತಿದ್ದ ಶಾಲ್ಮಲೀ ವೃಕ್ಷ ಛೇದಿಸಿ ಅವು ರಕ್ತ ಪ್ರವಾಹ ನಂತರ ಕ್ಷೀರ ಪ್ರವಾಹ ಕಂಡ ತಲೆ ಕಾಡು ಇಬ್ಬರೂ ಶಿಲಾರೂಪದಿಂದ ವಾಸ ಮಾಡಿದುದರ ಫಲವಾಗಿ ತಲಕಾಡು ಎಂಬ ಹೆಸರು ಬಂದಿತು ಎಂದು ಈ ಕೈಫಿಯತ್ತಿನ ವಿವರಣೆ ಇದೆ.

**ಅರಿಕುಟಾರ ಗ್ರಾಮ ಕೈಫಿಯತ್ತು:** ಮೈಸೂರು ಪ್ರದೇಶದ ಈ ಕೈಫಿಯತ್ತು ೩ನೇ ಮಾರಸಿಂಹ ಕಾಲದಲ್ಲಿ ಮಂತ್ರಿ ಹಾಗೂ ದಂಡನಾಯಕನಾದ ಇವನು ೪ನೇ ರಾಚಮಲ್ಲನ ಆಳ್ವಿಕೆಯಲ್ಲಿ ಮುಂದುವರಿದ ಚಾವುಂಡರಾಯನು ಪ್ರತಿದಿನವೂ ಶ್ರೀ ಜೈನ ಬಸ್ತಿ ಆಲಯ ನಿರ್ಮಾಣ ಹೊತ್ತು ಜಲ ಪಾನ ಮಾಡುವುದು ಎಂದು ಅನೇಕ ಚೈತ್ಯಾಲಯ ಬಸ್ತಿಗಳನ್ನು ಕಟ್ಟಿಸಿದ ವಿವರವನ್ನು ತಿಳಿಸುತ್ತದೆ.[೧೫]

**ಸೋಸಲೆಯ ಕೈಫಿಯತ್ತು ೧:** ರಾಜ ಒಡೆಯರು ಸೋಸಲೆಯನ್ನು ದೊಡ್ಡದಾಗಿ ಮಾಡಿದ ವಿವರವಿದೆ. ಗಡಿಯನ್ನು ಸೀಮೆಗಳ ಮೂಲಕ ವಿಸ್ತರಿಸಿ, ಬನ್ನೂರು ಪ್ರದೇಶವನ್ನು ಸೇರಿಸಿ ರಾಜ ಸಮುದ್ರ ಎಂಬ ಗ್ರಾಮವನ್ನು ಹಳೇ ಅಗ್ರಹಾರಕ್ಕೆ ರಾಜ ಒಡೆಯರು ಬಿಟ್ಟುಕೊಟ್ಟ ವಿವರವನ್ನು ನೋಡಬಹುದು.

**ಸೋಸಲೆ ಅಗ್ರಹಾರದ ಕೈಫಿಯತ್ತು ೨:** ಸೋಸಲೆ ಅಗ್ರಹಾರಕ್ಕೆ ರಾಜವಡೆಯರು ಬಿಟ್ಟಂತ ಅಗ್ರಹಾರಗಳು, ಗ್ರಾಮಗಳು ಮತ್ತು ತಾಲ್ಲೂಕು ಬಗ್ಗೆ ಶಿಲಾಶಾಸನದಲ್ಲಿ ಬರೆಸಿದ್ದಾರೆ.[೧೬] ಅಲ್ಲದೇ ದಳವಾಯಿ ದೇವರಾಜನ ನೇತೃತ್ವವನ್ನೂ ಇಲ್ಲಿ ಗಮನಿಸಬಹುದು.

**ಹೈದರ್‌ನ ಕೈಫಿಯತ್ತು ೧:** ಹೇವಿಳಂಬಿ ಸಂವತ್ಸರವನ್ನು ದುರ್ಗಕ್ಕೆ ನವಾಬರ ದಂಡು ಬಂದು ಮುತ್ತಿಗೆ ಹಾಕಿತ್ತು. ಮುತ್ತಿಗೆ ಬಿಟ್ಟು ಶ್ರವಣಾರು ಸೀಮೆ ಕಡಿಗೆ ದಂಡು ಹೋಯಿತ್ತು. ನವಾಬರ ದಂಡು ಬಸವನಕೋಟೆತ್ತಕೊಂಡ ಕಣ್ಣುಕುಪ್ಪೆಗೆ ಬಂದುಯಿಳಿದರೂ, ಹನ್ನೊಂದು ದಿವಸ ಮುತ್ತಿಗೆ ಹಾಕಿ ಹನ್ನೊಂದನೆ ದಿವಸದಲ್ಲಿ ಕೂಲು ಆಯಿತ್ತು. ಮುದ್ದಿಗರಹಳ್ಳಿ, ಬರಮವರಹಳ್ಳಿ ಬಳಿಯ

ತಿಂಗಳು ದಿವ್ಸ ಯಿಳಿದುಯಿದ್ದು, ಮುಂದೆ ಗುಡಿಕೋಟೆ ಮೊಳಕಾಲು ಮುರುವಿಗೆ ಯೆದ್ದು ಹೋಯಿತ್ತು. ಕೊನೆಗೆ ಆರ್‌ಕಾಟುತ್ತೆಕೊಂಡು ಆ ಪ್ರಾಂತ್ಯಗಳೆಲ್ಲ ಲಡಾಯಿ ಮಾಡಿ, ಬೆನ್ನನಿಲ್ಲಿ ರಾಜು ಹುಂಣ್ಣುಯೆದ್ದು ಸತ್ತು ಹೋದನು. ಈತನ ಮಗ ಟಿಪ್ಪುಸುಲ್ತಾನನಿಗೆ ಅಧಿಕರವಾಯಿತು. ಈತನು ಬೆಂಗಳೂರು ತ್ತೆಕೊಂಡು ಠಾಣಾಹಾಕುವದರೊಳಗೆ ಮರಾಠಿಯವರ ದಂಡು ಯಿಂಗ್ರಜಿವರಿಗೆ ಕುಮ್ಮಕ್ಕು ಬಂತ್ತು. ಆನಂತರ ಕಣುಪಿಗೆ ಬಂತು. ಶ್ರೀರಂಗಪಟ್ಟಣ ಯಿಂಗ್ರೇಜಿಯವರು ತ್ತೋಕೊಡ ಕಾರಣ ಯೀ ಸವೆ ಯಾವತ್ತು ಯಿಂಗ್ರೇಜಿವಯರು ಮಯಿಸೂರವರಿಗೆ ಕೊಟ್ಟರು.[೧೭] ಈ ರೀತಿಯ ಉಲ್ಲೇಖವನ್ನು ತಿಳಿಯಬಹುದಾಗಿದೆ.

**ಹೈದರ್‌ನ ಕೈಫಿಯತ್ತು ೨:** ಹೈದರ್‌ನು ದಳವಾಯಿ ನಂಜರಾಜಯ್ಯನ ವಿಶ್ವಾಸ ಗಳಿಸಿ ಹಂತ ಹಂತವಾಗಿ ಅಧಿಕಾರಕ್ಕೆ ಏರಿದನು. ಹೈದರ್ ಖಾನ್‌ನು ಪ್ರಬಲಿಸುತ ತಿರಸ್ಕರ್ರಿಶಿ, ಈ ಖಂಡೆರಾಯನಂನ್ನೇ ಸಮಸ್ತ ಕಾರಬಾರ್‍ರಿಯಾಗಿ ಘಟ್ಟದ ಕೆಳಗಿನ ರಾಜ್ಯವೆಲ್ಲ ಸ್ವಾಧೀನ ಮಾಡಿಕೊಂಡು ಯೀ ಬಿದರ್‍ರೂರು ಸಂಸ್ಥಾನಕ್ಕೆ ಶೆರಿಸಿ, ಚಿತ್ರಭಾನು ಸಂವತ್ಸರದ ಫಾಲ್ಗುಣ ಬಹುಳ ೩೦ಗೆ, ಆ ತರುವಾಯ ಸ್ವಾಭಾನು ಸಂ೧ಕ್ಕೆ ಸೊದೆ ಸಂಸ್ಥಾನಕ್ಕೆ ಸುಧಾಕೊಟ್ಟು ಕಳುಹಿಸಿ, ಆ ಸಂಸ್ಥಾನ ಸ್ವಾದೀನ ಮಾಡಿಕೊಂಡಿತ್ತು. ಹೈದರಖಾನ ನವಾಬಗೆ 'ನಮ್ಮ ಗುರುಗಳ ಭೇಟಿಯಿಲ್ಲದೆ ಬಹಳ ದಿವಸವಾಗಿ ಆದೆ. ಆದರೆ ಶ್ರೀಮಂತ ಮಾಧವರಾಯನೂ ಫೌಜು ಸುಧಾ ಸಾದ್ವಿಯಾಗಿ ಹೈದರ್‌ನು ಹೋಗಲಿಲ್ಲ.[೧೮] ಇಲ್ಲಿ ಹೈದರ್‌ನ ಸ್ವಭಾವವನ್ನು ಗುರುತಿಸಬಹುದು.

ಒಟ್ಟಾರೆ ಈ ಕೈಫಿಯತ್ತುಗಳು ಮೈಸೂರು ಒಡೆಯರ ಚರಿತ್ರೆಗೆ ಪ್ರಮುಖ ಆಕರಗಳಾಗಿವೆ. ಇವುಗಳ ಮೂಲಕ ಒಡೆಯರ ರಾಜಕೀಯ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಂಶಗಳನ್ನು ತಿಳಿಯಬಹುದು.

**ಹಸ್ತಪ್ರತಿಗಳು:** ಮೈಸೂರು ಒಡೆಯರ ಚರಿತ್ರೆಯಲ್ಲಿ ಹಸ್ತಪ್ರತಿಗಳು ಕೂಡ ಪ್ರಮುಖ ಆಕರಗಳಾಗಿವೆ. ಕೋರಿ ಕಾಗದ, ಕಡತಗಳಂಥ ಬರವಣಿಗೆಯ ಸಾಮಗ್ರಿಗಳನ್ನು ಬಳಸಿಕೊಂಡು ಅನೇಕ ಕವಿಗಳು, ಲಿಪಿಕಾರರು ಹಸ್ತಪ್ರತಿಗಳನ್ನು ರಚನೆ ಮಾಡಿದ್ದಾರೆ. ಈ ಹಸ್ತಪ್ರತಿಗಳಿಂದಾಗಿ ಅನೇಕ ಕವಿಗಳು ಇಂದಿಗೂ ತಮ್ಮ ಜೀವಂತತೆಯನ್ನು ಪಡೆದುಕೊಂಡಿದ್ದಾರೆ. ಮೈಸೂರಿನ ಓರಿಯಂಟಲ್ ರೀಸರ್ಚ್ ಇನ್‌ಸ್ಟಿಟ್ಯೂಟನ್ನು ಹಸ್ತಪ್ರತಿಗಳ ಸಂಗ್ರಹ, ಸಂರಕ್ಷಣೆಗಾಗಿ ಸ್ಥಾಪಿಸಲಾಯಿತು. ಇಲ್ಲಿ ಉರ್ದು, ಪರ್ಶಿಯನ್, ಸಂಸ್ಕೃತ ಭಾಷೆಯ ಹಸ್ತಪ್ರತಿ ಕಟ್ಟುಗಳಿವೆ. ಕೈ ಬರಹದ ಕನ್ನಡ ಪುಸ್ತಕಗಳ ಪಟ್ಟಿ, ಕೈ ಬರಹದ ಕನ್ನಡ ಗ್ರಂಥಗಳ ಅಕಾರಾದಿ ಸೂಚಿ ಎಂಬ ನಾಲ್ಕು ಸಂಪುಟಗಳನ್ನು ಹೊರ ತರಲಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಹಸ್ತಪ್ರತಿ ಭಂಡಾರವನ್ನು ಹೊಂದಿದೆ. **ಸಂಗ್ರಹಿಸಲ್ಪಟ್ಟ ಹಸ್ತಪ್ರತಿಗಳ ಸೂಚಿಯನ್ನು ಐದು ಸಂಪುಟ(೫, ೬, ೭, ೮, ೯)ಗಳಲ್ಲಿ ಬಿ.ಎಸ್.ಸಣ್ಣಯ್ಯ ಅವರು ಸಂಯೋಜಿಸಿ ಸಂಪಾದಿಸಿದ್ದಾರೆ.**[೧೯] ಮೈಸೂರಿನ ಸಂಸ್ಕೃತ ಮಹಾಪಾಠ ಶಾಲೆಯು ಹಸ್ತಪ್ರತಿಗಳನ್ನು ಸಂಗ್ರಹಿಸಿದೆ. ಸರಸ್ವತಿ ಭಂಡಾರ(ಅರಮನೆ)ವು ಹಸ್ತಪ್ರತಿ ಭಂಡಾರವನ್ನು ಹೊಂದಿವೆ. ಮೈಸೂರು ಒಡೆಯರ ಚರಿತ್ರೆಗೆ ಹಸ್ತಪ್ರತಿಗಳ ಕಾಣಿಕೆಯು ಅಪಾರವಾದದು. ಚೆನ್ನಬಸವಯ್ಯನು ರಚಿಸಿದ ನೀಲಕಂಠಾರಾಧ್ಯರ ಆರಾಧ್ಯ ಚಾರಿತ್ರ ಎಂಬ ಕಾವ್ಯದಲ್ಲಿ ಸ್ವಸ್ತಿ

ಸಮಸ್ತವಾದ ಶಕವರುಷಂ ೧೪೪೪ಕ್ಕೆ ಸಲ್ಲುವ ವ್ಯಯ ಸಂವತ್ಸರದ ಅಶ್ವಯುಜ ೭ ಮಿಯೂ ಗುರುವಾರದ ದಿವಸದಲ್ಲಿ ಪದನು ೪೨೫೭ ಪದಕ್ಕಂ ಸಂಪೂರ್ಣವಾಗಿ ಒಡೆಯರು ಭಕ್ತರ ಕೃಪೆಯಲಿ ನಿರೂಪದಿಂದ ಮಯಿಸೂರ ಶ್ರೀಗಿರಿದೇವನು ಸುಪುತ್ರನಾದ ಚೆಂನಬಸವಯ್ಯನು ಬರದ ಆರಾಧ್ಯ ಚಾರಿತ್ರ್ಯ.... ಭೋಗವಾದಿಯ ಮಠದ ಅತಿಥಿ ಸಿದ್ಧವೀರೇಶ್ವರದೇವರ ನಿರೂಪದಿಂದ ಮಹಿಸೂರ ಶ್ರೀಗಿರಿದೇವಯ್ಯನ ಸುಪುತ್ರನಾದ ಚೆನ್ನಬಸವಯ್ಯನು ಬರೆದ ಆರಾಧ್ಯ ಚಾರಿತ್ರ್ಯ ನಂಜಪ್ಪ ಅವರು ಮೈಸೂರು ಒಡೆಯರ ಸಂಸ್ಥಾನದ ಮಹಲಿನಲ್ಲಿರುವ ಬಸವಲಿಂಗಪ್ಪನ ಅಳಿಯನಾದ ನಂಜಪ್ಪ ಲಕ್ಷ್ಮೀಶನ ಜೈಮಿನಿ ಭಾರತ(೧೬೫೦), ಕುಮಾರವ್ಯಾಸನ ಕರ್ಣಾಟ ಭಾರತ ಕಥಾಮಂಜರಿ (೧೪೩೦) ಹಾಗೂ ಬಸವಣ್ಣನವರ ವಚನಗಳು(೧೧೩೦) ಹೀಗೆ ಮೂರು ಕೃತಿಗಳನ್ನು ರಚಿಸಿದ್ದಾನೆ. ಹೀಗೆ ಹಲವು ಹಸ್ತಪ್ರತಿಗಳನ್ನು ನೋಡಬಹುದು.

### ೨.೨. ಸಾಹಿತ್ಯ ಕೃತಿಗಳ ವಿಶ್ಲೇಷಣೆ

ಮೈಸೂರು ಒಡೆಯರ ಕಾಲದಲ್ಲಿನ ಸಂಸ್ಕೃತಿಯನ್ನು ತಿಳಿಯಲು ಹೆಚ್ಚಾಗಿ ನೆರವಾಗುವ ಸಾಧನವೆಂದರೆ ಸಾಹಿತ್ಯ. ಸಾಹಿತ್ಯದ ಪಠ್ಯವೊಂದು ಚಾರಿತ್ರಿಕ ಸಂದರ್ಭದಲ್ಲಿ ಬೆರೆತು ತನ್ನ ಅನ್ಯೋನ್ಯ ಸಂಬಂಧವನ್ನು ಪಡೆದಿರುತ್ತದೆ ಎಂಬ ವಾದವನ್ನು ನವ ಚರಿತ್ರೆಕಾರರು ಮಂಡಿಸಿದರು. ಇದರಿಂದ ಸಾಹಿತ್ಯ ಮತ್ತು ಚರಿತ್ರೆಯ ಅಂತರ್‌ಶಿಸ್ತೀಯ ನೆಲೆಗಳು ಅಸ್ತಿತ್ವಕ್ಕೆ ಬಂದವು. ಅಂದಿನ ದಿನಗಳಲ್ಲಿ ರಚನೆಯಾಗಿರುವ ಕೃತಿಗಳಿಂದ ಸಾಮಾಜಿಕ, ಧಾರ್ಮಿಕ, ರಾಜಕೀಯ ಒಟ್ಟಾರೆ ಸಾಂಸ್ಕೃತಿಕ ಚರಿತ್ರೆಯನ್ನು ವಿವರವಾಗಿ ತಿಳಿಯಬಹುದು. ಯದುರಾಯನಿಂದ ಸ್ಥಾಪಿತವಾದ ಮೈಸೂರು ಒಡೆಯರ ಸಂಸ್ಥಾನವು ರಾಜ ಒಡೆಯರ ಕಾಲದಲ್ಲಿ ಒಂದು ಭದ್ರ ನೆಲೆಯನ್ನು ಕಂಡುಕೊಂಡಿತು. ರಾಜ ಒಡೆಯರು ೧೫೭೮ರಿಂದ ೧೬೩೭ರಲ್ಲಿ ರಾಜರಾಗಿ ಆಳ್ವಿಕೆ ನಡೆಸುತ್ತಿದ್ದ ಕಾರ್ಯವೈಖರಿಯನ್ನು ಚಿದಾನಂದ ಕವಿಯು ತನ್ನ **ಮುನಿವಂಶಾಭ್ಯುದಯ**[೨೦] ಎಂಬ ಕೃತಿಯಲ್ಲಿ ಸಂಪೂರ್ಣವಾಗಿ ವರ್ಣಿಸಿದ್ದಾನೆ. ಈ ಕೃತಿಯು ಅಂದು ಹೇಗೆ ರಾಜರು ಜನಮತಗಳಿಸಿದ್ದರು ಹಾಗೂ ರೈತಾಪಿ ಪ್ರಜೆಗಳು ಹಿಂದಿನಿಂದ ಕೊಡುತ್ತಿದ್ದಂತಹ ತೆರಿಗೆಯನ್ನು ಈಗ ಕೊಟ್ಟರೆ ಸಾಕು ಅದಕ್ಕಿಂತ ಹೆಚ್ಚೇನನ್ನೂ ಕೊಡಬೇಕಾಗಿಲ್ಲವೆಂದು ಹೇಳಿ ರೈತರ ಅನುರಾಗವನ್ನು ಪಡೆದುಕೊಂಡಿದ್ದುದರ ಬಗ್ಗೆ ಬೆಳಕು ಚೆಲ್ಲುತ್ತದೆ. ಹಾಗೆಯೇ ಅವಿಧೇಯರಾಗಿ ವರ್ತಿಸಿದವರನ್ನು ಕಟುಶಿಕ್ಷೆಗೆ ಗುರಿಪಡಿಸುತ್ತಿದ್ದದನ್ನು ವಿವರಿಸಿದ್ದಾರೆ. ಹಾಗೆಯೇ ವಂಶಾವಳಿಯ ವಿವರಗಳನ್ನು ಕ್ರೋಡೀಕರಿಸಿದ್ದಾರೆ.

ರಂಗಸ್ವಾಮಿ ಎ. ಅವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬಂದಿರುವ **ಮೈಸೂರು ಒಡೆಯರ ಕಾಲದ ಸಾಹಿತ್ಯ**[೨೧] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಚಾಮರಾಜ ಒಡೆಯರು ಸಂಸ್ಥಾನದ ಗಡಿಗಳನ್ನು ವಿಸ್ತರಿಸುವುದರ ಜೊತೆಗೆ ಕಾವ್ಯರಚನೆಗೂ ಸ್ವಲ್ಪ ಗಮನ ಹರಿಸಿದಂತೆ ಕಂಡುಬರುತ್ತದೆ. ರಾಮಾಯಣದ ಏಳನೆಯ ಕಾಂಡಕ್ಕೆ ಚಾಮರಾಜೋಕ್ತಿ ವಿಲಾಸ ಎಂಬ ಹೆಸರಿನಲ್ಲಿ ಕನ್ನಡದ ಟೀಕೆಯನ್ನು ಬರೆದಿದ್ದಾರೆ. ಈ ಕೃತಿಯನ್ನು ಅರಸನು ರಚಿಸದೆ ವಿರೂಪಾಕ್ಷನೆಂಬ ವಿದ್ವಾಂಸನಿಂದ ಬರೆಯಿಸಿದ ಎಂಬ ಅನುಮಾನ ಬರುತ್ತದೆ. 'ವಿರೂಪಾಕ್ಷೇಣ ಧೀಮತಾ' ಕೃತವಾಗಿದಿರಬಹುದು. ಆದರೆ ಸಾಹಿತ್ಯಕವಾಗಿ ಇದರಲ್ಲಿ ವಿಶೇಷತೆ ಕಂಡುಬರುವುದಿಲ್ಲ. ಐದನೆಯ

ಚಾಮರಾಜ ಒಡೆಯರು ಒಂದರ್ಥದಲ್ಲಿ ಕಲೆ ಸಾಹಿತ್ಯಗಳಿಗೆ ಅಡಿಪಾಯವನ್ನು ಹಾಕಿದರು ಎಂದು ಹೇಳಬಹುದು. ಅನಂತರ ರಣಧೀರ ಕಂಠೀರವ ನರಸರಾಜ ಒಡೆಯರು ಸಾಹಿತಿಗಳಿಗೆ ಆಶ್ರಯದಾತನಾಗಿದ್ದನೆಂದು ತೋರುತ್ತದೆ. ಇವರ ಆಶ್ರಯದಲ್ಲಿ ಭಾಸ್ಕರ, ತಿಮ್ಮರಸ ಮತ್ತು ಗೋವಿಂದ ವೈದ್ಯ ಅಥವಾ ಭಾರತಿ ನಂಜರೆಂಬ ಕವಿಗಳು ಇದ್ದುದಾಗಿ ತಿಳಿದುಬರುತ್ತದೆ. ಭಾಸ್ಕರನು 'ಬೇಹಾರ ಗಣಿತ'ದಲ್ಲಿ ಖಗೋಳಜ್ಞಾನವನ್ನು ಕಾಲಮಾನವನ್ನು ಮತ್ತು ಹಬ್ಬ ಹರಿದಿನಗಳನ್ನು ತಿಳಿಸಲಾಗಿದೆ. ತಿಮ್ಮರಸನು 'ಮಾರ್ಕಂಡೇಯ ರಾಮಾಯಣ'ವನ್ನು ರಚಿಸಿದನೆಂದು ತಿಳಿದು ಬರುತ್ತದೆ.

ರಣಧೀರ ಕಂಠೀರವನ ಆಸ್ಥಾನ ಕವಿಯಾದ ಭಾರತಿನಂಜ ಅಥವಾ ಗೋವಿಂದ ವೈದ್ಯನೆಂಬ ಹೆಸರಿನಿಂದ ಪ್ರಸಿದ್ಧನಾಗಿದ್ದ ಕವಿ **ಕಂಠೀರವ ನರಸರಾಜ** ವಿಜಯವೆಂಬ ಕೃತಿಯನ್ನು ಕ್ರಿ.ಶ.೧೬೪೮ರಲ್ಲಿ ರಚಿಸಿದ್ದಾರೆ. ಈ ಕೃತಿಯನ್ನು ಶಾಮಶಾಸ್ತ್ರಿ ಆರ್. ಅವರು ೧೯೭೧ರಲ್ಲಿ ಹೊರತಂದಿದ್ದಾರೆ.[೨೨] ಕಾವ್ಯದ ಮೂಲಕ ತನ್ನ ರಾಜನ ದಿಗ್ವಿಜಯವನ್ನು ವರ್ಣಿಸುವುದು ಹಾಗೂ ತನ್ನ ಆಶ್ರಯದಾತನು ಯಾವ ಯಾವ ರಾಜ್ಯಗಳ ಮೇಲೆ ಯುದ್ಧ ಮಾಡಿ ಗೆದ್ದನೆಂಬ ವಿವರಗಳು ಈ ಕೃತಿಯಲ್ಲಿ ತಿಳಿದುಬರುತ್ತವೆ. ಈ ಕಾವ್ಯಕ್ಕೆ ಆಧಾರವಾಗಿ ಕಂಠೀರವ ನರಸರಾಜರನ್ನೇ ಆರಿಸಿಕೊಂಡು ಆತ ನಡೆಸಿದ ಮುಸ್ಲಿಂ ಸುಲ್ತಾನ ರಣದುಲ್ಲಾಖಾನ್‌ನ ಮೇಲಿನ ವಿಜಯ ಮತ್ತು ಆತನು ಸೋತು ಪಲಾಯನ ಮಾಡಿದ ವಿವರಗಳನ್ನು ಹೆಚ್ಚಾಗಿ ವಿವರಿಸುತ್ತದೆ. ಮೈಸೂರು ಮತ್ತು ಬಂಕಾಪುರದ ಸಂಬಂಧ, ಸಾಂಬಳ್ಳಿ, ಪಿರಿಯಾಪಟ್ಟಣಗಳ ಮುತ್ತಿಗೆ ಮತ್ತು ಅವು ವಶವಾದ ವರ್ಣನೆಯು ಮೂಡಿಬಂದಿದೆ. ದಳಪತಿಗಳ ಕಾರ್ಯ ಕೌಶಲತೆಯ ಬಗೆಗೆ ತಿಳಿಸುತ್ತದೆ. ಕಂಠೀರವ ನರಸರಾಜರ ಬಿರುದುಗಳಾದ ಏಕಾಂಗ ವೀರ, ಕರ್ನಾಟಕ ಚಕ್ರೇಶ, ಪರಬಲ, ಮೇಘಾನಿಲ, ಕೋಟಿ ಕೋಲಾಗಲ ಮುಂತಾದವುಗಳ ವಿವರವೂ ಇಲ್ಲಿ ಮೂಡಿ ಬಂದಿದೆ. ಆ ಕಾಲದ ರಾಜನ ರಾಜ ವೈಭವ, ರಾಜನ ಜೀವನ, ಎಲ್ಲಾಕ್ಕಿಂತ ಮುಖ್ಯವಾಗಿ ಮಹಾನವಮಿಯಂತಾ ದರ್ಬಾರು ಮತ್ತು ಜಂಬೂ ಸವಾರಿಗಳ ವರ್ಣನೆ ಸಹಜವಾಗಿ ಮೂಡಿ ಬಂದಿದೆ. ಮಹಾನಮಿ ಉತ್ಸವಕ್ಕೆ ಆಹ್ವಾನ ಪತ್ರಿಕೆ ವಿವರಗಳು, ಕಾಣಿಕೆ ಮೊದಲಾದ ವಿಚಾರಗಳನ್ನು ತಿಳಿಸುತ್ತಾರೆ. ಅಲ್ಲದೇ ಜನಸಾಮಾನ್ಯರನ್ನು ಗಮನದಲ್ಲಿಟ್ಟು ಕೊಂಡು ಈ ಕೃತಿಯನ್ನು ರಚಿಸಿರುವುದನ್ನು ನೋಡಬಹುದು. ಜನರ ವಿವರಗಳನ್ನು ನೀಡುತ್ತಾ ಜಾತಿಗಳಿಗನುಗುಣವಾಗಿ ಬೀದಿಗಳನ್ನು ವಿಂಗಡಿಸಿರುವುದನ್ನು ನೋಡಬಹುದು. ಬ್ರಾಹ್ಮಣರ ಬೀದಿ, ಕವಿಗಳ ಬೀದಿ ಎಂದು ಕರೆಯುತ್ತಿದ್ದರು. ಜನಸಾಮಾನ್ಯರ ಕಾಯಿಲೆಗಳಿಗೆ ಔಷಧಿಗಳನ್ನು ನೀಡಲು ವ್ಯವಸ್ಥೆ ಮಾಡಿದ್ದರ ವಿವರಗಳನ್ನು ನೋಡಬಹುದು.

ಚಾಮಯ್ಯ ಎಂಬ ಕವಿಯು ಕ್ರಿ.ಶ.೧೭೦೦ರ ಅವಧಿಯಲ್ಲಿ ದೊಡ್ಡ ದೇವರಾಜರನ್ನು ಕುರಿತು "ದೇವರಾಜ ಸಾಂಗತ್ಯ"ವನ್ನು ಬರೆಯುತ್ತಾ ಈ ರಾಜರ ಆಳ್ವಿಕೆಯ ಬಗ್ಗೆ, ಶೌರ್ಯ ಅಪಾರ ಸಾಮರ್ಥ್ಯಕ್ಕಾಗಿ 'ಮೂರು ಮನ್ನೆಯರ ಗಂಡ', 'ಪರರಾಯ ಭಯಂಕರ' ಎಂಬ ಬಿರುದುಗಳನ್ನು ವಿವರಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಸಾಹಿತ್ಯದ ಅಭಿವೃದ್ಧಿಯು ಉತ್ತುಂಗ ಶಿಖರಕ್ಕೆ ಏರಿತ್ತೆಂದೇ ಹೇಳಬಹುದು. ಇದಕ್ಕೆ ಕಾರಣರಾದ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಸಿಂಗರಾರ್ಯ, ಸಂಚಿ ಹೊನ್ನಮ್ಮ, ಕೆಂಪು ನಾರಾಯಣ, ಲಿಂಗರಾಜ, ಅಲ್ಲದೇ ಸ್ವತಃ ಚಿಕ್ಕದೇವರಾಜ ಒಡೆಯರೇ ಅನೇಕ ಕೃತಿಗಳು ಮತ್ತು ಕಾವ್ಯಗಳನ್ನು ರಚಿಸಿದ್ದಾರೆ. ಚಿಕ್ಕದೇವರಾಜ ಒಡೆಯರೇ

ಸ್ವತಃ ಸಪ್ತಪತಿ, ಚಿಕ್ಕದೇವರಾಜ ಸೂಕ್ತಿವಿಲಾಸ, ಚಿಕ್ಕದೇವರಾಯ ಭಿನ್ನಪಂ ಮುಂತಾದ ಗ್ರಂಥಗಳನ್ನು ರಚಿಸಿದ್ದಾರೆ. ಸೂಕ್ತಿವಿಲಾಸದಲ್ಲಿ ವರ್ಣಾಶ್ರಮ ಧರ್ಮದಲ್ಲಿನ ನಾಲ್ಕನೆಯರಾದ ಶೂದ್ರರ ಆದರ್ಶ ಹಾಗೂ ಕರ್ತವ್ಯಗಳ ಬಗ್ಗೆ ಸಂಕ್ಷಿಪ್ತವಾಗಿ ಹೇಳಿದ್ದಾರೆ. ವರ್ಣಾಶ್ರಮ ಧರ್ಮವನ್ನು ಉಳಿಸಿಕೊಂಡು ಶೂದ್ರರ ಉನ್ನತಿಗಾಗಿ ರಚಿಸಿರುವ ಈ ಕೃತಿಯು ಶ್ರೀ ಶೈಲಾರ್ಯನ ಸೂಕ್ತಿಯೊಂದಿಗೆ ಪ್ರಾರಂಭವಾಗುತ್ತದೆ. ಒಡೆಯರು ನಂಬಿದ್ದ ವಿಷ್ಣುಭಕ್ತಿ ಮತ್ತು ಶ್ರೀವೈಷ್ಣವ ಮತದ ತತ್ವಸಾರದ ಬಗ್ಗೆ ತಿಳಿಸಲಾಗಿದೆ. ತಿರುಮಲಾರ್ಯನು ರಚಿಸಿದ **ಚಿಕ್ಕದೇವರಾಜ ವಂಶಾವಳಿ**[೨೩] ಕೃತಿಯು ಚರಿತ್ರ ರೂಪದ ಗದ್ಯ ಗ್ರಂಥವಾಗಿದೆ. ಇಲ್ಲಿ ಚಿಕ್ಕದೇವರಾಜ ಒಡೆಯರನ್ನು ಕಥಾನಾಯಕನನ್ನಾಗಿ ಮಾಡಿಕೊಂಡು ಅವನ ಪೂರ್ವಿಕರ ವೃತ್ತಾಂತವನ್ನು ಕಾವ್ಯಮಯ ಗದ್ಯದಲ್ಲಿ ನಿರೂಪಿಸಿಕೊಂಡು ಹೋಗಲಾಗಿದೆ. ಈ ಕೃತಿಯು ಚಿಕ್ಕದೇವರಾಜರ ಅವಸಾನದ ಕಾಲದಲ್ಲಿ(ಕ್ರಿ.ಶ.೧೭೦೪) ಮಂತ್ರಿ ತಿರುಮಲೈಂಗಾರ್ಯನನ್ನು ಪ್ರಧಾನಿ ಅಪ್ಪಾಜಿಯನ್ನು ಕರೆಸಿ ತನ್ನ ಮಗನನ್ನು ಹಾಗೂ ರಾಜ್ಯವನ್ನು ನೋಡಿಕೊಳ್ಳುವಂತೆ ಹೇಳಿ ಅವರಿಗೆ ರಾಜ್ಯದ ಸಂಪೂರ್ಣ ಅಧಿಕಾರವನ್ನು ಕೊಟ್ಟಂತೆಯೂ, ಬಳಿಕ ಮಂತ್ರಿ ಪ್ರಧಾನಿಗಳು ಕಂಠೀರವ ಒಡೆಯರಿಗೆ ಪಟ್ಟವನ್ನು ಕಟ್ಟಿ ತಾವೇ ರಾಜ್ಯದ ಆಡಳಿತವನ್ನು ನೋಡುತ್ತಿದ್ದುದನ್ನು ತಿಳಿಸುವಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿದೆ. ಅಂತೆಯೇ ತಿರುಮಲೆ ರಾಜನಿಗೆ ತಿಳಿಸಿದ್ದ ಅಂಶಗಳನ್ನು ಬೇಹುಗಾರಿಕೆಯಿಂದ ಹೇಗೆ ಯಾವ ರೀತಿಯಿಂದ ತಿಳಿಯುತ್ತಾನೆ ಎಂಬುದು ಮುಖ್ಯ ನರಸರಾಜನು ಶ್ರೀರಂಗಪಟ್ಟಣವನ್ನು ವಶಪಡಿಸಿಕೊಳ್ಳುವನೆಂಬ ಹೆದರಿಕೆಯಿಂದ ತಿರುಮಲೆ ರಾಜನು ಊರನ್ನೇ ಬಿಟ್ಟು ಮಾಲಂಗಿ ಮಡುವಿನಲ್ಲಿ ಪ್ರಾಣ ಬಿಡುವ ಸನ್ನಿವೇಶವನ್ನು ಈ ಕೃತಿಯು ತಿಳಿಸುತ್ತದೆ.

ತಿರುಮಲಾರ್ಯನಿಂದ ರಚನೆಯಾದ ಮತ್ತೊಂದು ಕೃತಿ **ಚಿಕ್ಕದೇವರಾಜ ವಿಜಯ ಅಥವಾ ಅಪ್ರತಿಮ ವೀರಚರಿತ** ಚಂಪೂ ಕಾವ್ಯವಾಗಿದೆ. ಇಲ್ಲಿ ಮುಖ್ಯವಾಗಿ ಚಿಕ್ಕದೇವರಾಜ ಒಡೆಯರು ಸಾಧಿಸಿದ ವಿಜಯಗಳು, ಮರಾಠರನ್ನು ಸೋಲಿಸಿದ ವಿವರಗಳನ್ನು ತಿಳಿಸಿದ್ದಾರೆ. ಮೊಘಲರು, ನಿಜಾಮರ ಸಂಬಂಧಗಳ ವಿವರಗಳು, ನೂತನ ರಾಜ್ಯಭಾರ ಪದ್ಧತಿಯ ಬಗ್ಗೆ ಮೇಲಿನ ಗ್ರಂಥದಲ್ಲಿ ತಿಳಿಸಲಾಗಿದೆ. ಚಿಕ್ಕದೇವರಾಜರ 'ಗೀತಗೋಪಾಲ', 'ಚಿಕ್ಕದೇವರಾಜ ಭಿನ್ನಪಂ'ಗಳಲ್ಲಿ ವಿಷ್ಣು ಭಕ್ತಿಯ ಬಗ್ಗೆ ಹಾಗೂ ಸಂಗೀತದ ಬಗ್ಗೆ ಹೇಳುತ್ತಾ, ಚಿಕ್ಕದೇವರಾಜರು ವೀಣೆ ನುಡಿಸಿದರೆಂದರೆ ಕಸ್ತೂರಿಯ ಕಂಪಿನಂತೆ ಎಂದು ತಿರುಮಲಾರ್ಯರು ಹೇಳಿರುವುದು ಕಂಡುಬರುತ್ತದೆ. ಚಿಕ್ಕದೇವರಾಜ ಒಡೆಯರು ಆಡಳಿತಕ್ಕೆ ಕೊಟ್ಟ ಗಮನವನ್ನೇ ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಕ್ಕೂ ಕೊಟ್ಟಿದ್ದರೆಂಬುದು ಅನೇಕ ಗ್ರಂಥಗಳಿಂದ ತಿಳಿದುಬರುತ್ತದೆ. ಆಡಳಿತ ಕ್ರಮ, ತೆರಿಗೆ ಕಂದಾಯ ವಸೂಲಿ, ಪ್ರಾಂತ್ಯಗಳನ್ನು ಅನೇಕ ಸೀಮೆಗಳನ್ನಾಗಿಸಿ, ಅವುಗಳಿಂದ ಹೆಚ್ಚು ಕಂದಾಯವನ್ನು ಸಂಗ್ರಹಿಸಿ ನವಕೋಟಿ ನಾರಾಯಣ ಎಂಬ ಹೆಸರಿಗೆ ಕಾರಣವಾದ ಎಲ್ಲಾ ಅಂಶಗಳನ್ನು ಚಿಕ್ಕದೇವರಾಜ ವಿಜಯದಲ್ಲಿ ವರ್ಣಿಸಲಾಗಿದೆ.

ಸಿಂಗರಾರ್ಯನು **ಮಿತ್ರಾವಿಂದಾ ಗೋವಿಂದ** ಎಂಬ ನಾಟಕವನ್ನು ರಚಿಸಿದ್ದಾನೆ. ಇದು ಕನ್ನಡದಲ್ಲಿ ಉಪಲಬ್ಧವಾದ ಮೊಟ್ಟಮೊದಲ ನಾಟಕ. ನಾಟಕಕಾರ ತನಗಿರುವ ಶ್ರೀವೈಷ್ಣವ ನಿಷ್ಠೆಯನ್ನು ತೋರಿಸಲು ವಾಸುದೇವನನ್ನು ಕಥಾನಾಯಕನನ್ನಾಗಿ ಮಾಡಿಕೊಂಡು ವಿವರಿಸಿದ್ದಾನೆ. ಈತನ ಶಿಷ್ಯೆಯಾದ ಸಂಚಿಯ ಹೊನ್ನಮ್ಮ ಚಿಕ್ಕದೇವರಾಜ ಒಡೆಯರ ಆಸ್ಥಾನ ಕವಿಗಳಲ್ಲಿ ಒಬ್ಬಳಾಗಿದ್ದಳು.

ಇವಳ ಕೃತಿ 'ಹದಿಬದೆಯ ಧರ್ಮ' ೪೭೬ ಸಾಂಗತ್ಯ ಪದ್ಯಗಳಿಂದ ಕೂಡಿದ್ದು ಒಂಬತ್ತು ಸಂಧಿಗಳಲ್ಲಿ ವರ್ಣನೆಗೊಂಡಿದೆ. ಮೊದಲನೆಯ ಸಂಧಿಯಲ್ಲಿ ಮೈಸೂರು ದೊರೆಗಳ ಕಿರು ಚರಿತ್ರೆ, ಅವರಿಗಿದ್ದ ದೈವಬಲ, ತನ್ನ ಒಡತಿ ಮತ್ತು ರಾಜನ ಪಟ್ಟದರಸಿ ದೇವಮ್ಮಳ ಗುಣಗಾನ, ಪತಿವ್ರತಾಧರ್ಮದ ಮಹಿಮೆ ಮುಂತಾದ ವಿಷಯಗಳು ಮೂಡಿಬಂದಿವೆ.[೨೪]

ಚಿಕ್ಕುಪಾಧ್ಯಾಯನು ಕೂಡ ಯದುಗಿರಿ ಮಹಾತ್ಮ್ಯ, ವೆಂಕಟಗಿರಿ ಮಹಾತ್ಮ್ಯ, ಶ್ರೀರಂಗ ಮಹಾತ್ಮ್ಯ, ಶೇಷಧರ್ಮ ಮತ್ತು ಶುಕಸಪ್ತತಿ ಮತ್ತು ಕಾಮಂದಕನೀತಿ ಮೊದಲಾದ ಗದ್ಯ ಕೃತಿಗಳನ್ನು ರಚಿಸಿದ್ದಾನೆ. ಕಮಲಾಚಲ ಮಹಾತ್ಮ್ಯ, ಹಸ್ತಿಗಿರಿ ಮಹಾತ್ಮ್ಯೆ, ರುಕ್ಮಾಂಗದ ಚರಿತ್ರೆ, ದಿವ್ಯಸೂರಿ ಚರಿತೆ ಎಂಬ ಚಂಪೂ ಗ್ರಂಥಗಳನ್ನು ರಚಿಸಿದ್ದಾನೆ. ಯಾದವಗಿರಿ ಮಹಾತ್ಮ್ಯ, ಪಶ್ಚಿಮರಂಗ ಮಹಾತ್ಮ್ಯ, ಶ್ರೀರಂಗ ಶತಕ, ರಂಗಧಾಮಸ್ತುತಿ ಸಾಂಗತ್ಯ, ಚಿತ್ರಶತಕ ಸಾಂಗತ್ಯ ಎಂಬ ಸಾಂಗತ್ಯ ಕೃತಿಗಳನ್ನು ರಚಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿಮ್ಮಕವಿ, ಮಲ್ಲಿಕಾರ್ಜುನ ಕವಿ, ಮಲ್ಲರಸ, ಮೊದಲಾದವರು ಕೃತಿಗಳನ್ನು ರಚಿಸಿದ್ದಾರೆ.

ಕೃಷ್ಣರಾಜ ಒಡೆಯರ್ ಅವರ ಪಟ್ಟಮಹಿಷಿಯವರಾದ ಚಲುವಾಂಬೆಯು 'ವರನಂದೀ ಕಲ್ಯಾಣ', 'ವೆಂಕಟಾಚಲ ಮಹಾತ್ಮ್ಯ', 'ಲಾಲಿಯ ಪದ', 'ಅಲಮೇಲುಮಂಗೆ ಲಾಲಿಪದ', 'ತಲಕಾವೇರಿ ಮಹಾತ್ಮ್ಯ' ಟೀಕೆಯ ಕೃತಿಗಳನ್ನು ರಚಿಸಿದ್ದಾರೆ. ಮೈಸೂರು ಸಂಸ್ಥಾನದ ದಳವಾಯಿಗಳಾಗಿದ್ದ ಕಳಲೆಯ ನಂಜರಾಜರು ಕನ್ನಡ ಮತ್ತು ಸಂಸ್ಕೃತ ಭಾಷೆಗಳೆರಡರಲ್ಲಿಯೂ ಪಾಂಡಿತ್ಯ ಪಡೆದವರಾಗಿದ್ದು ಅವರು 'ಕುಕುದ್ಗಿರಿ ಮಹಾತ್ಮ', 'ಕಾಶೀ ಮಹಿಮೆ', 'ಗಳಗಪುರ ಮಹಿಮೆ', 'ಶಿವಭಕ್ತ ವಿಲಾಸ ದರ್ಪಣ', 'ಮಾರ್ಕಂಡೇಯ ಪುರಾಣ' ಗ್ರಂಥಗಳನ್ನು ಕನ್ನಡದಲ್ಲಿಯೂ ಹಾಗೂ 'ಗೀತ ಗಂಗಾಧರ' ಮತ್ತು 'ಶಿವಪದ ರೇಣುಕಾ ಸಹಸ್ರಂ' ಎಂಬ ಸಂಸ್ಕೃತ ಗ್ರಂಥಗಳನ್ನು ರಚಿಸಿ ಅಂದಿನ ಸಂಸ್ಕೃತಿಯನ್ನು ಪ್ರತಿಬಿಂಬಿಸಿದ್ದಾರೆ. ಬೆಟ್ಟದ ಚಾಮರಾಜ ಒಡೆಯರ ಕಾಲದಲ್ಲಿ ಉಪಾಧ್ಯಾಯರಾಗಿದ್ದ ಸಿಂಗಚಾರ್ಯರು 'ಶ್ರೀರಂಗ ಮಹಾತ್ಮೆ' ಎಂಬ ಗ್ರಂಥವನ್ನು ರಚಿಸಿರುವುದು ಕಂಡುಬರುತ್ತದೆ.[೨೫]

ಮುಮ್ಮಡಿ ಕೃಷ್ಣರಾಜ ಒಡೆಯರು ಸುಮಾರು ಐವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರಿಂದಲೇ ರಚಿತವಾದ 'ಶ್ರೀತತ್ವನಿಧಿ' ಎಂಬ ಗ್ರಂಥವು ೧೭೯೯ ರಿಂದ ೧೮೩೦ರ ಅವಧಿಯ ಆಡಳಿತದ ವಿವರಣೆಯನ್ನು ತಿಳಿಸುತ್ತದೆ. ಒಂಬತ್ತು ನಿಧಿಗಳು, ಈಜುಗಾರಿಕೆ, ದೊಣ್ಣೆವರಸೆ, ಕುಸ್ತಿ, ರಥ, ಗಜ, ಅಶ್ವ ಆರೋಹಣಗಳ ತರಬೇತಿ, ಜಟ್ಟಿ ಕಾಳಗದ ಬಗೆಗೆ ತಿಳಿಸುತ್ತದೆ.[೨೬] ಸೌಗಂಧಿಕಾ ಪರಿಣಯವು ಅಲ್ಲಿನ ರಾಜ ರಾಣಿಯರ ಬಗೆಗೆ ತಿಳಿಸುತ್ತದೆ. ಈ ಕೃತಿಯ ಕಾಲಾವಧಿಯ ಸನ್ನಿವೇಶದಲ್ಲಿ ಬ್ರಿಟಿಷರ ವಸಾಹತುಶಾಹಿಯ ಅನನುಕೂಲಗಳನ್ನು ತಿಳಿಯಬಹುದು.[೨೭] ಹಾಗೆಯೇ ಅಧಾತ್ಯ ರಾಮಾಯಣ, ಸಿರಿ ನಂಜುಂಡ ಶತಕ, ಶಂಕರ ಸಂಹಿತೆ, ಹರಿವಂಶದಾಲಾಸ್ಯ ಮಹಾತ್ಮೆ ಕೃತಿಗಳನ್ನು ರಚಿಸಿದ್ದಾರೆ. ಬಸವಪ್ಪ ಶಾಸ್ತ್ರಿಗಳು ಶಾಕುಂತಲ ವನ್ನು ಭಾಷಾಂತರಿಸಿದರು. ಇದರಿಂದ 'ಅಭಿನವ ಕಾಳಿದಾಸ' ಎಂಬ ಬಿರುದಿಗೆ ಪಾತ್ರರಾದರು.

ದೇವಚಂದ್ರನನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾದ ವೈದ್ಯ ಸೂರಿ ಪಂಡಿತನೊಬ್ಬಾತನು ಪ್ರೋತ್ಸಾಹಿಸಿ ಇವನಿಂದ 'ರಾಜಾವಳಿ ಕಥೆ'ಯನ್ನು ಬರೆಸಿದನು. ಈ ಕೃತಿಯನ್ನು

ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅರ್ಪಿಸಲು ಮೂರು ವರ್ಷಗಳಷ್ಟು ಸುಧೀರ್ಘ ಕಾಲವಾದರೂ ಕಾಲ ಕೂಡಿಬರಲಿಲ್ಲ. ಆದರೆ ಚಾಮರಾಜ ಒಡೆಯರ ಅರಸಿ ದೇವೀರಾಂಬೆಯು ಇದನ್ನು ಓದಿಸಿ ಕೇಳಿ ಸಂತೋಷಪಟ್ಟು ಕವಿಗೆ ಸನ್ಮಾನ ಮಾಡಿದಳೆಂದು ತಿಳಿದುಬರುತ್ತದೆ. ರಾಜಾವಳಿ ಕಥೆಯಲ್ಲಿ ಜೈನಮತಕ್ಕೆ ಸಂಬಂಧಿಸಿದ ಚರಿತ್ರೆ, ಅನೇಕ ಮಂದಿ ರಾಜರ ಚರಿತ್ರೆ, ಕೆಲಮಂದಿ ಕವಿಗಳ ವಿವರಗಳು ಬಂದಿವೆ. ಮೈಸೂರು ದೇಶದ ರಾಜರ ವಂಶಾವಳಿಯನ್ನು ಈ ಕೃತಿಯಲ್ಲಿ ಸಂಗ್ರಹವಾಗಿ ವಿವರಿಸಲಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಹೊಗಳಿರುವುದನ್ನು ತಿಳಿಯಬಹುದು. ಇಲ್ಲಿ ಹಳಗನ್ನಡ, ಹೊಸಗನ್ನಡವನ್ನು ಮಿಶ್ರಣ ಮಾಡಿ ತನ್ನ ಕೃತಿ ರಚಿಸಿರುವುದಾಗಿ ಹೇಳಿದ್ದಾನೆ. ಅಲ್ಲದೇ ಆ ಕಾಲದ ಸಾಮಾಜಿಕ ಜೀವನ, ಸಂಪ್ರದಾಯಗಳು, ಚರಿತ್ರೆ ಎಲ್ಲವೂ ಇವನ ಕಾವ್ಯಗಳಿಂದ ತಿಳಿದುಬರುತ್ತವೆ.[೨೮]

ಚಾಮರಾಜ ಒಡೆಯರ ಆಸ್ಥಾನ ಕವಿಗಳಲ್ಲಿ ಮುಖ್ಯರಾದ ಇತರ ಕವಿಗಳೆಂದರೆ ಸೋಸಲೆ ಅಯ್ಯಶಾಸ್ತ್ರಿ, ನಾರಾಯಣಶಾಸ್ತ್ರಿ, ಹಳ್ಳದಕೇರಿ ಸೀತಾರಾಮಶಾಸ್ತ್ರಿಗಳು, ಅಯ್ಯಾಶಾಸ್ತ್ರಿ ಅವರು 'ಯಕ್ಷ ಪ್ರಶ್ನೆ' ಮತ್ತು 'ರಾಜಭಕ್ತಿಲಹರಿ'ಗಳನ್ನು ಷಟ್ಪದಿಯಲ್ಲಿ ರಚಿಸಿದ್ದಾರೆ. ಮುಖ್ಯವಾಗಿ 'ಮಹಿಶೂರ ಮಹಾರಾಜ ಚರಿತ್ರಂ' ಕೃತಿಯು ಮೈಸೂರು ಒಡೆಯರ ವಂಶಾವಳಿಯನ್ನು ತಿಳಿಸುತ್ತದೆ.[೨೯]

ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಆಸ್ಥಾನದಲ್ಲಿ ಕವಿಗಳಿಗೆ ಲೇಖಕರಿಗೆ ಪ್ರೋತ್ಸಾಹ ನೀಡಿದ್ದರು. ಅವರ ದೃಷ್ಟಿ ಎಲ್ಲಾ ಮೈಸೂರು ರಾಜ್ಯವನ್ನು 'ಆದರ್ಶ ರಾಜ್ಯವನ್ನು' ಮಾಡುವ ಕಡೆಗಿತ್ತು. ಆದರೂ ನಂಜನಗೂಡಿನ ಶ್ರೀಕಂಠಶಾಸ್ತ್ರಿಗಳು ಮತ್ತು ಬೆಳ್ಳಾವೆ ನರಹರಿಶಾಸ್ತ್ರಿಗಳು ಇವರಿಬ್ಬರೂ ನೂರಾರು ನಾಟಕಗಳನ್ನು ರಚಿಸಿದ್ದಾರೆ.

ಜಯಚಾಮರಾಜ ಒಡೆಯರೂ ಸ್ವತಃ ಲೇಖಕರಾಗಿದ್ದರು. ಕರ್ನಾಟಕ ಸಂಗೀತದಲ್ಲಿ ಅವರಿಗೆ ಅಪಾರ ಬಲವಿದ್ದುದರಿಂದ ಅವರು ಅನೇಕ ಸಂಗೀತ ಕೃತಿಗಳನ್ನು ಬರೆದಿದ್ದಾರೆ. 'ದತ್ತಾತ್ರೇಯ' ಕೃತಿ ಇಂಗ್ಲಿಷಿನಲ್ಲಿ ರಚಿಸಿದ್ದು ವೇದಾಂತದಲ್ಲಿ ಆಸಕ್ತಿಯನ್ನು ತೋರುತ್ತದೆ. 'ಜಯಚಾಮರಾಜೇಂದ್ರ ಗ್ರಂಥ ಮಾಲೆ' ಮುಖ್ಯ[೩೦]

ಮೈಸೂರಿನ ಚರಿತ್ರೆಯಲ್ಲಿ ನಾಟಕಗಳು ಪ್ರಮುಖ ಪಾತ್ರ ವಹಿಸಿವೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಕಾಕನಕೋಟೆ(೧೯೮೮)[೩೧] ನಾಟಕವು ಒಂದು ಸಾಂಸ್ಕೃತಿಕ ಸಂಘರ್ಷದ ಕ್ರಿಯಾ ಕಥನವೂ ಆಗಿದೆ. ವಸಾಹತುಶಾಹಿ ನೆಲೆಯಲ್ಲಿ ಯಾಜಮಾನ್ಯದ ಆಧಿಪತ್ಯ ಮುಖ್ಯ. ರಣಧೀರ ಕಂಠೀರವ ನರಸರಾಜ ಒಡೆಯರ್ ಅವರು ಹಾಡಿಗೆ 'ಕಾಕನಕೋಟೆ'ಎಂಬ ಹೆಸರಿಟ್ಟು, ಹೆಗ್ಗಡೆಯಾಗಿ ಊರಿನ ಚಿಕ್ಕಯ್ಯನನ್ನು ನೇಮಿಸುತ್ತಾನೆ. ಇದರಿಂದ ಕಾಚನಲ್ಲಿ ಉಂಟಾದ ವಿಷಾದ ಯೋಗ, ಮೊಲ್ಲೆ ಮತ್ತು ಚಿಕ್ಕಯ್ಯರ ವೈವಾಹಿಕ ಸಂಬಂಧ ಕುರಿತು ಅವನ ಅಸಮಾಧಾನದ ಮಾತು, ಇಲ್ಲಿ ಒಂದು ಕೋಟೆ ಕಟ್ಟಬೇಕೆನ್ನುವ ರಣಧೀರರ ಮಾತಿಗೆ ಕಾಚ ಮತ್ತು ಊರಿನ ಗೌಡ ತೋರುವ ಪ್ರತಿರೋಧ, ಸಂಘರ್ಷದ ಮುಖ್ಯ ಚಿತ್ರಣ ಇಲ್ಲಿದೆ. ಮುಖ್ಯವಾಗಿ ಸಂಸ ಅವರ ನಾಟಕಗಳು ಮೈಸೂರಿನ ಚರಿತ್ರೆಯನ್ನು ಬಿಂಬಿಸಿವೆ. ರಣಧೀರ ಕಂಠೀರವ ನರಸರಾಜ ಒಡೆಯರ ಪಾತ್ರ ಸರಣಿಯಾಗಿ ಉಳಿದಿರುವ ನಾಟಕಗಳ ನಾಲ್ಕರಲ್ಲಿ ಕ್ರಮವಾಗಿ ಬೆಟ್ಟದ ಅರಸು,

‘ವಿಗಡವಿಕ್ರಮರಾಯ’, ‘ವಿಜಯನಾರಸಿಂಹ’, ‘ಮಂತ್ರಶಕ್ತಿ’ ನಾಟಕಗಳಲ್ಲಿ ಬರುತ್ತದೆ. ಚರಿತ್ರೆಯನ್ನು ಕ್ರಮವಾಗಿ ಬಳಸುವ ರೀತಿ ಸಂಸರದೇ ಮೊದಲನೆಯದೇನೂ ಅಲ್ಲ. ಈ ರೀತಿಯಲ್ಲಿ ೧೬ನೇ ಶತಮಾನದಲ್ಲೇ ಷೇಕ್ಸ್‌ಪಿಯರ್ ಬಳಸಿದ್ದಾನೆ. ನಾಟಕದ ಚಕ್ರತೆಯು ಇಲ್ಲಿ ಸಾಗುತ್ತದೆ. ಮೈಸೂರಿನ ಒಡೆಯರ ಚರಿತ್ರೆಯ ಮೂಲಕ ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದ ಘಟನೆಗಳನ್ನು ನಾಲ್ಕು ನಾಟಕಗಳಲ್ಲಿ ಕ್ರಮವಾಗಿ ಬಳಸಿದ್ದಾರೆ. ಅದನ್ನು ಹೀಗೆ ವಿವರಿಸಬಹುದು.

೧. **ಬೆಟ್ಟದ ಅರಸು:** ಈ ನಾಟಕದಲ್ಲಿ ಕಂಠೀರವ ನರಸರಾಜ ಒಡೆಯರು ೧೪ ವರ್ಷದ ಚಿಕ್ಕ ಹುಡುಗ. ಇಮ್ಮಡಿ ರಾಜ ಒಡೆಯರೊಂದಿಗೆ ಅರಮನೆಯಲ್ಲಿ ಇದ್ದಾನೆ. ಚಿಕ್ಕ ವಯಸ್ಸಿನವನಾದರೂ ಪ್ರೌಢಿಮೆ ತುಂಬಿದೆ.

೨. **ವಿಗಡವಿಕ್ರಮರಾಯ:** ಈ ನಾಟಕದಲ್ಲಿ ಕಂಠೀರವ ತೆರಕಣಾಂಬಿಯಲ್ಲಿ ನೆಲೆಸಿದ್ದಾನೆ. ಇಮ್ಮಡಿ ಒಡೆಯರ ಅಕಾಲಿಕ ಮರಣ ಹೊಂದಿದ ಕಾರಣ ಸಿಂಹಾಸನಕ್ಕೆ ದಳವಾಯಿಗಳು ಕಂಠೀರವ ನರಸರಾಜರನ್ನು ಆಯ್ಕೆ ಮಾಡಲಾಗಿದೆ. ಈ ಸಮಯಕ್ಕೆ ೨೩–೨೪ ವಯಸ್ಸಿನ ರಣಧೀರ ಪ್ರಬುದ್ಧ ಮನಸ್ಸಿನೊಂದಿಗೆ ದೈಹಿಕವಾಗಿಯೂ ಬೆಳೆದಿದ್ದಾರೆ. ತಿರುಚನಾಪಳ್ಳಿಯ ಜಟ್ಟಿಯನ್ನು ಸಂಹರಿಸಿದ ಖ್ಯಾತಿ ಈ ಸಮಯಕ್ಕಾಗಲೇ ಬಂದಿದೆ. ಈ ನಾಟಕ ಮುಗಿಯುವ ಸಮಯದಲ್ಲಿ ಕಂಠೀರವ ಸಿಂಹಾಸನಾರೂಢನಾಗುತ್ತಾನೆ. ಇಲ್ಲಿ ಮುಖ್ಯವಾಗಿ ಇಮ್ಮಡಿ ರಾಜ ಒಡೆಯರ ಸಾವು ಮತ್ತು ರಣಧೀರ ಕಂಠೀರವ ನರಸರಾಜ ಒಡೆಯರ್ ಅವರು ಜಟ್ಟಿಯ ಕಾಳಗದ ವಿಚಾರಗಳನ್ನು ಚರ್ಚಿಸಿದ್ದಾರೆ.[೩೨] ಮುಖ್ಯವಾಗಿ ಆಡಳಿತದಲ್ಲಿ ವಿಕ್ರಮರಾಯನ ಕುತಂತ್ರ ಇಲ್ಲಿ ಚಿತ್ರಿತವಾಗಿದೆ.

೩. **ವಿಜಯನಾರಸಿಂಹ:** ವಿಜಯನಾರಸಿಂಹ ನಾಟಕ ಆರಂಭವಾಗುವ ಹೊತ್ತಿಗೆ ಕಂಠೀರವ ಸಿಂಹಾಸನಾರೂಢನಾಗಿದ್ದಾನೆ. ತಿರುಚನಾಪಳ್ಳಿಯ ಜಟ್ಟಿಯನ್ನು ಕೊಂದು ಶೌರ್ಯ ಸಾಹಸದಿಂದ ಮೆರೆದ ಕಂಠೀರವ ನರಸರಾಜರ ಏಳಿಗೆಯನ್ನು ಸಹಿಸದ ತಿರುಚನಾಪಳ್ಳಿಯ ರಾಜ ಕಂಠೀರವ ನರಸರಾಜ ಒಡೆಯರನ್ನು ಮುಗಿಸಲು ೨೦ ಜನ ಜಟ್ಟಿಗಳನ್ನು ಕಳುಹಿಸುತ್ತಾರೆ. ಈ ಅವಕಾಶ ಬಳಸಿಕೊಂಡು ನೆರೆಯ ಶತ್ರುಗಳು, ಹಳೇ ವೈಷಮ್ಯದವರು, ವಿಕ್ರಮರಾಯನ ಅನುಯಾಯಿಗಳು ಇವನ ವಿರುದ್ಧ ಕೆಲಸ ಮಾಡಲು ಆರಂಭಿಸಿದ್ದಾರೆ. ಈ ಅವಕಾಶದಲ್ಲಿ ಕಂಠೀರ ಅವರು ‘ವಿಜಯನಾರಸಿಂಹ’ ಎಂಬ ಖಡ್ಗದಿಂದ ಸಂಹರಿಸಿ, ಬಂದ ಸಂಕಷ್ಟದಿಂದ ಪಾರಾಗುತ್ತಾರೆ.

೪. **ಮಂತ್ರಶಕ್ತಿ:** ಮಂತ್ರಶಕ್ತಿ ನಾಟಕ ರಣಧೀರನಿಗೆ ಸಂಬಂಧಿಸಿದ ಕೊನೆಯ ನಾಟಕ. ಈ ನಾಟಕದಲ್ಲಿ ರಣಧೀರನ ವಯಸ್ಸು ೩೨–೩೩. ಸಂಸರು ತಮ್ಮ ಕೊನೆಗಾಲದಲ್ಲಿ ಬರೆದ ನಾಟಕವಿದು. ಇದರಲ್ಲಿ ಕಂಠೀರವ ನರಸರಾಜ ಒಡೆಯರು ಸಫಲತೆಯ ಉತ್ತುಂಗಕ್ಕೆ ಏರಿದ್ದಾರೆ. ಈ ನಾಟಕಗಳಲ್ಲಿ ಒಂದು ಕಾಲದ ಸಾಮಾಜಿಕ ಚಿತ್ರಣವನ್ನು ವಿವರಿಸಿದ್ದಾರೆ.[೩೩] ಕಪಟಿಗಳು, ಶೂರರು, ರಾಣಿಯರು, ವರ್ತಕರು, ವೇಶ್ಯೆಯರು ಹೀಗೆ ವಿಭಿನ್ನ ಸಾಮಾಜಿಕ ಸ್ತರದ ಪಾತ್ರವನ್ನು ತಿಳಿಸಿದ್ದಾರೆ. ಈ ನಿಟ್ಟಿನಲ್ಲಿ ಸಂಸರ ನಾಟಕಗಳು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿ ಕೊಡುತ್ತಾರೆ.

ಗಿರೀಶ್ ಕಾರ್ನಾಡರ **ಟಿಪ್ಪುಸುಲ್ತಾನ ಕಂಡ ಕನಸು**(೨೦೦೦)[೩೪] ಎಂಬ ನಾಟಕವು ಟಿಪ್ಪುವಿನ ವ್ಯಕ್ತಿತ್ವವನ್ನು ತೋರಿಸುತ್ತದೆ. ಇಲ್ಲಿ ಮೆಕೆಂಝಿ ಮತ್ತು ಕಿರ್ಮಾನಿ ಅವರ ವಿಚಾರಧಾರೆಗಳಲ್ಲಿ

ಬಿಂಬಿಸಿದ್ದಾರೆ. ತನ್ನ ಶತ್ರುಗಳ ಆಗಮನವನ್ನು ವಿವಿಧ ರೂಪದಲ್ಲಿ ಕನಸಿನಲ್ಲಿ ಬರುವುದನ್ನು ಚಿತ್ರಿಸಲಾಗಿದೆ. ಭಾರತದ ಸ್ವಾತಂತ್ರ ಹೋರಾಟದ ಇತಿಹಾಸದಲ್ಲಿ ಟಿಪ್ಪುವಿನ ಸ್ಥಾನ ಏನು ಎಂಬುದನ್ನು ತಿಳಿಸುತ್ತದೆ. ಮರಾಠರು, ಹೈದರಾಬಾದಿನ ನಿಜಾಮರು ಮತ್ತು ಬ್ರಿಟಿಷರ ದಾಳಿಗಳನ್ನು ತಡೆಗಟ್ಟಲು ಪ್ರಯತ್ನಿಸುತ್ತಿರುವಾಗ ವಿವಿಧ ರೂಪದಲ್ಲಿ ಕಂಡ ಕನಸುಗಳನ್ನು ಚಿತ್ರಿಸಿದ್ದಾರೆ.

ಲಿಂಗದೇವರು ಹಳೆಮನೆ ಅವರು **ಮೈಸೂರು ಸಂಸ್ಥಾನದ ನಾಲ್ಕು ನಾಟಕಗಳು**(೨೦೧೦)[೩೫] ಎಂಬ ಕೃತಿಯನ್ನು ರಚಿಸಿದ್ದಾರೆ. **ಚಿಕ್ಕದೇವ ಭೂಪ** ನಾಟಕದಲ್ಲಿ ರೈತ ಬಂಡಾಯದ ಸುತ್ತ ರಾಜಕೀಯ ಬೆಳೆಯತೊಡಗಿತ್ತು. ಈ ನಾಟಕದಲ್ಲಿ ಚಿಕ್ಕದೇವರಾಜ ಒಡೆಯರು ವಿಧಿಸಿದ ತೆರಿಗೆ, ಅಧಿಕ ತೆರಿಗೆಯ ವಿರುದ್ಧ ಹೋರಾಡಲು ರೈತರು ಸಂಘಟಿಸುತ್ತಿದ್ದ ಜಂಗಮರ ಕಗ್ಗೊಲೆ, ವಿಶಾಲಾಕ್ಷ ಪಂಡಿತನ ಸಾವು ಇವೇ ಮೊದಲಾದ ಅಂಶಗಳನ್ನು ತಿಳಿಸುತ್ತದೆ. **ಹೈದರ್** ನಾಟಕದಲ್ಲಿ ಹೈದರ್ ಒಬ್ಬ ಸಾಮಾನ್ಯ ವ್ಯಕ್ತಿಯಾಗಿ ತನ್ನ ಶ್ರಮದಿಂದ ಮೇಲೇರುವ ಚಿತ್ರಣವಿದೆ. **ಶಾಪ** ನಾಟಕದಲ್ಲಿ ಮೈಸೂರು ಒಡೆಯರ ಪ್ರಾರಂಭಿಕ ದಿನಗಳನ್ನು, ಹೆಣ್ಣಿನ ಶೋಷಣೆಯಿಂದಾಗಿ ಹಾಕಿದ ಶಾಪದ ಚಿತ್ರಣವಿದೆ. ಅಲಮೇಲಮ್ಮನ ಶಾಪದ ವಿವರವಿದೆ. **ಅಂತೆಂಬರ ಗಂಡ** ನಾಟಕವು ಸಂಸರ ರಣಧೀರ ಕಂಠೀರವ ನರಸರಾಜ ಒಡೆಯರನ್ನು ಆದರ್ಶ ರಾಜರಾಗಿ ಚಿತ್ರಿಸಲಾಗಿದೆ. ಅದೇ ರೀತಿ ಮುಂದುವರಿದುದ್ದನ್ನು ಇಲ್ಲಿ ಗಮನಿಸಬಹುದು. ರಾಜಕೀಯ ದಾಳಗಳು ಹೇಗೆ ಉರುಳುತ್ತದೆ ಎಂಬುದು ನಾಟಕೀಯವಾಗಿದೆ ಎಂಬುದು ಮುಖ್ಯ.

ಈ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿಗಳು ಮೈಸೂರು ಒಡೆಯರ ಚರಿತ್ರೆ ಕಟ್ಟುವಿಕೆಯಲ್ಲಿ ಪ್ರಮುಖ ಪಾತ್ರ ವಹಿಸಿವೆ.

**ಅಡಿಟಿಪ್ಪಣಿಗಳು**

೧. ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ರಾಮದಾಸ ಪ್ರಭು(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ-೧(ಪ್ರಾಥಮಿಕ ಆಕರಗಳು ಮತ್ತು ಆಕರ ವಿಶ್ಲೇಷಣೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೪೯-೫೪೨.

೨. ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ), ಮೋಹನ್‌ಕೃಷ್ಣ ರೈ ಕೆ.(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ-೧ (ಚರಿತ್ರೆ ನಿರ್ಮಾಣದಲ್ಲಿ ಆನುಷಂಗಿಕ ಅಕರಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೫೫-೫೫೮.

೩. ಅದೇ, ಪು.೫೪೯-೫೬೩.

೪. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ-೫, ೧೯೭೬, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೫. ಭಟ್ಟ ಜಿ.ಎಸ್, ಜೀನಹಳ್ಳಿ ಸಿದ್ಧಲಿಂಗಪ್ಪ(ಸಂ), ನಾಗರಾಜರಾವ್ ಎಚ್.ಎಂ.(ಲೇ), ೨೦೧೦, ಮೈಸೂರು ದರ್ಶನ, ಕನ್ನಡ ಸಾಹಿತ್ಯ ಪರಿಷತ್ತು, ಮೈಸೂರು, ಪು.೨೬-೨೭.

೬. ಅದೇ, ಪು.೨೮

೭. ಅದೇ, ಪು.೨೯

೮. ನರಸಿಂಹಮೂರ್ತಿ ಎ.ವಿ, ೨೦೦೮, ಭಾರತೀಯ ನಾಣ್ಯ ಪರಂಪರೆ(ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ), ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೪೧–೧೪೨.

೯. ಅದೇ, ಪು.೧೪೨–೧೪೩.

೧೦. ಮೋಹನ್‌ಕೃಷ್ಣ ರೈ ಕೆ., ೨೦೦೯, ಚರಿತ್ರೆ ಕಥನ, ಪಲ್ಲವ ಪ್ರಕಾಶನ, ಬಳ್ಳಾರಿ, ಪು.೪.

೧೧. ವೆಂಕೋಬರಾವ್ ಬಿ., ೧೯೫೯, ಮೈಸೂರು ದೇಶದ ವಾಸ್ತುಶಿಲ್ಪ, ಸೌತೇರಿಯನ್ ಲಾಗ್ವೆಂಜ್ ಬುಕ್ ಟ್ರಸ್ಟ್ ಮದ್ರಾಸ್ ಮತ್ತು ವಿಚಾರ ಸಾಹಿತ್ಯ ಲಿಮಿಟೆಡ್, ಬೆಂಗಳೂರು.

೧೨. ಮಂಜಪ್ಪಶೆಟ್ಟಿ ಮಸಗಲಿ ಎಂ.ಪಿ, ೨೦೦೩, ಮೈಸೂರು ಅರಮನೆ, ಮಸಗಲಿ ಪ್ರಕಾಶನ, ಮೈಸೂರು, ಪು.೩೮–೫೦.

೧೩. ಪುಟ್ಟಸ್ವಾಮಿ ಬಿ.ಎಸ್, ೨೦೦೭, ಕೈಫಿಯತ್ತು ಕಂಡ ಮೈಸೂರು ರಾಜಕೀಯ ಚರಿತ್ರೆ, ಮುದ್ದು ಶ್ರೀ ಗ್ರಂಥಮಾಲೆ, ಬೆಂಗಳೂರು, ಪು.೪–೫.

೧೪. ಕಲಬುರ್ಗಿ ಎಂ.ಎಂ.(ಸಂ), ೧೯೯೪, ಕರ್ನಾಟಕದ ಕೈಫಿಯತ್ತುಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೭.

೧೫. ಅದೇ, ಪು.೩೩–೩೪.

೧೬. ಅದೇ, ಪು.೧೬೮–೧೭೦.

೧೭. ಅದೇ, ಪು.೧೯೩.

೧೮. ಅದೇ, ಪು.೧೯೫.

೧೯. ಸಣ್ಣಯ್ಯ ಬಿ.ಎಸ್.(ಸಂ), ೧೯೯೬, ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂಪುಟಗಳು, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೦. ಚಿದಾನಂದ ಕವಿ–ಮುನಿವಂಶಾಭ್ಯುದಯ, ಶಾಂತಿನಾಥ ದಿಬ್ಬದ(ಸಂ), ೨೦೦೭, ಮುನಿವಂಶಾಭ್ಯುದಯ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.

೨೧. ರಂಗಸ್ವಾಮಿ ಎ(ಪ್ರ.ಸಂ), ಹರಿಶಂಕರ್ ಎಚ್.ಎಸ್(ಲೇ), ೨೦೧೨, ಮೈಸೂರು ಒಡೆಯರ ಕಾಲದ ಸಾಹಿತ್ಯ, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು, ಪು.೬.

೨೨. ಗೋವಿಂದ ವೈದ್ಯ(ಮೂಲ), ಶಾಮಶಾಸ್ತ್ರಿ ಆರ್., ೧೯೭೧, ಕಂಠೀರವ ನರಸರಾಜ ವಿಜಯ, ಕನ್ನಡ ಅಧ್ಯಯನ ಸಂಸ್ಥೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೩. ತಿರುಮಲಾರ್ಯ(ಮೂಲ), ಮ.ಭಾ.ಭೊಯಿ(ಅನು), ೧೯೯೯, ಚಿಕ್ಕದೇವರಾಯ ವಂಶಾವಳಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೪. ರಂಗಸ್ವಾಮಿ ಎ (ಪ್ರ.ಸಂ), ಹರಿಶಂಕರ್ ಎಚ್.ಎಸ್ (ಲೇ), ೨೦೧೨, ಮೈಸೂರು ಒಡೆಯರ ಕಾಲದ ಸಾಹಿತ್ಯ, ಕನ್ನಡ ಅಧ್ಯಯನ ಮತ್ತು ಸಂಶೋಧನಾ ವಿಭಾಗ, ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯ, ಮೈಸೂರು, ಪು.೩೬.

೨೫. ಚಿನ್ನಸ್ವಾಮಿ ಸೋಸಲೆ ಎನ್, ೨೦೦೨, ಕರ್ನಾಟಕ ರಾಜಕೀಯ ಚರಿತ್ರೆ ಮತ್ತು ಸಾಹಿತ್ಯ, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ಪು.೧೧೫.

೨೬. ಮುಮ್ಮಡಿ ಕೃಷ್ಣರಾಜ ಒಡೆಯರ್(ಮೂಲ), ರಾಮಚಂದ್ರರಾವ್ ಎಸ್.ಕೆ.(ಸಂ), ೧೯೯೩, ಶ್ರೀತತ್ವನಿಧಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೭. ಮುಮ್ಮಡಿ ಕೃಷ್ಣರಾಜ ಒಡೆಯರ್(ಮೂಲ), ಶ್ರೀಮತಿ ಎಚ್.ಎಸ್(ಸಂ)., ೨೦೦೪, ಸೌಗಂಧಿಕಾ ಪರಿಣಯ, ಸಾಹಿತ್ಯ ಅಕಾಡೆಮಿ, ಬೆಂಗಳೂರು

೨೮. ದೇವಚಂದ್ರ(ಮೂಲ), ಬಿ.ಎಸ್.ಸಣ್ಣಯ್ಯ(ಸಂ), ೧೯೮೮, ರಾಜಾವಳಿ ಕಥಾಸಾರ, ಕನ್ನಡ ಅಧ್ಯಯನ ಸಂಸ್ಥೆ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೯. ಸೋಸಲೆ ಅಯ್ಯಶಾಸ್ತ್ರಿ, ೧೯೧೬, ಮಹಿಶೂರ ಮಹಾರಾಜ ಚರಿತ್ರಂ, ಮೈಸೂರು ಪ್ರೆಸ್, ಮೈಸೂರು.

೩೦. ವಿದ್ವಾನ್ ವಿ.ನಂಜುಂಡಸ್ವಾಮಿ, ೨೦೧೦, ಶ್ರೀಜಯಚಾಮರಾಜೇಂದ್ರ ಒಡೆಯರ ಕೃತಿಗಳು, ತುನುಮನ ಪ್ರಕಾಶನ, ಮೈಸೂರು.

೩೧. ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೮೮(ಐದನೆಯ ಮುದ್ರಣ), ಕಾಕನಕೋಟೆ, ಜೀವನ ಕಾರ್ಯಾಲಯ, ಬೆಂಗಳೂರು.

೩೨. ಸಂಸ, ೧೯೯೮(ದ್ವಿತೀಯ ಮುದ್ರಣ–೨೦೧೫), ವಿಗಡವಿಕ್ರಮರಾಯ, ತನುಮನ ಪ್ರಕಾಶನ, ಮೈಸೂರು.

೩೩. ಅಶೋಕ ಕುಮಾರ ರಂಜೇರೆ, ೨೦೦೨, ಸಾಹಿತ್ಯ ಮತ್ತು ಇತಿಹಾಸದ ಸಂಬಂಧಗಳು, ಸಿ.ವಿ.ಜಿ. ಪಬ್ಲಿಕೇಷನ್ಸ್, ಬೆಂಗಳೂರು, ಪು.೧೩೩–೧೩೪.

೩೪. ಗಿರೀಶ್ ಕಾರ್ನಾಡ್, ೨೦೦೦, ಟಿಪ್ಪು ಸುಲ್ತಾನ ಕಂಡ ಕನಸು, ಮನೋಹರ ಗ್ರಂಥಮಾಲೆ, ಧಾರವಾಡ.

೩೫. ಲಿಂಗದೇವರು ಹಳೆಮನೆ, ೨೦೧೦, ಮೈಸೂರು ಸಂಸ್ಥಾನದ ನಾಲ್ಕು ನಾಟಕಗಳು, ತುನುಮನ ಪ್ರಕಾಶನ, ಮೈಸೂರು.

# ಅಧ್ಯಾಯ ಮೂರು

# ಪತ್ರಾಗಾರ ಇಲಾಖೆಯ ದಾಖಲೆಗಳ ವಿಶ್ಲೇಷಣೆ

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಪ್ರಾಥಮಿಕ ಆಕರಗಳಾಗಿ ಪತ್ರಾಗಾರ ಇಲಾಖೆಯ ದಾಖಲೆಗಳು ಗುರುತಿಸಿಕೊಂಡಿವೆ. ಈ ದಾಖಲೆ, ಕಡತಗಳನ್ನು ಸಂಗ್ರಹಿಸಿ, ಸಂರಕ್ಷಣೆ ಮಾಡುವುದು ಪತ್ರಾಗಾರ ಇಲಾಖೆಯಾಗಿದೆ. ಕಾಲಾನುಕ್ರಮಣಿಕೆಯಲ್ಲಿ ಆಡಳಿತಾತ್ಮಕ ವಿಚಾರಗಳು ದಾಖಲೆ ಆಗಿರುತ್ತವೆ. ಆಡಳಿತದಲ್ಲಿ ಹೊರತಂದ ಆದೇಶಗಳು, ಯೋಜನೆಗಳು ಮೊದಲಾದವುಗಳ ಮಾಹಿತಿಗಳನ್ನು ಕ್ರೋಡೀಕರಿಸಲಾಗಿದೆ.

**೩.೧. ಕಡತಗಳು**

ಮೈಸೂರು ಒಡೆಯರ ಆಡಳಿತಕ್ಕೆ ಸಂಬಂಧಿಸಿದಂತೆ ಇಲಾಖೆಗಳಲ್ಲಿರುವ ಕಡತಗಳಲ್ಲಿ ನೈಜ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ. ಇವುಗಳಿಗೆ ಪ್ರತ್ಯೇಕವಾದ ಕೋಡ್ ಅಥವಾ ಸಂಖ್ಯೆಯನ್ನು ಕೊಡಲಾಗಿದೆ. ಅಗ್ರಿಕಲ್ಚರ್, ರೆವಿನ್ಯೂ ಡಿಪಾರ್ಟ್‌ಮೆಂಟ್, ಫೈನಾನ್ಸ್, ವಾಟರ್ ರಿಸೋರ್ಸ್ ಡಿಪಾರ್ಟ್‌ಮೆಂಟ್, ಮುನ್ಸಿಪಾಲಿಟಿ, ಅರ್ಬನ್ ಡೆವಲೆಪ್‌ಮೆಂಟ್, ಎಜುಕೇಷನ್ ಫೈಲ್‌ಗಳು ಹೀಗೆ ಸುಮಾರು ಫೈಲ್‌ಗಳನ್ನು ನೋಡಿ ವಿಷಯಕ್ಕೆ ತಕ್ಕಂತೆ ಬಳಸಿಕೊಳ್ಳಬಹುದಾಗಿದೆ. ಬೆಂಗಳೂರಿನ ರಾಜ್ಯ ಪತ್ರಾಗಾರ ಇಲಾಖೆ(ವಿಧಾನಸೌಧ)ಯಲ್ಲಿಯೇ ಸುಮಾರು ೨೪ ಲಕ್ಷ ಫೈಲ್‌ಗಳು ಇರುವುದನ್ನು ನೋಡಬಹುದು. ಹಾಗೆಯೇ ಮೈಸೂರು, ಮದ್ರಾಸ್, ದೆಹಲಿಯ ಪತ್ರಾಗಾರ ಇಲಾಖೆಗಳಲ್ಲಿಯೂ ಕಡತಗಳ ಸಂಖ್ಯೆ ಹೆಚ್ಚಾಗಿದೆ. ಈ ಕಡತಗಳಿಗೆ ಕೋಡ್ ಅಥವಾ ಸಂಖ್ಯೆ, ದಿನಾಂಕವನ್ನು ನಮೂದಿಸುತ್ತಾರೆ. ಉದಾಹರಣೆಗೆ: Agriculture and Industry - File No.S.56: SL.No.1.3. 7, 22, 29-35-1915, Education - File No.454-13-SL.NoS 1 to 7 1913-14, Mumicipal File No. 13-14-SL. No.7 to 36-1914, Dewan's office File 1917-SL.No.128 ಹೀಗೆ ನಮೂದಿಸುತ್ತಾರೆ.

ಕಡತನಗಳು ಒಡೆಯರ ಕಾಲದಲ್ಲಿನ ಆಡಳಿತದಲ್ಲಿ ಕೈಗೊಂಡ ಜನಹಿತ ಕಾರ್ಯಗಳ ವಿವರ, ನಿರ್ಮಾಣಗೊಂಡ ಕಟ್ಟಡಗಳು, ಸೇತುವೆಗಳು, ವಿದ್ಯಾಭ್ಯಾಸದ ಬೆಳವಣಿಗೆಗೆ ಕೈಗೊಂಡ ಕಾರ್ಯಗಳು ಇತ್ಯಾದಿ ವಿಚಾರಗಳನ್ನು ತಿಳಿಸುತ್ತವೆ. ಅತ್ಯಂತ ಪ್ರಮುಖ ಎನಿಸಿದ ಹಳ್ಳಿಯ, ತಾಲೂಕು, ಜಿಲ್ಲೆ ವಿವರಗಳನ್ನು ಒದಗಿಸುವ ಕಡತಗಳು ಅರಮನೆಯ ಇಲಾಖೆಯಲ್ಲಿ ಇವೆ.[೧]

ಅರಮನೆ ಕಂಟ್ರೋಲರ್ಸ್ ಅಫೀಸ್ ಮತ್ತು ಪ್ಯಾಲೆಸ್ ಆಫೀಸ್, ಹೋಬಳಿ ಇಲಾಖೆ, ಚಾಮುಂಡಿ ತೊಟ್ಟಿ ಇಲಾಖೆ, ಡೊನೇಷನ್ಸ್ ಇಲಾಖೆ, ಪ್ಯಾಲೆಸ್ ಎಸ್ಟೇಟ್ಸ್ ಆ್ಯಂಡ್ ಗಾರ್ಡನ್ ಇಲಾಖೆ, ಗೇಮ್ಸ್ ಆ್ಯಂಡ್ ಟೈಗರ್ಸ್ ಪ್ರಿಸರ್ವ್ಸ್ ಇಲಾಖೆ, ಪ್ಯಾಲೆಸ್ ಮರಾಮತ್ ಇಲಾಖೆ, ಕರೋಹಟ್ಟಿ ಇಲಾಖೆ, ಟೂರ್ಸ್ ಇಲಾಖೆ ಇವೇ ಮೊದಲಾದ ಕಡತಗಳನ್ನು ನೋಡಬಹುದು.

ಮುಖ್ಯವಾಗಿ ಅರಮನೆ ಕಂಟ್ರೋಲರ್ಸ್ ಆಫೀಸ್ ಮತ್ತು ಪ್ಯಾಲೇಸ್ ಆಫೀಸ್ ಕಡತಗಳಲ್ಲಿ ಪ್ಯಾಲೇಸ್‌ನಲ್ಲಿ ಪೆನ್‌ಷನ್ ಪಡೆಯುತ್ತಿದ್ದ ವ್ಯಕ್ತಿಗಳ ವಿವರ, ಭೂ ಸ್ವಾಧೀನ ವಿವರ, ಅರಮನೆ ಜಾಗ ಮಾರಾಟ ವಿವರ, ದೇವಸ್ಥಾನಕ್ಕೆ(ನಂಜನಗೂಡು) ಜಾಗ ನೀಡಿದ ವಿವರ, ಅರಸು ಜನಾಂಗದ ವಿವರ, ಇಲಾಖೆ ನೌಕರ/ಅಧಿಕಾರಿಗಳ ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಹಾಗೂ ಇತರೆ ಸಂದರ್ಭಗಳಲ್ಲಿ ಮಹಾರಾಜರಿಗೆ ಭಕ್ಷೀಸ್‌ಗಾಗಿ ಸಲ್ಲಿಸಿದ ಅರ್ಜಿಗಳ ವಿವರಗಳನ್ನು ತಿಳಿಯಬಹುದು.[೨] ಅವಸರದ ಹೋಬಳಿ ಇಲಾಖೆ ಕಡತಗಳಲ್ಲಿ ಮುಖ್ಯವಾಗಿ ಮಹಾರಾಜರ ದಿನನಿತ್ಯದ ಕೆಲಸಗಳನ್ನು ಮಾಡುತ್ತಿದ್ದ ನೌಕರರ ವಿವರ, ಹೆಸರಾಂತ ನಾಟಕಕಾರರು, ಸಂಗೀತ ವಿದ್ವಾಂಸರು, ವೀಣೆ ನುಡಿಸುವವರು, ಕಲಾವಿದರು ಇವರ ಮಾಹಿತಿ ತಿಳಿಯಬಹುದು.[೩] ಚಾಮುಂಡಿ ತೊಟ್ಟಿ ಕಡತಗಳಲ್ಲಿ ಅರಮನೆ ಪುರೋಹಿತರು, ಸಂಸ್ಕೃತ ವಿದ್ವಾಂಸರು, ವೈದ್ಯರು, ವೇದಾಂತ ಪುರಾಣಪ್ರಸಿದ್ಧರ ವಿವರಗಳನ್ನು ನೋಡಬಹುದು.[೪] ಮುಮ್ಮಡಿ ಕೃಷ್ಣರಾಜ ಒಡೆಯರ್, ಚಾಮರಾಜ ಒಡೆಯರ್, ವಾಣಿವಿಲಾಸ ಸನ್ನಿಧಾನದವರು, ನಂತರ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ತಮ್ಮ ಆಡಳಿತದ ಅವಧಿಯಲ್ಲಿ ಸಂಸ್ಥೆ, ಮಠ, ದೇವಸ್ಥಾನ, ಶಾಲಾ-ಕಾಲೇಜು, ಗೋದಾಮುಗಳಿಗೆ ಇನ್ನಿತರ ವ್ಯಕ್ತಿಗಳಿಗೆ ನೀಡಿದ ಧನಸಹಾಯ, ಕೊಡುಗೆ, ಪ್ರೋತ್ಸಾಹಧನ ಇತ್ಯಾದಿ ಮಾಹಿತಿ ಡೊನೇಷನ್ ಇಲಾಖೆ ಕಡತಗಳಲ್ಲಿವೆ.[೫] ದೇವಾಲಯಗಳಿಗೆ ನೀಡಿದ ವಿವಿಧ ಧಾನದತ್ತಿಗಳ ವಿವರ, ಶ್ರೀಕ್ಷೇತ್ರ ಸುತ್ತೂರಿಗೆ ನೀಡಿದ ದಾನದ(ಆನರ್ಸ್) ವಿವರಗಳನ್ನು ಆನರ್ ಕಡತಗಳಲ್ಲಿ ನೋಡಬಹುದು.[೬] ಗೇಮ್ಸ್ ಆ್ಯಂಡ್ ಟೈಗರ್ ಪ್ರಿಸರ್ವ್ಸ್ ಎಂಬ ಇಲಾಖೆ ಕಡತಗಳಲ್ಲಿ ಮಹಾರಾಜರು ತಮ್ಮ ಸಾಮಂತರು, ಇತರ ಸಂಸ್ಥಾನದ ರಾಜರು, ಪರಿವಾರದವರು ಭೇಟಿ ನೀಡಿದ ಸಂದರ್ಭದಲ್ಲಿ ಅವರನ್ನು ಮೈಸೂರು ಜಿಲ್ಲೆಯ ಅರಣ್ಯ ಪ್ರದೇಶಗಳ ಬಂಡೀಪುರ, ಹೆಚ್.ಡಿ.ಕೋಟೆಯ ಅರಣ್ಯಗಳಿಗೆ ಶಿಕಾರಿ ಕೈಗೊಳ್ಳುತ್ತಿದ್ದ ವಿವರಗಳನ್ನು ತಿಳಿಯಬಹುದು.[೭] ಪ್ಯಾಲೆಸ್ ಎಸ್ಟೇಟ್ ಅಂಡ್ ಗಾರ್ಡನ್ ಇಲಾಖೆ ಕಡತಗಳಲ್ಲಿ ಮೈಸೂರು ಸುತ್ತಮುತ್ತಲಿನ ಹಾರೋಹಳ್ಳಿ ಕಾವಲ್, ಬೋಗಾದಿ ಕಾವಲ್ ಇತರ ಸ್ಥಳಗಳಿಂದ ಹಸುಗಳಿಗೆ ಹುಲ್ಲು ಸರಬರಾಜು, ಬೆಳೆದ ಭತ್ತ, ಮತ್ತಿತರ ಆಹಾರ ಅರಮನೆಗೆ ಸರಬರಾಜು ಆಗುತ್ತಿದ್ದ ವಿವರಗಳನ್ನು ಗಮನಿಸಬಹುದು.[೮] ಪ್ಯಾಲೆಸ್ ಮರಾಮತ್ ಇಲಾಖೆ ಕಡತಗಳಲ್ಲಿ ಮೈಸೂರಿನ ಸುತ್ತಮುತ್ತ ಕಟ್ಟಿಸಿದ ಅರಮನೆ, ದೇವಾಲಯ, ಮಠ, ದಾನದತ್ತಿಗಳ ವಿವರಗಳು ಮುಖ್ಯವಾಗಿವೆ.[೯] ಕರೋಹಟ್ಟಿ ಇಲಾಖೆ ಕಡತಗಳಲ್ಲಿ ಸ್ಥಳೀಯ ಹಸುಗಳ ಮಾಹಿತಿ ಇದ್ದು, ಇವುಗಳನ್ನು ವಿವಿಧ ರೀತಿಯಲ್ಲಿ ಉಪಯೋಗಿಸಿಕೊಂಡ ಮಾಹಿತಿ ಲಭ್ಯವಾಗಿದೆ.[೧೦] ಟೂರ್ಸ್ ಇಲಾಖೆಯ ಕಡತಗಳು ಮಹಾರಾಜರು ಜನರ ಕಷ್ಟಗಳನ್ನು ತಿಳಿಯಲು ಪ್ರವಾಸ ಕೈಗೊಂಡು ಅಲ್ಲಿ ಅಭಿವೃದ್ಧಿಗೊಳಿಸಿದ ವಿಚಾರಗಳನ್ನು ತಿಳಿಸುತ್ತವೆ.[೧೧] ವಸಾಹತುಶಾಹಿ ಆಡಳಿತಕ್ಕೆ ಸಂಬಂಧಿಸಿದ ಅನೇಕ ಕಡತಗಳನ್ನು ಮತ್ತು ದಾಖಲೆಗಳನ್ನು ಸಹ ಗಮನಿಸಬಹುದು.

ಗೋಪಾಲ್ ಎಂ.ಎಚ್.ಅವರು **ಬ್ರಿಟಿಷ್ ಸೋರ್ಸ್ ಆಫ್ ದಿ ಎಕಾನಮಿಕ್, ಪೊಲಿಟಿಕಲ್ ಆ್ಯಂಡ್ ಸೋಷಿಯಲ್ ಹಿಸ್ಟರಿ ಆಫ್** ದಿ **ಮೈಸೂರು ಸ್ಟೇಟ್ ವಾಲ್ಯೂಮ್** ೧)೧೭೯೯-೧೮೧೨)[೧೨] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ಬ್ರಿಟೀಷರ ಆಕರಗಳಲ್ಲಿ ಮೈಸೂರಿನ ಆರ್ಥಿಕತೆ, ರಾಜಕೀಯ, ಸಾಮಾಜಿಕ ಆಡಳಿತದ ವಿಚಾರಗಳನ್ನು ತಿಳಿಯಬಹುದು. ರೆಕಾರ್ಡ್ಸ್‌ಗಳು, ದೊರೆತ ಅಂಕಿ-ಅಂಶಗಳ ಅಧ್ಯಯನ, ಆಡಳಿತದ ವಿಚಾರಗಳು, ಸಾಹಿತ್ಯ ಆಕರಗಳು, ದೊರೆತ ಪತ್ರಿಕೆಗಳು, ಪುಸ್ತಕಗಳು ಮುಖ್ಯವಾಗಿವೆ. ವಿಚಾರಗಳಿಗೆ ಸಂಬಂಧಿಸಿದಂತೆ ಯಾವ ಯಾವ ಪತ್ರಾಗಾರ ಇಲಾಖೆಗಳಲ್ಲಿ ಆಕರಗಳು ದೊರೆತಿವೆ ಎಂಬ ಮಾಹಿತಿಯು ಮುಖ್ಯವಾಗಿವೆ. ಒಡೆಯರ ಆಡಳಿತ, ದಿವಾನರ ಆಡಳಿತದ ವಿಚಾರಗಳನ್ನು ವಿವಿಧ ಕಡತಗಳಲ್ಲಿ ತಿಳಿಸುತ್ತಾ, ದಿವಾನ್ ಪೂರ್ಣಯ್ಯನವರ ಆಡಳಿತದ ಅಭಿವೃದ್ಧಿಗೆ ಕೈಗೊಂಡ ಕಾರ್ಯಗಳನ್ನು ಮೂಲದಾಖಲೆಯ ರೂಪದಲ್ಲಿ ಗಮನಿಸಬಹುದಾಗಿದೆ.[೧೨]

ಗೋಪಾಲ್ ಎಂ.ಎಚ್. ಅವರು **ಬ್ರಿಟಿಷ್ ಸೋರ್ಸ್ ಆಫ್** ದಿ **ಎಕಾನಮಿಕ್ ಪೊಲಿಟಿಕಲ್ ಆ್ಯಂಡ್ ಸೋಷಿಯಲ್ ಹಿಸ್ಟರಿ ಆಫ್** ದಿ **ಮೈಸೂರು ಸ್ಟೇಟ್, ವಾಲ್ಯೂಮ್** ೨, ೧೮೧೩-೧೮೩೨(೧೯೯೩)[೧೩] ಎಂಬ ಆಕರದ ಕೃತಿಯನ್ನು ಹೊರತಂದಿದ್ದಾರೆ. ಇಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಆದ ಆಡಳಿತಾತ್ಮಕ ಸುಧಾರಣೆಗಳ ವಿಚಾರಗಳು ಮುಖ್ಯ. ರೈತರ ಕಂದಾಯ ಇವೇ ಮೊದಲಾದ ಅಂಶಗಳನ್ನು ವಿವರಿಸಿದ್ದಾರೆ. ಅಭಿವೃದ್ಧಿ ಕಾರ್ಯಗಳಿಗಾಗಿ ಖರ್ಚು ಮಾಡಿದ ವಿವರಗಳನ್ನು ತಿಳಿಸಿದ್ದಾರೆ. ಗ್ರಾಮಗಳಲ್ಲಿ ಸಂಗ್ರಹಿಸಿದ ಜಮಾಬಂದಿಯ ವಿವರ, ಹಬ್ಬ-ಹರಿದಿನಗಳಿಗೆ ಮಾಡಿದ ಖರ್ಚು, ವ್ಯಾಪಾರ-ವಾಣಿಜ್ಯದ ವಿವರಗಳು, ಜಿಲ್ಲೆಯ ಎಲ್ಲಾ ಅಭಿವೃದ್ಧಿ ಕಾರ್ಯಗಳು, ಖರ್ಚು-ವೆಚ್ಚಗಳು, ಸ್ಥಳೀಯ ಪಾಳೆಯಗಾರರು, ಗ್ರಾಮಾಡಳಿತದಲ್ಲಿನ ಶೇಕ್‌ದಾರರು, ಅಮಲ್ದಾರರು ನಡೆಸುವ ಆಡಳಿತದ ವಿಚಾರ, ವಿಕೇಂದ್ರೀಕರಣದ ಆಡಳಿತದ ವಿಚಾರಗಳನ್ನು ತಿಳಿಯಬಹುದಾಗಿದೆ. ಆಡಳಿತಕ್ಕೆ ಸಂಬಂಧಿಸಿದಂತೆ ಸುಮಾರು ೧೨,೮೦೦ ಫೈಲ್‌ಗಳು, ಡೈರಿಗಳು ಮಾಹಿತಿಯನ್ನು ನೀಡುತ್ತವೆ. ಲೆಕ್ಕಪತ್ರ ತೆರಿಗೆ, ನೀರಿನ ಸರಬರಾಜು, ಕೃಷಿ, ಪೆನ್ಷನ್, ಅಫಿಷಿಯಲ್ ಅಪಾಯಿಂಟ್‌ಮೆಂಟ್‌ಗಳು, ಶಾಲೆಗಳ ಶಿಕ್ಷಕರ ನೇಮಕಾತಿ, ಅಧಿಕಾರಿ, ಕೆಲಸಗಾರರ ನೇಮಕ, ಆರ್ಟಿಕಲ್ಚರ್, ದಸರಾ ಉತ್ಸವ ಇನ್ನೂ ಮುಂತಾದವುಗಳ ಬಗೆಗೆ ವಿವರಗಳನ್ನು ಈ ಕಡತಗಳಲ್ಲಿ ನೋಡಬಹುದು.

ಕಡತಗಳಲ್ಲಿ ಸ್ಥಳೀಯ ಮಟ್ಟದ ಗ್ರಾಮ, ಹೋಬಳಿ, ತಾಲ್ಲೂಕುಗಳ ವಿವರಗಳು, ವಿವಿಧ ಕಟ್ಟಡಗಳ ವಿವರ, ನೀರಾವರಿ, ಅರಮನೆಯಲ್ಲಿ ಅಧಿಕಾರಿಗಳು, ಕೆಲಸಗಾರರ ನೇಮಕ, ಶಾಲೆಗಳಲ್ಲಿ ಶಿಕ್ಷಕರ ನೇಮಕ ಇವೇ ಮೊದಲಾದ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ.

ವಿಷಯಕ್ಕೆ ಸಂಬಂಧಿಸಿದಂತೆ ಈ ಪ್ರಾಥಮಿಕ ಆಕರಗಳನ್ನು ಎಷ್ಟರಮಟ್ಟಿಗೆ ಬಳಸಿ ಕೊಂಡಿದ್ದಾರೆ ಎಂಬುದನ್ನು ಇಲ್ಲಿ ತಿಳಿಯಬಹುದು. ಇಲ್ಲಿ ಮುಖ್ಯವಾಗಿ ೧೮೬೨, ೧೯೬೩, ೧೮೬೪, ೧೮೬೫ ರಿಂದಲೇ ಕಡತಗಳು ಸಿಕ್ಕಿವೆ. ಈ ಕಡತಗಳಲ್ಲಿ ಆಡಳಿತ ಆದ ಖರ್ಚು-ವೆಚ್ಚ ಮೊದಲಾದ ವಿಚಾರಗಳನ್ನು ತಿಳಿಯಬಹುದು. ಜೊತೆಗೆ ಜನಗಣತಿಯ ವರದಿಗಳನ್ನು

ನೋಡಬಹುದು. ೧೮೭೧ ರಿಂದ ಇಲ್ಲಿಯವರೆಗಿನ ಜನಗಣತಿಯ ವರದಿಯ ಕಡತಗಳು ಮುಖ್ಯವಾದವು. ಈ ವರದಿಯಲ್ಲಿ ಲಿಂಗಾನುಪಾತ, ವಯಸ್ಸು, ತಾಲ್ಲೂಕಿನ ಭೌಗೋಳಿಕತೆ, ಕೃಷಿ, ವ್ಯಾಪಾರ, ಆರೋಗ್ಯ, ಶಿಕ್ಷಣ ಮೊದಲಾದ ವಿಚಾರಗಳನ್ನು ತಿಳಿಯಬಹುದು.

### ೩.೨. ಆಡಳಿತಾತ್ಮಕ ದಾಖಲೆಗಳು

ಈ ದಾಖಲೆಗಳಿಂದ ಆಡಳಿತಕ್ಕೆ ಸಂಬಂಧಿಸಿದಂತೆ ಕೈಗೊಂಡ ಕಾರ್ಯಗಳ ವಿವರಗಳನ್ನು ಇಲ್ಲಿ ತಿಳಿಯಬಹುದು. ಆಡಳಿತಾತ್ಮಕ ವರದಿಗಳನ್ನು ೧೮೭೨ರಿಂದಲೇ ದಾಖಲಿಸಲಾಗಿದೆ. ಜೊತೆಗೆ ಇದೇ ಆಡಳಿತದಲ್ಲಿ ಪ್ರೊಸೀಡಿಂಗ್ಸ್‌ಗಳನ್ನು ಗಮನಿಸಬಹುದು. ಮೈಸೂರಿನ ಮಹಾರಾಜರ ಸರ್ಕಾರ ಕೆಲವು ಸರ್ಕಾರಿ ಆದೇಶಗಳನ್ನು ಹೊರಡಿಸುತ್ತಿತ್ತು, ಅವುಗಳನ್ನು ಪ್ರೊಸೀಡಿಂಗ್ಸ್‌ಗಳ ರೂಪದಲ್ಲಿ ಜಾರಿಗೆ ತರಲಾಗಿದೆ. ಪ್ರತಿಯೊಂದು ಸಭೆಯ ನಡಾವಳಿಗಳನ್ನು ಗೆಜೆಟ್ ರೂಪ ದಲ್ಲಿ(ಸರ್ಕಾರಿ ಆದೇಶಗಳು) ಜಾರಿಗೊಳಿಸಲಾಗಿದೆ. ಆಡಳಿತಕ್ಕೆ ಸಂಬಂಧಿಸಿದಂತೆ ಕೃಷಿ, ಕೈಗಾರಿಕೆ, ನೀರಾವರಿ, ರಸ್ತೆ ಸಾರಿಗೆ, ಶಿಕ್ಷಣ ಇವೇ ಮೊದಲಾದ ಅಭಿವೃದ್ಧಿ ಯೋಜನೆಗಳ ವಿವರಗಳನ್ನು ಸಮಗ್ರವಾಗಿ ಇವುಗಳಿಂದ ತಿಳಿಯಬಹುದು. ಜೊತೆಗೆ ಬಹುಮುಖ್ಯವಾಗಿ ರಕ್ಷಣೆಗೆ ಸಂಬಂಧಿಸಿದ ವರದಿ, ತೆರಿಗೆ, ಕಾನೂನುಗಳು, ಕಾಯ್ದೆಗಳು ಇವೇ ಮೊದಲಾದ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ.[೧೪]

ಪತ್ರಾಗಾರ ಇಲಾಖೆಯಲ್ಲಿ ಚಿಕ್ಕ ಚಿಕ್ಕ ಗ್ರಂಥಾಲಯಗಳನ್ನು ಸ್ಥಾಪಿಸಲಾಗಿದೆ. ಇತಿಹಾಸ, ಪ್ರಾಕ್ತನಶಾಸ್ತ್ರ, ನಾಣ್ಯಶಾಸ್ತ್ರ, ಶಾಸನಗಳು ಹಾಗೂ ಸಂಸ್ಕೃತಿಗೆ ಸಂಬಂಧಿಸಿದಂತೆ ದಾಖಲೆಗಳನ್ನೊಳ ಗೊಂಡ ಹಲವಾರು ಕೃತಿಗಳನ್ನು ಸಂಗ್ರಹಿಸಲಾಗಿದೆ. **ಕರ್ನಾಟಕ ಲೆಟರ್ಸ್ ವಾಲ್ಯೂಮ್ ೨(೧೯೯೪)**[೧೫]ರಲ್ಲಿ ದಿವಾನ್ ಪಿ.ಎನ್.ಕೃಷ್ಣಮೂರ್ತಿ ಅವರ ಆಡಳಿತದ ದಾಖಲೆಗಳನ್ನು ಸಂಗ್ರಹಿಸಿ ಕೃತಿ ರೂಪದಲ್ಲಿ ಹೊರತರಲಾಗಿದೆ. ಇವರ ಕಾಲದಲ್ಲಿ ಕೈಗೊಂಡ ಯೋಜನೆಗಳು, ಕೃಷಿ, ಕೈಗಾರಿಕೆ, ಶಿಕ್ಷಣ, ಉದ್ಯೋಗ, ಬ್ಯಾಂಕಿಂಗ್, ಸಾರಿಗೆ, ರೈಲ್ವೆ ಇವೇ ಮೊದಲಾದ ವಿಚಾರಗಳ ದಾಖಲೆ ಮುಖ್ಯವಾಗಿ ಗ್ರಹಿಸಬಹುದಾಗಿದೆ. ಒಡೆಯರು ಮತ್ತು ದಿವಾನರ ಅನುಮತಿ ಪತ್ರ, ಯೋಜನೆಗೆ ಬಳಸಿದ ಖರ್ಚು-ವೆಚ್ಚಗಳು, ಯೋಜನೆಗಳಿಗೆ ನಡೆಸಿದ ಪತ್ರ ವ್ಯವಹಾರಗಳು ಇವೇ ಮೊದಲಾದ ವಿವರಗಳನ್ನು ತಿಳಿಯಬಹುದಾಗಿದೆ. **ಮೈಸೂರು ಆಡ್ಮಿನಿಸ್ಟ್ರೇಟಿವ್ ಪೇಪರ್ಸ್ ವಾಲ್ಯೂಮ್ ೪**(೧೯೯೪)[೧೬]ರಲ್ಲಿ ದಿವಾನರಾದ ಎಂ.ವಿಶ್ವೇಶ್ವರಯ್ಯ ಅವರ ಆಡಳಿತದ ದಾಖಲೆಗಳನ್ನು ಸಂಗ್ರಹಿಸಿ ಕೃತಿ ರೂಪದಲ್ಲಿ ಹೊರತರಲಾಗಿದೆ. ವಿಶ್ವೇಶ್ವರಯ್ಯ ಅವರ ಅಭಿವೃದ್ಧಿ ಕಾರ್ಯಗಳನ್ನು ಈ ಕೃತಿಯಲ್ಲಿ ಚರ್ಚಿಸಿರುವುದನ್ನು ನೋಡಬಹುದು. ಇಂಜಿನಿಯರಿಂಗ್ ಆಗಿ ಕೈಗೊಂಡ ಕಾರ್ಯಗಳು, ದಿವಾನರಾದ ನಂತರ ಕೈಗೊಂಡ ಕೃಷಿ, ಕೈಗಾರಿಕೆ, ಶಿಕ್ಷಣ, ಉದ್ಯೋಗ, ಬ್ಯಾಂಕಿಂಗ್, ಸಾರಿಗೆ, ರೈಲ್ವೆ ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು, ಅದರ ಬಗೆಗೆ ಕ್ರೋಡೀಕರಿಸಿದ ದಾಖಲೆಗಳನ್ನು ಗಮನಿಸಬಹುದು. ಒಡೆಯರಿಗೆ ಮತ್ತು ಬ್ರಿಟಿಷ್ ಅಧಿಕಾರಿಗಳಿಗೆ ಆಡಳಿತದ ವಿಚಾರಗಳನ್ನು ತಿಳಿಸಲು ಪತ್ರದ ವ್ಯವಹಾರದ ಅಂಶಗಳನ್ನು ಗಮನಿಸಬಹುದು. ಯೋಜನೆಗೆ ಒಡೆಯರ ಮತ್ತು ದಿವಾನರ ಒಪ್ಪಿಗೆಯ

ಮೇರೆಗೆ ನಿಯಮಾವಳಿಗಳನ್ನು ಮಾಡಿದ ವಿವರಗಳು ಇಲ್ಲಿ ಮುಖ್ಯ. ಇವು ಮೈಸೂರು ಒಡೆಯರ ಸಾಂಸ್ಕೃತಿಕ ಚರಿತ್ರೆಯನ್ನು ವಸ್ತುನಿಷ್ಠವಾಗಿ ಅಧ್ಯಯನ ಮಾಡಿ ಸಂಶೋಧನಾತ್ಮಕ ಕಾರ್ಯ ಪೂರೈಸಲು ಸಹಕಾರಿಯಾಗಿವೆ.

ಬಹುಮುಖ್ಯವಾಗಿ ಪತ್ರಾಗಾರ ಇಲಾಖೆಯ **ದಿ ಕರೆಸ್‌ಪಾಂಡೆನ್ಸ್ ಆಫ್ ದಿ ಫ್ರೆಂಚ್ ಡೂರಿಂಗ್ ದಿ ರೀಜನ್ ಆಫ್ ಹೈದರ್ ಅಲಿ ಆ್ಯಂಡ್ ಟಿಪ್ಪು ಸುಲ್ತಾನ್**(೧೯೭೨)[೧೭] ಕೃತಿಯಲ್ಲಿ ಹೈದರ್ ಮತ್ತು ಟಿಪ್ಪು ಸುಲ್ತಾನರು ಫ್ರೆಂಚರ ಜೊತೆ ನಡೆಸಿದ ಸಂಧಾನದ ಪತ್ರಗಳ ವಿವರಗಳನ್ನು ಗಮನಿಸಬಹುದು. ಟಿಪ್ಪು ಬ್ರಿಟಿಷರನ್ನು ಸೋಲಿಸಲು ಹೇಗೆ ಪೂರ್ವಸಿದ್ಧತೆಗಳನ್ನು ಮಾಡಿಕೊಂಡ, ಟಿಪ್ಪು ಬ್ರಿಟಿಷರ ವಿರೋಧಿ ಅರಸರೊಂದಿಗೆ ಸಂಪರ್ಕ ಹೊಂದುವ ಪ್ರಯತ್ನಗಳನ್ನು ಹೇಗೆ ಮಾಡಿದ, ಜೊತೆಗೆ ಇವನು ಮರಾಠರು ಮತ್ತು ನಿಜಾಮರ ನೆರವು ಪಡೆಯುವ ಸಮಯಕ್ಕೆ ಒಪ್ಪಂದ ಜಾರಿಗೆ ಹೇಗೆ ಬರುವುದಿತ್ತು ಎಂಬ ವಿಷಯಗಳನ್ನು ಇಲ್ಲಿ ದಾಖಲೆಗಳ ಸಹಿತ ನೋಡಬಹುದಾಗಿದೆ. ಆದರೆ ಬ್ರಿಟಿಷರ ಕುತಂತ್ರದಿಂದ ಅದು ರೂಪಗೊಳ್ಳುವ ಮೊದಲೇ ಮುರಿದುಬಿತ್ತು. ಯೋಜನೆಗಳನ್ನು ವಿಫಲಗೊಳಿಸುವಲ್ಲಿ ಬ್ರಿಟಿಷರು ನಿಷ್ಣಾತರಾದರೆ, ಪುನಃ ಟಿಪ್ಪು ಕೂಡ ಯೋಜನೆಗಳನ್ನು ಕೈಗೊಳ್ಳುತ್ತಿದ್ದನು. ಕಾಬೂಲ್‌ಗೆ ತನ್ನ ರಾಯಭಾರಿಗಳನ್ನು ಕಳುಹಿಸಿದ, ನಂತರ ಅರೇಬಿಯಾ, ಪರ್ಶಿಯಾ ಮುಂತಾದ ಮುಸ್ಲಿಂ ರಾಜ್ಯಗಳಿಗೆ ನಿಯೋಗಿಗಳನ್ನು ಕಳುಹಿಸಿದ ಕುರಿತು ದಾಖಲೆಗಳು ತಿಳಿಸುತ್ತಿದೆ. ಆದರೆ ಈ ಎಲ್ಲಾ ಪ್ರಯತ್ನಗಳು ವಿಫಲವಾದವು. ದೆಹಲಿಯ ಚಕ್ರವರ್ತಿಯ ನೆರವನ್ನು ಟಿಪ್ಪು ಗಳಿಸಲು ಸಮರ್ಥನಾದ. ಬ್ರಿಟಿಷರ ಪರವಾಗಿ ಅಲ್ಲಿನ ಆಸ್ಥಾನದ ಅಧಿಕಾರಿಗಳು, ಹೇಗೆ ಅದನ್ನು ವಿಫಲಗೊಳಿಸಿದರು, ಅಂತಿಮವಾಗಿ ಬ್ರಿಟಿಷರ ಕಡುವೈರಿಗಳಾದ ಫ್ರೆಂಚರು ತನ್ನನ್ನು ಕೈಬಿಡುವುದಿಲ್ಲವೆನ್ನುವ ಪೂರ್ಣ ವಿಶ್ವಾಸ ಟಿಪ್ಪುವಿನದಾಗಿತ್ತು ಎಂಬ ಅಂಶವೂ ಇಲ್ಲಿ ತಿಳಿದುಬರುತ್ತದೆ. ಟಿಪ್ಪು ಇಲ್ಲಿಗೂ ತನ್ನ ರಾಯಭಾರಿಗಳನ್ನು ಕಳುಹಿಸಿದನು ಎಂಬ ವಿವರಗಳನ್ನು ಇಲ್ಲಿ ಗಮನಿಸಬಹುದು. ಟಿಪ್ಪು ನೆಪೋಲಿಯನ್ ಜೊತೆ ಒಪ್ಪಂದ ಮಾಡಿಕೊಂಡು ಭಾರತದಿಂದ ಬ್ರಿಟಿಷರನ್ನು ಹಿಮ್ಮೆಟ್ಟಿಸಲು ಪ್ರಯತ್ನಿಸಿದ ದಾಖಲೆಗಳು ಇಲ್ಲಿ ಸಿಗುತ್ತವೆ. ಟಿಪ್ಪು ಯುದ್ಧದ ಸಂದರ್ಭದಲ್ಲಿ ನಡೆಸಿದ ಪತ್ರವ್ಯವಹಾರಗಳನ್ನು ತಿಳಿಯಬಹುದು.

ಗೋಪಾಲ್ ಆರ್. ಅವರು **ಟಿಪ್ಪು ಸುಲ್ತಾನ್ ದಿ ಟೈಗರ್ ಆಫ್ ಮೈಸೂರು**(೨೦೧೦)[೧೮] ಎಂಬ ಕೃತಿಯಲ್ಲಿ ಟಿಪ್ಪು ಸುಲ್ತಾನನ ಏಳಿಗೆ, ಮರಾಠರು ಮತ್ತು ಹೈದರಾಬಾದಿನ ನಿಜಾಮರ ಯುದ್ಧಗಳು, ಸಂಧಾನಕ್ಕಾಗಿ ಪ್ರಯತ್ನಿಸಿದ ರೀತಿ, ಮಲಬಾರ್‌ನಲ್ಲಿ ಕೈಗೊಂಡ ಕಾರ್ಯಗಳು, ಅನ್ಯರಾಷ್ಟ್ರಗಳೊಂದಿಗೆ ನಡೆಸಿದ ಸಂಧಾನಗಳ ವಿವರಗಳು, ಮಠಗಳಿಗೆ ನೀಡಿದ ದಾನ, ಸ್ಥಳೀಯರೊಂದಿಗಿನ ಸಂಬಂಧಗಳು, ಟಿಪ್ಪುವಿನ ಆಡಳಿತದ ವಿಚಾರಗಳು, ನ್ಯಾಯಾಡಳಿತ, ಹಣಕಾಸು ಆಡಳಿತದ ವಿಚಾರಗಳನ್ನು ಪ್ರಮುಖವಾಗಿ ಇಲ್ಲಿನ ದಾಖಲೆಗಳ ಮೂಲಕ ತಿಳಿಯಬಹುದು. ದಿವಾನ್ ಪೂರ್ಣಯ್ಯನೊಂದಿಗೆ ಇದ್ದ ಸಂಬಂಧ, ಆಡಳಿತದಲ್ಲಿ ಹೊಸ ನೀತಿಗಳ ಅಳವಡಿಕೆ, ಸೈನಿಕ ವ್ಯವಸ್ಥೆಯಲ್ಲಿ ಹೊಸಹೊಸ ಪಡೆಗಳ ನಿಯೋಗ, ಯುದ್ಧದಲ್ಲಿ ಆಧುನಿಕ ತಂತ್ರಗಳ ಬಳಕೆ ಇವೇ ಮೊದಲಾದ ವಿಚಾರಗಳನ್ನು ತಿಳಿಯಬಹುದು.

ಗಾಯಿತ್ರಿ ಜಿ.ವಿ. ಅವರು **ಸೆಲೆಕ್ಷನ್ಸ್ ಫ್ರಮ್ ದಿ ರೆಕಾರ್ಡ್ಸ್ ಆಫ್ ಮೈಸೂರ್ ಪ್ಯಾಲೆಸ್(೧೯೯೩)**[೧೯] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ಅರಮನೆಯಲ್ಲಿನ ರೆಕಾರ್ಡ್ಸ್‌ಗಳು ಮುಖ್ಯವಾಗಿವೆ. ಸಂಗೀತಗಾರರು, ಸಂಗೀತಗಾರರಿಗೆ ನೀಡಿದ ಕಾಣಿಕೆ ಮೊದಲಾದ ವಿಚಾರಗಳನ್ನು ತಿಳಿಸುವ ಪತ್ರಗಳನ್ನು ಗಮನಿಸಬಹುದು. ಟಿಪ್ಪುವಿನ ಕಾಲದ ಕಲಾವಿದರು, ನಾಟಕ ನೃತ್ಯದ ಕಲಾವಿದರ ವಿವರ, ಚಿತ್ರಕಲಾವಿದರ ವಿವರಗಳನ್ನು ಪತ್ರಾಗಾರ ಇಲಾಖೆಯ ದಾಖಲೆಗಳು ತಿಳಿಸುತ್ತವೆ.

ಸೂರ್ಯನಾಥ ಯು.ಕಾಮತ್ ಅವರ **ಡಾಕ್ಯುಮೆಂಟ್ಸ್ ಆನ್ ದಿ ಮೈಸೂರು ರೆಪ್ರೆಸೆಂಟಟೀವ್ ಅಸೆಂಬ್ಲಿ, ಪಾರ್ಟ್ ೧(೧೮೮೧-೧೯೨೦)(೧೯೮೨)**[೨೦] ಎಂಬ ಕೃತಿಯಲ್ಲಿ ಪ್ರಮುಖವಾಗಿ ಸಿ.ರಂಗಾಚಾರ್ಲು ಅವರಿಂದ ಸ್ಥಾಪಿತವಾದ ಪ್ರಜಾಪ್ರತಿನಿಧಿ ಸಭೆಯ ವಿಚಾರಗಳನ್ನು ತಿಳಿಸುವ ದಾಖಲೆಗಳು ಮುಖ್ಯವಾದವು. ರೆಪ್ರೆಸೆಂಟೆಟೀವ್ ಕೌನ್ಸಿಲ್ಲನ್ನು ೧೮೮೧ರ ಆಗಸ್ಟ್ ೨೫ರಂದು ಮೈಸೂರು ಅರಸರು ಸ್ಥಾಪಿಸಿದರು. ಈ ಸಭೆಯಲ್ಲಿ ಎಲ್ಲಾ ಜಿಲ್ಲೆಗಳ ಡೆಪ್ಯೂಟಿ ಕಮೀಷನರುಗಳ ಸಲಹೆಯಂತೆ ಭೂ ಮಾಲೀಕರು ಮತ್ತು ಗಣ್ಯ ವರ್ತಕರನ್ನು ಸದಸ್ಯರಾಗಿ ಆಯ್ಕೆ ಮಾಡಿದ ವಿವರಗಳನ್ನು ದಾಖಲೆಗಳು ತಿಳಿಸುತ್ತವೆ. ಮೊದಲ ಅಧಿವೇಶನವನ್ನು ೧೮೮೧ರ ದಸರಾ ಹಬ್ಬದ ನಂತರ ಮೈಸೂರು ನಗರದಲ್ಲಿ ನಡೆಸಲಾತು. ಇದರಲ್ಲಿ ೧೪೪ ಮಂದಿ ಆಹ್ವಾನಿತ ಸದಸ್ಯರು ಭಾಗವಹಿಸಿದ್ದರು. ಸರ್ಕಾರದ ಧ್ಯೇಯ ಧೋರಣೆಗಳು ಮತ್ತು ಅದಕ್ಕೆ ಅನುಗುಣವಾಗಿ ಕೈಗೊಂಡ ಕಾರ್ಯಕ್ರಮಗಳನ್ನು ಈ ಸಭೆಯ ಮುಂದೆ ಮಂಡಿಸಲಾದ ವಿಚಾರಗಳು ದಾಖಲೆ ಗಳಿಂದ ಸಮಗ್ರವಾಗಿ ತಿಳಿದುಬರುತ್ತವೆ. ಒಂದರ್ಥದಲ್ಲಿ ಇದು ಶಾಸನಬದ್ಧ ಸಭೆಯಲ್ಲದಿದ್ದರೂ, ಅಂತಹ ಸಭೆ ಮುಂದೆ ಸಂಸ್ಥಾನದಲ್ಲಿ ರೂಪುಗೊಳ್ಳಲು ಮಾರ್ಗಸೂಚಿ ಯಾಯಿತು ಎಂಬುದು ತಿಳಿದಿರುವುದೇ ಆಗಿದೆ. ಭಾರತದ ದೇಶೀಯ ಸಂಸ್ಥಾನಗಳಲ್ಲಿ ಪ್ರತಿನಿಧಿ ಸಭೆ ಮೊದಲು ಸ್ಥಾಪನೆಯಾದದ್ದು ಮೈಸೂರಿನಲ್ಲಿ. ೧೮೮೫ರ ನಂತರ ಸ್ಥಳೀಯ ಸಂಸ್ಥೆ ಮತ್ತು ಪುರಸಭೆಗಳಿಂದ ಸದಸ್ಯರನ್ನು ಚುನಾಯಿಸುವ ವ್ಯವಸ್ಥೆಯನ್ನು ಮಾಡಲಾಯಿತು. ಸದಸ್ಯರ ಸಂಖ್ಯೆಯು ಗಣನೀಯವಾಗಿ ಏರತೊಡಗಿತು. ಕೌನ್ಸಿಲ್‌ನ ಉದ್ದೇಶದ ವ್ಯಾಪ್ತಿ ವಿಸ್ತಾರವಾಯಿತು. ಪ್ರಜಾ ಹಿತಾಸಕ್ತಿಗಳನ್ನು ಈಡೇರಿಸುವ ದೃಷ್ಟಿಯಿಂದ ಸರ್ಕಾರ ಮತ್ತು ಕೌನ್ಸಿಲ್‌ಗಳ ಉದ್ದೇಶಗಳು ಎಂಬ ಮಹತ್ವದ ವಿಷಯಗಳು ದಾಖಲೆಗಳಿಂದ ತಿಳಿದುಬರುತ್ತದೆ.

ಮುನಿಸ್ವಾಮಿ ಆರ್. ಅವರ **ಡಾಕ್ಯುಮೆಂಟ್ಸ್ ಆನ್ ದಿ ಮೈಸೂರು ರೆಪ್ರೆಸೆಂಟಟೀವ್ ಅಸೆಂಬ್ಲಿ ಪಾರ್ಟ್ ೨(೧೯೨೦-೧೯೪೨)(೧೯೮೭)**[೨೧] ಎಂಬ ಕೃತಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಆಡಳಿತದಲ್ಲಿ ಕೈಗೊಂಡ ವಿವರಗಳನ್ನು ರೆಪ್ರೆಸೆಂಟೆಟೀವ್ ಅಸೆಂಬ್ಲಿಯಲ್ಲಿ ಮಂಡಿಸುತ್ತಿದ್ದ ವಿಚಾರಗಳು ಮುಖ್ಯ. ವ್ಯಾಪಾರ, ವಾಣಿಜ್ಯ, ಗಣಿಗಾರಿಕೆ, ಕಂದಾಯ ಇವೇ ಮೊದಲಾದ ಎಲ್ಲಾ ವಿಚಾರಗಳ ತೀರ್ಮಾನ ಕೈಗೊಂಡಿದ್ದನ್ನು ಇಲ್ಲಿ ತಿಳಿಯಬಹುದು. ಅನಂತರ ಈ ಸಭೆಯು ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತು. ಇಲ್ಲಿ ಸದಸ್ಯರ ಭಿನ್ನಾಭಿಪ್ರಾಯ, ನಿರ್ಧಾರಗಳು ಸರಿಯಾಗಿ ಆಗದಿರುವುದೇ ಆಗಿತ್ತು. ಈ ಸಭೆಯನ್ನು ಚರ್ಚಾಸಂಘ, ಚರ್ಚಾಕೂಟ ಮತ್ತು ವಾರಾಂತ್ಯದ ಕೂಟವೆಂದು ಟೀಕಿಸಲಾರಂಭಿಸಿದರು. ಮಹಿಳೆಯರಿಗೆ ಚುನಾವಣೆಯಲ್ಲಿ

ಸ್ಪರ್ಧಿಸಲು ಹಕ್ಕು ಕೊಟ್ಟದ್ದು, ಪ್ರತಿನಿಧಿ ಸಭೆ ಮತದಾರರ ಅರ್ಹತೆಯನ್ನು ಸಮಗೊಳಿಸಿದ್ದನ್ನು ಬಿಟ್ಟರೆ, ಯಾವುದೇ ಗಮನಾರ್ಹ ಸುಧಾರಣೆಯನ್ನು ೧೯೪೦ರವರೆಗೆ ಸರ್ಕಾರ ತರಲಿಲ್ಲ. ೧೯೩೭ರ ನಂತರ ಜವಾಬ್ದಾರಿ ಸರ್ಕಾರದ ಒತ್ತಾಯ ಹೆಚ್ಚಾಗ ತೊಡಗಿತು. ಕೊನೆಗೆ ಜವಾಬ್ದಾರಿ ಸರ್ಕಾರ ಜಾರಿಗೆ ಬಂದಿತು. ಈ ಸಭೆಯಲ್ಲಿ ಏನೇ ಭಿನ್ನಾಭಿಪ್ರಾಯಗಳಿದ್ದರೂ ನಿರಂಕುಶ ಆಡಳಿತಕ್ಕೆ ಒಂದು ವಿರೋಧ ಈ ಸಭೆಯಲ್ಲಿ ವ್ಯಕ್ತವಾಯಿತು. ವಿವಿಧ ಸದಸ್ಯರು, ಪ್ರಜ್ಞಾವಂತರು ಕಲೆತು ಪರಸ್ಪರ ಚರ್ಚಿಸಿ, ಸರ್ಕಾರದ ನೀತಿಯ ಲೋಪಗಳನ್ನು ಸರಿಪಡಿಸಲು ಐಕಮತ್ಯದಿಂದ ಹೋರಾಡಲು ಸಹಕಾರಿ ಆಯಿತು. ಜನತೆಯನ್ನು ಜನತಂತ್ರ ನೆಲೆಯಲ್ಲಿ ನಡೆಯಲು ಈ ಸಭೆ ಸಹಾಯಕವಾಯಿತು ಎಂಬ ವಿವರಣಾತ್ಮಕ ಅಂಶಗಳು ಪತ್ರಾಗಾರ ಇಲಾಖೆಯಲ್ಲಿನ ಮಹತ್ವದ ದಾಖಲೆಗಳು ತಿಳಿಸುತ್ತವೆ.

**ಮೈಸೂರು ಅಡ್ಮಿನಿಸ್ಟ್ರೇಟಿವ್ ಪೇಪರ್ಸ್**(೧೯೮೫)[೨೨]ನಲ್ಲಿ ಮೈಸೂರಿನ ಒಡೆಯರು, ದಿವಾನರು ನಿರ್ವಹಿಸಿದ ಆಡಳಿತದ ದಾಖಲೆಗಳನ್ನು ಕ್ರಮಬದ್ಧವಾಗಿ ಸಂಗ್ರಹಿಸಲಾಗಿದೆ. ಕೃಷಿ, ಕೈಗಾರಿಕೆ, ನೀರಾವರಿ, ಶಿಕ್ಷಣ, ಸಾರಿಗೆ, ರೈಲ್ವೆ, ಆರೋಗ್ಯ, ಅರಣ್ಯ ಹೀಗೆ ಎಲ್ಲಾ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ತೆಗೆದುಕೊಂಡ ತೀರ್ಮಾನಗಳನ್ನು ಆಡಳಿತಾತ್ಮಕ ವರದಿಯಲ್ಲಿ ತಿಳಿಯಬಹುದು. ಆಡಳಿತಕ್ಕೆ ಸಂಬಂಧಿಸಿದ ಪತ್ರಗಳ ವಿಚಾರಗಳನ್ನು ಗಮನಿಸಬಹುದು. ಗಾಂಧೀಜಿ ಮತ್ತು ಮಿರ್ಜಾ ಇಸ್ಮಾಯಿಲ್ ಅವರ ನಡುವೆ ಅನೇಕ ವಿಚಾರಗಳಿಗೆ ಸಂಬಂಧಿಸಿದ ಪತ್ರಗಳನ್ನು ನೋಡಬಹುದು. ಹಾಗೆಯೇ ಕಂಠೀರವ ನರಸಿಂಹರಾಜ ಒಡೆಯರಿಗೂ ಮತ್ತು ಮಿರ್ಜಾ ಇಸ್ಮಾಯಿಲ್ ಅವರ ನಡುವೆ ನಡೆಯುತ್ತಿದ್ದ ವಿವಾದಗಳು ಮುಖ್ಯ ಅಮಲ್ದಾರಿ ಗೆಜೆಟೆಡ್ ಹುದ್ದೆಗಳನ್ನು ಸರ್ಕಾರ ಭರ್ತಿ ಮಾಡಬೇಕಾಗಿತ್ತು. ಆದರೆ ಸಾಮಾಜಿಕ ಸಂಘರ್ಷದಿಂದ (ಗಣಪತಿ ಗಲಾಟೆ) ಈ ಹುದ್ದೆಗಳಿಗೆ ನೇಮಕವಾಗದ ವಿಸ್ತೃತವಾದ ಮಾಹಿತಿ ಈ ಹಂತದಲ್ಲಿ ದೊರಕುತ್ತದೆ. ಯುವರಾಜರು ಮಿರ್ಜಾ ಅವರಿಗೆ ಬ್ರಾಹ್ಮಣೇತರ ಹಿಂದುಳಿದ ವರ್ಗಗಳಾದ ಬೆಸ್ತ, ಯಾದವ ಮತ್ತು ಕುಂಚಟಿಗ ಪಂಗಡಗಳಿಗೆ ಮೀಸಲಿರಿಸಿ ಎಂದು ಪತ್ರ ಬರೆದಿದ್ದರು.[೨೩] ಆದರೆ ಮಿರ್ಜಾ ಅವರು ತಮ್ಮದೇ ಆದ ನಿರ್ಣಯಗಳನ್ನು ತೆಗೆದುಕೊಳ್ಳಲು ನಿರ್ಧರಿಸಿದರು. ಇದರಿಂದ ಇವರಿಬ್ಬರ ಸಂಬಂಧ ಕೆಡಲು ಕಾರಣವಾಯಿತು ಎಂಬುದು ಪತ್ರಗಳಿಂದ ತಿಳಿದುಬರುತ್ತದೆ.

ಮೌಖಿಕ ಆಕರಗಳು ಇಂದು ಚರಿತ್ರೆಯಲ್ಲಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಒಡೆಯರು, ದಿವಾನರು ತಮ್ಮ ಆಡಳಿತಾವಧಿಯಲ್ಲಿ ಕೈಗೊಂಡ ನಿರ್ಣಯಗಳು, ಸಮ್ಮೇಳನ, ಸಮಾವೇಶದಲ್ಲಿ ಮಾತನಾಡಿದ ವಿವರಗಳನ್ನು ರೆಕಾರ್ಡ್ ರೂಪದಲ್ಲಿ ಸಂಗ್ರಹಿಸಲಾಗಿದೆ.

೧. ರಂಗಾಚಾರ್ಲು ಅವರ ಸ್ಪೀಚಸ್
೨. ಸರ್.ಎಂ.ವಿಶ್ವೇಶ್ವರಯ್ಯ ಅವರ ಸ್ಪೀಚಸ್
೩. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಸ್ಪೀಚಸ್
೪. ಜಯಚಾಮರಾಜ ಒಡೆಯರ್ ಅವರ ಸ್ಪೀಚಸ್

೫. ಮಿರ್ಜಾ ಇಸ್ಮಾಯಿಲ್ ಅವರ ಸ್ಪೀಚಸ್

೬. ಕಾಂತರಾಜ ಅರಸ್ ಅವರ ಸ್ಪೀಚಸ್[೨೪]

ಹೀಗೆ ಒಡೆಯರು, ದಿವಾನರು ತಮ್ಮ ಆಡಳಿತದಲ್ಲಿ ತೆಗೆದುಕೊಂಡ ನಿರ್ಣಯಗಳು, ಸಮ್ಮೇಳನ, ಸಮಾವೇಶದಲ್ಲಿ ಮಾತನಾಡಿದ ವಿಷಯದ ವಿವರಗಳನ್ನು ನೇರವಾಗಿ ಮೌಖಿಕ ರೂಪದಲ್ಲಿ ತಿಳಿಯಬಹುದು.

### ೩.೩. ನಿಯತಕಾಲಿಕೆಗಳು ಮತ್ತು ಪತ್ರಿಕೆಗಳ ವಿಶ್ಲೇಷಣೆ

ಮೈಸೂರು ಒಡೆಯರ ಚರಿತ್ರೆಯಲ್ಲಿ ನಿಯತಕಾಲಿಕೆಗಳು ಮತ್ತು ಪತ್ರಿಕೆಗಳ ಪಾತ್ರವೂ ಮುಖ್ಯವಾದುದು. ಕನ್ನಡ ವೃತ್ತಪತ್ರಿಕೆಗಳಲ್ಲಿ ಪ್ರಥಮ ವೃತ್ತಪತ್ರಿಕೆ 'ಮಂಗಳೂರು ಸಮಾಚಾರ' ರೆವರೆಂಡ್ ಹೆರ್ಮನ್ ಮೋಗ್ಲಿಂಗ್ ಎಂಬ ಬಾಸೆಲ್ ಮಿಷನ್ ಪಾದ್ರಿಯಿಂದ ಸ್ಥಾಪಿತವಾಯಿತು. ಇದು ಸ್ಥಳೀಯ ಸುದ್ದಿಯನ್ನು ಪ್ರಸಾರ ಮಾಡುತ್ತಿತ್ತು. ಅನಂತರ ವಸಾಹತು ಶಾಹಿಗಳ ಆಳ್ವಿಕೆಯಲ್ಲಿ ಮೈಸೂರು ಸಂಸ್ಥಾನವು ಕನ್ನಡ ಸಾಹಿತ್ಯ ಮತ್ತು ರಾಜಕೀಯ ಚಟುವಟಿಕೆಗಳ ಕೇಂದ್ರವಾಗಿತ್ತು. ಈ ನಿಟ್ಟಿನಲ್ಲಿ ನಿಯತಕಾಲಿಕೆಗಳು ಮತ್ತು ವೃತ್ತಪತ್ರಿಕೆಗಳು ಪ್ರಮುಖವಾದವು. 'ಮೈಸೂರು ವೃತ್ತಾಂತ ಬೋಧಿನಿ' ಮತ್ತು 'ಕರ್ನಾಟಕ ಪ್ರಕಾಶಿಕ', ಎಂ.ವೆಂಕಟಕೃಷ್ಣಯ್ಯ ಅವರ 'ಹಿತಬೋಧಿನಿ' ಪತ್ರಿಕೆಗಳು ಮೊದಲು ಪ್ರಾರಂಭವಾದವು. 'ಮೈಸೂರು ಹೆರಾಲ್ಡ್', ವಾರಪತ್ರಿಕೆಯಾಗಿ 'ವೆಲ್ತ್ ಆಫ್ ಮೈಸೂರು' ಪತ್ರಿಕೆಗಳು ಇಂಗ್ಲಿಷಿನಲ್ಲಿ ಪ್ರಕಟವಾದವು. ಕನ್ನಡದ ದಿನಪತ್ರಿಕೆ 'ಸಂಪದಭ್ಯುದಯ', ಇಂಗ್ಲಿಷ್ ದಿನಪತ್ರಿಕೆ 'ನೇಚರ್‌ಕ್ಯೂರ್' ಮುಖ್ಯವಾದವು. ಅಗರಂ ರಂಗಯ್ಯ ಅವರ ಸಂಪಾದಕತ್ವದಲ್ಲಿ ಪ್ರಾರಂಭಗೊಂಡ 'ಸಾಧ್ವಿ' ವಾರಪತ್ರಿಕೆಯು ಚರಿತ್ರೆ ಹಾಗೂ ಸಾಂಸ್ಕೃತಿಕ ಪ್ರಗತಿಗೆ ಅನೇಕ ಕೊಡುಗೆಗಳನ್ನು ನೀಡಿದೆ. ಡಿ.ವಿ.ಗುಂಡಪ್ಪ ಅವರು ಮೈಸೂರು ಸಂಸ್ಥಾನದಲ್ಲಿ 'ಭಾರತಿ' ಎಂಬ ದಿನಪತ್ರಿಕೆ ಹಾಗೂ 'ಮೈಸೂರು ಟವರ್ಸ್' ಎಂಬ ವಾರಪತ್ರಿಕೆ ಪ್ರಕಟ ಮಾಡಿದರು. ಅನಂತರ 'ಕನ್ನಡ ಮಾಸಪತ್ರಿಕೆ' ಮತ್ತು 'ಕರ್ನಾಟಕ' ಎಂಬ ಪತ್ರಿಕೆಗಳು ಮೊದಲು ಪ್ರಕಟವಾದವು. ಗಾಂಧೀಜಿ ಅವರ ಸ್ವಾತಂತ್ರ್ಯ ಹೋರಾಟದ ನಂತರ ಪತ್ರಿಕೆಗಳ ಪಾತ್ರ ಹೆಚ್ಚಿನ ಮಟ್ಟದಲ್ಲಿ ಗುರುತಿಸಿಕೊಂಡಿತು.

ಎನ್.ಎಸ್.ಸೀತಾರಾಮಶಾಸ್ತ್ರಿ ಹಾಗೂ ಸಿ.ಹಯವದನರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ 'ದೇಶಬಂದು' ಪತ್ರಿಕೆ ಮತ್ತು 'ವೀರಕೇಸರಿ' ಪತ್ರಿಕೆಯು ಪ್ರಾರಂಭವಾಯಿತು. ತಿ.ತಾ.ಶರ್ಮ ಅವರ 'ವಿಶ್ವಕರ್ನಾಟಕ' ಪತ್ರಿಕೆಯು ಆಡಳಿತಾತ್ಮಕ ಅಭಿವೃದ್ಧಿಗೆ ಸಹಾಯಕವಾದ ಲೇಖನಗಳನ್ನು ಪ್ರಕಟಿಸಿದೆ. 'ಪ್ರಜಾಮಿತ್ರ' ಪತ್ರಿಕೆ ಬಿ.ಎನ್.ಗುಪ್ತ ಅವರಿಂದ ಹುಬ್ಬಳ್ಳಿಯಿಂದ ಪ್ರಕಟವಾಯಿತು. ಹಾಗೆಯೇ 'ಜನವಾಣಿ' ಪತ್ರಿಕೆ ಸಾಮಾಜಿಕ ಸಮಸ್ಯೆಗಳ ಮೇಲೆ ಅರಿವು ಮೂಡಿಸುವ ಸಲುವಾಗಿ ಪ್ರಕಟಗೊಂಡಿತು. ರಾಷ್ಟ್ರೀಯ ಚಳವಳಿಯು ಉತ್ತುಂಗಕ್ಕೆ ಏರಿದಾಗ ಅನೇಕ ಪತ್ರಿಕೆಗಳು ಪ್ರಾರಂಭವಾದವು. ರಾಷ್ಟ್ರೀಯ ಐಕ್ಯತೆಯನ್ನು ಸೂಚಿಸುವಂತಹ ಪತ್ರಿಕೆಗಳು ಪ್ರಾರಂಭವಾದವು. ಆಲೂರು ವೆಂಕಟರಾಯ 'ಜಯಕರ್ನಾಟಕ'(ಧಾರವಾಡ), ಜಯಂತಿ ಪತ್ರಿಕೆಗಳು ಪ್ರಾರಂಭವಾದವು. 'ಪ್ರಬುದ್ಧ ಕರ್ನಾಟಕ' ಪತ್ರಿಕೆ, 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ'

ಪತ್ರಿಕೆಗಳು ಪ್ರಕಟನೆಗೊಂಡವು.[೨೫] ಬೆಂಗಳೂರು ವಿಶ್ವವಿದ್ಯಾಲಯದಿಂದ ಪ್ರಾರಂಭವಾದ 'ಸಾಧನೆ' ಪತ್ರಿಕೆಯು ಮುಖ್ಯವಾದುದು. ಹಾಗೆಯೇ ಮಿಥಿಕ್ ಸೊಸೈಟಿಯ ಜರ್ನಲ್ಸ್‌ಗಳು, ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ವಿಭಾಗದ ಚರಿತ್ರೆ ಅಧ್ಯಯನದ ಸಂಚಿಕೆಗಳು ಪ್ರಮುಖವಾದವು.

ಈ ಎಲ್ಲಾ ಪತ್ರಿಕೆಗಳು ಮೈಸೂರು ಒಡೆಯರು, ದಿವಾನರು, ಆಡಳಿತದ ವಿಚಾರ, ರಾಷ್ಟ್ರೀಯ ಚಳವಳಿ ಮೊದಲಾದ ವಿಚಾರಗಳನ್ನು ತಿಳಿಸುತ್ತವೆ. ಮುಖ್ಯವಾಗಿ ಪ್ರಬುದ್ಧ ಕರ್ಣಾಟಕ ಪತ್ರಿಕೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಸಮಗ್ರ ವ್ಯಕ್ತಿತ್ವದ ಬಗೆಗೆ ಲೇಖನಗಳನ್ನು ನೋಡಬಹುದು.[೨೬] ತಿ.ತಾ.ಶರ್ಮ ಅವರ 'ವಿಶ್ವಕರ್ನಾಟಕ' ಪತ್ರಿಕೆಯಲ್ಲಿ ಗಣಪತಿ ಗಲಾಟೆಯ ಬಗೆಗೆ ಬರೆದ ಲಂಬೋದರ ಲೇಖನವು ಮುಖ್ಯವಾದುದು.[೨೭] ಈ ಹಿನ್ನೆಲೆಯಲ್ಲಿ ವಿಷಯಕ್ಕೆ ತಕ್ಕಂತೆ ನಿಯತಕಾಲಿಕೆ ಮತ್ತು ಪತ್ರಿಕೆಗಳನ್ನು ಅಧ್ಯಯನ ಮಾಡಲಾಗಿದೆ.

**ಅಡಿಟಿಪ್ಪಣಿಗಳು**

೧. ಗೋಪಾಲ್ ಆರ್.(ಸಂ), ಗವಿಸಿದ್ಧಯ್ಯ(ಲೇ), ೨೦೧೦, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ(ಮೈಸೂರು ಪತ್ರಾಗಾರದಲ್ಲಿರುವ ಅಪರೂಪದ ದಾಖಲೆಗಳು ಒಂದು ಸಮೀಕ್ಷೆ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೧೬೮.
೨. ಅರಮನೆ ಕಂಟ್ರೋಲರ್ಸ್ ಆಫೀಸ್ ಮತ್ತು ಪ್ಯಾಲೆಸ್ ಆಫೀಸ್ ಕಡತಗಳು(೧೮೬೮–೧೯೬೦).
೩. ಅವಸರದ ಹೋಬಳಿ ಇಲಾಖೆ ಕಡತಗಳು(೧೮೭೯–೧೯೫೭).
೪. ಚಾಮುಂಡಿ ತೊಟ್ಟಿ ಇಲಾಖೆ ಕಡತಗಳು(೧೮೬೪–೧೯೫೨).
೫. ಡೊನೇಷನ್ಸ್ ಇಲಾಖೆ ಕಡತಗಳು(೧೮೫೦–೧೯೫೬).
೬. ಆನರ್ಸ್ ಇಲಾಖೆ ಕಡತಗಳು(೧೮೫೦–೧೯೫೬).
೭. ಪ್ಯಾಲೇಸ್ ಎಸ್ಟೇಟ್ಸ್ ಆ್ಯಂಡ್ ಗಾರ್ಡನ್ ಇಲಾಖೆ ಕಡತಗಳು(೧೯೦೪–೧೯೫೬).
೮. ಗೇಮ್ಸ್ ಆ್ಯಂಡ್ ಟೈಗರ್ಸ್ ಪ್ರಿಸರ್ವ್ ಇಲಾಖೆ ಕಡತಗಳು(೧೯೨೦–೧೯೫೪).
೯. ಪ್ಯಾಲೆಸ್ ಮರಮತ್ ಇಲಾಖೆ ಕಡತಗಳು(೧೮೭೬–೧೯೬೧).
೧೦. ಕರೋಹಟ್ಟಿ ಇಲಾಖೆ ಕಡತಗಳು(೧೯೦೬–೧೯೨೨).
೧೧. ಟೂರ್ಸ್ ಇಲಾಖೆ ಕಡತಗಳು.
೧೨. ಗೋಪಾಲ್ ಎಂ.ಎಚ್., ೧೯೯೩, ಬ್ರಿಟಿಷ್ ಸೋರ್ಸ್ ಆಫ್ ದಿ ಎಕಾನಮಿಕ್, ಪೊಲಿಟಿಕಲ್ ಅಂಡ್ ಸೋಷಿಯಲ್ ಹಿಸ್ಟರಿ ಆಫ್ ದಿ ಮೈಸೂರು ಸ್ಟೇಟ್, ವಾಲ್ಯೂಮ್ I, ೧೭೯೯–೧೮೧೨(ಪೂರ್ಣಯ್ಯ ಅಡ್ಮಿನಿಸ್ಟ್ರೇಷನ್), ಪಾಪ್ಯುಲರ್ ಪ್ರಕಾಶನ, ಬಾಂಬೆ.
೧೩. ಗೋಪಾಲ್ ಎಂ. ಎಚ್., ೧೯೯೩, ಬ್ರಿಟೀಷ್ ಸೋರ್ಸ್ ಆಫ್ ದಿ ಎಕಾನಮಿಕ್, ಪೊಲಿಟಿಕಲ್ ಆ್ಯಂಡ್ ಸೋಷಿಯಲ್ ಹಿಸ್ಟರಿ ಆಫ್ ದಿ ಮೈಸೂರು ಸ್ಟೇಟ್, ವಾಲ್ಯೂಮ್ II, ೧೮೧೩–೧೮೩೨(ರಾಜ್ ಅಡ್ಮಿನಿಸ್ಟ್ರೇಷನ್), ಪಾಪ್ಯುಲರ್ ಪ್ರಕಾಶನ, ಬಾಂಬೆ.
೧೪. ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ ರಿಪೋರ್ಟ್ಸ್, ೧೮೬೨–೧೯೫೬
೧೫. ದಿವಾನ್ ಪಿ.ಎನ್.ಕೃಷ್ಣಮೂರ್ತಿ, ೧೯೯೪, ಕರ್ನಾಟಕ ಲೆಟರ್ಸ್, ವಾಲ್ಯೂಮ್ II, ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು.
೧೬. ದಿವಾನ್ ಎಂ. ವಿಶ್ವೇಶ್ವರಯ್ಯ, ೧೯೯೪, ಮೈಸೂರು ಅಡ್ಮಿನಿಸ್ಟ್ರೇಟಿವ್ ಪೇಪರ್ಸ್, ವಾಲ್ಯೂಮ್ IV, ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು.

೧೭. ದಿ ಕರೆಸ್‌ಪಾಂಡೆನ್ಸ್ ಆಫ್ ದಿ ಫ್ರೆಂಚ್ ಡೂರಿಂಗ್ ದಿ ರಿಜನ್ ಆಫ್ ಹೈದರ್ ಅಲಿ ಆ್ಯಂಡ್ ಟಿಪ್ಪು ಸುಲ್ತಾನ್, ೧೯೯೭, ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು.

೧೮. ಗೋಪಾಲ್ ಆರ್., ೨೦೧೦, ಟಿಪ್ಪು ಸುಲ್ತಾನ್ ದಿ ಟೈಗರ್ ಆಫ್ ಮೈಸೂರು, ಆರ್ಕಿಯಾಲಾಜಿ ಆ್ಯಂಡ್ ಮ್ಯೂಸಿಯಂ, ಮೈಸೂರು.

೧೯. ಗಾಯಿತ್ರಿ ಜಿ.ವಿ., ೧೯೯೩, ಸೆಲೆಕ್ಷನ್ಸ್ ಫ್ರಮ್ ದಿ ರೆಕಾರ್ಡ್ಸ್ ಆಫ್ ಮೈಸೂರ್ ಪ್ಯಾಲೆಸ್, ಆರ್ಕೈವ್ಸ್, ಮೈಸೂರು.

೨೦. ಸೂರ್ಯನಾಥ ಯು.ಕಾಮತ್, ೧೯೮೨, ಡಾಕ್ಯುಮೆಂಟ್ಸ್ ಆನ್ ದಿ ಮೈಸೂರು ರೆಪ್ರೆಸೆಂಟಿಟೀವ್ ಆಸೆಂಬ್ಲಿ ಪಾರ್ಟ್–I(೧೮೮೧–೧೯೨೦), ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು.

೨೧. ಮುನಿಸ್ವಾಮಿ ಆರ್., ೧೯೮೭, ಡಾಕ್ಯುಮೆಂಟ್ಸ್ ಆನ್ ದಿ ಮೈಸೂರು ರೆಪ್ರೆಸೆಂಟೆಟೀವ್ ಅಸೆಂಬ್ಲಿ ಪಾರ್ಟ್–II(೧೯೨೦–೧೯೪೭), ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು.

೨೨. ಮೈಸೂರು ಅಡ್ಮಿನಿಸ್ಟ್ರೇಟಿವ್ ಪೇಪರ್ಸ್, ೧೯೮೫, ಕರ್ನಾಟಕ ಸ್ಟೇಟ್ ಆರ್ಕೈವ್ಸ್, ಬೆಂಗಳೂರು.

೨೩. ಕಂಠೀರವ ನರಸಿಂಹರಾಜ ಒಡೆಯರಿಂದ ಮಿರ್ಜಾ ಇಸ್ಮಾಯಿಲ್‌ರಿಗೆ ಬಂದ ಪತ್ರ, ದಿವಾಂಕ ೨೯, ಆಗಸ್ಟ್ ೧೯೩೫, ಚಾಮುಂಡಿ ಅರಮನೆ, ಮೈಸೂರು, ಮಿರ್ಜಾ ಇಸ್ಮಾಯಿಲ್ ಪೇಪರ್ಸ್.

೨೪. ರಂಗಾಚಾರ್ಲು, ಸರ್.ಎಂ.ವಿಶ್ವೇಶ್ವರಯ್ಯ, ನಾಲ್ವಡಿ ಕೃಷ್ಣರಾಜ ಒಡೆಯರು, ಜಯಚಾಮರಾಜ ಒಡೆಯರು, ಮಿರ್ಜಾ ಇಸ್ಮಾಯಿಲ್, ಕಾಂತರಾಜ ಅರಸ್ ಅವರ ಸ್ಪೀಚಸ್.

೨೫. ಚಿನ್ನಸ್ವಾಮಿ ಸೋಸಲೆ ಎನ್., ೨೦೧೦, ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೭೬–೧೭೯.

೨೬ ತಿಪ್ಪೇರುದ್ರಸ್ವಾಮಿ ಎಚ್.(ಸಂ), ಪ್ರಬುದ್ಧ ಕರ್ಣಾಟಕ, ೧೯೮೭, ಸಂಪುಟ ೬೮, ಸಂಚಿಕೆ ೪, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೭. ತಿ.ತಾ.ಶರ್ಮ, ೧೯೨೮, ವಿಶ್ವಕರ್ನಾಟಕ ಪತ್ರಿಕೆ.

# ಅಧ್ಯಾಯ ನಾಲ್ಕು

## ಗ್ಯಾಸೆಟಿಯರ್‌ಗಳ ವಿಶ್ಲೇಷಣೆ

ಗ್ಯಾಸೆಟಿಯರ್‌ಗಳ ರಚನಾಪರಂಪರೆಯು ಒಂದು ಕಾಲದಿಂದ ಇನ್ನೊಂದು ಕಾಲಕ್ಕೆ ವಿಕಾಸವಾಗುತ್ತಾ ಬಂದಿದೆ. ವಸಾಹತುಶಾಹಿ ಮತ್ತು ವಸಾಹತೋತ್ತರ ಕಾಲಘಟ್ಟದ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ಈ ಗ್ಯಾಸೆಟಿಯರ್‌ಗಳನ್ನು ದೇಶಿ ಮತ್ತು ವಿದೇಶಿ ಬರಹಗಾರರು ರಚಿಸಿದ್ದಾರೆ. ಇಲ್ಲಿ ಈ ಬರಹಗಾರರ ಬರವಣಿಗೆ ಕೆಲಸಗಳಲ್ಲಿ ಬರಹಗಾರರ ಸನ್ನಿವೇಶ, ಅವರ ದೃಷ್ಟಿಕೋನ ಏನಿತ್ತು? ಕಾಲದ ಪರಧಿಯೊಳಗೆ ರಚನೆ ಮಾಡಿದ ಬರಹಗಾರರ ಐಡಿಯಾಲಜಿಕಲ್ ಡಿಫ್ರೆನ್ಸ್ ಏನು? ಜನರ ಮೇಲಿನ ಪ್ರಭಾವ ಮತ್ತು ಮುಂದಿನ ಪೀಳಿಗೆಯ ಮೇಲೆ ಬೀರಿದ ಪರಿಣಾಮಗಳು ಇವೇ ಮೊದಲಾದ ಅಂಶಗಳನ್ನು ಚರ್ಚಿಸಲಾಗಿದೆ. ಗ್ಯಾಸೆಟಿಯರ್‌ಗಳನ್ನು ಬರವಣಿಗೆ ಮಾಡಿರುವ ಬಗೆ ಹೇಗೆ? ಗ್ಯಾಸೆಟಿಯರ್‌ಗಳನ್ನು ಯಾರು ಬರವಣಿಗೆ ಮಾಡಿದರು? ಗ್ಯಾಸೆಟಿಯರ್‌ಗಳ ಮೂಲಕ ಯಾರು ಲಾಭ ಪಡೆದುಕೊಂಡರು? ಯಾವುದಕ್ಕೆ ಪ್ರಾಮುಖ್ಯತೆ ನೀಡಿ ಬರೆದರು? ಸಮುದಾಯ ಕೇಂದ್ರಿತವೇ? ಯಾವುದನ್ನು ಕೇಂದ್ರೀಕರಣ ಮಾಡಿ ರಚಿಸಿದರು ಎಂಬುದು ಮುಖ್ಯ. ವಸಾಹತುಶಾಹಿ ಕಾಲಘಟ್ಟದಲ್ಲಿ ಈಸ್ಟ್ ಇಂಡಿಯಾ ಕಂಪನಿ ಮೂಲಕ ಬ್ರಿಟಿಷರ ಆಳ್ವಿಕೆಯಲ್ಲಿ ಗ್ಯಾಸೆಟಿಯರ್ ಬೇಕಿತ್ತಾ? ಮತ್ತು ಬ್ರಿಟಿಷರ ಅಜೆಂಡಾ ಏನಾಗಿತ್ತು? ಗ್ಯಾಸೆಟಿಯರ್‌ಗಳಿಗೆ ಮಾಹಿತಿ ಸಂಗ್ರಹಿಸಲು ಯಾರ ಸ್ಥಳೀಯರ ಸಹಾಯ ಪಡೆದರು? ಅಂದಿನ ಸಂದರ್ಭಗಳಲ್ಲಿ ಬ್ರಿಟಿಷರ ಉದ್ದೇಶಗಳನ್ನು ಗ್ಯಾಸೆಟಿಯರ್‌ಗಳು ಈಡೇರಿಸಿವೆ. ಆದರೆ ಇವತ್ತಿನ ಸಂದರ್ಭದಲ್ಲಿ ಗ್ಯಾಸೆಟಿಯರ್‌ಗಳಿಂದ ಏನನ್ನು ನಿರೀಕ್ಷೆ ಮಾಡಬಹುದು? ಯಾವ ರೀತಿ ಬರವಣಿಗೆ ಮಾಡಬೇಕಾಗಿದೆ. ಈ ರೀತಿಯಾಗಿ ವರ್ತಮಾನದ ನೆಲೆಯಲ್ಲಿ ಗ್ಯಾಸೆಟಿಯರ್‌ಗಳ ಸಮಾಜಮುಖಿ ಅಧ್ಯಯನ ಮಾಡುವುದು ಇಲ್ಲಿ ಮುಖ್ಯವಾಗಿದೆ.

ಗ್ಯಾಸೆಟಿಯರ್ ಎಂಬ ಪದವು ಆರಂಭದಲ್ಲಿ ಸಂಕುಚಿತ ಅರ್ಥವನ್ನು ಪಡೆದಿತ್ತು. ಈಗ ಇದರ ಅರ್ಥ ವಿಸ್ತಾರಗೊಂಡಿದೆ. 'ಗ್ಯಾಸೆಟಿಯರ್' ಎಂಬ ಪದವು ಆಂಗ್ಲ ಭಾಷೆಗೆ ಸಂವಾದಿಯಾದರೂ, ಗ್ಯಾಜ(Gaza) ಎಂಬ ಲ್ಯಾಟಿನ್ ಭಾಷೆಯಿಂದ ಬಂದಿದೆ. ವಾರ್ತೆಗಳ ಖಜಾನೆ ಎಂಬ ಅರ್ಥದಲ್ಲಿ ಪ್ರಯೋಗವಾಗಿರುವುದು ಹಲವು ದಾಖಲೆಗಳಿಂದ ತಿಳಿದಿದೆ. ಮೊದಲು ವೆನಿಸ್ ನಗರದಲ್ಲಿ ಸಣ್ಣ ಅಥವಾ ಆರಂಭಿಕ ಮಾಹಿತಿ ನೀಡುವ ವೃತ್ತಪತ್ರಿಕೆಯ ಮುಟದ

ಮೌಲ್ಯ ಎಂದು ಕರೆಯುತ್ತಿದ್ದರು. ಅನಂತರ 'ವಾರ್ತೆಗಳ ಖಜಾನೆ' ಎಂದು ಕರೆದರು. ತದನಂತರ 'ಗ್ಯಾಸೆಟಿಯರ್' 'ಭೂವಿವರಣಾ ಕೋಶ' ಅಥವಾ 'ಪ್ರಾದೇಶಿಕ ಪರಿಚಯ ಕೋಶ' ಎಂಬ ಅರ್ಥದಲ್ಲಿ ಪರಿಗಣಿತವಾಯಿತು.[೧] ಅದೇ ರೀತಿ ವಸಾಹತುಶಾಹಿ ಬರಹಗಾರರು ರಚಿಸಿರುವಂತಹ ವರದಿಗಳು, ಡೈರಿಗಳು, ಹೊರಡಿಸಿದ ಗೆಜೆಟ್(ಆಜ್ಞೆಗಳು, ಸರಕಾರದ ನಡಾವಳಿಗಳು) ಇತ್ಯಾದಿಗಳೆಲ್ಲವೂ ಸಹ ಗ್ಯಾಸೆಟಿಯರ್‌ನ ಅಡಿಯಲ್ಲಿ ಪರಿಗಣಿತವಾಗುತ್ತವೆ. ಪ್ರಸ್ತುತವಾಗಿ ಈ ಪದವು "ನಿರ್ದಿಷ್ಟ ಪ್ರದೇಶವೊಂದರ ಭೌಗೋಳಿಕ ಲಕ್ಷಣಗಳು, ನೈಸರ್ಗಿಕ ಸಂಪತ್ತು, ಪ್ರಾಣಿ ಹಾಗೂ ಸಸ್ಯಸಂಪತ್ತು, ಜನಾಂಗಿಕ ವಿವರಗಳು, ಚರಿತ್ರೆ, ಧರ್ಮ, ಆಡಳಿತ ಪದ್ಧತಿ, ಭಾಷೆ ಮತ್ತು ಸಾಹಿತ್ಯ, ಕಲೆ, ಸಂಸ್ಕೃತಿ, ಜನರ ಜೀವನವಿಧಾನ, ಆರ್ಥಿಕತೆ ಮುಂತಾದ ಅನೇಕ ವಿವರಗಳನ್ನು ಒಳಗೊಂಡ ಕೋಶ" ಎಂಬ ಅರ್ಥವನ್ನು ಪಡೆದಿದೆ.

ಪ್ರಪಂಚದಲ್ಲಿ ಭೌಗೋಳಿಕ ಅನ್ವೇಷಣೆಗಳ ನಂತರ ವಿವಿಧ ಪ್ರದೇಶಗಳ ಗ್ಯಾಸೆಟಿಯರ್‌ಗಳ ರಚನೆಯ ಪ್ರಯತ್ನಗಳು ಪ್ರಾರಂಭವಾದವು. ಅಂದರೆ ಯುರೋಪಿನ ಪ್ರವಾಸಿಗರು ತಮ್ಮ ಪ್ರವಾಸದ ಅಂಶಗಳನ್ನು ವರದಿ ರೂಪದಲ್ಲಿ ನೀಡಿದ್ದು, ಇದು ಯುರೋಪಿನ ವರ್ತಕರು ವ್ಯಾಪಾರಕ್ಕಾಗಿ ಬರಲು ಸಹಾಯಕವಾಯಿತು. ಆಧುನಿಕ ಅರ್ಥದಲ್ಲಿ ಗ್ಯಾಸೆಟಿಯರ್ ಎಂದು ಕರೆಯಬಹುದಾದ ಮೊದಲ ಕೃತಿ ಜರ್ಮನಿಯ ಭೂಗೋಳಶಾಸ್ತ್ರಜ್ಞನಾದ ಜೋಹನ್ ಜಿ.ಹೆಚ್. ಹ್ಯಾಸೆಲ್(Johan G.H.Hassel)ನು ೧೮೧೭ರಲ್ಲಿ ಪ್ರಕಟಿಸಿದ 'ಜಿಯಾಗ್ರಾಫಿಕ್ ಸ್ಟ್ಯಾಟಿಸ್ಟಿಕ್ಸ್ ಹ್ಯಾಂಡ್ ವೋಟರ್ ಬುಕ್'ಎಂಬ ಕೃತಿ ಆಗಿದೆ ಎಂದು 'ದಿ ಗ್ಯಾಸೆಟಿಯರ್ ಆಫ್ ಇಂಡಿಯಾ ಸಂಪುಟ'(೧೯೬೪)ದ ಸಂಪಾದಕನಾದ ಹುಮ್ಯಾನ್ ಕಬೀರ್ ಅವರು ತಿಳಿಸಿದ್ದಾರೆ.[೨] ಈ ಕೃತಿಯು ಸಂಶೋಧನಾತ್ಮಕವಾದ ಮುಂದಿನ ಗ್ಯಾಸೆಟಿಯರ್‌ಗಳಿಗೆ ಮಾದರಿ ಆಯಿತು.

ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಆರಂಭದ ದೇಶಿ ಮತ್ತು ವಿದೇಶಿ ಬರಹಗಳನ್ನು ಗಣನೆಗೆ ತೆಗೆದುಕೊಳ್ಳಬಹುದು. ಕೌಟಿಲ್ಯನ ಅರ್ಥಶಾಸ್ತ್ರ, ಕಲ್ಹಣನ ರಾಜತರಂಗಿಣಿ, ಮೆಗಾಸ್ತನೀಸ್‌ನ ಇಂಡಿಕಾ, ಚಾವುಂಡರಾಯನ ಲೋಕೋಪಕಾರ, ಸೋಮೇಶ್ವರನ ಮಾನಸೋಲ್ಲಾಸ ಇನ್ನೂ ಮುಂತಾದ ಪ್ರಾಚೀನ ಕೃತಿಗಳು ಮಾಹಿತಿಯನ್ನು ನೀಡುವ ಕೋಶ ಗಳಾಗಿವೆ. ಹಾಗೆಯೇ ಫಾಹಿಯಾನ್-ಹ್ಯೂಯನ್‌ತ್ಸಾಂಗ್ ಹಾಗೂ ನಂತರದ ಇಬನ್‌ಬತೂತ ಅಥವಾ ಪ್ರವಾಸಿ ಕಥನಗಳು, ಅಲ್ಬೆರೂನಿಯ 'ಕಿತಾಬ್ ಉಲ್ ಹಿಂದ್', ಅಬ್ದುಲ್ ಫಜಲ್‌ನ 'ಐನ್-ಇ-ಅಕ್ಬರಿ' ಮುಂತಾದ ಕೃತಿಗಳು ಸಮಕಾಲೀನ ಆಡಳಿತ, ಇತಿಹಾಸದ ಜೊತೆಗೆ ಪ್ರಮುಖವಾದ ಭೌಗೋಳಿಕ ಹಾಗೂ ಸಾಂಖ್ಯಿಕ ಮಾಹಿತಿಯನ್ನು ನೀಡುತ್ತವೆ. ಇವುಗಳಲ್ಲಿ ಮೊಗಲರ ಕಾಲದಲ್ಲಿ ರಚಿತವಾದ ಅಬ್ದುಲ್ ಫಜಲ್‌ನ 'ಐನ್-ಇ-ಅಕ್ಬರಿ' ಕೃತಿಯನ್ನು 'ಇಂಪಿರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ' ಸಂಪುಟಗಳ ಸಂಪಾದಕನಾದ ಡಬ್ಲ್ಯುಡಬ್ಲ್ಯು ಹಂಟರ್ ಆಡಳಿತಾತ್ಮಕ ವಿವರಗಳನ್ನು ನೀಡುವ ಅತ್ಯಂತ ಮಹತ್ವಪೂರ್ಣ ಕೃತಿ ಎಂದು ತಮ್ಮ ಮೊದಲ ಸಂಪುಟದ ಮುನ್ನುಡಿಯಲ್ಲಿ ಉಲ್ಲೇಖಿಸಿದ್ದಾರೆ.[೩]

ಭಾರತದಲ್ಲಿ ಬ್ರಿಟಿಷರ ಗ್ಯಾಸೆಟಿಯರ್‌ಗಳ ರಚನೆ ವಿಕಾಸವನ್ನು ನೋಡುವುದಾದರೆ ೧೮೧೫ರಲ್ಲಿ ಪ್ರಥಮ ಬಾರಿಗೆ ವಾಲ್ಟರ್ ಹ್ಯಾಮಿಲ್ಟನ್‌ನ 'ಈಸ್ಟ್ ಇಂಡಿಯಾ ಗ್ಯಾಸೆಟಿಯರ್'

ಪ್ರಕಟವಾಯಿತು. ೧೮೫೮ರಲ್ಲಿ ಎಡ್ವರ್ಡ್ ಥರ್ಸ್ಟನ್‌ನ 'ಗ್ಯಾಸೆಟಿಯರ್ ಆಫ್ ದಿ ಟೆರಿಟರೀಸ್ ಅಂಡರ್ ದಿ ಗೌರ್ನಮೆಂಟ್ ಆಫ್ ದಿ ಈಸ್ಟ್ ಇಂಡಿಯಾ ಕಂಪನಿ' ಆ್ಯಂಡ್ 'ನೇಟೀವ್ ಸ್ಟೇಟ್ಸ್ ಆನ್ ದಿ ರನ್‌ಟೆಂಟ್ ಆಫ್ ಇಂಡಿಯಾ' ಎಂಬುದು ಪ್ರಕಟವಾಯಿತು. ಹಂಟರ್‌ನ 'ದಿ ಇಂಪೀರಿಯಲ್ ಗ್ಯಾಸೆಟಿಯರ್' ಸಂಪುಟಗಳು ಪ್ರಕಟವಾಗುವವರೆಗೂ ಥರ್ಸ್ಟನ್‌ನ ಈ ಕೃತಿಯನ್ನು ಮಾಹಿತಿಗಳನ್ನು ನೀಡುವ ಸಾಮಾನ್ಯವಾದ ಕೃತಿ ಎಂದು ತಿಳಿಯಲಾಗಿತ್ತು.[೪] ೧೮೮೧ರಲ್ಲಿ ಹಂಟರ್‌ನ ಪ್ರಧಾನ ಸಂಪಾದಕತ್ವದಲ್ಲಿ 'ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ'ದ ಪ್ರಥಮ ಆವೃತ್ತಿಯ ಒಂಬತ್ತು ಸಂಪುಟಗಳು ಪ್ರಕಟವಾದವು. ಈ ಸಂಪುಟಗಳಿಗೆ ಪೂರಕವಾಗಿಯೂ 'ದಿ ಇಂಡಿಯನ್ ಎಂಪೈರ್ ಇಟ್ಸ್ ಹಿಸ್ಟರಿ, ಪೀಪಲ್ ಆ್ಯಂಡ್ ಪ್ರಾಡಕ್ಟ್' ಎಂಬ ಕೃತಿಯು ೧೮೮೨ರಲ್ಲಿ ಪ್ರಕಟವಾಯಿತು. ಲಾರ್ಡ್ ಕರ್ಜನ್‌ನು ಇಂಪೀರಿಯಲ್ ಗ್ಯಾಸೆಟಿಯರಗಳ ಪುನರ್ ಮುದ್ರಣ ಕಾರ್ಯಕ್ಕೆ ಆಜ್ಞೆ ನೀಡಿದನು. ಹೊಸ ಹೊಸ ವಿಷಯಗಳನ್ನು ಸೇರಿಸಿ ೧೯೦೭-೧೯೦೯ರಲ್ಲಿ ೨೬ ಸಂಪುಟಗಳಲ್ಲಿ ಇವುಗಳನ್ನು ಪ್ರಕಟಿಸಲಾಯಿತು. ಮೊದಲು ನಾಲ್ಕು ಸಂಪುಟಗಳು ಹಂಟರ್‌ನ ಇಂಡಿಯನ್ ಎಂಪೈರ್‌ನ ಪರಿಷ್ಕೃತ ಪಾಠ, ಉಳಿದ ವಿಷಯಗಳನ್ನು ತಿಳಿಸುವುದರ ಜೊತೆಗೆ ಭೂಪಟ, ಸೂಚಿಗಳನ್ನು ಒಳಗೊಂಡಿವೆ.[೫]

ಸ್ವಾತಂತ್ರ್ಯ ನಂತರ ಭಾರತ ಸರ್ಕಾರವು 'ದಿ ಇಂಪೀರಿಯಲ್ ಗ್ಯಾಸೆಟಿಯರ್ ಆಫ್ ಇಂಡಿಯಾ' ಸಂಪುಟಗಳಿಗೆ ರಾಷ್ಟ್ರೀಯ ಸ್ಪರ್ಶವನ್ನು ನೀಡಿ ಸಂಪಾದಿಸಿ ಪ್ರಕಟಿಸಲು ನಿರ್ಧರಿಸಿತು. ಶೀರ್ಷಿಕೆಯನ್ನು ಬದಲಾವಣೆ ಮಾಡಿ 'ದಿ ಗ್ಯಾಸೆಟಿಯರ್ ಆಫ್ ಇಂಡಿಯಾ: ಇಂಡಿಯನ್ ಯೂನಿಯನ್' ಎಂಬ ಶೀರ್ಷಿಕೆಯಲ್ಲಿ ಒಟ್ಟು ನಾಲ್ಕು ಸಂಪುಟಗಳನ್ನು ಹೊರ ತರಲಾಗಿದೆ. ಪ್ರಥಮ ಸಂಪುಟವು ದೇಶ ಮತ್ತು ಜನರನ್ನು ಕುರಿತು ವಿವರಿಸಿದರೆ, ಎರಡನೇ ಸಂಪುಟವು ದೇಶದ ಇತಿಹಾಸ ಮತ್ತು ಸಂಸ್ಕೃತಿಯನ್ನು ಕುರಿತು ವಿವರಣೆಯನ್ನು ನೀಡುತ್ತದೆ. ಮೂರನೇ ಸಂಪುಟವು ದೇಶದ ಆರ್ಥಿಕ ಸಂರಚನೆ ಮತ್ತು ಇತರ ಚಟುವಟಿಕೆಗಳನ್ನು ವಿವರಿಸುತ್ತದೆ. ನಾಲ್ಕನೇ ಸಂಪುಟವು ದೇಶದ ಆಡಳಿತ ಮತ್ತು ಸಾರ್ವಜನಿಕ ಕಲ್ಯಾಣ ಕ್ರಮಗಳನ್ನು ಕುರಿತು ವಿವರಣೆ ನೀಡುವುದರ ಮೂಲಕ ಸಮಗ್ರವಾಗಿ ದೇಶದ ಇತಿಹಾಸವನ್ನು ಕಟ್ಟಿಕೊಡುತ್ತದೆ.[೬] ಪ್ರಥಮ ಭಾರಿಗೆ ಭಾರತದಲ್ಲಿ ಈ ಗ್ಯಾಸೆಟಿಯರ್‌ಗಳು ಬ್ರಿಟಿಷರ ಆಡಳಿತಾವಧಿಯಲ್ಲಿ ರಚನೆ ಆಗಿವೆ. ಈ ಗ್ಯಾಸೆಟಿಯರ್‌ಗಳ ಮೂಲ ಉದ್ದೇಶ ಬ್ರಿಟಿಷ್ ಆಡಳಿತಗಾರರ ಉಪಯೋಗ ಹಾಗೂ ಅವುಗಳಲ್ಲಿ ಸಾಮ್ರಾಜ್ಯಶಾಹಿ ಹಿತಾಸಕ್ತಿಯ ಬಣ್ಣವು ಲೇಪಿತವಾಗಿದ್ದಿತು. ಈ ನಿಟ್ಟಿನಲ್ಲಿ ಭಾರತದ ಗ್ಯಾಸೆಟಿಯರ್‌ಗಳ ರಚನೆಯ ವಿಕಾಸವನ್ನು ತಿಳಿಯಬಹುದು.

### ೪.೧. ವಸಾಹತುಶಾಹಿ ಕಾಲಘಟ್ಟದ ಗ್ಯಾಸೆಟಿಯರ್‌ಗಳ ವಿಶ್ಲೇಷಣೆ

ಗ್ಯಾಸೆಟಿಯರ್ ಎನ್ನುವುದು ವಸಾಹತುಶಾಹಿ ಕಾಲಘಟ್ಟದಲ್ಲಿ ಬ್ರಿಟಿಷರ ಒಂದು ಜ್ಞಾನಶಾಖೆ. ಇದು ಅಂದಿನ ಸಂದರ್ಭದಲ್ಲಿ ಬ್ರಿಟಿಷರ ಉದ್ದೇಶಗಳನ್ನು ಪೂರೈಸಿಕೊಳ್ಳಲಾಗಿದೆ. ವ್ಯಾಪಾರದ ಉದ್ದೇಶಗಳನ್ನಿಟ್ಟುಕೊಂಡು ಭಾರತಕ್ಕೆ ಬಂದವರಲ್ಲಿ ಬ್ರಿಟಿಷರು ಬಲಿಷ್ಠರು. ಬ್ರಿಟಿಷರು ವ್ಯಾಪಾರದ

ಅನುಕೂಲಕ್ಕಾಗಿ ವಸ್ತುಗಳನ್ನು ರಫ್ತು ಮತ್ತು ಆಮದು ಮಾಡಲು ತೆರಿಗೆರಹಿತ ದಸ್ತಕ್‌ಗಳನ್ನು ಪಡೆದಿದ್ದರು. ಇದರಿಂದ ಬಂಗಾಳದ ನವಾಬರಿಗೆ ಯಾವುದೇ ಆದಾಯ ಈಸ್ಟ್ ಇಂಡಿಯಾ ಕಂಪನಿಯಿಂದ ಬರಲಿಲ್ಲ. ಇದರಿಂದ ಬಂದ ಆದಾಯವನ್ನು ನವಾಬರು ನೀಡುವಂತೆ ಒತ್ತಾಯಿಸಿದರು. ಹೀಗೆ ಬ್ರಿಟಿಷರ ಆಸಕ್ತಿಗಳ ಹಾಗೂ ಸ್ಥಳೀಯ ಬಂಗಾಳದ ಸರ್ಕಾರದ ನಡುವೆ ತಿಕ್ಕಾಟ ೧೮ನೇ ಶತಮಾನದ ವೇಳೆಗೆ ಆರಂಭವಾಯಿತು. ಇದು ಬ್ರಿಟಿಷರು ಬಂಗಾಳದ ನವಾಬ ಸಿರಾಜುದ್ದೌಲನನ್ನು ಸೋಲಿಸುವುದರ ಮೂಲಕ ಭಾರತದಲ್ಲಿ ಬ್ರಿಟಿಷರ ಆಡಳಿತವು ಭದ್ರವಾಗಿ ಬೆಳೆಯುವಂತೆ ಮಾಡಿತು.

ಬ್ರಿಟಿಷರು ತಮ್ಮ ಒಡೆದು ಆಳುವ ನೀತಿಯನ್ನು ಬಳಸಿ ಮರಾಠರು, ನವಾಬರು ಮತ್ತು ಹೈದರಾಬಾದಿನ ನಿಜಾಮರನ್ನು ಸಮಯ, ಸಂದರ್ಭಕ್ಕೆ ತಕ್ಕಂತೆ ತನ್ನ ಕಡೆ ಸೇರಿಸಿಕೊಂಡು ಹೈದರಾಲಿ ಮತ್ತು ಟಿಪ್ಪುವಿನ ವಿರುದ್ಧ ಯುದ್ಧ ಪ್ರಾರಂಭಿಸಿದರು. ೧೭೬೬ರಿಂದ ೧೭೯೯ ರವರೆಗೆ ಬ್ರಿಟಿಷರು ಮೈಸೂರಿನ ಹೈದರಾಲಿ ಮತ್ತು ಟಿಪ್ಪು ಸುಲ್ತಾನರೊಂದಿಗೆ ನಾಲ್ಕು ಆಂಗ್ಲೋ-ಮೈಸೂರು ಯುದ್ಧಗಳನ್ನು ಕೈಗೊಂಡರು. ಈ ಯುದ್ಧಗಳಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ನಿರ್ನಾಮ ಮಾಡಿದರು.[೭] ಆಡಳಿತವನ್ನು ಈಸ್ಟ್ ಇಂಡಿಯಾ ಕಂಪನಿಯಿಂದ ನೇಮಕವಾದ ಅಧಿಕಾರಿಗಳೇ ನಡೆಸುತ್ತಿದ್ದರು. ಈ ಅಧಿಕಾರಿಗಳಿಗೆ ಇಲ್ಲಿನ ಭೂಪ್ರದೇಶಗಳು ಹೊಸದಾಗಿದ್ದು, ಅವರು ಇಲ್ಲಿ ಸುಗಮವಾಗಿ ಆಡಳಿತ ನಡೆಸಬೇಕಾದರೆ ಭೂಪ್ರದೇಶಗಳ ಮಾಹಿತಿ ಬೇಕಾಗಿತ್ತು. ಆಯಾಯ ಪ್ರದೇಶಗಳ ಬಗೆಗೆ ಲಿಖಿತ ದಾಖಲೆಗಳಿರಲಿಲ್ಲ. ಅಂದರೆ ಅನ್ಯ ದೇಶದಿಂದ ಬಂದಿರುವ ಇವರಿಗೆ ಇಲ್ಲಿನ ಭೂಪ್ರದೇಶಗಳಲ್ಲಿ ವಾಸವಿರುವ ಜನರ ಭಾಷೆ, ನೆಲ, ಆಚರಣೆ, ಧರ್ಮ, ಸಂಸ್ಕೃತಿ, ಸಂಪ್ರದಾಯ, ಪರಂಪರೆ, ಆಡಳಿತದ ಬಗೆಗೆ ಯಾವುದೇ ರೀತಿಯ ದಾಖಲೆಗಳು ಲಭ್ಯವಿರಲಿಲ್ಲ. ವಸಾಹತುಶಾಹಿ ಕಾಲಘಟ್ಟದ ಚರಿತ್ರೆಕಾರರು 'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ, ಭಾರತವು ಆಧ್ಯಾತ್ಮಿಕ, ಅಲೌಕಿಕ ಚಿಂತನೆಗಳಿಂದ ಕೂಡಿದ ದೇಶ' ಎಂಬುದಾಗಿ ಚಿತ್ರಿಸಿದರು. ಈ ನಿಟ್ಟಿನಲ್ಲಿ ಮೈಸೂರು ಪ್ರದೇಶದ ಆಡಳಿತವನ್ನು ನಡೆಸಲು ಅಗತ್ಯವಾದ ಸ್ವಾಭಾವಿಕ ಸಂಪನ್ಮೂಲಗಳು, ಜನಾಂಗಿಕ ವಿವರಗಳು, ಕೃಷಿವ್ಯವಸ್ಥೆ, ಕಂದಾಯವ್ಯವಸ್ಥೆ, ಸೈನಿಕ ವ್ಯವಸ್ಥೆ, ಆರ್ಥಿಕ ವಿವರಗಳು ಮುಂತಾದವುಗಳ ಕುರಿತು ಮಾಹಿತಿ ಸಂಗ್ರಹಣೆಯ ಸಲುವಾಗಿ ಅವರು ವಿವಿಧ ರೀತಿಯ ಸರ್ವೇಕ್ಷಣೆ, ಪರಿವೀಕ್ಷಣೆ, ಕ್ಷೇತ್ರಕಾರ್ಯಗಳನ್ನು ಕೈಗೊಂಡು ವರದಿ ತಯಾರಿಸಲು ಗಮನ ಹರಿಸಿದರು. ಈ ಮಾಹಿತಿಗಳೆಲ್ಲ ವರದಿ, ಕೃತಿಯ ರೂಪದಲ್ಲಿ ಪ್ರಕಟವಾಗಿವೆ.[೮] ಇಂದಿಗೂ ಈ ಕೃತಿಗಳು ಮೈಸೂರು ಒಡೆಯರ ಚರಿತ್ರೆಯಲ್ಲಿ ಆಕರಗಳಾಗಿ ಗುರುತಿಸಿಕೊಂಡಿವೆ.

ಕಾಲಿನ್ ಮೆಕೆಂಝಿ ಇಂಜಿನಿಯರ್ ಪದವೀಧರನಾಗಿದ್ದು, ೧೭೮೩ರಲ್ಲಿ ಪ್ರದೇಶ ವೀಕ್ಷಣೆಯ ಅಧಿಕಾರಿಯಾಗಿ ಮದ್ರಾಸ್ ಪ್ರಾಂತ್ಯದಲ್ಲಿ ಸೇರಿಕೊಳ್ಳುತ್ತಾನೆ. ಬ್ರಿಟಿಷರಿಗೆ ಯುದ್ಧತಂತ್ರ ರೂಪಿಸಲು ಇಲ್ಲಿನ ಪ್ರದೇಶಗಳ ನಕಾಶೆಗಳು ಬೇಕಾಗಿದ್ದವು. ಈ ಕಾರ್ಯಕ್ಕೆ ಮೆಕೆಂಝಿಯನ್ನು ನೇಮಿಸುತ್ತಾರೆ. ಇವನು ಬ್ರಿಟಿಷ್ ಸೈನ್ಯದೊಡನೆ ಶ್ರೀರಂಗಪಟ್ಟಣಕ್ಕೆ ಬಂದು ಅಲ್ಲಿನ ಪ್ರದೇಶಗಳು ಮತ್ತು ಟಿಪ್ಪು ವಿರುದ್ಧ ಜನಾಭಿಪ್ರಾಯವನ್ನು ಸಂಗ್ರಹಿಸಿದನು. ಬ್ರಿಟಿಷರು ಟಿಪ್ಪುವನ್ನು ಸೋಲಿಸಿ ಅವನಿಂದ

ಮೈಸೂರು ಪ್ರದೇಶವನ್ನು ಪಡೆದುಕೊಂಡ ವರ್ಷವೇ ಮೆಕೆಂಝಿಯನ್ನು ಇಲ್ಲಿನ ಸರ್ವೇಯರ್ ಅಗಿ ನೇಮಕ ಮಾಡಿದನು.[೯] ೧೮೦೭ರ ವೇಳೆಗೆ ದಕ್ಷಿಣ ಭಾರತದಲ್ಲಿ ಸುಮಾರು ೪೦ ಸಾವಿರ ಮೈಲಿ ಪ್ರದೇಶವನ್ನು ಸುತ್ತಿದನು. ಅವನು ತನ್ನ ಸ್ವಂತ ಹಣ ಸುಮಾರು ೧೫೦೦೦ ಪೌಂಡ್ ಹಣ ಖರ್ಚು ಮಾಡಿ ಸಂಗ್ರಹಿಸಿದ ವಿವರಗಳು ಹೀಗಿವೆ. ೧೫೬೮ ಹಸ್ತಪ್ರತಿಗಳು, ೨೦೭೦ ಕೈಫಿಯತ್ತುಗಳು, ೮೦೭೦ ಶಾಸನ ನಕಲು, ೭೯ ನಕ್ಷೆ, ೨೬೩೦ ಚಿತ್ರ, ೬೨೧೮ ನಾಣ್ಯಗಳು, ೧೦೬ ಪ್ರಾಚೀನ ವಿಗ್ರಹಗಳು, ಸ್ಥಳ ಪುರಾಣ, ಐತಿಹ್ಯ ಮೊದಲಾದವುಗಳನ್ನು ಕಲೆ ಹಾಕಿದನು.[೧೦] ದೇವಚಂದ್ರನ ರಾಜಾವಳೀ ಕಥೆಯ ರಚನೆಗೆ ಅವನೇ ಸಹಾಯಕನಾಗಿದ್ದನು. ಹೀಗೆ ಕನ್ನಡ ಸಾಹಿತ್ಯ ಕೃತಿಯಲ್ಲಿ ಮೊಟ್ಟ ಮೊದಲಿಗೆ ಕಾಣಿಸಿಕೊಂಡ ಯುರೋಪಿನ ವ್ಯಕ್ತಿ ಎಂದರೆ ಮೆಕೆಂಝಿ ಇರಬೇಕು.[೧೧] ಮೆಕೆಂಝಿ ಬ್ರಿಟಿಷರ ಆಡಳಿತಾವಧಿಯಲ್ಲಿ ಇಲ್ಲಿನ ಕೃಷಿಪದ್ಧತಿಯನ್ನು ವಿವರಿಸುತ್ತಾ, ಮೊದಲು ಇಲ್ಲಿನ ಕೃಷಿಯ ತೆರಿಗೆ ಯಾವ ರೀತಿ ಇತ್ತು, ಅನಂತರ ತೆರಿಗೆ ಪದ್ಧತಿಯನ್ನು ಬ್ರಿಟಿಷರು ತಮ್ಮದೇ ಆದ ರೀತಿಯಲ್ಲಿ ಬದಲಾಯಿಸಿದರು ಎಂಬುದನ್ನು ತಿಳಿಸಿದ್ದಾರೆ. ತೆರಿಗೆಯು ಭೂಮಿಯ ಇಳುವರಿಯ ಮೇಲೆ ನಿರ್ಧರಿಸಿದರು. ಕೃಷಿಯ ಸಮುದಾಯವು ಇಳುವರಿಯನ್ನು ಹೆಚ್ಚಿಸಿದಂತೆ ತೆರಿಗೆಯನ್ನು ವಿಧಿಸಿದರು.[೧೨] ಇವರಿಗೆ ತೆರಿಗೆಯ ಮೂಲಕ ಅಧಿಕ ಲಾಭ ಗಳಿಸುವುದು ಇವರ ಉದ್ದೇಶ ಎಂಬುದು ಮೆಕೆಂಝಿಯು ನೀಡಿರುವ ಮಾಹಿತಿಯಿಂದ ತಿಳಿಯಬಹುದು. ಇವನು ತನಗೆ ಕಾಣಿಸಿದ್ದೆಲ್ಲ ದಾಖಲಿಸಿದನೇ ಹೊರತು ಸತ್ಯಾಸತ್ಯತೆಯನ್ನು ಒರೆಗಲ್ಲಿಗೆ ಹಚ್ಚಿ ನೋಡುವ ಪ್ರಯತ್ನ ಮಾಡಲಿಲ್ಲ.

'ಫ್ರಾನ್ಸಿಸ್ ಬುಕಾನನ್' ಈಸ್ಟ್ ಇಂಡಿಯಾ ಕಂಪನಿಯ ಮೂಲಕ ಬಂಗಾಳದಲ್ಲಿ ವೈದ್ಯಕೀಯ ಸೇವೆಯಲ್ಲಿದ್ದನು. ಅನಂತರ ಟಿಪ್ಪುವಿನ ವಶದಲ್ಲಿ ಅದುವರೆಗೆ ಇದ್ದ ಮೈಸೂರು, ಕೆನರಾ ಮತ್ತು ಮಲಬಾರ್ ಪರಿಶೀಲನೆಗೆ ಕಳುಹಿಸಲಾಯಿತು. ಅವನು ವರದಿ ಮಾಡಬೇಕಾದುದ್ದು ಕೃಷಿಪದ್ಧತಿಯನ್ನು. ಇದರ ಜೊತೆಗೆ ಜನತೆಯ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಜೀವನದ ಬಗೆಯನ್ನು ತನ್ನ ದಿನಚರಿಯಲ್ಲಿ ಬರೆಯುತ್ತಾ ಹೋದನು. ಇವನು ಮದ್ರಾಸ್‌ನಿಂದ ಏಪ್ರಿಲ್ ೨೩, ೧೮೦೦ರಿಂದ ಜುಲೈ ೫, ೧೮೦೧ರವರೆಗೆ ಸುಮಾರು ಒಂದು ವರ್ಷ, ಎರಡು ತಿಂಗಳು, ಹದಿಮೂರು ದಿವಸಗಳವರೆಗೆ ದಕ್ಷಿಣ ಭಾರತದ ಸಮೀಕ್ಷೆ ಕಾರ್ಯವನ್ನು ಆರಂಭಿಸಿದನು.[೧೩] ಫ್ರಾನ್ಸಿಸ್ ಬುಕಾನನ್ ಪ್ರತಿಯೊಂದು ಪಟ್ಟಣ, ಹಳ್ಳಿಗಳಿಗೆ ಭೇಟಿ ನೀಡುವ ತಾರೀಕು, ಅಲ್ಲಿನ ಕೃಷಿ, ಕೃಷಿಯ ಸಲಕರಣೆಗಳು, ನೀರಾವರಿ, ಜನವಸತಿ, ಆಹಾರ ಬೆಳೆಗಳ ವಿವರ, ಪ್ರಾಣಿ-ಪಕ್ಷಿ, ಧಾರ್ಮಿಕ ಆಚರಣೆಗಳು, ಕಲೆ ಮತ್ತು ವಾಸ್ತುಶಿಲ್ಪ, ವಿವಿಧ ಜನಾಂಗಗಳ ಸ್ಥಿತಿಗತಿಗಳು, ವ್ಯಾಪಾರ-ವಾಣಿಜ್ಯ, ಜಾತಿವ್ಯವಸ್ಥೆ, ರೋಗ-ರುಜಿನ ಇವೇ ಮೊದಲಾದ ಅಂಶಗಳನ್ನು 'ಎ ಜರ್ನಿ ಫ್ರಮ್ ಮಡ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್'(೧೮೦೭, ಲಂಡನ್) ಎಂಬ ಕೃತಿಯ ಮೂರು ಸಂಪುಟಗಳಲ್ಲಿ ವಿವರಿಸಿದ್ದಾರೆ. ಅಲ್ಲದೇ ಬುಕಾನನ್ ಟಿಪ್ಪುವನ್ನು ಮತಾಂಧ, ಆಕ್ರಮಣಕಾರಿ ಎಂದು ತಿಳಿಸಿರುವುದನ್ನು ನೋಡಬಹುದು.[೧೪] ಹೀಗೆ ಬುಕಾನನ್ ಚರಿತ್ರೆ ಬರೆಯಲು ಬೇಕಾಗುವ ಆಕರಸಾಮಗ್ರಿಗಳನ್ನು ಕಲೆಹಾಕುವುದರ ಮೂಲಕ ಇಲ್ಲಿನ ಸಂಸ್ಕೃತಿ, ಪ್ರಾದೇಶಿಕ ವೈವಿಧ್ಯತೆ ಮೊದಲಾದವುಗಳನ್ನು

ತನ್ನ ಕೃತಿಯಲ್ಲಿ ದಾಖಲಿಸುತ್ತಾನೆ. ಇವನ ನಂತರ ಡಾ.ಜಾನ್ ಲೇಡನ್ ಎಂಬುವನು ಮೈಸೂರಿನ ಸರ್ವೇಕ್ಷಣಾ ಕಾರ್ಯ ಕೈಗೊಂಡನು.[೧೫] ಬ್ರಿಟಿಷ್ ಆಡಳಿತಗಾರ ಮತ್ತು ಚರಿತ್ರೆಕಾರನೂ ಆದ 'ಮಾರ್ಕ್ ವಿಲ್ಕ್ಸನು' ೧೮೦೫–೧೮೦೮ರ ಅವಧಿಯಲ್ಲಿ ಮೈಸೂರು ಸಂಸ್ಥಾನದ ರೆಸಿಡೆಂಟ್ ಆಗಿದ್ದನು. ಇವನು ಈ ಕಚ್ಚಾವಸ್ತುಗಳ ಸಂಗ್ರಹಣೆಯ ಜೊತೆಗೆ ಮುಖ್ಯವಾಗಿ ಮೊದಲು ಇತಿಹಾಸ ರಚನೆ ಮಾಡಿದನು. ಇವನು ಚಾರಿತ್ರಿಕ ದಾಖಲೆಗಳನ್ನು ಇಟ್ಟುಕೊಂಡಿದ್ದ ಕರಣಿಕರನ್ನು ಕರೆಯಿಸಿಕೊಂಡು ಅವರಲ್ಲಿದ್ದ ವಿವರಗಳನ್ನು ಕ್ರೋಡೀಕರಿಸಿದನು. ಮೈಸೂರಿನ ಸರ್ವೇ ಕಾರ್ಯದಲ್ಲಿ ಮೆಕೆಂಝಿ ಸಂಗ್ರಹಿಸಿದ ಸಾವಿರಾರು ಶಾಸನಗಳು, ನೂರಾರು ಹಸ್ತಪ್ರತಿಗಳು ಮತ್ತು ದಾಖಲೆಗಳನ್ನು ವಿಲ್ಕ್ಸನು 'ಮೆಕೆಂಝಿ ಸಂಗ್ರಹ' ಎನ್ನುವ ಪುಸ್ತಕರೂಪದಲ್ಲಿ ಸಂಗ್ರಹಿಸಿದನು. ಅವನ ಕೃತಿ 'ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೇಚಸ್ ಆಫ್ ಸೌತ್ ಇಂಡಿಯಾ' ಎಂಬ ಕೃತಿಯ ಮೂರು ಸಂಪುಟಗಳು ೧೮೧೦ ರಿಂದ ೧೮೧೭ರ ನಡುವೆ ಪ್ರಕಟನೆಗೊಂಡವು. ಈ ಸಂಪುಟಗಳಲ್ಲಿ ಪ್ರಾರಂಭದ ಒಡೆಯರ ಚರಿತ್ರೆಯಿಂದ ಮಾಹಿತಿಯನ್ನು ವಿವರಿಸುತ್ತಾ ಹೋಗುತ್ತಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಮಹಾವಂಚಕರು, ಆಕ್ರಮಣಕಾರರು ಎಂದು ಬರೆಯುತ್ತಾರೆ. ಆ ಮೂಲಕ ಹೈದರ್ ಮತ್ತು ಟಿಪ್ಪು ಅವರ ವಿರುದ್ಧದ ಸಾಮ್ರಾಜ್ಯಶಾಹಿ ದಾಳಿಗಳು ಅನಿವಾರ್ಯ ಎಂದಿದ್ದಾರೆ. ಸಿಂಹಾಸನಕ್ಕಾಗಿ ಅರಮನೆಯಲ್ಲಿ ನಡೆದ ರಕ್ತಪಾತ, ಹಲವಾರು ಕೊಲೆಗಳು, ಸಂಘರ್ಷಗಳನ್ನು ಅಭೂತಪೂರ್ವವಾಗಿ ವರ್ಣಿಸುತ್ತಾ ಹೋಗುತ್ತಾರೆ.[೧೬]

ಈ ನಿಟ್ಟಿನಲ್ಲಿ ಕಾಲಿನ್ ಮೆಕೆಂಝಿ, ಫ್ರಾನ್ಸಿಸ್ ಬುಕಾನನ್ ಮಾಹಿತಿಗಳನ್ನು ಸಂಗ್ರಹಿಸಿದರು. ಮಾರ್ಕ್ ವಿಲ್ಕ್ಸನು ಈ ಮಾಹಿತಿಯ ಕಚ್ಚಾಸಾಮಗ್ರಿಗಳನ್ನು ಬಳಸಿಕೊಂಡು ಇತಿಹಾಸ ರಚನೆ ಮಾಡಿದನು. ಕಾಲಿನ್ ಮೆಕೆಂಝಿ, ಬುಕಾನನ್ ಮತ್ತು ಮಾರ್ಕ್ ವಿಲ್ಕ್ಸ್ ಅವರ ಮಾಹಿತಿಗಳು ಮೈಸೂರು ಚರಿತ್ರೆಯಲ್ಲಿ ಪ್ರಮುಖ ಆಕರಗಳಾಗಿವೆ. ಇವರ ಈ ಅಧ್ಯಯನದಲ್ಲಿ 'ಗ್ಯಾಸೆಟಿಯರ್' ಎನ್ನುವುದಿರಲಿಲ್ಲ. ಆದರೆ ಇವರ ಮಾಹಿತಿಗಳು ಗ್ಯಾಸೆಟಿಯರ್‌ಗಳನ್ನು ರಚನೆ ಮಾಡುವುದಕ್ಕೆ ಸಹಾಯಕವಾದವು. ಇಡೀ ಪ್ರದೇಶಕ್ಕೆ ಸಂಬಂಧಿಸಿದಂತೆ ಎಲ್ಲಾ ವಿವರಗಳನ್ನೊಳಗೊಂಡ ಮಾಹಿತಿ ಕೋಶ ಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡಿದ್ದೇ 'ಗ್ಯಾಸೆಟಿಯರ್' ಎಂಬ ಪರಿಕಲ್ಪನೆ.

೧೮೫೫ರ ನಂತರ ಸರ್ ಮಾರ್ಕ್ ಕಬ್ಬನ್ ತಯಾರಿಸಿದ 'ಜನರಲ್ ಮೆಮೋರಂಡಂ'ನ ಪ್ರಕಾರ ಪ್ರತಿ ವರ್ಷವು ಮೈಸೂರು ಸಂಸ್ಥಾನದ ಆಡಳಿತಾತ್ಮಕ ವರದಿಗಳನ್ನು(ಆಡ್ಮಿನಿಸ್ಟ್ರೇಟಿವ್ ರೀಪೋರ್ಟ್ಸ್) ಪ್ರಕಟಿಸಲು ನಿರ್ಧರಿಸಲಾಯಿತು.

೧೮೭೧ರ ಜನಗಣತಿ ವರದಿಯು ಈ ಸಂಪುಟಗಳು ಮೊದಲ ಮುದ್ರಣದ ಹಂತದಲ್ಲಿದ್ದು, ದತ್ತಾಂಶಗಳನ್ನೆಲ್ಲಾ ಏರು–ಪೇರು ಮಾಡಿದವು.[೧೭] ಅನಂತರ ಕೆಲವು ಮಾರ್ಪಾಡುಗಳನ್ನು ಮಾಡಲಾಯಿತು. ೧೮೬೭ರಲ್ಲಿ ಮೈಸೂರು ಸಂಸ್ಥಾನದ ಚೀಫ್ ಕಮೀಷರ್ ಆದ ಲೆವಿನ್ ಬೌರಿಂಗ್‌ನು ರಚಿಸಿದ 'ಈಸ್ಟ್ರನ್ ಎಕ್ಸ್‌ಪೀರಿಯನ್ಸ್' ಕೃತಿಯಲ್ಲಿಯೂ ಮೈಸೂರು ಸಂಸ್ಥಾನದ ಅನೇಕ ಐತಿಹಾಸಿಕ ಮತ್ತು ಭೌಗೋಳಿಕ ಲಕ್ಷಣಗಳ ಮಾಹಿತಿಗಳನ್ನು ನೋಡಬಹುದು.[೧೮]

ಅಂದಿನ ಸಾರ್ವಜನಿಕ ಶಿಕ್ಷಣ ಇಲಾಖೆಯ ನಿರ್ದೇಶಕನಾಗಿದ್ದ ಬಿ.ಎಲ್.ರೈಸ್ ಅವರನ್ನು ಸಂಪಾದಕರನ್ನಾಗಿ ನೇಮಿಸಿದನು. ರೈಸ್ ಅವರು ಸ್ಥಳೀಯರಾಗಿ ಈ ಪ್ರದೇಶದ ಭಾಷೆ, ಸಾಹಿತ್ಯ, ಜನತೆ ಮತ್ತು ಇತಿಹಾಸದ ಅರಿವಿದ್ದರಿಂದ ಈ ಜವಾಬ್ದಾರಿಯನ್ನು ನೀಡಿದರು.

ಡಬ್ಲ್ಯು.ಡಬ್ಲ್ಯು.ಹಂಟರ್ ಬೆಂಗಳೂರಿಗೆ ಭೇಟಿ ನೀಡಿದ ಸಂದರ್ಭದಲ್ಲಿ ರೈಸ್ ಅವರ ಈ ಕಾರ್ಯದಲ್ಲಿಯ ಅಪಾರ ಪರಿಶ್ರಮ, ಉತ್ಸಾಹದ ಕಾರ್ಯವನ್ನು ಕಣ್ಣಾರೆ ಕಂಡ ಅವರು ರೈಸ್ ಅವರಿಗೆ ಸಮಗ್ರ ಪ್ರಾಂತ್ಯವನ್ನೊಳಗೊಂಡಂತೆ(ಎಂಟು ಜಿಲ್ಲೆಗಳ) ಮಾಹಿತಿಯನ್ನು ಒಟ್ಟಿಗೆ ತರುವಂತೆ ಸಲಹೆ ನೀಡಿದನು.[೧೯] ಅವರ ಸಲಹೆಯಂತೆ ಕಾರ್ಯ ನಿರತರಾದ ರೈಸ್ ಅದುವರೆಗೆ ಕಾಲಿನ್ ಮೆಕೆಂಝಿ, ಬುಕಾನನ್, ಡಾ.ಬೆಂಜಮಿನ್ ಹೈನೆ, ಮಾರ್ಕ್ ವಿಲ್ಕ್ಸ್‌ನ ಕೃತಿಯ ಮಾಹಿತಿಗಳು, ವಿವಿಧ ವರದಿಗಳು, ಸರ್ಕಾರಿ ದಾಖಲೆಗಳನ್ನು ಬಳಸಿಕೊಂಡು ಪ್ರಪ್ರಥಮವಾಗಿ ರೈಸ್ ಅವರು ನೇರವಾಗಿ 'ಮೈಸೂರು ಮತ್ತು ಕೂರ್ಗ್' ಗ್ಯಾಸೆಟಿಯರ್‌ಗಳ ಮೊದಲ ಆವೃತ್ತಿಯ ಮೂರು ಸಂಪುಟಗಳನ್ನು ೧೮೭೬–೭೭ರ ಅವಧಿಯಲ್ಲಿ ಹೊರತಂದರು.

ಬಿ.ಎಲ್.ರೈಸ್ ಅವರು ಹೊರತಂದ 'ಮೈಸೂರು ಆ್ಯಂಡ್ ಕೂರ್ಗ್ ಎ ಗ್ಯಾಸೆಟಿಯರ್' ಎಂಬ ಮೂರು ಸಂಪುಟಗಳಲ್ಲಿ ಮೊದಲನೆಯ ಸಂಪುಟವು ಮೈಸೂರು ಸಂಸ್ಥಾನದಲ್ಲಿ ಸಾಮಾನ್ಯವಾದ ಅಂಶಗಳ ಸಮಗ್ರ ಸ್ವರೂಪದ ಆವೃತ್ತಿ. ಎರಡನೆಯ ಸಂಪುಟವು ಮೈಸೂರು ಸಂಸ್ಥಾನದ ಎಂಟು ಜಿಲ್ಲೆಗಳ ವಿಸ್ತೃತ ಮಾಹಿತಿಯನ್ನು ನೀಡುತ್ತದೆ. ಮೂರನೆಯ ಸಂಪುಟವು ಕೊಡಗು ಪ್ರಾಂತ್ಯದ ವಿಸ್ತೃತ ವಿವರಣೆಯನ್ನು ತಿಳಿಸುತ್ತದೆ.[೨೦]

ರೈಸ್ ಅವರು ಗ್ಯಾಸೆಟಿಯರ್‌ಗಳ ಮೊದಲ ಆವೃತ್ತಿ ಪ್ರಕಟವಾದ ನಂತರ ಪುರಾತತ್ವ ಇಲಾಖೆಯಲ್ಲಿ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದರು. ಈ ಇಪ್ಪತ್ತು ವರ್ಷಗಳ ಅವಧಿಯಲ್ಲಿ ಸರ್ವೇಕ್ಷಣೆ, ಪರಿವೀಕ್ಷಣೆ ಮತ್ತು ಕ್ಷೇತ್ರಕಾರ್ಯಗಳ ಮೂಲಕ ಸಂಗ್ರಹಿಸಿದ ಶಾಸನಗಳು, ಕೈಗೊಂಡ ಅಧ್ಯಯನದ ಮಾಹಿತಿ ಹಾಗೂ ಇತರ ಮಾಹಿತಿಗಳನ್ನು ಕ್ರೋಡೀಕರಿಸಿಕೊಂಡು ೧೮೯೭ರಲ್ಲಿ ಪುನಃ ಈ ಸಂಪುಟಗಳ ಪರಿಷ್ಕೃತ ಆವೃತ್ತಿಯನ್ನು ಹೊರ ತಂದರು. ಇದರಿಂದ ಈ ಸಂಪುಟಗಳ ಮಾಹಿತಿಗಳು ವಿಸ್ತಾರಗೊಂಡವು. **ಮೈಸೂರ್ ಆ್ಯಂಡ್ ಕೂರ್ಗ್–ಎ ಗ್ಯಾಸೆಟಿಯರ್** ಎಂಬ ಹೆಸರಿನಿಂದ ಇದ್ದ ಈ ಗ್ಯಾಸೆಟಿಯರನ್ನು **ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್** ಎಂದು ಪರಿಷ್ಕರಿಸಿದರು. ಈ ಗ್ಯಾಸೆಟಿಯರ್ ಎರಡು ಸಂಪುಟಗಳಲ್ಲಿ ಪರಿಷ್ಕೃತವಾದವು.[೨೧] ೧೮೯೭ರ ಸುಮಾರಿಗೆ ಕೊಡಗು ಮದ್ರಾಸ್ ಪ್ರಾಂತ್ಯದ ಅಧೀನಕ್ಕೆ ಸೇರ್ಪಡೆಯಾಗಿದ್ದರಿಂದ ಮೊದಲನೇ ಆವೃತ್ತಿಯ ಮೂರನೇ ಸಂಪುಟವನ್ನು ಪರಿಷ್ಕೃತಗೊಳಿಸಲಿಲ್ಲ.

ಮೊದಲು ಪ್ರಕಟಗೊಂಡ ಮೈಸೂರು ಗ್ಯಾಸೆಟಿಯರ್‌ಗಳು ಮತ್ತು ಪರಿಷ್ಕೃತಗೊಂಡ ಮೈಸೂರು ಗ್ಯಾಸೆಟಿಯರ್‌ಗಳಲ್ಲಿ ಕೆಲವು ಮಾಹಿತಿಗಳು ಕ್ರೋಡೀಕರಣವಾಗಿವೆ. ಕೆಲವು ಮಾಹಿತಿಗಳು ಬದಲಾವಣೆ ಆಗಿರುವುದನ್ನು ನೋಡಬಹುದು. ಹಿಂದೆ ಉಲ್ಲೇಖಿಸಲಾದ ತಜ್ಞರ ವರದಿಗಿಂತ ಉತ್ತಮವಾದ ವರದಿ ಲಭ್ಯವಿದ್ದಲ್ಲಿ ಹಳೆಯದನ್ನು ತೆಗೆದು ಹೊಸದನ್ನು ಅಳವಡಿಸುವುದು, ವೈಜ್ಞಾನಿಕ ಮಾಹಿತಿಯನ್ನು ಹೊಸ ಮಾಹಿತಿಗಳ ಬೆಳಕಿನಲ್ಲಿ ಪರಿಷ್ಕರಿಸಲಾಗಿದೆ. ಭೂವಿಜ್ಞಾನಕ್ಕೆ

ಸಂಬಂಧಿಸಿದ ಡಾ.ಹೈನೆಯ ಟಿಪ್ಪಣಿಗಳನ್ನು ತೆಗೆದು ಆ ಜಾಗದಲ್ಲಿ ಬ್ರೂಸ್‌ಫೂಟ್ ಅವರ ಟಿಪ್ಪಣಿಗಳನ್ನು ಸೇರಿಸಿದೆ(ಸಂಪುಟ-೧, ಪು.೩೬).

ಹವಾಮಾನ ಸಂಬಂಧಿತ ವಿವರಗಳಲ್ಲಿ ಭೂಕಂಪನದ ಬಗೆಗೆ ಡಾ.ಹೈನೆ ಸಂಗ್ರಹಿಸಿದ ಮಾಹಿತಿಯನ್ನು ನೋಡಬಹುದು. ಮೊದಲ ಮೈಸೂರು ಗ್ಯಾಸೆಟಿಯರ್‌ನಲ್ಲಿ ಭೂಕಂಪನ ಎಲ್ಲೋ ಸೀಮಿತ ಸ್ಥಳಗಳಲ್ಲಿ ನಡೆಯಿತು ಎನ್ನುತ್ತಾರೆ.[೨೨] ಆದರೆ ಪರಿಷ್ಕೃತ ಮೊದಲ ಸಂಪುಟದಲ್ಲಿ ಭೂಕಂಪನದ ಬಗೆಗೆ ಕುರಿತು ಕ್ರಿ.ಶ.೧೫೦೭ರ ಜುಲೈ ತಿಂಗಳಿನಲ್ಲಿ ಭೂಕಂಪನವೊಂದು ಸಂಭವಿಸಿರುವ ಸಾಧ್ಯತೆಯನ್ನು ಮೊಟ್ಟಮೊದಲ ಬಾರಿಗೆ ನೆಲಮಂಗಲದ ಶಾಸನವೊಂದು ತಿಳಿಸುತ್ತದೆ ಎಂದು ಮಾಹಿತಿಯನ್ನು ನೀಡುತ್ತಾರೆ.[೨೩] ಮೊದಲ ಸಂಪುಟದ ಪುಟ ೧೭೭ರಲ್ಲಿ ಅರಣ್ಯ ಪ್ರಾಣಿಗಳ ಸಂರಕ್ಷಣಾ ಕಾಯಿದೆಯ ಬಗೆಗಿನ ಮಾಹಿತಿ, ಸಸ್ಯ ಸಂಪತ್ತಿನ ವಿಭಾಗದಲ್ಲಿ ಕ್ಯಾಶುರೀನಾ(ಸರ್ವೆ), ಸಿಂಕೋನಾ, ರಿಯಾ ಮುಂತಾದ ಸಸ್ಯಗಳ ವಿವರಗಳು, ಪು.೫೧೯ರಲ್ಲಿ ಕುಶಲಕಲೆಗಳನ್ನು ಕುರಿತಾದ ಮಾಹಿತಿಗಳು, ಪು.೫೨೪ರಿಂದ ೫೨೯ರಲ್ಲಿ ಇರುವ ಚಿನ್ನದ ಗಣಿಗಾರಿಕೆಯ ವಿವರಗಳು ಇವೆಲ್ಲವೂ ಸಂಪೂರ್ಣವಾಗಿ ಹೊಸದಾಗಿ ಸೇರ್ಪಡೆಯಾಗಿರುವ ಭಾಗಗಳು. ಬದಲಾವಣೆ ಅಗತ್ಯವಿಲ್ಲದ ಪಠ್ಯಭಾಗವನ್ನು ಹಾಗೆಯೇ ಉಳಿಸಿಕೊಳ್ಳುವುದು. ಉದಾಹರಣೆಗೆ ಮೊದಲ ಸಂಪುಟದ ಆಡಳಿತಕ್ಕೆ ಸಂಬಂಧಿಸಿದ ಅಧ್ಯಾಯದಲ್ಲಿ(ಪು.೫೭೨) ಮೊದಲ ಎರಡು ಮೂರು ಪುಟಗಳನ್ನು ಹೊರತುಪಡಿಸಿದರೆ ಇಡೀ ಅಧ್ಯಾಯದಲ್ಲಿ ಯಾವುದೇ ಬದಲಾವಣೆಯನ್ನು ಮಾಡಿಲ್ಲ. ಮೊದಲ ಸಂಪುಟದ ಜನಾಂಗೀಯ ವಿವರಗಳ ಅಧ್ಯಾಯದಲ್ಲಿ ಪು.೨೧೭ರಲ್ಲಿನ ಜನಗಣತಿ ಅಂಕಿ-ಅಂಶಗಳನ್ನು ಮತ್ತು ಎರಡನೇ ಸಂಪುಟದಲ್ಲಿ ಪ್ರತಿ ಜಿಲ್ಲೆಯ ಜನಸಂಖ್ಯೆ, ವಸತಿ ಪ್ರದೇಶ, ನಗರ ಹಳ್ಳಿಯಲ್ಲಿನ ಜನವಸತಿ ಮೊದಲಾದವುಗಳ ಅಂಕಿ-ಅಂಶಗಳನ್ನು ಬದಲಿಸಿದೆ. ಅಗತ್ಯವಿಲ್ಲದಲ್ಲಿ ಸಂಪೂರ್ಣ ಭಾಗವನ್ನು ಪುನಾರಚಿಸುವುದು. ಅಂದರೆ ಮೊದಲ ಸಂಪುಟದ ಪು.೨೧೦ ರಿಂದ ೨೧೪ರಲ್ಲಿರುವ ಜನಾಂಗೀಯ ವಿವರಗಳ ಪುಟಗಳನ್ನು ಮತ್ತು ಪು.೪೯೬ರಲ್ಲಿರುವ ಕನ್ನಡ ಕವಿಗಳನ್ನು ಕುರಿತಾದ ಅಂಶಗಳನ್ನು ಸಂಪೂರ್ಣವಾಗಿ ಪುನಾರಚಿಸಲಾಗಿದೆ.[೨೪] ಹೊಸಹೊಸ ಮಾಹಿತಿಗಳಿಗನುಗುಣವಾಗಿ ವಿವರಗಳನ್ನು ಈ ಗ್ಯಾಸೆಟಿಯರ್ ಸಂಪುಟಗಳಲ್ಲಿ ಕ್ರೋಡೀಕರಿಸಿದ್ದಾರೆ.

ರೈಸ್ ಅವರು ಹೊರತಂದಿರುವ ಸಂಪುಟಗಳು ಗುಣ ಮತ್ತು ಗಾತ್ರ ಎರಡರಲ್ಲೂ ದೊಡ್ಡವು. ೧೮೭೬-೭೭ರಲ್ಲಿ ಪ್ರಕಟವಾದ ಮೊದಲ ಆವೃತ್ತಿಯಲ್ಲಿ ಒಟ್ಟು ೧೬೪೪ ಪುಟಗಳಿವೆ. ಮೊದಲ ಸಂಪುಟ ೬೭೦, ಎರಡನೇ ಸಂಪುಟ ೫೦೪ ಮತ್ತು ಮೂರನೆಯ ಸಂಪುಟ ೪೭೦ ಪುಟಗಳನ್ನು ಹೊಂದಿದೆ. ಪರಿಷ್ಕೃತ ಎರಡನೆಯ ಆವೃತ್ತಿಯಲ್ಲಿ ಮೂರನೆಯ ಸಂಪುಟವನ್ನು ಬಿಟ್ಟರೂ ಒಟ್ಟು ೧೩೫೨ ಪುಟಗಳನ್ನು ಹೊಂದಿವೆ. ಮೊದಲನೆಯ ಸಂಪುಟ ೮೧೩ ಮತ್ತು ಎರಡನೆಯ ಸಂಪುಟ ೫೩೯ ಪುಟಗಳನ್ನು ಹೊಂದಿವೆ. ಈ ಬೃಹತ್ ಗಾತ್ರದ ಸಂಪುಟಗಳನ್ನು ಒಂದೇ ಭಾರಿಗೆ ಸಮಗ್ರವಾಗಿ ವಿಶ್ಲೇಷಿಸುವುದು ಸಾಧ್ಯವಿಲ್ಲವಾದ್ದರಿಂದ ಮೊದಲಿಗೆ ಪ್ರತ್ಯೇಕವಾಗಿ ಒಂದೊಂದೇ ಅಧ್ಯಾಯವನ್ನು ಪರಾಮರ್ಶಿಸಿ ಅನಂತರ ಒಟ್ಟು ನೋಟವನ್ನು ನೀಡಲು

ಯತ್ನಿಸಲಾಗಿದೆ. ಮೊದಲ ಮುದ್ರಣದ ಕೆಲವೊಂದು ವಿಷಯಗಳ ವಿಶ್ಲೇಷಣೆಗೆ ಎರಡನೆಯ ಮುದ್ರಣದ ಆವೃತ್ತಿಯನ್ನು ಬಳಸಿಕೊಳ್ಳಲಾಗಿದೆ.

ಮೊದಲ ಸಂಪುಟವು ಮೈಸೂರಿನ ಸಾಮಾನ್ಯ ಅಂಶಗಳ ವಿಸ್ತೃತ ವರದಿಯನ್ನು ನೀಡುತ್ತದೆ. ಇಲ್ಲಿ ಮುಖ್ಯವಾಗಿ ಭೌಗೋಳಿಕ ಅಂಶಗಳ ಕಡೆಗೆ ಗಮನ ಹರಿಸಿ ಮೈಸೂರಿನ ವಿಸ್ತೀರ್ಣ, ಇದರ ಮೇರೆಗಳನ್ನು ಗುರುತಿಸುತ್ತಾರೆ. ಪ್ರಾಕೃತಿಕ ವಿಭಾಗಗಳು, ಮಲೆನಾಡು ಪರಿಸರ, ಮೈದಾನ ಪರಿಸರ ಎಂಬ ಎರಡು ಭಾಗಗಳನ್ನು ಮಾಡಿದ್ದಾರೆ. ನದಿ, ಬೆಟ್ಟ-ಗುಡ್ಡಗಳ ವಿವರಗಳನ್ನು ನೀಡಿರುತ್ತಾರೆ. ಸ್ಥಳದ ಹೆಸರಿನ ಉತ್ಪತ್ತಿಯನ್ನು ಕುರಿತು ವಿವರಣೆಯನ್ನು ಅಡಿಟಿಪ್ಪಣಿಯಲ್ಲಿ ಉಲ್ಲೇಖಿಸುತ್ತಾರೆ. ಮಹಾವಂಶೋ ಎಂಬ ಬೌದ್ಧ ಕೃತಿಯಲ್ಲಿ 'ಮಹಿಷರಾಷ್ಟ್ರ' ಎಂಬ ಹೆಸರಿದ್ದು, ತಮಿಳಿನ ಕೃತಿಯಲ್ಲಿ 'ಇರುಮೈನಾಡೇ' ಮಹಿಷಮಂಡಲ ಎಂದು ಹೋಲಿಸುವುದುಂಟು. ಮಂಡ್ಯ ತಾಲ್ಲೂಕಿನ ಕದಲೂರಿನ ೮೬೩ರ ತಾಮ್ರಶಾಸನದಲ್ಲಿ 'ಮೈಸೂರು' ಎಂದು ಸ್ಪಷ್ಟವಾಗಿ ಉಲ್ಲೇಖವಾಗಿದ್ದು, ಪೌರಾಣಿಕವಾಗಿ ಚಾಮುಂಡಿ ಬೆಟ್ಟದಲ್ಲಿ ಕೋಣದ ತಲೆಯುಳ್ಳ ಮಹಿಷನೆಂಬ ರಾಕ್ಷಸ ಇದ್ದನೆಂದೂ, ಅವನು ತಪಸ್ಸು ಮಾಡಿ ಬ್ರಹ್ಮನಿಂದ ವರವನ್ನು ಪಡೆದು ಅಜೇಯನಾಗಿ ದೇವತೆಗಳನ್ನು, ಋಷಿಗಳನ್ನು ಪೀಡಿಸುತ್ತಿದ್ದನೆಂದು, ಆಗ ದೇವತೆಗಳೆಲ್ಲ ಸೇರಿ ಶಿವನ ಆದೇಶದಂತೆ ತಮ್ಮೆಲ್ಲರ ಶಕ್ತಿಯನ್ನು ಚಾಮುಂಡಿಗೆ ಧಾರೆ ಎರೆದು ಕಳುಹಿಸಿದರೆಂದೂ, ಮಹಿಷಾಸುರನನ್ನು ಕೊಂದ ಚಾಮುಂಡಿ ಆ ಬೆಟ್ಟದಲ್ಲೇ ನೆಲೆಸಿದ್ದರಿಂದ ಆ ಬೆಟ್ಟಕ್ಕೆ ಚಾಮುಂಡಿ ಬೆಟ್ಟವೆಂದೂ, ಮಹಿಷಾಸುರನಿದ್ದ ಊರಿಗೆ ಮಹಿಷಪುರವೆಂದೂ ಹೆಸರಾಗಿ ಮುಂದೆ ಅದೇ ಮೈಸೂರಾಯಿತು ಎಂದು ಪುರಾಣದೊಂದಿಗೆ ಬೆಸೆದುಕೊಂಡಿದ್ದು, ಜನರ ನಂಬಿಕೆಗಳಿಗೆ ಧಕ್ಕೆ ಬಾರದಂತೆ ತಿಳಿಸಿದ್ದಾರೆ. ಹಾಗೆಯೇ ಇಲ್ಲಿ ಕೆಲವು ಕನ್ನಡ ಪದಗಳ ನಿಷ್ಪತ್ತಿಯು ಬ್ರಿಟಿಷ್ ಅಧಿಕಾರಿಗಳ ಬಾಯಲ್ಲಿ ಬದಲಾವಣೆ ಹೊಂದಿದೆ. ಕರ್ನಾಟಕ, ಕನ್ನಡ ಎಂಬ ಪದಗಳು ಕರ್ನಾಟಿಕ್, ಕೆನರಾ ಆದುದನ್ನು ವಿವರಿಸಿದ್ದಾರೆ. ರಾಬರ್ಟ್ ಬ್ರೂಸ್‌ಫೂಟ್ ಅವರು ಸರ್ವೇಕ್ಷಣೆ ಕೈಗೊಂಡು ದಾಖಲು ಮಾಡಿದ ವಿವರಗಳನ್ನು ನೀಡಿದ್ದಾರೆ. ಹವಾಮಾನ ಸಂಬಂಧ ವಿವರಗಳಲ್ಲಿ ಭೂಕಂಪನ ಸಂಭವಿಸಿದ ಬಗೆಯನ್ನು ತಿಳಿಸುತ್ತಾರೆ(ಪು.೬೬-೬೭). ಪ್ರದೇಶಗಳ ವೀಕ್ಷಣೆಯಲ್ಲಿ ಯಾವ ಯಾವ ಸ್ಥಳಗಳು ವ್ಯಾಪಾರ, ಜನವಸತಿಗೆ ಸೂಕ್ತ ಎಂಬುದನ್ನು ತಿಳಿಸುತ್ತಾ, ಈ ಸೂಕ್ಷ್ಮವಾದ ವಿಷಯಗಳತ್ತ ಗಮನ ಹರಿಸಿದ್ದಾರೆ ಎಂಬುದು ಮುಖ್ಯ. ಸಸ್ಯ ಸಂಪತ್ತು, ಅವುಗಳ ಔಷಧೀಯ ಗುಣಗಳು, ಕೃಷಿ ವಿಧಾನ, ವಿವಿಧ ಬೆಳೆಗಳು, ಕೃಷಿ ಸಲಕರಣೆಗಳು ಮೊದಲಾದ ಅಂಶಗಳನ್ನು ವಿವರಿಸುತ್ತಾರೆ (ಪು.೧೯೯). ಪ್ರಾಣಿಗಳ ವಿವರ, ಇಲ್ಲಿ ಮುಖ್ಯವಾಗಿ ಜಾನುವಾರು ತಳಿಗಳ ಸಂರಕ್ಷಣೆಗೆಂದು ಆರಂಭಿಸಿದ ಅಮೃತ್ ಮಹಲ್ ಎಂಬ ಇಲಾಖೆಯ ವಿವರಗಳನ್ನು ವಿಸ್ತಾರವಾಗಿ ನೀಡಿದ್ದಾರೆ (ಪು.೨೦೧). ಜನಸಂಖ್ಯೆ, ಜಾತಿ, ಜನಾಂಗಗಳ ವಿಧಗಳು, ಜಾತಿಯ ಉಗಮ, ಒಳಜಾತಿ, ಒಳಪಂಗಡಗಳ ಲಕ್ಷಣಗಳನ್ನು ವಿವರಿಸಿದ್ದಾರೆ(ಪು.೨೧೮-೨೨೦).

ಆಡಳಿತ ನಡೆಸಿದ ವಿವಿಧ ಮನೆತನಗಳಾದ ಮೌರ್ಯರು, ಶಾತವಾಹನರು, ಕದಂಬರು, ಪಲ್ಲವರು, ನೊಳಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಕಳಚೂರಿಗಳು, ಚೋಳರು,

ಹೊಯ್ಸಳರು, ದೇವಗಿರಿಯ ಯಾದವರು, ವಿಜಯನಗರದ ಅರಸರು, ಪಾಳೇಯಗಾರರು, ಮೊಘಲರು, ಮರಾಠರು, ಮೈಸೂರು ಒಡೆಯರು, ಹೈದರಾಲಿ–ಟಿಪ್ಪು ಸುಲ್ತಾನರು, ಕಮೀಷನರ್‌ಗಳು ಮತ್ತು ದಿವಾನರುಗಳ ಆಳ್ವಿಕೆ, ಹತ್ತನೇ ಚಾಮರಾಜ ಒಡೆಯರ್ ಅವರ ಮರಣದವರೆಗಿನ ಚರಿತ್ರೆಯನ್ನು ವಿವರಿಸಿದ್ದಾರೆ.

ಪ್ರಾಚೀನ ರಾಜವಂಶಗಳನ್ನು ವಿವರಿಸುವಾಗ ರೈಸ್ ಅವರಿಗೆ ಹೆಚ್ಚು ತ್ರಾಸದಾಯಕವಲ್ಲ. ಆದರೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್, ಅರಮನೆಯಲ್ಲಿ ನಡೆದ ಘಟನಾವಳಿಗಳ ಮಾಹಿತಿಗಳು ಮುಖ್ಯವಾಗುತ್ತವೆ. ಇಂಗ್ಲಿಷ್ ಚರಿತ್ರೆಕಾರರು ಸುಲಭವಾಗಿ ಸಾಮಾನ್ಯರಿಗೆ ದೊರೆಯಲಾರದಂಥ ಆ ಕಾಲದ ಹಲವಾರು ಗೋಪ್ಯ ವಿವರಗಳ ಬಗ್ಗೆ ಅದು ಯಾವ ಕಾರಣಕ್ಕೆ ಇರಲಿ ತಮ್ಮ ಕೃತಿಗಳ ಮೂಲಕ ಹೊರ ಹಾಕಿದ್ದಾರೆ. ಈ ನಿಟ್ಟಿನಲ್ಲಿ ದೇಶಿಯ ಮತ್ತು ವಿದೇಶಿಯ ಬರಹಗಾರರಿಗೂ ಸರ್ಕಾರಿ ಕಡತಗಳು–ದಾಖಲೆಗಳು ಒದಗಿಸುವ ಎಲ್ಲಾ ವಿವರಗಳೂ ಸತ್ಯವೆಂದು ಹೇಳುವ ಜವಾಬ್ದಾರಿ ತೆಗೆದುಕೊಳ್ಳುವುದಿಲ್ಲವೆಂದು ತಿಳಿಸುತ್ತಾರೆ. ಅಲ್ಲದೇ ಇದೇ ಹಾದಿಯಲ್ಲಿ ಬಿ.ಎಲ್.ರೈಸ್ ಎಚ್ಚರವನ್ನೂ ವಹಿಸುತ್ತಾರೆ.[೨೫] ವಿಲ್ಕ್ಸ್ ಅರಮನೆಯ ಸಿಂಹಾಸನಕ್ಕಾಗಿ ನಡೆದ ರಕ್ತಪಾತ, ಹಲವಾರು ಕೊಲೆಗಳು, ಸಂಘರ್ಷಗಳನ್ನು ಕುರಿತು ವಿವರವಾಗಿ ತಿಳಿಸಿದ್ದಾರೆ. ಹಿಂದೂ ಆಗಿರಲಿ, ಮುಸಲ್ಮಾನರಾಗಿರಲಿ, ಅದು ಸಾಮಾನ್ಯವಾದುದು ಎಂಬುದನ್ನು ತಿಳಿಸುತ್ತಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನ ಅವರುಗಳಿಗೆ ಸಂಬಂಧಿಸಿದ ವಿವರ ನೀಡುವಾಗ ವಿಲ್ಕ್ಸ್‌ನ ಕೃತಿಯನ್ನು ಪರಾಮರ್ಶೆಗೊಳಪಡಿಸದೇ ಅದರಲ್ಲಿರುವ ವಿವರಗಳನ್ನು ಯಥಾವತ್ತಾಗಿ ಬಳಸಿದ್ದಾರೆ.[೨೬] ಇಲ್ಲಿ ಹೈದರಾಲಿ ಮತ್ತು ಟಿಪ್ಪು ಇವರಿಬ್ಬರ ನಡವಳಿಕೆ, ಆಡಳಿತ ವಿಧಾನ, ಇತರ ಧರ್ಮೀಯರ ಬಗ್ಗೆ ಅವರು ನಡೆದುಕೊಂಡ ರೀತಿ ಮುಂತಾದವುಗಳ ಬಗೆಗೆ ವಿದ್ವಾಂಸರಲ್ಲಿಯೇ ದ್ವಂದ್ವ ರೀತಿಯ ದೃಷ್ಟಿಕೋನಗಳಿದ್ದು, ರೈಸ್ ಅವರು ಕೂಡ ಪೂರ್ವಗ್ರಹಕ್ಕೆ ಒಳಗಾಗಿದ್ದರಲ್ಲಿ ತಪ್ಪೇನಿಲ್ಲ. ಆದರೂ ಬ್ರಿಟಿಷ್ ಸೈನ್ಯಾಧಿಕಾರಿಗಳು ಮತ್ತು ಮಿರ್ಜಾ ಇಕ್ಬಾಲ್ ಹಾಗೂ ಕಿರ್ಮಾನಿ ಮೊದಲಾದ ಮುಸ್ಲಿಂ ಚರಿತ್ರೆಕಾರರು, ಈ ಇಬ್ಬರೂ ನೀಡಿರುವ ವಿವರಣೆಗಳನ್ನು ಸಮಾನವಾಗಿ ಬಳಸಿಕೊಂಡಿದ್ದಾರೆ. ರೈಸ್ ಅವರು ದಿವಾನರುಗಳ ಮಾಹಿತಿ ಬಗೆಗೆ ಹೇಳುತ್ತಾ ಪೂರ್ಣಯ್ಯ ಅವರನ್ನು ಟಿಪ್ಪುವಿನ ಪತನದ ನಂತರ ಬ್ರಿಟಿಷರ ಆಜ್ಞೆಗೆ ತಕ್ಕಂತೆ ಆಜ್ಞಾವರ್ತಿಯಾಗಿ ನಡೆದುಕೊಂಡ ಬ್ರಾಹ್ಮಣ ಎಂಬುದನ್ನು ವಿವರಿಸುತ್ತಾರೆ(ಸಂ.೧, ಪು.೪೨೧). ನಗರದಂಗೆಯಿಂದ ಒಡೆಯರು ಪುನಃ ಅಧಿಕಾರವನ್ನು ಕಳೆದುಕೊಂಡರು. ಅನಂತರ ಕಮೀಷನರುಗಳ ಆಳ್ವಿಕೆ ಪ್ರಾರಂಭವಾಯಿತು. ಕಮೀಷನರ್ ಆದ ಸರ್. ಮಾರ್ಕ್ ಕಬ್ಬನ್‌ನು ಅನೇಕ ಸುಧಾರಣೆಗಳನ್ನು ಜಾರಿಗೆ ತಂದು, ಮಾಡೆಲ್ ಸ್ಟೇಟ್ ಆಗಿ ಪರಿವರ್ತಿಸಿದನು ಎಂಬುದನ್ನು ವಿವರಿಸುತ್ತಾರೆ. ಬೌರಿಂಗ್‌ನ ಆಡಳಿತದ ಅಂಶಗಳನ್ನು ನೋಡಬಹುದು. ಅನಂತರ ೧೦ನೇ ಚಾಮರಾಜ ಒಡೆಯರ ಆಡಳಿತದ ವಿವರಗಳನ್ನು ಗಮನಿಸಬಹುದು.

ಬ್ರಾಹ್ಮಣ, ಜೈನ, ಬೌದ್ಧ, ಲಿಂಗಾಯಿತ, ಇಸ್ಲಾಂ ಹಾಗೂ ಕ್ರೈಸ್ತ ಎಂಬ ಧರ್ಮಗಳ ಬಗೆಗೆ ಸಂಕ್ಷಿಪ್ತವಾದ ವಿವರಗಳನ್ನು ನೋಡಬಹುದು. ಬ್ರಾಹ್ಮಣ ಮತ್ತು ಹಿಂದೂಧರ್ಮಗಳು ಬೇರೆಬೇರೆ ಎಂದು ಪರಿಗಣಿಸಿರುವುದನ್ನು ನೋಡಬಹುದು. ಏಕೆಂದರೆ ಇಲ್ಲಿ ಸೂಕ್ಷ್ಮವಾಗಿ

ಗಮನಿಸಿದಾಗ ಸ್ಥಳೀಯವಾಗಿ ಅಕ್ಷರಜ್ಞಾನವನ್ನು ಪಡೆದಿದ್ದವರು ಬ್ರಾಹ್ಮಣರು. ಈ ಬ್ರಾಹ್ಮಣರ ಜ್ಞಾನವನ್ನು ಪಡೆಯಲು ಬ್ರಾಹ್ಮಣಧರ್ಮ ಎಂದು ಹೇಳಿರಲು ಉಂಟು. ಸ್ಥಳೀಯ ಮತ್ತು ಸಮುದಾಯ ಕೇಂದ್ರಿತವಾಗಿ ಬ್ರಾಹ್ಮಣರಿಗೆ ಉನ್ನತ ಸ್ಥಾನ ದೊರೆಕಿತ್ತು(ಪು.೪೫೪). ಸ್ಥಳೀಯ ಜ್ಞಾನವಾಗಿ ಬ್ರಾಹ್ಮಣರು ಈ ಸಂಪುಟಗಳಿಗೆ ಮಾಹಿತಿಗಳನ್ನು ಕ್ರೋಡೀಕರಿಸಿರುವುದನ್ನು ನೋಡಬಹುದು. ರೈಸ್ ಅವರು ಸ್ವತಃ ತಾವೇ 'ಬಿಬ್ಲಿಯೋಥಿಕಾ ಕರ್ನಾಟಿಕಾ' ಮಾಲೆಗಾಗಿ ಸಂಗ್ರಹಿಸಿದ ಅನೇಕ ಪ್ರಾಚೀನ ಕೃತಿಗಳ ಹಸ್ತಪ್ರತಿಗಳು ಹಾಗೂ ಅವರ ಸಹಾಯಕರಾಗಿದ್ದ ಆರ್.ನರಸಿಂಹಾಚಾರ್ಯರು, ಕೆ.ಬಿ.ಪಾಠಕ್ ಮುಂತಾದವರು ಒದಗಿಸಿದ ಟಿಪ್ಪಣಿಗಳು ನೆರವಾಗಿದ್ದವು(ಪು.೫೦೫). ಈ ನಿಟ್ಟಿನಲ್ಲಿ ಇಲ್ಲಿನ ಸಾಹಿತ್ಯ, ಶಾಸನಗಳ ಬಗೆಗೆ ಅರಿವಿದ್ದ ಸ್ಥಳೀಯರನ್ನು ಬಳಸಿಕೊಂಡಿರುವುದನ್ನು ನೋಡಬಹುದು.

ಕನ್ನಡ ಭಾಷೆ ಮತ್ತು ಸಾಹಿತ್ಯವನ್ನು ಕುರಿತ ವಿವರಣೆಯನ್ನು ಕೊಡುತ್ತಾ ಕನ್ನಡ ಮತ್ತು ಕರ್ನಾಟಕ ಎಂಬ ಶಬ್ದಗಳ ಬಗೆಗೆ ಕಿಟೆಲ್, ಕಾಲ್ಡ್‌ವೆಲ್ ಮುಂತಾದ ಭಾಷಾಶಾಸ್ತ್ರಜ್ಞರು ಸೂಚಿಸಿರುವ ನಿಷ್ಪತ್ತಿಗಳನ್ನು ಪ್ರಸ್ತಾಪಿಸಲಾಗಿದೆ(ಪು.೪೮೭). ಇವರ ನಿಘಂಟುಗಳು ಭಾಷಾಶಾಸ್ತ್ರದಲ್ಲಿ ಪ್ರಮುಖವಾದವು. ಪ್ರಾಚೀನ ಕಾಲದಲ್ಲಿ ಬೆಳೆದುಬಂದ ಸಾಹಿತ್ಯವನ್ನು ವಿವರಿಸುತ್ತಾರೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿರುಮಲಾರ್ಯ, ಚಿಕ್ಕುಪಾಧ್ಯಾಯ, ಸಿಂಗರಾರ್ಯ, ತಿಮ್ಮಕವಿ, ಸಂಚಿಹೊನ್ನಮ್ಮ ಮುಂತಾದ ಕವಿಗಳಿದ್ದರು. ತಿರುಮಲಾರ್ಯನ ಚಿಕ್ಕದೇವರಾಜ ವಂಶಾವಳಿ, ಸಿಂಗರಾರ್ಯನ ಮಿತ್ರವಿಂದಾ ಗೋವಿಂದ, ಸಂಚಿ ಹೊನ್ನಮ್ಮಳ ಹದಿಬದೆಯ ಧರ್ಮ ಇನ್ನೂ ಮುಂತಾದ ಕೃತಿಗಳ ಬಗೆಗೆ ಮಾಹಿತಿಗಳನ್ನು ತಿಳಿಸುತ್ತಾರೆ.

ವಾಸ್ತುಶಿಲ್ಪ, ಶಿಲ್ಪಕಲೆಯ ಬಗೆಗೆ ವಿವರಗಳನ್ನು ನೋಡಬಹುದು. ದ್ರಾವಿಡ, ಸಾರ್ಸನಿಕ್, ಆಂಗ್ಲೋ ಇಂಡಿಯನ್ ಮುಂತಾದ ಶೈಲಿಯ ವಾಸ್ತುಶಿಲ್ಪವನ್ನು ವಿವರಿಸುತ್ತಾರೆ. ಇಲ್ಲಿ ಬಹುಮುಖ್ಯವಾಗಿ ಚೀಫ್ ಇಂಜೀನಿಯರ್ ಆಗಿ ಬಂದ ಕರ್ನಲ್ ಸ್ಯಾಂಕಿ ಮತ್ತು ಅವನ ಮುಂದಿನವರೇ ಹೆಚ್ಚಿನ ಗಮನ ಹರಿಸಿ ಬೆಂಗಳೂರು ಹಾಗೂ ಮೈಸೂರುಗಳಲ್ಲಿ ಉತ್ತಮವಾದ ಕಟ್ಟಡಗಳನ್ನು ನಿರ್ಮಿಸಿದ್ದಾರೆ ಎನ್ನುವುದು ಅವರ ಅಭಿಪ್ರಾಯ(ಪು.೫೨೨). ಸ್ಯಾಂಕಿಯ ಆಡಳಿತಾವಧಿಯಲ್ಲಿ(೧೮೬೪–೭೭) ಅಠಾರಾ ಕಛೇರಿ(೧೮೬೯), ವಸ್ತು ಸಂಗ್ರಹಾಲಯ(೧೮೭೯) ಮುಂತಾದ ಕಟ್ಟಡಗಳು ನಿರ್ಮಾಣವಾಗಿದ್ದು ನಿಜವಾದರೂ ಅದಕ್ಕೂ ಮುಂಚೆಯೇ ಮಾರ್ಕ್ ಕಬ್ಬನ್‌ರ ಕಾಲದಲ್ಲಿ ಬೆಂಗಳೂರಿನ ಡಿಸ್ಟ್ರಿಕ್ಟ್ ಕಛೇರಿ(೧೮೫೬), ಸೆಂಟ್ರಲ್ ಜೈಲ್(೧೮೬೩), ಕೆಲವಾದರೂ ಉತ್ತಮವಾದ ಕಟ್ಟಡಗಳ ನಿರ್ಮಾಣ ಆಗಿದ್ದದ್ದನ್ನು ಮರೆಯುವಂತಿಲ್ಲ.[೨೭] ಹಳೇಬೀಡು, ಬೇಲೂರು ಮತ್ತು ಸೋಮನಾಥಪುರದ ದೇವಾಲಯಗಳಲ್ಲಿನ ಶಿಲ್ಪಕಲೆಯ ವಿವರಗಳನ್ನು ತಿಳಿಸಿದ್ದಾರೆ(ಪು.೫೧೩–೫೧೯). ಹಿಂದೂಸ್ತಾನಿ ಮತ್ತು ಕರ್ನಾಟಿಕ್ ಶಾಸ್ತ್ರೀಯ ಸಂಗೀತ ಕುರಿತ ವಿವರಣೆಯು ಇರುವುದನ್ನು ನೋಡಬಹುದು.

ಕೈಗಾರಿಕೆಗಳ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ. ಲೋಹ ಕೈಗಾರಿಕೆ, ಕುಂಬಾರಿಕೆ, ವಸ್ತ್ರ ತಯಾರಿಕೆ, ಉಣ್ಣೆಬಟ್ಟೆ ತಯಾರಿಕೆ, ಚರ್ಮೋದ್ಯಮ, ಗಾಜು ತಯಾರಿಕೆ, ಕಮ್ಮಾರಿಕೆ,

ಚಮ್ಮಾರಿಕೆ, ಮರಗೆಲಸ ಇನ್ನೂ ಮುಂತಾದ ಉದ್ಯಮಗಳ ಕುರಿತು ಪ್ರಸ್ತಾಪಿಸಿದ್ದಾರೆ. ಕೋಲಾರ ಜಿಲ್ಲೆಯಲ್ಲಿರುವ ಚಿನ್ನದ ನಿಕ್ಷೇಪಗಳ ವಿವರಗಳನ್ನು ತಿಳಿಸಿದ್ದಾರೆ. ಕೈಗಾರಿಕೆಗಳ ಮಾಹಿತಿ, ಯಾವ ವಸ್ತುಗಳಿಗೆ ಯಾವ ಸ್ಥಳಗಳು ಪ್ರಸಿದ್ಧಿ ಆಗಿದ್ದವು ಎಂಬುದನ್ನು ತಿಳಿಸಿದ್ದಾರೆ. ವ್ಯಾಪಾರ ಮತ್ತು ವಾಣಿಜ್ಯದಲ್ಲಿ ರಫ್ತು ಆಮದಾದ ವಸ್ತುಗಳ ವಿವರಗಳನ್ನು ಕಾಣಬಹುದು. ಬೆಲೆಯಲ್ಲಾದ ಏರುಪೇರು, ವಸ್ತುಗಳ ಬೆಲೆ, ಕೂಲಿ ಕಾರ್ಮಿಕರ ವೇತನ ಮುಂತಾದವುಗಳ ವಿವರಗಳನ್ನು ನೀಡಿದ್ದಾರೆ. ಈ ನಿಟ್ಟಿನಲ್ಲಿ ಎಲ್ಲೆಲ್ಲಿ ಯಾವ ಯಾವ ಸಂಪನ್ಮೂಲಗಳು ದೊರೆಯುತ್ತವೆ ಎಂಬುದರ ಮಾಹಿತಿಗಳನ್ನು ಕ್ರೋಡೀಕರಿಸುವುದರ ಮೂಲಕ ಸರ್ಕಾರದ ಆದಾಯವನ್ನು ಹೆಚ್ಚಿಸುವುದಾಗಿದೆ.

ಆಡಳಿತ ವಿಷಯದ ವಿಭಾಗವು ಸಂಪುಟದ ದೊಡ್ಡ ಅಧ್ಯಾಯವಾಗಿದ್ದು, ಸುಮಾರು ೨೨೦ ಪುಟಗಳನ್ನು ಎರಡು ಭಾಗಗಳಲ್ಲಿ ವಿವರಿಸಲಾಗಿದೆ. Under the Early Rulers ಎಂಬ ಮೊದಲ ಭಾಗವು ಕಿರಿಯದಾಗಿದ್ದು, ಇಲ್ಲಿ ಮೌರ್ಯರು, ಕದಂಬರು, ವಿಜಯನಗರದ ಅರಸರು, ಬಿಜಾಪುರದ ಸುಲ್ತಾನರು, ಮೈಸೂರು ಒಡೆಯರು, ಬಿದನೂರಿನ ನಾಯಕರು, ಹೈದರ್ ಮತ್ತು ಟಿಪ್ಪು, ಪೂರ್ಣಯ್ಯ ಹಾಗೂ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಆಡಳಿತದ ವಿಚಾರಗಳನ್ನು ಚರ್ಚಿಸಿದ್ದಾರೆ. ೧೬೦ ಪುಟಗಳ ಮತ್ತೊಂದು ಭಾಗದಲ್ಲಿ ಕಮೀಷನರುಗಳ ಕಾಲದ ಆಡಳಿತದ ವಿವರಗಳನ್ನು ನೀಡಲಾಗಿದೆ.

ಭಾರತದಲ್ಲಿ ಆಡಳಿತ ನಡೆಸಲು ಬ್ರಿಟಿಷ್ ಆಡಳಿತಗಾರರ ಅನುಕೂಲಕ್ಕೆಂದೇ ಗ್ಯಾಸೆಟಿಯರ್ ಗಳನ್ನು ರಚಿಸಲಾಗುತ್ತಿದ್ದರಿಂದ ಪ್ರಾಚೀನ ಕಾಲದಿಂದ ಈ ದೇಶ, ಪ್ರಾಂತ್ಯದಲ್ಲಿ ಉಳಿದು ಬೆಳೆದುಬಂದಿರುವ ಆಡಳಿತ ಸ್ವರೂಪ, ಅದರಲ್ಲಿಯ ಶ್ರೇಣಿಗಳು, ಆಯಾ ಹಂತದ ಅಧಿಕಾರಿಗಳ ವ್ಯಾಪ್ತಿ, ಅಂತಿಮವಾಗಿ ಪ್ರಜೆಗಳ ಹಕ್ಕು ಮತ್ತು ಕರ್ತವ್ಯಗಳು, ಆಡಳಿತದಲ್ಲಿ ಜನರ ಪಾಲ್ಗೊಳ್ಳುವಿಕೆಯ ಸ್ವರೂಪ ಮೊದಲಾದವುಗಳನ್ನು ತಿಳಿಸಲಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಕಂದಾಯದ ರೂಪದಲ್ಲಿ ಸಂಗ್ರಹವಾಗಬೇಕಾಗಿರುವ ಧನ ಅಥವಾ ವಸ್ತುಗಳ ಪ್ರಮಾಣ, ವಿವಿಧ ರಾಜವಂಶಗಳ ಆಳ್ವಿಕೆಯ ಕಾಲದಲ್ಲಿ ಈ ಎಲ್ಲಾ ಅಂಶಗಳಲ್ಲಿ ಆಗಿರುವ ಬದಲಾವಣೆಗಳು ಮುಂತಾದವುಗಳ ಸ್ಪಷ್ಟಚಿತ್ರಣವನ್ನು ಈ ಅಧ್ಯಾಯದಲ್ಲಿ ನೀಡಬೇಕಾದದ್ದು ಅತ್ಯಾವಶ್ಯಕ. ರೈಸ್ ಅವರ ಕಾಲದಲ್ಲಿ ಈ ಎಲ್ಲಾ ವಿವರಗಳೂ ಒಂದೇ ಕಡೆ ಲಭ್ಯವಿರಲಿಲ್ಲ. ಏಕೆಂದರೆ ಆ ಮೊದಲು ಈ ಮಾಹಿತಿಯನ್ನೆಲ್ಲವನ್ನೂ ಯಾರೂ ಸಮಗ್ರವಾಗಿ ದಾಖಲಿಸಿರಲಿಲ್ಲ. ಆದರೆ ಶಾಸನಕ್ಷೇತ್ರದಲ್ಲಿ ತಮಗಿದ್ದ ಅನುಭವ ಮತ್ತು ಪರಿಣತಿಯಿಂದ ರೈಸ್ ಅವರು ಈ ಕೊರತೆಯನ್ನು ನೀಗಿಸಿದ್ದಾರೆ. ವಿವಿದ ರಾಜವಂಶಗಳ ಶಾಸನಗಳಲ್ಲಿ ಅಲ್ಲಲ್ಲಿ ಪ್ರಸ್ತಾಪವಾಗಿರುವ ಆಡಳಿತಾತ್ಮಕ ವಿವರಗಳನ್ನೆಲ್ಲ ಒಟ್ಟುಗೂಡಿಸಿ ಅವರು ಈ ಅಧ್ಯಾಯವನ್ನು ರಚಿಸಿದ್ದಾರೆ. ರೈಸ್ ಅವರ ಈ ಪ್ರಯತ್ನವು ಚಾರಿತ್ರಿಕವಾಗಿ ಅತ್ಯಂತ ಮಹತ್ವದ್ದಾಗಿದೆ. ಏಕೆಂದರೆ ಭಾರತೀಯ ಆಡಳಿತ ಪದ್ಧತಿಯ ಸ್ವರೂಪವನ್ನು ಸ್ಪಷ್ಟವಾಗಿ ನಿರೂಪಿಸುವ ಕೃತಿಯಾದ ಕೌಟಿಲ್ಯನ ಅರ್ಥಶಾಸ್ತ್ರವು ಮೊಟ್ಟಮೊದಲಿಗೆ ಪ್ರಕಟವಾದದ್ದು ೧೯೦೯ರಲ್ಲಿ.[೨೮] ಅದಕ್ಕೂ ಮೊದಲೇ ರೈಸರು ಆ ಗ್ರಂಥವನ್ನು

ನೋಡಿರದಿದ್ದರೂ ಅದರಲ್ಲಿಯ ಬಹುಪಾಲು ವಿವರಗಳನ್ನು ಶಾಸನಗಳ ಮೂಲಕ ಸಂಗ್ರಹಿಸಿದ ಗರಿಮೆ ಅವರದಾಗಿದೆ.

ಪ್ರಾಚೀನ ಕಾಲದಲ್ಲಿ ವಿವಿಧ ರಾಜವಂಶಗಳು ನಡೆಸುತ್ತಿದ್ದ ಆಡಳಿತ ಪದ್ಧತಿಯ ಸ್ವರೂಪ, ಮಂತ್ರಿವರ್ಗ, ಅಧೀನ ಅಧಿಕಾರಿವರ್ಗ, ಪ್ರಾಂತ್ಯಾಧಿಕಾರಿಗಳು, ಸಾಮಂತರ ಸ್ಥಾನಮಾನ ಮುಂತಾದ ಅಂಶಗಳನ್ನು ವಿವರಿಸುತ್ತಾರೆ. ರಾಜ್ಯವನ್ನು ಹಲವು ಪ್ರಾಂತ್ಯಗಳಾಗಿ ವಿಂಗಡಿಸುತ್ತಿದ್ದ ವಿಷಯವನ್ನು ಪ್ರಸ್ತಾಪಿಸಿ, ಬನವಾಸಿ ೧೨,೦೦೦, ಗಂಗವಾಡಿ ೯೬,೦೦೦ ಇತ್ಯಾದಿ ಹೆಸರಿನ ಸಂಖ್ಯೆಗಳು ಆಯಾಯ ಪ್ರದೇಶದಿಂದ ಸಂದಾಯವಾಗಬೇಕಾಗಿದ್ದ ಕಂದಾಯದ ಮೊತ್ತವನ್ನು ಸೂಚಿಸುತ್ತದೆ ಎಂದು ತಿಳಿಸಿದ್ದಾರೆ.

ಸ್ಥಳೀಯ ಹಳ್ಳಿಗಳ ಆಡಳಿತ ಸ್ವರೂಪವನ್ನು ಕುರಿತು ವಿವರಿಸುತ್ತಾ, ಗೌಡ, ಪಟೇಲ, ಶಾನುಭೋಗ ಎಂಬುದು ಮೇಲ್ವರ್ಗ ಆಡಳಿತವನ್ನು ನಡೆಸುತ್ತಿದ್ದರು. ಜ್ಯೋತಿಷಿ, ತಳವಾರ ಇನ್ನೂ ಮುಂತಾದ ಮಧ್ಯಮವರ್ಗಗಳು ಕೂಡ ಆಡಳಿತ ನಡೆಸುತ್ತಿದ್ದರು. ತೋಟಿ, ನೀರಗಂಟಿ, ಬಡಗಿ, ಕುಂಬಾರ, ಅಗಸ, ನಾಯಿಂದ ಮುಂತಾದವರು ಕೆಳಮಟ್ಟದ ಆಡಳಿತವನ್ನು ನಡೆಸುತ್ತಿದ್ದರು. ೧೨ ಜನ ಆಯಗಾರ ವ್ಯವಸ್ಥೆ ಇದ್ದು, ಆಡಳಿತಕ್ಕೆ ಸಹಾಯಕವಾಗಿತ್ತು. ಹಾಗೆಯೇ ಸಂಸ್ಥಾನದ ಉತ್ತರ ಭಾಗದಲ್ಲಿ ಪ್ರಚಲಿತದಲ್ಲಿದ್ದ ಇದೇ ಸ್ವರೂಪದ 'ಭಾರಬಲೂತಿ ವ್ಯವಸ್ಥೆ'ಯನ್ನು ಕುರಿತು ಪ್ರಸ್ತಾಪಿಸುತ್ತಾರೆ. ಗ್ರಾಮಾಡಳಿತವು ಸ್ವಯಂಪೂರ್ಣವಾಗಿತ್ತೆಂದು ಇತರ ವಿದ್ವಾಂಸರ ಅಭಿಪ್ರಾಯವನ್ನು ಅನುಮೋದಿಸುತ್ತಾರೆ(ಪು.೫೭೬).

ಹೀಗೆ ವಿವಿಧ ರಾಜವಂಶಗಳ ಆಡಳಿತ ಸ್ವರೂಪದ ವಿವರಣೆಯನ್ನು ನೀಡುವುದರ ಜೊತೆಗೆ ಆಡಳಿತ ಯಂತ್ರವು ಕುಸಿದುಬಿದ್ದಾಗ ಉಂಟಾಗುವ ತೊಂದರೆಯನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸಂಭವಿಸಿದ ನಗರದಂಗೆಯನ್ನು ನಿದರ್ಶನ ಕೊಡುವುದರ ಮೂಲಕ ವಿವರಿಸುತ್ತಾರೆ(ಪು.೬೩೦).

ಈ ಅಧ್ಯಾಯದ ಎರಡನೇ ಭಾಗದಲ್ಲಿ ಕಮೀಷನರುಗಳ ಆಡಳಿತಕ್ಕೆ ಸಂಬಂಧಿಸಿದ ವಿವರಗಳನ್ನು ನೀಡಿದ್ದಾರೆ. ೧೮೩೧ರಿಂದ ೧೮೫೫ರವರೆಗಿನ ನಿಯಮರಹಿತ ಸ್ಥಿತಿಯ ಆಡಳಿತವನ್ನು ನೋಡಬಹುದಾಗಿದೆ. ಕಂದಾಯ, ಅರಣ್ಯ, ಅಬಕಾರಿ, ಕಾನೂನು, ಪೋಲೀಸ್, ಲೋಕೋಪಯೋಗಿ, ಸಾರ್ವಜನಿಕ ಶಿಕ್ಷಣ, ವೈದ್ಯಕೀಯ, ಹಣಕಾಸು, ರೈಲ್ವೆ ಮುಂತಾದ ಇಲಾಖೆಗಳ ಕಾರ್ಯವೈಖರಿ ತಿಳಿಸುತ್ತಾ, ಮಾದರಿ ರಾಜ್ಯವಾಗಿ ಮೈಸೂರು ಹೆಸರು ಪಡೆಯಿತು ಎಂಬುದರ ಬಗೆಗೆ ವಿವರಿಸಿದ್ದಾರೆ. ಕೊನೆಗೆ ಬ್ರಿಟಿಷರಿಂದ ಮೈಸೂರಿನ ಅಧಿಕಾರ ಚಾಮರಾಜ ಒಡೆಯರಿಗೆ ಹಸ್ತಾಂತರವಾದ ಮಾಹಿತಿಗಳನ್ನು ತಿಳಿಸಿದ್ದಾರೆ. ಆಡಳಿತದ ವಿಚಾರಗಳಲ್ಲಿ ತಮ್ಮ ಅನುಕೂಲಕ್ಕೆ ತಕ್ಕಂತೆ ಆಡಳಿತ ನಡೆಸಿ ಲಾಭ ಪಡೆದುಕೊಂಡರು ಎಂಬುದು ಪ್ರಮುಖವಾದುದು.

ಎರಡನೆಯ ಸಂಪುಟದಲ್ಲಿ ಮೈಸೂರು ಸಂಸ್ಥಾನದ ಎಂಟು ಜಿಲ್ಲೆಗಳಾದ ಬೆಂಗಳೂರು, ಕೋಲಾರ, ತುಮಕೂರು, ಮೈಸೂರು, ಹಾಸನ, ಕಡೂರು, ಶಿವಮೊಗ್ಗ ಮತ್ತು ಚಿತ್ರದುರ್ಗಗಳ ಜಿಲ್ಲಾವಾರು ಮಾಹಿತಿಯನ್ನು ನೀಡಲಾಗಿದೆ. ಪ್ರತಿಯೊಂದು ಜಿಲ್ಲೆಯ ವಿವರಗಳನ್ನು ಏಳು

ಅಧ್ಯಾಯಗಳಾಗಿ ವಿಂಗಡಿಸಲಾಗಿದ್ದು, ಅದರಲ್ಲಿ ಅನೇಕ ಉಪವಿಭಾಗಗಳಿವೆ. ಪ್ರತಿ ಜಿಲ್ಲಾವಾರು ಮಾಹಿತಿಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಮೊದಲ ಸಂಪುಟದಲ್ಲಿಯೇ ವಿವರಗಳು ಪುನರಾರ್ವತನೆಯಾಗದಂತೆ ಗಮನಿಸಿರುವುದು ಇಲ್ಲಿಯ ವಿಶೇಷ. ಮೊದಲಿಗೆ ಆಯಾಯ ಜಿಲ್ಲೆಯ ನಕಾಶೆ ಕೊಟ್ಟಿದೆ. ಅಂಕಿ-ಅಂಶಗಳು, ಐತಿಹ್ಯಗಳು, ಜಾತ್ರೆ-ಉತ್ಸವಗಳು ಮೊದಲಾದವು ಗಳನ್ನು ದಾಖಲಿಸಲಾಗಿದೆ. ಆಯಾಯ ಜಿಲ್ಲೆಗಳಲ್ಲಿ ಆಳಿದ ರಾಜಮನೆತನಗಳು, ವ್ಯಾಪಾರ-ವಾಣಿಜ್ಯ, ತೆರಿಗೆ, ಸಾರಿಗೆ-ಸಂಪರ್ಕಗಳ ಮಾಹಿತಿಗಳನ್ನು ತಿಳಿಸಿದ್ದಾರೆ. ಜಿಲ್ಲಾವಾರು ವಿವರಗಳನ್ನು ನೀಡುವಾಗ ಜನಾಂಗೀಯ ಲಕ್ಷಣಗಳು, ಧರ್ಮ, ಭಾಷೆ ಮತ್ತು ಸಾಹಿತ್ಯ, ಆಡಳಿತದ ವಿವರಗಳು ಜಿಲ್ಲೆಯಿಂದ ಜಿಲ್ಲೆಗೆ ಬದಲಾಗುವುದರಿಂದ ಅವುಗಳನ್ನು ಪ್ರಸ್ತಾಪಿಸದೇ ಬಿಡಲಾಗಿದೆ. ಕೊನೆಯಲ್ಲಿ ಜಿಲ್ಲೆಯ ಪ್ರಮುಖ ಸ್ಥಳಗಳು, ನದಿಗಳು, ಬೆಟ್ಟಗಳು ಇತ್ಯಾದಿಗಳ ವಿವರ ಗ್ಯಾಸೆಟಿಯರ್ ಸಂಪಾದನಾ ಕ್ಷೇತ್ರದ ಮಹತ್ವವನ್ನು ತಿಳಿಸುತ್ತದೆ.

ಮೊದಲನೆಯ ಸಂಪುಟದಲ್ಲಿ ಒಟ್ಟಾರೆಯಾಗಿ ಆಡಳಿತದ ವಿಚಾರ ತಿಳಿಸಿದರೆ, ಎರಡನೆಯ ಸಂಪುಟದಲ್ಲಿ ಬಿಡಿಬಿಡಿಯಾಗಿ ಆಯಾಯ ಜಿಲ್ಲೆಗಳ ಮಾಹಿತಿಗಳನ್ನು ವಿವರಿಸುತ್ತಾರೆ. ಮೂರನೆಯ ಸಂಪುಟವು ಕೊಡಗು ಪ್ರಾಂತ್ಯದ ವಿವರಗಳನ್ನು ಒಳಗೊಂಡಿದೆ. ೧೮೭೮ರ ವೇಳೆಗೆ ಮೊದಲ ಬಾರಿಗೆ ಗ್ಯಾಸೆಟಿಯರ್ ಸಂಪುಟಗಳನ್ನು ರಚಿಸಲು ಆಯೋಜಿಸುವಾಗ ಮೈಸೂರು ಮತ್ತು ಕೊಡಗು ಪ್ರಾಂತ್ಯಗಳೆರಡೂ ಬ್ರಿಟಿಷ್ ಕಮೀಷನರುಗಳ ಆಳ್ವಿಕೆಯ ಅಡಿಯಲ್ಲಿಯೇ ಇದ್ದುದರಿಂದ ಈ ಎರಡೂ ಪ್ರಾಂತ್ಯಗಳ ಮಾಹಿತಿಯೆಲ್ಲವನ್ನೂ ಮೂರು ಸಂಪುಟಗಳಲ್ಲಿ ಕ್ರೋಢೀಕರಿಸಲು ನಿರ್ಧರಿಸಿ, ಮೂರನೆಯ ಸಂಪುಟವನ್ನು ಕೊಡಗಿಗೆ ಮೀಸಲಿಡಲಾಯಿತು. ಆದರೆ ೧೮೯೭ರಲ್ಲಿ ಈ ಸಂಪುಟಗಳನ್ನು ಪರಿಷ್ಕರಿಸುವ ವೇಳೆಗೆ ಮೈಸೂರು ಸಂಸ್ಥಾನವು ಮೈಸೂರು ಅರಸರ ಆಳ್ವಿಕೆಯಲ್ಲಿಯೂ, ಕೊಡಗು ಮದ್ರಾಸ್ ಪ್ರಾಂತ್ಯದ ಅಧೀನದಲ್ಲಿಯೂ ಇದ್ದುದರಿಂದ ಈ ಭಾಗವನ್ನು ಪುನಃ ಮುದ್ರಿಸಲಿಲ್ಲ.

ಈ ಸಂಪುಟದಲ್ಲಿ ಅಧ್ಯಾಯ ವಿಂಗಡಣೆಯು ಬಹುಮಟ್ಟಿಗೆ ಮೊದಲನೆಯ ಸಂಪುಟದಂತೆಯೇ ಇದ್ದರೂ ಅಲ್ಪಸ್ವಲ್ಪ ಬದಲಾವಣೆಯನ್ನು ಮಾಡಿದೆ. ಮೊದಲು ಕೊಡಗಿನ ಪ್ರಾಕೃತಿಕ ಲಕ್ಷಣಗಳಲ್ಲಿ ಸ್ಥಾನ ನಿರ್ದೇಶನ, ವಿಸ್ತೀರ್ಣ, ಗಡಿರೇಖೆಗಳು, ಪರ್ವತಗಳು, ವಾಯುಗುಣ ಇತ್ಯಾದಿ ವಿವರಗಳನ್ನು ತಿಳಿಸಿದ್ದಾರೆ. ಚರಿತ್ರೆಯಲ್ಲಿ ಆಳ್ವಿಕೆ ನಡೆಸಿದ ಮನೆತನಗಳು, ಅನಂತರದ ಮತಾಂತರ ನೀತಿ, ಬ್ರಿಟಿಷರು ಕೊಡಗನ್ನು ನೇರ ಆಡಳಿತಕ್ಕೆ ತೆಗೆದುಕೊಂಡಿದ್ದರ ವಿವರಗಳಿವೆ. ಮೊದಲ ಸಂಪುಟದಲ್ಲಿರುವ Ethnology ಎಂಬ ಶೀರ್ಷಿಕೆಯಿಲ್ಲ. ಇದಕ್ಕೆ ಬದಲಾಗಿ ಅದೇ ವಿವರಗಳನ್ನು ಒಳಗೊಳ್ಳುವ Inhabitants ಎಂಬ ಅಧ್ಯಾಯವನ್ನು ಸೇರಿಸಲಾಗಿದೆ.[೨೯] ಈ ಪ್ರದೇಶದಲ್ಲಿ ಕಾಫಿ ಬೆಳೆಯುವ ವಿವರಗಳು, ಕೂಲಿ ಮಾಡುವ ಜನಗಳ ವಿವರಗಳನ್ನು ಒಳಗೊಂಡಿದೆ. ಪ್ರಮುಖ ಸ್ಥಳಗಳ ವಿವರಗಳನ್ನು ಈ ಸಂಪುಟದ ಕೊನೆಯಲ್ಲಿ ನೀಡಲಾಗಿದೆ.

ರೈಸ್ ಅವರ ಗ್ಯಾಸೆಟಿಯರ್ ಸಂಪುಟಗಳ ಒಟ್ಟು ಸ್ವರೂಪವನ್ನು ನೋಡಿದಾಗ ಗ್ಯಾಸೆಟಿಯರ್‌ಗಳ ರಚನೆಯು ಒಂದು ಸಂಪೂರ್ಣ ಶಾಸ್ತ್ರವಾಗಿ ಮತ್ತು ಒಂದು ಅಧ್ಯಯನ

ಶಿಸ್ತಾಗಿ ಬೆಳೆಯದಿದ್ದ ಕಾಲದಲ್ಲಿಯೇ ರೈಸ್ ಅವರು ಲಭ್ಯವಿರುವ ವಿರಳ ಆಕರಗಳಿಂದಲೇ ಇಂತಹ ಬೃಹತ್ ಸಂಪುಟಗಳನ್ನು ಸಂಪಾದಿಸಿರುವುದು ನಿಜಕ್ಕೂ ಶ್ಲಾಘನೀಯವಾದ ಕಾರ್ಯ.

ಬ್ರಿಟಿಷರು ಭಾರತವನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ವಸಾಹತು ಪ್ರದೇಶಗಳ ಚರಿತ್ರೆ, ಭಾಷೆ, ಸಾಹಿತ್ಯ, ಸಂಸ್ಕೃತಿಯ ಶೋಧನೆಯಲ್ಲಿ ತೊಡಗಿದವರೆಂಬುದು ಸತ್ಯವಾದ ಮಾತಾದರೂ, ಇದರಿಂದ ಇನ್ನೊಂದು ರೀತಿಯಲ್ಲಿ ಭಾರತೀಯರಿಗೆ ಅನುಕೂಲವೇ ಆಯಿತೆಂಬ ಮಾತು ಕೂಡ ಸತ್ಯ. ಏಕೆಂದರೆ ಭಾರತೀಯರು ಈ ಎಲ್ಲಾ ಮಾಹಿತಿಗಳನ್ನು ಒಟ್ಟಿಗೆ ಒಂದೇ ಕಡೆ ಕ್ರೋಢೀಕರಣ ಮಾಡಿರಲಿಲ್ಲ.

ಗ್ಯಾಸೆಟಿಯರ್‌ಗಳ ರಚನೆಗೆ ಬಳಸಿಕೊಂಡ ಪೂರ್ವ ಮಾದರಿಗಳು ಬಹುಶಃ ಡಬ್ಲ್ಯು ಡಬ್ಲ್ಯುಹಂಟರ್‌ನಿಂದ ರಚಿತವಾದ 'Annals of Rural Bengal' ಎಂಬ ೨೦ ಸಂಪುಟಗಳ ಕೃತಿ. ಅವರ ಕೃತಿಗಳಲ್ಲಿ ಗ್ಯಾಸೆಟಿಯರ್‌ಗಳಲ್ಲಿಯೇ ಸಾಧಾರಣವಾಗಿ ಕಂಡುಬರುವ ಭೌಗೋಳಿಕ ವಿವರ, ನದಿಗಳು, ಚರಿತ್ರೆ, ಜನಸಂಖ್ಯೆ, ಜನಗಳ ವೃತ್ತಿಗಳು, ಧರ್ಮ, ಜಾತ್ರೆ ಮತ್ತು ಹಬ್ಬಗಳು, ಊರುಗಳು ಮತ್ತು ಗ್ರಾಮಗಳು, ಜನರ ವೈವಾಹಿಕ ಸ್ಥಿತಿ, ಆಹಾರ, ವಸತಿ ಇತ್ಯಾದಿ ಅಧ್ಯಾಯಗಳಿವೆ. ಆದರೆ ಅಂಕಿ–ಅಂಶಗಳ ಭಾಗಗಳನ್ನು ಹೆಚ್ಚಿಸದೇ ವಿವರಣೆಗೆ ಪ್ರಾಮುಖ್ಯತೆಯನ್ನು ಕೊಟ್ಟಿರುವುದರಿಂದ ಈ ಸಂಪುಟಗಳನ್ನು ಗ್ಯಾಸೆಟಿಯರ್‌ಗಳು ಎನ್ನುವುದಕ್ಕಿಂತ 'ವಿಶ್ವಕೋಶ' ಎಂದು ಕರೆಯಬಹುದಾದಷ್ಟು ವಿಸ್ತಾರವಾಗಿವೆ.[೩೦]

ಬಿ.ಎಲ್.ರೈಸ್ ಅವರಿಗೆ ಗ್ಯಾಸೆಟಿಯರ್ ರಚನೆ ಕಾಲದಲ್ಲಿ ಹೆಚ್ಚಿನ ಮಾಹಿತಿ ಏನೇನೂ ಇರಲಿಲ್ಲ. ಅಂದಿನ ಆಕರಗಳು ಸಾಕಷ್ಟು ಪ್ರಮಾಣದಲ್ಲಿ ಲಭ್ಯವಿರಲಿಲ್ಲ. ಸರ್ಕಾರಿ ದಾಖಲೆಗಳು ೧೮೦೦ರ ನಂತರವೇ ಲಭ್ಯವಾದವು. ಅವರು ಹಿಂದೆ ತಜ್ಞರು ಸಂಗ್ರಹಿಸಿದ ವಿವರಗಳನ್ನು ಬಳಸಿಕೊಂಡರು. ಮೆಕೆಂಝಿ, ಬುಕಾನನ್, ಮಾರ್ಕ್ ವಿಲ್ಕ್ಸ್ ಮುಂತಾದವರ ಬರಹಗಳನ್ನು ಬಳಸಿಕೊಂಡರು ಮತ್ತು ಸತತವಾಗಿ ಕ್ಷೇತ್ರಕಾರ್ಯವನ್ನು ಕೈಗೊಂಡರು. ಪೂರಕವಾಗಿ ಕೆಲವು ಕೃತಿಗಳ ಅಡಿಟಿಪ್ಪಣಿಯನ್ನು ಕೊಟ್ಟಿದ್ದಾರೆ. ಈ ಗ್ಯಾಸೆಟಿಯರ್‌ನ ರಚನೆಯ ಉದ್ದೇಶ ಮೈಸೂರು ಸಂಸ್ಥಾನದ ವಿವರಗಳನ್ನು ದಾಖಲಿಸುವುದಾಗಿದ್ದರೂ ರೈಸ್ ಈ ಭೌಗೋಳಿಕ ಎಲ್ಲೆಯನ್ನು ಮೀರಿದ ಮಾಹಿತಿಯನ್ನು ಇಲ್ಲಿ ಸಂಗ್ರಹಿಸಿದ್ದಾರೆ.

ಗ್ಯಾಸೆಟಿಯರ್‌ಗಳ ರಚನೆಯ ಹಿಂದೆ ರೈಸ್ ಅವರ ಮನೋಧರ್ಮ ಏನಿತ್ತು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಏಕೆಂದರೆ ಕೇವಲ ಸರ್ಕಾರ ಅಥವಾ ಅಧಿಕಾರಿಗಳನ್ನು ತೃಪ್ತಿಪಡಿಸುವಂತೆ ಬರೆದರು ಎಂಬ ಅಪವಾದವೂ ಇದೆ. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಇವರ ಬಗೆಗೆ ವಿಲ್ಕ್ಸ್‌ನ ಹೇಳಿಕೆಗಳನ್ನೇ ಯಥಾವತ್ತಾಗಿ ಬಳಸಿದ್ದಾರೆ. ವಿ.ಪಿ.ಮಾಧವರಾವ್ ಗ್ಯಾಸೆಟಿಯರ್‌ನ ಬರವಣಿಗೆ ಒಬ್ಬ ಸರ್ಕಾರಿ ಅಧಿಕಾರಿ ಬರೆದ ಬರಹದಂತಿಲ್ಲವೆಂದು ಆಪಾದನೆ ಮಾಡಿದರು. ಬಹುಶಃ ಮಾಧವರಾವ್ ಅವರು ಸರ್ಕಾರದ ಧ್ಯೇಯ ಧೋರಣೆಗಳನ್ನು ಇನ್ನಷ್ಟು ಹೆಚ್ಚು ಒತ್ತು ಕೊಟ್ಟು ಬರೆಯುವ ಅಗತ್ಯವಿತ್ತು ಎಂದು ಭಾವಿಸಿದ್ದರೆಂದು ತೋರುತ್ತದೆ. ಆದರೆ ಈ ಮೂರೂ ಸಂಪುಟಗಳನ್ನು ಅಭ್ಯಸಿಸಿದ ನಂತರ ಸ್ಪಷ್ಟವಾಗುವ ಅಂಶವೆಂದರೆ ರೈಸ್ ಅವರ

ನಿಷ್ಠೆ ಇದ್ದದ್ದು ಒಂದು ನಿರ್ದಿಷ್ಟ ರಾಜವಂಶ ಅಥವಾ ನಿರ್ದಿಷ್ಟ ಅಧಿಕಾರಿಯ ಬಗೆಗಲ್ಲ. ಬದಲಿಗೆ ಮೈಸೂರು ಸಂಸ್ಥಾನ ಮತ್ತು ಅದರ ಜನತೆಯ ಕಡೆಗೆ.[೩೧] ಏಕೆಂದರೆ ಬ್ರಿಟಿಷರು ಭದ್ರವಾಗಿ ನೆಲೆಯೂರಲು ಇವರಿಬ್ಬರ ಸಹಾಯ ಮುಖ್ಯ. ಹಾಗಾಗಿಯೇ ಮೊದಲ ಸಂಪುಟದ ಉದ್ಯಮಗಳನ್ನು ಕುರಿತಾದ ಅಧ್ಯಾಯದಲ್ಲಿ ಕೋಲಾರದ ಚಿನ್ನದ ಗಣಿಯ ಉತ್ಪತ್ತಿ ಇತ್ಯಾದಿಗಳನ್ನು ವಿವರಿಸಿದ ನಂತರ ಅಂಕಿ–ಅಂಶಗಳ ಕಡೆಗೆ ಗಮನ ಹರಿಸಿದ್ದಾರೆ. ಇದರ ಪ್ರಮುಖ ವ್ಯವಹಾರಗಳೆಲ್ಲವೂ ಇರುವುದು ಇಂಗ್ಲೆಂಡಿನಲ್ಲಿ. ಅಲ್ಲಿಯೇ ಗಣಿಗಾರಿಕೆಗೆ ಬೇಕಾದ ಹಣವನ್ನು ಸಂಗ್ರಹಿಸಲಾಗುತ್ತದೆ. ಗಣಿಗಳ ಚಿನ್ನವೆಲ್ಲವೂ ಅಲ್ಲಿಗೆ ಹೋಗುತ್ತಿತ್ತು. ಲಂಡನ್ನಿನಲ್ಲಿಯೇ ಷೇರು ವ್ಯವಹಾರ ನಡೆಯುತ್ತಿತ್ತು. ಇಲ್ಲಿಯ ಸ್ಥಳೀಯರಿಗೆ ಯಾವುದೇ ಲಾಭವಿರಲಿಲ್ಲ ಎಂದು ಹೇಳುತ್ತಾ ಬ್ರಿಟಿಷ್ ಸರ್ಕಾರವು ಇಲ್ಲಿನ ಸ್ವಾಭಾವಿಕ ಸಂಪತ್ತನ್ನು ಇಲ್ಲಿಯ ಜನರಿಗೆ ಬಳಸಲು ಬಿಡದೆ, ವಿದೇಶಗಳಿಗೆ ಸಾಗಿಸಿ ಹಣ ಗಳಿಸುತ್ತಿತ್ತು. ಇದಕ್ಕೆ ಮೈಸೂರು ಸರ್ಕಾರವೂ ಸಹಾಯಕವಾಗಿತ್ತು. ಆದರೆ ಇಲ್ಲಿನ ಸ್ಥಳೀಯರಿಗೆ ಯಾವುದೇ ಲಾಭ ಇರಲಿಲ್ಲ ಎಂದು ಸೂಚಿಸಿರುವುದನ್ನು ಇಲ್ಲಿ ಗಮನಿಸಬಹುದು. ಬ್ರಿಟಿಷ್ ಆಡಳಿತವು ಲಾಭಕ್ಕೆ ಹೇಗೆ ಇಲ್ಲಿನ ಪ್ರದೇಶಗಳ ಸಂಪತ್ತಿನ ಮೇಲೆ ಹತೋಟಿ ಹೊಂದಿದ್ದರು ಎಂಬುದನ್ನು ಮೇಲ್ನೋಟಕ್ಕೆ ವಿವರಿಸಿದ್ದಾರೆ.[೩೨] ಆದರೆ ತಲಸ್ಪರ್ಶಿಯಾಗಿ ಅಧ್ಯಯನ ಕೈಗೊಂಡಾಗ ಅನೇಕ ವಿಚಾರಗಳು ಹೊರಬರುವ ಸಾಧ್ಯತೆ ಉಂಟು.

ಬಿ.ಎಲ್.ರೈಸ್ ಅವರು ಬ್ರಿಟಿಷ್ ಆಡಳಿತಗಾರರಾಗಿದ್ದ ಬ್ರಿಟಿಷ್ ಸಾಮ್ರಾಜ್ಯಶಾಹಿಗಳು ಮಾಡಿದ ಪ್ರತಿಯೊಂದನ್ನು ಸಮರ್ಥಿಸಿರುವುದನ್ನು ಕಾಣಬಹುದಾಗಿದೆ. ವ್ಯಕ್ತಿಕೇಂದ್ರಿತವಾಗಿರದೇ ಇಡೀ ಒಂದು ವ್ಯವಸ್ಥೆಯನ್ನು ಎತ್ತಿ ಹಿಡಿದಿದ್ದಾರೆ. ಇಲ್ಲಿ ಅವರ ಕಾಲದ ಭೌಗೋಳಿಕ, ಜನಾಂಗೀಯ ವಿವರಗಳು, ಆಡಳಿತ, ಅರ್ಥವ್ಯವಸ್ಥೆ ಮುಂತಾದ ವಿಷಯಗಳ ಕಾಲಾನುಕ್ರಮವಾದ ವಿವರಗಳಿವೆ. ಇವರ ವಿಶ್ಲೇಷಣೆಯು ವಸಾಹತುಶಾಹಿ ಪರವಾಗಿದ್ದು, ಬ್ರಿಟಿಷರು ೧೮೩೧ರಲ್ಲಿ ಒಡೆಯರ ಸಂಸ್ಥಾನವನ್ನು ತನ್ನ ವಶಕ್ಕೆ ತೆಗೆದುಕೊಂಡು ಕಮೀಷನರುಗಳ ಆಳ್ವಿಕೆಯಲ್ಲಿ ಅಭಿವೃದ್ಧಿ ಹೊಂದಿತು ಎಂದು ತಿಳಿಸಿದ್ದಾರೆ.

ಒಡೆಯರ ವಂಶದ ವಿವಿಧ ಮನೆತನಗಳ ನಡುವೆ ರಾಜ್ಯಾಧಿಕಾರಕ್ಕಾಗಿ ನಡೆದ ಈ ಕುತಂತ್ರಗಳ ಬಗ್ಗೆ ಮಾರ್ಕ್ ವಿಲ್ಕ್ಸ್ ಹೇಳಿರುವ ಚೌಕಟ್ಟಿನೊಳಗೆ ಬಿ.ಎಲ್.ರೈಸ್ ಅವರು ಈ ಗ್ಯಾಸೆಟಿಯರ್‌ನಲ್ಲಿ ತಿಳಿಸಿರುವುದನ್ನು ಕಾಣಬಹುದಾಗಿದೆ. ರಾಜ್ಯಾಧಿಕಾರ ವಂಶ ಪಾರಂಪರ್ಯವಾದದ್ದು ಎನ್ನುವ ಕಲ್ಪನೆ ಹುರುಳಿಲ್ಲದ್ದು, ಈ ಅಧಿಕಾರ ಪಡೆದವರು ಒಳಸಂಚು, ಷಡ್ಯಂತ್ರ ಮತ್ತು ಹುಸಿ ಅಧಿಕಾರದ ಹಕ್ಕುಗಳ ಮೂಲಕ ಎನ್ನುತ್ತಾ, ಅವರು ಹಿಂದೂ ಆಗಿರಲೀ, ಮುಸಲ್ಮಾನರಾಗಲೀ ಸಿಂಹಾಸನಕ್ಕಾಗಿ ಈ ರೀತಿಯ ತಂತ್ರ ಸಾಮಾನ್ಯವಾಗಿತ್ತು ಎಂಬುದನ್ನು ವಿವರಿಸುತ್ತಾರೆ(ಪು.೩೬೪). ಚಿಕ್ಕದೇವರಾಜ ಒಡೆಯರ ಒಂದು ಬರ್ಬರ ಕೃತ್ಯದ ಕಡೆಗೆ ರೈಸ್ ಅವರು ಗಮನ ಹರಿಸಿದ್ದಾರೆ. ಅದು ಕ್ರೂರ ತೆರಿಗೆಗಳನ್ನು ವಿರೋಧಿಸಿ, ರಾಜನ ವಿರುದ್ಧ ಪ್ರತಿಭಟಿಸಲು ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕುತಂತ್ರದಿಂದ ಕೊಲ್ಲಿಸಿದ ಕ್ರೌರ್ಯವಾಗಿದೆ. ತೆರಿಗೆಗಳನ್ನು ಕಡಿಮೆ ಮಾಡುವವರೆಗೆ, ಭೂಮಿಯನ್ನು ಉಳುಮೆ ಮಾಡುವುದೇ ಬೇಡವೆಂದು

ಜಂಗಮರು ರೈತರನ್ನು ಸಂಘಟಿಸುತ್ತಿದ್ದರು. ಆದರೆ ಈ ಕ್ರಮ 'ರಾಜದ್ರೋಹ' ಎಂದು ಅವರಿಗೆ ಮರಣದಂಡನೆ ವಿಧಿಸಿದರು(ಪು.೩೬೭). ಈ ನಿಟ್ಟಿನಲ್ಲಿ ತಮ್ಮ ಅಧಿಕಾರದ ಅನುಕೂಲಕ್ಕಾಗಿ ಬರ್ಬರ ಕೃತ್ಯಗಳು ನಡೆಯುತ್ತಿದ್ದವು ಎಂಬುದನ್ನು ಪತ್ತೇ ಹಚ್ಚಿದ್ದಾರೆ.

ಈ ಗ್ಯಾಸೆಟಿಯರ್‌ಗಳಲ್ಲಿ ನೀಡಿರುವ ಕೆಲವೊಂದು ವಿವರಗಳು ಇಂದಿಗೂ ಚರ್ಚೆಗೆ ಒಳಗಾಗುತ್ತಲೇ ಇವೆ. ಹೈದರಾಲಿ ಮತ್ತು ಟಿಪ್ಪು ಬಗೆಗೆ ನೀಡಿರುವ ವಿವರಗಳು ಇದಕ್ಕೆ ನಿದರ್ಶನ ಎನ್ನಬಹುದು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಮಹಾವಂಚಕರು ಮತ್ತು ಆಕ್ರಮಣಕಾರಿಗಳೆಂದು ವಿವರಿಸಿರುವುದನ್ನು ನೋಡಬಹುದು. ಅಲ್ಲದೇ ಮತಾಂಧರು, ವೈದಿಕರನ್ನು ಹಿಂಸಿಸಿದ ಕ್ರೂರಿಗಳೆಂದು ಹೇಳುತ್ತಾ, ಈ ಹಿನ್ನೆಲೆಯಲ್ಲಿ ಹೈದರಾಲಿ ಮತ್ತು ಟಿಪ್ಪು ವಿರುದ್ಧ ಸಾಮ್ರಾಜ್ಯಶಾಹಿ ಹೋರಾಟ ಅನಿವಾರ್ಯ ಎನ್ನುತ್ತಾರೆ. ಈ ಹೇಳಿಕೆಯು ಬಹುಸಂಖ್ಯಾತರಾದ ಹಿಂದೂಗಳ ರಕ್ಷಣೆಗಾಗಿ ಮೈಸೂರಿನ ಮೇಲೆ ದಾಳಿ ಮಾಡಬೇಕಾಯಿತೆಂದು ಪರೋಕ್ಷವಾಗಿ ಹೇಳುವಂತಿದೆ. ಆದರೆ ಇಲ್ಲಿ ಹೈದರಾಲಿ ಆಗಲೀ, ಟಿಪ್ಪು ಆಗಲೀ ಮಾಡಿದ ಕೆಲವು ಕೃತ್ಯಗಳಿಗೆ ಅಲ್ಲಿನ ರಾಜಕೀಯ ತುರ್ತುಗಳೇ ಕಾರಣವೆಂಬುದನ್ನು ತಿಳಿಯಬೇಕಾಗಿದೆ. ಕೊಡಗಿನಲ್ಲಿ ಟಿಪ್ಪು ಜನರನ್ನು ಇಸ್ಲಾಂಧರ್ಮಕ್ಕೆ ಮತಾಂತರ ಮಾಡಿದನು ಎಂಬುದನ್ನು ನೋಡಿದಾಗ, ಅಲ್ಲಿನ ಜನರು ಮೈಸೂರು ಪ್ರಾಂತ್ಯಕ್ಕೆ ತೆರಿಗೆ ನೀಡುವುದನ್ನು ನಿಲ್ಲಿಸಿದರು ಮತ್ತು ತನ್ನ ಅಧಿಕಾರದ ವಿರುದ್ಧ ಸಂಚು ಮಾಡಿದವರನ್ನು ತನ್ನ ಶತ್ರುಗಳೊಂದಿಗೆ ಸಹಕರಿಸಿದ ಪಿತೂರಿಕಾರರನ್ನು ಆತ ನಿರ್ಧಯವಾಗಿ ಶಿಕ್ಷಿಸಿದನು. ಈ ಶಿಕ್ಷೆ ಮತಾಂತರವನ್ನು ಒಳಗೊಂಡಿತ್ತು(ಪು.೪೦೦–೪೦೮). ಪಿತೂರಿಕಾರರು ಯಾವುದೇ ಮತದ ಅನುಯಾಯಿಯಾಗಿದ್ದರೂ ಅವರಿಗೆ ಶಿಕ್ಷೆ ಆಗುತ್ತಿತ್ತು.

ಟಿಪ್ಪುವಿನ ಪತನದ ನಂತರ ಒಡೆಯರಿಗೆ ಪುನಃ ಅಧಿಕಾರವನ್ನು ನೀಡಿದಾಗ ದಿವಾನರಾದ ಪೂರ್ಣಯ್ಯ ಅವರ ಅಧಿಕಾರವೂ ಹಾಗೆಯೇ ಮುಂದುವರಿಯುತ್ತದೆ. ದಿವಾನ್ ಪೂರ್ಣಯ್ಯ ಅವರು ಟಿಪ್ಪುವಿನ ಕಾಲದಲ್ಲಿಯೂ ಅಧಿಕಾರ ಪಡೆದಿದ್ದರು. ಬಿ.ಎಲ್.ರೈಸ್ ಅವರು ಪೂರ್ಣಯ್ಯ ಅವರನ್ನು ಬ್ರಿಟಿಷರ ಆಜ್ಞೆಗೆ ತಕ್ಕಂತೆ ನಡೆದುಕೊಂಡ ಬುದ್ಧಿವಂತ ಸಮರ್ಥ ಬ್ರಾಹ್ಮಣ ಎಂದಿದ್ದಾರೆ(ಪು.೪೨೧). ದಿವಾನ್ ಪೂರ್ಣಯ್ಯ ಅವರು ಹೇಗೆ ಪರಿಸ್ಥಿತಿಗೆ ತಕ್ಕಂತೆ ತಮ್ಮ ವರ್ತನೆಯನ್ನು ಬದಲಾಯಿಸಿದರು ಎಂಬುದು ಮುಖ್ಯ. 'ನನ್ನ ಜನಾಂಗದ ರಕ್ಷಣೆಗಾಗಿ ಇರುವ ರಾಷ್ಟ್ರವೊಂದು ನನಗೆ ಶರಣಾಗು ಎಂದು ಹೇಳಿದಾಗ ನಾನು ಅದನ್ನು ಒಪ್ಪಿಕೊಂಡೆನು ಎನ್ನುತ್ತಾರೆ' ಎಂಬುದನ್ನು ತಿಳಿಸುತ್ತಾರೆ.

ಬ್ರಿಟಿಷರು ೧೮೩೧ರಲ್ಲಿ ಒಡೆಯರ ಸಂಸ್ಥಾನವನ್ನು ತಮ್ಮ ವಶಕ್ಕೆ ತೆಗೆದುಕೊಂಡಿದ್ದನ್ನು ಬಗೆಬಗೆಯಾಗಿ ಸಮರ್ಥಿಸಿಕೊಳ್ಳುತ್ತಾರೆ. ಒಡೆಯರು ಅಸಮರ್ಥರಾದಾಗ ಜನರು ಹೇಗೆ ಅಧಿಕಾರವನ್ನು ಬಳಸಿಕೊಳ್ಳುತ್ತಾರೆ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರು ಅಸಮರ್ಥ, ಭ್ರಷ್ಟ, ಲೋಲುಪ, ಜನವಿರೋಧಿ ಎಂದು ಸಾಬೀತುಪಡಿಸಲು ರೈಸ್ ಅವರು ಈ ಸಂಪುಟದಲ್ಲಿ ವಿವರಿಸಲು ಪ್ರಯತ್ನಿಸಿದ್ದಾರೆ(ಪು.೪೨೮–೪೩೯). ಏಕೆಂದರೆ ಒಡೆಯರ ಅಧಿಕಾರವನ್ನು ಬ್ರಿಟಿಷರು ಹಿಂತೆಗೆದುಕೊಳ್ಳಲು ನಗರದಂಗೆ ಮುಖ್ಯ ಕಾರಣವಾಯಿತೇ ಎಂಬುದನ್ನು ಗಮನಿಸಿದಾಗ

ಇಲ್ಲಿನ ಪ್ರದೇಶಗಳಲ್ಲಿ ತೆರಿಗೆ ಹೆಚ್ಚಾಗಿದ್ದನ್ನು ವಿರೋಧಿಸಿ ನಗರದಂಗೆ ನಡೆಯಿತು. ಮಹಾರಾಜರೇ ಖುದ್ದಾಗಿ ಹೋಗಿ ರೈತರ ಅಹವಾಲುಗಳನ್ನು ಕೇಳಿ ಬಗೆಹರಿಸುತ್ತಿದ್ದರು. ಆದರೆ ಎಲ್ಲಾ ಕಡೆಯೂ ಮಹಾರಾಜರನ್ನು ಪ್ರೀತಿಯಿಂದ ಸ್ವಾಗತಿಸುತ್ತಿರಲಿಲ್ಲ. ಪ್ರತಿಭಟನೆ ಹೆಚ್ಚಾಗುತ್ತಾ ಹೋಯಿತು. ಮಹಾರಾಜರ ಸರ್ಕಾರಕ್ಕೂ ಮತ್ತು ಪ್ರಜೆಗಳ ನಡುವೆ ಸಾಮರಸ್ಯದ ಸಂಬಂಧ ಹದಗೆಟ್ಟಿತು. ಇನ್ನೂ ಬ್ರಿಟಿಷರು ತಮ್ಮ ಸಾಮ್ರಾಜ್ಯಶಾಹಿ ಧೋರಣೆಯ ಹಿತಾಸಕ್ತಿಗೆ ಧಕ್ಕೆ ಉಂಟಾಗುತ್ತದೆ ಎಂದು ಬ್ರಿಟಿಷರು ಮೊದಲು ಕೊಟ್ಟ ಅಧಿಕಾರವನ್ನು ತಾವೇ ಹಿಂತೆಗೆದುಕೊಂಡರು ಎಂಬುದು ಮುಖ್ಯ. ಇಲ್ಲಿ ಬ್ರಿಟಿಷರು ತಮ್ಮ ಹಿತಾಸಕ್ತಿಗೆ ಅನುಗುಣವಾಗಿಯೇ ಆಡಳಿತ ನಡೆಸುತ್ತಿದ್ದರು ಎಂಬುದು ಇದರಿಂದ ಸಾಬೀತಾಗುತ್ತದೆ.

ಬಿ.ಎಲ್.ರೈಸ್ ಅವರು ಈ ಗ್ಯಾಸೆಟಿಯರ್ ಸಂಪುಟಗಳಲ್ಲಿ ನೀಡಿರುವ ಮಾಹಿತಿಗಳು ವರದಿ ರೂಪದಲ್ಲಿ ನಿಲ್ಲುತ್ತವೆಯೇ ಹೊರತು ವಿಶ್ಲೇಷಣಾತ್ಮಕವಾಗಿರುವುದಿಲ್ಲ. ಮಾಹಿತಿಗಳನ್ನು ಒಂದು ಕಡೆ ಕ್ರೋಢೀಕರಿಸುವ ಪ್ರಯತ್ನ ಯಶಸ್ವಿಯಾಗಿದೆ. ಬಿ.ಎಲ್.ರೈಸ್ ಅವರು ಸಾಮ್ರಾಜ್ಯಶಾಹಿಯ ಒಡೆದು ಆಳುವ ನೀತಿಗೆ ಅನುಗುಣವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ನೀಡಿರುವ ಹೇಳಿಕೆಗಳು, ಮತ್ತೊಂದು ಕಡೆ ಒಡೆಯರ ರಕ್ತಪಾತ, ಷಡ್ಯಂತ್ರಗಳ ವಿವರಗಳು ಇಂದಿಗೂ ಸಂಶೋಧನೆಗೆ ಒಳಪಡುತ್ತಿದ್ದು, ವಾಸ್ತವಿಕತೆಗೆ ಹತ್ತಿರವಾದ ಚರಿತ್ರೆಯನ್ನು ರಚನೆ ಮಾಡಬೇಕಾಗಿದೆ.

ಬಿ.ಎಲ್.ರೈಸ್ ಅವರು ನಂತರ ಸಿ.ಹಯವದನರಾವ್ ಅವರು **ಮೈಸೂರು ಗ್ಯಾಸೆಟಿಯರ್** ಎಂಬ ಐದು ಸಂಪುಟಗಳಲ್ಲಿ ಎಂಟು ಭಾಗಗಳಾಗಿ ವಿಭಜಿಸಿ ಮಾಹಿತಿಗಳನ್ನು ಕ್ರೋಢೀಕರಿಸಿದರು. ಮೈಸೂರು ಒಡೆಯರ ಸರ್ಕಾರದ ಅಧಿಕಾರಿಗಳು ಮತ್ತು ದೇಶಿ ಚರಿತ್ರೆಕಾರರೂ ಆಗಿದ್ದ ಸಿ.ಹಯವದನರಾವ್ ಅವರು 'ಮೈಸೂರು ಗ್ಯಾಸೆಟಿಯರ್' ಎಂಬ ಈ ಐದು ಸಂಪುಟಗಳ ಮೊದಲ ಆವೃತ್ತಿಯನ್ನು ೧೯೨೭-೩೦ರ ಅವಧಿಯಲ್ಲಿ ಹೊರತಂದರು.[೩೩] ಬಿ.ಎಲ್.ರೈಸ್ ಅವರು ೧೮೯೭ರಲ್ಲಿ ಮೈಸೂರು ಗ್ಯಾಸೆಟಿಯರನ್ನು ಪರಿಷ್ಕರಿಸಿದ ನಂತರ ಮೂವತ್ತು ವರ್ಷಗಳ ಅವಧಿಯಲ್ಲಿ ಸಿ.ಹಯವದನರಾವ್ ಅವರು ಸೆನ್ಸಸ್ ರಿಪೋರ್ಟ್, ಆಡಳಿತಾತ್ಮಕ ದಾಖಲೆಯ ಕೆಲವೊಂದು ವಿಚಾರಗಳ ಕ್ರೋಢೀಕರಣ, ಬದಲಾವಣೆಗಳೊಂದಿಗೆ ವಿಸ್ತೃತ ಮಾದರಿಯಲ್ಲಿ ಈ ಗ್ಯಾಸೆಟಿಯರ್‌ನ ಸಂಪುಟಗಳನ್ನು ಹೊರತಂದರು.

ಮೊದಲ ಸಂಪುಟವು ವಿವರಣಾತ್ಮಕ ಮಾದರಿಯನ್ನು ಹೊಂದಿದೆ. ಈ ಸಂಪುಟದ ಪ್ರಾರಂಭದಲ್ಲಿ ಸಂಪುಟ ರಚನೆಗೆ ವಿವಿಧ ರೀತಿಯಾಗಿ ಸಹಾಯ ಮಾಡಿದವರ ಕಡೆಗೆ ಗಮನ ಹರಿಸಿ, ಆಕರಗಳ ಬಳಕೆಯ ವಿವರಗಳನ್ನು ತಿಳಿಸಿದ್ದಾರೆ. ಮೊದಲ ಸಂಪುಟದಲ್ಲಿ ಭೌಗೋಳಿಕತೆ, ಭೂಮೇಲ್ಮೈ ಲಕ್ಷಣ, ಹವಾಮಾನ, ಸಸ್ಯಸಂಪತ್ತು, ಪ್ರಾಣಿಸಂಪತ್ತು, ಜನಾಂಗೀಯ ವಿವರಗಳು ಮತ್ತು ಜಾತಿ, ಭಾಷೆ, ಧರ್ಮ, ಜನಸಂಖ್ಯೆ, ಆರೋಗ್ಯ ಮೊದಲಾದವುಗಳ ವಿವರಗಳನ್ನು ನೋಡಬಹುದು. ಬಿ.ಎಲ್.ರೈಸ್ ಅವರು ಹಾಕಿಕೊಟ್ಟ ಮಾದರಿಯಲ್ಲಿಯೇ ಈ ಅಂಶಗಳನ್ನು ವಿವರಿಸುವ ಪ್ರಯತ್ನ ಮಾಡುತ್ತಾರೆ. ಮೊದಲು ಮೈಸೂರು ಎಂಬ ಸ್ಥಳನಾಮ ಏಕೆ ಬಂದಿತು ಎಂಬ ವಿಷಯವನ್ನು ತಿಳಿಸುತ್ತಾ ಮಹಿಷ ಎಂಬುವನ ಊರು ಆಗಿತ್ತು

ಎಂಬುದನ್ನು ವಿವರಿಸುತ್ತಾರೆ. ಸಾಹಿತ್ಯದಲ್ಲಿನ ಕರ್ನಾಟ ಅಥವಾ ಕರ್ನಾಟಕ ಎಂಬ ಪದಗಳು ಬದಲಾವಣೆ ಆದವು ಎಂಬುದನ್ನು ದಾಖಲಿಸಿದ್ದಾರೆ(ಪು.೩). ಭೂಕಂಪನಗಳು ಸಂಬಂಧಿಸಿದ ಬಗೆಗೆ ವಿವರಗಳನ್ನು ನೀಡಿದ್ದಾರೆ(ಪು.೩೫). ಜನಾಂಗೀಯ ವಿವರಗಳೊಂದಿಗೆ ಜಾತಿಯ ಮಾಹಿತಿಯನ್ನು ನೀಡುತ್ತಾರೆ. ವೃತ್ತಿ ಆಧಾರಿತ ಜಾತಿಗಳೂ ಇವೆ. ಸಿ.ಹಯವದನರಾವ್ ಅವರು ಬಿ.ಎಲ್.ರೈಸ್ ಅವರ ಗ್ಯಾಸೆಟಿಯರ್‌ನಂತೆ ಪ್ರತ್ಯೇಕ ಸಂಖ್ಯೆ, ಜಾತಿಗಳ ವಿವರಣೆಯ ಸಂಖ್ಯೆಯನ್ನು ನೀಡಿಲ್ಲ. ಸಿ.ಹಯವದನರಾವ್ ಅವರು ಮುಂಬಯಿ ಕರ್ನಾಟಕದ ಗ್ಯಾಸೆಟಿಯರ್‌ನಂತೆ ಮಾಹಿತಿಗಳನ್ನು ನೀಡಿದ್ದಾರೆ. ಭಾಷೆಯ ಬಗೆಗೆ ವಿವರಿಸುತ್ತಾ ಇಲ್ಲಿನ ಮಾತೃಭಾಷೆ ಕನ್ನಡ ಆಗಿತ್ತು, ಬ್ರಿಟಿಷರ ಪ್ರಭಾವದಿಂದ ಇಂಗ್ಲಿಷ್ ಭಾಷೆ ಬೆಳೆದಿರುವುದು ಮುಖ್ಯವಾದ ಸಂಗತಿ. ಮೈಸೂರು ಪ್ರಾಂತ್ಯದಲ್ಲಿ ಎಲ್ಲಾ ಧರ್ಮೀಯರನ್ನು ನೋಡಬಹುದು. ಹಿಂದೂಧರ್ಮದಲ್ಲಿನ ನಂಬಿಕೆ, ಆಚರಣೆಗಳನ್ನು ವಿವರವಾಗಿ ತಿಳಿಸುತ್ತಾರೆ. ಹಿಂದೂ ಧರ್ಮದಲ್ಲಿ ಬ್ರಾಹ್ಮಣವರ್ಗ ಮೇಲ್ವರ್ಗವಾಗಿ ಗುರುತಿಸಿಕೊಂಡಿದ್ದು, ಸಾಮಾಜಿಕವಾಗಿ ಉನ್ನತ ಸ್ಥಾನದಲ್ಲಿತ್ತು ಎಂಬ ವಿವರಗಳನ್ನು ತಿಳಿಸಿರುತ್ತಾರೆ. ಶೃಂಗೇರಿ ಮಠಕ್ಕೆ ನೀಡಿದ ದಾನಗಳ ವಿವರಗಳನ್ನು ಕ್ರೋಢೀಕರಿಸಿದ್ದಾರೆ. ಅಲ್ಲದೇ ಇಸ್ಲಾಂ, ಕ್ರೈಸ್ತ ಈ ಧರ್ಮಗಳ ಬಗೆಗೆ ವಿವರಗಳನ್ನು ತಿಳಿಸಿರುವುದನ್ನು ಎಸ್.ಶ್ರೀಕಂಠಯ್ಯ ಅವರು ಈ ಎಲ್ಲಾ ವಿಷಯಗಳನ್ನು ಪರಾಮರ್ಶಿಸುವುದನ್ನು ನೋಡಬಹುದು.[೩೪] ಇಲ್ಲಿ ಬ್ರಾಹ್ಮಣ ಎಂಬುದು ಒಂದು ಧರ್ಮವಾಗಿತ್ತು ಎಂದು ಬಿ.ಎಲ್.ರೈಸ್ ತಿಳಿಸಿರುವುದನ್ನು ಸಿ.ಹಯವದನರಾವ್ ಅವರು ಹಾಗೆಯೇ ಮುಂದುವರಿಸಿದ್ದಾರೆ.

ಜನಸಂಖ್ಯೆಯ ಮಾಹಿತಿ ನೀಡಲು ಸೆನ್ಸಸ್ ರಿಪೋರ್ಟ್‌ನ್ನು ಬಳಸಿಕೊಂಡಿದ್ದಾರೆ. ಈ ಪ್ರದೇಶಗಳಲ್ಲಿ ಜನರು ಸಾಮಾನ್ಯವಾಗಿ ರಾಗಿಯ ಆಹಾರವನ್ನು ಹೆಚ್ಚಾಗಿ ಬಳಸುತ್ತಿದ್ದರು. ಆದರೆ ಇಲ್ಲಿ ಮುಖ್ಯವಾಗಿ ಎಲೆ ಮತ್ತು ಅಡಿಕೆಯ ಸೇವನೆಯನ್ನು ಮಾಡುತ್ತಿದ್ದರು. ಜೊತೆಗೆ ಮೈಸೂರಿನ ತಾಂಬೂಲ(ಎಲೆ)ಕ್ಕೆ ತುಂಬಾ ಬೇಡಿಕೆ ಇರುವುದಾಗಿಯೂ ತಿಳಿಯಬಹುದು (ಪು.೪೨೬). ಎಲ್ಲ ಕಡೆಯೂ ಸೇವಿಸುವಂತೆ ಹೆಂಡದ ಸೇವನೆ ಇಲ್ಲಿಯೂ ಇತ್ತು. ಆದರೆ ಬಿ.ಎಲ್.ರೈಸ್ ಅವರ ಗ್ಯಾಸೆಟಿಯರ್‌ನಲ್ಲಿ ಇದರ ಬಗೆಗೆ ಯಾವುದೇ ಮಾಹಿತಿ ದೊರೆಯುವುದಿಲ್ಲ. ಅಲ್ಲದೇ ಸಾಮಾಜಿಕ ವ್ಯವಸ್ಥೆಯ ಬಗೆಗೆ ಬೆಳಕು ಚೆಲ್ಲುವುದಿಲ್ಲ. ಆದರೆ ಸಿ.ಹಯವದನರಾವ್ ಅವರ ಸಂಪುಟದಲ್ಲಿ ಸಾಮಾಜಿಕ ವ್ಯವಸ್ಥೆಯ ಬಗ್ಗೆ ವಿವರಿಸುತ್ತಾರೆ. ಇಲ್ಲಿನ ಸಂಸ್ಕೃತಿ, ಸಂಪ್ರದಾಯಗಳ ಬಗೆಗೆ ತಿಳಿಸುತ್ತಾ ವೈದಿಕ ಧರ್ಮದಲ್ಲಿನ ಕಟ್ಟು-ಪಾಡುಗಳನ್ನು ವಿವರಿಸುತ್ತಾರೆ (ಪು.೪೨೮-೪೭೯). ಸಾರ್ವಜನಿಕ ಆರೋಗ್ಯ ಕಾಪಾಡುವ ಕ್ರಮಗಳನ್ನು ಸಹ ವಿವರಿಸುತ್ತಾರೆ.

ಎರಡನೆಯ ಸಂಪುಟವು ನಾಲ್ಕು ಉಪಭಾಗಗಳನ್ನು ಹೊಂದಿದೆ. ಮೊದಲನೆಯ ಭಾಗವು ಪುರಾತತ್ವ ಆಕರಗಳು. ಶಿಲ್ಪಗಳು, ವಾಸ್ತುಶಿಲ್ಪ, ಚಿತ್ರಕಲೆ, ಸಾಹಿತ್ಯದ ವಿಚಾರಗಳನ್ನು ಒಳಗೊಂಡಿದೆ. ಮೈಸೂರು ಒಡೆಯರ ಚರಿತ್ರೆಯನ್ನು ಇವರು ಮುಖ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಿದ್ದಾರೆ. ೧. ಪ್ರಾರಂಭದ ಚರಿತ್ರೆಯು ವಿಜಯನಗರ ಚರಿತ್ರೆ ಪ್ರಾರಂಭವಾಗುವವರೆಗೆ (೧೩೩೬) ೨. ಮಧ್ಯಕಾಲೀನ ಚರಿತ್ರೆಯು ವಿಜಯನಗರ ಚರಿತ್ರೆಯಿಂದ ಪ್ರಾರಂಭವಾಗಿ ಅದು ಕೊನೆ ಆಗುವವರೆಗೆ(೧೫೬೫) ೩. ಆಧುನಿಕ ಚರಿತ್ರೆಯನ್ನು ಮೈಸೂರಿನ ಒಡೆಯರು ವಿಜಯ

ನಗರದ ರಾಜಪ್ರಭುತ್ವವನ್ನು ಮುಂದುವರಿಸಿಕೊಂಡು ಹೋದ ಕಾಲಾವಧಿಗೆ ವಿವರಿಸುತ್ತಾರೆ(ಪು.೭). ಈ ರೀತಿಯಾಗಿ ಚರಿತ್ರೆಯನ್ನು ಕಾಲಾವಧಿಯಲ್ಲಿ ವಿಂಗಡಿಸಿರುವುದನ್ನು ನೋಡಿದರೆ ವಿಜಯನಗರ ಸಾಮ್ರಾಜ್ಯವು ಹಿಂದೂಧರ್ಮ ಮತ್ತು ಹಿಂದೂಸಂಸ್ಕೃತಿಯನ್ನು ರಕ್ಷಿಸಲು ಏಳಿಗೆ ಹೊಂದಿತ್ತು. ಅದೇ ರೀತಿ ಅದರ ಮುಂದುವರಿಕೆಯಾಗಿ ಮೈಸೂರು ಒಡೆಯರೂ ಹಿಂದೂಧರ್ಮ ಮತ್ತು ಹಿಂದೂಸಂಸ್ಕೃತಿಯ ರಕ್ಷಕರಾಗಿಯೇ ಆಡಳಿತ ನಡೆಸಿದರು ಎಂಬುದನ್ನು ಸೂಚಿಸುವಂತಿದೆ.

ಸಾಹಿತ್ಯದ ಬಗೆಗೆ ತಿಳಿಸುತ್ತಾ ಮೈಸೂರು ಒಡೆಯರ ಚರಿತ್ರೆಗೆ ಬಂದಿರುವ ಕೃತಿಗಳನ್ನು ಅನಾವರಣಗೊಳಿಸುತ್ತಾರೆ. ಸಂಸ್ಕೃತ, ಜೈನ, ಬೌದ್ಧ, ಕನ್ನಡ, ತೆಲುಗು ಸಾಹಿತ್ಯದ ಕೃತಿಗಳು ಪ್ರಕಟಗೊಂಡವು. ತಿರುಮಲಾರ್ಯನ ಕೃತಿಗಳು, ಬಸವಪ್ಪಶಾಸ್ತ್ರಿ, ದೇವಚಂದ್ರ ಮೊದಲಾದವರ ಕೃತಿಗಳು ಪ್ರಮುಖವಾದವುಗಳು. ಹೈದರಾಲಿ ಮತ್ತು ಟಿಪ್ಪು ಬಗೆಗೆ ಕಿರ್ಮಾನಿ ನೀಡಿರುವ ಹೇಳಿಕೆಗಳನ್ನು ನೋಡಬಹುದು. ಮುಮ್ಮಡಿ ಕೃಷ್ಣರಾಜ ಒಡೆಯರು ಸೌಗಂಧಿಕಾ ಪರಿಣಯ ಎಂಬ ಕೃತಿಯನ್ನು ರಚಿಸಿದರು. ಹೀಗೆ ಸಾಹಿತ್ಯ ಬೆಳವಣಿಗೆಯನ್ನು ಕುರಿತು ಸ್ವಾರಸ್ಯಕರವಾಗಿ ಅನಾವರಣಗೊಳಿಸುತ್ತಾರೆ.

ಎರಡನೆಯ ಸಂಪುಟದ ಎರಡನೇ ಭಾಗದಲ್ಲಿ ನಂದರು, ಮೌರ್ಯರು, ಶುಂಗ, ಕಣ್ವ, ಶಾತವಾಹನರು, ಕದಂಬರು, ಪಲ್ಲವರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣಿ ಚಾಲುಕ್ಯರು, ಕಲ್ಯಾಣದ ಕಳಚೂರಿಗಳು, ಚೋಳರು, ಹೊಯ್ಸಳರು, ಸೇವುಣರು ಈ ಎಲ್ಲಾ ರಾಜವಂಶಗಳು ಆಡಳಿತ ನಡೆಸಿದ ರೀತಿ, ಆಡಳಿತಾತ್ಮಕ ಸಂಬಂಧಗಳು, ಸಾಂಸ್ಕೃತಿಕ ಚಟುವಟಿಕೆಗಳು ಇವೇ ಮೊದಲಾದ ವಿವರಗಳ ವಿಸ್ತೃತ ನೋಟವನ್ನು ಬಿಂಬಿಸಿದ್ದಾರೆ.

ಎರಡನೆಯ ಸಂಪುಟದ ಮೂರನೇ ಭಾಗದಲ್ಲಿ ಮಧ್ಯಕಾಲೀನ ಚರಿತ್ರೆಯಲ್ಲಿ ವಿಜಯನಗರ ಕಾಲದ ಚರಿತ್ರೆಯನ್ನು ನೋಡಲಾಗಿದೆ. ವಿಜಯನಗರದ ಅರಸರು ಮತ್ತು ಒಡೆಯರ ನಡುವಿನ ಸಂಬಂಧಗಳು ಮುಖ್ಯ. ರಾಜ ಒಡೆಯರ ಆಡಳಿತಾವಧಿಯಲ್ಲಿ ವಿಜಯನಗರ ಸಾಮ್ರಾಜ್ಯವನ್ನು ಎರಡನೇ ತಿರುಮಲನು ಆಳ್ವಿಕೆ ನಡೆಸುತ್ತಿದ್ದನು. ಈತನು ಶ್ರೀರಂಗಪಟ್ಟಣದ ಆಡಳಿತವನ್ನು ನೋಡಿಕೊಳ್ಳಲು ಒಂದನೇ ವೆಂಕಟನನ್ನು ನೇಮಿಸಿದ್ದರು. ಒಂದನೇ ವೆಂಕಟನನ್ನು, ರಾಜ ಒಡೆಯರು ಸೋಲಿಸಿ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡರು(ಪು.೨೨೨೨). ಶ್ರೀರಂಗಪಟ್ಟಣದ ಪ್ರತಿನಿಧಿತ್ವ ಪಡೆದುಕೊಂಡ ನಂತರ ಮೈಸೂರಿನ ಸ್ವಯಂ ಆಡಳಿತ ಪ್ರಾರಂಭವಾಯಿತು. ಇದರೊಂದಿಗೆ ಮುಂದೆ ಮೈಸೂರು ಒಡೆಯರು ತಮ್ಮ ಸಂಸ್ಥಾನವನ್ನು ವಿಸ್ತಾರಗೊಳಿಸಿದರು ಎಂದು ತಿಳಿಸುತ್ತಾರೆ.

ಎರಡನೆಯ ಸಂಪುಟದ ನಾಲ್ಕನೇ ಭಾಗವನ್ನು ಆಧುನಿಕ ಚರಿತ್ರೆಯಾಗಿ ಗುರುತಿಸುತ್ತಾರೆ. ಇದರಲ್ಲಿ ವಿಜಯನಗರ ಸಾಮ್ರಾಜ್ಯದ ಅವನತಿ, ಅವನತಿಯ ನಂತರ ಮೈಸೂರು ಒಡೆಯರು ವಿಜಯನಗರ ಸಾಮ್ರಾಜ್ಯದ ಜೊತೆಗೆ ಆಡಳಿತಾತ್ಮಕ ಸಂಬಂಧ ಹೊಂದಿದ್ದರ ಪರಿಣಾಮವಾಗಿ ಈ ಸಾಮ್ರಾಜ್ಯದ ಎಲ್ಲಾ ಆಡಳಿತ, ಆಚಾರ-ವಿಚಾರಗಳು, ಸಂಸ್ಕೃತಿಯನ್ನು ಹಾಗೆಯೇ ಮುಂದುವರಿಸಿಕೊಂಡು ಹೋದರು ಎಂಬುದನ್ನು ಈ ಭಾಗದಲ್ಲಿ ಸಿ.ಹಯವದನರಾವ್

ಅವರು ವಿವರಿಸುತ್ತಾರೆ. ಅಂದರೆ ಇಲ್ಲಿ ಮೈಸೂರು ಒಡೆಯರ ಆಡಳಿತವನ್ನು ವಿಜಯನಗರದ ಚಕ್ರಾಧಿಪತ್ಯದ ಪರಂಪರೆಯಲ್ಲಿ ಕಾಣಲು ಸಿ.ಹಯವದನರಾವ್ ಇಲ್ಲಿ ಪ್ರಯತ್ನಿಸಿರುವುದನ್ನು ನೋಡಬಹುದು.

ಮೈಸೂರು ಸಂಸ್ಥಾನ ಸ್ಥಾಪನೆಯ ವಿವರಗಳು ಆಳ್ವಿಕೆ ಮಾಡಿದ ಒಡೆಯರ್, ಯಾವ ಯಾವ ಒಡೆಯರ ಕಾಲದಲ್ಲಿ ಎಲ್ಲೆಲ್ಲಿ ಏನು ಕಾರ್ಯಗಳನ್ನು ಜಾರಿಗೊಳಿಸಲಾಯಿತು ಎಂಬುದರ ವಿವರಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಯದುವಂಶದ ಯದುರಾಯ ಮತ್ತು ಕೃಷ್ಣರಾಯರಿಂದ ಸ್ಥಾಪನೆಯಾದ ಈ ಮೈಸೂರು ಸಂಸ್ಥಾನ ಮುಂದೆ ರಾಜ ಒಡೆಯರಿಂದ ಸ್ವಯಂ ಅಧಿಕಾರ ಪಡೆಯಿತು. ಆಡಳಿತವು ಹಾಗೆಯೇ ಮುಂದುವರಿದು ಚಿಕ್ಕದೇವರಾಜ ಒಡೆಯರ ಸತತ ಪ್ರಯತ್ನದಿಂದ ಮೈಸೂರು ಸಂಸ್ಥಾನವು ವಿಸ್ತಾರಗೊಂಡಿತು ಎಂದು ವಿವರಿಸುತ್ತಾರೆ. ಮೊಘಲರು, ಮರಾಠರು ಮತ್ತು ಬಿಜಾಪುರದೊಳಗೆ ದಕ್ಷಿಣ ರಾಜ್ಯ ವಿಸ್ತರಣೆಗಾಗಿ ನಡೆಯುತ್ತಿದ್ದ ಈ ತ್ರಿಕೋನಸ್ಪರ್ಧೆಯಲ್ಲಿ ಲಾಭ ಪಡೆದುಕೊಂಡ ಚಿಕ್ಕದೇವರಾಜ ಒಡೆಯರು ಚಿಕ್ಕಮಗಳೂರು ಮತ್ತು ಹಾಸನದ ಕೆಲವು ಭಾಗಗಳನ್ನು ಪಡೆದುಕೊಂಡರು(ಪು.೨೪೪೪). ಹಾಗೆಯೇ ಬೆಂಗಳೂರನ್ನು ವೆಂಕೋಜಿಯಿಂದ ಮೂರು ಲಕ್ಷ ರೂ.ಗಳಿಗೆ ಪಡೆದನು. ಈ ನಿಟ್ಟಿನಲ್ಲಿ ಚಿಕ್ಕದೇವರಾಜ ಒಡೆಯರ ಮೈಸೂರು ಸಂಸ್ಥಾನವನ್ನು ವಿಸ್ತಾರಗೊಳಿಸಿದರು ಎಂಬ ವಿವರಗಳನ್ನು ನೀಡಿದ್ದಾರೆ. ಆದರೆ ಅರಮನೆಯಲ್ಲಿ ರಾಜ್ಯಾಧಿಕಾರಕ್ಕಾಗಿ ನಡೆದ ರಕ್ತಪಾತ, ಷಡ್ಯಂತ್ರ, ಒಳಸಂಚು, ಸಂಘರ್ಷಗಳ ಬಗೆಗೆ ಸಿ.ಹಯವದನರಾವ್ ಅವರು ಚಕಾರವೆತ್ತುವುದಿಲ್ಲ(ಪು.೨೪೪೫). ಆದರೆ ಬ್ರಿಟಿಷ್ ವಸಾಹತುಶಾಹಿ ಬರಹಗಾರರಾದ ಮಾರ್ಕ್ ವಿಲ್ಕ್ಸ್ ಮತ್ತು ಬಿ.ಎಲ್.ರೈಸ್ ಅವರು ತಮ್ಮ ಕೃತಿಗಳಲ್ಲಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಡೆದ ಒಂದು ಬರ್ಬರಕೃತ್ಯವನ್ನು ಬಯಲಿಗೆಳೆದಿರುವ ಬಗೆಗೆ ಗಮನ ಹರಿಸುವುದು ಇಲ್ಲಿ ಮುಖ್ಯ. ಚಿಕ್ಕದೇವರಾಜ ಒಡೆಯರು ರೈತರ ಮೇಲೆ ಹೆಚ್ಚಿನ ತೆರಿಗೆಗಳನ್ನು ವಿಧಿಸಿದರು. ಇದರಿಂದ ಕ್ರೂರ ತೆರಿಗೆಗಳನ್ನು ವಿರೋಧಿಸಿ, ರಾಜರ ವಿರುದ್ಧ ಪ್ರತಿಭಟಿಸಲು ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕುತಂತ್ರದಿಂದ ಕೊಲ್ಲಿಸಿದ ಕ್ರೌರ್ಯವಾಗಿದೆ. ತೆರಿಗೆಗಳನ್ನು ಕಡಿಮೆ ಮಾಡುವವರೆಗೆ, ಭೂಮಿಯನ್ನು ಉಳುಮೆ ಮಾಡುವುದೇ ಬೇಡವೆಂದು ಜಂಗಮರು ರೈತರನ್ನು ಸಂಘಟಿಸುತ್ತಿದ್ದರು. ಇದು ರಾಜದ್ರೋಹವೆಂದು ಅವರಿಗೆ ಮರಣದಂಡನೆಯನ್ನು ವಿಧಿಸಿದರು.[೩೫] ಆದರೆ ಈ ಗ್ಯಾಸೆಟಿಯರ್‌ನಲ್ಲಿ ಜಂಗಮರ ಕಾರ್ಯಗಳು, ಅವರ ನಡುವೆ ನಡೆದ ಸಂಭಾಷಣೆ, ಅಷ್ಟನ್ನೇ ವಿವರಿಸಲಾಗಿದೆ. ಇವನ ಕಾಲದ ಶಾಸನಗಳಲ್ಲಾಗಲೀ ಈ ವಿರೋಧದ ಬಗೆಗೆ ಎಲ್ಲೂ ವಿವರಣೆಗಳಿಲ್ಲ ಎಂಬುದು ಮುಖ್ಯ(ಪು.೨೪೪೫–೨೪೪೬). ಜಂಗಮರನ್ನು ಕೊಲ್ಲಿಸಿದ ಕೌರ್ಯದ ಬಗೆಗೆ ವಿಚಾರವನ್ನು ಪ್ರಸ್ತಾಪಿಸುವುದೇ ಇಲ್ಲ. ಇದನ್ನೇ ದೇಶಿ ಬರಹಗಾರರು ತಮ್ಮ ಆಧಿಪತ್ಯದ ಅನುಕೂಲಕ್ಕಾಗಿ ನಡೆದ ವಿಚಾರಗಳನ್ನು ಗೌಪ್ಯವಾಗಿ ಇಡುತ್ತಾರೆ. ಇದೇ ರಾಷ್ಟ್ರೀಯ ಧೋರಣೆಯ ಚರಿತ್ರೆ ಆಗಿರಬೇಕು ಎಂದು ಎಸ್.ಚಂದ್ರಶೇಖರ್ ಅವರು ತಿಳಿಸಿರುವುದನ್ನು ನೋಡಬಹುದು.[೩೬]

ಚಿಕ್ಕದೇವರಾಜ ಒಡೆಯರ ನಂತರದ ಒಡೆಯರು ಮೊಘಲರ, ನಿಜಾಮ ಮತ್ತು ಮರಾಠರ ತೀವ್ರ ಹೋರಾಟವನ್ನು ಎದುರಿಸಬೇಕಾಯಿತು. ಈ ಮಧ್ಯೆ ನಂಜರಾಜಯ್ಯ

ದಳವಾಯಿಯಾಗಿ ಅಧಿಕಾರವನ್ನು ಕೇಂದ್ರೀಕರಿಸಿಕೊಂಡನು. ಸಂಸ್ಥಾನದ ರಕ್ಷಣೆಗಾಗಿ ಹೈದರ್‌ನ ಸಹಾಯವನ್ನು ಪಡೆದುಕೊಂಡನು. ಅವಕಾಶವನ್ನು ಬಳಸಿಕೊಂಡ ಹೈದರ್‌ನು ಹಂತಹಂತವಾಗಿ ಮೈಸೂರು ಸಂಸ್ಥಾನವನ್ನೇ ತನ್ನ ವಶಕ್ಕೆ ತೆಗೆದುಕೊಂಡು ಆಡಳಿತ ನಡೆಸಲು ಪ್ರಾರಂಭಿಸಿದನು. ಹೈದರಾಲಿಯು ಬ್ರಿಟಿಷರಿಗೆ ಪೈಪೋಟಿ ನೀಡುತ್ತಾ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಾ ಹೋದನು. ಇದರಿಂದ ಬ್ರಿಟಿಷರು ಹೈದರಾಲಿಯ ಪ್ರಾಬಲ್ಯವನ್ನು ಅಡಗಿಸಲು ಮರಾಠ, ನಿಜಾಮರೊಡನೆ ತ್ರಿಪಕ್ಷೀಯ ಕೂಟವನ್ನು ರಚಿಸಿಕೊಂಡರು. ಮುಂದಿನ ಎರಡೂ ಆಂಗ್ಲೋ–ಮೈಸೂರು ಯುದ್ಧಗಳಲ್ಲಿ ಹೈದರಾಲಿ ಸೋತು ಮರಣ ಹೊಂದಿದನು. ಆಡಳಿತವನ್ನು ಮುಂದುವರಿಸಿದನು. ಬ್ರಿಟಿಷರನ್ನು ಭಾರತದಿಂದ ಹೊರದೂಡುವುದು ಇವನ ಧ್ಯೇಯವಾಗಿತ್ತು. ದೇಶಿ ರಾಜರಲ್ಲಿ ಒಗ್ಗಟ್ಟು ಇರಲಿಲ್ಲ. ಈ ಮಧ್ಯೆ ಬ್ರಿಟಿಷರು ಟಿಪ್ಪುವನ್ನು ಕೂಡ ಮೂರು ಮತ್ತು ನಾಲ್ಕನೇ ಆಂಗ್ಲೋ–ಮೈಸೂರು ಯುದ್ಧಗಳಲ್ಲಿ ಸೋಲಿಸಿದರು. ಟಿಪ್ಪು ಮರಣ ಹೊಂದಿದನು(ಪು.೨೫೦೬ ರಿಂದ ೨೬೦೮). ನಂತರ ರಾಜ್ಯವನ್ನು ವಿಭಾಗ ಮಾಡಲಾಯಿತು. ಈ ನಿಟ್ಟಿನಲ್ಲಿ ಮೈಸೂರು ರಾಜ್ಯವು ಒಡೆಯರಿಗೆ ಪುನರ್ದಾನವಾಯಿತು ಎಂಬುದನ್ನು ತಿಳಿಸುತ್ತಾ ಸಿ.ಹಯವದನರಾವ್ ಅವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ವಿಲ್ಕ್ಸ್‌ರು ಚಿತ್ರಿಸಿರುವುದಕ್ಕಿಂತ ಕ್ರೂರವಾಗಿ ಚಿತ್ರಿಸಿದ್ದಾರೆ. ಅಲ್ಲದೇ ಕೀರ್ಮಾನಿ, ಬೌರಿಂಗ್ ಮುಂತಾದವರು ವಿವರಿಸುವ ರೀತಿಯನ್ನು ಕ್ರೋಡೀಕರಿಸಿ ತಿಳಿಸಿದ್ದಾರೆ.

ಮಾರ್ಕ್ ವಿಲ್ಕ್ಸ್‌ನು ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಮತಾಂಧರು, ದುರಾಕ್ರಮಿಗಳು ಎಂದು ಬಣ್ಣಿಸುತ್ತಾರೆ. ವಿಲ್ಕ್ಸ್ ಸಾಮ್ರಾಜ್ಯಶಾಹಿ ಧೋರಣೆಗೆ ಅನುಗುಣವಾಗಿ ಇವರುಗಳ ಮೇಲೆ ದಾಳಿ ಅನಿವಾರ್ಯವೆಂದು ಹೇಳುತ್ತಾರೆ. ವಿಜಯನಗರ ಸಾಮ್ರಾಜ್ಯದ ನಂತರ ಹಿಂದೂ ಧರ್ಮ ಮತ್ತು ಸಂಸ್ಕೃತಿಯ ರಕ್ಷಣೆಗಾಗಿ ಅಧಿಕಾರಕ್ಕೆ ಬಂದವರು ಮೈಸೂರಿನ ಒಡೆಯರು. ಇವರನ್ನೇ ಅಧಿಕಾರದಿಂದ ಇಳಿಸಿದರು ಮತ್ತು ಬಹುಸಂಖ್ಯಾತರಾದ ಹಿಂದೂಗಳ ರಕ್ಷಣೆಗಾಗಿ ಮೈಸೂರಿನ ಹೈದರಾಲಿ ಮತ್ತು ಟಿಪ್ಪುವಿನ ಮೇಲೆ ಬ್ರಿಟಿಷರ ಧಾಳಿಗಳು ಅನಿವಾರ್ಯ ಎಂದು ವಿವರಿಸಿದ್ದಾರೆ. ಟಿಪ್ಪು ತನ್ನ ಧರ್ಮದ ಕಟ್ಟಾ ಅನುಯಾಯಿ ಆಗಿದ್ದನು. ಅಲ್ಲದೇ ಧರ್ಮ ಪ್ರಚಾರ ಮಾಡಿದ ಮುಸ್ಲಿಂ ನಾಯಕನೂ ಹೌದು ಎಂದು ಚಿತ್ರಿಸಿದ್ದಾರೆ. ಇಲ್ಲಿ ಸಾಮ್ರಾಜ್ಯಶಾಹಿ ಮತ್ತು ಒಡೆದು ಆಳುವ ನೀತಿ ಎದ್ದು ಕಾಣುತ್ತದೆ.

ಟಿಪ್ಪು ಪತನದ ಒಂದು ಶತಮಾನದ ನಂತರ ಬರೆಯುವ ಬೌರಿಂಗ್ ಟಿಪ್ಪುವಿನ ಪತ್ರಗಳನ್ನು ನೋಡಿ ಧಾರ್ಮಿಕ ಮತಾಂಧತೆ, ಸಹಜ ಕ್ರೌರ್ಯ ಮತ್ತು ಡೆಸ್ಪಾಟಿಸಂನಿಂದ ಹೆಸರಾಗಿದ್ದವನು. ಸಾವಿರಾರು ಜನರನ್ನು ಮತಾಂತರಗೊಳಿಸಿದನು. ಆತನು ಒಬ್ಬ ಅಧಿಕಾರಿಗೆ ಹಳೆಯ ಮತ್ತು ಕಪ್ಪು ಅಕ್ಕಿಯನ್ನು ನೀಡಿದನು. ಇದರಿಂದ ಆ ಅಧಿಕಾರಿಯು ಇದನ್ನು ಖಂಡಿಸಿದನು (ಪು.೨೬೮೦–೮೧). ಹೀಗೆ ಟಿಪ್ಪು ನಿರ್ವಹಿಸಿದ ಪಾತ್ರದ ಬಗೆಗೆ ವಿಲ್ಕ್ಸ್ ವಿವರಿಸಿದ್ದನ್ನು ಇಲ್ಲಿ ನೋಡಬಹುದು. ಟಿಪ್ಪು ಫ್ರೆಂಚ್‌ರೊಂದಿಗೆ ತನ್ನ ಕೂಟವನ್ನು ಸೇರಿಸಲು ಯತ್ನಿಸಿದನು. ವಿದೇಶಿ ಮೈತ್ರಿಗಳೂ ಮುಖ್ಯ. ಆದರೆ ಅದು ಸಾಧ್ಯವಾಗಲಿಲ್ಲ ಎಂದು ತಿಳಿಸುತ್ತಾರೆ(ಪು.೨೬೮೪).

ಮೆಕೆಂಝಿ, ಬುಕಾನನ್, ಮಾರ್ಕ್ ವಿಲ್ಕ್ಸ್, ಬಿ.ಎಲ್.ರೈಸ್ ಮತ್ತು ಬೌರಿಂಗ್ ಮೊದಲಾದ ಬ್ರಿಟಿಷ್ ಬರಹಗಾರರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಮತಾಂಧ, ಕ್ರೂರಿಗಳು, ಆಕ್ರಮಣಕಾರಿಗಳು ಎಂದು ಕರೆಯುತ್ತಾರೆ. ಇವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರಿಂದ ತೊಂದರೆಗೆ ಒಳಗಾಗಿ, ಸಾಮ್ರಾಜ್ಯಶಾಹಿ ನೆಲೆಗಳಲ್ಲಿ ನಷ್ಟಕ್ಕೆ ಈಡಾದವರಾಗಿದ್ದು, ಹೀಗೆ ಕರೆಯುವುದರಲ್ಲಿ ಒಂದು ಅರ್ಥ ಇದೆ. ಆದರೆ ಸಿ.ಹಯವದನರಾವ್ ಕೂಡ ಇದೇ ರೀತಿಯ ಚಿತ್ರಣವನ್ನು ನೀಡುತ್ತಾರೆ. ಇಲ್ಲಿ ಮುಖ್ಯವಾದ ಸಂಗತಿ ಎಂದರೆ ಬ್ರಿಟಿಷರಿಗೆ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಹೇಗೆ ಶತ್ರುವಾಗಿದ್ದರೋ ಹಾಗೆಯೇ ಮೈಸೂರು ಒಡೆಯರಿಗೆ ಶತ್ರುವಾಗಿದ್ದರು. ಏಕೆಂದರೆ ಒಡೆಯರನ್ನು ಮೈಸೂರಿನ ಅಧಿಕಾರದಿಂದ ಇಳಿಸಿ, ತನ್ನಲ್ಲೇ ಎಲ್ಲಾ ಅಧಿಕಾರವನ್ನು ಕೇಂದ್ರೀಕರಿಸಿಕೊಂಡಿದ್ದನು. ಅಲ್ಲದೇ ಮುಸ್ಲಿಂ ಧರ್ಮೀಯನಾಗಿದ್ದು ಕೂಡ. ಇಲ್ಲಿ ಹಿಂದೂ ಸಾಮ್ರಾಜ್ಯವೆನಿಸಿಕೊಂಡಿದ್ದ ವಿಜಯನಗರದ ಪತನದ ನಂತರ, ಹಿಂದೂಧರ್ಮ, ಸಂಸ್ಕೃತಿಗಳ ರಕ್ಷಣೆಯ ಭಾರ ಹೊತ್ತವರು ಮೈಸೂರು ಒಡೆಯರು. ಆದರೆ ಈ ಒಡೆಯರನ್ನು ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ರಾಜ್ಯಾಧಿಕಾರದಿಂದ ಇಳಿಸಿದರು. ಆದ್ದರಿಂದ ಇವರು ಆಕ್ರಮಣಾಕಾರಿಗಳು ಎಂದು ಸಿ.ಹಯವದನರಾವ್ ಅವರು ಇಲ್ಲಿ ತಿಳಿಸಿರುವುದನ್ನು ನೋಡಬಹುದು. ಸಿ.ಹಯವದನರಾವ್ ಅವರು ಭಾರತೀಯರು, ಮೈಸೂರು ಒಡೆಯರ ಸರ್ಕಾರದ ಅಧಿಕಾರಿಗಳು ಮತ್ತು ಚರಿತ್ರೆಕಾರರಾಗಿ ಗುರುತಿಸಿಕೊಂಡಿದ್ದು, ಒಡೆಯರ ಉಪ್ಪಿನ ಋಣದ ಭಾರವನ್ನು ತೀರಿಸಲು ಅರಮನೆಯಲ್ಲಿ ನಡೆದ ರಕ್ತಪಾತ, ಷಡ್ಯಂತ್ರಗಳನ್ನು ತಿಳಿಸುವುದಿಲ್ಲ. ಆದರೆ ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ಹೇಳುವಾಗ ವಿಲ್ಕ್ಸ್‌ನು ಬರೆದಿರುವುದಕ್ಕಿಂತ ಹೆಚ್ಚಾಗಿಯೇ ವಿವರಿಸಿದ್ದಾರೆ.

ಆಧುನಿಕ ಮೈಸೂರಿನ ಚರಿತ್ರೆ ಬರವಣಿಗೆ ಕುರಿತು ಸಿ.ಹಯವದನರಾವ್ ಅವರು ಈ ಗ್ಯಾಸೆಟಿಯರ್ ಎರಡನೇ ಸಂಪುಟದ ನಾಲ್ಕನೆಯ ಭಾಗದಲ್ಲಿ ಹೇಗೆ ಬರೆದಿದ್ದಾರೆ ಎಂಬುದು ಮುಖ್ಯ. ಹೈದರಾಲಿ ಮತ್ತು ಟಿಪ್ಪುವಿನ ನಂತರ ಬ್ರಿಟಿಷರು, ಮೈಸೂರು ಒಡೆಯರಿಗೆ ಅಧಿಕಾರವನ್ನು ಪುನರ್ದಾನ ಮಾಡಿದರು. ಈ ಸಂದರ್ಭದಲ್ಲಿ ಅಧಿಕಾರ ಮರಳಿ ಪಡೆಯಬೇಕಾದರೆ ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿಯವರ 'ಅವಿರತ ಶೌರ್ಯ ಸಾಹಸ' ಕಾರಣವೆನ್ನುವ ಸಿ.ಹಯವದನರಾವ್ ಆ ಸಂದರ್ಭದ ರಾಜಕಾರಣವನ್ನು ಗ್ರಹಿಸುವುದರ ಕಡೆಗೆ ಗಮನ ಹರಿಸುವುದಿಲ್ಲ. ಇಲ್ಲಿ ಒಡೆಯರ ಅಧಿಕಾರವನ್ನು ಮರಳಿ ಪಡೆಯಲು ಬ್ರಿಟಿಷರ ಜೊತೆ ಮಹಾರಾಣಿ ಲಕ್ಷ್ಮೀ ಅಮ್ಮಣ್ಣಿ ಅವರು ನಡೆಸಿದ ಸಂಧಾನ, ಸಾಮ್ರಾಜ್ಯಶಾಹಿ ಧೋರಣೆಯ ಹಿನ್ನೆಲೆಯಲ್ಲಿ ನಡೆಸಿದ ಕಾರ್ಯತಂತ್ರ ಇವೇ ಮೊದಲಾದವುಗಳನ್ನು ನೋಡುವುದಿಲ್ಲ. ಇನ್ನು ದಿವಾನರತ್ತ ಗಮನ ಹರಿಸಿದಾಗ ವಿವಿಧ ಕಾರಣಗಳಿಗಾಗಿ ಮುಖ್ಯರಾದ ಬಹುಮುಖ ಪ್ರತಿಭೆಯ ದಿವಾನ್ ಪೂರ್ಣಯ್ಯನನ್ನು ಕುರಿತು ಬಿ.ಎಲ್.ರೈಸ್ ಅವರು ಬ್ರಿಟಿಷರ ಆಜ್ಞಾವರ್ತಿಯಾಗಿ ವರ್ತಿಸಿರುವ ಬಗೆಯನ್ನು ತಿಳಿಸಿದ್ದಾರೆ. ಆದರೆ ಸಿ.ಹಯವದನರಾವ್ ಅವರು ದಿವಾನ್ ಪೂರ್ಣಯ್ಯನನ್ನು ಹೇಗೆ ತತ್‌ಕ್ಷಣಕ್ಕೆ ತಕ್ಕಂತೆ ತಮ್ಮ ನಿಷ್ಠೆಯ ಬಣ್ಣವನ್ನು ಬದಲಾಯಿಸಿದರು ಎಂಬುದನ್ನು ವಿಚಾರ ಮಾಡುವುದಿಲ್ಲ. ಬರಹಗಾರರು ದಿವಾನ್ ಪೂರ್ಣಯ್ಯ ಅವರ ಜಾತಿಗೆ ಸೇರಿದವರು ಎಂಬ ಕಾರಣವಿರಬಹುದು! ಅಲ್ಲದೇ ಮೈಸೂರು ಚರಿತ್ರೆಯ ಬಗೆಗೆ ಬರೆದಿರುವ ಯಾವ ಬರಹಗಾರರೂ ಪೂರ್ಣಯ್ಯ

ಅವರ ಸಮಯ ಸಾಧಕತನ, ಜಾತಿವಾದ, ಸ್ವಜನಪಕ್ಷಪಾತ ಮತ್ತು ಸ್ವಕೇಂದ್ರಿತ ಆಡಳಿತದ ಬಗೆಗೆ ಉಸಿರೆತ್ತುವುದಿಲ್ಲ ಎಂದು ಎಸ್.ಚಂದ್ರಶೇಖರ್ ಅವರು ಹೇಳಿರುವ ಮಾತುಗಳು ಇಲ್ಲಿ ಮುಖ್ಯವಾಗಿವೆ.[೩೭] ಆದರೆ ವೆಂಕಟಸುಬ್ಬಾಶಾಸ್ತ್ರಿ ಅವರು 'ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ ಅಂಡರ್ ಸರ್ ಮಾರ್ಕ್ ಕಬ್ಬನ್' ಎಂಬ ಕೃತಿಯಲ್ಲಿ ಪೂರ್ಣಯ್ಯ ಅವರ ಬಗೆಗೆ ವಿಮರ್ಶಾತ್ಮಕವಾಗಿ ಬರೆದಿರುವುದನ್ನು ನೋಡಬಹುದು.

ಸಾಮ್ರಾಜ್ಯಶಾಹಿ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಕ್ರೂರ ತೆರಿಗೆ ನೀತಿಯನ್ನು ಪ್ರತಿಭಟಿಸಿ, ವ್ಯಾಪಕ ಹೋರಾಟ ನಡೆಸಿದ ೧೮೩೧ರ ನಗರ ರೈತದಂಗೆಯನ್ನು ಹಯವದನ ರಾವ್ ಅವರು ಗ್ಯಾಸೆಟಿಯರ್‌ನಲ್ಲಿ ವಿಸ್ತಾರವಾಗಿ ತಿಳಿಸದೇ ಮೇಲ್ನೋಟಕ್ಕೆ ವಿಚಾರವನ್ನು ತಿಳಿಸುತ್ತಾರೆ. ಇಲ್ಲಿನ ರೈತರು ಒಂದು ನಿಗದಿತ ಸಮಯದಲ್ಲಿ ತೆರಿಗೆ ಪಾವತಿಸಲಿಲ್ಲ. ಈ ದಂಗೆಯ ಒಳ ಮತ್ತು ಹೊರ ಕಾರಣಗಳೇನು ಎಂಬ ಪ್ರಶ್ನೆಯನ್ನು ತಿಳಿಯುವ ಪ್ರಯತ್ನ ಮಾಡುವುದಿಲ್ಲ. ಈ ದಂಗೆಯಲ್ಲಿ ಮುಂಚೂಣಿಯಲ್ಲಿದ್ದ ನಾಯಕರ ಹೆಸರುಗಳನ್ನು ಮತ್ತು ಅವರ ಜಾತಿಯನ್ನು ರೈಸ್ ಅವರು ಸ್ಪಷ್ಟವಾಗಿ ಹೆಸರಿಸುತ್ತಾರೆ. ಆದರೆ ಹಯವದನರಾವ್ ಅವರು ತಮ್ಮ ಭ್ರಷ್ಟತೆ, ಜನವಿರೋಧಿ ನೀತಿಯಿಂದ ದಂಗೆಗೆ ಕಾರಣವಾದ ಅಧಿಕಾರಿಗಳ ಹೆಸರು ಮತ್ತು ಜಾತಿಗಳನ್ನು ಮಾತ್ರ ಗೌಪ್ಯವಾಗಿಡುತ್ತಾರೆ. ಇದು ಹಯವದನರಾವ್ ಅವರ ಜಾತಿವಾದಿಯ ಲಕ್ಷಣವನ್ನು ತೋರಿಸುತ್ತದೆ(ಪು.೨೮೬೬-೨೮೭೦). ಅಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಬ್ರಾಹ್ಮಣ್ಯ ಎಂಬ ಐಡೆಂಟಿಟಿ ಹೇಗೆ ಕೆಲಸ ಮಾಡುತ್ತಿತ್ತು ಎಂಬುದು ಮುಖ್ಯ. ವಿಲ್ಕ್ಸ್ ಈ ದಂಗೆಯ ಬಗೆಗೆ ಒಡೆಯರು ಮತ್ತು ಅಧಿಕಾರಿಗಳೇ ಕಾರಣ ಎಂದು ವಿವರಿಸಿರುವುದನ್ನು ಉಲ್ಲೇಖಿಸುವ ರಾವ್ ಅವರು ಒಡೆಯರು ಮತ್ತು ಅಧಿಕಾರಿಗಳ ಅನೀತಿಯೇ ದಂಗೆಗೆ ಕಾರಣ ಎನ್ನುವ ಅಂಶವನ್ನು ಪ್ರಸ್ತಾಪಿಸುವುದೇ ಇಲ್ಲ. ನಗರದಂಗೆಯಿಂದಾಗಿ ಒಡೆಯರ ಅಧಿಕಾರವನ್ನು ಬ್ರಿಟಿಷರು ಹಿಂತೆಗೆದುಕೊಂಡು ಕಮೀಷನರುಗಳ ಆಳ್ವಿಕೆಗೆ ಒಳಪಡಿಸಿದರು. ಹಾಗೆಯೇ ಕಮೀಷನರುಗಳಾದ ಮಾರ್ಕ್ ಕಬ್ಬನ್ ಮತ್ತು ಎಲ್.ಬಿ.ಬೌರಿಂಗ್ ಅವರು ತಮ್ಮ ಆಡಳಿತದ ಅನುಕೂಲಕ್ಕಾಗಿ ಅಭಿವೃದ್ಧಿ ನೆಪದಲ್ಲಿ ಕಾನೂನುರಹಿತವಾಗಿ ಹೊಸ ಹೊಸ ಪದ್ಧತಿಗಳನ್ನು ಜಾರಿಗೆ ತಂದರು ಎಂಬುದು ಗಮನಿಸಬೇಕಾದ ಮುಖ್ಯ ಸಂಗತಿ.

೧೮೩೧ರಲ್ಲಿ ಪುನಃ ಅಧಿಕಾರವನ್ನು ಒಡೆಯರಿಗೆ ನೀಡಿದ್ದು ಕೂಡ ಒಡೆಯರ ವಂಶಸ್ಥರ 'ಶೌರ್ಯ ಸಾಹಸದ ಹೋರಾಟದಿಂದಾಗಿ' ಎಂದೇ ಹೇಳುತ್ತಾರೆ. ಈ ಶೌರ್ಯ ಸಾಹಸವೇನೆಂದು ಎಲ್ಲೂ ವಿವರಿಸುವುದಿಲ್ಲ. ಐವತ್ತು ವರ್ಷಕಾಲ(೧೮೩೧-೧೮೮೧) ಒಡೆಯರ ವಂಶಸ್ಥರು ಬ್ರಿಟಿಷರಿಗೆ ಡೊಗ್ಗು ಸಲಾಮು ಹೊಡೆಯುತ್ತಾ ದೈನ್ಯ ಸ್ಥಿತಿ ತಲುಪಿ ಅವರನ್ನು ಬೇಡಿಕೊಳ್ಳದೇ ಗತ್ಯಂತರವಿರಲಿಲ್ಲ. ಈ ಬೇಡಿಕೊಳ್ಳುವುದನ್ನೇ 'ಶೌರ್ಯ ಸಾಹಸದ ಹೋರಾಟ'ವೆಂದು ಚರಿತ್ರೆಕಾರರು ವ್ಯಾಖ್ಯಾನಿಸಿದಂತಿದೆ.'[೩೮] ಇದನ್ನು ಗಮನಿಸಿದಾಗ ಪ್ರಭುತ್ವಕ್ಕೆ ಪೂರಕವಾಗಿ ಪ್ರತಿಯೊಂದನ್ನು ಸಮರ್ಥಿಸಿ ವಿಚಾರ ತಿಳಿಸಿರುವುದನ್ನು ನೋಡಬಹುದು.

ಸಾಮ್ರಾಜ್ಯಶಾಹಿ ಆಡಳಿತದ ಅನುಕೂಲಕ್ಕಾಗಿ ಮೊದಲನೆಯ ಮಹಾಯುದ್ಧದಲ್ಲಿ ಬ್ರಿಟಿಷರು ಮೈಸೂರಿನ ಸೈನಿಕರನ್ನು ಯಾವ ರೀತಿಯ ರಿಯಾಯಿತಿಯಲ್ಲಿ ಬಳಸಿಕೊಂಡರು ಎಂಬುದನ್ನು

ಇಲ್ಲಿ ಗಮನಿಸಬಹುದು(ಪು.೩೦೪೪–೩೦೪೫). ಆಡಳಿತದಲ್ಲಿ ಕೈಗೊಂಡಂತಹ ಕಾರ್ಯಗಳಿಗೆ ಈ ಅಂಶಗಳು ನೆರವಾಗಿವೆ. ೧೮೮೧ರ ನಂತರ ಮೈಸೂರಿನಲ್ಲಾದ ರಾಜಕೀಯ–ಸಾಮಾಜಿಕ ಸ್ಥಿತ್ಯಂತರದ ಕಡೆಗೆ ಗಮನ ಹರಿಸಿಲ್ಲ. ದಿವಾನ ಹುದ್ದೆಗಾಗಿ ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ಹೋರಾಟ, ಬ್ರಾಹ್ಮಣೇತರ ಅಥವಾ ಹಿಂದುಳಿದ ವರ್ಗಗಳ ಚಳವಳಿ ಹಾಗೂ ದಲಿತ ಚಳವಳಿಗಳ ವಿಷಯಗಳನ್ನು ತಿಳಿಸಿಲ್ಲ. ಆದರೆ ಹಿಂದುಳಿದ ವರ್ಗಗಳ ಮತ್ತು ನಿಮ್ನ ವರ್ಗಗಳ ಕಮಿಟಿ ರಚಿಸಿದ್ದರ ವಿವರಗಳಿವೆ(ಪು.೩೦೫೨–೫೩). ರೈತ, ಕಾರ್ಮಿಕ ಮತ್ತು ದಮನಕಾರಿ ಪಾಳೇಗಾರಿ ಪ್ರವೃತ್ತಿಗಳ ನಡುವಿನ ಸಂಘರ್ಷವಾಗಲೀ ಇವರ ಬರವಣಿಗೆಯಲ್ಲಿ ಕಾಣಸಿಗುವುದಿಲ್ಲ.

ಮೂರನೆಯ ಸಂಪುಟದಲ್ಲಿ ಆರ್ಥಿಕತೆಗೆ ಸಂಬಂಧಿಸಿದ ವಿವರಗಳನ್ನು ತಿಳಿಸಿರುವುದನ್ನು ನೋಡಬಹುದು. ಸಾಮ್ರಾಜ್ಯಶಾಹಿ ಧೋರಣೆಯ ಹಿಂದಿರುವ ಉದ್ದೇಶಕ್ಕಾಗಿ ಹಂತಹಂತವಾಗಿ ಯಾವ ರೀತಿಯ ಆರ್ಥಿಕಾಭಿವೃದ್ಧಿಯ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು ಎಂಬುದನ್ನು ಈ ಸಂಪುಟದಲ್ಲಿ ವಿವರಿಸಿದ್ದಾರೆ. ಆರ್ಥಿಕ ಸಮ್ಮೇಳನದ ರೂಪರೇಷೆಗಳು, ಕೈಗೊಂಡ ಪ್ರಗತಿ ಕಾರ್ಯಗಳನ್ನು ತಿಳಿಸಿದ್ದಾರೆ. ಕೃಷಿ ಭೂಮಿಯ ಫಲವತ್ತತೆ, ಮಣ್ಣಿನ ವಿಧಗಳು, ಬೆಳೆಗಳು, ಒಣಪ್ರದೇಶ, ಹವಾಮಾನ, ಋತುಗಳು, ಕೃಷಿ ಸಲಕರಣೆಗಳು, ಗೊಬ್ಬರ, ಕೃಷಿ ಬ್ಯಾಂಕುಗಳು, ಸಹಕಾರ–ಸಂಘಗಳು, ಕೃಷಿಗಾಗಿ ಸಾಲ, ನೀರಾವರಿ ವ್ಯವಸ್ಥೆ, ಅಣೆಕಟ್ಟುಗಳು, ಅರಣ್ಯಸಂಪತ್ತು, ಕಾಡು ಬುಡಕಟ್ಟುಗಳು, ಗಣಿ ಉದ್ಯಮಗಳು, ಕೋಲಾರದ ಚಿನ್ನದ ಗಣಿ, ಕಬ್ಬಿಣದ ಅದಿರು, ಕಬ್ಬಿಣದ ಕಾರ್ಖಾನೆಗಳು, ಕಾರ್ಖಾನೆಗಳ ತೆರಿಗೆ, ವಿದ್ಯುಚ್ಛಕ್ತಿ, ವಿದ್ಯುಚ್ಛಕ್ತಿಯ ಸರಬರಾಜು, ಹತ್ತಿ ಮತ್ತು ಕಾಫಿ ಉದ್ಯಮಗಳು ಪ್ರಮುಖವಾದವು. ಈ ಹತ್ತಿ ಮಿಲ್‌ಗಳು ವ್ಯಾಪಾರ ವಹಿವಾಟು ನಡೆಸುತ್ತಿದ್ದವು ಎಂಬ ವಿವರಗಳಿವೆ. ಇಂದು ಜಾಗತೀಕರಣದ ನೆಲೆಯಲ್ಲಿ ಮುಚ್ಚಿರುವ ಬಿನ್ನಿ ಮಿಲ್, ಮಿನರ್ವ ಮಿಲ್‌ಗಳ ವ್ಯಾಪಾರ ವಹಿವಾಟುಗಳ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ(ಪು.೨೬೯–೨೭೦). ಬೆಂಗಳೂರು, ಕೋಲಾರ ಮುಂತಾದ ಕಡೆ ಇರುವ ಕಾರ್ಖಾನೆಗಳ ವಿವರಗಳನ್ನು ತಿಳಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಇರುವ ಕಚ್ಚಾವಸ್ತುಗಳು ಹೇಗೆ ರಫ್ತಾಗುತ್ತಿದ್ದವು ಎಂಬುದು ಚರ್ಚಿಸಬೇಕಾದ ವಿಷಯ. ಇದಕ್ಕಾಗಿ ರಸ್ತೆ, ಸಾರಿಗೆ, ರೈಲ್ವೆ ವ್ಯವಸ್ಥೆಯನ್ನು ಉತ್ತಮಪಡಿಸಲಾಯಿತು ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಮೈಸೂರಿನ ಸುತ್ತಮುತ್ತಲಿನ ಬುಡಕಟ್ಟುಗಳಾದ ಜೇನು ಕುರುಬ, ಬೆಟ್ಟಕುರುಬ, ಸೋಲಿಗರು ವಿಶೇಷವಾಗಿದ್ದು, ಅವರ ಮೂಲಕಸುಬಿನ ಬಗೆಗೆ ತಿಳಿಸಿದ್ದಾರೆ. ಸ್ಥಳೀಯ ವ್ಯಾಪಾರಿ ವರ್ತಕರಾದ ಬಣಜಿಗರು, ಮಾರ್‍ವಾಡಿಗಳ ಬಗೆಗೆ ವಿವರಗಳನ್ನು ನೋಡಬಹುದು.

ವ್ಯಾಪಾರವು ಪ್ರಾಚೀನ ಕಾಲದಲ್ಲಿ ಹೇಗೆ ನಡೆಯುತ್ತಿತ್ತು ಎಂಬುದರ ವಿವರಗಳನ್ನು ತಿಳಿಸುತ್ತಾ, ೧೮೮೧ರ ನಂತರ ವ್ಯಾಪಾರವು ಅಭಿವೃದ್ಧಿಯ ನೆಲೆಯಲ್ಲಿ ಶೋಷಣೆಯಾಗಿ ಭಾರತದ ಸಂಪತ್ತು ಇಂಗ್ಲೆಂಡಿಗೆ ರವಾನೆ ಆಯಿತು ಎಂಬುದರ ವಿವರಗಳಿಲ್ಲ. ಅಭಿವೃದ್ಧಿಯ ನೆಲೆಯಲ್ಲಿಯೇ ಪ್ರತಿಯೊಂದನ್ನು ವಿವರಿಸುತ್ತಾರೆ. ತಾಲೂಕಿನ ಮುಖ್ಯ ಸ್ಥಳಗಳಲ್ಲಿ ಸಂತೆಗಳ ಮೂಲಕ ವ್ಯಾಪಾರ ವಹಿವಾಟು ನಡೆಯುತ್ತಿದದ್ದು ಪ್ರಮುಖವಾಗಿತ್ತು. ಅನಂತರದ ಕಾಲದಲ್ಲಿ

ಪ್ರತಿಯೊಂದು ಕಚ್ಚಾವಸ್ತುಗಳು, ಸಿದ್ಧಗೊಂಡ ವಸ್ತುಗಳ ರೂಪವಾಗಿ ಮಾರುಕಟ್ಟೆಯಲ್ಲಿ ಅಧಿಕ ಬೆಲೆಯಲ್ಲಿ ಮಾರಾಟವಾಗುವ ವ್ಯವಸ್ಥೆ ಕಂಡುಬಂದಿತು. ಅಂದರೆ ಜನರ ಆರ್ಥಿಕತೆಯ ಸ್ಥಿತಿಯನ್ನು ಗಮನಿಸಿದಾಗ ಅವರ ಮುಖ್ಯ ಕಸುಬು ಕೃಷಿ ಆಗಿತ್ತು. ವ್ಯಾಪಾರದ ಉದ್ದೇಶಗಳಿಗೆ ಈ ಆರ್ಥಿಕ ಯೋಜನೆಗಳನ್ನು ರೂಪಿಸಿದರು. ವ್ಯಾಪಾರ ಮತ್ತು ವಾಣಿಜ್ಯಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದರು. ಈ ನಿಟ್ಟಿನಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಭಾರತದ ಸಂಪತ್ತು ಇಂಗ್ಲೆಂಡಿಗೆ ಹೇಗೆ ಹೋಯಿತು ಎಂಬುದು ಮುಖ್ಯ.

ನಾಲ್ಕನೆಯ ಸಂಪುಟದಲ್ಲಿ ಆಡಳಿತಾತ್ಮಕ ವಿವರಗಳನ್ನು ತಿಳಿಸುತ್ತಾರೆ. ಮೈಸೂರಿನ ಒಡೆಯರು ಕೈಗೊಂಡ ಕಾರ್ಯ, ಆಡಳಿತಾತ್ಮಕ ಸುಧಾರಣೆಗಳನ್ನು ತಿಳಿಸಿರುವುದನ್ನು ನೋಡಬಹುದು. ಚಿಕ್ಕದೇವರಾಜ ಒಡೆಯರು, ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಕಂದಾಯ ವ್ಯವಸ್ಥೆಯಲ್ಲಿ ಬದಲಾವಣೆಯನ್ನು ತಂದರು. ವ್ಯಾಪಾರದಲ್ಲಿ ಸಾಲ ಕೊಡುವ ಪದ್ಧತಿಯನ್ನು ಜಾರಿಗೆ ತಂದರು. ಟಿಪ್ಪು ಸುಲ್ತಾನನ ಕಾಲದಲ್ಲಿ ಮದ್ಯಪಾನ ನಿಷೇಧದಿಂದ ಸರ್ಕಾರಿ ಬೊಕ್ಕಸಕ್ಕೆ ಆದ ವರಮಾನ ನಷ್ಟವನ್ನು ತುಂಬಿಕೊಳ್ಳಲು ದೇವಾಲಯಗಳಲ್ಲಿದ್ದ ಹಣವನ್ನು ಮುಟ್ಟುಗೋಲು ಹಾಕಿಕೊಂಡನು. ೧೭೯೯ರ ಹೊತ್ತಿಗೆ ಮೈಸೂರು ಪ್ರಾಂತ್ಯದಲ್ಲಿ ಎರಡು ದೇವಾಲಯಗಳು ಮಾತ್ರ ತೆರೆದಿದ್ದವು ಎಂದು ಸಿ.ಹಯವದನರಾವ್ ಅವರು ಹೇಳಿದ್ದಾರೆ (ಪು.೨೫). ಈ ನಿಟ್ಟಿನಲ್ಲಿ ಹೈದರ್ ಮತ್ತು ಟಿಪ್ಪುವನ್ನು ಮತಾಂಧರು ಎಂದು ಕರೆಯುತ್ತಾರೆ. ಆದರೆ ಹೈದರ್‌ನಾಗಲೀ, ಟಿಪ್ಪುವೇ ಅಗಲೀ ಮತಾಂಧರನಾಗಿರಲು ಸಾಧ್ಯವೇ ಇರಲಿಲ್ಲ ಎಂಬುದಕ್ಕೆ ಶೃಂಗೇರಿ ಮಠದಲ್ಲಿ ದಾಖಲೆಗಳಿವೆ. 'ಹಿಂದೂಧರ್ಮ ಸಾಮ್ರಾಜ್ಯ ಸಂಸ್ಕೃತಿಗಳ ಮಹಾರಕ್ಷಕರೆಂದು' ಹಾಡಿ ಹೊಗಳುವ ಮರಾಠ ಪೇಶ್ವೆಗಳ ಸರದಾರ ಪರಶುರಾಮ ಬಾಹು, ಶೃಂಗೇರಿ ಮಠ, ದೇವಸ್ಥಾನಗಳಲ್ಲಿನ ಸಂಪತ್ತನ್ನು ದೋಚಿಕೊಂಡು ಹೋದಾಗ ದೇವಸ್ಥಾನಗಳಿಗೆ ಕಳೆದುಕೊಂಡಷ್ಟು ಹಣವನ್ನು ತನ್ನ ಬೊಕ್ಕಸದಿಂದ ಕೊಡಿಸಿದ್ದಕ್ಕೆ ಶೃಂಗೇರಿ ಮಠದ ದಾಖಲೆಗಳ ವಿವರಗಳನ್ನು ನೋಡಬಹುದು.[೬] ಇಲ್ಲಿ ಹೈದರ್ ಮತ್ತು ಟಿಪ್ಪು ಶೃಂಗೇರಿ ಮಠಕ್ಕೆ ದಾನ-ದತ್ತಿಗಳನ್ನು ನೀಡಿದ್ದರ ಬಗೆಗೆ ದಾಖಲೆಗಳನ್ನು ಗಮನಿಸಬಹುದು. ಅಲ್ಲದೇ ಹೈದರಾಲಿಯು ದೇವಾಲಯಗಳನ್ನು ನಾಶ ಮಾಡಿ ಅದರಲ್ಲಿರುವ ಸಂಪತ್ತನ್ನು ದೋಚಿಕೊಂಡು ಹೋದನು ಎಂದು ವಿವರಿಸುತ್ತಾರೆ. ಆಶ್ಚರ್ಯವೆಂದರೆ ಸಿ.ಹಯವದನರಾವ್ ಅವರೇ ಸ್ವತಃ ತಮ್ಮ ಗ್ರಂಥದಲ್ಲಿ ಹೈದರ್‌ನ ಸೇನೆ ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಶ್ರೀರಂಗ ದೇವಾಲಯದಲ್ಲಿ ಸ್ವತಃ ಹೈದರನೇ ಅರ್ಚಕರು ಬರುವವರೆಗೆ ಕಾಯ್ದಿದ್ದ ವಿವರಗಳನ್ನು ನೀಡುತ್ತಾರೆ(ಹಿಸ್ಟರಿ ಆಫ್ ಮೈಸೂರ್, ಸಂ.೩, ಪು.೪೧೨). ಇವರ ವಿವರಗಳು ಈ ಗ್ಯಾಸೆಟಿಯರ್‌ನ ಸಂಪುಟದ ಪುಟಗಳಲ್ಲಿ ಹಾಗೆಯೇ ಉಳಿಯದೇ ಹೈದರ್ ಮತ್ತು ಟಿಪ್ಪು ಅವರನ್ನು ಮತಾಂಧ, ಕ್ರೂರಿಗಳೆಂದು ಕರೆದಿರುವುದನ್ನು ನೋಡಬಹುದು. ಈ ನಿಟ್ಟಿನಲ್ಲಿ ಪೂರಕ ಅಂಶಗಳನ್ನು ಪರಿಗಣನೆ ಮಾಡದೇ ಸ್ಪಷ್ಟ ನಿಲುವನ್ನು ತಿಳಿಯುವುದು ಸಮಂಜಸವಲ್ಲವಾಗಿದೆ. ಆದರೆ ಇಲ್ಲಿ ಹೈದರ್ ಆಗಲೀ, ಟಿಪ್ಪು ಆಗಲೀ ಮಾಡಿದ ಕೃತ್ಯಗಳಿಗೆ ಅಲ್ಲಿನ ರಾಜಕೀಯ ತುರ್ತುಗಳೇ ಕಾರಣವೆಂಬುದನ್ನು ತಿಳಿಯಬಹುದು.

ಅಧಿಕಾರ ಸ್ವೀಕರಿಸಿದ ಮುಮ್ಮಡಿ ಕೃಷ್ಣರಾಜ ಒಡೆಯರು ಬ್ರಿಟಿಷರ ಹಿಡಿತದಲ್ಲಿಯೇ ಆಡಳಿತವನ್ನು ನಡೆಸುತ್ತಿದ್ದರು. ಕೃಷಿತೆರಿಗೆಯನ್ನು ಪ್ರದೇಶಗಳಿಗುಣವಾಗಿ ವಿಧಿಸಲಾಗಿತ್ತು(ಪು.೪೫-೪೬). ಅಮಲ್ದಾರರು ಜಮೀನಿಗೆ ವಿಧಿಸಿದ್ದ ತೆರಿಗೆಯು ಹಿಂದಿಗಿಂತ ಹೆಚ್ಚಿಗೆ ಇತ್ತು. ಕಂದಾಯ ವಸೂಲಿಗೆ ಅಮಲ್ದಾರರು ರೈತರನ್ನು ಅಮಾನುಷವಾಗಿ ಹಿಂಸೆಗೆ ಒಳಪಡಿಸಿದರು. ಇದರಿಂದ ಬೇಸತ್ತ ರೈತರು ಎಲ್ಲಾ ಕಡೆ ದಂಗೆ ಎದ್ದರು. ಇಲ್ಲಿ ಬೂದಿಬಸಪ್ಪನ ನಗರದಂಗೆ ಪ್ರಮುಖವಾದುದು. ದಂಗೆಯಿಂದ ಬ್ರಿಟಿಷರಿಗೆ ಅಪಾರ ನಷ್ಟ ಉಂಟಾಯಿತು. ಸಿ.ಹಯವದನರಾವ್ ಅವರು ಈ ದಂಗೆಯಲ್ಲಿ ಭಾಗವಹಿಸಿದ ನಾಯಕರ ಹೆಸರನ್ನು ತಿಳಿಸಿರುತ್ತಾರೆಯೇ ಹೊರತು ಈ ದಂಗೆಗೆ ಕಾರಣರಾದ ಭ್ರಷ್ಟ ಅಧಿಕಾರಿಗಳ ಹೆಸರು ಮತ್ತು ಜಾತಿಗಳನ್ನು ತಿಳಿಸುವುದಿಲ್ಲ. ಕಂದಾಯ ಪ್ರಮಾಣ ಯಾವ ರೀತಿ ಇತ್ತು, ಕಾನೂನು ವ್ಯವಸ್ಥೆಯಲ್ಲಿ ಮೇಲ್ಜಾತಿ ಮತ್ತು ಕೆಳಜಾತಿಗೆ ವಿಧಿಸುವ ಕಾನೂನು ರೀತಿಯನ್ನು ತಿಳಿಸಿದ್ದಾರೆ. ನಗರದಂಗೆಯಿಂದ ಬ್ರಿಟಿಷರು ಒಡೆಯರಿಗೆ ನೀಡಿದ್ದ ಅಧಿಕಾರವನ್ನು ಹಿಂತೆಗೆದುಕೊಂಡು ಕಮೀಷನರುಗಳ ಆಳ್ವಿಕೆಗೆ ಒಳಪಡಿಸಿದರು ಎಂಬುದರ ವಿವರಗಳನ್ನು ನೋಡಬಹುದು.

ಕಬ್ಬನ್ ಮತ್ತು ಬೌರಿಂಗ್ ಅವರು ಬ್ರಿಟಿಷ್‌ರ ಹಿತಾಸಕ್ತಿಗೆ ಅನುಗುಣವಾಗಿಯೇ ಇಲ್ಲಿನ ಆಡಳಿತವನ್ನು ನಡೆಸಿದರು ಎಂಬುದನ್ನು ಅನಾವರಣಗೊಳ್ಳುವುದು ಮುಖ್ಯ. ಮೈಸೂರಿನ ಪ್ರಗತಿಗೆ ಈ ಎಲ್ಲಾ ಕಾರ್ಯಗಳನ್ನು ಕೈಗೊಂಡರು ಎನ್ನುತ್ತಾರೆ. ಅಭಿವೃದ್ಧಿಯ ನೆಲೆಯಲ್ಲಿ ಶೋಷಣೆ ಎಂಬುದನ್ನು ತಿಳಿಸುವುದಿಲ್ಲ.

ಒಡೆಯರಿಗೆ ಪುನಃ ಅಧಿಕಾರ ಹಸ್ತಾಂತರವಾದಾಗ ನಿಯಮಗಳಿಗೆ ಅನುಗುಣವಾಗಿ ಆಡಳಿತ ನಡೆಸುವ ಪರಿಪಾಟ ಬೆಳೆಯಿತು. ಡೆಪ್ಯುಟಿ ಕಮೀಷನರ್, ಮ್ಯಾಜಿಸ್ಟ್ರೀಟೀವ್, ಹೋಬಳಿ ಮತ್ತು ಹಳ್ಳಿಗಳಲ್ಲಿನ ನ್ಯಾಯಾಡಳಿತ ವಿವರಗಳನ್ನು ನೋಡಬಹುದು. ಇಂದಿಗೂ ಈ ಪದಗಳು ಹಾಗೆಯೇ ಚಾಲ್ತಿಯಲ್ಲಿವೆ. ಅಮಲ್ದಾರರು, ಷೇಕ್‌ದಾರರು, ವಿಲೇಜ್ ಅಫೀಸರ್‌ಗಳು ಗ್ರಾಮಗಳ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ದಿವಾನರುಗಳ ಆಡಳಿತವು ಮುಖ್ಯವಾದುದು. ಶೇಷಾದ್ರಿ ಅಯ್ಯರ್ ಅವರನ್ನು ರೆವಿನ್ಯೂ ಟ್ರಿಬ್ಯುನಲ್, ಪಿ.ಎನ್.ಕೃಷ್ಣಮೂರ್ತಿ ಅವರನ್ನು ಅಸಿಸ್ಟೆಂಟ್ ಕಮೀಷನರನ್ನಾಗಿ ಕಂದಾಯದ ಆಡಳಿತಕ್ಕೆ ನೇಮಿಸಿದರು. ವಿ.ಪಿ.ಮಾಧವರಾವ್ ಅವರು ಕಮೀಷನರ್, ಅಮುಲ್ದಾರರು, ಶೇಕ್‌ದಾರರು, ವಿಲೇಜ್ ಆಫೀಸರ್ಸ್ ಎಂದು ಆಡಳಿತವನ್ನು ವಿಭಾಗಿಸಿದರು. ಟಿ. ಆನಂದರಾವ್ ಅವರು ಲೆಕ್ಕಪತ್ರದ ವಿಭಾಗ, ಮೈಸೂರು ಕೋ-ಅಪರೇಟಿವ್ ಸೊಸೈಟೀಸ್ ಆ್ಯಕ್ಟ್‌ನ್ನು ಜಾರಿಗೆ ತಂದರು. ವಿಶ್ವೇಶ್ವರಯ್ಯ ಅವರು ಹಳ್ಳಿಗಳ ಅಭಿವೃದ್ಧಿಗಾಗಿ ಕೈಗಾರಿಕೆಗಳ ಸ್ಥಾಪನೆ, ಆರ್ಥಿಕ ಸಮ್ಮೇಳನಗಳನ್ನು ಆರಂಭಿಸಿದರು(ಪು.೧೨೯-೧೩೨). ದಿವಾನ್ ಹುದ್ದೆಗಾಗಿ ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ಹೋರಾಟವನ್ನು ವಿವರಿಸುವುದಿಲ್ಲ. ಬ್ರಾಹ್ಮಣೇತರ ಚಳವಳಿಯ ಬಗೆಗೂ ಬೆಳಕು ಚೆಲ್ಲುವುದಿಲ್ಲ. ಕಾಂತರಾಜ್ ಅರಸು ಅವರು ಹಿಂದುಳಿದ ವರ್ಗಗಳಿಗೆ ಕೈಗೊಂಡ ಕಾರ್ಯಗಳನ್ನು ತಿಳಿಸಿದ್ದಾರೆ. ಹಿಂದುಳಿದ ವರ್ಗಗಳಿಗೆ ಉದ್ಯೋಗದಲ್ಲಿ ಮೀಸಲಾತಿಯನ್ನು ಒದಗಿಸಿದರು. ಭೂಮಿಯ ಕಂದಾಯ ನಿಗದಿಗಾಗಿ ಭೂ

ಅಳತೆಯ ಸ್ಥಾಪನೆ, ಬ್ರಾಹ್ಮಣರಿಗೆ ನೀಡುತ್ತಿದ್ದ ಇನಾಂ ಭೂಮಿಗಳನ್ನು ರದ್ದು ಪಡಿಸಲಾಯಿತು (ಪು.೧೬೨).

ಸಮಾಜಮುಖಿಯಾಗಿ ತುಳಿತಕ್ಕೆ ಒಳಪಟ್ಟ ವರ್ಗಗಳಿಗೆ ಮೊದಲ ಬಾರಿಗೆ ಶಿಕ್ಷಣ ನೀಡಿದ್ದರ ವಿವರಗಳನ್ನು ತಿಳಿಸಿದ್ದಾರೆ. ಪಂಚಮರಿಗೆ ಪಂಚಮ ಬೋರ್ಡಿಂಗ್ ಶಾಲೆಗಳನ್ನು ಪ್ರಾರಂಭಿಸಿ, ಹಾಸ್ಟೆಲ್ ಸೌಲಭ್ಯ ಮತ್ತು ವಿದ್ಯಾರ್ಥಿವೇತನ ನೀಡಿದ್ದರ ವಿವರಗಳನ್ನು ಇಲ್ಲಿ ನೋಡಬಹುದು. ಮಹಿಳೆಯರ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿ ಮಹಿಳೆಯರಿಗೂ ಪ್ರತ್ಯೇಕ ಶಾಲೆ ಮತ್ತು ವಿದ್ಯಾರ್ಥಿನಿಲಯಗಳು ಪ್ರಾರಂಭವಾದವು ಎಂಬ ವಿವರಗಳನ್ನು ಕಾಣಬಹುದು(ಪು.೫೭೩-೫೭೯). ಈ ನಿಟ್ಟಿನಲ್ಲಿ ಮೈಸೂರಿನ ಒಡೆಯರು ಕೃಷಿ, ನೀರಾವರಿ, ತಾಂತ್ರಿಕತೆ, ಹಣಕಾಸು, ಬ್ಯಾಂಕಿಂಗ್, ವೈದ್ಯಕೀಯ ಸೌಲಭ್ಯಗಳು, ಶಿಕ್ಷಣ ಇನ್ನೂ ಮುಂತಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು ಎಂಬುದರ ವಿವರಗಳನ್ನು ನೀಡುತ್ತಾ ಹೋಗುತ್ತಾರೆ. ಜನರಿಗೆ ಅನುಕೂಲವಾಗುವ ರೀತಿಯಲ್ಲಿ ಹೆಚ್ಚಿನ ಸೌಲಭ್ಯಗಳನ್ನು ನೀಡಲು ಆಡಳಿತದ ಸುಧಾರಣೆಯಲ್ಲಿ ಪಾರದರ್ಶಕತೆಯನ್ನು ಕಾಪಾಡಿಕೊಂಡರು ಎಂಬುದನ್ನು ಸಿ.ಹಯವದನರಾವ್ ಅವರು ಈ ಸಂಪುಟದಲ್ಲಿ ತಿಳಿಸಿರುವುದನ್ನು ನೋಡಬಹುದು. ಇಲ್ಲಿ ಮುಖ್ಯವಾಗಿ ಸಂಸ್ಥಾನದ ಎಲ್ಲಾ ರೀತಿಯ ಅಭಿವೃದ್ಧಿ ಕಾರ್ಯಗಳಿಗೆ ಚಾಲನೆ ನೀಡಲಾಯಿತು ಎಂಬುದರ ವಿವರಗಳನ್ನು ತಿಳಿಸಿದ್ದಾರೆಯೇ ಹೊರತು ಬ್ರಿಟಿಷರ ಹತೋಟಿಯಲ್ಲಿದ್ದ ಮೈಸೂರು ಸಂಸ್ಥಾನವು ಆರ್ಥಿಕ ಶೋಷಣೆಗೆ ಒಳಗಾಯಿತು ಎಂಬುದರ ವಿವರಗಳನ್ನು ತಿಳಿಸಿರುವುದಿಲ್ಲ. ಸಾಹಿತ್ಯಕ್ಕೆ ಸಂಬಂಧಿಸಿದಂತೆ ೧೯೧೮ರ ನಂತರ ಯಾವ ರಿತಿ ಬದಲಾವಣೆ ಆಯಿತು ಎಂಬುದನ್ನು ತಿಳಿಸಿದ್ದಾರೆ. ವರ್ನಾಕ್ಯುಲರ್ ಭಾಷೆಯ ಬಗೆಗೆ ತಿಳಿಸುತ್ತಾ ಭಾಷಾಂತರ ಕಾರ್‍ಯಗಳು ಪ್ರಾರಂಭವಾದವು. ರೈಸ್ ಅವರು ಮೊದಲೇ ಅವರ ಸಂಪುಟದಲ್ಲಿ ಸಾಹಿತ್ಯದ ಬೆಳವಣಿಗೆಯನ್ನು ಹಂತಹಂತವಾಗಿ ವಿವರಿಸಿದ್ದಾರೆ. ಅನಂತರ ಸಿ.ಹಯವದನರಾವ್ ಅವರು ಕೃತಿಗಳ ಪ್ರಕಟಣೆಗಳು ಹೇಗೆ ಪ್ರಾರಂಭವಾದವು ಎಂಬುದನ್ನು ತಿಳಿಸುತ್ತಾರೆ. ಮೈಸೂರಿನಲ್ಲಿ ಆರಂಭವಾದ ಸರ್ವೇ ಕಾರ್‍ಯಗಳತ್ತ ಗಮನ ಹರಿಸಿದಾಗ ಬುಕಾನನ್, ಬಿ.ಎಲ್.ರೈಸ್ ಅವರು ಸಂಗ್ರಹಿಸಿದ ಶಾಸನಗಳು ಪುರಾತತ್ವ ಆಕರಗಳ ವಿವರಗಳನ್ನು ತಿಳಿಸಿದ್ದಾರೆ(ಪು.೬೬೧).

ಮೈಸೂರು ಸಂಸ್ಥಾನವನ್ನು ಬ್ರಿಟಿಷ್ ಅಧಿಕಾರಿಗಳು ಎಂದೂ ಸುಪ್ತ ವೈರಿಯೆಂದೇ ಪರಿಗಣಿಸಿದ್ದರು. ಬ್ರಿಟಿಷ್ ಗೌರ್ನರ್ ಜನರಲ್ ನೀಡಿದ ಸಲಹೆ-ಸೂಚನೆಗಳಿಗೆ ಅನುಗುಣವಾಗಿ ಒಡೆಯರು ಅಧಿಕಾರವನ್ನು ನಡೆಸಬೇಕಾಗಿತ್ತು. ಮೈಸೂರು ಆರ್ಥಿಕವಾಗಿ ಸ್ವತಂತ್ರವಾಗುವುದು ಬ್ರಿಟಿಷರಿಗೆ ಇಷ್ಟವಿರಲಿಲ್ಲ. ಆದ್ದರಿಂದ ಉಪ್ಪು ಮತ್ತು ಶ್ರೀಗಂಧಗಳ ಮೇಲೆ ಬ್ರಿಟಿಷ್ ಸ್ವಾಮ್ಯವನ್ನು ಹೇರಲಾಯಿತು. ಪರೋಕ್ಷ ಆಡಳಿತದ ಸಮಯದಲ್ಲಿ ಸಂಪನ್ಮೂಲ ವರ್ಧನೆಗೆ ರಾಜ್ಯವು ಹೆಚ್ಚು ಪ್ರಯತ್ನ ಮಾಡಲು ಬ್ರಿಟಿಷ್ ನೀತಿ ಅವಕಾಶ ಕೊಡಲಿಲ್ಲ. ಇವರ ತೆರಿಗೆ ನೀತಿಯಿಂದ ವಸಾಹತು ಖಜಾನೆಗೆ ಆದಾಯ ಬಂದಿತು. ಆದರೆ ರೈತನಿಗೆ ಶೋಷಣೆ ಆಯಿತು. ವಸಾಹತು ಆಡಳಿತಕ್ಕೆ ಮುಖ್ಯವಾಗಿದ್ದುದು ಹೆಚ್ಚಿನ ವರಮಾನವನ್ನು ರೂಢಿಸಿಕೊಳ್ಳುವ ಕೆಲಸ. ಇವರ ಪ್ರತಿಯೊಂದು ಆಡಳಿತದಲ್ಲಿ ಬ್ರಿಟಿಷರ ಧೋರಣೆಯು ಎದ್ದು ಕಾಣುವಂತಹ ಸ್ಥಿತಿಯಲ್ಲಿ

ಸಿ.ಹಯವದನರಾವ್ ಅವರು ಒಡೆಯರ ಮೇಲಿನ ಗೌರವದಿಂದ ಸಂಸ್ಥಾನದಲ್ಲಿ ಇಷ್ಟೆಲ್ಲ ಪ್ರಗತಿಪರ ಕಾರ್ಯಗಳು ಜಾರಿಯಾದವು ಎಂಬುದರ ವಿವರಗಳನ್ನೇ ತಿಳಿಸುತ್ತಾರೆ.

ಸಿ.ಹಯವದನರಾವ್ ಅವರು ಮೈಸೂರು ಗ್ಯಾಸೆಟಿಯರ್‌ನ ಐದನೇ ಸಂಪುಟವನ್ನು ಎರಡು ಭಾಗಗಳಾಗಿ ವಿಂಗಡಿಸಿದ್ದಾರೆ. ಮೊದಲನೇ ಭಾಗದಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ ಬೆಂಗಳೂರು, ಕೋಲಾರ, ತುಮಕೂರು, ಮೈಸೂರು ಜಿಲ್ಲೆಗಳ ವಿವರಗಳನ್ನು ತಿಳಿಸುತ್ತಾರೆ. ಎರಡನೇ ಭಾಗದಲ್ಲಿ ಹಾಸನ, ಕಡೂರು, ಶಿವಮೊಗ್ಗ, ಚಿತ್ರದುರ್ಗ, ಜಿಲ್ಲೆಗಳ ವಿವರಗಳನ್ನು ತಿಳಿಸುತ್ತಾರೆ. ಬಿ.ಎಲ್.ರೈಸ್ ಅವರು ತಾವು ರಚಿಸಿದ ಮೈಸೂರು ಗ್ಯಾಸೆಟಿಯರ್ ಸಂಪುಟದಲ್ಲಿ ಧರ್ಮ, ಜನತೆ, ಭಾಷೆ, ಸಾಹಿತ್ಯ, ಆಡಳಿತ, ಆರ್ಥಿಕತೆ, ಸ್ಥಳೀಯ ಆಡಳಿತ, ಶಿಕ್ಷಣ ಈ ವಿವರಗಳು ಜಿಲ್ಲೆಯಿಂದ ಜಿಲ್ಲೆಗೆ ಬದಲಾಗುವುದರಿಂದ ಅವುಗಳನ್ನು ಪ್ರಸ್ತಾಪಿಸದೇ ಬಿಡಲಾಗಿತ್ತು. ಈ ಜಿಲ್ಲೆಗಳ ವಿಷಯಗಳಲ್ಲಿ ರೈಸ್ ಅವರು ಬಿಟ್ಟ ಕೆಲವು ವಿಷಯಗಳನ್ನು ಸೇರಿಸಿ ವಿಸ್ತೃತವಾಗಿ ವಿವರಿಸಿದ್ದಾರೆ. ಈ ಜಿಲ್ಲೆಗಳ ಅಕ್ಕಪಕ್ಕದ ಗಡಿಗಳು, ಬೆಟ್ಟ-ಗುಡ್ಡಗಳು, ಭೌಗೋಳಿಕತೆ, ಖನಿಜ ಸಂಪತ್ತು, ಅರಣ್ಯಸಂಪತ್ತು, ಪ್ರಾಣಿಪಕ್ಷಿಗಳು, ವಾತಾವರಣ, ಜನರು, ಜನರ ಸಂಸ್ಕೃತಿ, ಆಚರಣೆಗಳು, ಜಾತಿ ಆಧಾರಿತ ವೃತ್ತಿಗಳು ಮೊದಲಾದವುಗಳನ್ನು ವಿವರಣಾತ್ಮಕ ರೀತಿಯಲ್ಲಿ ತಿಳಿಸಿದ್ದಾರೆ. ಕ್ರೈಸ್ತ ಮಿಷನರಿಗಳು ಕೈಗೊಂಡ ಸಾಮಾಜಿಕ ಕಾರ್ಯಗಳಾದ ಮೂಲಭೂತ ಸೌಲಭ್ಯಗಳೊಂದಿಗೆ ಶಿಕ್ಷಣ, ವೈದ್ಯಕೀಯ ಸೌಲಭ್ಯಗಳ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಇತಿಹಾಸ ಪುರಾತತ್ವವನ್ನು ತಿಳಿಸುತ್ತಾ ಆಯಾಯ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದ ಪ್ರಾಚೀನ ಮನೆತನಗಳು, ಒಡೆಯರು, ಬ್ರಿಟಿಷರ ಏಳಿಗೆ ಮೊದಲಾದ ಅಂಶಗಳನ್ನು ಆಯಾಯ ಜಿಲ್ಲೆಗೆ ತಕ್ಕಂತೆ ವಿವರಿಸುತ್ತಾರೆ. ಅಭಿವೃದ್ಧಿಯ ನೆಲೆಯಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ ಮತ್ತು ವಾಣಿಜ್ಯ ಸಾರಿಗೆ-ಸಂಪರ್ಕಗಳ ವಿವರಗಳನ್ನು ತಿಳಿಸುತ್ತಾರೆ.

ಆಡಳಿತಾತ್ಮಕ ಕೈಗೊಂಡ ಕಂದಾಯ, ನ್ಯಾಯವ್ಯವಸ್ಥೆ, ಪೊಲೀಸ್ ಮತ್ತು ಕಾರಾಗೃಹಗಳು, ಸ್ಥಳೀಯ ಮತ್ತು ಪುರಸಭೆಗಳು, ಶಿಕ್ಷಣ, ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಿದ್ದರ ವಿವರಗಳನ್ನು ಅಂಕಿ-ಅಂಶಗಳ ಸಮೇತ ತಿಳಿಸಿದ್ದಾರೆ. ಕೊನೆಗೆ ಆಯಾಯ ಜಿಲ್ಲೆಯಲ್ಲಿ ಬರುವ ಸ್ಥಳಗಳ ಪ್ರಾಮುಖ್ಯತೆಯನ್ನು ಕುರಿತು ತಿಳಿಸಿರುವುದು ವಿಶೇಷವಾಗಿದೆ. ಪ್ರತಿ ಜಿಲ್ಲೆಗೆ ಸಂಬಂಧಿಸಿದಂತೆ ಜಿಲ್ಲೆಯ ನಕಾಶೆಯನ್ನು ಕೊಟ್ಟಿದೆ. ಚರಿತ್ರೆಯ ವಿಭಾಗದಲ್ಲಿ ಆಯಾ ಜಿಲ್ಲೆಗಳನ್ನು ಆಳಿದ ರಾಜಮನೆತನಗಳ, ಆಡಳಿತಗಾರರ ಬಗೆಗೆ ಹೆಚ್ಚಿನ ವಿವರಗಳಿವೆ. ಉದಾಹರಣೆಗೆ ಬೆಂಗಳೂರು ಜಿಲ್ಲೆಯಲ್ಲಿ ಗಂಗರು, ರಾಷ್ಟ್ರಕೂಟರು, ಚೋಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು, ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆ, ಕಮೀಷನರ್‌ಗಳ ಆಳ್ವಿಕೆಯನ್ನು ವಿವರಿಸುತ್ತಾರೆ. ಕೋಲಾರ ಜಿಲ್ಲೆಯಲ್ಲಿ ಒಡೆಯರ ಆಳ್ವಿಕೆ, ಹೈದರಾಲಿ ಮತ್ತು ಟಿಪ್ಪುಸುಲ್ತಾನರು, ದಿವಾನರ ಆಳ್ವಿಕೆಯನ್ನು ತಿಳಿಸಿದ್ದಾರೆ. ತುಮಕೂರು ಜಿಲ್ಲೆಯಲ್ಲಿ ಚಾಲುಕ್ಯರು, ಬಿಜಾಪುರದ ಅರಸರು, ಮೊಘಲರು, ಒಡೆಯರು, ಹೈದರಾಲಿ ಮತ್ತು ಟಿಪ್ಪುವಿನ ಆಳ್ವಿಕೆ, ಸಿರಾದ ಸುಬೇದಾರರು, ಮೈಸೂರು ಜಿಲ್ಲೆಯಲ್ಲಿ ಒಡೆಯರು, ಹೈದರಾಲಿ ಮತ್ತು ಟಿಪ್ಪು, ಕಮೀಷನರ್‌ಗಳ ಆಳ್ವಿಕೆ, ಹಾಸನ ಮತ್ತು ಕಡೂರುಗಳಲ್ಲಿ ಕದಂಬರು, ಶಿವಮೊಗ್ಗದಲ್ಲಿ ಮೌರ್ಯರು, ಗುಪ್ತರು, ಶಾತವಾಹನರು,

ಕದಂಬರು, ಚಿತ್ರದುರ್ಗ ಜಿಲ್ಲೆಯಲ್ಲಿ ಮೌರ್ಯರು, ಶಾತವಾಹನರು, ಚಿತ್ರದುರ್ಗದ ಪಾಳೆಯಗಾರರು ನಡೆಸಿದ ಆಡಳಿತದ ವಿವರಗಳನ್ನು ತಿಳಿಸಿದ್ದಾರೆ. ಈ ಸಂಪುಟದ ಕೊನೆಯಲ್ಲಿ ಮುಖ್ಯ ಸ್ಥಳಗಳ ಮಾಹಿತಿಯನ್ನು ನೀಡುತ್ತಾರೆ.

ಬಿ.ಎಲ್.ರೈಸ್ ಅವರು ವಸಾಹತುಶಾಹಿ ವ್ಯವಸ್ಥೆಗೆ ಅನುಗುಣವಾಗಿ ಒಡೆಯರ ಚರಿತ್ರೆಯನ್ನು ಈ ಮೈಸೂರು ಗ್ಯಾಸೆಟಿಯರ್‌ಗಳಲ್ಲಿ ರಚಿಸಿರುವುದನ್ನು ನೋಡಬಹುದು. ಸಾಮ್ರಾಜ್ಯಶಾಹಿ ನೆಲೆಯಲ್ಲಿ ಒಡೆದು ಆಳುವ ನೀತಿಗೆ ಅನುಗುಣವಾಗಿ ಹೈದರಾಲಿ ಮತ್ತು ಟಿಪ್ಪು ಬಗೆಗೆ ನೀಡಿರುವ ಹೇಳಿಕೆಗಳು ಇಂದಿಗೂ ಚರ್ಚೆಗೆ ಒಳಪಡುತ್ತಲೇ ಇವೆ. ಸಿ.ಹಯವದನರಾವ್ ಅವರು ವಸಾಹತುಶಾಹಿ ವ್ಯವಸ್ಥೆಗೆ ಅನುಗುಣವಾಗಿ ರಾಜಪ್ರಭುತ್ವ ಮತ್ತು ಧರ್ಮಕೇಂದ್ರಿತವಾಗಿ ಮೈಸೂರು ಒಡೆಯರ ಚರಿತ್ರೆಯನ್ನು ಈ ಗ್ಯಾಸೆಟಿಯರ್‌ಗಳಲ್ಲಿ ರಚಿಸಿರುವುದನ್ನು ನೋಡಬಹುದು. ಆಡಳಿತದಲ್ಲಿ ಪ್ರತಿಯೊಂದನ್ನು ಸಮರ್ಥಿಸುತ್ತಾ ಒಡೆಯರು ಅಭಿವೃದ್ಧಿಗೆ ಕಾರಣಕರ್ತರು ಎಂಬುದರ ವಿವರಗಳನ್ನೇ ತಿಳಿಸುತ್ತಾರೆ. ಸಾಮ್ರಾಜ್ಯಶಾಹಿ ವ್ಯವಸ್ಥೆಯಲ್ಲಿ ಆದ ತೊಂದರೆಗಳನ್ನು ಪ್ರಶ್ನಿಸುವುದೇ ಇಲ್ಲ. ಹೈದರಾಲಿ ಮತ್ತು ಟಿಪ್ಪು ಬಗೆಗಿನ ಹೇಳಿಕೆಗಳು ವಿಲ್ಕ್ಸ್, ರೈಸ್ ಅವರು ಹೇಳಿರುವಂತೆ ಮುಂದುವರಿದಿವೆ. ಬ್ರಿಟಿಷರಿಗೆ ಶತ್ರುವಾಗಿದ್ದ ಮತ್ತು ಹಿಂದೂಧರ್ಮದ ರಕ್ಷಣೆಯ ಭಾರ ಹೊತ್ತ ಒಡೆಯರನ್ನು ಅಧಿಕಾರದಿಂದ ಇಳಿಸಿದ್ದ ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ಸಿ.ಹಯವದನರಾವ್ ಅವರು ಮತಾಂಧ, ಕ್ರೂರಗಳೆಂದು ತಿಳಿಸಿರುವ ಹೇಳಿಕೆಗಳು ಇಂದಿಗೂ ಚರ್ಚೆಗೆ ಒಳಗಾಗಿವೆ. ಮೊದಲು ಈಸ್ಟ್ ಇಂಡಿಯಾ ಕಂಪನಿಯು ಭದ್ರವಾಗಿ ತಳವೂರಲು ಇಲ್ಲಿನ ಮಾಹಿತಿಗಳು ಬೇಕಾಗಿದ್ದವು. ಈ ನಿಟ್ಟಿನಲ್ಲಿ ಗ್ಯಾಸೆಟಿಯರ್‌ಗಳು ರಚನೆ ಆದವು. ಸ್ಥಳೀಯರು ಈ ಗ್ಯಾಸೆಟಿಯರ್‌ನ ರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದು, ಸ್ಥಳೀಯರಲ್ಲಿ ಅಕ್ಷರ ಬಲ್ಲವರಾದ ಬ್ರಾಹ್ಮಣವರ್ಗ ತಮಗೆ ಅನುಕೂಲವಾಗುವ ರೀತಿಯಲ್ಲಿ ಅಧಿಕಾರ ಭ್ರಷ್ಟತೆಯನ್ನು ಪ್ರಶ್ನಿಸದೇ ರಚಿಸಿರುವುದನ್ನು ಕಾಣಬಹುದು. ಸಾಮ್ರಾಜ್ಯಶಾಹಿ ನೆಲೆಯಲ್ಲಿ ವಸಾಹತುಶಾಹಿ ಬರಹಗಾರರು ಒಡೆದು ಆಳುವ ನೀತಿಗೆ ಅನುಗುಣವಾಗಿ ಒಂದು ಕಡೆ ಮತ್ತೊಂದು ಕಡೆ ಒಡೆಯರ ಸಿಂಹಾಸನಕ್ಕಾಗಿ ನಡೆದ ಸಂಘರ್ಷ, ಕೊಲೆ, ಷಡ್ಯಂತ್ರಗಳು ಹಾಗೂ ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ನೀಡಿರುವ ಹೇಳಿಕೆಗಳು ಹಾಗೆಯೇ ಒಡೆಯರ ಅಧಿಕಾರಿಗಳು, ಪ್ರಭುತ್ವ ಹಾಗೂ ಧರ್ಮಕೇಂದ್ರಿತವಾಗಿ ಚರಿತ್ರೆಕಾರರು ನೀಡಿರುವ ಹೇಳಿಕೆಗಳು ಚರ್ಚೆಗೆ ಒಳಗಾಗುತ್ತಲೇ ಇವೆ. ಟಿಪ್ಪು ಕನ್ನಡ ದ್ರೋಹಿಯೇ? ಎಂಬ ಹೇಳಿಕೆಗಳು ಈ ಹಿನ್ನೆಲೆಯಲ್ಲಿಯೇ ಚರ್ಚೆಗೆ ಒಳಪಡುತ್ತಿವೆ.

### ೪.೨. ವಸಾಹತೋತ್ತರ ಕಾಲಘಟ್ಟದ ಗ್ಯಾಸೆಟಿಯರ್‌ಗಳ ವಿಶ್ಲೇಷಣೆ

ವಸಾಹತುಶಾಹಿಯ ಕಾಲಘಟ್ಟದಲ್ಲಿ ಧರ್ಮ ಮತ್ತು ಪ್ರಭುತ್ವಕ್ಕೆ ಪೂರಕವಾಗಿ ಹುಟ್ಟುಹಾಕಿದ ವಿಚಾರಗಳನ್ನು ಒರೆಗಲ್ಲಿಗೆ ಹಚ್ಚುವ ಪ್ರಯತ್ನವನ್ನು ಇಲ್ಲಿ ಮಾಡಲಾಯಿತು. ವಸಾಹತುಶಾಹಿ ವಿರೋಧಿ ನೆಲೆಗಳು ಪ್ರಾರಂಭವಾದವು. ಧರ್ಮಕೇಂದ್ರಿತವಾಗಿ ಚರಿತ್ರೆ ರಚಿಸಿದ್ದು, ಅನಂತರ ಕೋಮುವಾದದ ರೂಪವನ್ನು ತಾಳುವುದನ್ನು ನೋಡಬಹುದು. ರೋಮಿಲಾ ಥಾಪರ್

ಅವರು ಭಾರತದಲ್ಲಿ ಕೋಮುವಾದ ಎಂದರೆ ಹೇಗೆ ಹಿಂದೂ ಎಂಬ ಏಕರೂಪೀ ಧಾರ್ಮಿಕ ಗುರುತನ್ನು ಕಟ್ಟಿಕೊಂಡು ಬೆಳೆದ ಐಡಿಯಾಲಜಿಯಾಗಿದೆ ಎಂಬುದನ್ನು ವಾದಿಸಲು ವಸಾಹತು ಕಾಲಘಟ್ಟದ ಇತಿಹಾಸವನ್ನು ಪರಿಶೀಲನೆಗೆ ಒಡ್ಡುತ್ತಾರೆ. ಅವರು ವಸಾಹತುಕಾಲದ ಅನುಭವವು ನಮ್ಮ ಗತಕಾಲವನ್ನು ನೋಡುವ ದೃಷ್ಟಿಕೋನವನ್ನು ಬದಲಿಸಿದೆ ಎಂಬ ವಾದವನ್ನು ಐತಿಹಾಸಿಕ ವಿವರಗಳ ಮೂಲಕ ಪುಷ್ಟೀಕರಿಸುತ್ತಾರೆ.[೪೦] ಈ ನಿಟ್ಟಿನಲ್ಲಿ ಆಧುನಿಕೋತ್ತರ ವಾದವು ಕಾಣಿಸಿಕೊಂಡಿತು. ಇಡೀ ಸಮಾಜವನ್ನು ಬಿಡಿಬಿಡಿಯಾಗಿ ಕಾಲ, ಸಂದರ್ಭಕ್ಕೆ ಅನುಗುಣವಾಗಿ ಏಕತೆಯಾಗಿ ನೋಡುವುದು. ರೇಮಂಡ್ ವಿಲಿಯಮ್ಸ್, ರೆವಿಡೋ ಭಾರತೀಶ್, ರಿಚರ್ಡ್ ಹೂಗಾರ್ಡ್, ಡೆರಿಡಾ, ಪುಕೋ, ಮೊದಲಾದವರು ಈ ವಾದದಲ್ಲಿ ಗುರುತಿಸಿಕೊಂಡಿದ್ದಾರೆ. ವ್ಯಕ್ತಿ ಸ್ವತಂತ್ರನಾಗದೆ ಸಾಮಾಜಿಕ-ಸಾಂಸ್ಕೃತಿಕ ಮೌಲ್ಯಗಳಿಂದ ಬಂಧಿಸಲ್ಪಟ್ಟ 'ಸಾಮಾಜಿಕ ಕ್ರಿಯಾಕಾರನಾಗಿರುತ್ತಾನೆ' ಎಂದು ತಿಳಿಸುತ್ತಾರೆ. ಡೆರಿಡಾನ ಸಂರಚನವಾದವು ಒಂದು ಚಿಂತನಾ ಕ್ರಮವಾಗಿ ಗ್ರಹಿಕೆ ಮತ್ತು ವಿವರಣೆಯನ್ನು ಹೊಂದಿದೆ. ನಿರಚನೆಯು ಹೊಸ ಹೊಸ ವಿಚಾರಗಳನ್ನು ಹೊರತರುವುದು. ಪುಕೋನ 'ಅಧಿಕಾರ ಮತ್ತು ಜ್ಞಾನ' ಕುರಿತ ವಿಚಾರ ಪ್ರಮುಖ. ಯಾವುದು ಆ ಸಂದರ್ಭದಲ್ಲಿ ಮುಂಚೂಣಿಯಲ್ಲಿರುವುದೋ ಅದೇ ಅಧಿಕಾರ. ಇದರ ಮೂಲಕ ಜ್ಞಾನವನ್ನು ಬಳಸಿಕೊಳ್ಳುತ್ತದೆ. ಅನಂತರ ವಸಾಹತೋತ್ತರ ವಾದವು ಕಾಣಿಸಿಕೊಂಡಿತು. ವಸಾಹತೋತ್ತರ ಚರಿತ್ರೆಯು ವಸಾಹತು ಚರಿತ್ರೆ ಲೇಖನದ ಪರಾಮರ್ಶೆಯೂ ಆಗಿದೆ. ಕೆಲ ವಿಮರ್ಶಕರು ವಸಾಹತೋತ್ತರ ಚಿಂತನೆಯನ್ನು ರಾಚನಿಕೋತ್ತರ ಚಿಂತನೆಯ ಒಂದು ಕವಲೆಂದೇ ಪರಿಗಣಿಸುತ್ತಾರೆ. ವಸಾಹತುಶಾಹಿಯ ಚೌಕಟ್ಟಿನೊಳಗೆ ವಸಾಹತೋತ್ತರ ರೂಪಣೆಗೆ ತೊಡಗಿಸಿಕೊಳ್ಳುತ್ತದೆ. ಇದರ ಚಿಂತನೆ ರಾಜಕೀಯ ಗುರಿಯನ್ನು ಹೊಂದಿದೆ. ವಸಾಹತುಶಾಹಿ ಮತ್ತು ವಸಾಹತೀಕರಣಕ್ಕೊಳಪಟ್ಟವರು, ಅಸಾಮಾನ್ಯ ಅಧಿಕಾರವನ್ನಾಧರಿಸಿ ದ್ವಂದ್ವಗಳನ್ನು ಸೃಷ್ಟಿಸುವ ಯಜಮಾನ್ಯರ ಎಲ್ಲೆಗಳನ್ನು ಮತ್ತು ಶಕ್ತಿ ಕೇಂದ್ರಗಳನ್ನು ಇಲ್ಲವಾಗಿಸುವುದು ಈ ವಸಾಹತೋತ್ತರ ಚಿಂತನೆಯ ರಾಜಕೀಯ ಅಜೆಂಡಾ. ಇಲ್ಲಿನ ಚಾರಿತ್ರಿಕ, ರಾಜಕೀಯ ಮತ್ತು ಸಾಂಸ್ಕೃತಿಕ ವಿಚಾರಗಳ ಪರಿಣಾಮಗಳನ್ನು ವಿರೋಧಿಸಿ ಇಲ್ಲವಾಗಿಸಲು ಪ್ರಯತ್ನಿಸುತ್ತದೆ.[೪೧] ಸಾಮ್ರಾಜ್ಯಶಾಹಿಯ ಆಧಿಪತ್ಯವನ್ನು ಪ್ರಶ್ನಿಸುತ್ತದೆ. ವಸಾಹತುಶಾಹಿ ನೀಡಿದ ಚಿಂತನೆಗೆ ಹೊಸದಾಗಿ ಗ್ರಹಿಸಿ ನಿರೂಪಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ಒಂದು ಹೊಸ ಬಗೆಯ ಕೃತಿ ಸೃಷ್ಟಿ ಯಾಗುತ್ತದೆ. ಅಲ್ಲದೇ ವಿಶಿಷ್ಟ ಬಗೆಯ ಓದುವಿಕೆಯೂ ಹೌದು. ಚಿಂತನೆ ಹಾಗೂ ಚರಿತ್ರೆಯನ್ನು ಹೇಗೆ ಕಟ್ಟಲಾಗಿದೆ ಎಂಬುದನ್ನು ತೋರಿಸುವುದೇ ಈ ವಸಾಹತೋತ್ತರ ಚಿಂತನೆ. ರೋನಾಲ್ಡ್ ಇಂಡೆನ್, ನಿಕೋಲಸ್ ಡರ್ಕ್ಸ್, ಶೆಲ್ಡನ್ ಪೊಲಾಕ್, ಡೇವಿಡ್ ಲಡನ್ ಮುಂತಾದವರು ವಸಾಹತೋತ್ತರ ವಾದದಲ್ಲಿ ಗುರುತಿಸಿಕೊಂಡವರು. ಇವರ ಚಿಂತನೆಯಡಿಯಲ್ಲಿ ವಸಾಹತೋತ್ತರ ಕಾಲಘಟ್ಟದಲ್ಲಿ ರಚನೆಯಾದ ಗ್ಯಾಸೆಟಿಯರ್‌ಗಳನ್ನು ಗ್ರಹಿಕೆ, ಚಿಂತನೆಯ ಮೂಲಕ ಪುನಾರಚಿಸು ವುದಾಗಿದೆ. ವಸಾಹತು ಕಾಲಘಟ್ಟದಲ್ಲಿ ರಚನೆಯಾದ ಗ್ಯಾಸೆಟಿಯರ್‌ಗಳಲ್ಲಿನ ವಿವರಣೆ, ಮಾಹಿತಿಗಳು ಹಾಗೆಯೇ ಮುಂದುವರಿದಿವೆಯೇ? ಬದಲಾವಣೆಗಳು ಆಗಿವೆಯೇ ಎಂಬುದನ್ನು ಚರ್ಚಿಸುವುದಾಗಿದೆ.

ವಸಾಹತು ಕಾಲಘಟ್ಟದಲ್ಲಿ ರಚನೆಯಾದ ಗ್ಯಾಸೆಟಿಯರ್‌ಗಳಲ್ಲಿ ಬಿ.ಎಲ್.ರೈಸ್ ಮತ್ತು ಸಿ. ಹಯವದನರಾವ್ ಅವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ನೀಡಿರುವ ಹೇಳಿಕೆಗಳು ಕೋಮುವಾದದ ಬೀಜಗಳನ್ನು ಬಿತ್ತಿವೆ. ವಸಾಹತೋತ್ತರ ಕಾಲಘಟ್ಟದಲ್ಲಿ ಡಿಸ್‌ಕೋರ್ಸ್ ಮುಖ್ಯ ಈ ನಿಟ್ಟಿನಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಈ ಡಿಸ್‌ಕೋರ್ಸ್‌ಗೆ ಒಳಗಾಗಿದ್ದಾರೆ. ವಸಾಹತೋತ್ತರ ಕಾಲಘಟ್ಟದಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳು ಹಳೆಯ ಮಾದರಿಗಳನ್ನು ಮುಂದುವರಿಸಿವೆಯೇ ಎಂಬುದನ್ನು ಚರ್ಚಿಸುವುದು ಮುಖ್ಯ ವಸಾಹತುಶಾಹಿ ಮತ್ತು ರಾಷ್ಟ್ರೀಯವಾದಿ ಗ್ರಹಿಕೆಗಳು ಹಾಗೆಯೇ ಮುಂದುವರಿದಿವೆಯೇ? ಸರ್ಕಾರದ ಅಡಿಯಲ್ಲಿ ರಚನೆಯಾದ ಈ ಗ್ಯಾಸೆಟಿಯರ್‌ಗಳು ಎಷ್ಟರ ಮಟ್ಟಿಗೆ ನಿರ್ಬಂಧಿತವಾಗಿವೆ ಎಂಬುದನ್ನು ಚರ್ಚಿಸುವುದು ಸೂಕ್ತ. ಸರ್ಕಾರದ ಅಡಿಯಲ್ಲಿ ಅಧಿಕಾರ ಮತ್ತು ಜ್ಞಾನವನ್ನು ಎಷ್ಟರ ಮಟ್ಟಿಗೆ ಬಳಸಿಕೊಳ್ಳಲಾಗಿದೆ ಎಂಬ ವಿಚಾರವೂ ಮುಖ್ಯ. ಈ ಗ್ಯಾಸೆಟಿಯರ್‌ಗಳಲ್ಲಿ ವಸಾಹತುಶಾಹಿ ಕಾಲಘಟ್ಟದಲ್ಲಿ ಕಟ್ಟಿಕೊಂಡು ಬಂದ ಚರಿತ್ರೆ, ಸಂಸ್ಕೃತಿ, ರಾಷ್ಟ್ರೀಯತೆ ಮುಂತಾದ ನಿರೂಪಣೆಗಳನ್ನು ಹೇಗೆ ಹೊಸ ವಿಚಾರಗಳ ಆವಿಷ್ಕಾರದೊಂದಿಗೆ ಮುಖಾಮುಖಿಯಾಗಿವೆಯೇ ಎಂಬುದು ಪ್ರಸ್ತುತ.

ಭಾರತವು ಬ್ರಿಟಿಷರಿಂದ ಮುಕ್ತವಾದ ನಂತರ ಪ್ರದೇಶಗಳನ್ನು ಗಡಿರೇಖೆಯ ಮೇಲೆ ನಿರ್ಧರಿಸಿ ಹಂಚಲಾಯಿತು. ಮೈಸೂರು ಸಂಸ್ಥಾನವು ಭಾರತದ ಒಕ್ಕೂಟಕ್ಕೆ ಸೇರುವುದಕ್ಕೆ ಜಯಚಾಮರಾಜ ಒಡೆಯರು ಸಹಿ ಹಾಕಿದರು. ಈ ರೀತಿ ಭಾರತದ ಒಕ್ಕೂಟದ ಸಾರ್ವಭೌಮತ್ವದಲ್ಲಿ ತಮ್ಮ ಅಧಿಕಾರವನ್ನು ಅಧೀನಗೊಳಿಸುವಲ್ಲಿ ಮೈಸೂರು ಒಡೆಯರು ಎರಡನೆಯವರು. ಆದರೆ ಪೂರ್ಣ ಪ್ರಮಾಣದ ಪ್ರಜಾಪ್ರಭುತ್ವಯುತ ಜವಾಬ್ದಾರಿ ಸರ್ಕಾರದ ರಚನೆಗೆ ಅವಕಾಶ ಕೊಡಲಿಲ್ಲ. ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರು ಚಲೋ ಚಳವಳಿ ಪ್ರಾರಂಭವಾಯಿತು. ಕೊನೆಗೆ ಅರಸೊತ್ತಿಗೆ ಅಂತ್ಯವಾಗಿ ಪ್ರಜಾಪ್ರಭುತ್ವವನ್ನು ಜಾರಿಗೆ ತರಲಾಯಿತು. ಐತಿಹಾಸಿಕ ಮಹತ್ವವುಳ್ಳ ಪ್ರದೇಶವನ್ನು ವಸಾಹತುಶಾಹಿಗಳು ತಮ್ಮ ಆಡಳಿತದ ಹಿಡಿತದಿಂದಾಗಿ ಕನ್ನಡ ಮಾತನಾಡುವ ಪ್ರದೇಶವನ್ನು ೨೨ ಆಡಳಿತೀಯ ಘಟಕಗಳಾಗಿ ಮಾರ್ಪಡಿಸಿದ್ದರು. ಇವು ಮುಖ್ಯವಾಗಿ ಬೊಂಬಾಯಿ, ಮದ್ರಾಸು, ಕೊಡಗು, ಹೈದರಾಬಾದ್ ಮೊದಲಾದ ರಾಜ್ಯಗಳಲ್ಲಿ ಕನ್ನಡ ಭಾಷೆ ಮಾತನಾಡುವ ಜನರು ಅಲ್ಪಸಂಖ್ಯಾತರಾಗಿದ್ದರು. ರಾಜ್ಯಗಳ ಪುನರ್ವಿಂಗಡನೆಯ ಬಗ್ಗೆ ಮಾಹಿತಿ ಸಂಗ್ರಹಿಸಲು ಧರ್ ಸಮಿತಿ ನೇಮಕವಾಯಿತು. ಭಾಷಾವಾರು ಪ್ರಾಂತ್ಯಗಳ ರಚನೆಗೂ ಚಾಲನೆ ದೊರಕಿತು. ೧೯೫೬ರ ನವೆಂಬರ್ ೧ರಂದು ಏಕೀಕರಣಗೊಂಡ ವಿಶಾಲ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದಿತು. ಆಗಿನ ಮೈಸೂರು ರಾಜ್ಯಕ್ಕೆ ಒಂಬತ್ತು ಜಿಲ್ಲೆಗಳು ಸೇರ್ಪಡೆ ಆದವು. ಬೆಂಗಳೂರು, ಮೈಸೂರು, ಕೋಲಾರ, ತುಮಕೂರು, ಮಂಡ್ಯ, ಚಿಕ್ಕಮಗಳೂರು, ಹಾಸನ, ಶಿವಮೊಗ್ಗ, ಚಿತ್ರದುರ್ಗ ಇವು ಪ್ರಮುಖವಾದ ಒಂಬತ್ತು ಜಿಲ್ಲೆಗಳಾಗಿವೆ. ಈ ಜಿಲ್ಲೆಗಳು ಏಕೀಕರಣವಾಗುವ ಮೂಲಕ ಕನ್ನಡಿಗರು ಒಂದು ರಾಜ್ಯದಲ್ಲಿ ಕೂಡಿಕೊಳ್ಳುವಂತಾಯಿತು.

ಪ್ರಾಂತ್ಯಗಳ ರಚನೆ ಆದ ಮೇಲೆ ಪ್ರದೇಶಗಳ ಬಗೆಗೆ ಜನರಲ್ಲಿ ಜಾಗೃತಿ ಮೂಡಿಸಲು ಗ್ಯಾಸೆಟಿಯರ್ ರಚನೆಯ ಕಾರ್ಯ ಮುಂದುವರಿಯಿತು. ದೇಶಕೋಶಗಳ ಮಹತ್ವವನ್ನು

ಮನಗಂಡಿದ್ದರಿಂದಾಗಿ ಕರ್ನಾಟಕ ರಾಜ್ಯದಲ್ಲಿ ಗ್ಯಾಸೆಟಿಯರ್ ಇಲಾಖೆಯು ತಾತ್ಕಾಲಿಕವಾಗಿ ೧೯೫೮ರಲ್ಲಿ ಅಸ್ತಿತ್ವಕ್ಕೆ ಬಂದಿತು. ಈ ಇಲಾಖೆಯು ನೂತನವಾಗಿ ಗ್ಯಾಸೆಟಿಯರ್ ಸಂಪುಟಗಳನ್ನು ಯಶಸ್ವಿಯಾಗಿ ಪ್ರಕಟಿಸುತ್ತಾ ಬಂದಿತು. ಅನಂತರ ಸರ್ಕಾರವು ಈ ಇಲಾಖೆಯ ಮಹತ್ವವನ್ನು ಮನಗೊಂಡು ೧೯೮೬ರಲ್ಲಿ ಖಾಯಂ ಆಗಿ ಮುಂದುವರಿಸಲು ನಿರ್ಧರಿಸಿತು. ಸ್ವಾತಂತ್ರ್ಯೋತ್ತರ ಭಾರತ ಮತ್ತು ಭಾರತದಲ್ಲಿಯ ಎಲ್ಲಾ ರಾಜ್ಯಗಳ ಗ್ಯಾಸೆಟಿಯರ್ ಸಂಪುಟಗಳ ಮೂಲ ರೂಪುರೇಷೆ ದೆಹಲಿಯಲ್ಲಿರುವ ಭಾರತ ಸರ್ಕಾರದ ಗ್ಯಾಸೆಟಿಯರ್ ವಿಭಾಗದ್ದು. ಅನಂತರ ರಾಜ್ಯ ಸರ್ಕಾರದ ಗ್ಯಾಸೆಟಿಯರ್ ವಿಭಾಗವು ಕೇಂದ್ರ ಸರ್ಕಾರದ ಗ್ಯಾಸೆಟಿಯರ್ ವಿಭಾಗದ ಮಾರ್ಗದರ್ಶನದ ಮೇರೆಗೆ ನಡೆಯುತ್ತದೆ.[೪೨] ಈ ನಿಟ್ಟಿನಲ್ಲಿ ಕೇಂದ್ರ ಸರ್ಕಾರದ ಗ್ಯಾಸೆಟಿಯರ್ ಘಟಕವು ನಿರೂಪಿಸಿದ ನಿಯಮನುಸಾರ ರಚಿತಗೊಂಡವು.

ಕರ್ನಾಟಕದಲ್ಲಿ ೧೯೫೮ರ ವೇಳೆಗೆ ಗ್ಯಾಸೆಟಿಯರ್ ಇಲಾಖೆಯು ಮೊಟ್ಟ ಮೊದಲ ಬಾರಿಗೆ, ಧಾರವಾಡ ಜಿಲ್ಲಾ ಗ್ಯಾಸೆಟಿಯರನ್ನು ಮುಂಬಯಿ ಸರ್ಕಾರದಿಂದ ಖರೀದಿಸಿ ಕರ್ನಾಟಕ ಸರ್ಕಾರವು ಟಿ.ಎ.ಪಾರ್ಥಸಾರಥಿ ಅವರ ಸಂಪಾದಕತ್ವದಲ್ಲಿ ಅದನ್ನು ೧೯೫೯ರಲ್ಲಿ ಬಿಡುಗಡೆ ಮಾಡಿತು. ಅನಂತರ ಶ್ರೀಸತ್ಯನ್ ಬಿ.ಎನ್.ಅವರ ಸಂಪಾದಕತ್ವದಲ್ಲಿ ಕೂರ್ಗ್(೧೯೫೫), ಬಿಜಾಪುರ(೧೯೬೬), ಗುಲ್ಬರ್ಗ(೧೯೬೭), ಚಿತ್ರದುರ್ಗ(೧೯೬೭), ಮಂಡ್ಯ(೧೯೬೮) ಈ ಐದು ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಹೊರತರಲಾಯಿತು. ಮುಂದೆ ಅಭಿಶಂಕರ್ ಕೆ. ಅವರು ಈ ಕಛೇರಿಯಲ್ಲಿ ಆಗಲೇ ದುಡಿಯುವವರಾಗಿದ್ದು, ಅವರ ಸಂಪಾದಕತ್ವದಲ್ಲಿ ಕೋಲಾರ(೧೯೬೮), ತುಮಕೂರು(೧೯೬೯), ರಾಯಚೂರು(೧೯೭೦), ಹಾಸನ(೧೯೭೧), ಬಳ್ಳಾರಿ(೧೯೭೨), ದಕ್ಷಿಣ ಕನ್ನಡ(೧೯೭೪), ಶಿವಮೊಗ್ಗ(೧೯೭೬), ಬೀದರ್(೧೯೭೭) ಮತ್ತು ಚಿಕ್ಕಮಗಳೂರು(೧೯೮೧) ಈ ಒಂಬತ್ತು ಸಂಪುಟಗಳನ್ನು ಹೊರತರಲು ಕಾರಣಕರ್ತರಾದರು.

ತದನಂತರ ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿ ಉತ್ತರ ಕನ್ನಡ(೧೯೮೫), ಬೆಳಗಾವಿ(೧೯೮೭), ಮೈಸೂರು(೧೯೮೮), ಬೆಂಗಳೂರು ಗ್ರಾಮಾಂತರ(೧೯೮೯), ಬೆಂಗಳೂರು ನಗರ(೧೯೯೦) ಈ ಜಿಲ್ಲೆಗಳ ಗ್ಯಾಸೆಟಿಯರ್‌ಗಳನ್ನು ಪ್ರಕಟಿಸಿದರು. ೧೯೯೦ರ ವೇಳೆಗೆ ಕರ್ನಾಟಕದ ೨೦ ಜಿಲ್ಲೆಗಳಿಗೆ ಸಂಬಂಧಿಸಿದ ಎಲ್ಲಾ ಜಿಲ್ಲೆಗಳ ಗ್ಯಾಸೆಟಿಯರ್‌ಗಳು ಪೂರ್ಣ ಗೊಂಡಿದ್ದವು.

ಸೂರ್ಯನಾಥ ಕಾಮತ್ ಅವರು ಕರ್ನಾಟಕಕ್ಕೆ ಸಂಬಂಧಿಸಿದಂತೆ ೧೯೮೨ರಲ್ಲಿ 'ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್' ಎಂಬ ಎರಡು ಬೃಹತ್ ಸಂಪುಟಗಳನ್ನು ಆಂಗ್ಲ ಭಾಷೆಯಲ್ಲಿ ಹೊರತಂದರು. ಹಾಗೆಯೇ ಕನ್ನಡದಲ್ಲಿ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಎಂಬ ಮೂರು ಸಂಪುಟಗಳನ್ನು ೧೯೮೨-೮೪ರ ನಡುವೆ ಹೊರತಂದರು. ಕರ್ನಾಟಕದ ಸಮಗ್ರ ದರ್ಶನ ಮಾಡಿಸುವ ಒಂದು ಪ್ರಯತ್ನವನ್ನು ಈ ಗ್ಯಾಸೆಟಿಯರ್‌ಗಳಲ್ಲಿ ಕಾಣಬಹುದು.

೧೯೯೦ರ ವೇಳೆಗೆ ೨೦ ಜಿಲ್ಲೆಗಳ ಗ್ಯಾಸೆಟಿಯರ್‌ಗಳು ರಚನೆಯು ಪೂರ್ಣಗೊಂಡಿದ್ದವು. ಅನಂತರ ಜೆ.ಎಚ್.ಪಟೇಲ್ ಅವರು ಮುಖ್ಯಮಂತ್ರಿಯಾಗಿದ್ದಾಗ(೧೯೯೮) ಏಳು ಹೊಸ

ಜಿಲ್ಲೆಗಳನ್ನು ಸೇರಿಸಿ ೨೭ ಜಿಲ್ಲೆಗಳನ್ನಾಗಿ ಕ್ರೋಡೀಕರಿಸಿದರು. ದಾವಣಗೆರೆ, ಚಾಮರಾಜನಗರ, ಉಡುಪಿ, ಕೊಪ್ಪಳ, ಬಾಗಲಕೋಟೆ, ಹಾವೇರಿ, ಗದಗ ನೂತನ ಜಿಲ್ಲೆಗಳಾಗಿ ಪರಿವರ್ತನೆಯಾದವು. ತಾಲೂಕುಗಳ ರಚನೆಯಲ್ಲಿ ಯಾವುದೇ ಬದಲಾವಣೆಗಳಾಗದೇ ಆ ಜಿಲ್ಲೆಗಳಲ್ಲಿ ಸೇರಿಕೊಂಡವು. ಅನಂತರ ಎಚ್.ಡಿ.ಕುಮಾರಸ್ವಾಮಿ ಮುಖ್ಯಮಂತ್ರಿಯಾಗಿದ್ದಾಗ ರಾಮನಗರ ಮತ್ತು ಚಿಕ್ಕಬಳ್ಳಾಪುರ (೨೦೦೭) ಈ ಎರಡು ಹೊಸ ಜಿಲ್ಲೆಗಳನ್ನು ರಚಿಸಿದರು. ಅನಂತರ ಬಿ.ಎಸ್.ಯಡಿಯೂರಪ್ಪ ಅವರ ಅವಧಿಯಲ್ಲಿ ಯಾದಗಿರಿ ಜಿಲ್ಲೆಯಾಯಿತು. ಈ ಹೊಸ ಜಿಲ್ಲೆಗಳಲ್ಲಿ ಉಡುಪಿಗೆ ಸಂಬಂಧಿಸಿದ ಗ್ಯಾಸೆಟಿಯರ್ ಕನ್ನಡ ಆವೃತ್ತಿಯಲ್ಲಿ(೨೦೧೦) ಹೊರತರಲಾಗಿದೆ. ಉಳಿದ ಜಿಲ್ಲೆಗಳ ಗ್ಯಾಸೆಟಿಯರ್‌ಗಳು ರಚನೆಯಾಗಬೇಕಾಗಿದೆ.

೧೯೯೦ರ ವೇಳೆಗೆ ಕನ್ನಡವನ್ನು ಕಡ್ಡಾಯವಾಗಿ ಬಳಸಲೇಬೇಕು ಎಂದು ಸರ್ಕಾರ ಆಜ್ಞೆಯನ್ನು ಹೊರಡಿಸಿತು. ಮೊಟ್ಟಮೊದಲ ಭಾರಿಗೆ ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿ ಕನ್ನಡ ಆವೃತ್ತಿಯಾಗಿ ಕೊಡಗು ಜಿಲ್ಲಾ ಗ್ಯಾಸೆಟಿಯರ್(೧೯೯೦) ಪ್ರಕಟಗೊಂಡಿತು. ಆಂಗ್ಲ ಪರಿಷ್ಕೃತ ಕೊಡಗು ಜಿಲ್ಲಾ ಗ್ಯಾಸೆಟಿಯರ್ ೧೯೯೩ರಲ್ಲಿ ಹೊರಬಂದಿತು. ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿಯೇ ಧಾರವಾಡ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ, ೧೯೯೫), ಆಂಗ್ಲ ಪರಿಷ್ಕೃತ ಆವೃತ್ತಿ(೨೦೦೩)ಗಳು ಪ್ರಕಟವಾದವು. ಮುನಿಸ್ವಾಮಿ ಆರ್. ಅವರ ಸಂಪಾದಕತ್ವದಲ್ಲಿ ಗುಲಬರ್ಗಾ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ-೧೯೯೭) ಮತ್ತು ಬಿಜಾಪುರ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ-೧೯೯೯), ಪಾರ್ಥಸಾರಥಿ ಟಿ.ಎ. ಅವರ ಸಂಪಾದಕತ್ವದಲ್ಲಿ ಮಂಡ್ಯ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ-೨೦೦೩), ಎಚ್.ಚಿತ್ತರಂಜನ್ ಅವರ ಸಂಪಾದಕತ್ವದಲ್ಲಿ ಕೋಲಾರ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ-೨೦೦೫), ಎಸ್.ಎ.ಜಿಲಾನಿ ಅವರ ಸಂಪಾದಕತ್ವದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ-೨೦೦೭), ಅನಿಲ್ ಸಿರಾಜ್ ಎಸ್. ಅವರ ಸಂಪಾದಕತ್ವದಲ್ಲಿ ಉಡುಪಿ ಜಿಲ್ಲಾ ಗ್ಯಾಸೆಟಿಯರ್(ಕನ್ನಡ ಪರಿಷ್ಕೃತ ಆವೃತ್ತಿ-೨೦೧೦)ಗಳು ಪ್ರಕಟಗೊಂಡವು. ಈ ನಿಟ್ಟಿನಲ್ಲಿ ಗ್ಯಾಸೆಟಿಯರ್‌ಗಳು ಪ್ರಕಟಗೊಂಡ ಬೆಳವಣಿಗೆಯನ್ನು ಗಮನಿಸಬಹುದು.

ಜಿಲ್ಲಾ ಗ್ಯಾಸೆಟಿಯರ್‌ಗಳಲ್ಲದೇ ತಾಲ್ಲೂಕು ಗ್ಯಾಸೆಟಿಯರ್‌ಗಳನ್ನು ಈ ಇಲಾಖೆಯು ಪ್ರಕಟಿಸುತ್ತಿದೆ. ಎಲ್.ಎನ್.ಸ್ವಾಮಿ ಅವರು ಸಂಪಾದಿಸಿ ಪ್ರಕಟಿಸಿದ ತಾಲೂಕು ಕೈಪಿಡಿಗಳು, ಕಿರುಗಾತ್ರದ ಅಂಕಿ-ಅಂಶದ ಪ್ರಧಾನ ಹೊತ್ತಿಗೆಗಳು ಮುಖ್ಯ. ಆದರೆ ಕಾಲಾನಂತರದಲ್ಲಿ ಆ ಪ್ರಕಟನೆಗಳು ನಿಂತುಹೋಗಿದ್ದು, ತಾಲ್ಲೂಕು ಕೈಪಿಡಿಗಳನ್ನು ಪುನರುಜ್ಜೀವನಗೊಳಿಸುವ ಉದ್ದೇಶದಿಂದ ಇಲಾಖೆಯು ಪ್ರಾಯೋಗಿಕ ಯೋಜನೆಗಾಗಿ(Pilot project) ಮೈಸೂರು ಜಿಲ್ಲೆಯ ಏಳು ತಾಲೂಕುಗಳ ಗ್ಯಾಸೆಟಿಯರ್ ಸಂಪುಟಗಳನ್ನು ಕನ್ನಡದಲ್ಲಿ(೨೦೧೦) ಪ್ರಕಟಿಸಿದೆ.[೪೩]

ಮೈಸೂರು ಜಿಲ್ಲೆಯ ಏಳು ತಾಲೂಕುಗಳಿಂದ ಮೈಸೂರು, ಪಿರಿಯಾಪಟ್ಟಣ, ತಿರುಮ ಕೂಡಲು ನರಸೀಪುರ, ಹೆಗ್ಗಡದೇವನಕೋಟೆ, ಹುಣಸೂರು, ಕೃಷ್ಣರಾಜನಗರ, ನಂಜನಗೂಡು

ತಾಲೂಕು ಗ್ಯಾಸೆಟಿಯರ್‌ಗಳನ್ನು ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಇಲಾಖೆ(ಬೆಂಗಳೂರು)ಯು ಪ್ರಕಟಿಸಿದೆ. ಇವುಗಳು ಎಸ್.ಅನೀಸ್ ಸಿರಾಜ್ ಅವರ ಪ್ರಧಾನ ಸಂಪಾದಕತ್ವದಲ್ಲಿ ಹೊರಬಂದಿದ್ದು, ಇದರಲ್ಲಿನ ವಿಷಯಗಳ ಲೇಖಕರು ಬೇರೆಬೇರೆಯಾಗಿರುತ್ತಾರೆ. ಮೈಸೂರು ತಾಲೂಕು ಗ್ಯಾಸೆಟಿಯರ್ ಚಿಕ್ಕಮಾದು ಎನ್.ಎನ್., ಪಿರಿಯಾಪಟ್ಟಣ–ರಾಜಶೇಖರ ಪಿ.ಕೆ., ತಿರುಮಕೂಡಲು ನರಸೀಪುರ–ರಾಜೇಂದ್ರಪ್ಪ ಎಸ್., ಹೆಗ್ಗಡದೇವಕೋಟೆ–ಗಿರೀಗೌಡ ನೀ., ಹುಣಸೂರು–ಶಾಮಸುಂದರ್ ಬಿ., ಕೃಷ್ಣರಾಜನಗರ–ತೇ.ಸಿ.ವಿಶ್ವೇಶ್ವರ, ನಂಜನಗೂಡು–ಮಂಜುಳಾ ಹುಲ್ಲಹಳ್ಳಿ ಇವರು. ಈ ಏಳು ತಾಲೂಕು ಗ್ಯಾಸೆಟಿಯರ್‌ಗಳ ಲೇಖಕರಾಗಿದ್ದಾರೆ. ಈ ನಿಟ್ಟಿನಲ್ಲಿ ಸ್ವಾತಂತ್ರ್ಯ ನಂತರ ಹಲವಾರು ಗ್ಯಾಸೆಟಿಯರ್‌ಗಳು ಪ್ರಕಟಣೆಗೊಂಡಿವೆ. ಅದರಲ್ಲಿ ಮುಖ್ಯವಾಗಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ಗ್ಯಾಸೆಟಿಯರ್‌ಗಳನ್ನು ಮಾತ್ರ ಇಲ್ಲಿ ವಿಶ್ಲೇಷಣೆಗೆ ಒಳಪಡಿಸುವ ಪ್ರಯತ್ನವನ್ನು ಮಾಡಲಾಗಿದೆ.

೧೯೫೬ರ ನವೆಂಬರ್ ೧ರಂದು ಏಕೀಕರಣಗೊಂಡ ವಿಶಾಲ ಮೈಸೂರು ರಾಜ್ಯ ಅಸ್ತಿತ್ವಕ್ಕೆ ಬಂದಿತು. ಆಗಿನ ಮೈಸೂರು ರಾಜ್ಯಕ್ಕೆ ಒಂಬತ್ತು ಜಿಲ್ಲೆಗಳು ಸೇರ್ಪಡೆ ಆದವು. ಬೆಂಗಳೂರು, ಮೈಸೂರು, ಕೋಲಾರ, ತುಮಕೂರು, ಮಂಡ್ಯ, ಚಿಕ್ಕಮಗಳೂರು, ಹಾಸನ, ಶಿವಮೊಗ್ಗ ಮತ್ತು ಚಿತ್ರದುರ್ಗ ಮುಖ್ಯವಾದವುಗಳು. ಈ ಜಿಲ್ಲೆಗಳ ಮಾಹಿತಿಗಳನ್ನು ಬಿಡಿ ಬಿಡಿಯಾಗಿ ಕ್ರೋಡೀಕರಿಸಲು ಗ್ಯಾಸೆಟಿಯರ್‌ಗಳ ರಚನಾಕಾರ್ಯ ಆರಂಭವಾಯಿತು. ಈ ಜಿಲ್ಲೆಯ ಗ್ಯಾಸೆಟಿಯರ್‌ಗಳಲ್ಲಿ ಕೆಲವು ಅಧ್ಯಾಯಗಳನ್ನು ಬಿಡುವ ಮತ್ತು ಕೆಲವು ಅಧ್ಯಾಯಗಳನ್ನು ಸೇರಿಸಿಕೊಳ್ಳುವ ಮೂಲಕ ತನ್ನದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡಿದೆ. ಸ್ವಾತಂತ್ರ್ಯ ಬರುವುದಕ್ಕಿಂತ ಮುಂಚೆ ವಸಾಹತು ಕಾಲಘಟ್ಟದಲ್ಲಿ ಬಿ.ಎಲ್.ರೈಸ್ ಅವರು ಧರ್ಮ, ಜನತೆ, ಭಾಷೆ, ಸಾಹಿತ್ಯ, ಆಡಳಿತ, ಆರ್ಥಿಕತೆ, ಸ್ಥಳೀಯ ಆಡಳಿತ, ಶಿಕ್ಷಣ ಈ ವಿವರಗಳನ್ನು ಜಿಲ್ಲೆಯಿಂದ ಜಿಲ್ಲೆಗೆ ಬದಲಾವಣೆಯಾಗುವಂತವಾಗಿದ್ದು ಅವುಗಳನ್ನು ಪ್ರಸ್ತಾಪಿಸದೇ ಬಿಡಲಾಗಿತ್ತು. ಆದರೆ ಸಿ.ಹಯವದನರಾವ್ ಅವರು ಈ ಎಲ್ಲಾ ವಿವರಗಳನ್ನು ಸೇರಿಸಿ ವಿಸ್ತೃತವಾಗಿ ವಿವರಿಸಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿ ಭೌಗೋಳಿಕತೆ, ಚರಿತ್ರೆ, ಜನಾಂಗ, ಧರ್ಮ, ಭಾಷೆ ಮತ್ತು ಸಾಹಿತ್ಯ, ಕಲೆ ಮತ್ತು ಕೈಗಾರಿಕೆ, ಆಡಳಿತ, ಕಮೀಷನರ್‌ರ ಆಳ್ವಿಕೆ ಎಂಬ ಅಧ್ಯಾಯಗಳನ್ನು ಒಳಗೊಂಡ ವಿವರಗಳನ್ನು ತಿಳಿಸಲಾಗುತ್ತದೆ. ಸ್ವಾತಂತ್ರ್ಯದ ನಂತರ ಅಧ್ಯಾಯಗಳನ್ನು ಬದಲಾವಣೆಗೆ ಒಳಪಡಿಸಲಾಗುತ್ತದೆ. ಪ್ರಾಸ್ತಾವಿಕವಾಗಿ ಭೌಗೋಳಿಕತೆ, ಚರಿತ್ರೆ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆ, ಬ್ಯಾಂಕಿಂಗ್, ವ್ಯಾಪಾರ ಮತ್ತು ವಾಣಿಜ್ಯ, ಸಂವಹನ ಮಾಧ್ಯಮ, ಆರ್ಥಿಕ ಪ್ರವೃತ್ತಿಗಳು, ಕಂದಾಯ ಆಡಳಿತ, ಕಾನೂನು ಮತ್ತು ನ್ಯಾಯವ್ಯವಸ್ಥೆ, ವಿವಿಧ ಇಲಾಖೆಗಳು, ಸ್ಥಳೀಯ ಆಡಳಿತ, ಶಿಕ್ಷಣ ಮತ್ತು ಸಂಸ್ಕೃತಿ, ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ, ಸಾಮಾಜಿಕ ಸೇವಾಸೌಲಭ್ಯಗಳು, ಪ್ರೇಕ್ಷಣೀಯ ಸ್ಥಳಗಳ ವಿವರಗಳನ್ನು ನೋಡಬಹುದು(http://www.kar.nic.in/gazetteer chapaters).

ಸರ್ಕಾರದ ಅಧೀನದಲ್ಲಿ ಪ್ರಕಟನೆಯಾದ ಈ ವಸಾಹತೋತ್ತರ ಕಾಲಘಟ್ಟದ ಗ್ಯಾಸೆಟಿಯರ್ ಗಳು ಒಂದೇ ಮಾದರಿಯ ಅಧ್ಯಾಯವನ್ನು ಒಳಗೊಂಡು, ಆಯಾಯ ಜಿಲ್ಲೆಗೆ ಸಂಬಂಧಿಸಿದ

ಮಾಹಿತಿಗಳನ್ನು ಸರ್ವೇಕ್ಷಣ ರೂಪದಲ್ಲಿ ನೀಡುತ್ತಾರೆ. ಇಲ್ಲಿ ಪ್ರಮುಖವಾಗಿ ವಸಾಹತೋತ್ತರ ಕಾಲಘಟ್ಟದ ಗ್ಯಾಸೆಟಿಯರ್‌ಗಳು ಬಿಡಿಬಿಡಿಯಾಗಿ ರಾಜ್ಯ, ಜಿಲ್ಲೆ, ತಾಲೂಕು ಗ್ಯಾಸೆಟಿಯರ್ ಎಂದು ಸರ್ಕಾರದ ಅಡಿಯಲ್ಲಿ ಹೊರಬಂದಿವೆ. ಈ ಗ್ಯಾಸೆಟಿಯರ್‌ಗಳಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಚಾರಿತ್ರಿಕ ಮಹತ್ವ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಇರುವುದನ್ನು ನೋಡಬಹುದು. ಅಲ್ಲದೇ ಅನಂತರದ ಕಾಲದಲ್ಲಿ ಸರ್ಕಾರ ಜಾರಿಗೆ ತಂದ ಯೋಜನೆಗಳ ಮಾಹಿತಿಯನ್ನು ನೀಡಲಾಗುತ್ತದೆ. ಆದುದರಿಂದ ಈ ಗ್ಯಾಸೆಟಿಯರ್‌ಗಳನ್ನು ಸಂಪೂರ್ಣವಾಗಿ ವಿಶ್ಲೇಷಣೆಗೆ ಒಳಪಡಿಸದೇ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ವಿವರಗಳನ್ನು ಮಾತ್ರ ಪರಿಗಣಿಸಲಾಗುತ್ತದೆ. ಈ ವಸಾಹತೋತ್ತರ ಗ್ಯಾಸೆಟಿಯರ್‌ಗಳಲ್ಲಿ ಮೈಸೂರು ಒಡೆಯರ ಚರಿತ್ರೆಯಲ್ಲಿ ಗುರುತಿಸಿಕೊಂಡ ಈ ಗ್ಯಾಸೆಟಿಯರ್‌ಗಳಲ್ಲಿ ಬಿ.ಎಲ್.ರೈಸ್ ಮತ್ತು ಸಿ.ಹಯವದನರಾವ್ ಅವರು ಮೈಸೂರಿನ ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ವಿವರಿಸಿದ ಮಾಹಿತಿಯು ಹಾಗೆಯೇ ಮುಂದುವರಿದಿಯೇ ಅಥವಾ ಹೊಸ ಸಂಶೋಧನೆಗೆ ಒಳಪಡಿಸಿ ಬದಲಾವಣೆ ಆಗಿದೆಯೇ ಎಂಬುದು ಮುಖ್ಯ. ಈ ನಿಟ್ಟಿನಲ್ಲಿ ಮಾತ್ರ ವಸಾಹತೋತ್ತರ ಗ್ಯಾಸೆಟಿಯರ್‌ಗಳ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಪ್ರಸ್ತುತ ಈ ವಸಾಹತೋತ್ತರ ಗ್ಯಾಸೆಟಿಯರ್‌ಗಳು ಪ್ರಜಾಪ್ರಭುತ್ವದ ಸರ್ಕಾರದ ಅಡಿಯಲ್ಲಿ ಪ್ರಕಟಗೊಂಡಿವೆ. ಸರ್ಕಾರವು ಹಾಕಿಕೊಂಡ ಯೋಜನೆಗಳ ಮಾಹಿತಿಗಳನ್ನು ವಿವರಿಸಲಾಗಿರುತ್ತದೆ. ಆಯಾಯ ರಾಜ್ಯ, ಜಿಲ್ಲೆ, ತಾಲೂಕು ಗ್ಯಾಸೆಟಿಯರ್‌ಗಳಲ್ಲಿ ಪ್ರಾಚೀನದಿಂದ ಇಂದಿನವರೆಗೂ ಕೈಗೊಂಡ ಕಾರ್ಯಗಳ ವಿವರಗಳನ್ನು ನೋಡಬಹುದು.

ಶ್ರೀ ಸತ್ಯನ್ ಬಿ.ಎನ್. ಅವರ ಸಂಪಾದಕತ್ವದಲ್ಲಿ(೧೯೬೭) ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್ ಹೊರಬಂದಿತು.[೪೪] ಚಿತ್ರದುರ್ಗ ಜಿಲ್ಲೆಯಲ್ಲಿ ಮೌರ್ಯರು, ಶಾತವಾಹನರು, ಚಿತ್ರದುರ್ಗದ ಮತ್ತು ನಿಡುಗಲ್ಲಿನ ಪಾಳೆಯಗಾರರು ಆಡಳಿತ ನಡೆಸಿದರು. ಮೈಸೂರಿನ ಒಡೆಯರ ಆಳ್ವಿಕೆ, ಹೈದರಾಲಿಯ ಆಕ್ರಮಣ ಮುಂತಾದ ಆಡಳಿತದ ವಿಚಾರಗಳನ್ನು ತಿಳಿಸುತ್ತಾರೆ. ಚಿತ್ರದುರ್ಗದ ಪಾಳೆಗಾರನಾದ ವೀರ ಮದಕರಿನಾಯಕನ ಮೇಲೆ ಹೈದರಾಲಿಯು ಆಕ್ರಮಣ ಮಾಡಿದಾಗ ಅಲ್ಲಿನ ಕಾವಲುಗಾರನ ಮಡದಿಯಾದ ಓಬವ್ವ ಹೈದರಾಲಿಯ ಸೈನಿಕರನ್ನು ಹೊಡೆದು ಹೊರ ಹಾಕಿದಳು ಎಂಬುದು ಚಾರಿತ್ರಿಕ ದಾಖಲೆಯಾಗಿದ್ದು, ಹೈದರಾಲಿಯು ಸೋತು ಹಿಮ್ಮೆಟ್ಟಿದನು ಎಂಬುದರ ಚಾರಿತ್ರಿಕ ವಿಷಯಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ನೋಡಬಹುದು. ಈ ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿರುವ ಚಿತ್ರದುರ್ಗ ಜಿಲ್ಲೆಯ ಭೌಗೋಳಿಕತೆ, ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆಗಳು, ಬ್ಯಾಂಕಿಂಗ್, ಹಣಕಾಸು ವಾಣಿಜ್ಯ ಮತ್ತು ವ್ಯಾಪಾರ, ಆರ್ಥಿಕ ಪ್ರವೃತ್ತಿಗಳು, ಆಡಳಿತ ಮತ್ತು ತೆರಿಗೆಪದ್ಧತಿ, ಕಾನೂನು ಮತ್ತು ನ್ಯಾಯವ್ಯವಸ್ಥೆ, ವಿವಿಧ ಇಲಾಖೆಗಳು, ಸ್ಥಳೀಯ ಆಡಳಿತ, ಶಿಕ್ಷಣ ಮತ್ತು ಸಂಸ್ಕೃತಿ, ವೈದ್ಯಕೀಯ ಮತ್ತು ಸಾರ್ವಜನಿಕ ಆರೋಗ್ಯ, ಸಾಮಾಜಿಕ ಸೇವಾ ಸೌಲಭ್ಯಗಳು, ಪ್ರೇಕ್ಷಣೀಯ ಸ್ಥಳಗಳ ವಿವರಗಳನ್ನು ನೋಡಬಹುದು. ಕೃಷಿಯ ಅಭಿವೃದ್ಧಿಗಾಗಿ ಮುಖ್ಯವಾಗಿ ವಾಣಿವಿಲಾಸ ಸಾಗರದ ಅಣೆಕಟ್ಟನ್ನು ನಿರ್ಮಿಸಲಾಯಿತು. ಮೈಸೂರು ಒಡೆಯರಾದ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲಾವಧಿಯಲ್ಲಿ

ವೇದಾವತಿ ನದಿಗೆ ಅಣೆಕಟ್ಟನ್ನು ನಿರ್ಮಿಸಿದರು. ಮೊದಲು ಇದನ್ನು ಮಾರಿಕಣಿವೆ ಯೋಜನೆ ಎಂದು ಕರೆಯುತ್ತಿದ್ದರು. ಅನಂತರ ಮೈಸೂರಿನ ಮಹಾರಾಣಿಯ ಹೆಸರನ್ನಿಟ್ಟು 'ವಾಣಿವಿಲಾಸ ಸಾಗರ' ಎಂದು ನಾಮಕರಣ ಮಾಡಿದರು ಎಂಬುದು ಚಾರಿತ್ರಿಕ ದಾಖಲೆ. ಹೀಗೆ ಮೈಸೂರಿನ ಒಡೆಯರ ಕಾಲದಲ್ಲಿ ಪ್ರಗತಿ ಹೊಂದಿತು ಎಂಬುದರ ವಿವರಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ನೋಡಬಹುದು. ಚಿತ್ರದುರ್ಗದ ಏಳುಸುತ್ತಿನ ಕೋಟೆ ಚಾರಿತ್ರಿಕ ಮಹತ್ವ ಹೊಂದಿದೆ. ಈ ನಿಟ್ಟಿನಲ್ಲಿ ಮೈಸೂರಿನ ಒಡೆಯರ ಆಡಳಿತ ಘಟಕವಾದ ಈ ಚಿತ್ರದುರ್ಗದಲ್ಲಿ ಪಾಳೆಯಗಾರರು ಆಡಳಿತ ನಡೆಸುತ್ತಿದ್ದರು. ಇದರ ಅಭಿವೃದ್ಧಿಗಾಗಿ ಕೈಗೊಂಡ ಕಾರ್ಯಗಳನ್ನು ಇಲ್ಲಿ ಗಮನಿಸಬಹುದು. ಈ ಗ್ಯಾಸೆಟಿಯರ್‌ನಲ್ಲಿ ಚಿತ್ರದುರ್ಗದ ಜಿಲ್ಲೆಗೆ ಸೇರಿದ ಎಲ್ಲಾ ಮಾಹಿತಿಗಳು ಕ್ರೋಡೀಕರಿಸಿರುವುದನ್ನು ನೋಡಬಹುದು.

ಶ್ರೀ ಸತ್ಯನ್ ಬಿ.ಎನ್. ಅವರ ಸಂಪಾದಕತ್ವದಲ್ಲಿ(೧೯೬೮) ಮಂಡ್ಯ ಜಿಲ್ಲಾ ಗ್ಯಾಸೆಟಿಯರ್ ಹೊರಬಂದಿತು. ೨೦೦೩ರಲ್ಲಿ ಪರಿಷ್ಕೃತ ಕನ್ನಡ ಆವೃತ್ತಿ ಪ್ರಕಟವಾಯಿತು.[೪೫] ಮಂಡ್ಯ ಜಿಲ್ಲಾ ಮಾಹಿತಿಗಳನ್ನು ಸಮಗ್ರವಾಗಿ ಈ ಗ್ಯಾಸೆಟಿಯರ್‌ನಲ್ಲಿ ಕ್ರೋಡೀಕರಿಸುವ ಪ್ರಯತ್ನವಾಗಿದೆ. ಮಂಡ್ಯ ಜಿಲ್ಲೆಯನ್ನು ಪರಿಚಯಿಸುತ್ತಾ ಐದು ನದಿಗಳ ಹರಿಯುವಿಕೆಯಿಂದ ಫಲವತ್ತಾದ ಭೂಮಿಯನ್ನು ಹೊಂದಿದೆ ಎಂದಿದೆ. ಶಿವನಸಮುದ್ರದ ಜಲವಿದ್ಯುತ್ ಸ್ಥಾವರ ಇಡೀ ಏಷ್ಯಾ ದಲ್ಲಿಯೇ ಮೊದಲ ಜಲಶಕ್ತಿ ವಿದ್ಯುತ್ ಸ್ಥಾವರ ಆಗಿ ಪ್ರಸಿದ್ಧಿಯನ್ನು ಪಡೆದಿದೆ. ಸರ್.ಎಂ.ವಿಶ್ವೇಶ್ವರಯ್ಯ ಅವರು ಕೃಷ್ಣರಾಜ ಸಾಗರ ಅಣೆಕಟ್ಟನ್ನು ಕಟ್ಟಿದ್ದರಿಂದ ಕೃಷಿಯ ಕಾರ್ಯಾಚರಣೆಗಳು ಚುರುಕುಗೊಂಡವು. ಹಿಂದೆ ಮಂಡ್ಯ, ಅಂದಿನ ಮೈಸೂರು ಜಿಲ್ಲೆಯ ಭಾಗವಾಗಿತ್ತು. ಆದರೆ ಆಡಳಿತಾತ್ಮಕ ಅನುಕೂಲಕ್ಕಾಗಿ ಮಂಡ್ಯ ಬೇರ್ಪಟ್ಟು ೧೯೩೯ರಲ್ಲಿ ಸ್ವತಂತ್ರ ಜಿಲ್ಲೆಯಾಯಿತು. ಚಾರಿತ್ರಿಕವಾಗಿ ಬನವಾಸಿಯ ಕದಂಬರು, ಗಂಗರು, ಚೋಳರು, ವಿಜಯನಗರದ ಅರಸರು, ನಾಗಮಂಗಲದ ಪ್ರಭುಗಳು, ಹದಿನಾಡಿನ ಪಾಳೇಗಾರರು, ಮೈಸೂರಿನ ಒಡೆಯರು, ಮಧ್ಯದಲ್ಲಿ ಹೈದರಾಲಿ, ಟಿಪ್ಪು ಹಾಗೂ ಕಮೀಷನರ್‌ಗಳ ಆಳ್ವಿಕೆ, ಮನಃ ಒಡೆಯರ ಆಳ್ವಿಕೆ, ದಿವಾನರ ಆಡಳಿತ, ಚಳವಳಿಗಳ ಇತಿಹಾಸ, ಬ್ರಾಹ್ಮಣೇತರ ಚಳವಳಿ, ರಾಷ್ಟ್ರೀಯ ಚಳವಳಿ ಇವೇ ಮೊದಲಾದ ಮಾಹಿತಿಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ವಿವರಿಸಲಾಗಿದೆ. ಮುಖ್ಯವಾಗಿ ಇರ್ವಿನ್ ಕಾಲುವೆ ಚಳುವಳಿಯ ಮಾಹಿತಿಗಳನ್ನು ನೋಡಬಹುದು. ಹೆಚ್.ಕೆ. ವೀರಣ್ಣಗೌಡ ಅವರು ಈ ಸಮಸ್ಯೆಯನ್ನು ಬಗೆಹರಿಸಲು ನಡೆಸಿದ ಹೋರಾಟದ ಚಿತ್ರಣವನ್ನು ನೋಡಬಹುದು. ಮೈಸೂರು ಚಲೋ ಚಳವಳಿ, ಅನಂತರದ ಚುನಾವಣೆಗಳ ವಿವರಗಳನ್ನು ನೀಡಿದ್ದಾರೆ. ಭೌಗೋಳಿಕ ಸನ್ನಿವೇಶ, ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆ, ಬ್ಯಾಂಕಿಂಗ್, ಹಣಕಾಸು, ವಾಣಿಜ್ಯ ಮತ್ತು ವ್ಯಾಪಾರ, ಆರ್ಥಿಕ ಪ್ರವೃತ್ತಿಗಳು, ಆಡಳಿತ ಮತ್ತು ತೆರಿಗೆ ಪದ್ಧತಿ, ಕಾನೂನು ಮತ್ತು ನ್ಯಾಯ, ಇತರ ವಿಭಾಗಗಳು, ಸ್ಥಳೀಯ ಸರ್ಕಾರ, ಶಿಕ್ಷಣ, ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ವೈದ್ಯಕೀಯ ಸೇವೆಗಳು ಇವೇ ಮೊದಲಾದ ಅಂಶಗಳನ್ನು ಮಾಹಿತಿಗಳ ರೂಪದಲ್ಲಿ ಕ್ರೋಡೀಕರಿಸಿದ್ದಾರೆ. ಆಯಾಯ ಕಾಲಘಟ್ಟದಲ್ಲಿ ಆದಂತಹ ಬದಲಾವಣೆಗಳೊಂದಿಗೆ ಈ ಗ್ಯಾಸೆಟಿಯರ್‌ನಲ್ಲಿ ವಿವರಗಳನ್ನು ತಿಳಿಸಿದ್ದಾರೆ.

ಕೋಲಾರ ಜಿಲ್ಲೆಗೆ ಸಂಬಂಧಿಸಿದಂತೆ ಮೊದಲು ಸ್ಥಳೀಯರಾದ ಶ್ರೀ ಬಿ.ಕೃಷ್ಣಯ್ಯಂಗಾರ್ ಅವರು ೧೮೭೯ರಲ್ಲಿ ಹೊರತಂದರೆಂದು ಬಿ.ಎಲ್.ರೈಸ್ ಅವರು ತಮ್ಮ ಸಂಪಾದಕತ್ವದಲ್ಲಿ ಹೊರಬಂದ ಮೈಸೂರು ಗ್ಯಾಸೆಟಿಯರ್‌ನ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಆದರೆ ಈ ಗ್ಯಾಸೆಟಿಯರ್ ಇನ್ನೂ ಪತ್ತೆ ಆಗಿಲ್ಲ. ಸಿ.ಹಯವದನರಾವ್ ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ ಮೈಸೂರು ಗ್ಯಾಸೆಟಿಯರ್‌ನ ಐದನೇ ಸಂಪುಟದ ಒಂದು ಭಾಗವಾಗಿ ಜಿಲ್ಲೆಯ ವಿವರಣಾತ್ಮಕ ಮಾಹಿತಿ ಲಭ್ಯವಿದೆ. ಕೋಲಾರ ಜಿಲ್ಲಾ ಗ್ಯಾಸೆಟಿಯರ್ ೧೯೬೮ರಲ್ಲಿ ಕೆ.ಅಭಿಶಂಕರ್ ಅವರ ಸಂಪಾದಕತ್ವದಲ್ಲಿ ಹೊರಬಂದಿತು. ಅನಂತರ ೨೦೦೫ರಲ್ಲಿ ಹೆಚ್.ಚಿತ್ತರಂಜನ್ ಅವರ ಸಂಪಾದಕತ್ವದಲ್ಲಿ ಪರಿಷ್ಕೃತ ಕನ್ನಡ ಆವೃತ್ತಿಯಾಗಿ ಪ್ರಕಟವಾಯಿತು.[೪೬] ಈ ಗ್ಯಾಸೆಟಿಯರ್‌ನಲ್ಲಿ ಒಂದೊಂದು ವಿಷಯ ಒಬ್ಬೊಬ್ಬ ಲೇಖಕರಿಂದ ರಚಿಸಲಾಗಿದೆ.

ಪ್ರಸ್ತಾವಿಕವಾಗಿ ಜಿಲ್ಲೆಯ ಭೌಗೋಳಿಕತೆಯ ವಿವರಗಳನ್ನು ತಿಳಿಸಿದ್ದಾರೆ. ಕೋಲಾರದ ಹೆಸರಿನ ಮೂಲವಾಗಿ ಕಾರ್ತವೀರ್ಯಾರ್ಜುನನ ಮೇಲೆ ಪರಶುರಾಮನು ಸೇಡು ತೀರಿಸಿಕೊಂಡ ಕೋಲಾಹಲವೇ ಕೋಲಾರ ಎಂದು ಹೆಸರು ಬಂದಿತು ಎಂದಿದ್ದಾನೆ. ನೈಸರ್ಗಿಕ ಸಂಪತ್ತು ಇವೇ ಮೊದಲಾದ ವಿವರಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ವಿವರಿಸಿದ್ದಾರೆ. ಚರಿತ್ರೆಯ ನೆಲೆಯಲ್ಲಿ ಬಾಣರು, ಗಂಗರು, ನೊಳಂಬರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಚೋಳರು, ವಿಜಯನಗರದ ಅರಸರು, ಪಾಳೆಯಗಾರರು, ಮೈಸೂರಿನ ಒಡೆಯರು, ಹೈದರ್ ಮತ್ತು ಟಿಪ್ಪು, ಕಮೀಷನರ್‌ಗಳ ಆಳ್ವಿಕೆ, ದಿವಾನರು, ಅನಂತರ ಒಡೆಯರು, ಸ್ವಾತಂತ್ರ್ಯ ಆಂದೋಲನ, ಮೈಸೂರು ಚಲೋ ಚಳವಳಿ, ಕರ್ನಾಟಕ ಏಕೀಕರಣ, ಚುನಾವಣೆಗಳು, ಇವೇ ಮೊದಲಾದ ವಿಷಯಗಳ ವಿವರಣೆಗೆ ಪ್ರಯತ್ನಿಸಲಾಗಿದೆ. ಬ್ರಿಟಿಷರಿಗೆ ಒತ್ತೆ ಇಟ್ಟ ಪ್ರದೇಶಗಳಲ್ಲಿ ಕೋಲಾರವು ಒಂದು. ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಬೆಂಗಳೂರಿಗೆ ಭೇಟಿ ನೀಡಿದ ಗಾಂಧೀಜಿಯು ಕೋಲಾರದ ನಂದಿದುರ್ಗದಲ್ಲಿ ವಿಶ್ರಾಂತಿಗಾಗಿ ತಂಗಿದ್ದರು ಎಂಬುದು ಚಾರಿತ್ರಿಕ ದಾಖಲೆ. ಇಂಜಿನಿಯರ್ ಆದ ಭಾರತ ರತ್ನ ಸರ್.ಎಂ.ವಿಶ್ವೇಶ್ವರಯ್ಯ, ರಾಜ್ಯದ ಪ್ರಥಮ ಮುಖ್ಯಮಂತ್ರಿ ಕೆ.ಸಿ.ರೆಡ್ಡಿ, ಜ್ಞಾನಪೀಠ ಪ್ರಶಸ್ತಿ ವಿಜೇತ ಕನ್ನಡದ ಆಸ್ತಿ ಡಾ.ಮಾಸ್ತಿ ವೆಂಕಟೇಶ ಅಯ್ಯಂಗಾರ್, ಖ್ಯಾತ ಪತ್ರಕರ್ತ ತಿ.ತಾ.ಶರ್ಮ, ನಾಡಿನ ಮನೆಮಾತಾಗಿರುವ ಕಗ್ಗದ ಕವಿ ಡಾ.ಡಿ.ವಿ.ಗುಂಡಪ್ಪ, ಖ್ಯಾತ ಗಾಂಧೀವಾದಿ ಮತ್ತು ಶಿಕ್ಷಣ ತಜ್ಞ ಡಾ.ಎಚ್.ನರಸಿಂಹಯ್ಯ ಮುಂತಾದ ಮಹನೀಯರು ಕೋಲಾರದವರು. ಕರ್ನಾಟಕಕ್ಕೆ 'ಚಿನ್ನದ ನಾಡು' ಎಂದು ಬಿರುದನ್ನು ಕೊಡಮಾಡಿದ ಕೋಲಾರದ ಕೆ.ಜಿ.ಎಫ್. ಮುಖ್ಯವಾದುದು. ವಸಾಹತುಶಾಹಿ ಕಾಲಘಟ್ಟದಲ್ಲಿ ಬ್ರಿಟಿಷರು ಈ ಕೆ.ಜಿ.ಎಫ್.ನಲ್ಲಿನ ಸಂಪತ್ತು ತೆಗೆದುಕೊಂಡು ಹೋಗುತ್ತಿದ್ದರು ಎಂಬುದನ್ನು ಬಿ.ಎಲ್.ರೈಸ್ ವಿವರಿಸಿದ್ದಾರೆ. ಈ ಚಿನ್ನದ ಗಣಿಯ ಕಾರ್ಯಾರಂಭ, ಇಲ್ಲಿಯವರೆಗೂ ಎಷ್ಟು ಚಿನ್ನವನ್ನು ಉತ್ಪಾದಿಸಲಾಗಿದೆ. ಅನಂತರ ಬ್ರಿಟಿಷರ ಅಧೀನದಲ್ಲಿ ವಿದೇಶಿಗರು ಈ ಗಣಿಯಲ್ಲಿ ಕೆಲಸಗಾರರಾಗಿ ನೇಮಕಗೊಂಡು ಚಿನ್ನದ ಉತ್ಪಾದನೆ ಹೆಚ್ಚಾಗುತ್ತಾ ಹೋಯಿತು. ಸ್ವಾತಂತ್ರ್ಯ ಪಡೆದುಕೊಂಡ ನಂತರ ವಿದೇಶಿ ಕೆಲಸಗಾರರಲ್ಲಿ ಅಭದ್ರತೆ ಕಾಡತೊಡಗಿ ಕೆಲಸ ಬಿಟ್ಟು ಸ್ವದೇಶಕ್ಕೆ ತೆರಳಿದರು. ಇದರಿಂದ ಚಿನ್ನದ ಉತ್ಪಾದನೆ ಒಂದು ಕಡೆ ಕಡಿಮೆ ಆಯಿತು ಎಂದರೆ ಮತ್ತೊಂದು ಕಡೆ

ಉತ್ತಮ ದರ್ಜೆಯ ಚಿನ್ನದ ಅದಿರು ಕಡಿಮೆಯಾಯಿತು. ೨೦೦೦ ಹೊತ್ತಿಗೆ ಸಂಪೂರ್ಣವಾಗಿ ಮುಚ್ಚಿತು. ಇಲ್ಲಿನ ಕಾರ್ಮಿಕರು ಬೀದಿಪಾಲಾದರು. ಊಟಕ್ಕಾಗಿ ಪರದಾಡುವಂತಾಯಿತು. ಇವೇ ಮೊದಲಾದ ಅಂಶಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ತಿಳಿಸಿದ್ದಾರೆ. ಆದರೆ ಬ್ರಿಟಿಷರಿಗೆ ಮತ್ತು ಮೈಸೂರು ಸರಕಾರಕ್ಕೆ ಸಂಮೃದ್ಧಿಯ ಸಂಕೇತವಾದ ಕೆ.ಜಿ.ಎಫ್.ನಲ್ಲಿ ನಡೆದ ಅಪರಾಧಗಳು ಮತ್ತು ಅವುಗಳಿಗೆ ಆದ ಶಿಕ್ಷೆಗಳು, ವೇಶ್ಯಾವಾಟಿಕೆ, ಮದ್ಯಪಾನ ವ್ಯಸನ, ದಲಿತರು ಕ್ರೈಸ್ತ ಧರ್ಮಕ್ಕೆ ಆದ ಮತಾಂತರ ಇವೇ ಮೊದಲಾದ ವಿವರಗಳನ್ನು ತಿಳಿಸಿಲ್ಲ. ಆದರೆ ಈ ವಿಷಯಗಳನ್ನು ಜಾನಕಿ ನಾಯರ್ ಅವರು 'ಮೈನರ್ ಆ್ಯಂಡ್ ಮಿಲ್‌ಹಾಂಡ್ಸ್, ವರ್ಕ್, ಕಲ್ಚರ್ ಅಂಡ್ ಪಾಲಿಟಿಕ್ಸ್ ಇನ್ ಪ್ರಿನ್ಸ್ಲಿ ಮೈಸೂರು'(೧೯೯೮) ಎಂಬ ಕೃತಿಯಲ್ಲಿ ಚರ್ಚಿಸಿದ್ದಾರೆ. ಒಟ್ಟಾರೆಯಾಗಿ ಈ ಗ್ಯಾಸೆಟಿಯರ್‌ನಲ್ಲಿ ಜಿಲ್ಲೆಯ ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆಗಳು, ಬ್ಯಾಂಕಿಂಗ್, ಸಾರಿಗೆ-ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಆಡಳಿತ ಮತ್ತು ರಾಜಸ್ವ, ನ್ಯಾಯಾಡಳಿತ, ಇತರ ಇಲಾಖೆಗಳು, ಸ್ವಯಂ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ ಇವೇ ಮೊದಲಾದ ವಿಷಯಗಳ ಅನಾವರಣವನ್ನು ನೋಡಬಹುದು.

ಅಭಿಶಂಕರ್ ಕೆ. ಅವರ ಸಂಪಾದಕತ್ವದಲ್ಲಿ(೧೯೬೯) ತುಮಕೂರು ಜಿಲ್ಲಾ ಗ್ಯಾಸೆಟಿಯರನ್ನು ಹೊರತಂದರು.[೪೭] ಚಾರಿತ್ರಿಕವಾಗಿ ಈ ಜಿಲ್ಲೆಯು ಮೊದಲು ಮೈಸೂರು ಸಂಸ್ಥಾನಕ್ಕೆ ಸೇರಿತ್ತು. ಗಂಗರು, ಮೌರ್ಯರು, ಚಾಲುಕ್ಯರು, ಬಿಜಾಪುರದ ಅರಸರು, ಮೊಘಲರು, ಸಿರಾದ ಸುಬೇದಾರರು, ಮೈಸೂರು ಒಡೆಯರ ಆಳ್ವಿಕೆಯನ್ನು ಕಂಡು ಮುಂದುವರಿದಿದೆ. ಈ ಜಿಲ್ಲೆಯು ಸ್ವಾತಂತ್ರ್ಯ ಹೋರಾಟದಲ್ಲಿ ತನ್ನದೇ ಆದ ಪಾತ್ರ ವಹಿಸಿದೆ. ಗಾಂಧೀಜಿ ಅವರು ತುಮಕೂರು ಜಿಲ್ಲೆಗೆ ಭೇಟಿ ನೀಡಿದ್ದರ ವಿವರಗಳನ್ನು ನೋಡಬಹುದು. ಸ್ವಾತಂತ್ರ್ಯ ನಂತರದ ಚುನಾವಣೆಗಳ ವಿವರಗಳ ಕ್ರೋಡೀಕರಣದ ಅಂಶಗಳನ್ನು ತಿಳಿಯಬಹುದು. ಹೀಗೆ ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆಗಳು, ಬ್ಯಾಂಕಿಂಗ್, ಸಾರಿಗೆ-ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಆಡಳಿತ ಮತ್ತು ರಾಜಸ್ವ, ನ್ಯಾಯಾಡಳಿತ, ಇತರ ಇಲಾಖೆಗಳು, ಸ್ವಯಂ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ ಇವೇ ಮೊದಲಾದ ವಿಷಯಗಳನ್ನು ಕ್ರೋಡೀಕರಿಸಿದ್ದಾರೆ.

ಹಾಸನ ಗ್ಯಾಸೆಟಿಯರ್ ಕೂಡ ಅಭಿಶಂಕರ್ ಕೆ. ಅವರ ಸಂಪಾದಕತ್ವದಲ್ಲಿ(೧೯೭೧) ಹೊರಬಂದಿತು.[೪೮] ಇಲ್ಲಿ ಪ್ರಮುಖವಾಗಿ ಕದಂಬರ ಆಳ್ವಿಕೆಯನ್ನು ಹೆಚ್ಚಾಗಿ ನೋಡಬಹುದು. ಅನಂತರ ಗಂಗರು, ಕೊಂಗಾಳ್ವರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು ಈ ಪ್ರದೇಶದಲ್ಲಿ ಆಳ್ವಿಕೆ ನಡೆಸಿದ್ದಾರೆ ಎಂಬುದರ ವಿವರಗಳಿವೆ. ಚನ್ನರಾಯ ಪಟ್ಟಣದ ಪಾಳೇಗಾರರು, ಶಿವಪ್ಪನಾಯಕನ ಆಡಳಿತವನ್ನು ಗಮನಿಸಬಹುದು. ಟಿಪ್ಪುವಿನ ಕಾಲದಲ್ಲಿ ಮರಾಠರ ಪೇಶ್ವೆ ಪರಶುರಾಮ ಬಾಹು ಬ್ರಿಟಿಷರ ವೈಸರಾಯ್ ಕಾರನ್ ವಾಲೀಸ್‌ನಿಗೆ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕುವಂತೆ ಪ್ರೇರಣೆ ನೀಡಿರುವುದನ್ನು ತಿಳಿಸಿದ್ದಾರೆ. ಫೌಜುದಾರಿಕೆಗಳ ಆಡಳಿತವನ್ನು ಇಲ್ಲಿ ಗಮನಿಸಬಹುದು. ಆಡಳಿತಾತ್ಮಕವಾಗಿ ಇದು ಅಷ್ಟಗ್ರಾಮ ಆಗಿತ್ತು. ಹೀಗೆ ಮುಂದುವರಿಯುತ್ತಾ, ಇಲ್ಲಿನ ಭೌಗೋಳಿಕ ಸನ್ನಿವೇಶ, ಜನತೆ, ಕೃಷಿ ಮತ್ತು ಕೈಗಾರಿಕೆ, ಬ್ಯಾಂಕಿಂಗ್, ಹಣಕಾಸು ನೆರವು, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ-ಸಂಪರ್ಕ, ಆರ್ಥಿಕ

ಪ್ರವೃತ್ತಿಗಳು, ಆಡಳಿತ, ಸಮಾಜಸೇವಾ ಸೌಲಭ್ಯಗಳು, ಸಂಸ್ಕೃತಿ, ಪ್ರೇಕ್ಷಣೀಯ ಸ್ಥಳಗಳು, ಗ್ರಾಮಸೂಚಿ, ಬದಲಾದ ಅಂಕಿ-ಅಂಶಗಳ ವಿವರಗಳನ್ನು ತಿಳಿಸಿದ್ದಾರೆ.

ಅಭಿಶಂಕರ್ ಕೆ. ಅವರು ಶಿವಮೊಗ್ಗ ಜಿಲ್ಲಾ ಗ್ಯಾಸೆಟಿಯರ(ಆಂಗ್ಲ)ನ್ನು ತಮ್ಮ ಸಂಪಾದಕತ್ವದಲ್ಲಿ(೧೯೭೬) ಹೊರ ತಂದಿದ್ದಾರೆ.[೪೯] ಮೈಸೂರು ಒಡೆಯರ ಚರಿತ್ರೆಯಲ್ಲಿ ಈ ಜಿಲ್ಲೆಯು ಪ್ರಮುಖ ಪಾತ್ರವನ್ನು ವಹಿಸಿದೆ. ಬಿ.ಎಲ್.ರೈಸ್, ಹಯವದನ್‌ರಾವ್ ಅವರು ತಮ್ಮ ಮೈಸೂರು ಗ್ಯಾಸೆಟಿಯರ್‌ಗಳಲ್ಲಿ ಈ ಜಿಲ್ಲೆಯ ಮಾಹಿತಿಗಳನ್ನು ನೀಡಿದ್ದಾರೆ. ವಸಾಹತೋತ್ತರ ಕಾಲದಲ್ಲಿ ಸರ್ಕಾರದ ಅಧೀನದಲ್ಲಿ ಮಾಹಿತಿಯನ್ನು ನೀಡುವ ಕೋಶದಂತೆ ರಚಿಸಿರುವುದನ್ನು ನೋಡಬಹುದು. ಚಾರಿತ್ರಿಕವಾಗಿ ಮೌರ್ಯರು, ಶಾತವಾಹನರು, ಕದಂಬರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಕಳಚೂರಿಗಳು, ಹೊಯ್ಸಳರು, ವಿಜಯನಗರದ ಅರಸರು, ಕೆಳದಿ ಅರಸರು ಮತ್ತು ಮೈಸೂರು ಒಡೆಯರು ಆಳ್ವಿಕೆಯ ಮಾಹಿತಿಗಳನ್ನು ನೀಡಿದ್ದಾರೆ. ಆಡಳಿತಾತ್ಮಕವಾಗಿ ಈ ಜಿಲ್ಲೆಯಲ್ಲಿ ಅನೇಕ ಸುಧಾರಣೆಗಳು ಕೈಗೂಡಿದವು. ಶಿವಪ್ಪನಾಯಕನ ಶಿಸ್ತು ಈ ಭಾಗಗಳಲ್ಲಿ ಅನ್ವಯವಾಗಿತ್ತು. ಇಲ್ಲಿ ನಡೆದ ಬಿದನೂರು ಅಥವಾ ನಗರದಂಗೆಯು ಮುಮ್ಮಡಿ ಕೃಷ್ಣರಾಜ ಒಡೆಯರ ಅಧಿಕಾರಕ್ಕೆ ಕುತ್ತು ತಂದಿತು ಎಂಬ ಮಾಹಿತಿಗಳನ್ನು ತಿಳಿಸಿದ್ದಾರೆ. ರಾಷ್ಟ್ರೀಯ ಚಳವಳಿಯಲ್ಲಿ ಇದರ ಪಾತ್ರ, ಮೈಸೂರು ಚಲೋ ಚಳವಳಿ, ಇಲ್ಲಿ ನಡೆದ ಚುನಾವಣೆಗಳ ವಿವರಗಳನ್ನು ನೀಡಿದ್ದಾರೆ. ಭೌಗೋಳಿಕತೆ, ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆ, ಬ್ಯಾಂಕಿಂಗ್, ಹಣಕಾಸು ನೆರವು, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ-ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಅಡಳಿತ, ಸಮಾಜ ಸೇವಾ ಸೌಲಭ್ಯಗಳು, ಸಂಸ್ಕೃತಿ, ಪ್ರೇಕ್ಷಣೀಯ ಸ್ಥಳಗಳು, ಗ್ರಾಮಗಳ ಸೂಚಿ, ಬದಲಾದ ಅಂಕಿ-ಅಂಶಗಳ ವಿವರಗಳನ್ನು ತಿಳಿಸಿದ್ದಾರೆ. ಸರ್ಕಾರದ ಅಡಿಯಲ್ಲಿ ರಚಿಸಿದ ಈ ಗ್ಯಾಸೆಟಿಯರ್‌ಗಳು ತಮ್ಮದೇ ಆದ ಸ್ವರೂಪವನ್ನು ಹೊಂದಿವೆ.

ಅಭಿಶಂಕರ್ ಕೆ. ಅವರು ತಮ್ಮ ಸಂಪಾದಕತ್ವದಲ್ಲಿ ಚಿಕ್ಕಮಗಳೂರು ಜಿಲ್ಲಾ ಗ್ಯಾಸೆಟಿಯರನ್ನು (ಆಂಗ್ಲ) ೧೯೮೧ರಲ್ಲಿ ಪ್ರಕಟಿಸಿದ್ದಾರೆ.[೫೦] ಮೈಸೂರು ಒಡೆಯರ ಕಾಲದಲ್ಲಿ ಆಳ್ವಿಕೆಗೆ ಒಳಪಟ್ಟಿದ್ದ ಕಡೂರು ಜಿಲ್ಲೆಯನ್ನು ಕರ್ನಾಟಕ ಏಕೀಕರಣದ ನಂತರ ಚಿಕ್ಕಮಗಳೂರು ಜಲ್ಲೆಗೆ ಸೇರಿಸಲಾಯಿತು. ಇಲ್ಲಿ ಕದಂಬ, ಗಂಗರು, ಶಾತವಾಹನರು, ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರ ಆಳ್ವಿಕೆಯ ವಿವರಗಳನ್ನು ನೋಡಬಹುದು. ದೇವರಾಜ ಒಡೆಯರು, ಚಿಕ್ಕದೇವರಾಜ ಒಡೆಯರ ಆಳ್ವಿಕೆ, ಟಿಪ್ಪು ಆಳ್ವಿಕೆಯ ನಂತರ ಕಡೂರನ್ನು ಮೈಸೂರಿಗೆ ಸೇರಿಸಲಾಯಿತು. ೧೮೩೩ರಲ್ಲಿ ಸರ್ಜಪ್ಪನಾಯಕನು ತರೀಕೆರೆಯಲ್ಲಿ ಆಳ್ವಿಕೆ ನಡೆಸುತ್ತಿದ್ದನು. ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸುವಿಕೆ ಇವೇ ಮೊದಲಾದ ಅಂಶಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ತಿಳಿಸಿದ್ದಾರೆ. ಇಲ್ಲಿನ ಭೌಗೋಳಿಕತೆ, ಇತಿಹಾಸ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆಗಳು, ಬ್ಯಾಂಕಿಂಗ್, ಹಣಕಾಸು ನೆರವು, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ-ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಆಡಳಿತ, ಸಮಾಜ ಸೇವಾ ಸೌಲಭ್ಯಗಳು, ಸಂಸ್ಕೃತಿ,

ಪ್ರೇಕ್ಷಣೀಯ ಸ್ಥಳಗಳು, ಗ್ರಾಮಗಳ ಸೂಚಿ, ಬದಲಾದ ಅಂಕಿ-ಅಂಶಗಳ ವಿವರಗಳನ್ನು ತಿಳಿಸಿದ್ದಾರೆ.

ಸೂರ್ಯನಾಥ ಕಾಮತ್ ಅವರು 'ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್' ಎಂಬ ಎರಡು ಬೃಹತ್ ಸಂಪುಟಗಳನ್ನು ಆಂಗ್ಲಭಾಷೆ(೧೯೮೨)ಯಲ್ಲಿ ಹೊರತಂದರು.[೫೧] ಹಾಗೆಯೇ ಕನ್ನಡದಲ್ಲಿ 'ಕರ್ನಾಟಕ ರಾಜ್ಯ ಗ್ಯಾಸೆಟಿಯರ್' ಎಂಬ ಮೂರು ಸಂಪುಟಗಳನ್ನು ೧೯೮೨-೮೪ರ ನಡುವೆ ಹೊರತಂದರು.[೫೨] ಕರ್ನಾಟಕ ರಾಜ್ಯದ ಸಮಗ್ರ ಚಿತ್ರಣವನ್ನು ಗ್ಯಾಸೆಟಿಯರ್‌ಗಳಲ್ಲಿ ನೀಡಿದ್ದಾರೆ. ಈ ಕರ್ನಾಟಕ ರಾಜ್ಯ ಗ್ಯಾಸೆಟಿಯರ್‌ನಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಕರ್ನಾಟಕ ಚರಿತ್ರೆಯ ಒಂದು ಭಾಗವಾಗಿ ಪರಿಗಣಿಸಿ ವಿವರಿಸಿದ್ದಾರೆ. ಒಡೆಯರ ಮೂಲ ಅವರ ಸಾಮ್ರಾಜ್ಯ ವಿಸ್ತರಣೆ, ರಾಜ ಒಡೆಯರಿಂದ ಮೈಸೂರು ಹೇಗೆ ಅಭಿವೃದ್ಧಿ ಹೊಂದಿತು ಎಂಬುದರ ವಿವರಗಳನ್ನು ತಿಳಿಸಿದ್ದಾರೆ. ಮೊಟ್ಟಮೊದಲ ಬಾರಿಗೆ ಮೈಸೂರು ದಸರಾ ಉತ್ಸವವನ್ನು ಪ್ರಾರಂಭಿಸಿ, ತಾನು ವಿಜಯನಗರದ ಸಂಸ್ಕೃತಿಯನ್ನು ಪ್ರತಿನಿಧಿಸುವ ಉತ್ತರಾಧಿಕಾರಿಯೆಂದು ತನ್ನ ಪ್ರಜೆಗಳಿಗೆ ತೋರಿಸಿಕೊಟ್ಟರು. ರಾಜ ಒಡೆಯರಿಂದ ಮೈಸೂರು ರಾಜ್ಯ ಹೆಚ್ಚಿನ ಮಟ್ಟಿಗೆ ತನ್ನ ಅಸ್ಮಿತೆಯನ್ನು ಕಂಡುಕೊಂಡಿತು ಎಂಬುದನ್ನು ತಿಳಿಸಿದ್ದಾರೆ. ರಾಜ ಒಡೆಯರ ನಂತರ ಅನೇಕ ಒಡೆಯರು ಆಳ್ವಿಕೆ ನಡೆಸಿದರೂ ಪ್ರಸಿದ್ಧಿ ಪಡೆಯಲಿಲ್ಲ. ಚಿಕ್ಕದೇವರಾಜ ಒಡೆಯರು ಅಧಿಕಾರವನ್ನು ಸ್ವೀಕರಿಸಿದ ನಂತರ ಮೈಸೂರು ಸಂಸ್ಥಾನ ತನ್ನ ಸ್ಥಾನವನ್ನು ವಿಸ್ತರಿಸಿಕೊಂಡಿತು. ಅನೇಕ ಪ್ರದೇಶಗಳನ್ನು ಸಂಸ್ಥಾನದಲ್ಲಿ ಸೇರಿಸುತ್ತಾ ಸಂಸ್ಥಾನವನ್ನು ವಿಶಾಲಗೊಳಿಸಿದರು ಎಂಬ ವಿವರಗಳನ್ನು ನೀಡಿದ್ದಾರೆ. ಆದರೆ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಅಧಿಕಾರಕ್ಕಾಗಿ ನಡೆದ ಕೊಲೆ, ಜಂಗಮರನ್ನು ಕೊಲ್ಲಿಸಿದ ಕೌರ್ಯವನ್ನು ವಿಲ್ಕ್ಸ್, ರೈಸ್ ನೀಡಿರುವ ಹೇಳಿಕೆಗಳ ವಿವರಗಳನ್ನು ನೀಡಿರುವುದಿಲ್ಲ. ಕಾಮತ್ ಅವರೂ ಸಿ.ಹಯವದನರಾವ್ ಅವರ ಹಾಗೆಯೇ ಈ ವಿಚಾರಗಳನ್ನು ತಿಳಿಸಿಲ್ಲ. ಮೈಸೂರು ಮತ್ತು ಮರಾಠರ ಸಂಬಂಧಗಳನ್ನು ತಿಳಿಸಿದ್ದಾರೆ. ದಳವಾಯಿಗಳಾದ ದೇವರಾಜಯ್ಯ ಮತ್ತು ನಂಜರಾಜಯ್ಯ ಅವರ ಏಳಿಗೆ, ಈ ಮಧ್ಯೆ ಮೈಸೂರಿನಲ್ಲಿ ಹೈದರಾಲಿಯ ಏಳಿಗೆಯ ವಿವರಗಳನ್ನು ಅನಾವರಣಗೊಳಿಸಿದ್ದಾರೆ. ಹೈದರಾಲಿಯು ಉಜ್ವಲ ಮುಸ್ಲಿಂ ಧರ್ಮಾಭಿಮಾನಿಯಾಗಿದ್ದರೂ, ತನ್ನ ಧರ್ಮವು ರಾಜಕೀಯ ವ್ಯವಹಾರದಲ್ಲಿ ಎಂದಿಗೂ ಅಡ್ಡ ಬಾರದಂತೆ ನೋಡಿಕೊಳ್ಳುತ್ತಿದ್ದನು(ಕನ್ನಡ ಆವೃತ್ತಿ-ಪು.೨೫೭). ಹೈದರಾಲಿಯ ನಂತರ ಅವನ ಮಗ ಟಿಪ್ಪುಸುಲ್ತಾನ್ ಅಧಿಕಾರವನ್ನು ಸ್ವೀಕರಿಸುತ್ತಾನೆ. ಮರಾಠರು, ನಿಜಾಮರು ಬ್ರಿಟಿಷರೊಂದಿಗೆ ಸೇರಿಕೊಂಡು ಟಿಪ್ಪುವನ್ನು ಸಂಪೂರ್ಣವಾಗಿ ಸೋಲಿಸುವುದರ ವಿವರಗಳನ್ನು ನೀಡಿದ್ದಾರೆ. ಅನಂತರ ಮೈಸೂರಿನ ಪ್ರಗತಿಗೆ ತಾಂತ್ರಿಕ ತಿಳುವಳಿಕೆ, ರೇಷ್ಮೆಗೆ ಪ್ರೋತ್ಸಾಹ ನೀಡಿದ ಮತ್ತು ಇವನ ಕಾಲದಲ್ಲಿ ಕೃಷಿ ಮತ್ತು ಕೈಗಾರಿಕೆಗಳು ಅಭಿವೃದ್ಧಿಯಾದವು ಎಂಬ ವಿವರಗಳು ಇವೆ.

ಇಲ್ಲಿ ಸೂಕ್ಷ್ಮವಾಗಿ ಗಮನಿಸಬೇಕಾದ ಅಂಶವೆಂದರೆ ಟಿಪ್ಪು ತನ್ನ ಕೊನೆಯ ದಿನಗಳಲ್ಲಿ ಬಹಳಷ್ಟು ನಿರಂಕುಶನಾದಂತೆ ತೋರುತ್ತದೆ ಎಂಬುದು. ಕನ್ನಡ ಮತ್ತು ಮರಾಠಿ ಭಾಷೆಗೆ

ಬದಲಾಗಿ ಪರ್ಶಿಯನ್ ಭಾಷೆಯನ್ನು ಆಡಳಿತದಲ್ಲಿ ತಂದನು. ೧೭೮೨ರಲ್ಲಿ ಅವನು ಎಲ್ಲಾ ಲೆಕ್ಕಪತ್ರಗಳನ್ನು ಪರ್ಶಿಯನ್ ಭಾಷೆಯಲ್ಲಿ ಇಡಲು ಆಜ್ಞಾಪಿಸಿದನು. ಇದರ ಪರಿಣಾಮವಾಗಿ ಮುಸ್ಲಿಮರನ್ನೇ ಆಡಳಿತದಲ್ಲಿ ನೇಮಿಸಬೇಕಾಯಿತು. ೧೭೮೮ರಲ್ಲಿ ಅವನ ೩೭ ಅಸೀಫರಲ್ಲಿ ಒಬ್ಬನೂ ಕೂಡ ಹಿಂದೂ ಇರಲಿಲ್ಲ. ಸುಶಿಕ್ಷಿತ ಮುಸ್ಲಿಮರು ಸಿಗದ ಕಾರಣಕ್ಕಾಗಿ ಅರ್ಧಮರ್ದ ಶಿಕ್ಷಣ ಪಡೆದವರು, ಆಡಳಿತ ಅಜ್ಞಾನದಿಂದ ಕಂದಾಯದ ವಸೂಲಿ ಮಂದವಾಯಿತು ಎಂಬ ವಿಚಾರಗಳನ್ನು ತಿಳಿಸಿದ್ದಾರೆ(ಪು.೨೫೯). ಆಡಳಿತದಲ್ಲಿ ಕನ್ನಡ ಮತ್ತು ಮರಾಠಿಗೆ ಬದಲಾಗಿ ಪರ್ಶಿಯನ್ ಭಾಷೆಯನ್ನು ಜಾರಿಗೆ ತಂದಿದ್ದರಿಂದಲೇ ಟಿಪ್ಪು ಕನ್ನಡದ್ರೋಹಿ ಎಂದು ಹೇಳಿರುವುದು ಸರಿಯೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಈ ಹೇಳಿಕೆಗಳು ಚರ್ಚೆಗೆ ಒಳಗಾಗಿವೆ. ಟಿಪ್ಪು ಬಗೆಗೆ ನೀಡಿರುವ ಹೇಳಿಕೆಗಳು ಒಂದಲ್ಲ ಒಂದು ರೀತಿಯಲ್ಲಿ ಟಿಪ್ಪುವನ್ನು ಡಿಸ್‌ಕೋರ್ಸ್‌ಗೆ ಒಳಮಾಡಿವೆ.

ಸಿ.ಹಯವದನರಾವ್ ಅವರು ಟಿಪ್ಪು ಕಂದಾಯ ವಿಭಾಗಗಳಲ್ಲಿ ಲೆಕ್ಕಪರಿಶೋಧನೆಗೆ ಮುಸ್ಲಿಮರನ್ನು ನೇಮಿಸಿದನು. ಮೊದಲು ಬ್ರಾಹ್ಮಣರು ಮತ್ತು ಹಿಂದೂಗಳು ಕಾರ್ಯ ನಿರ್ವಹಿಸುತ್ತಿದ್ದರು. ಮುಸ್ಲಿಂರನ್ನು ನೇಮಿಸಿದಾಗ ಅವರಿಗೆ ಬರೆಯಲು ಬರುವುದಿಲ್ಲ ಎಂದಾಗ ಅವರು ನಿಧಾನವಾಗಿ ಕಲಿತುಕೊಳ್ಳುತ್ತಾರೆ ಎಂದು ಟಿಪ್ಪು ಸುಲ್ತಾನನೇ ಕಟುವಾಗಿ ಉತ್ತರ ನೀಡಿದ್ದನು ಎಂಬುದನ್ನು ದಾಖಲಿಸುತ್ತಾರೆ(ಸಂ.೩, ಪು.೯೧೮). ಇದರಿಂದ ಟಿಪ್ಪು ಸುಲ್ತಾನನು ಮುಸ್ಲಿಂ ಧರ್ಮದ ಕಟ್ಟಾ ಅನುಯಾಯಿಯಾಗಿದ್ದನು ಎಂಬುದು ತಿಳಿಯುತ್ತದೆ. ಇಲ್ಲಿ ಧರ್ಮದ ದ್ವಂದ್ವತೆಯ ಹೇಳಿಕೆಯನ್ನು ನೋಡಬಹುದು. ಸಿ.ಹಯವದನರಾವ್ ಹೇಳಿರುವುದರಲ್ಲಿ ಅವರು ತನ್ನ ಜಾತಿಯ ಪರವಾಗಿ ಬ್ರಾಹ್ಮಣರು ಶತಶತಮಾನಗಳಿಂದ ಬಂದ ಅಧಿಕಾರವನ್ನು ಕಳೆದು ಕೊಂಡರು ಎಂಬುದು ಇಲ್ಲಿ ಮುಖ್ಯ ಈ ಹೇಳಿಕೆಯನ್ನು ನೀಡಿರುವುದು ಒಂದಾದರೆ, ರಾಜಕೀಯ ತುರ್ತು ಏನಿತ್ತು ಎಂಬುದು ಪತ್ತೆ ಹಚ್ಚುವುದು ಇನ್ನೊಂದು ಕಡೆ ಮಾಡಿರುವುದಿಲ್ಲ ಎಂಬುದು ತಿಳಿಯುತ್ತದೆ.

ಟಿಪ್ಪುವು ಮತಾಂಧನಾಗಿರಲಿಲ್ಲ ಎಂಬ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಅವನು ಹಿಂದೂ ದೇವಾಲಯಗಳಿಗೆ ಉದಾರವಾಗಿ ದಾನ ಮಾಡಿದನು. ಶೃಂಗೇರಿ ಮಠಕ್ಕೆ ದಾನ ನೀಡಿದ್ದರ ವಿವರಗಳಿವೆ. ಕೊಡಗು, ಮಲಬಾರ್ ಪ್ರದೇಶಗಳಲ್ಲಿ ಮತಾಂತರ ಮಾಡಿದ್ದು, ರಾಜಕೀಯ ತುರ್ತುಗಳಿಗೆ ಅನುಸಾರವಾಗಿ ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಅವನು ಧರ್ಮಸಹಿಷ್ಣು ಆಗಿದ್ದರೂ, ಮುಸ್ಲಿಂಧರ್ಮದ ಕಟ್ಟಾ ಅನುಯಾಯಿಯಾಗಿದ್ದನು. ಹೊಸದಾಗಿ ಮತಾಂತರ ಆದವರಿಗೆ ತನ್ನ ರಾಜ್ಯದಲ್ಲಿ ಮನೆಕಂದಾಯವನ್ನು ರದ್ದುಗೊಳಿಸಿದನು. ಹಾಗೆಯೇ ಭೂಕಂದಾಯದಲ್ಲಿ ಶೇಕಡ ೫೦ರಷ್ಟು ವಿನಾಯಿತಿ ಕೊಟ್ಟಿದ್ದನು. ಈ ರೀತಿಯಾಗಿ ಅವನ ಆಡಳಿತವು ಸಮರ್ಥವಾಗಿತ್ತು ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಈ ವಿಚಾರಗಳು ಟಿಪ್ಪುವಿನ ಬಗೆಗೆ ಶೋಧಿಸಲ್ಪಟ್ಟವುಗಳಾಗಿವೆ. ಈ ರೀತಿಯಾಗಿ ಹೈದರಾಲಿ ಮತ್ತು ಟಿಪ್ಪುವಿನ ಪತನದೊಂದಿಗೆ ಮೈಸೂರಿನ ಇತಿಹಾಸದ ಈ ಮುಸ್ಲಿಂ ಮಧ್ಯಕಾಲೀನ ಆಳ್ವಿಕೆ ಮಹತ್ವದ ಯುಗ ಮುಕ್ತಾಯವಾಯಿತು ಎಂದಿದ್ದಾರೆ(ಪು.೨೫೯).

ಪೂರ್ಣಯ್ಯ ಅವರ ಬಗೆಗೆ ರೈಸ್ ಅವರು ನೀಡಿರುವ ಹೇಳಿಕೆಗಳನ್ನು ಗಮನಿಸಿದಾಗ ವಿದೇಶಿ ಬರಹಗಾರರು ಪತ್ತೆ ಹಚ್ಚಿದ ವಿವರಗಳನ್ನು ದೇಶಿ ಬರಹಗಾರರು ಅದರಲ್ಲೂ ಜಾತಿವಾದದ ಹಿನ್ನೆಲೆಯಲ್ಲಿ ಒಂದೇ ಒಂದು ಮಾತು ಕೂಡ ಎತ್ತುವುದಿಲ್ಲ. ಪೂರ್ಣಯ್ಯ ಅವರು ತಂದ ಕಂದಾಯಪದ್ಧತಿಯು ಮುಖ್ಯವಾಗಿದ್ದು, ಮುಂದೆ ಅಸಮರ್ಪಕ ಕಂದಾಯ ಪದ್ದತಿ ಮತ್ತು ರಾಜರ ಮನೆತನದ ಭೋಗವಿಲಾಸ ಜೀವನದಿಂದ ಸರ್ಕಾರ ನಷ್ಟಕ್ಕೆ ಒಳಗಾಯಿತು. ಕಂದಾಯವನ್ನು ಹೆಚ್ಚಿಗೆ ಮಾಡಿದ್ದರಿಂದ ರೈತರು ದಂಗೆ ಎದ್ದರು. ಬೂದಿಬಸಪ್ಪನು ದಂಗೆ ಎದ್ದ ರೈತರ ಮುಖಂಡತ್ವವನ್ನು ಹೇಗೆ ವಹಿಸಿದ್ದನು ಎಂಬ ವಿವರಗಳನ್ನು ತಿಳಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರು ಕೆಲವು ಪ್ರದೇಶಗಳಿಗೆ ಭೇಟಿ ನೀಡಿದರೂ ಜನರು ಸ್ಪಂದಿಸಲಿಲ್ಲ. ಕೊನೆಗೆ ರೆಸಿಡೆಂಟ್‌ರು ಒಡೆಯರ ಅಧಿಕಾರವನ್ನು ಹಿಂತೆಗೆದುಕೊಂಡರು. ಇವರ ಮೇಲಿನ ದೋಷಗಳು ನಿಜವಲ್ಲವಾದರೂ ಅಧಿಕಾರವನ್ನು ಕಳೆದುಕೊಂಡಿದ್ದು ವಿಪರ್ಯಾಸ. ರೆಸಿಡೆಂಟ್‌ರು ಸ್ಥಳೀಯ ನಾಯಕರು ಅಧಿಕಾರ ಪಡೆದು ಹೈದರಾಲಿ ಮತ್ತು ಟಿಪ್ಪುಸುಲ್ತಾನರ ತರಹ ಮುಂದೆ ಈ ದಂಗೆಯ ಚಳವಳಿಗಾರರು ತಮಗೆ ಶತ್ರುಗಳಾಗುತ್ತಾರೆ ಎಂಬ ಆತಂಕದಿಂದ ಒಡೆಯರ ಅಧಿಕಾರವನ್ನು ಕಸಿದುಕೊಂಡರು ಎಂಬುದನ್ನು ಯೋಚಿಸಬೇಕಾಗುತ್ತದೆ. ಮಾರ್ಕ್ ಕಬ್ಬನ್ ಮತ್ತು ಬೌರಿಂಗ್ ಅವರ ಆಡಳಿತವನ್ನು ವಿವರಿಸುತ್ತಾ ಆಡಳಿತದಲ್ಲಾದ ಬದಲಾವಣೆಗಳನ್ನು ಗುರುತಿಸುತ್ತಾರೆ. ಬೌರಿಂಗ್‌ನು ಸ್ಥಳೀಯರನ್ನು ಕಡೆಗಣಿಸಿ ಆಂಗ್ಲ ಅಧಿಕಾರಿಗಳನ್ನು ಆಡಳಿತದಲ್ಲಿ ಸೇರಿಸಿಕೊಂಡನು ಎಂಬುದು ಮುಖ್ಯ ವಿಷಯ. ಕಬ್ಬನ್ ಮತ್ತು ಬೌರಿಂಗ್ ಅವರ ಆಡಳಿತಲ್ಲಿ ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿ ಹೊಂದಿ ಮೈಸೂರು ಆಧುನೀಕರಣಗೊಂಡಿತು ಎಂಬುದರ ವಿವರಗಳಿವೆ. ಇವರು ಹೇಗೆ ಕಾನೂನುರಹಿತವಾಗಿ ಆಡಳಿತ ನಡೆಸಿದರು ಎಂಬುದರ ವಿವರಗಳಿಲ್ಲ. ಅಭಿವೃದ್ಧಿಯ ನೆಲೆಯಲ್ಲಿಯೇ ವಿವರಗಳನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ.

ಬ್ರಿಟಿಷರ ವಿರುದ್ಧ ನಡೆಯುವ ಬಂಡಾಯಗಳಾದ ದೊಂಡಿಯವಾಘ, ಕಿತ್ತೂರು ದಂಗೆಗಳು, ನಗರದಂಗೆ, ಕೊಡಗಿನ ಬಂಡಾಯಗಳನ್ನು ವಿವರಿಸಿದ್ದಾರೆ. ಮೈಸೂರು ಒಡೆಯರ ಅಧಿಕಾರವನ್ನು ಪುನಃ ೧೮೮೧ರಲ್ಲಿ ಒಡೆಯರಿಗೆ ನೀಡಲಾಯಿತು. ೧೦ನೇ ಚಾಮರಾಜ ಒಡೆಯರು ಅಧಿಕಾರವನ್ನು ಸ್ವೀಕರಿಸಿದರು. ದಿವಾನರಾದ ಸಿ.ರಂಗಾಚಾರ್ಲು ಅವರ ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆ, ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತ, ದಿವಾನರಾದ ಶೇಷಾದ್ರಿ ಅಯ್ಯರ್, ಸರ್ ಎಂ.ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಇವೆಲ್ಲರ ಸಮರ್ಥ ಆಡಳಿತದಿಂದ ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನವಾಗಿ ಪರಿವರ್ತನೆಯಾಯಿತು ಎಂಬುದರ ವಿವರಗಳನ್ನು ತಿಳಿಸಿದ್ದಾರೆ.

ಪ್ರಜಾಪ್ರತಿನಿಧಿ ಸಭೆಯ ಮೂಲಕ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಚುನಾವಣೆಗಳು, ಇನ್ನಿತರ ವಿವರಗಳನ್ನು ತಿಳಿಯಬಹುದು. ಕರ್ನಾಟಕದಲ್ಲಿ ಸ್ವಾತಂತ್ರ್ಯ ಆಂದೋಲನ, ಮೈಸೂರು ಚಲೋ ಚಳವಳಿ, ಏಕೀಕರಣ ಚಳವಳಿ, ಭಾಷಾವಾರು ಪ್ರಾಂತ್ಯಗಳ ರಚನೆ, ಮೈಸೂರಿನ ರಾಜ್ಯಕ್ಕೆ ಕರ್ನಾಟಕ ಎಂದು ನಾಮಕರಣ ಮಾಡಿದರು ಎಂಬ ಅಂಶಗಳನ್ನು ತಿಳಿಸಿದ್ದಾರೆ.

ಕರ್ನಾಟಕ ರಾಜ್ಯ ಎಂದು ನಾಮಕರಣ ಆದ ಮೇಲೆ ಜನತೆ, ಜನಸಂಖ್ಯೆಯ ವಿವರಗಳು, ಧರ್ಮಗಳು, ಭಾಷೆಗಳು, ಬುಡಕಟ್ಟು, ಹಿಂದುಳಿದ ವರ್ಗಗಳು, ಜಾತಿಗಳ ವರ್ಗೀಕರಣ, ಸಾಮಾಜಿಕ ರಚನೆ, ಹಿಂದೂಗಳಲ್ಲಿನ ಜಾತಿ ವರ್ಗೀಕರಣ, ಅಂತರ್ಜಾತೀಯ ವಿವಾಹಗಳು, ಆಚಾರ-ವಿಚಾರಗಳು, ಶಿಕ್ಷಣ, ಕ್ರೀಡೆ, ಕೃಷಿ, ನೀರಾವರಿ ಮೊದಲಾದ ಪಶುಸಂಗೋಪನೆ, ಮೀನುಗಾರಿಕೆ ಮೊದಲಾದ ಅಂಶಗಳನ್ನು ವಿವರಿಸುತ್ತಾರೆ.

ಜನಗಣತಿಯ ಪ್ರಕಾರ ಯಾವ ರೀತಿ ಜನಸಂಖ್ಯೆ ಏರಿಕೆಯ ವಿವರಗಳು, ಜನಸಂಖ್ಯೆಗೆ ಅನುಗುಣವಾಗಿ ಆದ ನಗರೀಕರಣ ಜನರಿಗೆ ಒದಗಿಸಿದ ಸೌಕರ್ಯಗಳು ಇವೇ ಮೊದಲಾದ ಅಂಶಗಳನ್ನು ಕ್ರೋಡೀಕರಿಸಿದ್ದಾರೆ(೩೦೦-೩೨೬). ಧರ್ಮಗಳಲ್ಲಿ ವರ್ಗೀಕರಣವನ್ನು ಅವುಗಳ ಆಚರಣೆಗಳನ್ನು ತಿಳಿಸಿರುವುದನ್ನು ನೋಡಬಹುದು. ಭಾಷೆಗಳ ವರ್ಗೀಕರಣ, ಅವುಗಳ ಸ್ಥಾನಮಾನವನ್ನು ಕುರಿತು ವಿವರಿಸಿದ್ದಾರೆ. ಸ್ತ್ರೀಯರ ಸ್ಥಾನಮಾನವು ಶಿಕ್ಷಣದಿಂದ ಉನ್ನತ ಮಟ್ಟಕ್ಕೆ ಏರಿತು. ಬಾಲ್ಯವಿವಾಹಗಳು ಮೊದಲು ಜಾರಿಯಲ್ಲಿದ್ದು ಕ್ರಮೇಣ ಕಾನೂನಿನ ಮೂಲಕ ನಿಷಿದ್ಧಗೊಳಿಸಲಾಯಿತು. ಬುಡಕಟ್ಟುಗಳ ವರ್ಗೀಕರಣ, ಪರಿಶಿಷ್ಟ ಜಾತಿಗೆ ಸೇರ್ಪಡೆ, ಅವಿಭಕ್ತ ಕುಟುಂಬ, ಆಚರಣೆಗಳು ಮೊದಲಾದ ವಿಷಯಗಳನ್ನು ಅನಾವರಣಗೊಳಿಸಿದ್ದಾರೆ. ಬ್ರಿಟಿಷರ ಆಗಮನದ ನಂತರ ಬದಲಾವಣೆ, ಪಾಶ್ಚಿಮಾತ್ಯ ಶಿಕ್ಷಣದಿಂದ ಜನರಲ್ಲಿ ಮೂಡಿದ ಜಾಗೃತಿಯು ಮುಖ್ಯ ಹಬ್ಬಗಳಲ್ಲಿ ಹಿಂದೂ, ಮುಸ್ಲಿಂ, ಕ್ರೈಸ್ತರು ಆಚರಿಸುವ ಹಬ್ಬಗಳ ವಿವರಗಳು ಇವೆ. ವಿಜಯನಗರ ಅರಸರಿಂದ ಆರಂಭವಾದ ನವರಾತ್ರಿ, ವಿಜಯದಶಮಿ ಹಬ್ಬಗಳನ್ನು ಹಾಗೆಯೇ ಒಡೆಯರು ಇಂದಿಗೂ ಈ ಹಬ್ಬಗಳನ್ನು ಆಚರಿಸಿಕೊಂಡು ಬರುತ್ತಿದ್ದಾರೆ ಎಂಬ ಅಂಶಗಳನ್ನು ಇಲ್ಲಿ ಕಾಣಬಹುದು.

ಕೃಷಿ ಮೂಲ ಕಸುಬಾಗಿದ್ದು, ಕೃಷಿಯ ಅಭಿವೃದ್ಧಿಗೆ ಭೂಮಿಯ ಬಳಕೆ, ರಸಗೊಬ್ಬರ, ಕೃಷಿ ಸಾಲ, ಬ್ಯಾಂಕ್‌ಗಳ ವಿವರ, ಕೃಷಿಗಾಗಿ ಕೃಷಿ ಬ್ಯಾಂಕ್, ಕೃಷಿ ಕಾಯಿದೆಗಳು, ತೋಟಗಾರಿಕೆ, ಬೆಳೆಗಳು, ವಾಣಿಜ್ಯದ ಅಭಿವೃದ್ಧಿ ಯೋಜನೆಗಳಲ್ಲಿ ಕೈಗೊಂಡ ಕಾರ್ಯಗಳನ್ನು ಕುರಿತು ವಿವರಿಸಿದ್ದಾರೆ. ಮಾರುಕಟ್ಟೆಗಳು, ಉದ್ಯಾನಗಳ ಸಂರಕ್ಷಣೆ, ಮೊದಲಾದ ವಿಚಾರಗಳನ್ನು ಗಮನಿಸಬಹುದು. ಕೃಷಿಯ ಅಭಿವೃದ್ಧಿಗಾಗಿ ಶಿಕ್ಷಣ, ಕೃಷಿ ವಿಶ್ವವಿದ್ಯಾಲಯ ಸ್ಥಾಪನೆ, ತೋಟಗಾರಿಕೆಯ ಭಾರತೀಯ ಸಂಶೋಧನಾ ಸಂಸ್ಥೆಗಳು ಸ್ಥಾಪನೆ ಆದವು. ನೀರಾವರಿ ಯೋಜನೆಗಳು, ಜಾನುವಾರು, ಪಶುವೈದ್ಯ ಸಂಸ್ಥೆ, ಮೀನುಗಾರಿಕೆ ಯೋಜನೆಗಳು ಕಾರ್ಯಗತವಾದವು ಎಂಬುದನ್ನು ತಿಳಿಸಿದ್ದಾರೆ.

ಎರಡನೇ ಸಂಪುಟವು ಕೈಗಾರಿಕೆ, ಬ್ಯಾಂಕಿಂಗ್, ಹಣಕಾಸು ನೆರವು, ವ್ಯಾಪಾರ-ವಾಣಿಜ್ಯ, ಸಾರಿಗೆ-ಸಂಪರ್ಕಗಳು, ಆರ್ಥಿಕ ಪ್ರವೃತ್ತಿಗಳು, ಆಡಳಿತದ ವಿಷಯಗಳನ್ನು ಒಳಗೊಂಡಿದೆ. ೧೯೩೦ರಲ್ಲಿ ಕೋಲಾರದ ಚಿನ್ನದ ಗಣಿ, ಬಟ್ಟೆ ಗಿರಣಿಗಳು ಸ್ಥಾಪನೆ ಆದವು. ಕಾಗದ, ಸಕ್ಕರೆ, ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಗಳು, ವಿದ್ಯುಚ್ಛಕ್ತಿ, ಖಾದಿ ಮತ್ತು ಗ್ರಾಮೋದ್ಯೋಗಕ್ಕೆ ಪ್ರೋತ್ಸಾಹವನ್ನು ನೀಡಲಾಯಿತು. ಹತ್ತಿ, ಉಣ್ಣೆ, ರೇಷ್ಮೆ, ಚರ್ಮ ಕೈಗಾರಿಕೆಗಳಿಗೆ ಅನುದಾನವನ್ನು ಸರ್ಕಾರ ನೀಡಿತು ಎಂಬುದರ ವಿವರಗಳಿವೆ(ಪು.೫೫-೮೨). ಜನರಲ್ಲಿ ಉಳಿತಾಯದ

ಮನೋಭಾವನೆಯನ್ನು ಬೆಳೆಸಲು ಬ್ಯಾಂಕ್‌ಗಳ ಸೌಲಭ್ಯ, ರಸ್ತೆ–ಸಾರಿಗೆ ಇವೇ ಮೊದಲಾದವುಗಳ ಅಭಿವೃದ್ಧಿಗೆ ಚಾಲನೆ ನೀಡಲಾಯಿತು ಎಂಬ ವಿವರಗಳಿವೆ. ಪಂಚವಾರ್ಷಿಕ ಯೋಜನೆಗಳ ಮೂಲಕ ಅಭಿವೃದ್ಧಿಯ ಅಂಶಗಳನ್ನು ನೋಡಬಹುದು.

ಆಡಳಿತದ ವಿಚಾರದಲ್ಲಿ ಸಂಸ್ಥಾನಿಕರ ಆಡಳಿತ ಭಾಗಗಳಲ್ಲಿ ಮತ್ತು ಬ್ರಿಟಿಷರ ಪ್ರಾಂತ್ಯಗಳಲ್ಲಿ ಸ್ವಾತಂತ್ರ್ಯಕ್ಕೆ ಮೊದಲೇ ಜಾರಿಯಲ್ಲಿದ್ದ ಕೆಲವೊಂದು ವ್ಯವಸ್ಥೆಯನ್ನೇ ಕರ್ನಾಟಕ ರಾಜ್ಯವು ತನ್ನ ಆಡಳಿತ ಕ್ರಮದಲ್ಲಿ ಅಳವಡಿಸಿಕೊಂಡಿರುವುದರ ವಿವರಗಳನ್ನು ನೋಡಬಹುದು. ಅಮಲ್ದಾರರು, ಶೇಕ್‌ದಾರರು ಕಂದಾಯ ವಸೂಲಿ ಮಾಡುತ್ತಿದ್ದರು. ದಿವಾನರಾದ ಸಿ.ರಂಗಚಾರ್ಲು ಅವರ ಪ್ರಜಾಪ್ರತಿನಿಧಿ ಸಭೆ ಮುಂದುವರಿದಂತೆ ನಡೆದ ಚುನಾವಣೆಗಳು ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನ್ಯಾಯ ವಿಧಾಯಕ ಸಭೆ, ವಿಧಾನಸಭೆ, ವಿಧಾನಪರಿಷತ್ತು, ವಿಧಾನಮಂಡಲ, ಸಚಿವಾಲಯ, ಸಚಿವ ಸಂಪುಟ ಇವೇ ಮೊದಲಾದ ಆಡಳಿತದ ವಿವರಗಳನ್ನು ಕ್ರೋಡೀಕರಿಸಿದ್ದಾರೆ.

ಭೂಕಂದಾಯವು ಯಾವ ರೀತಿ ಇತ್ತು, ಅನಂತರ ಜಾರಿಗೆ ಬಂದ ಗೇಣಿಶಾಸನ, ಭೂಸುಧಾರಣೆ, ಉಳುವವನೇ ಭೂಒಡೆಯ ಎಂಬ ಕಾನೂನು, ಅಬಕಾರಿ ತೆರಿಗೆ ಮೊದಲಾದ ವಿಚಾರಗಳನ್ನು ಇದರಲ್ಲಿ ನೋಡಬಹುದು. ಸ್ವಾತಂತ್ರ್ಯಕ್ಕಿಂತ ಮೊದಲು ಇದ್ದ ನ್ಯಾಯಾಡಳಿತ, ಸ್ವಾತಂತ್ರ್ಯ ನಂತರದ ನ್ಯಾಯಾಡಳಿತದ ವಿವರಗಳಿವೆ. ನ್ಯಾಯಾಲಯಗಳ ಸ್ಥಾಪನೆ, ಸ್ಥಳೀಯ ಆಡಳಿತದಲ್ಲಿ ಪಂಚಾಯಿತಿಗಳು, ಪುರಸಭೆಗಳು ಇವೇ ಮೊದಲಾದ ಅಂಶಗಳ ವಿವರಗಳನ್ನು ತಿಳಿಸಿದ್ದಾರೆ.

ಮೂರನೆಯ ಸಂಪುಟವು ಸಮಾಜಸೇವಾ ಸೌಲಭ್ಯಗಳು, ಸಂಸ್ಕೃತಿ ಮತ್ತು ಪ್ರೇಕ್ಷಣೀಯ ಸ್ಥಳಗಳ ಬಗೆಗೆ ವಿವರಗಳನ್ನು ವಿವರಿಸುತ್ತಾರೆ. ಪ್ರಮುಖವಾಗಿ ಶಿಕ್ಷಣದಲ್ಲಿ ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಿಕ್ಷಣ, ಪದವಿಪೂರ್ವ, ಪದವಿ, ಉನ್ನತ ಶಿಕ್ಷಣ, ವಯಸ್ಕರ ಶಿಕ್ಷಣ, ತಾಂತ್ರಿಕ, ಕಾನೂನು, ವೈದ್ಯಕೀಯ ಶಿಕ್ಷಣ ಮೊದಲಾದ ವಿವರಗಳನ್ನು ನೋಡಬಹುದು. ಯೋಜನೆಗಳಲ್ಲಿ ಶಿಕ್ಷಣಕ್ಕಾಗಿ ಕೈಗೊಂಡ ಕಾರ್ಯಗಳು, ಖಾಸಗಿ ಶಿಕ್ಷಣ ಸಂಸ್ಥೆಗಳು ಶಿಕ್ಷಣದ ಪ್ರಸಾರದಲ್ಲಿ ಕೈಜೋಡಿಸಿದ ವಿವರಗಳನ್ನು ನೋಡಬಹುದು(ಪು.೭೦–೭೬).

ಸಾರ್ವಜನಿಕ ಸೇವಾ ಸೌಲಭ್ಯಗಳು, ಧಾರ್ಮಿಕ ದಾನದತ್ತಿಗಳು, ಕಾರ್ಮಿಕರ ಕಲ್ಯಾಣ, ಪಾನವಿರೋಧ, ಹಿಂದುಳಿದ ವರ್ಗಗಳ ಏಳಿಗೆಗಾಗಿ ಕೈಗೊಂಡ ಕಾರ್ಯಗಳ ವಿವರಗಳನ್ನು ವಿವರಿಸಿದ್ದಾರೆ(ಪು.೨೦೪–೨೦೮). ಪರಿಶಿಷ್ಟ ಜಾತಿಗಳ ಕಲ್ಯಾಣಕ್ಕಾಗಿ ಕಾರ್ಯಕ್ರಮಗಳನ್ನು ರೂಪಿಸಲಾಯಿತು. ಶಿಕ್ಷಣ, ವಿದ್ಯಾರ್ಥಿವೇತನ, ವಿದ್ಯಾರ್ಥಿನಿಲಯ ಸೌಲಭ್ಯಗಳ ವಿವರ, ಈ ಸೌಲಭ್ಯಗಳನ್ನು ಒದಗಿಸಲು ಸಮಾಜಕಲ್ಯಾಣ ಇಲಾಖೆ ಸ್ಥಾಪನೆ, ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ ಕಾರ್ಯಕ್ರಮಗಳು ಇವೇ ಮೊದಲಾದ ಅಂಶಗಳನ್ನು ಅಭಿವೃದ್ಧಿ ನೆಲೆಯಲ್ಲಿ ವಿವರಿಸಿದ್ದಾರೆ.

ಯಾವುದೇ ಒಂದು ದೇಶದ ಬಗೆಗೆ ತಿಳಿಯಲು ಅಲ್ಲಿನ ಸಂಸ್ಕೃತಿಯು ಮುಖ್ಯ. ಈ ನಿಟ್ಟಿನಲ್ಲಿ ಗ್ಯಾಸೆಟಿಯರ್‌ನ ಮೂಲಕ ಸಂಸ್ಕೃತಿಯನ್ನು ದಾಖಲಿಸುವ ಪ್ರಯತ್ನ ಮಾಡಿದ್ದಾರೆ.

ಏಕೆಂದರೆ ಕಾಲಘಟ್ಟಗಳಿಗನುಗುಣವಾಗಿ ಸಂಸ್ಕೃತಿಯ ಅಂಶಗಳು ಕಣ್ಮರೆಯಾಗುವ ಮುನ್ನ ದಾಖಲಿಸುವುದು, ಹಾಗೆಯೇ ಹಿಂದಿನ ದಾಖಲೆಗೊಂಡ ಸಂಸ್ಕೃತಿಯ ಅವಲೋಕನವು ಅಗತ್ಯವಾದುದು. ಭಾಷೆಗಳು, ಸಾಹಿತ್ಯಕ ಪರಂಪರೆ, ವಾಸ್ತುಶಿಲ್ಪ, ಮೂರ್ತಿಶಿಲ್ಪ, ವರ್ಣಚಿತ್ರಕಲೆ, ನೃತ್ಯ, ನಾಟಕ, ಸಂಗೀತ, ಜಾನಪದ ಸಾಹಿತ್ಯ ಮತ್ತು ಇತರ ವಿಷಯಗಳಲ್ಲಿ ಮಾಡಿದ ಸಾಧನೆಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ತಿಳಿಸಿರುವುದು ವಿಶೇಷವಾಗಿದೆ. ಸಂಪುಟದ ಕೊನೆಯಲ್ಲಿ ಪ್ರೇಕ್ಷಣೀಯ ಸ್ಥಳಗಳ ಮಾಹಿತಿಗಳನ್ನು ನೀಡಿದ್ದಾರೆ. ಇದು ಆಯಾಯ ಸ್ಥಳಗಳ ಪ್ರಾಮುಖ್ಯತೆಯನ್ನು ತಿಳಿಯಲು ಸಹಾಯಕವಾಗಿದೆ.

ಕರ್ನಾಟಕದ ಏಕೀಕರಣದ ನಂತರ ಜಿಲ್ಲೆಗಳ ಸಮಗ್ರನೋಟವನ್ನು ಈ ಗ್ಯಾಸೆಟಿಯರ್‌ನಲ್ಲಿ ನೋಡಬಹುದು. ಸಂಶೋಧಿಸಲಾದ ಕೆಲವು ವಿಚಾರಗಳನ್ನು ಸೇರಿಸಲಾಗಿದೆ. ಸಂಶಯಾತ್ಮಕ ವಿವರಗಳನ್ನು ಬಿಡಲಾಗಿದೆ. ಕೆಲವು ಆಡಳಿತಾತ್ಮಕ ಬದಲಾವಣೆಗಳೊಂದಿಗೆ ಬ್ರಿಟಿಷ್ ಮಾದರಿಯ ಆಡಳಿತವು ಮುಂದುವರಿದಿದ್ದರ ವಿವರಗಳನ್ನು ನೋಡಬಹುದು. ಹಳೆಯ ಗ್ಯಾಸೆಟಿಯರ್‌ಗಳ ಮುಂದುವರಿದ ಭಾಗಗಳಾಗಿವೆ.

ಸೂರ್ಯನಾಥ ಕಾಮತ್ ಅವರು ತಮ್ಮ ಸಂಪಾದಕತ್ವದಲ್ಲಿ(೧೯೮೮) ಮೈಸೂರು ಜಿಲ್ಲಾ ಗ್ಯಾಸೆಟಿಯರ್‌ನ್ನು ಹೊರತಂದರು.[೫೩] ಮೈಸೂರು ಜಿಲ್ಲೆ ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದೇ ಹೆಸರು ಪಡೆದಿದೆ. ಇಲ್ಲಿನ ಮೈಸೂರು ಅರಮನೆ, ದಸರಾ, ಜಂಬುಸವಾರಿ, ಬೃಂದಾವನ, ಮೃಗಾಲಯ, ರೇಷ್ಮೆ ಸೀರೆ, ಶ್ರೀಗಂಧದ ಕರಕುಶಲ ವಸ್ತುಗಳು ಮೊದಲಾದವು ಮೈಸೂರನ್ನು ದೇಶ ವಿದೇಶಗಳಲ್ಲಿ ಪ್ರಸಿದ್ಧಿಗೊಳಿಸಿವೆ. ಇಲ್ಲಿ ಆಳ್ವಿಕೆ ಮಾಡಿದ ಒಡೆಯರುಗಳ ಚರಿತ್ರೆಯು ಮುಖ್ಯವಾಗಿದ್ದು, ಈ ಗ್ಯಾಸೆಟಿಯರ್‌ನಲ್ಲಿ ಹೇಗೆ ಮೂಡಿಬಂದಿದೆ ಎಂಬುದು ಮುಖ್ಯ. ಮೊದಲು ಮೈಸೂರಿಗೆ ಸೇರಿದ ಜಿಲ್ಲೆಗಳನ್ನು ಗ್ಯಾಸೆಟಿಯರ್‌ಗಳ ಸಂಪುಟಗಳ ಭಾಗದಲ್ಲಿಯೇ ಸೇರಿಸಿ ಬಿ.ಎಲ್.ರೈಸ್, ಸಿ.ಹಯವದನರಾವ್ ಅವರು ವಿವರಿಸಿದ್ದರು. ವಸಾಹತೋತ್ತರ ಕಾಲಘಟ್ಟದಲ್ಲಿ ಪ್ರತ್ಯೇಕವಾಗಿಯೇ ಜಿಲ್ಲಾ ಗ್ಯಾಸೆಟಿಯರ್‌ಗಳನ್ನು ಹೊರತರಲಾಗಿದೆ. ಕರ್ನಾಟಕದ ಮೂವತ್ತು ಜಿಲ್ಲೆಗಳಲ್ಲಿ ಮೈಸೂರು ಜಿಲ್ಲೆ ೧೮೬೨ರಲ್ಲಿ ಕಮೀಷನರ್‌ಗಳ ಆಳ್ವಿಕೆಯಲ್ಲಿಯೇ ಜಿಲ್ಲೆಯಾಗಿತ್ತು. ೧೯೩೯ ಹಾಗೂ ೧೯೯೭ರಲ್ಲಿ ವಿಭಜಿತವಾದರೂ ಹಾಗೆಯೇ ಮುಂದುವರಿದಿದೆ.

ಮೈಸೂರು ಹೆಸರಿಗೆ ಹಿನ್ನೆಲೆಯಾಗಿ ಅನೇಕ ವಿಚಾರಗಳು ಇಲ್ಲಿ ಮಿಳಿತವಾಗಿವೆ. ಪ್ರಾಚೀನ ಬೌದ್ಧಗ್ರಂಥದಲ್ಲಿ ಮಹಿಷರಾಷ್ಟ್ರ ಎಂದು ಹೆಸರಿದ್ದು, ಅಶೋಕ ಚಕ್ರವರ್ತಿಯು ಬೌದ್ಧ ಭಿಕ್ಷುಗಳನ್ನು ಮತ ಪ್ರಚಾರಕ್ಕೆ ಕಳುಹಿಸಿದನೆಂದು ಹೇಳಲಾಗುತ್ತದೆ. ತಮಿಳಿನ ಬಹು ಪ್ರಾಚೀನ ಗ್ರಂಥದಲ್ಲಿ 'ಇರುಮೈನಾಡೇ ಮಹಿಷಮಂಡಲ' ಎಂದು, ಮಂಡ್ಯ ತಾಲ್ಲೂಕಿನ ಕದಲೂರಿನ ೮೬೨ರ ತಾಮ್ರ ಶಾಸನದಲ್ಲಿ 'ಮೈಸೂರು' ಎಂದು ಸ್ಪಷ್ಟವಾಗಿ ಉಲ್ಲೇಖಿತವಾಗಿದೆ. ೧೨ನೇ ಶತಮಾನದ ಕೆಲವು ಶಾಸನಗಳಲ್ಲಿ 'ಮೈಸೂನಾಡು' ಎಂದು, ಸಾಹಿತ್ಯ ಕೃತಿಗಳಲ್ಲಿ 'ಮಹಿಷಸೂರಪುರ' ಎಂದಿದ್ದಾರೆ. ಐತಿಹ್ಯದಲ್ಲಿ ಹಿಂದೆ ಕೋಣನ ತಲೆಯುಳ್ಳ ಮಹಿಷನೆಂಬ

ರಾಕ್ಷಸ ಚಾಮುಂಡಿ ಬೆಟ್ಟದಲ್ಲಿ ಇದ್ದನೆಂದೂ, ಅವನು ತಪಸ್ಸು ಮಾಡಿ ಬ್ರಹ್ಮನಿಂದ ವರ ಪಡೆದು ದೇವತೆಗಳು, ಋಷಿಗಳನ್ನು ಪೀಡಿಸುತ್ತಿದ್ದ, ಪರಮೇಶ್ವರನ ಆದೇಶದಂತೆ ಎಲ್ಲಾ ದೇವತೆಗಳು, ಚಾಮುಂಡಿಗೆ ಶಕ್ತಿ ಧಾರೆ ಎರೆದು ಕಳುಹಿಸಿದರು. ಆಗ ಚಾಮುಂಡಿ ಮಹಿಷಾ ಸುರನನ್ನು ಕೊಂದು ಬೆಟ್ಟದಲ್ಲಿ ನೆಲೆಸಿದಳು. ಇದರಿಂದ ಮಹಿಷಪುರವೆಂದು ಹೆಸರಾಗಿ ಮುಂದೆ ಅದೇ ಮೈಸೂರಾಯಿತು ಎಂದು ಹೇಳಲಾಗುತ್ತದೆ. ಇಲ್ಲಿ ಸ್ಥಳನಾಮಗಳು, ಐತಿಹ್ಯಗಳು ಚರಿತ್ರೆಯಲ್ಲಿ ಮಿಳಿತರಾಗಿರುವುದನ್ನು ನೋಡಬಹುದು.

ಜನಸಂಖ್ಯೆಯ ವಿವರಗಳು, ಭೌಗೋಳಿಕ ಲಕ್ಷಣಗಳು, ಭೂಸ್ವರೂಪ, ನದಿ ಮತ್ತು ಜಲವ್ಯವಸ್ಥೆ, ಅರಣ್ಯಸಂಪತ್ತು, ಸಸ್ಯಸಂಪತ್ತು, ಪ್ರಾಣಿಸಂಪತ್ತು, ಖನಿಜಸಂಪತ್ತು ಮೊದಲಾದ ನೈಸರ್ಗಿಕ ಸಂಪತ್ತುಗಳ ವಿವರಗಳನ್ನು ನೀಡಿದ್ದಾರೆ(ಪು.೧–೪೯). ಆಡಳಿತದ ಸಂಕ್ಷಿಪ್ತ ವಿವರಗಳನ್ನು ನೋಡಿದಾಗ ಗಂಗರು ೪ನೇ ಶತಮಾನಕ್ಕೆ ಮೈಸೂರು ಪ್ರದೇಶದಲ್ಲಿ ಆಳ್ವಿಕೆ ಮಾಡಿದ್ದಕ್ಕೆ ಇಲ್ಲಿನ ಜನಾಂಗವೇ ಕಾರಣವಾಗಿದೆ. ಅವರ ರಾಜಧಾನಿ ತಲಕಾಡು ಈ ಭಾಗಕ್ಕೆ ಸೇರಿದೆ. ಚೋಳರು, ಹೊಯ್ಸಳರು ನಡೆಸಿದ ಯುದ್ಧಗಳಲ್ಲಿ ಗೆದ್ದ ಮೈಸೂರಿನ ಪ್ರದೇಶಗಳ ವಿವರಗಳನ್ನು ತಿಳಿಯಬಹುದು. ವಿಜಯನಗರದ ಆಳ್ವಿಕೆ, ವಿಜಯನಗರದ ವೆಂಕಟಪತಿರಾಯನ ಪ್ರತಿನಿಧಿಯಾದ ತಿರುಮಲರಾಯನಿಂದ ಶ್ರೀರಂಗಪಟ್ಟಣವನ್ನು ತನ್ನ ಹತೋಟಿಗೆ ತೆಗೆದುಕೊಂಡನು. ಇದನ್ನೇ ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಹೀಗೆಯೇ ಕಂಠೀರವ ನರಸರಾಜ, ಚಿಕ್ಕದೇವರಾಜ, ಹೈದರ್–ಟಿಪ್ಪು ಆಳ್ವಿಕೆಯಲ್ಲಿ ಮುಂದುವರಿಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮುಂದುವರಿದರೂ ಕಮೀಷನರ್‌ಗಳ ಆಳ್ವಿಕೆಯಲ್ಲಿ ಅಷ್ಟಗ್ರಾಮದ ಫೌಜುದಾರರು ಆಳ್ವಿಕೆ ನಡೆಸಿದರು. ೧೦ನೇ ಚಾಮರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆ ನಡೆಸಿದರು. ಕೊನೆಗೆ ಜಯಚಾಮ ಒಡೆಯರು ಕಾಲದಲ್ಲಿ ಮೈಸೂರು ಸಂಸ್ಥಾನ ಪ್ರಜಾಪ್ರಭುತ್ವಕ್ಕೆ ಸೇರ್ಪಡೆಯಾಯಿತು ಎಂದು ಚರಿತ್ರೆಯಲ್ಲಿ ದಾಖಲಾದ ವಿವರಗಳನ್ನು ತಿಳಿಸಿರುವುದು ಸೂಕ್ತವಾಗಿದೆ. ಮೈಸೂರು ಒಡೆಯರ ಚರಿತ್ರೆಯಲ್ಲಿ ರೈಸ್, ಹಯವದನರಾವ್ ತಿಳಿಸಿರುವ ವಿಷಯಗಳ ಪ್ರಸ್ತಾಪ ಇರುವುದಿಲ್ಲ.

೧೮೭೯ರಲ್ಲಿ ಮೈಸೂರು ಜಿಲ್ಲೆ ೧೪ ತಾಲೂಕುಗಳನ್ನು ಹೊಂದಿ ಅಮಲ್ದಾರರು ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ೧೯೮೯ರಲ್ಲಿ ೧೧ ತಾಲೂಕುಗಳನ್ನು ಹೊಂದಿತ್ತು. ಪ್ರಸ್ತುತವಾಗಿ ೭ ತಾಲೂಕುಗಳನ್ನು ಹೊಂದಿದೆ. ಮೈಸೂರು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಮೈಸೂರು ಒಡೆಯರ ಚಾರಿತ್ರಿಕ ಮಹತ್ವ, ಸಾಂಸ್ಕೃತಿಕ ಪ್ರಾಮುಖ್ಯತೆಯನ್ನು, ಧಾರ್ಮಿಕ ವೈವಿಧ್ಯವನ್ನೂ, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯನ್ನು ಹೊಂದಿದ್ದು, ಪ್ರವಾಸೋದ್ಯಮ ದೃಷ್ಟಿಯಿಂದ ಅಂತಾರಾಷ್ಟ್ರೀಯ ನಕಾಶೆಯಲ್ಲಿ ವಿಶಿಷ್ಟ ಸ್ಥಾನವನ್ನು ಹೊಂದಿದೆ ಎಂಬ ವಿವರಗಳನ್ನು ತಿಳಿಸಿರುವುದು ಸೂಕ್ತ.

ಜನಾಂಗದ ವಿವರ, ಧರ್ಮ, ಜಾತಿ, ಭಾಷೆ, ಸಂಸ್ಕೃತಿ ಇವೇ ಮೊದಲಾದ ಮಾಹಿತಿಗಳನ್ನು ಇಲ್ಲಿ ನೀಡಲಾಗಿದೆ. ಕೃಷಿ, ನೀರಾವರಿ, ಕೃಷಿ ಕಾರ್ಮಿಕರು, ಭೂಹಿಡುವಳಿಗಳು, ಬೆಳೆಗಳ ವಿವರ, ಇವೇ ಮೊದಲಾದ ಅಂಶಗಳನ್ನು ನೋಡಬಹುದು. ಸ್ವಾತಂತ್ರ್ಯದ ನಂತರ ಪಂಚವಾರ್ಷಿಕ

ಯೋಜನೆಗಳ ಮೂಲಕ ಆರ್ಥಿಕಾಭಿವೃದ್ಧಿಯನ್ನು ಸಾಧಿಸಿದ್ದರ ವಿವರಗಳು ಸೇರಿಕೊಂಡಿವೆ. ಸ್ವಾತಂತ್ರ್ಯದ ನಂತರ ಸ್ಥಾಪನೆಯಾದ ಕೈಗಾರಿಕೆಗಳ ವಿವರ, ಬ್ಯಾಂಕಿಂಗ್, ವ್ಯಾಪಾರ ಮತ್ತು ವಾಣಿಜ್ಯದ ವಿವರಗಳನ್ನು ತಿಳಿಯಬಹುದು(ಪು.೨೬೭-೨೮೦). ಭೂಕಂದಾಯ, ಗೇಣಿಶಾಸನ, ಭೂ ಒಡೆತನ ಹೇಗೆ ರೈತರಿಗೆ ಸೇರಿತು, 'ಉಳುವವನೇ ಭೂಮಿ ಒಡೆಯ' ಎಂಬ ಅಂಶಗಳನ್ನು ನೋಡಬಹುದು. ಕಾಲಾನಂತರದಲ್ಲಿ ಆದ ಬದಲಾವಣೆಗಳನ್ನು ಇಲ್ಲಿ ಗಮನಿಸಬಹುದು.

ನ್ಯಾಯಾಡಳಿತ, ಸಾರ್ವಜನಿಕ ಸೇವಾ ಸೌಲಭ್ಯಗಳು, ಶಿಕ್ಷಣ, ವೈದ್ಯಕೀಯ ಇವೇ ಮೊದಲಾದ ಅಂಶಗಳನ್ನು ಕ್ರೋಡೀಕರಿಸಿದ್ದಾರೆ. ಸತ್ಯಾಗ್ರಹಗಳ ಬಗೆಗೆ ತಿಳಿಸುತ್ತಾ ಮೊದಲು ಮೈಸೂರು, ಮೈಸೂರಿಗಾಗಿ ಎನ್ನುತ್ತಾ, ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ನಡುವೆ ನಡೆದ ಚಳವಳಿ, ಬ್ರಾಹ್ಮಣೇತರ ಚಳವಳಿ, ಪ್ರಜಾಮಿತ್ರ ಮಂಡಳಿಗಳ ವಿವರಗಳು ಸೇರಿದ್ದು, ನಿಮ್ನವರ್ಗಗಳ ಏಳಿಗೆ, ವಿಧವಾವಿವಾಹ, ಮಹಿಳೆಯರ ಶಿಕ್ಷಣಕ್ಕಾಗಿ ಕಾನೂನಾತ್ಮಕ ಹೋರಾಟವನ್ನು ತಿಳಿಸಿದ್ದಾರೆ. ಮೈಸೂರು ಚಲೋ ಚಳವಳಿಯಲ್ಲಿ ಜನರ ಪಾತ್ರವು ಮುಖ್ಯ ಎಂಬುದನ್ನು ವಿವರಿಸಿದ್ದಾರೆ. ಸ್ವಾತಂತ್ರ್ಯ ನಂತರ ಪ್ರಾರಂಭವಾದ ಚುನಾವಣೆಗಳ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಇಲ್ಲಿ ಪ್ರಮುಖವಾಗಿ ಗುರುತಿಸಬೇಕಾಗಿರುವ ಅಂಶವೆಂದರೆ ಬ್ರಾಹ್ಮಣೇತರ ಚಳವಳಿಯ ಪ್ರಸ್ತಾಪ, ವಸಾಹತುಶಾಹಿ ಕಾಲಘಟ್ಟದಲ್ಲಿ ಬಿ.ಎಲ್.ರೈಸ್ ಮತ್ತು ಸಿ.ಹಯವದನರಾವ್ ಅವರು ರಚಿಸಿರುವ ಮೈಸೂರು ಗ್ಯಾಸೆಟಿಯರ್‌ಗಳಲ್ಲಿ ದಿವಾನರ ಹುದ್ದೆಗಾಗಿ ನಡೆದ ಬ್ರಾಹ್ಮಣರ ನಡುವಿನ ಜಗಳ ಮತ್ತು ಸಂಸ್ಥಾನದಲ್ಲಿ ಹೊಸ ಅಲೆ ಎಬ್ಬಿಸಿದ ಬ್ರಾಹ್ಮಣೇತರ ಚಳವಳಿಯ ಪ್ರಸ್ತಾಪ ಮಾಡಿರುವುದೇ ಇಲ್ಲ. ಏಕೆಂದರೆ ಇಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ರೈಸ್ ಅವರು ವಸಾಹತುಶಾಹಿ ಪರವಾಗಿ ಆಡಳಿತಾತ್ಮಕವಾದ ಮಾಹಿತಿ ನೀಡುತ್ತಾರೆ. ಸಿ.ಹಯವದನರಾವ್ ಅವರು ವಸಾಹತುಶಾಹಿ ನೆಲೆಯಲ್ಲಿ ಪ್ರಭುತ್ವಕ್ಕೆ ಪೂರಕವಾಗಿ ಮಾಹಿತಿ ನೀಡುತ್ತಾ, ತಮ್ಮ ಸ್ವಜನರ ವಿರುದ್ಧ ನಡೆದ ಈ ಚಳವಳಿಯ ಬಗೆಗೆ ಮಾಹಿತಿ ನೀಡಿಲ್ಲ. ೨೦ನೇ ಶತಮಾನದ ಪ್ರಮುಖ ಚಳವಳಿಯಾದ ಈ ಬ್ರಾಹ್ಮಣ ಚಳವಳಿಯ ಬಗ್ಗೆ ಎಲ್ಲಿಯೂ ಪ್ರಸ್ತಾಪ ಇಲ್ಲದಿರುವುದು ವಿಶೇಷ. ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಈ ಚಳವಳಿಯ ಬಗ್ಗೆ ಇರುವ ಈ ಬರಹಗಾರರ ಮೌನ ಆ ಕಾಲದ ಮೇಲ್ವರ್ಗದ ಮತೀಯ ದೃಷ್ಟಿಕೋನವನ್ನು ತಿಳಿಸುತ್ತದೆ. ಆದರೆ ವಸಾಹತೋತ್ತರ ಕಾಲಘಟ್ಟದಲ್ಲಿ ಸೂರ್ಯನಾಥ ಕಾಮತ್ ಅವರ ಸಂಪಾದಕತ್ವದಲ್ಲಿ ಹೊರಬಂದ ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಮತ್ತು ಮೈಸೂರು ಜಿಲ್ಲಾ ಗ್ಯಾಸೆಟಿಯರ್‌ನಲ್ಲಿ ಈ ಬ್ರಾಹ್ಮಣೇತರ ಚಳವಳಿಯ ಬಗೆಗೆ ಸ್ವಲ್ಪ ಮಾಹಿತಿಯನ್ನು ನೀಡಿದ್ದಾರೆ(ಪು.೧೦೬).

ಈ ನಿಟ್ಟಿನಲ್ಲಿ ಮೈಸೂರು ಜಿಲ್ಲೆಯ ಸಂಪೂರ್ಣ ವಿವರಗಳನ್ನು ನೋಡಬಹುದು. ರೈಸ್ ಮತ್ತು ಹಯವದನರಾವ್ ಅವರು ತಿಳಿಸಿರುವ ಒಡೆಯರ ವಿಚಾರಗಳು ಇಲ್ಲಿ ಪ್ರಸ್ತಾಪವಾಗಿಲ್ಲ. ಕೆಲವು ವಿಚಾರಗಳು ಸಂಶೋಧನೆಗೆ ಒಳಪಟ್ಟು ಹೊಸ ವಿಚಾರಗಳು ಕ್ರೋಡೀಕರಣವಾಗಿವೆ. ಇಂದಿಗೂ ಬ್ರಿಟಿಷ್ ಮಾದರಿಯ ಆಡಳಿತದ ವಿಭಾಗಗಳನ್ನು ಕಾಣಬಹುದು.

ಸರ್ಕಾರದ ಅಧೀನದಲ್ಲಿ ಈ ಗ್ಯಾಸೆಟಿಯರ್ ಮೈಸೂರು ಜಿಲ್ಲೆಯ ಸಂಪೂರ್ಣ ಮಾಹಿತಿ ನೀಡುವಲ್ಲಿ ಸೂಕ್ತವಾಗಿದೆ.

ಸೂರ್ಯನಾಥ ಕಾಮತ್ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲೆ(೧೯೮೯)ಯ ಗ್ಯಾಸೆಟಿಯರ್‌ನ್ನು ಹೊರತಂದಿದ್ದಾರೆ.[೫೪] ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಯಲಹಂಕ ನಾಡಪ್ರಭುಗಳು, ಮೈಸೂರಿನ ಒಡೆಯರು ಆಳ್ವಿಕೆಯನ್ನು ನಡೆಸಿದ್ದರ ವಿವರಗಳನ್ನು ಈ ಗ್ಯಾಸೆಟಿಯರ್‌ಗಳಲ್ಲಿ ಕ್ರೋಡೀಕರಿಸಿದ್ದಾರೆ. ಗಂಗರ ರಾಜಧಾನಿಯಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಣ್ಣೆ(ಮಾನ್ಯಪುರ) ಕೂಡ ಒಂದಾಗಿತ್ತು. ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ಮೊಘಲ್ ಅಧಿಕಾರಿ ಖಾಸಿಂಖಾನ್‌ನಿಂದ ಕೊಂಡುಕೊಂಡನು. ಹೈದರಾಲಿ ಮತ್ತು ಟಿಪ್ಪು ಹಾಗೂ ಕಮೀಷನರ್‌ಗಳ ಕಾಲದಲ್ಲಿ ಬೆಂಗಳೂರು ಹೆಚ್ಚು ಪ್ರಗತಿಯನ್ನು ಕಂಡಿತು. ಬ್ರಿಟಿಷರ ಕಾಲೋನಿಗಳು ಹಲವು ಕಡೆ ಸ್ಥಾಪನೆ ಆದವು. ಕಮೀಷನರ್‌ಗಳ ಆಳ್ವಿಕೆಯಲ್ಲಿ ಆಡಳಿತದ ಅನುಕೂಲಕ್ಕಾಗಿ ವಿಭಾಗಗಳನ್ನು ವಿಂಗಡಿಸಲಾಯಿತು. ಮಾರ್ಕ್ ಕಬ್ಬನ್‌ನು ಬೆಂಗಳೂರಿನಲ್ಲಿ ಒಂದು ವಿಭಾಗವನ್ನು ತೆರೆದನು. ಒಡೆಯರು ಅಧಿಕಾರವನ್ನು ಪುನಃ ಪಡೆದ ನಂತರ ಅನೇಕ ಅಭಿವೃದ್ಧಿ ಕಾರ್ಯಗಳು ಜರುಗಿದವು. ರಾಷ್ಟ್ರೀಯ ಚಳವಳಿ, ಮೈಸೂರು ಚಲೋ ಚಳವಳಿ, ನಡೆದ ಚುನಾವಣೆಗಳ ವಿವರ ಮೊದಲಾದವುಗಳನ್ನು ಈ ಗ್ಯಾಸೆಟಿಯರ್‌ನಲ್ಲಿ ತಿಳಿಸಿದ್ದಾರೆ. ಇಲ್ಲಿನ ಭೌಗೋಳಿಕ ಸನ್ನಿವೇಶ, ಇತಿಹಾಸ, ಜನತೆ, ಕೃಷಿ ಮತ್ತು ಕೈಗಾರಿಕೆ, ಬ್ಯಾಕಿಂಗ್, ಹಣಕಾಸು ನೆರವು, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ ಮತ್ತು ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಆಡಳಿತ, ಸಮಾಜ ಸೇವಾ ಸೌಲಭ್ಯಗಳು, ಸಂಸ್ಕೃತಿ, ಪ್ರೇಕ್ಷಣೀಯ ಸ್ಥಳಗಳು, ಗ್ರಾಮಗಳ ಪಟ್ಟಿ ಇವೇ ಮೊದಲಾದ ಮಾಹಿತಿಗಳನ್ನು ಈ ಗ್ಯಾಸೆಟಿಯರ್‌ಗಳಲ್ಲಿ ನೋಡಬಹುದು. ಅಭಿವೃದ್ಧಿಯ ನೆಲೆಯಲ್ಲಿ ಯಾವ ಯೋಜನೆಗಳು ಅನುಷ್ಠಾನಗೊಂಡಿವೆ. ಯಾವ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಿವೆ ಎಂಬುದನ್ನು ತಿಳಿಯಲು ಸಹಾಯಕವಾಗಿದೆ. ಮೈಸೂರು ಒಡೆಯರಿಗೆ ಸಂಬಂಧಿಸಿದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯು ಚಾರಿತ್ರಿಕವಾಗಿ ಮಹತ್ವವನ್ನು ಪಡೆದಿದೆ. ಇವರ ಕಾಲದಲ್ಲಿ ಆದಂತಹ ಅಭಿವೃದ್ಧಿ ಕಾರ್ಯಗಳ ಮಾಹಿತಿಯನ್ನು ಈ ಗ್ಯಾಸೆಟಿಯರ್‌ನಲ್ಲಿ ತಿಳಿಯಬಹುದು.

ಸೂರ್ಯನಾಥ್ ಕಾಮತ್ ಅವರು ಬೆಂಗಳೂರು ನಗರಜಿಲ್ಲೆ(೧೯೯೦)ಯ ಗ್ಯಾಸೆಟಿಯರ್‌ನ್ನು ಪ್ರಕಟಿಸಿದ್ದಾರೆ.[೫೫] ಜಿಲ್ಲೆಯ ಭೌಗೋಳಿಕತೆ, ಇತಿಹಾಸ, ಜನತೆ, ಕೃಷಿ ಮತ್ತು ಕೈಗಾರಿಕೆ, ಬ್ಯಾಂಕಿಂಗ್, ಹಣಕಾಸು ನೆರವು, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ-ಸಂಪರ್ಕ, ಆರ್ಥಿಕ ಪ್ರವೃತ್ತಿಗಳು, ಆಡಳಿತ ಸಮಾಜ ಸೇವಾ ಸೌಲಭ್ಯಗಳು, ಸಂಸ್ಕೃತಿ, ಪ್ರೇಕ್ಷಣೀಯ ಸ್ಥಳಗಳು, ಗ್ರಾಮಗಳ ಪಟ್ಟಿ ಇವೇ ಮೊದಲಾದ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ. ಈ ಜಿಲ್ಲೆಯಲ್ಲಿ ಪ್ರಾರಂಭದಿಂದಲೂ ಅನೇಕ ರಾಜಮನೆತನಗಳು ಆಳ್ವಿಕೆ ನಡೆಸಿವೆ. ಗಂಗರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು, ಮೈಸೂರಿನ ಒಡೆಯರು, ಮಧ್ಯದಲ್ಲಿ ಹೈದರಾಲಿ, ಟಿಪ್ಪು ಮತ್ತು ಕಮೀಷನರುಗಳ ಆಳ್ವಿಕೆ, ದಿವಾನರುಗಳ ಆಡಳಿತ ಅಂಶಗಳನ್ನು ತಿಳಿಯಬಹುದು. ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ಮೊಘಲ್ ಅಧಿಕಾರಿ ಖಾಸಿಂಖಾನ್

ನಿಂದ ಕೊಂಡುಕೊಂಡರು. ಕಮೀಷನರ್‌ಗಳ ಆಳ್ವಿಕೆಯಲ್ಲಿ ಬೆಂಗಳೂರನ್ನು ಒಂದು ಆಡಳಿತ ವಿಭಾಗವನ್ನಾಗಿ ಮಾಡಿದರು. ಅಲ್ಲದೇ ಇಲ್ಲಿ ಶಿಕ್ಷಣ ಇಲಾಖೆ, ಅರಣ್ಯ ಇಲಾಖೆ, ಲೆಕ್ಕಪತ್ರ ಇಲಾಖೆಗಳನ್ನು ಹೊಸದಾಗಿ ರಚನೆ ಮಾಡಲಾಯಿತು. ಕಮೀಷನರ್ ಆದ ಬೌರಿಂಗ್‌ನು ನ್ಯಾಯಾಡಳಿತಕ್ಕಾಗಿ ಅಠರಾ ಕಛೇರಿ(ಹೈಕೋರ್ಟ್)ಯನ್ನು ಸ್ಥಾಪಿಸಿದರು. ಕಂದಾಯ ಪದ್ಧತಿಯಲ್ಲಿಯೂ ಸುಧಾರಣೆಗಳನ್ನು ಜಾರಿಗೆ ತಂದರು. ಬೌರಿಂಗ್‌ನು ಕಬ್ಬನ್‌ನ ನೆನಪಿಗಾಗಿ ಕಬ್ಬನ್ ಪಾರ್ಕ್‌ನ್ನು ಸ್ಥಾಪಿಸಿದನು. ೧೦ನೇ ಚಾಮರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಬೆಂಗಳೂರಿನಲ್ಲಾದ ಅನೇಕ ಸುಧಾರಣೆಗಳನ್ನು ನೋಡಬಹುದು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಿವಾನರಾದ ಮಿರ್ಜಾ ಇಸ್ಮಾಯಿಲ್ ಆಡಳಿತಾವಧಿಯಲ್ಲಿ ಆದ ಸುಲ್ತಾನ ಪೇಟೆಯ ಗಣಪತಿ ಗಲಾಟೆ ಮೊದಲಾದ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಬೆಂಗಳೂರಿನಲ್ಲಾದ ರಾಷ್ಟ್ರೀಯ ಚಳವಳಿ, ಮೈಸೂರು ಚಲೋ ಚಳವಳಿ, ಅನಂತರ ನಡೆದ ಚುನಾವಣೆಗಳು ಇವೇ ಮೊದಲಾದ ಅಂಶಗಳ ವಿವರಗಳನ್ನು ನೋಡಬಹುದು. ಅನಂತರ ತಂದ ಆಡಳಿತದ ಪ್ರಗತಿ ಕಾರ್ಯಗಳನ್ನು ತಿಳಿಯಬಹುದಾಗಿದೆ. ಈ ಜಿಲ್ಲೆಯಲ್ಲಿನ ಆಡಳಿತ, ಕೈಗೊಂಡ ಅಭಿವೃದ್ಧಿ ಕಾರ್ಯಗಳು, ಕಾಲಕಾಲಕ್ಕೆ ತಕ್ಕಂತೆ ಆದ ಬದಲಾವಣೆಗಳ ಮಾಹಿತಿಗಳನ್ನು ಈ ಗ್ಯಾಸೆಟಿಯರ್‌ನಿಂದ ತಿಳಿಯಬಹುದು.

ಬೆಂಗಳೂರಿನ ಕರ್ನಾಟಕ ಗ್ಯಾಸೆಟಿಯರ್ ಇಲಾಖೆಯಿಂದ ಮೈಸೂರು ಜಿಲ್ಲೆಯ ಏಳು ತಾಲೂಕು ಗ್ಯಾಸೆಟಿಯರ್‌ಗಳು ಕನ್ನಡ ಆವೃತ್ತಿಯಾಗಿ(೨೦೧೦) ಅನೀಸ್ ಸಿರಾಜ್ ಎಸ್. ಅವರ ಪ್ರಧಾನ ಸಂಪಾದಕತ್ವದಲ್ಲಿ ಪ್ರಕಟವಾಗಿವೆ. ಒಂದೊಂದು ತಾಲೂಕಿನ ಗ್ಯಾಸೆಟಿಯರ್‌ನ ಲೇಖಕರು ಬೇರೆ ಬೇರೆಯಾಗಿದ್ದಾರೆ.[೫೬] ಈ ಸಂಪುಟಗಳ ರಚನಾಕಾರ್ಯಕ್ಕಾಗಿ ಸ್ಥಳೀಯ ವಿದ್ವಾಂಸರಿಗೆ ಅವಕಾಶ ನೀಡಲಾಯಿತು. ಅದರಂತೆ ರಚಿಸಿದ ಈ ಸಂಪುಟಗಳನ್ನು ಇಲಾಖೆಯ ಸಂಪಾದಕ ಹಾಗೂ ಅನ್ವೇಷಕ ವರ್ಗದವರು ಪರಿಶೀಲಿಸಿ, ಪರಿಷ್ಕರಿಸಿ ಹೊರತರಲಾಯಿತು. ಬಿಡಿಬಿಡಿಯಾಗಿ ವಿಚಾರಗಳನ್ನು ತಿಳಿಸುವ ಈ ಗ್ಯಾಸೆಟಿಯರ್‌ಗಳು ತಾಲೂಕು ಮಟ್ಟದಲ್ಲಿ ರಚಿಸಿದ ಮೊದಲ ಪ್ರಯತ್ನವಾಗಿದೆ. ಸ್ಥಳೀಯವಾಗಿ ಮಾಹಿತಿಗಳನ್ನು ಕ್ರೋಡೀಕರಿಸಲು ಸಹಕಾರಿಯಾಗಿವೆ. ಜನಮುಖಿಯಾಗಿ ಅಧ್ಯಯನ ಕೈಗೊಳ್ಳಲು ಮಾಹಿತಿಗಳನ್ನು ಒದಗಿಸುತ್ತವೆ. ರಾಜ್ಯ ಗ್ಯಾಸೆಟಿಯರ್‌ಗಳ ಮೂಲಕ ಜಿಲ್ಲಾ ಗ್ಯಾಸೆಟಿಯರ್, ಜಿಲ್ಲಾ ಗ್ಯಾಸೆಟಿಯರ್ ಮೂಲಕ ತಾಲೂಕು ಗ್ಯಾಸೆಟಿಯರ್ ಎಂದು ಬಿಡಿಬಿಡಿಯಾಗಿ ವಿಷಯಗಳನ್ನು ಕ್ರೋಡೀಕರಿಸುವ ಪ್ರಯತ್ನ ಇಲ್ಲಿ ನೋಡಬಹುದು. ಹೊಸ ವಿಷಯಗಳ ನಿರಚನೆ ಮತ್ತು ಪುನಾರಚನೆ ಮಾಡಿರುವ ಪ್ರಯುತ್ನವನ್ನು ಇಲ್ಲಿ ನೋಡಬಹುದು. ಈ ತಾಲೂಕು ಗ್ಯಾಸೆಟಿಯರ್‌ಗಳಲ್ಲಿನ ವಿಷಯಾನುಕ್ರಮಣಿಕೆಯಲ್ಲಿ ಸ್ವಲ್ಪ ಬದಲಾವಣೆಯನ್ನು ನೋಡಬಹುದು. ಅದೇ ವಿಷಯಗಳಿದ್ದರೂ ಮೊದಲಿನ ಜಿಲ್ಲಾ ಗ್ಯಾಸೆಟಿಯರ್‌ನಂತೆ ಪ್ರತ್ಯೇಕ ಅಧ್ಯಾಯವನ್ನು ಮಾಡಿರುವುದಿಲ್ಲ. ನ್ಯಾಯಾಡಳಿತ, ಕಂದಾಯದ ಆಡಳಿತ, ಸ್ಥಳೀಯ ಆಡಳಿತದ ವಿಷಯಗಳನ್ನು ಸಾರ್ವತ್ರಿಕ ಆಡಳಿತದಲ್ಲಿಯೇ ಸೇರಿಸಲಾಗಿದೆ. ಪ್ರಸ್ತುತದಲ್ಲಿನ ಆಡಳಿತಕ್ರಮಕ್ಕೆ ಹೆಚ್ಚು ಪ್ರಾಶಸ್ತ್ಯ ನೀಡಿದ್ದಾರೆ.

ಮೈಸೂರು ತಾಲೂಕು ಗ್ಯಾಸೆಟಿಯರ್‌ಗಳು ಎನ್.ಎನ್.ಚಿಕ್ಕಮಾದು ಅವರ ಬರವಣಿಗೆಯ ಮೂಲಕ ಮೂಡಿಬಂದಿವೆ. ತಾಲೂಕುಮಟ್ಟದಲ್ಲಿ ಸಮಗ್ರ ಮಾಹಿತಿಯನ್ನು ಒಳಗೊಂಡ ಉತ್ತಮ ಗ್ರಂಥಗಳು ಲಭ್ಯವಿಲ್ಲದ ಕಾರಣ ಈ ಗ್ಯಾಸೆಟಿಯರನ್ನು ಹೊರತರಲಾಯಿತು.

ಮೈಸೂರು ಜಿಲ್ಲೆಯ ಏಳು ತಾಲೂಕುಗಳಲ್ಲಿ ಒಂದಾದ ಮೈಸೂರು ಸಾಂಸ್ಕೃತಿಕ ನಗರ, ಅರಮನೆಯ ನಗರವಾಗಿದ್ದು, ಈ ತಾಲೂಕು ಭೌಗೋಳಿಕವಾಗಿ ಜಿಲ್ಲೆಯಲ್ಲಿ ನಾಲ್ಕನೇ ಸ್ಥಾನದಲ್ಲಿದೆ. ಜನಸಂಖ್ಯಾ ದೃಷ್ಟಿಯಿಂದಲೂ ಮೊದಲ ಸ್ಥಾನ ಪಡೆದಿದೆ. ಧಾರ್ಮಿಕ ಮಹತ್ವದ ಚಾಮುಂಡಿ ಬೆಟ್ಟವನ್ನು ಹೊಂದಿರುವ ಈ ತಾಲೂಕು ಚಾರಿತ್ರಿಕ ಮಹತ್ವವನ್ನು, ಸಾಂಸ್ಕೃತಿಕ ಪ್ರಾಮುಖ್ಯತೆಯನ್ನು, ಧಾರ್ಮಿಕ ವೈವಿಧ್ಯವನ್ನು, ಸಾಮಾಜಿಕ ಹಾಗೂ ಆರ್ಥಿಕ ಪ್ರಗತಿಯನ್ನು ಹೊಂದಿದ್ದು, ಪ್ರವಾಸೋದ್ಯಮ ದೃಷ್ಟಿಯಿಂದ ಅಂತಾರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಪಡೆದಿದೆ ಎಂಬ ವಿಚಾರವನ್ನು ಸ್ಥೂಲವಾಗಿ ತಿಳಿಸಿದ್ದಾರೆ.

ಮೊದಲು ಮಹಿಷಾಮಂಡಲವೆಂದೇ ಪ್ರಸಿದ್ಧಿ ಪಡೆದಿದ್ದ ಈ ಪ್ರದೇಶ ಮೈಸುನಾಡೆಂದು, ನಂತರದಲ್ಲಿ ಹೆಸರುವಾಸಿಯಾಗಿದ್ದು, ಗಂಗ, ಚೋಳ, ಹೊಯ್ಸಳ ಹಾಗೂ ವಿಜಯನಗರದ ಅರಸರ ಆಡಳಿತದಲ್ಲಿ ಬೆಳವಣಿಗೆ ಹೊಂದಿತು. ಮುಂದೆ ಮೈಸೂರು ಆಡಳಿತ, ನಡುವಿನ ಅವಧಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಆಳ್ವಿಕೆ, ಅನಂತರದಲ್ಲಿ ಬ್ರಿಟಿಷ್ ಕಮೀಷನರುಗಳ ಆಳ್ವಿಕೆಯನ್ನು ಕಂಡಿತು. ಈ ಅವಧಿಯಲ್ಲಿ ಕೃಷಿ, ವಾಣಿಜ್ಯ, ಸಾರಿಗೆ-ಸಂಪರ್ಕ ಮುಂತಾದ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರಗತಿಯನ್ನು ಕಂಡಿತು. ಕಮೀಷನರ್‌ರ ನಂತರ ಪುನಃ ಅಧಿಕಾರಕ್ಕೆ ಬಂದ ಮೈಸೂರು ಒಡೆಯರ ಮತ್ತು ದಿವಾನರ ಆಳ್ವಿಕೆಯಡಿಯಲ್ಲಿ ಮೈಸೂರು ಸಂಸ್ಥಾನ ಉನ್ನತ ಪ್ರಗತಿಯನ್ನು ಕಂಡು 'ಆಧುನಿಕ ಮೈಸೂರು ಅಥವಾ ಮಾದರಿ ಮೈಸೂರು' ಎಂಬ ಖ್ಯಾತಿಗೆ ಪಾತ್ರವಾಯಿತು. ಸ್ವಾತಂತ್ರ್ಯ ಚಳವಳಿಯಲ್ಲಿಯೂ ಭಾಗವಹಿಸಿತು. ಸ್ವಾತಂತ್ರ್ಯ ನಂತರ ಪ್ರಜಾಪ್ರಭುತ್ವದಡಿಯಲ್ಲಿ ಗಣತಂತ್ರ ವ್ಯವಸ್ಥೆಗೆ ಸೇರ್ಪಡೆಯಾಯಿತು. ಪ್ರಸ್ತುತವಾಗಿ ಮೈಸೂರು ಸಾಂಸ್ಕೃತಿಕ ನಗರವಾಗಿ, ದಸರಾ ಉತ್ಸವಕ್ಕೆ ಪ್ರಸಿದ್ಧಿ ಪಡೆದಿದೆ. ಈ ಎಲ್ಲಾ ಅಂಶಗಳನ್ನು ಒಳಗೊಂಡ ಈ ತಾಲೂಕು ಗ್ಯಾಸೆಟಿಯರ್ ಮುಖ್ಯವಾಗಿದೆ.

ಪ್ರಾರಂಭದಿಂದ ಇಲ್ಲಿಯವರೆಗೂ ಎಲ್ಲಾ ಅಂಶಗಳನ್ನು ಕ್ರೋಡೀಕರಿಸಲಾಗಿದೆ. ಭೌಗೋಳಿಕ ಲಕ್ಷಣಗಳು, ನೈಸರ್ಗಿಕ ಸಂಪತ್ತು, ಇತಿಹಾಸ, ಚುನಾವಣೆ, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆ ಮತ್ತು ಆರ್ಥಿಕ ಪ್ರವೃತ್ತಿಗಳು, ಬ್ಯಾಂಕಿಂಗ್, ಸಹಕಾರ ಮತ್ತು ವಾಣಿಜ್ಯ, ಸಾರಿಗೆ-ಸಂಪರ್ಕ, ಸಾರ್ವಜನಿಕ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ಆರೋಗ್ಯ ಮತ್ತು ವೈದ್ಯಕೀಯ, ಬ್ಯಾಂಕುಗಳ ಸ್ಥಾಪನೆ, ಸಹಕಾರಿ ಸಂಘಗಳು, ಸಾರಿಗೆ-ಸಂಪರ್ಕದ ಮಾಹಿತಿ, ಕಮೀಷನರ್‌ಗಳ ಆಳ್ವಿಕೆಯಲ್ಲಿ ಆದ ರೈಲ್ವೆ ಪ್ರಗತಿ ಮೊದಲಾದ ವಿಷಯಗಳ ವಿವರಣೆ ಇದೆ.

ಆಡಳಿತದ ಅನುಕೂಲಕ್ಕಾಗಿ ವಿಭಾಗಗಳನ್ನು ಮಾಡಲಾಗಿತ್ತು. ಜಿಲ್ಲಾಧಿಕಾರಿ, ತಹಶೀಲ್ದಾರರು, ಕಂದಾಯ ನಿರೀಕ್ಷರು, ಗ್ರಾಮಲೆಕ್ಕಿಗರು, ಗ್ರಾಮಸಹಾಯಕರು, ಇವರೇ ಮೊದಲಾದವರು

ಸ್ಥಳೀಯ ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಕಂದಾಯ ಆಡಳಿತದಲ್ಲಿ ಭೂಮಿಯ ಕಂದಾಯಕ್ಕಾಗಿ ಭೂಮಿಯ ಅಳತೆ ಮಾಡಿಸಿ ತೆರಿಗೆ ನಿಗದಿಪಡಿಸಲಾಗುತ್ತಿತ್ತು. ಭೂಸುಧಾರಣೆಯಲ್ಲಿ ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದಿದ್ದರ ವಿವರಗಳನ್ನು ನೋಡಬಹುದು. ಉಳುವವನೇ ಭೂ ಒಡೆಯ ಎಂಬುದರಡಿಯಲ್ಲಿ ಭೂಮಿ ಪಡೆದವರ ಮಾಹಿತಿಗಳ ಅಂಕಿ-ಅಂಶಗಳನ್ನು ನೀಡಬೇಕಾಗಿತ್ತು.

ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಮೈಸೂರು ಒಡೆಯರ ಕಾಲದಲ್ಲಿ ಬೆಳೆದ ಸಾಹಿತ್ಯ ಮತ್ತು ಇತ್ತೀಚೆಗೆ ಬೆಳೆದುಬಂದ ಸಾಹಿತ್ಯದ ವಿವರಗಳನ್ನು ತಿಳಿಸಿದ್ದಾರೆ. ನಾಟಕ, ನೃತ್ಯ, ಸಂಗೀತದ ವಿವರಗಳನ್ನು ನೋಡಬಹುದಾಗಿದೆ. ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳಲ್ಲಿ ಆಸ್ಪತ್ರೆಗಳ ವಿವರ, ರೋಗಗಳ ಮಾಹಿತಿ ಮತ್ತು ಪ್ರೇಕ್ಷಣೀಯ ಸ್ಥಳಗಳು, ಗ್ರಾಮ-ಉಪಗ್ರಾಮಗಳ ವಿವರಗಳನ್ನು ತಿಳಿಸಿದ್ದಾರೆ.

ಪಿರಿಯಾಪಟ್ಟಣ ತಾಲೂಕು ಗ್ಯಾಸೆಟಿಯರನ್ನು ರಾಜಶೇಖರ್ ಪಿ.ಕೆ. ಅವರು ರಚಿಸಿದ್ದಾರೆ. ಮೈಸೂರು ಜಿಲ್ಲೆಯ ಏಳು ತಾಲೂಕುಗಳಲ್ಲಿ ಒಂದಾದ ಪಿರಿಯಾಪಟ್ಟಣವು ಜಿಲ್ಲೆಯ ಪಶ್ಚಿಮ ಹಾಗೂ ವಾಯವ್ಯ ಗಡಿಯಾಗಿದ್ದು, ಅರೆಮಲೆನಾಡು ಪ್ರದೇಶಗಳಲ್ಲಿದೆ. ಈ ತಾಲೂಕು ಭೌಗೋಳಿಕವಾಗಿ ಜಿಲ್ಲೆಯಲ್ಲಿ ಐದನೆಯ ಸ್ಥಾನದಲ್ಲಿದೆ. ಜನಸಂಖ್ಯಾ ದೃಷ್ಟಿಯಿಂದ ಆರನೆಯ ಸ್ಥಾನ ಪಡೆದಿದೆ. ಧಾರ್ಮಿಕ ಮಹತ್ವದ ಬೆಟ್ಟದಪುರವನ್ನು ಹೊಂದಿರುವ ಈ ತಾಲೂಕು ಚಾರಿತ್ರಿಕ ಮಹತ್ವವನ್ನೂ, ಧಾರ್ಮಿಕ, ಸಾಮಾಜಿಕ ಮತ್ತು ಆರ್ಥಿಕ ಆಯಾಮವನ್ನು ಹೊಂದಿರುವ ವಿಚಾರಗಳನ್ನು ಕ್ರೋಢೀಕರಿಸಿದ್ದಾರೆ. ಈ ತಾಲ್ಲೂಕು ಹಿಂದೆ 'ಸಿಂಗಪಟ್ಟಣ' ಎಂದೇ ಖ್ಯಾತಿ ಪಡೆಗಿದ್ದು, ಪಿರಿಯಾಪಟ್ಟಣವು ಪುನ್ನಾಟ ೬೦೦೦ ನಾಡೆಂದು ಪ್ರಸಿದ್ಧವಾಗಿದ್ದು, ಕೊಂಗಾಳ್ವ, ಗಂಗರ ಕಾಲದಲ್ಲಿ ಇಲ್ಲಿನ ಸ್ಥಳಗಳು ಚಾರಿತ್ರಿಕ ಮಹತ್ವ ಹೊಂದಿವೆ ಎಂದು ತಿಳಿಸಿದ್ದಾರೆ. ಮೈಸೂರು ಒಡೆಯರು ಮತ್ತು ಚಂಗಾಳ್ವರ ನಡುವೆ ಜರುಗಿದ ಪಿರಿಯಾಪಟ್ಟಣ ಕಾಳಗದಿಂದಾಗಿ ಖ್ಯಾತಿ ಪಡೆದಿರುವ ಪಿರಿಯಾಪಟ್ಟಣ, ಟಿಬೆಟಿಯನ್ ಕ್ಯಾಂಪ್ ಬೈಲಕುಪ್ಪೆಯಲ್ಲಿರುವ ಬೌದ್ಧಮಂದಿರವನ್ನೂ ಹೊಂದಿರುವ ತಾಲೂಕಾಗಿದೆ. ಭೌಗೋಳಿಕತೆಯ ವಿವರಗಳನ್ನು ತಿಳಿಸುತ್ತಾ, ಇಲ್ಲಿ ಕದಂಬರು, ಗಂಗರು, ಚಂಗಾಳ್ವರು, ಚೋಳರು, ಚಾಲುಕ್ಯರು, ಹೊಯ್ಸಳರು, ವಿಜಯನಗರ ಮತ್ತು ಮೈಸೂರಿನ ಒಡೆಯರ ಸಂಬಂಧವನ್ನು ತಿಳಿಸುತ್ತಾರೆ. ಪ್ರಮುಖವಾಗಿ ೧೬೪೪ರಲ್ಲಿ ವಾರ್ಷಿಕ ಪೊಗದಿಗಾಗಿ ಕಂಠೀರವ ನರಸರಾಜ ಮತ್ತು ಪಿರಿಯಪಟ್ಟಣದ ರಾಜನೊಂದಿಗೆ ಯುದ್ಧ ಪ್ರಾರಂಭವಾಯಿತು. ಈ ಯುದ್ಧದಲ್ಲಿ ಕಂಠೀರವ ನರಸರಾಜನು ಎದುರಾಳಿಗಳ ಮೂಗನ್ನು ಕತ್ತರಿಸುವಂತೆ ಆಜ್ಞೆಯಿತ್ತನು. ಇದರಂತೆ ಯುದ್ಧ ಸಾಗಿ ಶತ್ರುಗಳನ್ನು ನರಳಿ ಸಾಯುವಂತೆ ಮಾಡಲಾಯಿತು. ಈ ಭೀಕರ ಘಟನಾವಳಿಗಳಿಂದ ಜನಪದ ಸಾಹಿತ್ಯದಲ್ಲಿ ಪಿರಿಯಾಪಟ್ಟಣದ ಕಾಳಗ ಎಂದು ದಾಖಲಾದ ವಿಷಯಗಳನ್ನು ತಿಳಿಸಿದ್ದಾರೆ. ಅನಂತರದ ಸ್ವಾತಂತ್ರ್ಯ ಹೋರಾಟ, ಮೈಸೂರು ಚಲೋ ಚಳವಳಿಯಲ್ಲಿ ಈ ತಾಲೂಕಿನಲ್ಲಿ ಭಾಗವಹಿಸಿದವರ ಮಾಹಿತಿ ನೋಡಬಹುದು. ೧೯೭೦ರ ರೈತ ಚಳವಳಿ, ಚುನಾವಣೆಗಳ ವಿವರಗಳನ್ನು ಕ್ರೋಢೀಕರಿಸಿದ್ದಾರೆ. ಈ ನಿಟ್ಟಿನಲ್ಲಿ ಈ ತಾಲೂಕು ಚಾರಿತ್ರಿಕತೆಯನ್ನು ಹೊಂದಿದೆ. ಪ್ರಾರಂಭದಿಂದ

ಇಲ್ಲಿಯವರೆಗೂ ಇರುವ ಭೌಗೋಳಿಕತೆ, ಜನತೆ, ಇತಿಹಾಸ, ಕೃಷಿ, ನೀರಾವರಿ, ಕೈಗಾರಿಕೆ, ಬ್ಯಾಂಕಿಂಗ್, ವ್ಯಾಪಾರ ಮತ್ತು ವಾಣಿಜ್ಯ, ಸಾರಿಗೆ-ಸಂಪರ್ಕ, ಸಾರ್ವಜನಿಕ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ಪ್ರೇಕ್ಷಣೀಯ ಸ್ಥಳಗಳು, ಗ್ರಾಮ, ಉಪಗ್ರಾಮಗಳ ಪಟ್ಟಿ ಈ ವಿಚಾರಗಳನ್ನು ತಿಳಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ತಿರುಮಕೂಡಲು ನರಸೀಪುರ ತಾಲೂಕು ಗ್ಯಾಸೆಟಿಯರನ್ನು ಎಸ್.ರಾಜೇಂದ್ರಪ್ಪ ಅವರು ರಚಿಸಿದ್ದಾರೆ. ಈ ತಾಲೂಕು ಭೌಗೋಳಿಕವಾಗಿ ಚಿಕ್ಕ ಜಿಲ್ಲೆ ಆದರೂ ಸಾಂಸ್ಕೃತಿಕ ಪರಂಪರೆ ಹೊಂದಿರುವ ಸಮೃದ್ಧ ತಾಲೂಕಾಗಿದೆ. ಕಾವೇರಿ-ಕಪಿಲಾ ಸಂಗಮ ಸ್ಥಾನದಿಂದಾಗಿ ಧಾರ್ಮಿಕ ಮಹತ್ವವನ್ನು ಹೊಂದಿದೆ. ಗಂಗರ ರಾಜಧಾನಿ ತಲಕಾಡು, ಹೊಯ್ಸಳ ದೇವಾಲಯದಿಂದಾಗಿ ವಿಶ್ವಖ್ಯಾತಿ ಪಡೆದಿರುವ ಸೋಮನಾಥಪುರ, ಧಾರ್ಮಿಕ ಮಹತ್ವದ ಮುಡುಕುತೊರೆ, ಪ್ರೇಕ್ಷಣೀಯ ಸ್ಥಳಗಳಾದ ಮೂಗೂರು, ಸೋಸಲೆ, ತಲಕಾಡಿನ ಪಂಚಲಿಂಗದರ್ಶನ, ನರಸೀಪುರದ ಕುಂಭಮೇಳ ಈ ತಾಲೂಕಿನ ವಿಶೇಷ ಆಕರ್ಷಣೆಗಳಾಗಿವೆ. ಪ್ರಾರಂಭದ ಕಾಲಾವಧಿಯಿಂದ ಹಿಡಿದು ಈ ಗ್ಯಾಸೆಟಿಯರ್ ರಚನೆಯ ಸಂದರ್ಭದವರೆಗಿನ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ. ಮೈಸೂರು ಒಡೆಯರ ಆಳ್ವಿಕೆಯ ಸಂದರ್ಭದಲ್ಲಿ ಈ ತಾಲ್ಲೂಕಿನ ಕಳಲೆ, ಮೂಗೂರು, ಉಮ್ಮತ್ತೂರು, ತಗಡೂರು ಮತ್ತು ಹುರುಗಳಲ್ಲೂ ಸ್ಥಳೀಯ ಪಾಳೇಯಗಾರರು ಆಳುತ್ತಿದ್ದರು ಎಂಬ ಚಾರಿತ್ರಿಕತೆ ಇದೆ. ಮುಂದೆ ರಾಜ ಒಡೆಯರು ವಿಜಯನಗರದ ತಿರುಮಲನೊಂದಿಗೆ ಯುದ್ಧ ಕೈಗೊಂಡನು. ತಿರುಮಲನು ಯುದ್ಧದಲ್ಲಿ ಮಡಿದ ನಂತರ ಅವನ ಮಡದಿ ಅಲಮೇಲಮ್ಮನನ್ನು ಒಡವೆಗಳಿಗಾಗಿ ರಾಜ ಒಡೆಯರು ಪೀಡಿಸಿದರು. ಆಗ ಅಲಮೇಲಮ್ಮ ಒಡವೆಗಳನ್ನು ನೀಡದೇ 'ತಲಕಾಡು ಮರಳಾಗಿ, ಮಾಲಂಗಿ ಮಡುವಾಗಿ, ಮೈಸೂರು ಅರಸರಿಗೆ ಮಕ್ಕಳಾಗದಿರಲಿ' ಎಂದು ಶಪಿಸಿ ಕಾವೇರಿ ಮಡುವಿಗೆ ದುಮುಕಿ ಸತ್ತಳೆಂದು ಹೇಳುವ ಇತಿಹಾಸವಿದೆ. ಆ ಶಾಪ ಈಗಲೂ ಉಳಿದುಕೊಂಡು ಬಂದಿದೆ ಎಂಬ ನಂಬಿಕೆ ಇದೆ. ದಳವಾಯಿ ಅಗ್ರಹಾರದ ಸ್ಥಾಪನೆ ನರಸೀಪುರದ ೧೭೪೯ರ ಶಾಸನ ತಿಳಿಸುತ್ತದೆ. ಹೈದರಾಲಿಯ ಏಳಿಗೆಗೆ ಕಳಲೆಯ ನಂಜರಾಜಯ್ಯ ಕಾರಣ ಎಂಬುದು ದಾಖಲೆ. ಟಿಪ್ಪುಸುಲ್ತಾನ್, ಕಮೀಷನರ್‌ಗಳ ಆಳ್ವಿಕೆ, ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕಾವೇರಿ ಮತ್ತು ಕಪಿಲ ನದಿಗಳಿಗೆ ಸೇತುವೆಗಳು, ಕನ್ನಂಬಾಡಿ ಅಣೆಕಟ್ಟು ನಿರ್ಮಾಣವಾಯಿತು. ಸ್ವಾತಂತ್ರ್ಯ ಚಳವಳಿ, ಅಸ್ಪೃಶ್ಯತಾ ನಿವಾರಣಾ ಚಳವಳಿ, ಮೈಸೂರು ಚಲೋ ಚಳವಳಿಯ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಈ ನಿಟ್ಟಿನಲ್ಲಿ ಭೌಗೋಳಿಕ ಲಕ್ಷಣಗಳು, ಇತಿಹಾಸ, ಚುನಾವಣೆಗಳು, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆ ಮತ್ತು ಆರ್ಥಿಕ ಪ್ರವೃತ್ತಿಗಳು, ಬ್ಯಾಂಕಿಂಗ್, ಸಹಕಾರಿ, ವಾಣಿಜ್ಯ ಮತ್ತು ವ್ಯಾಪಾರ, ಸಾರಿಗೆ-ಸಂಪರ್ಕ, ಸಾರ್ವತ್ರಿಕ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳು, ಪ್ರೇಕ್ಷಣೀಯ ಸ್ಥಳಗಳು, ಗ್ರಾಮ, ಉಪಗ್ರಾಮಗಳ ಸೂಚಿ ಇವೇ ಮೊದಲಾದ ಅಂಶಗಳನ್ನು ಕ್ರೋಡೀಕರಿಸಿ ಮಾಹಿತಿಗಳ ರೂಪದಲ್ಲಿ ತಿಳಿಸಿದ್ದಾರೆ.

ನೀ.ಗಿರೀಗೌಡ ಅವರು ಹೆಗ್ಗಡದೇವನ ಕೋಟೆ ತಾಲೂಕು ಗ್ಯಾಸೆಟಿಯರನ್ನು ಹೊರ ತಂದಿದ್ದಾರೆ. ಈ ತಾಲೂಕು ಕಾನನದ ನಾಡೆಂಬ ಖ್ಯಾತಿಯನ್ನು ಹೊಂದಿದೆ. ಭೌಗೋಳಿಕವಾಗಿ

ವಿಶಾಲ ಪ್ರದೇಶ, ಸಾಂಸ್ಕೃತಿಕ ಪರಂಪರೆಯನ್ನು ಹೊಂದಿರುವ ತಾಲೂಕಾಗಿದೆ. ಚಿಕ್ಕಮ್ಮದೇವಿ ಬೆಟ್ಟ ಹಾಗೂ ಮೇಟಗಲ್ ಬೆಟ್ಟಗಳನ್ನು ಹೊಂದಿರುವ ಈ ತಾಲೂಕು ಚಾರಿತ್ರಿಕ ಮಹತ್ವವನ್ನು ಹೊಂದಿದೆ. ಪುನ್ನಾಟ, ಗಂಗ, ಬಯಲ್ನಾಡು, ಕದಂಬ, ಚೋಳ, ಹೊಯ್ಸಳ ಹಾಗೂ ವಿಜಯನಗರದ ಅರಸರ ಆಡಳಿತಾವಧಿಯಲ್ಲಿ ಬೆಳವಣಿಗೆ ಹೊಂದಿತು. ಮುಂದೆ ಮೈಸೂರು ಅರಸರ ಆಡಳಿತ, ಮಧ್ಯದಲ್ಲಿ ಹೈದರ್-ಟಿಪ್ಪು ಆಳ್ವಿಕೆ, ಅನಂತರದಲ್ಲಿ ಕಮೀಷನರ್‌ಗಳ ಆಳ್ವಿಕೆಯಲ್ಲಿ ಮುಂದುವರಿಯಿತು. ಮೈಸೂರು ಒಡೆಯರ ಆಡಳಿತಾವಧಿಯಲ್ಲಿ ಹೆಗ್ಗಡದೇವನ ಕೋಟೆಯ ಅನೇಕ ಸ್ಥಳಗಳನ್ನು ದಾನ ಕೊಟ್ಟ ವಿವರಗಳನ್ನು ನೋಡಬಹುದು. ನರಸೀಪುರ, ಹೊರಮಳಲೀಪುರ, ಬಿಳುಗುಂಬ(ಕಂಠೀರವಪುರ) ಇವೇ ಮೊದಲಾದವುಗಳನ್ನು ದಾನ ದತ್ತಿ ಬಿಟ್ಟ ವಿವರಗಳನ್ನು ಕ್ರೋಡೀಕರಿಸಿದರು. ಕೃಷಿ, ವಾಣಿಜ್ಯ, ಸಾರಿಗೆ-ಸಂಪರ್ಕ ಮುಂತಾದ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರಗತಿಯನ್ನು ಕಂಡಿತು. ಕಬಿನಿ ನದಿಗೆ ಬೀಚನಹಳ್ಳಿ ಬಳಿ ನಿರ್ಮಿಸಿರುವ ಜಲಾಶಯ, ತಾರಕಾ ಜಲಾಶಯ(ಪೆಂಜಹಳ್ಳಿ) ಹಾಗೂ ಬೀರವಾಳ್ ನುಗು ಜಲಾಶಯಗಳ ತಾಲೂಕಿನ ಪ್ರಗತಿಯಲ್ಲಿ ಕೈಜೋಡಿಸಿವೆ. ರಾಷ್ಟ್ರೀಯ ಉದ್ಯಾನವನಗಳಾದ ನಾಗರಹೊಳೆ (ರಾಜೀವಗಾಂಧಿ), ಕಾಕನಕೋಟೆ, ಕಬಿನಿ ರಿವರ್ ಜಂಗಲ್ ಲಾಡ್ಜ್, ಕ್ಯಾತನಹಳ್ಳಿ, ಕಿತ್ತೂರು, ಕೆ.ಬೆಳ್ತೂರ್, ಗದ್ದಿಗೆ, ಹಿರೇನಂದಿ, ಹೆಬ್ಬಲಕುಪ್ಪೆ, ಮುಳ್ಳೂರು ಮುಂತಾದ ಸ್ಥಳಗಳೂ ಸೇರಿದಂತೆ ವೈವಿಧ್ಯಮಯವಾದ ವಿಭಿನ್ನ ಮುಖವನ್ನು ಹೊಂದಿವೆ. ಪ್ರಾಚೀನದಿಂದ ಇಂದಿನವರೆಗೆ ಅಭಿವೃದ್ಧಿ ಹೊಂದಿದ ಮಾಹಿತಿಯನ್ನು ವಿವರಿಸಿದ್ದಾರೆ. ಭೌಗೋಳಿಕ ಲಕ್ಷಣಗಳು, ಖನಿಜ ಸಂಪತ್ತು, ಇತಿಹಾಸ, ಚುನಾವಣೆಗಳು, ಜನತೆ, ಕೃಷಿ ಮತ್ತು ನೀರಾವರಿ, ಕೈಗಾರಿಕೆ ಮತ್ತು ಆರ್ಥಿಕ ಪ್ರವೃತ್ತಿಗಳು, ಬ್ಯಾಂಕಿಂಗ್, ಸಹಕಾರ, ವಾಣಿಜ್ಯ ಮತ್ತು ವ್ಯಾಪಾರ, ಸಾರಿಗೆ-ಸಂಪರ್ಕ, ಸಾರ್ವಜನಿಕ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳು, ಪ್ರೇಕ್ಷಣೀಯ ಸ್ಥಳಗಳು, ಗ್ರಾಮ, ಉಪಗ್ರಾಮಗಳ ಸೂಚಿ ಇವೇ ಮೊದಲಾದ ಅಂಶಗಳನ್ನು ಕ್ರೋಡೀಕರಿಸಿ ಮಾಹಿತಿಯ ರೂಪದಲ್ಲಿ ವಿವರಿಸಿದ್ದಾರೆ.

ಹುಣಸೂರು ತಾಲೂಕು ಗ್ಯಾಸೆಟಿಯರನ್ನು ಬಿ.ಶಾಮಸುಂದರ್ ಅವರು ರಚಿಸಿದ್ದಾರೆ. ಹುಣಸೂರು ತಾಲೂಕು ಭೌಗೋಳಿಕವಾಗಿ ಜಿಲ್ಲೆಯಲ್ಲಿ ಮೂರನೆಯ ಸ್ಥಾನದಲ್ಲಿದ್ದು, ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಹೊಂದಿದೆ. ಈ ತಾಲೂಕು ಗಂಗವಾಡಿ ೯೬,೦೦೦ ಎಂದೇ ಖ್ಯಾತಿ ಪಡೆದಿದ್ದ ಪ್ರದೇಶ ಭಾಗವಾಗಿದ್ದು, ಪುನ್ನಾಟ, ಗಂಗ, ಚೋಳ, ಹೊಯ್ಸಳ, ಚಂಗಾಳ್ವ ಹಾಗೂ ಕೊಂಗಾಳ್ವರ ಆಡಳಿತಾವಧಿಯಲ್ಲಿ ಬೆಳವಣಿಗೆ ಹೊಂದಿತು. ಮೈಸೂರು ಒಡೆಯರ ಆಡಳಿತ, ಮಧ್ಯದಲ್ಲಿ ಹೈದರಾಲಿ, ಟಿಪ್ಪು ಮತ್ತು ಕಮೀಷನರ್‌ಗಳ ಆಳ್ವಿಕೆಯಲ್ಲಿ ಮುಂದುವರಿಯಿತು. ಮೈಸೂರು ಒಡೆಯರಾದ ಕಂಠೀರವ ನರಸರಾಜ ಒಡೆಯರು ಅರಕಲಗೂಡು ಕೃಷ್ಣಪ್ಪನಾಯಕನಿಂದ ಬಸವಾಪಟ್ಟಣ, ಬೆಟ್ಟದಪುರ, ಕಣ್ಣಾಗಾಲು, ಕಿತ್ತೂರು ಹಾಗೂ ಹುಣಸೂರಿನ ಪ್ರದೇಶಗಳನ್ನು ತನ್ನ ಅಧೀನಕ್ಕೆ ೧೬೪೭ರಲ್ಲಿ ತೆಗೆದುಕೊಂಡನೆಂಬುದಕ್ಕೆ ದಾಖಲೆಯಿದೆ. ತರೀಕಲ್ಲು ಮುಂತಾದ ೩೩ ಗ್ರಾಮಗಳ ಒಕ್ಕೂಟವನ್ನು 'ಕಂಠೀರವ ಸಮುದ್ರ' ಎಂಬ ಹೆಸರಿನ ಅಗ್ರಹಾರವನ್ನಾಗಿ ರೂಪಿಸಿ ವಿದ್ಯಾಪ್ರವೀಣರಾದ ಬ್ರಾಹ್ಮಣರಿಗೆ ಧಾರೆಯೆರೆದು ಕೊಟ್ಟ ವೃತ್ತಾಂತ ೧೯೫೯ರ

ತರೀಕಲ್ಲು ಶಾಸನದಲ್ಲಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಕ್ಷಾಮ ಉಂಟಾದಾಗ ಶ್ರೀನಿವಾಸದಾಸ ಹಾಗೂ ಸುಬ್ಬರಾಯದಾಸರೆಂಬ ಮಹಾಮಹಿಮರೂ ಪರಿವ್ರಾಜಕರೂ ಬಿಳಿಕೆರೆಯಲ್ಲಿಯೇ ವಾಸ್ತವ್ಯ ಹೂಡಿ ಸಂಕಷ್ಟಕ್ಕೀಡಾದ ಜನರಿಗಾಗಿ ಕೆರೆಯ ಪಶ್ಚಿಮಕ್ಕೆ ಸುಮಾರು ೭೦ ಅಂಕಣದ ಧರ್ಮಛತ್ರ ಕಟ್ಟಿಸಿ ಅನ್ನದಾನ ಮಾಡಿದ ಮಾಹಿತಿ ೧೮೪೫ರ ಬಿಳಿಕೆರೆ ಶಾಸನದಲ್ಲಿದೆ. ಒಡೆಯರ ಹೊಸಹಳ್ಳಿ ಎಂಬ ಗ್ರಾಮ ಬಿಳಿಕೆರೆಯ ಬಳಿಯಿದೆ. ಹುಣಸೂರಿನಲ್ಲಿರುವ ಶ್ರೀಲಕ್ಷ್ಮೀನರಸಿಂಹ ದೇವಾಲಯ ಮುಮ್ಮಡಿ ಕೃಷ್ಣರಾಜ ಒಡೆಯರ ಹೆಸರಿನಲ್ಲಿ ನಿರ್ಮಿಸಲಾಗಿದೆ. ಹೈದರಾಲಿ ಮತ್ತು ಟಿಪ್ಪು ಆಳ್ವಿಕೆಯಲ್ಲಿ ಹುಣಸೂರು ಮತ್ತು ಪಿರಿಯಾಪಟ್ಟಣ ಪ್ರದೇಶಗಳೇ ಕೇಂದ್ರವಾದವು. ಬ್ರಿಟಿಷರ ಕಾಲದಲ್ಲಿ ಹುಣಸೂರು ಬ್ರಿಟಿಷ್ ಸೈನ್ಯಕ್ಕೆ 'ಅಮೃತಮಹಲ್' ತಳಿಯ ಗೋವುಗಳನ್ನು ಒದಗಿಸುವ ಕೇಂದ್ರವಾಗಿತ್ತು. ಈ ರೀತಿಯಾಗಿ ಹುಣಸೂರು ಬ್ರಿಟಿಷ್ ಸೈನ್ಯಕ್ಕೆ ಬೇಕಾದ ಆಹಾರ, ಚರ್ಮ, ಮರ, ಯುದ್ಧೋಪಕರಣಗಳ ಸಾಕಾಣಿಕೆಗೆ ಬೇಕಾಗಿದ್ದ ಉತ್ತಮ ತಳಿಯ ರಾಸುಗಳನ್ನು ಸರಬರಾಜು ಮಾಡುವ ಕೇಂದ್ರವಾಗಿತ್ತೆಂದು ಗೊತ್ತಾಗುತ್ತದೆ. ಸ್ವಾತಂತ್ರ್ಯ ಹೋರಾಟ ವಿಚಾರದ ಅಂಶಗಳು, ಚುನಾವಣೆ ಮೊದಲಾದ ಅಂಶಗಳನ್ನು ಕ್ರೋಡೀಕರಿಸಿ ವಿವರಿಸಿದ್ದಾರೆ. ಈ ಅವಧಿಯಲ್ಲಿ ಕೃಷಿ, ವಾಣಿಜ್ಯ, ಸಾರಿಗೆ-ಸಂಪರ್ಕ ಮುಂತಾದ ಕ್ಷೇತ್ರಗಳಲ್ಲಿ ಪ್ರಗತಿ ಸಾಧಿಸಿತು. ಲಕ್ಷ್ಮಣತೀರ್ಥ ನದಿ ಪ್ರಮುಖವಾಗಿದ್ದು, ಕಟ್ಟೆ ಮಳಲವಾಡಿ, ಕಲ್ಲಹಳ್ಳಿ, ಗದ್ದಿಗೆ, ಗೊಮ್ಮಟಗಿರಿ, ಬೆಲ್ಲುಂದ, ಧರ್ಮಾಪುರ, ಯಮಗುಂಬ, ರತ್ನಪುರಿ, ಹರವೆ ಮುಂತಾದ ಸ್ಥಳಗಳು ಚಾರಿತ್ರಿಕ ಮತ್ತು ಸಾಂಸ್ಕೃತಿಕ ಮಹತ್ವವನ್ನು ಹೊಂದಿರುವ ಅಂಶಗಳನ್ನು ಇಲ್ಲಿ ನೋಡಬಹುದು. ಪ್ರಾಸ್ತಾವಿಕವಾಗಿ ಭೌಗೋಳಿಕ ಲಕ್ಷಣಗಳು, ಇತಿಹಾಸ, ಚುನಾವಣೆಗಳು, ಬ್ಯಾಂಕಿಂಗ್, ಸಹಕಾರ, ವಾಣಿಜ್ಯ ಮತ್ತು ವ್ಯಾಪಾರ, ಸಾರಿಗೆ-ಸಂಪರ್ಕ, ಸಾರ್ವಜನಿಕ ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ ವೈದ್ಯಕೀಯ ಸೇವೆಗಳು ಹಾಗೂ ಪ್ರೇಕ್ಷಣೀಯ ಸ್ಥಳಗಳೊಂದಿಗೆ ಗ್ರಾಮ, ಉಪಗ್ರಾಮ ಈ ಎಲ್ಲಾ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ.

ತೇ.ಸಿ.ವಿಶ್ವೇಶ್ವರ ಅವರು ಕೃಷ್ಣರಾಜನಗರ ತಾಲೂಕು ಗ್ಯಾಸೆಟಿಯರನ್ನು ರಚಿಸಿದ್ದಾರೆ. ಈ ತಾಲೂಕು ಭೌಗೋಳಿಕವಾಗಿ ಜಿಲ್ಲೆಯ ಎರಡನೇ ಚಿಕ್ಕ ತಾಲೂಕು ಆಗಿದೆ. ಕಾವೇರಿ ನದಿಯಿಂದಾಗಿ ಧಾರ್ಮಿಕ ಮಹತ್ವವನ್ನು ಹೊಂದಿದೆ. ಗಂಗ, ಚೋಳ, ಕೊಂಗಾಳ್ವ, ಚಂಗಾಳ್ವ, ಹೊಯ್ಸಳ, ವಿಜಯನಗರ, ಮೈಸೂರು, ಒಡೆಯರ ಆಡಳಿತವನ್ನು ವೀಕ್ಷಿಸಿತು. ಚಿಕ್ಕದೇವರಾಜ ಒಡೆಯರ ಕಾಲಕ್ಕೆ ಸೇರಿದ ಮುಂಡೂರಿನ ಶಾಸನವು ಮುಂಡೂರನ್ನು ಅಗ್ರಹಾರವಾಗಿ ದತ್ತಿ ನೀಡಿದ್ದನ್ನು ಉಲ್ಲೇಖಿಸುತ್ತದೆ. ಕನ್ನಂಬಾಡಿ ಪರಿಸರದ ೨೬ ಉಪಗ್ರಾಮಗಳನ್ನು ದಳವಾಯಿ ದೇವರಾಜ ಮತ್ತು ನಂಜರಾಜರನ್ನು ಹೆಸರಿಸುತ್ತಾ ನಂಜರಾಜಸಮುದ್ರ ಎಂಬ ಅಗ್ರಹಾರ ನಿರ್ಮಿಸಿ ಬ್ರಾಹ್ಮಣರಿಗೆ ದತ್ತಿ ಬಿಟ್ಟನು. ಅನೇಕ ದೇವಾಲಯಗಳ ಜೀರ್ಣೋದ್ಧಾರ ಕಾರ್ಯಗಳು ನಡೆದಿವೆ ಎಂಬುದರ ವಿವರಗಳಿವೆ. ಹೀಗೆ ಮೈಸೂರು ಒಡೆಯರ ಆಳ್ವಿಕೆಯ ಅಂಶಗಳನ್ನು ಇಲ್ಲಿ ತಿಳಿಯಬಹುದು. ಕೃಷ್ಣರಾಜಸಾಗರದ ನಿರ್ಮಾಣದ ಹಿನ್ನೆಲೆಯಲ್ಲಿ ಎಡತೊರೆ ತಾಲೂಕಿನ ಕೇಂದ್ರ ಜಲಾವೃತಗೊಂಡಾಗ ಹೊಸ ಊರು ನಿರ್ಮಾಣಗೊಂಡು ಅದಕ್ಕೆ ಕೃಷ್ಣರಾಜನಗರ

ಎಂದು ನಾಮಕರಣ ಮಾಡಲಾಯಿತು ಎಂಬುದು ಚಾರಿತ್ರಿಕ ದಾಖಲೆ. ಈ ತಾಲೂಕಿನಲ್ಲಿರುವ ಕಪ್ಪಡಿ, ಹನಸೋಗೆ, ಚಿಕ್ಕಹನಸೋಗೆ, ಚುಂಚನಕಟ್ಟೆ, ಡೋರ್ನಹಳ್ಳಿ, ದೇವಿತಂದ್ರೆ, ತಿಪ್ಪೂರು, ಭೇರ್ಯ, ಕೃಷ್ಣರಾಜನಗರ, ಮೂವತ್ತೂರು, ಮಳಲಿ, ಮಿರ್ಲೆ, ಸಾಲಿಗ್ರಾಮ, ಹಂಪಾಪುರ ಮುಂತಾದ ಸ್ಥಳಗಳು ಚಾರಿತ್ರಿಕ ಮಹತ್ವವನ್ನೂ, ಸಾಂಸ್ಕೃತಿಕ ಹಿರಿಮೆಯನ್ನು ಸಾರುವ ಮಹತ್ತರ ನೆಲೆಗಳಾಗಿವೆ. ಇಲ್ಲಿನ ಭೌಗೋಳಿಕತೆ, ಇತಿಹಾಸ, ಅಭಿವೃದ್ಧಿಯ ನೆಲೆಯಲ್ಲಿ ಕೈಗೊಂಡ ಕಾರ್ಯಗಳನ್ನು ವಿವರಿಸಿರುವುದನ್ನು ಈ ಗ್ಯಾಸೆಟಿಯರ್‌ನಲ್ಲಿ ನೋಡಬಹುದು. ಕೃಷಿ, ವಾಣಿಜ್ಯ, ಸಾರಿಗೆ-ಸಂಪರ್ಕ, ಕೈಗಾರಿಕೆ ಮತ್ತು ಆರ್ಥಿಕ ಪ್ರವೃತ್ತಿಗಳು, ಬ್ಯಾಂಕಿಂಗ್, ಸಹಕಾರ ಸಾರ್ವಜನಿಕ, ಆಡಳಿತ, ಶಿಕ್ಷಣ ಮತ್ತು ಕ್ರೀಡೆ, ಸಾಹಿತ್ಯ ಮತ್ತು ಸಂಸ್ಕೃತಿ, ವೈದ್ಯಕೀಯ ಸೇವೆಗಳೂ ಹಾಗೂ ಪ್ರೇಕ್ಷಣೀಯ ಸ್ಥಳಗಳೊಂದಿಗೆ ಗ್ರಾಮ, ಉಪಗ್ರಾಮ ಈ ಎಲ್ಲಾ ಮಾಹಿತಿಗಳನ್ನು ವಿವರಿಸಲಾಗಿದೆ.

ನಂಜನಗೂಡು ತಾಲೂಕು ಗ್ಯಾಸೆಟಿಯರನ್ನು ಮಂಜುಳಾ ಹುಲ್ಲಹಳ್ಳಿ ಅವರು ರಚಿಸಿದ್ದಾರೆ. ನಂಜನಗೂಡು ತಾಲೂಕು ಭೌಗೋಳಿಕವಾಗಿ ಜಿಲ್ಲೆಯಲ್ಲಿ ಎರಡನೆಯ ಸ್ಥಾನದಲ್ಲಿದೆ. ಧಾರ್ಮಿಕ ಮಹತ್ವದ ನಂಜುಂಡೇಶ್ವರರನ್ನು ಇಲ್ಲಿನ ಅಧಿದೈವನಾಗಿ ಪೂಜಿಸುತ್ತಾರೆ. ಗಂಗವಾಡಿ ೯೬,೦೦೦ ಪ್ರದೇಶದ ನೆರೆಯಲ್ಲಿದ್ದ ಪುನ್ನಾಟ ೬೦೦೦ ನಾಡೆಂದೇ ಖ್ಯಾತಿ ಪಡೆದಿದ್ದ ಈ ಪ್ರದೇಶವು ಪುನ್ನಾಟ, ಗಂಗ, ಚೋಳ, ಹೊಯ್ಸಳ ಹಾಗೂ ವಿಜಯನಗರದರಸರ ಆಡಳಿತಾವಧಿಯಲ್ಲಿ ಬೆಳವಣಿಗೆ ಹೊಂದಿತು. ಮುಂದೆ ಹದಿನಾಡು, ಉಮ್ಮತ್ತೂರು, ಕಳಲೆ ಪಾಳೆಯಗಾರರು ಹಾಗೂ ಮೈಸೂರು ಅರಸರ ಆಡಳಿತ, ಈ ಆಡಳಿತದ ನಂತರ ಹೈದರಾಲಿ ಮತ್ತು ಟಿಪ್ಪು ಆಳ್ವಿಕೆ, ಕಮೀಷನರುಗಳ ಆಳ್ವಿಕೆಯನ್ನು ವೀಕ್ಷಿಸಿತು. ಈ ಅವಧಿಯಲ್ಲಿ ಕೃಷಿ, ವಾಣಿಜ್ಯ, ಸಾರಿಗೆ-ಸಂಪರ್ಕ ಮುಂತಾದ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯನ್ನು ಕಂಡಿತು. ಕಮೀಷನರ್ ಆಡಳಿತದ ನಂತರ ಅಧಿಕಾರವನ್ನು ಪುನಃ ಸ್ವೀಕರಿಸಿದ ಒಡೆಯರು ಹೆಚ್ಚಿನ ಅಭಿವೃದ್ಧಿಗೆ ಚಾಲನೆ ನೀಡಿದರು. ದಿವಾನರುಗಳು ಈ ಅಭಿವೃದ್ಧಿಗೆ ಸಹಾಯಕರಾದರು. ಸರ್.ಎಂ.ವಿಶ್ವೇಶ್ವರಯ್ಯ ಅವರ ಆಡಳಿತಾವಧಿಯಲ್ಲಿ ಕನ್ನಂಬಾಡಿ ಅಣೆಕಟ್ಟು ನಿರ್ಮಾಣದೊಂದಿಗೆ ಕೈಗಾರಿಕೋದ್ಯಮಕ್ಕೆ ಹೆಚ್ಚಿನ ಪ್ರಾಮುಖ್ಯತೆ ಸಿಕ್ಕಿತು. ಇಲ್ಲಿ ಸಾಕಷ್ಟು ಕೈಗಾರಿಕೆಗಳು ಸ್ಥಾಪನೆಯಾದವು. ಕಳಲೆ, ಜೋಡಿ ಕಾಟೂರು, ದೇವನೂರು, ನಗಲೆ, ಸುತ್ತೂರು, ಹುಲ್ಲಹಳ್ಳಿ, ಹೆಡತಲೆ, ಹೆಮ್ಮರಗಾಲ ನೆಲೆಗಳಿವೆ. ಈ ನಿಟ್ಟಿನಲ್ಲಿ ಭೌಗೋಳಿಕತೆ, ಇತಿಹಾಸ, ಕೃಷಿ ಮತ್ತು ನೀರಾವರಿ, ಕೈಗಾರಿಕೆ, ವ್ಯಾಪಾರ-ವಾಣಿಜ್ಯ ಎಲ್ಲಾ ನೆಲೆಗಳ ಅಭಿವೃದ್ಧಿ ಕಾರ್ಯಗಳ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ. ಹೀಗೆ ಪ್ರಾಚೀನ ಕಾಲದಿಂದ ಇಲ್ಲಿಯವರೆಗಿನ ಎಲ್ಲಾ ಅಂಶಗಳನ್ನು ಮಾಹಿತಿಗಳ ರೂಪದಲ್ಲಿ ಈ ಗ್ಯಾಸೆಟಿಯರ್‌ಗಳು ಕಟ್ಟಿ ಕೊಡುತ್ತವೆ.

ಈ ಎಲ್ಲಾ ತಾಲೂಕು ಗ್ಯಾಸೆಟಿಯರ್‌ಗಳನ್ನು ಅಧ್ಯಯನ ಕೈಗೊಂಡಾಗ ಬಿಡಿಬಿಡಿಯಾಗಿ ಸ್ಥಳೀಯ ಮಾಹಿತಿಗಳು ಹೆಚ್ಚಿನ ಪ್ರಮಾಣದಲ್ಲಿ ದಾಖಲಾಗಿರುವುದನ್ನು ನೋಡಬಹುದು. ಪ್ರಾಚೀನವಾಗಿ ಇಲ್ಲಿ ಆಳ್ವಿಕೆ ಮಾಡಿದ ಮನೆತನದ ಅಂಶಗಳಿಂದ ಹಿಡಿದು ಪ್ರಸ್ತುತವಾಗಿ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆದ ಬದಲಾವಣೆಗಳನ್ನು ಹಂತಹಂತವಾಗಿ ವಿವರಿಸಿದ್ದಾರೆ. ಸರ್ಕಾರ ಹಾಕಿಕೊಂಡ ಯೋಜನೆಗಳ ಬಗೆಗೆ ಮಾಹಿತಿಯನ್ನು

ನೋಡಬಹುದು. ಆದರೆ ಆ ಯೋಜನೆಗಳು ಎಷ್ಟರ ಮಟ್ಟಿಗೆ ಸಫಲವಾದವು ಎಂಬುದರ ಬಗೆಗೆ ಮಾಹಿತಿಗಳನ್ನು ಇಲ್ಲಿ ನೀಡಿಲ್ಲ. ಮಾಹಿತಿಗಳ ರೂಪದಲ್ಲಿ ಸ್ಥಳೀಯವಾಗಿ ಗುರುತಿಸುವ ಚೌಕಟ್ಟಿನೊಳಗೆ ಈ ಗ್ಯಾಸೆಟಿಯರ್‌ಗಳು ರಚನೆಗೊಂಡಿವೆ ಎಂಬುದು ತಿಳಿಯುತ್ತದೆ.

ವಸಾಹತು ಕಾಲಘಟ್ಟದ ಗ್ಯಾಸೆಟಿಯರ್‌ಗಳ ವಿವರಗಳು ಬ್ರಿಟಿಷರ ಸಾಮ್ರಾಜ್ಯಶಾಹಿ ನೆಲೆಗೆ ಪೂರಕವಾಗಿವೆ. ಆಡಳಿತದ ಅನುಕೂಲಕ್ಕಾಗಿ ಸ್ಥಳೀಯ ಪ್ರದೇಶಗಳ ಜ್ಞಾನವನ್ನು ಪಡೆಯಲು ವಸಾಹತುಶಾಹಿ ಬರಹಗಾರರು ಮಾಹಿತಿಗಳನ್ನು ಕ್ರೋಡೀಕರಿಸಿದರು. ಈ ನೆಲೆಯಲ್ಲಿಯೇ ಗ್ಯಾಸೆಟಿಯರ್‌ಗಳನ್ನು ರಚಿಸಲಾಗಿದೆ. ಈ ಬರಹಗಾರರು ಕ್ಷೇತ್ರಕಾರ್ಯದ ಮೂಲಕ ಜನರನ್ನು ಭೇಟಿ ಮಾಡಿ, ಜನರು ನೀಡಿದ ಮಾಹಿತಿಗಳನ್ನು ಕ್ರೋಡೀಕರಿಸಿ ರಚಿಸಿದ್ದಾರೆ. ಆದರೆ ಅವರ ನಂಬಿಕೆಗಳಿಗೆ ಕೈಹಾಕದೇ ಎಚ್ಚರದಿಂದ ಅವರು ನೀಡಿದ ವಿವರಗಳನ್ನು ಸಂಗ್ರಹಿಸಿದರು. ಈ ಮಾಹಿತಿಗಳ ಸಂಗ್ರಹಕ್ಕಾಗಿ ಆಯಾಯ ಪ್ರದೇಶಗಳ ಸ್ಥಳೀಯರ ಸಹಾಯ ಪಡೆದರು. ಸ್ಥಳೀಯರು ಎಂದರೆ ಅಕ್ಷರಜ್ಞಾನ ಹೊಂದಿದ ಬ್ರಾಹ್ಮಣರು. ಇವರು ಆಡಳಿತದಲ್ಲಿ ಹಲವು ಹುದ್ದೆಗಳನ್ನು ಹೊಂದಿದ್ದು, ತಮ್ಮ ಅನುಕೂಲಕ್ಕೆ ತಕ್ಕಂತೆ ಯಾವುದೇ ಅಧಿಕಾರವನ್ನು ಪ್ರಶ್ನಿಸದೇ ಮಾಹಿತಿಗಳನ್ನು ಒದಗಿಸಿದರು. ಅಲ್ಲದೇ ವಸಾಹತುಶಾಹಿ ಮತ್ತು ವಿದೇಶಿ ಬರಹಗಾರರು ತಮ್ಮ ಸಾಮ್ರಾಜ್ಯಶಾಹಿ ನೆಲೆಯ ಅಧಿಕಾರ ಉಳಿಸಿಕೊಳ್ಳಲು ತಮ್ಮ ಶತ್ರುಗಳ ಬಗೆಗೆ ಮಾಹಿತಿಗಳನ್ನು ಯಾವ ರೀತಿ ಸಂಗ್ರಹಿಸಿದರು ಎಂಬುದು ಮುಖ್ಯ. ಈ ಗ್ಯಾಸೆಟಿಯರ್‌ಗಳಲ್ಲಿ ತಮ್ಮ ಅನುಕೂಲಕ್ಕಾಗಿಯೇ ಒಡೆಯರ ಚರಿತ್ರೆಯಲ್ಲಿನ ಮರೆಮಾಚಿದ ವಿಷಯಗಳು ಮತ್ತು ಹೈದರಾಲಿ, ಟಿಪ್ಪುವಿನ ಬಗೆಗೆ ನೀಡಿರುವ ಹೇಳಿಕೆಗಳು ಇಂದಿಗೂ ಚರ್ಚೆಗೆ ಒಳಗಾಗುತ್ತಲೇ ಇವೆ. ಸಂಶೋಧನೆಗೆ ಒಳಪಟ್ಟು ಹೊಸ ವಿಚಾರಗಳು ಹೊರಬಂದಿವೆ. ಇತ್ತೀಚಿಗೆ ಟಿಪ್ಪು ವಿಶ್ವವಿದ್ಯಾಲಯ ಸ್ಥಾಪಿಸಬೇಕು ಎನ್ನುವ ಸರ್ಕಾರದ ನಿಯಮಕ್ಕೆ ಹಲವು ಪರ–ವಿರೋಧಗಳ ನಡುವೆ ಇಲ್ಲಿನ ಹೇಳಿಕೆಗಳು ಚರ್ಚೆಗೆ ಒಳಗಾಗುತ್ತಿವೆ. ಈ ನಿಟ್ಟಿನಲ್ಲಿ ವಸಾಹತುಶಾಹಿಗಳು ಮತ್ತು ವಿದೇಶಿ ಬರಹಗಾರರು ರಚಿಸಿರುವ ಗ್ಯಾಸೆಟಿಯರ್‌ಗಳ ಮಾಹಿತಿಯನ್ನು ವಿಶ್ಲೇಷಣೆಗೆ ಒಳಪಡಿಸಬಹುದು.

ದೇಶಿ ಚರಿತ್ರೆಕಾರರು ತಮ್ಮ ಪ್ರಭುತ್ವದ ವಿರುದ್ಧದ ಹೇಳಿಕೆಗಳನ್ನು ಮರೆಮಾಚುತ್ತಾರೆ. ತಮ್ಮ ಶತ್ರುಗಳ ಬಗೆಗೆ ಇಲ್ಲಸಲ್ಲದ ಆರೋಪಗಳನ್ನು ಹೊರಿಸುತ್ತಾರೆ. ಬ್ರಿಟಿಷರು ತಂದ ಒಡೆದು ಆಳುವ ನೀತಿಯ ಫಲವಾಗಿ ಬಂದ ಹೇಳಿಕೆಗಳ ಮಾಹಿತಿಯನ್ನು ನೋಡಬಹುದು. ಧರ್ಮದ ನೆಲೆಯಲ್ಲಿ ಕ್ರೋಡೀಕರಿಸಿದ ಮಾಹಿತಿಗಳು ಕೋಮುವಾದದ ನೆರಳಿನಲ್ಲಿ ಇಂದಿಗೂ ಮೊಳಕೆಯೊಡೆಯುತ್ತಲೇ ಇವೆ. ಶತ್ರುವನ್ನು ಧರ್ಮದ ನೆಲೆಯಲ್ಲಿ ನೋಡಿರುವುದೇ ಇದಕ್ಕೆ ಕಾರಣವೆನಿಸುತ್ತದೆ. ದೇಶೀಯ ಬರಹಗಾರರಲ್ಲಿ ಸ್ಥಳೀಯವಾಗಿ ಜ್ಞಾನ ಪಡೆದವರು ಬ್ರಾಹ್ಮಣ ವರ್ಗವಾಗಿದ್ದು, ಪ್ರಭುತ್ವದಲ್ಲಿ ತಮ್ಮ ಜಾತಿಯವರು ಯಾವುದೇ ಅಧಿಕಾರವನ್ನು ದುರುಪಯೋಗ ಪಡಿಸಿಕೊಂಡರೂ ಅದು ಬೆಳಕಿಗೆ ತರದೇ ಮರೆಮಾಚುತ್ತಾರೆ. ಸ್ವಜನ ಪಕ್ಷಪಾತವನ್ನು ಇಲ್ಲಿ ಗಮನಿಸಬಹುದು. ಇಲ್ಲಿನ ಮಾಹಿತಿಗಳೆಲ್ಲ ತಮ್ಮ ಆಡಳಿತದ ಅನುಕೂಲಕ್ಕಾಗಿಯೇ ಕ್ರೋಡೀಕರಿಸಿ ದ್ದಾರೆ. ತಮ್ಮ ಶತ್ರುಗಳ ಬಗೆಗೆ ವಿವಿಧ ಆರೋಪವನ್ನು ಹೋರಿಸುತ್ತಾರೆ. ದೇಶಿ ಬರಹಗಾರರು

ಪ್ರಭುತ್ವ ಕೇಂದ್ರಿತವಾಗಿ ಪ್ರತಿಯೊಂದು ಕಾರ್ಯವನ್ನು ಸಮರ್ಥಿಸುತ್ತಾರೆ. ಇದನ್ನೇ ರಾಷ್ಟ್ರೀಯವಾದಿ ಧೋರಣೆ ಎನ್ನುತ್ತಾರೆ. ದೇಶಿ ಚರಿತ್ರೆಕಾರರೂ ಕೂಡ ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ನೀಡಿರುವ ಹೇಳಿಕೆಗಳು ಚರ್ಚೆಗೆ ಒಳಗಾಗಿವೆ. ಈ ಹಿನ್ನೆಲೆಯಲ್ಲಿ 'ಟಿಪ್ಪು ಕನ್ನಡದ್ರೋಹಿಯೇ?' ಎಂಬುದರ ಚರ್ಚೆ, ಹಾಗೆಯೇ ಟಿಪ್ಪು ವಿಶ್ವವಿದ್ಯಾಲಯದ ಸ್ಥಾಪನೆಗೆ ಪರ-ವಿರೋಧಗಳ ನಡುವೆ ಎಂ.ಚಿದಾನಂದಮೂರ್ತಿ ಅವರು ರಚಿಸಿರುವ 'ಮೂಲ ದಾಖಲೆಗಳಲ್ಲಿ ಹುದುಗಿದ್ದ ಟಿಪ್ಪು' ಎಂಬ ಕೃತಿಯಲ್ಲಿ ಟಿಪ್ಪುವಿನ ಚಿತ್ರಣದ ಹೇಳಿಕೆಗಳು ಯಾವ ರೀತಿಯ ಪರಿಣಾಮಗಳನ್ನು ಬೀರುತ್ತಿವೆ ಎಂಬುದು ಪ್ರಸ್ತುತವಾಗಿರುವ ಸಂಗತಿ.

ಡಿ.ಆರ್.ನಾಗರಾಜ್ ಅವರ ಮಾತುಗಳಲ್ಲಿ ಹೇಳುವುದಾದರೆ ಚರಿತ್ರೆಯಲ್ಲಿ ಮುಂದುವರಿದ ಸಮಾಜಗಳು, ಶಕ್ತಿಗಳು ಹಿಂದುಳಿದಿರುವ ಸಮಾಜವನ್ನು ಆಕ್ರಮಿಸುವ ಪ್ರಕ್ರಿಯೆಯೇ ವಸಾಹತುಶಾಹಿ ಎನ್ನುತ್ತಾರೆ. ಅಂದರೆ ಈ ವಸಾಹತುಶಾಹಿ ಆಕ್ರಮಣವು ಇಬ್ಬಗೆಯದು. ಅಂದರೆ ಭೌತಿಕ ಹಾಗೂ ಮಾನಸಿಕ ಎರಡೂ ನೆಲೆಗಳಲ್ಲಿ ಇದು ನಡೆಯುತ್ತದೆ. ಈ ನೆಲೆಯಲ್ಲಿ ಒಡೆದು ಆಳುವ ನೀತಿಯ ಮೂಲಕ ಹಿಂದೂ ಮತ್ತು ಮುಸ್ಲಿಂ ಎಂಬ ಕೋಮುವಾದ ಎಂಬುದು ಮಾನಸಿಕವಾದರೆ, ವಸಾಹತುಶಾಹಿಗಳು ಇಲ್ಲಿನ ಸಂಪತ್ತಿನ ದೋಚುವಿಕೆ ಭೌತಿಕವಾದುದು ಎನ್ನಬಹುದು. ವಸಾಹತು ಆಡಳಿತದಲ್ಲಿನ ಈ ದೇಶಿ ಬರಹಗಾರರು ಬ್ರಿಟಿಷರು ತಂದ ಹೊಸಹೊಸ ಆಡಳಿತ ಪದ್ಧತಿಯನ್ನು ಅಭಿವೃದ್ಧಿಯ ನೆಲೆಯಲ್ಲಿ ಪ್ರತಿಯೊಂದನ್ನು ಸಮರ್ಥಿಸುತ್ತಾರೆ. ಆದರೆ ಇಲ್ಲಿನ ಸಂಪತ್ತು ಸೋರಿಕೆ ಆಗುತ್ತಿರುವ ಬಗೆಗೆ ಮಾಹಿತಿ ನೀಡುವುದಿಲ್ಲ. ಬ್ರಿಟಿಷರು ತಂದ ಆಡಳಿತದ ಕೆಲವು ವಿಚಾರಗಳು ಇಂದಿಗೂ ಅಸ್ತಿತ್ವದಲ್ಲಿದ್ದು ಕಾರ್ಯ ನಿರ್ವಹಿಸುತ್ತಿವೆ ಎಂಬುದರ ವಿವರಗಳನ್ನು ಈ ಮೂಲಕ ತಿಳಿದುಕೊಳ್ಳಬಹುದು.

ಸಿ.ಹಯವದನರಾವ್ ಅವರು ರಚಿಸಿರುವ ಮೈಸೂರು ಗ್ಯಾಸೆಟಿಯರ್ ಸಂಪುಟಗಳು ಇವತ್ತಿನ ಸಂದರ್ಭದಲ್ಲಿ ಮಾನ್ಯ ಆಗುವುದಿಲ್ಲ. ಈ ಗ್ಯಾಸೆಟಿಯರ್‌ಗಳಲ್ಲಿ ಧರ್ಮಕೇಂದ್ರಿತ ಮತ್ತು ಪ್ರಭುತ್ವಕೇಂದ್ರಿತವಾದ ವಿವರಣೆಗಳಿವೆ ಎಂಬ ಅಪವಾದವಿದೆ. ಪ್ರಸ್ತುತವಾಗಿ ಜನಮುಖಿ ಅಧ್ಯಯನಕ್ಕೆ ಹೆಚ್ಚು ಮಹತ್ವ ನೀಡುತ್ತಿರುವುದರಿಂದ ಈ ಗ್ಯಾಸೆಟಿಯರ್‌ಗಳಲ್ಲಿ ಜನರ ಮಾಹಿತಿ ನೀಡುತ್ತಾರೆಯೇ ಹೊರತು ಅವರ ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ವಿವರಿಸುವುದಿಲ್ಲ. ಮೇಲ್ವರ್ಗದ ಹಿತಾಸಕ್ತಿಗೆ ಅನುಗುಣವಾಗಿಯೇ ರಚಿಸಿದ್ದಾರೆ ಎಂಬುದನ್ನು ನೋಡಬಹುದು.

ವಸಾಹತೋತ್ತರ ಕಾಲಘಟ್ಟದಲ್ಲಿನ ಗ್ಯಾಸೆಟಿಯರ್‌ಗಳಲ್ಲಿನ ಕೆಲವು ಮಾಹಿತಿಗಳು ನಿರಚನೆ, ಪುನಾರಚನೆಗೆ ಒಳಗಾಗಿದ್ದರೂ, ವಿಷಯಗಳನ್ನು ಚರ್ಚಿಸದೇ, ಮಾಹಿತಿ ರೂಪದಲ್ಲಿ ನೀಡುತ್ತಾರೆ. ಈ ಗ್ಯಾಸೆಟಿಯರ್‌ಗಳ ವಿವರಗಳು ಆಡಳಿತ ನಡೆಸುವ ಸರ್ಕಾರದ ಅಧೀನಕ್ಕೆ ಒಳಪಟ್ಟಿವೆ. ಸರ್ಕಾರವು ಮಾಹಿತಿಗಳಿಗನುಸಾರವಾಗಿ ವಿವರಗಳನ್ನು ಕ್ರೋಢೀಕರಿಸಿದ್ದಾರೆ. ಇಲ್ಲಿ ಮಕೋನ ಅಧಿಕಾರ ಮತ್ತು ಜ್ಞಾನದ ನೆಲೆಯಲ್ಲಿ ನೋಡಿದಾಗ ಆ ಸಂದರ್ಭದಲ್ಲಿ ಮುಂಚೂಣಿಯಲ್ಲಿರುತ್ತದೆ. ಅದೇ ಅಧಿಕಾರ ನೆರಳಿನಲ್ಲಿ ಆ ಪ್ರದೇಶಗಳ ಜ್ಞಾನವೇ ಇಲ್ಲದ ಬರಹಗಾರರಿಗೆ ಅವಕಾಶ ನೀಡಿದರೆ ಮಾಹಿತಿಗಳು ಮರೆಮಾಚುತ್ತವೆ. ಇದರಿಂದ ತನ್ನ ಅಸ್ಮಿತೆಯ ನೆಲೆಯನ್ನೇ ಕಳೆದುಕೊಳ್ಳುವಂತಾಗುತ್ತದೆ. ಈ ಗ್ಯಾಸೆಟಿಯರ್‌ಗಳ ವಿಷಯದ ಮಾಹಿತಿಗಳನ್ನು ನೋಡಿದರೆ

ಬ್ರಿಟಿಷರು ರಚಿಸಿದ ಮಾದರಿಯಲ್ಲಿಯೇ ಮುಂದುವರಿದಿವೆ. ವಿವರಣೆಗಳನ್ನು ಸರ್ವೇಕ್ಷಣ ರೂಪದಲ್ಲಿ ನೀಡಲಾಗಿದೆ. ಅಲ್ಲದೇ ಕಾಲಕ್ಕೆ ತಕ್ಕಂತೆ ಹೊಸ ವಿಷಯ ಮಾಹಿತಿಗಳನ್ನು ಸೇರಿಸಿ ನಿರಚನೆ, ಪುನಾರಚನೆ ಮಾಡಿದರೂ ಇಲ್ಲಿನ ವಿಷಯಗಳಲ್ಲಿ ಸಮಸ್ಯೆಗಳತ್ತ ಗಮನ ಹರಿಸದೇ ಹಾಕಿಕೊಂಡ ಯೋಜನೆಯ ಬಗೆಗಿನ ವಿವರಗಳನ್ನು ಮಾತ್ರ ತಿಳಿಸಿದ್ದಾರೆ. ಅಭಿವೃದ್ಧಿಯ ಸಾಧಕಬಾಧಕಗಳನ್ನು ವಿಶ್ಲೇಷಿಸಿರುವುದಿಲ್ಲ. ಪ್ರತಿಯೊಂದನ್ನು ಯಾವುದೇ ಪ್ರಶ್ನೆ ಇಲ್ಲದೇ ಯಥಾವತ್ತಾಗಿ ಮಾಹಿತಿ ನೀಡುತ್ತಾರೆ. ಇದು ಒಂದು ರಾಷ್ಟ್ರೀಯ ಧೋರಣೆ ಎನ್ನಬಹುದೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ವಸಾಹತೋತ್ತರ ಕಾಲಘಟ್ಟದಲ್ಲಿನ ಗ್ಯಾಸೆಟಿಯರ್‌ಗಳ ಮಾಹಿತಿಗಳನ್ನು ಸಂಶೋಧನೆಗೆ ಒಳಪಡಿಸಿ ಸರಿಯಾದ ಮಾಹಿತಿಯನ್ನು ನೀಡುವ ಪ್ರಯತ್ನ ಮಾಡಬೇಕಾಗಿದೆ. ಆದರೆ ಈ ಕಾಲಘಟ್ಟದಲ್ಲಿ ಬಿಡಿ ಬಿಡಿಯಾಗಿ ಪ್ರಕಟಗೊಂಡ ಗ್ಯಾಸೆಟಿಯರ್‌ಗಳು ಸ್ಥಳೀಯ ಚರಿತ್ರೆಗೆ ಪೂರಕವಾಗಿವೆ. ರಾಜ್ಯ ಗ್ಯಾಸೆಟಿಯರ್‌ಗಳು ರಾಜ್ಯಗಳ ಒಟ್ಟು ಮಾಹಿತಿ, ಜಿಲ್ಲಾ ಗ್ಯಾಸೆಟಿಯರ್‌ಗಳು ಜಿಲ್ಲೆಗಳ ಒಟ್ಟು ಮಾಹಿತಿಯನ್ನು ಕೇಂದ್ರೀಕರಿಸಿ ನೀಡಿದರೆ, ಪ್ರಸ್ತುತವಾಗಿ ತಾಲೂಕು ಗ್ಯಾಸೆಟಿಯರ್‌ಗಳು ಸಹ ಬಿಡಿಬಿಡಿಯಾಗಿ ವಿಚಾರಗಳನ್ನು ತಿಳಿಸುತ್ತವೆ. ಇವು ಸ್ಥಳೀಯ ಚರಿತ್ರೆಯ ಅಧ್ಯಯನ ಮಾಡಲು ವಿವಿಧ ಮಜಲುಗಳ ಆಯಾಮಗಳನ್ನು ಒದಗಿಸಿ ಕೊಟ್ಟಿವೆ. ಹಾಗೆಯೇ ಜನಮುಖಿ ಅಧ್ಯಯನ ಕೈಗೊಳ್ಳಲು ಸಹಕಾರಿಯಾಗಿವೆ. ಈ ನಿಟ್ಟಿನಲ್ಲಿ ಮೈಸೂರು ಒಡೆಯರ ಚರಿತ್ರೆಯ ಮಾಹಿತಿಗಳನ್ನು ವಿವಿಧ ಕಾಲಘಟ್ಟಗಳಿಗನುಗುಣವಾಗಿ ಗ್ಯಾಸೆಟಿಯರ್‌ಗಳು ತಿಳಿಸುತ್ತವೆ.

**ಅಡಿಟಿಪ್ಪಣಿಗಳು**

೧. ಚಾಮ್‌ಬ್ರಿಸ್ ೨೧ನೇ ಸೆಂಚುರಿ ಡಿಕ್ಷನರಿ, ೧೯೯೯, ಚಾಮ್‌ಬ್ರಸ್ ಹರಪ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ, ಪು.೫೫೩.

೨. ಹುವ್ಯೂನ್ ಕಬೀರ್(ಸಂ), ೧೯೬೪, ದಿ ಗ್ಯಾಸೆಟಿಯರ್ ಆಫ್ ಇಂಡಿಯಾ, ಸಂಪುಟ-೧, ನ್ಯೂಡೆಲ್ಲಿ, ಪು.ii.

೩. ಗೋಪಾಲ್ ಆರ್.(ಸಂ), ಸೋಮಶೇಖರ್ ಜಿ.ಟಿ.(ಲೇ), ೨೦೧೦, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ(ಮೈಸೂರು ಸಂಸ್ಥಾನದಲ್ಲಿ ಗ್ಯಾಸೆಟಿಯರ್ ರಚನೆ ಪರಂಪರೆ ವಿಕಾಸ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೫೮೧.

೪. ಮುಕಂದಪ್ರಭು(ಪ್ರಸಂ), ಸುರೇಂದ್ರರಾವ್ ಬಿ.(ಲೇ)., ೨೦೦೨, ಗ್ಯಾಸೆಟಿಯರ್ ಇನ್ ಕಲೋನಿಯಲ್ ಸಬ್ಜಕ್ಟಿಫಿಕೇಶನ್ ಸ್ಟರ್ರೋಕಸ್ ಮ್ಯಾನ್ಯುಯಲ್ ಆಫ್ ಸೌತ್ ಕೆನರಾ, ಪಾಲಿಕೆನರಾ ೬೦೦, ಪು.೧೬-೧೭.

೫. ವೆಂಕಟೇಶ ಸಾಂಗಲೀ, ೧೯೯೦, ಗೆಜೆಟಿಯರ್ ಜಿಲ್ಲೆಗಳ ಜಾತಕ, ಸುಧಾ ಬೆಳ್ಳಿಸಂಚಿಕೆ, ಪು.೨೬.

೬. ಗೋಪಾಲ್ ಆರ್.(ಸಂ.), ಸೋಮಶೇಖರ್ ಜಿ.ಟಿ.(ಲೇ.), ೨೦೧೦, ಮೈಸೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ(ಮೈಸೂರು ಸಂಸ್ಥಾನದಲ್ಲಿ ಗ್ಯಾಸೆಟಿಯರ್ ರಚನೆ ಪರಂಪರೆ ವಿಕಾಸ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು, ಪು.೫೮೧-೫೮೨.

೭. ಅನಿಲ್, ಸೆಕ್ಸೇನಾ, ೨೦೦೭, ಈಸ್ಟ್ ಇಂಡಿಯಾ ಕಂಪನಿ, ಅನ್ಮೋಲ್ ಪಬ್ಲಿಕೇಷನ್, ನ್ಯೂಡೆಲ್ಲಿ, ಪು.೪೯-೫೮.

೮. ಗೋಪಾಲ್ ಎಂ.ಹೆಚ್., ೧೯೯೩, ಬ್ರಿಟಿಷ್ ಸೋರ್ಸಸ್ ಆಫ್ ದಿ ಎಕಾನಮಿಕ್ ಪೊಲಿಟಿಕಲ್ ಆ್ಯಂಡ್ ಸೋಷಿಯಲ್ ಹಿಸ್ಟರಿ ಆಫ್ ದಿ ಮೈಸೂರ್ ಸ್ಟೇಟ್, ಸಂಪುಟ ೧, ಪಾಪ್ಯುಲರ್ ಪಬ್ಲಿಕೇಷನ್ಸ್, ಬಾಂಬೆ, ಪು.೧೬-೧೭.

೯. ಶ್ರೀನಿವಾಸ ಹಾವನೂರು, ೧೯೭೪, ಹೊಸಗನ್ನಡದ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪೂರ್ವಾರ್ಧ, ಪು.೧೪೩.

೧೦. ಮೆಕೆಂರಿಝಿ ಕಲೆಕ್ಷನ್ ಜನರಲ್, ಮೆಮೋರೀಸ್ ಇಲ್‌ಸ್ಟ್ರೇಟೀವ್ ಆಫ್ ದಿ ಜಿಯಾಗ್ರಫಿ ಆಫ್ ಸೌತ್ ಇಂಡಿಯ.

೧೧. ಶ್ರೀನಿವಾಸ ಹಾವನೂರು, ೧೯೭೪(ಮೊದಲನೇ ಆವೃತ್ತಿ), ಹೊಸಗನ್ನಡದ ಅರುಣೋದಯ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪೂರ್ವಾರ್ಧಾ, ಪು.೧೪೬.

೧೨. ಉಪಾಸನ ಸಿಂಗ್, ೧೯೯೩, ಬ್ರಿಟಿಷ್ ಆಡ್ಮಿನಿಷ್ಟ್ರೇಷನ್ ಇನ್ ಇಂಡಿಯಾ, ಅನ್‌ಮೋಲ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ, ಪು.೫೪.

೧೩. ಶ್ರೀನಿವಾಸ ಎಂ.ವಿ., ಏಪ್ರಿಲ್-ಜೂನ್ ೨೦೦೭, ದಿ ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ, ವಾಲ್ಯೂಮ್-XCVIII ನಂ.೨, ಬೆಂಗಳೂರು, ಪು.೬.

೧೪. ಫ್ರಾನ್ಸಿಸ್ ಬುಕಾನನ್, ೧೮೦೭, ಎ ಜರ್ನಿ ಫ್ರಂ ಮದ್ರಾಸ್ ಥ್ರೊ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್, ಮೂರು ಸಂಪುಟಗಳು, ಲಂಡನ್(ಮರುಮುದ್ರಣ ೨೦೧೦), ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ ಡಿಪಾರ್ಟ್‌ಮೆಂಟ್, ಬೆಂಗಳೂರು.

೧೫. ರೈಸ್ ಬಿ.ಎಲ್., ೧೮೭೭, ಮೈಸೂರ್ ಆ್ಯಂಡ್ ಕೂರ್ಗ್ ಎ ಗ್ಯಾಸೆಟಿಯರ್, ವಾಲ್ಯೂಮ್-೧, ಬೆಂಗಳೂರು: ಮೈಸೂರು ಗೌರ್ನಮೆಂಟ್ ಪ್ರೆಸ್, ಪು.IV.

೧೬. ಮಾರ್ಕ್ ವಿಲ್ಕ್ಸ್, ೧೯೧೭(ಪರಿಷ್ಕೃತ ೧೯೩೦), ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ-ಮೂರು ಸಂಪುಟಗಳು, ಲಂಡನ್.

೧೭. ರೈಸ್ ಬಿ.ಎಲ್., ೧೯೮೭(ಪರಿಷ್ಕೃತ), ಮೈಸೂರ್ ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್ ವುಡ್‌ಪಾಲ್ ಅಂಡ್ ರಿಂಡರ್, ಲಂಡನ್, ಪು.XI-XII.

೧೮. ಹಯವದನ ರಾವ್ ಸಿ., ೧೯೨೭-೧೯೩೦(ಮರುಮುದ್ರಣ-೨೦೧೨), ಮೈಸೂರು ಗ್ಯಾಸೆಟಿಯರ್, ಸಂಪುಟ ೪, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು, ಪು.೬೮೩.

೧೯. ರೈಸ್ ಬಿ.ಎಲ್., ೧೮೯೭(ಪರಿಷ್ಕೃತ), ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್, ವುಡ್‌ಪಾಲ್ ಆ್ಯಂಡ್ ರಿಂಡರ್, ಲಂಡನ್, ಪು.XIII.

೨೦. ರೈಸ್ ಬಿ.ಎಲ್., ೧೯೭೬-೧೮೭೮, ಮೈಸೂರ್ ಆ್ಯಂಡ್ ಕೂರ್ಗ್, ಎ ಗ್ಯಾಸೆಟಿಯರ್-ಮೂರು ಸಂಪುಟಗಳು, ಬೆಂಗಳೂರು: ಮೈಸೂರು ಗೌರ್ನಮೆಂಟ್ ಪ್ರೆಸ್.

೨೧. ರೈಸ್ ಬಿ.ಎಲ್., ೧೮೯೭(ಪರಿಷ್ಕೃತ), (ಮರುಮುದ್ರಣ-೨೦೦೧), ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್, ಎರಡು ಸಂಪುಟಗಳು, ಏಷ್ಯನ್ ಎಜುಕೇಷನಲ್ ಸರ್ವೀಸ್, ನ್ಯೂಡೆಲ್ಲಿ.

೨೨. ರೈಸ್ ಬಿ.ಎಲ್., ೧೮೭೭, ಮೈಸೂರು ಆ್ಯಂಡ್ ಕೂರ್ಗ್ ಎ ಗ್ಯಾಸೆಟಿಯರ್, ಸಂಪುಟ-೧, ಮೈಸೂರು ಗೌರ್ನಮೆಂಟ್ ಪ್ರೆಸ್, ಬೆಂಗಳೂರು, ಪು.೪೪-೪೫.

೨೩. ರೈಸ್ ಬಿ.ಎಲ್., ೧೮೯೭(ಪರಿಷ್ಕೃತ), ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್, ಸಂಪುಟ-೧, ವುಡ್‌ಪಾಲ್ ಆ್ಯಂಡ್ ರಿಂಡರ್, ಲಂಡನ್, ಪು.೬೬-೬೭.

೨೪. ಶ್ರೀನಿವಾಸ ಮೂರ್ತಿ ಎಸ್.ಎಲ್., ೨೦೧೧, ಪುರಾತತ್ತ್ವ ಪಿತಾಮಹ ಬಿ.ಎಲ್.ರೈಸ್ ಜೀವನ-ಸಾಧನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೩೦೦-೩೦೧.

೨೫. ರೈಸ್ ಬಿ.ಎಲ್., ೧೮೯೭(ಪರಿಷ್ಕೃತ), ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್, ಸಂಪುಟ-೧, ವುಡ್‌ಪಾಲ್ ಆ್ಯಂಡ್ ರಿಂಡರ್, ಲಂಡನ್, ಪು.XIII

೨೬. ಅದೇ, ಪು.೩೭೫.

೨೭. ಶ್ರೀನಿವಾಸಮೂರ್ತಿ ಎಸ್.ಎಲ್., ೨೦೧೧, ಪುರಾತತ್ತ್ವ ಪಿತಾಮಹ ಬಿ.ಎಲ್.ರೈಸ್ ಜೀವನ-ಸಾಧನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೩೨೯.

೨೮. ಅದೇ, ಪು.೩೩೧.

೨೯. ಅದೇ, ಪು.೩೩೯.

೩೦. ಅದೇ, ಪು.೩೪೦-೩೪೧.

೩೧. ಅದೇ, ಪು.೩೪೫.

೩೨. ರೈಸ್ ಬಿ.ಎಲ್., ೧೮೯೭(ಪರಿಷ್ಕೃತ), ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್, ಸಂಪುಟ-೧, ವುಡ್‌ಪಾಲ್ ಆ್ಯಂಡ್ ರಿಂಡರ್, ಲಂಡನ್, ಪು.೫೨೭-೫೨೮.

೩೩. ಹಯವದನರಾವ್ ಸಿ., ೧೯೨೭-೩೦(ಮರುಮುದ್ರಣ ೨೦೧೨), ಮೈಸೂರು ಗ್ಯಾಸೆಟಿಯರ್, ಐದು ಸಂಪುಟಗಳು, ಕರ್ನಾಟಕ ರಾಜ್ಯ ಗ್ಯಾಸೆಟಿಯರ್, ಬೆಂಗಳೂರು.

೩೪. ಶ್ರೀಕಂಠಯ್ಯ ಎಸ್., ಏಪ್ರಿಲ್ ೧೯೩೨, ದಿ ಕ್ವಟರ್ಲಿ ಜನರಲ್ ಆಫ್ ದಿ ಮಿಥಿಕ್ ಸೊಸೈಟಿ, ವಾಲ್ಯೂಮ್-XXII, ನಂ.೪, ಬೆಂಗಳೂರು, ಪು.೪೮೮-೫೧೩.

೩೫. ಮಾರ್ಕ್ ವಿಲ್ಕ್ಸ್, ೧೮೧೭(ಪರಿಷ್ಕೃತ ೧೯೩೦), ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ, ಸಂಪುಟ-೧, ಲಂಡನ್, ಪು.೧೨೮-೧೩೮ ಮತ್ತು ರೈಸ್ ಬಿ.ಎಲ್., ೧೮೯೭(ಪರಿಷ್ಕೃತ), ಮೈಸೂರು ಎ ಗ್ಯಾಸೆಟಿಯರ್ ಕಂಪೈಲ್ಡ್ ಫಾರ್ ಗೌರ್ನಮೆಂಟ್, ಸಂಪುಟ ೧, ವುಡ್ ಪಾಲ್ ಆ್ಯಂಡ್ ರಿಂಡರ್, ಲಂಡನ್, ಪು.೩೬೭.

೩೬. ಚಂದ್ರಶೇಖರ್ ಎಸ್., ೨೦೦೬, ವಸಾಹತುಕಾಲೀನ ಕರ್ನಾಟಕ(ಒಡೆಯರ ಚರಿತ್ರೆಗಳು: ಒಂದು ಅವಲೋಕನ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೧೫.

೩೭. ಅದೇ, ೧೭-೧೮.

೩೮. ಅದೇ, ಪು.೧೯.

೩೯. ಶಾಸ್ತ್ರಿ ಎ.ಕೆ., ೨೦೦೩, ಶೃಂಗೇರಿ ಮಠದ ಕಡತಗಳಲ್ಲಿಯ ಆಯ್ದ ಚಾರಿತ್ರಿಕ ದಾಖಲೆಗಳು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ಪು.೨೪೯-೨೫೦.

೪೦. ರಾಜಾರಾಮ ಹೆಗಡೆ, ೨೦೦೪, ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೧. ರಾಮಚಂದ್ರನ್ ಸಿ.ಎನ್., ೨೦೦೨, ವಸಾಹತೋತ್ತರ ಚಿಂತನೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ಪು.೧೨-೧೩.

೪೨. ಸುಮನ ಆರ್., ೨೦೧೨, ವಸಾಹತುಶಾಹಿ ಕಾಲಘಟ್ಟದ ಕನ್ನಡ ಭೂಪ್ರದೇಶಗಳ ಗ್ಯಾಸೆಟಿಯರುಗಳ ಚಾರಿತ್ರಿಕ ಅಧ್ಯಯನ, ಅಪ್ರಕಟಿತ ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೩೭.

೪೩. ಕಾಲಗರ್ಭದ ಕೈಸಾಲೆಗಳಲ್ಲಿ ಕರ್ನಾಟಕ ಗ್ಯಾಸೆಟಿಯರ್‌ಗಳ ಧೀಮಂತ ಹೆಜ್ಜೆ, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೪೪. ಶ್ರೀಸತ್ಯನ್ ಬಿ.ಎಸ್.(ಸಂ.), ೧೯೬೭, ಚಿತ್ರದುರ್ಗ ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೪೫. ಶ್ರೀಸತ್ಯನ್ ಬಿ.ಎಸ್.(ಸಂ.), ೧೯೬೮(ಪರಿಷ್ಕೃತ ಕನ್ನಡ ಆವೃತ್ತಿ-೨೦೦೩), ಮಂಡ್ಯ ಜಿಲ್ಲಾ ಗ್ಯಾಸೆಟಿಯರ್, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೪೬. ಅಭಿಶಂಕರ್ ಕೆ.(ಸಂ), ೧೯೬೮(ಮರುಮುದ್ರಣ ೨೦೧೨), ಕೋಲಾರ ಜಿಲ್ಲಾ ಗ್ಯಾಸೆಟಿಯರ್, (ಆಂಗ್ಲ) ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು ಮತ್ತು ಚಿತ್ತರಂಜನ್ ಹೆಚ್.(ಸಂ)., ೨೦೦೫, ಕೋಲಾರ ಜಿಲ್ಲಾ ಗ್ಯಾಸೆಟಿಯರ್(ಕನ್ನಡ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೪೭. ಅಭಿಶಂಕರ್ ಕೆ.(ಸಂ), ೧೯೬೯, ತುಮಕೂರು ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೪೮. ಅಭಿಶಂಕರ್ ಕೆ.(ಸಂ), ೧೯೭೧, ಹಾಸನ ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೪೯. ಅಭಿಶಂಕರ್ ಕೆ.(ಸಂ), ೧೯೭೬, ಶಿವಮೊಗ್ಗ ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫೦. ಅಭಿಶಂಕರ್ ಕೆ.(ಸಂ), ೧೯೮೧, ಮಂಗಳೂರು ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫೧. ಸೂರ್ಯನಾಥ ಯು. ಕಾಮತ್(ಸಂ), ೧೯೮೨-೧೯೮೩, ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ (ಆಂಗ್ಲ), ಭಾಗ-೧ ಮತ್ತು ೨, ಗೌರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು.

೫೨. ಸೂರ್ಯನಾಥ ಯು. ಕಾಮತ್(ಸಂ), ೧೯೮೪–೮೬, ಕರ್ನಾಟಕ ರಾಜ್ಯ ಗ್ಯಾಸೆಟಿಯರ್(ಕನ್ನಡ), ಭಾಗ–೧, ೨ ಮತ್ತು ೩, ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫೩. ಸೂರ್ಯನಾಥ ಯು. ಕಾಮತ್(ಸಂ), ೧೯೮೮, ಮೈಸೂರು ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫೪. ಸೂರ್ಯನಾಥ ಯು. ಕಾಮತ್(ಸಂ), ೧೯೮೯, ಬೆಂಗಳೂರು ಗ್ರಾಮಾಂತರ ಜಿಲ್ಲಾ ಗ್ಯಾಸೆಟಿಯರ್ (ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫೫. ಸೂರ್ಯನಾಥ ಯು. ಕಾಮತ್(ಸಂ), ೧೯೯೦, ಬೆಂಗಳೂರು ಜಿಲ್ಲಾ ಗ್ಯಾಸೆಟಿಯರ್(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

೫೬. ಅನೀಸ್ ಸಿರಾಜ್ ಎಸ್.(ಪ್ರಸಂ), ಚಿಕ್ಕಮಾದು ಎನ್.ಎನ್., ರಾಜಶೇಖರ್ ಪಿ.ಕೆ., ರಾಜೇಂದ್ರಪ್ಪ ಎಸ್., ಗಿರೀಗೌಡ ನೀ., ಶಾಮಸುಂದರ್ ಬಿ., ವಿಶ್ವೇಶ್ವರ ತೇ.ಸಿ., ಮಂಜುಳಾ ಹುಲ್ಲಹಳ್ಳಿ(ಲೇ.), ೨೦೧೦, ಮೈಸೂರು ಜಿಲ್ಲೆಯ ಏಳು ತಾಲೂಕು ಗ್ಯಾಸೆಟಿಯರ್‌ಗಳು(ಮೈಸೂರು, ಪಿರಿಯಾಪಟ್ಟಣ, ತಿರುಮಕೂಡಲು ನರಸೀಪುರ, ಹೆಗ್ಗಡದೇವನಕೋಟೆ, ಹುಣಸೂರು, ಕೃಷ್ಣರಾಜನಗರ, ನಂಜನಗೂಡು), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು.

## ಅಧ್ಯಾಯ ಐದು

# ಮಾಹಿತಿ ಮತ್ತು ವಿಶ್ಲೇಷಣಾತ್ಮಕ ಚಾರಿತ್ರಿಕ ಕೃತಿಗಳ ವಿಶ್ಲೇಷಣೆ

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಕಾಲದ ಪರಿಧಿಯೊಳಗೆ ಮಾಹಿತಿ ಮತ್ತು ವಿಶ್ಲೇಷಣಾತ್ಮಕ ಕೃತಿಗಳು ರಚನೆಗೊಂಡಿವೆ. ಮೊದಲು ಚರಿತ್ರೆಯ ದಾಖಲೆಗಳನ್ನು ಕಲೆ ಹಾಕುವ ಪ್ರಯತ್ನಗಳು ನಡೆದವು. ಈ ದಾಖಲೆಗಳಲ್ಲಿ ಇರುವ ವಿಷಯಗಳನ್ನು ಯಥಾವತ್ತಾಗಿ ಕ್ರೋಡೀಕರಿಸಿದರು. ಈ ವಿಚಾರಗಳಲ್ಲಿ ಯಾವುದೇ ಚರ್ಚೆ ಇರುವುದಿಲ್ಲ. ಕೇವಲ ಸಮೀಕ್ಷೆಯ ವರದಿ ರೂಪವಾಗಿತ್ತು. ವಸಾಹತುಶಾಹಿಯ ಆಗಮನದ ನಂತರ ಬರವಣಿಗೆ ಕಾರ್ಯಗಳು ಚುರುಕಾದವು. ಈ ಹಿನ್ನೆಲೆಯಲ್ಲಿಯೇ ಅನಂತರ ವಿಶ್ಲೇಷಣಾತ್ಮಕತೆಯು ಹುಟ್ಟಿಕೊಂಡಿತು. ಏಕೆ, ಏನು, ಹೇಗೆ ಎಂಬ ಪ್ರಶ್ನೆಗಳು ಹುಟ್ಟಿಕೊಂಡವು. ಇದರಿಂದ ದಾಖಲೆಯಲ್ಲಿನ ಮಾಹಿತಿಯ ಬಗೆಗೆ ಸ್ಪಷ್ಟವಾದ ಅರ್ಥವನ್ನು ಖಚಿತಗೊಳಿಸಿಕೊಳ್ಳಲು ಸಾಧ್ಯವಾಯಿತು. ಈ ಮಾಹಿತಿಯಲ್ಲಿ ಅಡಕವಾಗಿರುವ ಅಂಶಗಳನ್ನು ಮತ್ತು ಹೇಳಿಕೆಗಳನ್ನು ವಿಮರ್ಶೆಗೊಳಪಡಿಸಲಾಗಿದೆ. ಮಾಹಿತಿಯು ಯಾವ ಪರಿಸ್ಥಿತಿಗಳಿಗನುಗುಣವಾಗಿ ಸಿದ್ಧಗೊಳಿಸಲಾಗಿದೆ ಎಂಬುದನ್ನು ಅರಿಯಬೇಕು. ಮಾಹಿತಿಯು ನೀಡಿದ ವ್ಯಕ್ತಿಯ ಹಿನ್ನೆಲೆ, ವ್ಯಕ್ತಿತ್ವ, ಸಂದರ್ಭ ಇವುಗಳನ್ನು ಪರಿಶೀಲಿಸಿ ಅವುಗಳಿಂದ ಅದು ಎಷ್ಟರಮಟ್ಟಿಗೆ ಪ್ರಭಾವಗೊಂಡಿದೆ ಎಂಬುದನ್ನು ನಿರ್ಧರಿಸ ಬೇಕಾಗುತ್ತದೆ. ಇವುಗಳನ್ನು ಅರಿಯಲು ಮಾಹಿತಿಗಾರರ ಕುರಿತು ಹಲವಾರು ವಿವರಗಳನ್ನು, ವೈಯಕ್ತಿಕ, ಸಾಮಾಜಿಕ ಜೀವನ, ಆರ್ಥಿಕ ಪರಿಸ್ಥಿತಿ, ಪೂರ್ವಗ್ರಹಗಳು, ಮನೋಭಾವ ಗಳು, ಕಾರ್ಯದಕ್ಷತೆ ಮುಂತಾದವುಗಳನ್ನು ತಿಳಿಯಬೇಕು. ಏಕೆಂದರೆ ಮಾಹಿತಿಗಳನ್ನು ಅರ್ಥವತ್ತಾಗಿ ಪುನಾರಚಿಸುವುದು ಇತಿಹಾಸಕಾರರ ಕರ್ತವ್ಯ. ಇದರಿಂದ ವಾಸ್ತವಿಕತೆಗೆ ಹತ್ತಿರವಾದ ಚರಿತ್ರೆಯ ಗ್ರಹಿಕೆಗಳನ್ನು ನೀಡಲು ಸಹಾಯಕವಾಗುತ್ತದೆ. ಇದರಿಂದ ಬಹುಮುಖ ನೆಲೆಯಲ್ಲಿ ವಿಚಾರಗಳು ಹೊರಬರಲು ಸಾಧ್ಯವಾಗುತ್ತದೆ. ಗ್ರಹಿಕೆ, ತಾತ್ವಿಕತೆ, ದೃಷ್ಟಿಕೋನ, ವಿಮರ್ಶೆ ಮುಂತಾದ ಸೈದ್ಧಾಂತಿಕತೆಯ ನಿಲುವುಗಳಲ್ಲಿ ವಿಶ್ಲೇಷಣೆಯು ಗುರುತಿಸಿಕೊಂಡಿದೆ. ಇದು ಚರಿತ್ರೆಯಲ್ಲಿನ ಹೊಸ ಸಿದ್ಧಾಂತಗಳ ಅಳವಡಿಕೆಯೂ ಆಗಿ ಸಾಗುತ್ತದೆ.

ಮಾಹಿತಿ ಮತ್ತು ವಿಶ್ಲೇಷಣಾತ್ಮಕ ಚಾರಿತ್ರಿಕ ಕೃತಿಗಳಲ್ಲಿ ವಸಾಹತುಶಾಹಿ ಕಾಲಘಟ್ಟ ಮತ್ತು ಆಧುನಿಕ ಕಾಲಘಟ್ಟದ ಚಾರಿತ್ರಿಕ ಕೃತಿಗಳನ್ನು ವಿಶ್ಲೇಷಣೆಗೆ ಇಲ್ಲಿ ಒಳಪಡಿಸಲಾಗಿದೆ.

ಮೊದಲು ಭಾರತೀಯರಿಗೆ 'ಚಾರಿತ್ರಿಕ ಪ್ರಜ್ಞೆ ಇಲ್ಲ' ಎನ್ನುವ ಕಾಲದಲ್ಲಿ ಮಾಹಿತಿಗಳನ್ನು ಕಲೆ ಹಾಕುವ ದೃಷ್ಟಿಯಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ಕೆಲವು ಕೃತಿಗಳನ್ನು ನೋಡಬಹುದು. ವಸಾಹತುಶಾಹಿ ನೆಲೆಯಿಂದ ಭಾರತೀಯರಿಗೆ ಒಂದು 'ಸೆನ್ಸ್' ಚರಿತ್ರೆಯ ಬಗೆಗೆ ಬಂದಿದ್ದರಿಂದ ಮಾಹಿತಿಯ ಜೊತೆಗೆ ಕೆಲವು ವಿವರಣಾತ್ಮಕ ಕೃತಿಗಳು ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ರಚನೆಯಾದವು. ಈ ಕೃತಿಗಳು ಧರ್ಮ ಮತ್ತು ಪ್ರಭುತ್ವ ಕೇಂದ್ರೀಕೃತವಾಗಿದ್ದು, ಸಾಂಪ್ರದಾಯಿಕ ಅಧ್ಯಯನ ಕ್ರಮವನ್ನು ಹೊಂದಿವೆ. ಇಲ್ಲಿ ರಾಜಕೀಯ ವಿಚಾರಗಳಿಗೆ ಹೆಚ್ಚಿನ ಮಹತ್ವ ನೀಡಿದರು. ಇನ್ನು ಸಂಶೋಧನೆಗೆ ಒಳಪಟ್ಟ ಕೃತಿಗಳು ಆರ್ಥಿಕ, ರಾಜಕೀಯ ಮತ್ತು ಸಾಮಾಜಿಕ ಸಂಘರ್ಷಗಳನ್ನು ತೀವ್ರವಾಗಿ ಚರ್ಚಿಸಿ, ವಿಶ್ಲೇಷಣೆಗೆ ಒಳಗುಮಾಡಿವೆ. ಇಲ್ಲಿ ಮುಖ್ಯವಾಗಿ ಜನಮುಖಿ ಅಧ್ಯಯನಕ್ಕೆ ಹೆಚ್ಚು ಒತ್ತನ್ನು ನೀಡಲಾಗಿದೆ.

ಮಾಹಿತಿ ಮತ್ತು ವಿಶ್ಲೇಷಣಾತ್ಮಕ ಚಾರಿತ್ರಿಕ ಕೃತಿಗಳ ವಿಶ್ಲೇಷಣೆಯಲ್ಲಿ ವಸಾಹತುಶಾಹಿ ಮತ್ತು ಆಧುನಿಕ ಕಾಲಘಟ್ಟದ ಚಾರಿತ್ರಿಕ ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಕೃತಿಗಳು ದೇಶಿ ಮತ್ತು ವಿದೇಶಿ ಸಂಶೋಧನಾಕಾರರ ನೆಲೆಯಲ್ಲಿ ನೋಡಿರುವಂತಹ ಕೃತಿಗಳಾಗಿವೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಪ್ರಭುತ್ವಕ್ಕೆ ಉಪಕೃತರಾದ ಕವಿಗಳು, ಅಧಿಕಾರಿಗಳು, ಕಾರ್ಯದರ್ಶಿಗಳು ಮತ್ತು ಇತಿಹಾಸಕಾರರು ರಚಿಸಿದ್ದು ದೇಶಿ ಬರವಣಿಗೆ ಎನಿಸಿಕೊಳ್ಳುತ್ತದೆ. ಬ್ರಿಟಿಷ್ ಆಡಳಿತಗಾರರು, ಅಧಿಕಾರಿಗಳು ಮತ್ತು ಇತಿಹಾಸಕಾರರು ರಚಿಸಿದ್ದು ವಿದೇಶಿ ಬರವಣಿಗೆ ಎನಿಸಿಕೊಳ್ಳುತ್ತದೆ. ಆಧುನಿಕ ಕಾಲಘಟ್ಟದಲ್ಲಿ ವಿದೇಶಿ ಸಂಶೋಧಕರು ಮೈಸೂರು ಚರಿತ್ರೆಯನ್ನು ಕುರಿತು ಸಂಶೋಧನಾ ಪ್ರಬಂಧಗಳನ್ನು ಬರೆಯಲು ಪ್ರಾರಂಭಿಸಿದ ನಂತರ ಮೈಸೂರಿನ ಚರಿತ್ರೆಗೆ ಸಂಬಂಧಪಟ್ಟಂತೆ ಹೊಸ ಪರಿಪ್ರೇಕ್ಷ್ಯಗಳು ಹುಟ್ಟಿಕೊಂಡವು. ಈ ಸಂಶೋಧಕರು ವಸಾಹತುಶಾಹಿ ಕಾಲಘಟ್ಟದ ಚರಿತ್ರೆಗೆ ಸಂಬಂಧಿಸಿದಂತೆ ತೀವ್ರವಾಗಿ ತೊಡಗಿ ಕೊಂಡು ಸಂಶೋಧನಾ ಕೃತಿಗಳನ್ನು ಬರೆದಿದ್ದಾರೆ. ದೇಶಿ ಸಂಶೋಧಕರೂ ಕೂಡ ಈ ಚೌಕಟ್ಟಿನೊಳಗೆ ತಮ್ಮ ಕೃತಿಗಳನ್ನು ರಚಿಸುವ ಪ್ರಯತ್ನ ಮಾಡಿದ್ದಾರೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ದೇಶಿ ಮತ್ತು ವಿದೇಶಿ ಚರಿತ್ರೆಕಾರರು ಮಾಡಿರುವ ಬರವಣಿಗೆ ಕೆಲಸಗಳನ್ನು ಇಲ್ಲಿ ಚರ್ಚಿಸಲಾಗಿದೆ. ಈ ಬರಹಗಾರರಿಗೆ ಇದ್ದ ಸನ್ನಿವೇಶ, ಅವರ ದೃಷ್ಟಿಕೋನ ಏನಿತ್ತು? ಜನರ ಮೇಲಿನ ಪ್ರಭಾವ ಮತ್ತು ಮುಂದಿನ ಪೀಳಿಗೆಯ ಮೇಲೆ ಬೀರಿದ ಪರಿಣಾಮಗಳು, ಅವರ ಅಜೆಂಡ(ಧೋರಣೆ) ಏನಾಗಿತ್ತು? ಕೃತಿಗಳಲ್ಲಿ ಮೂಡಿಬಂದಿರುವ ಐಡಿಯಾಲಜಿ(ಸಿದ್ಧಾಂತ)ಏನು? ಹಾಗೆಯೇ ಆ ಕೃತಿಗೂ ಬೇರೆ ಕೃತಿಗೂ ಯಾವ ರೀತಿಯ ಐಡಿಯಾಲಜಿಕಲ್ ಡಿಫ್ರೆನ್ಸ್(ಸಿದ್ಧಾಂತದ ಭಿನ್ನತೆ) ಇದೆ ಎಂಬುದನ್ನು ಗುರುತಿಸುವುದು ಮುಖ್ಯವಾಗಿದೆ. ಒಬ್ಬೊಬ್ಬ ಕೃತಿ ರಚನಾಕಾರರಿಗೂ ಒಂದೊಂದು ಸಿದ್ಧಾಂತವಿದ್ದು, ಅವರ ಆ ಕೃತಿಯ ಸೆಂಟ್ರಲ್ ಅರ್ಗ್ಯುಮೆಂಟ್(ಕೇಂದ್ರಿಯ ವಿಷಯ) ಏನು ಎಂಬುದನ್ನು ಚರ್ಚಿಸುವುದಾಗಿದೆ. ಈ ಕೃತಿಕಾರರ ಕೃತಿಗಳು ಯಾವ ವಿಚಾರಗಳನ್ನು ಕೈಬಿಟ್ಟಿವೆ ಎನ್ನುವುದನ್ನು ಗಮನಿಸಿ, ಕಡೆಗಣಿಸಲ್ಪಟ್ಟ ವಿಚಾರಗಳನ್ನು ಮೇಲೆತ್ತಿಕೊಂಡು ಚರಿತ್ರೆಯನ್ನು

ಪುನಾರಚನೆ ಮಾಡುವುದರ ಮೂಲಕ ಚರಿತ್ರೆಯಲ್ಲಿ ಮರೆಯಾದ ಸತ್ಯಾಸತ್ಯತೆಗಳನ್ನು ಪತ್ತೆ ಹಚ್ಚುವುದಾಗಿದೆ. ಈ ಕೃತಿಗಳಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಎಷ್ಟರ ಮಟ್ಟಿಗೆ ಬಳಸಿಕೊಂಡಿದ್ದಾರೆ, ಒಂದು ಕೃತಿಯ ರಚನೆಯು ಮತ್ತೊಂದು ಕೃತಿಯ ರಚನೆಗೆ ಆಕರವಾಯಿತೆ ಎಂಬುದನ್ನು ತಿಳಿಯಬೇಕಾಗಿದೆ. ಹಾಗೆಯೇ ಇಲ್ಲಿ ಮುಖ್ಯವಾಗಿ ಬರಹಗಾರರು ರಚಿಸಿರುವ ಕೃತಿಗಳನ್ನು ಸಾಂದರ್ಭಿಕವಾಗಿ ಹಿಂತೆಗೆದುಕೊಂಡು, ಹೊಸದಾಗಿ ದೊರೆತ ಆಕರಗಳೊಂದಿಗೆ ಸ್ವಯಂ ಮೌಲ್ಯಮಾಪನ ಮತ್ತು ಮರುಚಿಂತನೆಗೆ ಒಳಪಡಿಸಿದ್ದಾರೆಯೇ ಎಂಬುದನ್ನು ಪತ್ತೆ ಹಚ್ಚಬೇಕಾಗಿದೆ. ಇವರ ಕೃತಿಗಳ ಬರವಣಿಗೆಗಳು ಯಾವ ಸಿದ್ಧಾಂತ(ಪಂಥ)ಗಳಿಗೆ ಆಧಾರವಾಗಿವೆ ಎಂಬುದು ತಿಳಿಯುವುದೂ ಅವಶ್ಯಕವಾಗಿದೆ. ಹಾಗೆಯೇ ನಿರಚನೆ ಮತ್ತು ಪುನಾರಚನೆಗೆ ಒಳಪಡಿಸಬೇಕು. ಇದನ್ನು ಈ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಪ್ರಯತ್ನಿಸಲಾಗಿದೆ.

ಭಾರತಕ್ಕೆ ಪಾಶ್ಚಾತ್ಯರ ಆಗಮನದ ನಂತರ ಮೊದಲು ವ್ಯಾಪಾರಿ ಆಸಕ್ತಿ ಆಗಿದ್ದ ಈ ಸಂಪರ್ಕ ಕ್ರಮೇಣ ಬ್ರಿಟಿಷ್ ಸಾಮ್ರಾಜ್ಯಶಾಹಿಗೆ ಎಡೆ ಮಾಡಿಕೊಟ್ಟಿತು. ಈ ಸಂದರ್ಭದಲ್ಲಿ ಪಾಶ್ಚಾತ್ಯ ಚರಿತ್ರೆಲೇಖನವೂ ಇಲ್ಲಿ ತಳವೂರಿತು. ಭಾರತೀಯ ಇತಿಹಾಸವನ್ನು ಪಾಶ್ಚಾತ್ಯ ಚರಿತ್ರೆಲೇಖನ ವಿಧಾನದ ಸ್ವರೂಪದಲ್ಲಿ ಬರೆಯುವ ಪ್ರಕ್ರಿಯೆ ಪ್ರಾರಂಭವಾಯಿತು. ಹತ್ತೊಂಬತ್ತು ಮತ್ತು ಇಪ್ಪತ್ತನೆಯ ಶತಮಾನದಲ್ಲಿ ಚರಿತ್ರೆ ಬರವಣಿಗೆಯಲ್ಲಿ ಹಲವು ಪಂಥಗಳು ಹುಟ್ಟಿಕೊಂಡವು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಪೌರಸ್ತ್ಯ ಪಂಥ, ವಸಾಹತುಶಾಹಿ ಪಂಥ, ರಾಷ್ಟ್ರೀಯವಾದಿ ಪಂಥ, ಮಾರ್ಕ್ಸ್‌ವಾದಿ ಪಂಥ ಹಾಗೂ ಸಬಾಲ್ಟರ್ನ್ ಪಂಥ. ಈ ಪಂಥಗಳ ಸಿದ್ಧಾಂತಗಳು ಮೇಲ್ನೋಟಕ್ಕೆ ಭಾರತದ ಚರಿತ್ರೆ ಸಂಬಂಧಿಸಿದಂತೆ ಕಂಡುಬಂದರೂ ಕರ್ನಾಟಕ ಚರಿತ್ರೆ ಮತ್ತು ಮೈಸೂರು ಒಡೆಯರ ಚರಿತ್ರೆಗೆ ಇವುಗಳಿಂದ ನೇರವಾಗಿ ಪ್ರಭಾವಿತವಾಗಿದೆ.

ವಸಾಹತುಶಾಹಿಯು ಜನವರ್ಗಗಳನ್ನು ತುಳಿದು, ಬಲಪ್ರಯೋಗದ ಮೂಲಕ ಆಳುವ ರಾಜಕೀಯ ಪ್ರಭುತ್ವ ಎಲ್ಲಾ ಕ್ಷೇತ್ರಗಳಲ್ಲೂ ತನ್ನ ಅಧಿಕಾರವನ್ನು ಚಲಾಯಿಸುತ್ತಾ, ತನ್ನ ಕಪಿಮುಷ್ಟಿಯಲ್ಲಿ ಹಿಡಿದಿಟ್ಟುಕೊಂಡಿರುವ ವ್ಯವಸ್ಥೆ. ಮುಂದುವರಿದ ಜನಾಂಗವೊಂದು, ದುರ್ಬಲ ಜನಾಂಗವನ್ನು ಶೋಷಿಸುವ ದೊಡ್ಡ ಶಕ್ತಿ. ಸ್ಥಳೀಯವಾಗಿದ್ದರೂ ಬಲಾಢ್ಯ ಪರಕೀಯರ ಆಳ್ವಿಕೆಯಾಗಿದೆ. ೧೭ ಮತ್ತು ೧೮ನೇ ಶತಮಾನದಲ್ಲಿ ಪಾಶ್ಚಾತ್ಯರು ಪೂರ್ವದ ದೇಶಗಳನ್ನು ತಮ್ಮ ವಸಾಹತುಶಾಹಿ ಚಟುವಟಿಕೆಗಳಿಂದ, ರಾಜಕೀಯ ಆರ್ಥಿಕ ಹಿತಾಸಕ್ತಿಗಳಿಂದ ಶೋಧಿಸುವ ಪ್ರಕ್ರಿಯೆ ಆರಂಭವಾಯಿತು. ಸರ್ ವಿಲಿಯಂ ಜೋನ್ಸ್, ಎಫ್. ಮ್ಯಾಕ್ಸ್‌ಮುಲ್ಲರ್, ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಮ್ ಮುಂತಾದವರು ಪ್ರತಿನಿಧಿಸುವ ಪಂಥವನ್ನು ಓರಿಯಂಟಲಿಸ್ಟ್(ಪೌರಸ್ತ್ಯವಾದ) ಎಂದು ಕರೆಯಲಾಗಿದೆ. ಈ ವಿದ್ವಾಂಸರು ಪೌರ್ವಾತ್ಯ ದೇಶಗಳ ಸಂಸ್ಕೃತಿ, ಜನಜೀವನ ಹಾಗೂ ಪರಂಪರೆಯ ಕುರಿತು ಜಗತ್ತಿಗೆ ಹರಡಿದರು. ೧೭೮೪ರಲ್ಲಿ ಸರ್ ವಿಲಿಯಂ ಜೋನ್ಸ್ ಅವರು ಹುಟ್ಟು ಹಾಕಿದ 'ರಾಯಲ್ ಏಶಿಯಾಟಿಕ್ ಸೊಸೈಟಿ' ಈ ದೇಶದ ಸಂಸ್ಕೃತಿಯನ್ನು ಹರಡಿತು. ಪಾಶ್ಚಾತ್ಯರು ಪೂರ್ವದೇಶಗಳ ಹಿಂದುಳಿದ ವ್ಯವಸ್ಥೆಯನ್ನು 'ನಿರಂಕುಶ ಪ್ರಭುತ್ವ' ಎಂದು ಬಣ್ಣಿಸಿದರು. ಈ ವಿದ್ವಾಂಸರು ಪ್ರಾಚೀನ ಚರಿತ್ರೆಯನ್ನು ಅಧ್ಯಯನ ವಸ್ತುವನ್ನಾಗಿ

ಆಯ್ಕೆ ಮಾಡಿಕೊಂಡರು. ಈ ಚರಿತ್ರೆಕಾರರು 'ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆಯಿಲ್ಲ, ಭಾರತವು ಆಧ್ಯಾತ್ಮಿಕ, ಅಲೌಕಿಕ ಚಿಂತನೆಗಳಿಂದ ಕೂಡಿದ ದೇಶ ಎಂಬುದಾಗಿ ಚಿತ್ರಿಸಿದರು.[೧] ಈ ಅಧ್ಯಯನಗಳಿಂದ ಎಡ್ವರ್ಡ್ ಸೈದ್ ಅವರು 'ಓರಿಯಂಟಲಿಸಂ' ಕೃತಿಯಲ್ಲಿ ತಮ್ಮ ವಾದವನ್ನು ಮಂಡಿಸಿದ್ದಾರೆ. ಪೂರ್ವದ ಪ್ರಾಚೀನ ಪಠ್ಯಗಳ ಸಂಶೋಧನೆಗಳ ಮೂಲಕ, ಅಲ್ಲಿನ ಸಾಹಿತ್ಯ, ತತ್ವಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಪರಿಶೋಧನೆಯ ಮೂಲಕ ಪಶ್ಚಿಮದವರ ಪೌರ್ವಾತ್ಯವಾದವು ಪೂರ್ವವನ್ನು ಒಂದು ಅಧ್ಯಯನ ವಸ್ತು ಎಂಬಂತೆ ಕಟ್ಟಿಕೊಂಡಿದೆ. ಈ ಮೂಲಕ ಉದ್ದೇಶ ಪೂರ್ವಕವಾಗಿ ಭಿನ್ನತೆ, ಭೇದಭಾವಗಳನ್ನು ಸೃಷ್ಟಿಸಿ ಅಂತಿಮವಾಗಿ ಅಧ್ಯಯನಕ್ಕೆ ಒಳಗಾದ ಸಮಾಜಗಳನ್ನು ಅಮಾನವೀಯ ಅನಾಗರಿಕವೆಂದು ಚಿತ್ರಿಸಿದೆ ಎಂದು ಸೈದ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಸೈದ್ ಅವರು ಫ್ರಾನ್ಸಿನ ಮೈಕೆಲ್ ಫುಕೋ ಎಂಬ ಆಧುನಿಕೋತ್ತರ ಚಿಂತಕ 'ಜ್ಞಾನವು ಶಕ್ತಿಯಾಗಿದೆ' ಎಂಬ ವಿಚಾರವನ್ನು ಆಧರಿಸಿ ಪೌರ್ವಾತ್ಯ ಜ್ಞಾನವು ಹೇಗೆ ಸಾಮ್ರಾಜ್ಯಶಾಹಿ ಶಕ್ತಿಯಾಗಿ ಪರಿವರ್ತನೆಯಾಯಿತು ಎಂಬುದನ್ನು ತಿಳಿಸುತ್ತಾರೆ. ಐರೋಪ್ಯರು ಅನ್ಯ ಸಮುದಾಯಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡು ಅದರ ಮೇಲೆ ಅಧಿಕಾರ ಚಲಾಯಿಸುವ ಪಾತ್ರವನ್ನು ವಹಿಸಿಕೊಂಡರು. ಇದು ಪಾಶ್ಚಾತ್ಯರು ಪೌರ್ವಾತ್ಯರನ್ನು ಆಳ್ವಿಕೆಗೆ ಒಳಪಡಿಸುವ ಒಂದು ವಿಧಾನವಾಯಿತು.[೨] ಇಲ್ಲಿ ಜ್ಞಾನ ಮತ್ತು ಅಧಿಕಾರದ ಪಾತ್ರ ಯಾವ ರೀತಿ ಇತ್ತು ಎಂಬುದು ತಿಳಿಯುತ್ತದೆ.

ಪ್ರಭುತ್ವಕ್ಕೆ ಸಮರ್ಥನೆ ಬರುವಂತೆ ಯುಟಿಲಿಟೇರಿಯನ್ ಚಿಂತಕರು ಪ್ರತಿಪಾದಿಸಿದರು. ಇತಿಹಾಸವು ಮಾನವ ಸಮಾಜದ ಪ್ರಗತಿಯ ಕಥನವಾಗಿದ್ದು, ಸ್ವಾತಂತ್ರ್ಯ, ಅಭಿವೃದ್ಧಿಯ ನೆಲೆಗಳ ವಿಕಾಸವನ್ನು ಎತ್ತಿ ಹಿಡಿದ ಈ ಚರಿತ್ರೆಕಾರರು ಮಧ್ಯಯುಗವನ್ನು ಅಂಧಕಾರದ ಯುಗ ಎಂದು ಪ್ರತಿಪಾದಿಸಿದರು. ವಿಗ್ ಚರಿತ್ರೆಕಾರರು ಆಧುನಿಕ ಪಾಶ್ಚಾತ್ಯರೊಂದೇ ಈ ನಾಗರಿಕ ಹಂತವನ್ನು ತಲುಪಿದವರಾಗಿದ್ದು, ಉಳಿದೆಲ್ಲ ಸಮಾಜಗಳು ಇನ್ನೂ ಅನಾಗರಿಕ ಹಂತದಲ್ಲೇ ಇವೇ ಎಂದು ಭಾವಿಸಿದರು. ಪಾಸಿಟಿವಿಸ್ಟ್ ಚರಿತ್ರೆಕಾರರು ಚರಿತ್ರೆಯ ಅಂತರ್ಗತ ನಿಯಮಗಳು, ವಿಮರ್ಶಾ ಪದ್ಧತಿಗಳನ್ನು ವೈಜ್ಞಾನಿಕವಾಗಿ ಬೆಳೆಸಿದರು. ರೊಮ್ಯಾಂಟಿಸಿಸ್ಟ್‌ರು ಭಾರತೀಯ ಗತಕಾಲದ ವೈಭವೀಕರಣಕ್ಕೆ ಹೆಚ್ಚು ಒತ್ತು ನೀಡಿದರು.[೩] ಈ ನಿಟ್ಟಿನಲ್ಲಿ ಭಾರತೀಯ ಚರಿತ್ರೆಗೆ ಅಡಿಪಾಯ ಹಾಕಿದರು.

ಜೇಮ್ಸ್ ಮಿಲ್, ವಿನ್ಸೆಂಟ್ ಸ್ಮಿತ್ ಮತ್ತು ಮಾರ್ಕ್ ವಿಲ್ಕ್ಸ್ ಮುಂತಾದ ಸಾಮ್ರಾಜ್ಯಶಾಹಿ ಚರಿತ್ರಕಾರರು ಭಾರತದಲ್ಲಿ ಬ್ರಿಟಿಷರ ಒಡೆದು ಆಳುವ ನೀತಿಗೆ ಪೂರಕವಾಗಿ ಚರಿತ್ರೆಯನ್ನು ರಚಿಸಿದರು. ಜೇಮ್ಸ್ ಮಿಲ್ ೧೮೧೭ರಲ್ಲಿ **ಎ ಹಿಸ್ಟರಿ ಆಫ್ ಬ್ರಿಟಿಷ್ ಇಂಡಿಯಾ** ಎಂಬ ಕೃತಿಯನ್ನು ರಚಿಸಿದನು. ಇದರಲ್ಲಿ ಭಾರತದ ಚರಿತ್ರೆಯನ್ನು ಪ್ರಾಚೀನ, ಮಧ್ಯಕಾಲೀನ ಹಾಗೂ ಆಧುನಿಕ ಎಂಬುದಾಗಿ ಹಿಂದೂ, ಮುಸ್ಲಿಂ ಹಾಗೂ ಬ್ರಿಟಿಷ್ ನೆಲೆಯಲ್ಲಿ ವಿಂಗಡಿಸ ಲಾಯಿತು. ಪ್ರಾಚೀನ ಹಾಗೂ ಮಧ್ಯಕಾಲೀನ ಅವಧಿಗಳು ಹಿಂದೂ ಹಾಗೂ ಮುಸ್ಲಿಂ ಎನ್ನುವ ಧಾರ್ಮಿಕ ನೆಲೆಯಲ್ಲಿ ವಿಂಗಡನೆಗೊಂಡಂತೆ ಆಧುನಿಕ ಅವಧಿಯು ಕ್ರಿಶ್ಚಿಯನ್(ಕ್ರೈಸ್ತ) ಎನ್ನುವ ಧಾರ್ಮಿಕ ನೆಲೆಗಟ್ಟಿನಲ್ಲಿ ವಿಂಗಡನೆಗೊಳ್ಳಲಿಲ್ಲ. ಆ ಅವಧಿಯನ್ನು ಆಧುನಿಕ ಅಥವಾ

ಬ್ರಿಟಿಷ್ ಎಂಬುದಾಗಿ ಕರೆಯಲಾಯಿತು. ಕೋಮುಭಾವನೆಗಳು ಮೂಡುವಂತೆ ಚರಿತ್ರೆಯನ್ನು ನಿರ್ಮಿಸಿದರು ಎಂಬುದು ತಿಳಿಯುತ್ತದೆ. ವಿನ್ಸೆಂಟ್ ಸ್ಮಿತ್ ಅವರು ೧೯೦೦ಳರಲ್ಲಿ **ಅರ್ಲಿ ಹಿಸ್ಟರಿ ಆಫ್ ಇಂಡಿಯಾ** ಎಂಬ ಕೃತಿಯ ಮೂಲಕ ಪ್ರಾಚೀನ ಇತಿಹಾಸ ಅಥವಾ ಹಿಂದೂ ಭಾರತದ ಚರಿತ್ರೆಯ ಗತಿಯನ್ನು ನಿರೂಪಿಸಿದವರಲ್ಲಿ ಮೊದಲಿಗರು.[೪] ಭಾರತೀಯರಿಗೂ ಚಾರಿತ್ರಿಕತೆಯ ಜ್ಞಾನ ಅವಶ್ಯಕವಾಗಿ ಇತ್ತು ಎಂಬುದನ್ನು ಇವರ ವಾದದಲ್ಲಿ ತಿಳಿಸಿದರು. ಮಾರ್ಕ್ ವಿಲ್ಕ್ಸ್‌ನು **ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ** ಕೃತಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಮಹಾವಂಚಕರು, ಆಕ್ರಮಣಕಾರರು ಎಂದು ಬರೆಯುತ್ತಾನೆ. ಒಡೆಯರ ನಡುವೆ ಅಧಿಕಾರಕ್ಕಾಗಿ ಅರಮನೆಯಲ್ಲಿ ನಡೆದ ರಕ್ತಪಾತ, ಕೊಲೆ, ಸಂಘರ್ಷಗಳನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾನೆ. ಹೀಗೆ ಈ ಆಡಳಿತಗಾರರು ವಸಾಹತುಶಾಹಿ ಆಡಳಿತವು ಗಟ್ಟಿಗೊಳ್ಳಲು ಬೇಕಾದ ಮಾಹಿತಿಗಳನ್ನು ತಮ್ಮ ಕೃತಿಗಳಲ್ಲಿ ವಿವರಿಸಿದ್ದಾರೆ. ಎಲಿಯಟ್, ಹಂಟರ್, ಎಲ್‌ಫಿನ್‌ಸ್ಟನ್, ಮೋರೆಲ್ಯಾಂಡ್ ಮೊದಲಾದ ಚರಿತ್ರೆಕಾರರು ವಸಾಹತುಶಾಹಿ ನೆಲೆಯಲ್ಲೇ ಕೃತಿಗಳನ್ನು ರಚಿಸಿದರು. ವಸಾಹತುಶಾಹಿ ಆಡಳಿತ ತನ್ನ ಅನುಕೂಲಕ್ಕೆ ತಕ್ಕಂತೆ ಚರಿತ್ರೆ ರಚನೆ ಮಾಡಿತು. ಇದರಿಂದಾಗಿ ವಸಾಹತುಶಾಹಿಯ ಅಜೆಂಡಾ(ಧೋರಣೆ)ವನ್ನು ತಿಳಿಯಬಹುದು. ವಸಾಹತುಶಾಹಿ ಲೇಖನ ಪರಂಪರೆಯು ಕೋಮು ಭಾವನೆಗಳು ಮೂಡುವಂತೆ ಚರಿತ್ರೆಯನ್ನು ರಚಿಸಿತು. ಅದು ಹಾಗೆಯೇ ಮುಂದುವರಿದು, ಅದರ ಬೀಜಗಳು ಇಂದಿಗೂ ಮೊಳಕೆಯೊಡೆಯುತ್ತಲೇ ಇವೆ.

ಅನಿಲ್ ಸೀಲ್, ಜ್ಯೂಡಿಲ್ ಬ್ರೌನ್, ಡೇವಿಡ್ ವಾಶ್‌ಬ್ರೂಕ್, ಸೂಸಾನ್ ಬೇಲಿ, ರುಡಾಲ್ಫ್, ಓ.ಹ್ಯಾನಲನ್ ಮೊದಲಾದವರು ಕೇಂಬ್ರಿಡ್ಜ್ ಚರಿತ್ರೆಕಾರರಾಗಿ ಗುರುತಿಸಿಕೊಂಡಿದ್ದರು. ರಾಷ್ಟ್ರೀಯ ಕಾಂಗ್ರೆಸ್ ನೇತಾರರು ಕೂಡ ಭಾರತೀಯರನ್ನೆಲ್ಲ ಪ್ರತಿನಿಧಿಸಲಿಲ್ಲ ಹಾಗೂ ಇವರ ಹೋರಾಟಗಳು ಸಾಮ್ರಾಜ್ಯಶಾಹಿಯ ದಮನದಿಂದ ವಿಮೋಚನೆ ಪಡೆಯುವ ಉದ್ದೇಶಕ್ಕಿಂತ ತಾವು ಅಧಿಕಾರವನ್ನು ಪಡೆಯುವ ಉದ್ದೇಶವನ್ನು ಹೊಂದಿದ್ದರು ಎಂಬ ವಾದವನ್ನು ಇವರು ಮಂಡಿಸಿದರು.[೫] ವಸಾಹತುಶಾಹಿಯನ್ನು ನಾಶವಾಗಿ ನೋಡುವುದಿಲ್ಲ. ಬದಲಿಗೆ ಮುಂದುವರಿಕೆ ಯಾಗಿ ನೋಡುತ್ತಾರೆ ಎಂಬುದು ಮುಖ್ಯ.

ಈ ಹಿನ್ನೆಲೆಯಲ್ಲಿ ವಸಾಹತುಶಾಹಿಯ ನಿಲುವುಗಳನ್ನು ಎದುರಿಸಲು ರಾಷ್ಟ್ರೀಯವಾದಿ ಪಂಥ ಹುಟ್ಟಿಕೊಂಡಿತು. ಆದರೂ ಈ ಪಂಥದ ಚರಿತ್ರೆಕಾರರು ಸಾಮ್ರಾಜ್ಯಶಾಹಿ ಚರಿತ್ರೆಕಾರರ ಹಲವು ಅಂಶಗಳನ್ನು ತಮ್ಮ ಸಿದ್ಧಾಂತದೊಳಗೆ ಸೇರಿಸಿಕೊಂಡರು. ಇವರ ಅಂತಿಮ ಉದ್ದೇಶ ಭಾರತವೂ ಒಂದು ರಾಷ್ಟ್ರ ಎಂಬುದನ್ನು ಸಾಧಿಸಿ ಬ್ರಿಟಿಷ್ ಆಳ್ವಿಕೆಯಿಂದ ವಿಮೋಚನೆ ಪಡೆಯುವುದಾಗಿತ್ತು. ಕೆ.ಪಿ.ಜಯಸ್ವಾಲ್, ಆರ್.ಜಿ.ಭಂಡಾರ್ಕರ್, ಹೆಚ್.ಸಿ.ರಾಯ್‌ಚೌಧರಿ, ಆರ್.ಸಿ.ಮಜುಂದಾರ್, ಆರ್.ಕೆ.ಮುಖರ್ಜಿ, ಆನಂದ ಕುಮಾರಸ್ವಾಮಿ, ಗೋಪಿನಾಥ ರಾವ್, ಎ.ಎಸ್.ಅಲ್ಟೇಕರ್, ಕೆ.ಎ.ನೀಲಕಂಠಶಾಸ್ತ್ರಿ, ಜಾದೂನಾಥ್ ಸರ್ಕಾರ್, ಪಿ.ವಿ.ಕಾಣೆ ಮುಂತಾದ ರಾಷ್ಟ್ರೀಯವಾದಿ ಚರಿತ್ರೆಕಾರರು ಅರಸುಕೇಂದ್ರಿತ ಮತ್ತು ಧರ್ಮಕೇಂದ್ರಿತ ಚಿಂತನೆಗಳಿಗೆ ಹೆಚ್ಚು ಮಹತ್ವವನ್ನು ನೀಡಿದರು.[೬] ಸೂರ್ಯನಾಥ ಕಾಮತ್, ಎಂ.ವಿ.ಕೃಷ್ಣರಾವ್, ಎಂ.ಕೇಶವಭಟ್ಟ,

ಎಂ.ಹೆಚ್.ಕೃಷ್ಣ, ಬಿ.ಎ.ಸಾಲತ್ತೋರ್, ಬಿ.ಆರ್.ಗೋಪಾಲ್, ಜಿ.ಎಸ್.ದೀಕ್ಷಿತ್, ಕೆ.ವಿ.ರಮೇಶ್, ಅ.ಸುಂದರ, ಶೆಟ್ಟರ್, ಪಿ.ಗುರುರಾಜ ಭಟ್ ಮುಂತಾದವರು ಕರ್ನಾಟಕ ಚರಿತ್ರೆಯನ್ನು ರಾಷ್ಟ್ರೀಯ ವಾದಿ ದೃಷ್ಟಿಕೋನದಿಂದ ರಚಿಸಿದರು. ಇವರ ಕೃತಿಗಳು ನೇರವಾಗಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿರದಿದ್ದರೂ, ಕರ್ನಾಟಕದ ಚರಿತ್ರೆಯ ಒಂದು ಭಾಗವಾಗಿ ಮೈಸೂರು ಒಡೆಯರ ಚರಿತ್ರೆಯನ್ನು ವಿವರಿಸಿದ್ದಾರೆ.

ಮಾರ್ಕ್ಸ್‌ವಾದಿ ಪಂಥವು ವಸಾಹತುಶಾಹಿ ಮತ್ತು ರಾಷ್ಟ್ರೀಯವಾದಿ ಪಂಥಗಳಿಗಿಂತ ಭಿನ್ನವಾದ ರೀತಿಯಲ್ಲಿ ಚರಿತ್ರೆಯನ್ನು ವ್ಯಾಖ್ಯಾನಿಸಿತು. ಚರಿತ್ರೆಯಲ್ಲಾದ ಬದಲಾವಣೆಗಳಿಗೆ ಆಯಾಯ ಸಂದರ್ಭದಲ್ಲಾದ ಉತ್ಪಾದನಾ ವಿಧಾನವೇ ಕಾರಣ ಎಂಬ ವಾದವನ್ನು ಮಾರ್ಕ್ಸ್‌ವಾದಿ ಚರಿತ್ರೆಕಾರರು ಮುಂದಿಟ್ಟರು. ಉತ್ಪಾದನಾ ವ್ಯವಸ್ಥೆಯು ವರ್ಗಸಂಘರ್ಷದಿಂದಾಗಿ ಬದಲಾಗುತ್ತಲೇ ಬಂದಿದೆ. ಭಾರತದಲ್ಲಿ ಎಸ್.ಎ.ಡಾಂಗೆ, ಡಿ.ಡಿ.ಕೊಸಾಂಬಿ, ದೇವಿಪ್ರಸಾದ್ ಚಟ್ಟೋಪಾಧ್ಯಾಯ, ಆರ್.ಎಸ್.ಶರ್ಮ, ಡಿ.ಎನ್.ಝಾ, ಬಿ.ಎನ್.ಎಸ್.ಯಾದವ, ಆರ್.ಎನ್.ನಂದಿ, ದೇವಾಂಗೂ ದೇಸಾಯಿ, ರೋಮಿಲಾ ಥಾಪರ್, ಬಿ.ಡಿ.ಚಟ್ಟೋಪಾಧ್ಯಾಯ, ಇರ್ಫಾನ್ ಹಬೀಬ್, ಆರ್. ಪಾಮೆದತ್, ಎ.ಆರ್.ದೇಸಾಯಿ, ಇ.ಎಂ.ಎಸ್. ನಂಬೂದರಿಪಾಡ್, ಬಿಪಿನ್ ಚಂದ್ರ, ಸುಮಿತ್ ಸರ್ಕಾರ್ ಮುಂತಾದವರು ಮಾರ್ಕ್ಸ್‌ವಾದಿ ಪಂಥದ ಚರಿತ್ರೆಕಾರರಾಗಿದ್ದಾರೆ. ಇವರು ರಾಜಕೀಯ ದಿಂದ ದೂರವಾದ ಚರಿತ್ರೆಯತ್ತ ಒಲವು ತೋರಿದರು. ಅರಸರ ಚರಿತ್ರೆ, ಮೇಲ್ವರ್ಗದ ಚರಿತ್ರೆ ಎನ್ನುವ ಪೂರ್ವಗ್ರಹ ಪೀಡಿತ ಸಿದ್ಧಾಂತಗಳನ್ನು ಒಡೆಯುವುದರಲ್ಲಿ ಇವರ ಬರವಣಿಗೆಗಳು ಯಶಸ್ವಿಯಾದವು.[೭] ಸಾಮಾಜಿಕ ಮತ್ತು ಆರ್ಥಿಕ ನೆಲೆಯಿಂದ ಚರಿತ್ರೆ ರಚಿಸುವ ಇವರ ಪ್ರಯತ್ನವು ಅಲಕ್ಷಿತ ಸಮುದಾಯಕ್ಕೆ ನ್ಯಾಯ ಒದಗಿಸಿತು. ಹಾಗೆಯೇ ಸೆಕ್ಯುಲರಿಸಂನ ವಕ್ತಾರರಾಗಿ ಕೆ.ಎನ್.ಫಣಿಕ್ಕರ್, ಸರ್ವಪಳ್ಳಿ ಗೋಪಾಲ, ಸುಮಿತ್ ಸರ್ಕಾರ್ ಮುಂತಾದವರನ್ನು ಹೆಸರಿಸಬಹುದು. ಬರ್ಟನ್ ಸ್ಟೇನ್ ಅವರು ಮಾರ್ಕ್ಸ್‌ವಾದಿ ಸಂಪ್ರದಾಯ 'ಫ್ಯೂಡಲ್' ವ್ಯವಸ್ಥೆಯ ಪ್ರತಿಪಾದನೆಯನ್ನು ಅಲ್ಲಗಳೆದು ಮಧ್ಯಕಾಲೀನ ದಕ್ಷಿಣ ಭಾರತೀಯ ರಾಜ್ಯದ ರಚನೆ 'ಸೆಗ್ಮೆಂಟರಿ' ಸ್ವರೂಪವನ್ನು ಹೊಂದಿತ್ತೆಂದು ವಾದಿಸಿದರು.

ಇಟಲಿಯ ಆ್ಯಂಟೋನಿಯೋ ಗಾಮ್ಷಿ ಸಬಾಲ್ಟರ್ನ್ ಪಂಥವನ್ನು ಹುಟ್ಟುಹಾಕಿದನು. ಇದರ ಅರ್ಥ ಕೆಳಸ್ತರದ ಚರಿತ್ರೆ ಎಂಬುದಾಗಿದೆ. ವಸಾಹತು ಇತಿಹಾಸವನ್ನು 'ಹೆಜೆಮನಿ'ಯ ಪರಿಕಲ್ಪನೆಯಲ್ಲಿ ಸಬಾಲ್ಟರ್ನ್ ಅಧ್ಯಯನಕಾರರು ಪ್ರಾರಂಭಿಸಿದರು. ಇವರು ರಾಷ್ಟ್ರೀಯವಾದಿ ಇತಿಹಾಸದಂತೆ ಮಾರ್ಕ್ಸ್‌ವಾದಿ ಇತಿಹಾಸವೂ ಹೇಗೆ ಆಳುವವರ ಇತಿಹಾಸವನ್ನು ಕಟ್ಟಿಕೊಟ್ಟಿದೆ ಎಂಬುದನ್ನು ವಿಶ್ಲೇಷಿಸಿದರು. ಮಾರ್ಕ್ಸ್‌ವಾದವನ್ನು 'ಒಂದು ಸ್ಥಾಪಕ ತತ್ವ' ಎಂದು ಸಬಾಲ್ಟರ್ನ್ ಇತಿಹಾಸಕಾರರು ತಿರಸ್ಕರಿಸುತ್ತಾರೆ. ದಲಿತ, ಕಾರ್ಮಿಕ, ರೈತ, ಮಹಿಳೆ, ಆದಿವಾಸಿ(ಬುಡಕಟ್ಟು)ಗಳು ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿದ್ದಾರೆ. ಸಮಾಜದ ಕೆಳಸ್ತರದ ಬಹುಸಂಖ್ಯಾತ ಜನರ ಚರಿತ್ರೆಯು ನಿಜವಾದ ಚರಿತ್ರೆಯಾಗಿದ್ದು, ಅದು ಶೋಷಣೆಗೆ ಒಳಗಾಗಿದೆ ಎಂಬುದು ಆ್ಯಂಟೋನಿಯೋ ಗ್ರಾಮ್ಷಿ ಅಭಿಪ್ರಾಯ. ರಣಜಿತ್ ಗುಹಾ, ಸುಮಿತ್ ಸರ್ಕಾರ್, ದೀಪೇಶ್ ಚಕ್ರವರ್ತಿ, ಪಾರ್ಥ ಚಟರ್ಜಿ, ಗ್ಯಾನೇಂದ್ರ ಪಾಂಡೆ, ಡೇವಿಡ್ ಹರ್ಡಿಮನ್, ಗಾಯಿತ್ರಿ ಸ್ಪಿವಾಕ್

ಇನ್ನೂ ಮುಂತಾದವರನ್ನು ಭಾರತದಲ್ಲಿ ಸಬಾಲ್ಟರ್ನ್ ಚರಿತ್ರೆಕಾರರಾಗಿ ಉದಾಹರಿಸಬಹುದಾಗಿದೆ. ಆಧುನಿಕೋತ್ತರ ವಿದ್ವಾಂಸರು ಸಬಾಲ್ಟರ್ನ್ ಅಧ್ಯಯನಗಳಿಗೆ ಮಾರುಹೋದರು. ವಸಾಹತು ಮತ್ತು ವಸಾಹತೋತ್ತರ ಅಧ್ಯಯನಗಳಲ್ಲಿ ಅತೀವ ಆಸಕ್ತಿ ತೋರಿಸುತ್ತಿರುವ ಈ ವಿದ್ವಾಂಸರಿಗೆ ಸಬಾಲ್ಟರ್ನ್ ಅಧ್ಯಯನಗಳು ಆಪ್ತವೆನಿಸಿದವು. ಇವರು 'ಜನಹೋರಾಟಗಳ' ಅಧ್ಯಯನದ ಸ್ವರೂಪವನ್ನು 'ಅಧಿಕಾರ–ಜ್ಞಾನ'(ಪವರ್ ನಾಲೆಡ್ಜ್)ಸಂಕಥನಕ್ಕೆ ಸ್ಥಿತ್ಯಂತರಗೊಳಿಸಿದರು.[೮] ಯಾವುದು ಮುಂಚೂಣಿಯಲ್ಲಿರುವುದೋ ಅದು ಅಧಿಕಾರವಾಗಿದೆ.

ಕರ್ನಾಟಕದಲ್ಲಿ ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಪಂಥದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವ ಚರಿತ್ರೆಕಾರರ ಸಂಖ್ಯೆ ಕಡಿಮೆ ಎಂದೇ ಹೇಳಬೇಕು. ಈ ಸಿದ್ಧಾಂತದ ಹಿನ್ನೆಲೆಯಲ್ಲಿ ಅಧ್ಯಯನ ಮಾಡಿರುವ ಇತಿಹಾಸಕಾರರೆಂದರೆ ಎಸ್.ಶೆಟ್ಟರ್, ಕೇಶವನ್ ವೇಲುತ್ತಾಟ್, ಬಿ. ಸುರೇಂದ್ರರಾವ್, ಎಸ್.ಚಂದ್ರಶೇಖರ್, ಸೆಬಾಸ್ಟಿಯನ್ ಜೋಸೆಫ್, ಆರ್.ಎನ್.ನಂದಿ, ಎಸ್.ಎ. ಬಾರಿ, ರಾಜಾರಾಮ ಹೆಗಡೆ, ಅಶೋಕ ಶೆಟ್ಟರ್, ಲಕ್ಷ್ಮಣ್ ತೆಲಗಾವಿ, ವಿಜಯ್ ಪೂಣಚ್ಚ ತಂಬಂಡ, ಕೆ.ಮೋಹನ್‌ಕೃಷ್ಣ ರೈ, ಎಂ.ವಿ.ವಸು, ಬಿ.ಉದಯ, ಎನ್.ಚಿನ್ನಸ್ವಾಮಿ ಸೋಸಲೆ, ವಿರೂಪಾಕ್ಷಿ ಪೂಜಾರಹಳ್ಳಿ ಮುಂತಾಧವರು.

ಜನರನ್ನು ಕುರಿತು ಅಧ್ಯಯನ ನಡೆಸುವಾಗ ವಿವಿಧ ಪಂಥಗಳು ಯಾವ ಯಾವ ರೀತಿಯ ಜನರ ಅಧ್ಯಯನ ನಡೆಸಿವೆ ಎಂಬುದನ್ನು ಗಮನಿಸುವುದು ಅನಿವಾರ್ಯ. ವಸಾಹತುಶಾಹಿ ಚರಿತ್ರೆಕಾರರು ಬಿಳಿ ಜನರ ದೃಷ್ಟಿಯಿಂದ ಭಾರತದ ಜನರ ಅಧ್ಯಯನ ನಡೆಸಿದರು. ರಾಷ್ಟ್ರೀಯವಾದಿ ಚರಿತ್ರೆಕಾರರು ಮೇಲ್ವರ್ಣದ, ಮೇಲ್ವರ್ಗದ ಜನರ ದೃಷ್ಟಿಯಿಂದ ಚರಿತ್ರೆ ರಚಿಸಿದರು. ಮಾರ್ಕ್ಸ್‌ವಾದಿ ಚರಿತ್ರೆಕಾರರು ಶೋಷಿತ ವರ್ಗದ ಜನರ ದೃಷ್ಟಿಯಿಂದ ಚರಿತ್ರೆ ನಿರ್ಮಿಸಿದರು. ಸಬಾಲ್ಟರ್ನ್ ಚರಿತ್ರೆಕಾರರು ಸಮಾಜದ ಕೆಳಸ್ತರದ, ಅಲಕ್ಷಿತ ಜನರ ಕುರಿತು ಚರಿತ್ರೆಯನ್ನು ರಚಿಸಿದರು. ಹೀಗೆ ವಿವಿಧ ಕಾಲಘಟ್ಟಗಳಲ್ಲಿ ಜನರ ಚರಿತ್ರೆ ರಚನೆಗೊಂಡಿರುವುದನ್ನು ನೋಡಬಹುದು.

ಹೀಗೆ ವಸಾಹತುಶಾಹಿ ಆಡಳಿತದ ಅಂತಿಮ ವೇಳೆಗೆ ಸಮಾಜವಾದ, ಪ್ರಜಾಪ್ರಭುತ್ವವಾದ ಸಿದ್ಧಾಂತಗಳು ರಾಷ್ಟ್ರೀಯತೆಯೊಂದಿಗೆ ಕಂಡುಬಂದವು. ಕೇವಲ ಬಲಿಷ್ಠ ರಾಜಮನೆತನಗಳೇ ಅಲ್ಲದೇ ಅಲ್ಲಿ ನೆಲೆಸಿದ್ದ ಜನರ ನಡುವಿನ ಧರ್ಮ, ಜಾತಿ, ವರ್ಗ ಹಾಗೂ ಅವುಗಳ ಸಂಘಗಳನ್ನು ಕುರಿತು ಅಧ್ಯಯನಗಳಾದವು. ಜನಸಾಮಾನ್ಯರ ಸಾಮಾಜಿಕ ಸ್ಥಾನಮಾನ, ಆರ್ಥಿಕ ಪರಿಸ್ಥಿತಿ, ಅವರ ಸಂಸ್ಕೃತಿ ಕುರಿತು ವಿಶ್ಲೇಷಿಸಲಾಯಿತು. ಈ ದೃಷ್ಟಿಕೋನದಿಂದ ಚರಿತ್ರೆಯು ವಿವಿಧ ಆಯಾಮಗಳಲ್ಲಿ ಸ್ಥಳೀಯ ಚರಿತ್ರೆ, ಮೌಖಿಕ ಚರಿತ್ರೆ, ರೈತರ ಚರಿತ್ರೆ, ಕಾರ್ಮಿಕರ ಚರಿತ್ರೆ, ದಲಿತರ ಚರಿತ್ರೆ, ಮಹಿಳಾ ಚರಿತ್ರೆ, ತಳಸಮುದಾಯದ ಚರಿತ್ರೆ ಮೊದಲಾದ ಅಧ್ಯಯನಗಳಾದವು. ಇವೆಲ್ಲವೂ ೨೦ ಮತ್ತು ೨೧ನೇ ಶತಮಾನದಲ್ಲಿ ಕಂಡುಬಂದ ಬರವಣಿಗೆ ಯಲ್ಲಿನ ಬದಲಾವಣೆಯೊಂದಿಗೆ ಲೇಖನಶಾಸ್ತ್ರದಲ್ಲಿ ಸೇರಿಕೊಂಡಿವೆ. ಇಂತಹ ಚರಿತ್ರೆ ಅಧ್ಯಯನಕ್ಕೆ ನಾಗರಿಕತೆ, ಆಧುನೀಕರಣ, ಜಾಗತೀಕರಣ ಅಂಶಗಳು ಪ್ರೇರಣೆ ನೀಡಿವೆ ಎಂಬುದು ಮುಖ್ಯ.

ವಸಾಹತೋತ್ತರವಾದ ಚಿಂತನೆಯು ಪ್ರಧಾನವಾಗಿ ವಸಾಹತು ಚರಿತ್ರೆಯ ಲೇಖನದ ಪರಾಮರ್ಶೆ ಆಗಿದೆ. ಚಿಂತನೆ ಹಾಗೂ ಚರಿತ್ರೆಯನ್ನು ಹೇಗೆ ಕಟ್ಟಲಾಗಿದೆ ಎಂಬುದನ್ನು

ತೋರಿಸುವುದೇ ಈ ಚಿಂತನೆ. ರೋನಾಲ್ಡ್ ಇಂಡೆನ್, ನಿಕೋಲಸ್ ಡರ್ಕ್ಸ್, ಶೆಲ್ಡನ್ ಪೊಲಾಕ್, ಡೇವಿಡ್ ಲಡನ್ ಅವರ ವಾದವು ಇದೇ ಆಗಿದೆ. ದಲಿತ, ಮಹಿಳೆ, ಆದಿವಾಸಿ, ಬುಡಕಟ್ಟು ಜನಾಂಗ ಈ ರೀತಿ ವಿವಿಧ ಕೆಳಸ್ತರದ ಅಧ್ಯಯನಕ್ಕೆ ಒತ್ತು ನೀಡಿತು. ಚಿಂತನೆಯ ಮೂಲಕ ಕೃತಿಯ ಸೃಷ್ಟಿ ಮತ್ತು ಓದುವಿಕೆಯು ಪ್ರಮುಖವಾದದ್ದು ಎಂದಿದ್ದಾರೆ.

ಚರಿತ್ರೆಯನ್ನು ಹೊಸದಾಗಿ ನೋಡಿ, ಗ್ರಹಿಸಿ ವಿಶ್ಲೇಷಿಸುವ ಚಿಂತನೆಯನ್ನು ನವ ಚರಿತ್ರೆಕಾರರು ಹುಟ್ಟು ಹಾಕಿದರು. ಇದರ ಪ್ರತಿಪಾದಕರೆಂದರೆ ಸ್ಟಿಫನ್ ಗ್ರೀನ್ ಬ್ಲಾಟ್. ಈಗಾಗಲೇ ಪರಿಚಿತವಿರುವ ಅರ್ಥ, ಪರಿಕರ ವಿಧಿ-ವಿಧಾನಗಳಿಂದ ಹೊರತುಪಡಿಸಿಯೂ ಹೊಸನೋಟದಲ್ಲಿ ಮಾನವನ ಮನೋಚಟುವಟಿಕೆಗಳನ್ನು ನೋಡಲು ಸಾಧ್ಯವಿದೆ ಎಂಬುದು ಈ ವಾದದ ತಿರುಳು. ಇದರಿಂದ ಸಾಹಿತ್ಯ ಮತ್ತು ಚರಿತ್ರೆಯ ಅಂತರ್‌ಶಿಸ್ತೀಯ ನೆಲೆಗಳು ಸಹ ಅಸ್ತಿತ್ವಕ್ಕೆ ಬಂದವು.[೯] ಬರಹಗಾರನ ಗ್ರಹಿಕೆ ಮತ್ತು ವ್ಯಾಖ್ಯಾನ ಮುಖ್ಯ. ಮರು ಓದಿನ ಮೂಲಕ ಮರುವ್ಯಾಖ್ಯಾನಕ್ಕೆ ಒಳಪಡಿಸಬೇಕು.

ಮರುಚಿಂತನೆಯು ಚರಿತ್ರೆಕಾರರಲ್ಲಿ ಹೊಸ ವಿಚಾರಗಳನ್ನು ಹುಟ್ಟುಹಾಕುತ್ತದೆ. ವಿಚಾರಗಳನ್ನು ವಿಶ್ಲೇಷಣಾತ್ಮಕವಾಗಿ ರೂಪಿಸಬೇಕು. ಚರಿತ್ರೆಕಾರರು ಕೃತಿಯಲ್ಲಿ ಏನನ್ನು ನಿರೂಪಿಸಿದ್ದಾರೆ, ಆ ಸನ್ನಿವೇಶ ಮತ್ತು ನಿರೂಪಿಸಬೇಕಾದುದ್ದು ಯಾವುದು ಎಂಬುದನ್ನು ತಿಳಿಯಬೇಕು. ಈ ಕಾರಣದಿಂದಲೇ ಚರಿತ್ರೆಯೆಂದರೆ ಅದೊಂದು ಸ್ವಯಂ ಮೌಲ್ಯಮಾಪನವೇ ಆಗಿದೆ.[೧೦] ಆದರೆ ಸ್ವಯಂ ಮೌಲ್ಯಮಾಪನ ಮಾಡಿಕೊಳ್ಳಲು ಚರಿತ್ರೆಯಲ್ಲಿ ಯಾರು ಸಿದ್ಧರಿದ್ದರು ಎನ್ನುವುದು ಮುಖ್ಯ. ಸಾಂದರ್ಭಿಕವಾಗಿ ಕೆಲವರು ತಾವು ರಚಿಸಿದ ಕೃತಿಗಳನ್ನು ಹಿಂತೆಗೆದು ಕೊಂಡಿರುವುದನ್ನು ನೋಡಬಹುದು. ರೋಮಿಲಾ ಥಾಪರ್ ಅವರು ತಮ್ಮ ಕೃತಿಗಳಲ್ಲಿ ಸ್ವಯಂ ಮೌಲ್ಯಮಾಪನ ಮಾಡಿದ್ದಾರೆ. ಅವರ **ಫ್ರಂ ಲೀನಿಯೇಜ್ ಟು ಸ್ಟೇಟ್** ಕೃತಿಯಲ್ಲಿ ಭಾರತದಲ್ಲಿನ ಸ್ಟೇಟ್ ನಿರ್ಮಾಣದ ಹಂತಗಳನ್ನು ಗುರುತಿಸಿ ಮೌರ್ಯ ರಾಜ್ಯವು ಅದರ ಮುಕ್ತಾಯ ಎಂಬಂತೆ ಚಿತ್ರಿಸಿದ್ದರು. ಅದನ್ನು ಮರುಚಿಂತನೆ ಮಾಡಿ **ಮೌರ್‍ಯಾಸ್ ರಿ ವಿಸಿಟೆಡ್** ಎನ್ನುವ ಕಿರು ಹೊತ್ತಿಗೆಯನ್ನು ಹೊರತಂದರು. ರಾಜ್ಯದ ವಿಭಾಗಗಳನ್ನು ಹೊಸದಾಗಿ ತಿಳಿಸಿದ್ದಾರೆ. ಇಲ್ಲಿ ಹೊಸದಾಗಿ ದೊರೆತ ಆಕರಗಳೊಂದಿಗೆ ಸ್ವಯಂ ಮೌಲ್ಯಮಾಪನ ಮತ್ತು ಮರುಚಿಂತನೆ ನಡೆಸಿರುವುದನ್ನು ಗಮನಿಸಬಹುದು. ಈ ರೀತಿಯಾಗಿ ವಸಾಹತುಶಾಹಿ ಮತ್ತು ಆಧುನಿಕ ಕಾಲಘಟ್ಟದ ಕೃತಿಗಳ ಚಾರಿತ್ರಿಕ ವಿಶ್ಲೇಷಣೆಯಲ್ಲಿ ಚರಿತ್ರೆಯ ಪಂಥಗಳ ಚಿಂತನೆಗಳಿಗನುಗುಣವಾಗಿ ಸೈದ್ಧಾಂತಿಕ ನಿಲುವುಗಳನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗುತ್ತದೆ.

### ೫.೧. ವಸಾಹತುಶಾಹಿ ಕಾಲಘಟ್ಟದ ಚಾರಿತ್ರಿಕ ಕೃತಿಗಳ ವಿಶ್ಲೇಷಣೆ

ವಸಾಹತುಶಾಹಿ ಕಾಲಘಟ್ಟದ ಮೈಸೂರು ಒಡೆಯರ ಚರಿತ್ರೆ ರಚನೆಗೆ ಸಂಬಂಧಿಸಿದಂತೆ ಬ್ರಿಟಿಷ್(ವಿದೇಶಿ) ಮತ್ತು ದೇಶಿ ಚರಿತ್ರೆಕಾರರ ಬರವಣಿಗೆ ಕೆಲಸಗಳನ್ನು ಮೊದಲು ವಿಶ್ಲೇಷಣೆಗೆ ಒಳಪಡಿಸುವುದಾಗಿದೆ. ವಸಾಹತುಶಾಹಿ ಕಾಲಘಟ್ಟದ ಚಾರಿತ್ರಿಕ ಕೃತಿಗಳ ವಿಶ್ಲೇಷಣೆಯಲ್ಲಿ ೧೯೪೭ರವರೆಗೆ ರಚನೆ ಆಗಿರುವ ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ವಸಾಹತುಶಾಹಿ

ಕಾಲಘಟ್ಟದಲ್ಲಿ ಭಾರತೀಯರಿಗೆ ಚಾರಿತ್ರಿಕ ಪ್ರಜ್ಞೆ ಇಲ್ಲ. ಅವರು ಪುರಾಣ ಪ್ರಿಯರು ಎಂದು ಬ್ರಿಟಿಷ್ ಮತ್ತು ಪಾಶ್ಚಾತ್ಯ ಇತಿಹಾಸಕಾರರು ಹೇಳಿದರು. ಇಲ್ಲಿ ಮುಖ್ಯವಾಗಿ ವಸಾಹತುಶಾಹಿ ಆಗಮಿಸಿದ ನಂತರ ಭಾರತವನ್ನು ರಾಜಕೀಯ ವಸಾಹತುವನ್ನಾಗಿ ಸೃಷ್ಟಿಸಿಕೊಳ್ಳಲು ಪ್ರಯತ್ನಿಸಿದಂತೆಯೇ ಅದರ ಮೇಲೆ ಸಾಂಸ್ಕೃತಿಕ ಮತ್ತು ಬೌದ್ಧಿಕ ಯಾಜಮಾನ್ಯತೆಯನ್ನು ಋಜುವಾತು ಪಡಿಸುವ ಪ್ರಯತ್ನವನ್ನು ಐರೋಪ್ಯರು ಪ್ರಯತ್ನಿಸಿದರು. ಇದರ ಪರಿಣಾಮವೇ ಪೌರಸ್ತ್ಯ ಚಿಂತನೆಯ ಮಾದರಿ(ಎಡ್ವರ್ಡ್ ಸೈದ್) ಹುಟ್ಟಿಕೊಂಡಿದ್ದು. ಭಾರತೀಯರಿಗೆ ಮಿಥ್‌ಗಳು ಮತ್ತು ಚರಿತ್ರೆಯ ನಡುವಿನ ವ್ಯತ್ಯಾಸಗಳಿರುವುದಿಲ್ಲ ಎನ್ನುವುದು ಓರಿಯಲಿಂಟಲಿಸ್ಟರ ನಿಲುವು. ಈ ಹಿನ್ನೆಲೆಯಲ್ಲಿ ಭಾಷಾಕಾರ್ಯಗಳು ನಡೆದವು. ಇವರು ಪೌರಸ್ತ್ಯ ಚಿಂತನೆಯಲ್ಲಿ ಪೌರ್ವಾತ್ಯ ರಾಷ್ಟ್ರಗಳ ಧರ್ಮ, ಸಾಹಿತ್ಯ-ಸಂಸ್ಕೃತಿ-ಸಮಾಜಗಳ ಬಗೆಗೆ ಸಂಶೋಧನೆ ನಡೆಸಿದ್ದಾರೆ. ಈ ಹಿನ್ನೆಲೆಯಲ್ಲಿ ಭಾರತವನ್ನು ತನಗೆ ಬೇಕಾದ ರೀತಿಯಲ್ಲಿ ಸಂಶೋಧಿಸಲು ಈ ಮಾರ್ಗವನ್ನು ಬಳಸಿಕೊಳ್ಳಲಾಯಿತು. ಭಾರತದಲ್ಲಿನ ಬ್ರಿಟಿಷ್ ಆಡಳಿತಗಾರರಿಗೆ ಭಾರತ ಕುರಿತು ವಿಶೇಷ ಜ್ಞಾನ ಅಗತ್ಯವಾಗಿತ್ತು. ಆಗ ಈ ಪೌರಸ್ತ್ಯ ವಿದ್ವಾಂಸರ ಸಹಾಯ ಪಡೆದರು. ಭಾರತದಲ್ಲಿ ಗವರ್ನರ್ ಜನರಲ್ ವಾರನ್ ಹೇಸ್ಟಿಂಗ್ಸ್ ಅವರು ತಮ್ಮ ಆಡಳಿತವನ್ನು ರೂಪಿಸಲಿಕ್ಕಾಗಿ ಪೌರಸ್ತ್ಯ ವಿದ್ವಾಂಸರಿಗೆ ವಿಶೇಷ ಮಾನ್ಯತೆಯನ್ನು ನೀಡಿದ್ದರು. ವಿಲಿಯಂ ಜೋನ್ಸ್ ಅವರು ಪೌರಸ್ತ್ಯ ವಿದ್ವತ್ತನ್ನು ಬೆಳೆಸುವ ಸಂಘಟನೆಯೊಂದನ್ನು ಯೋಜಿಸಿ ೧೭೮೪ರಲ್ಲಿ ಜನವರಿ ೧೫ ರಂದು 'ರಾಯಲ್ ಏಶಿಯಾಟಿಕ್ ಸೊಸೈಟಿ'ಯನ್ನು ಸ್ಥಾಪಿಸಿದರು. ಈ ಸಂಸ್ಥೆಯ ಉದ್ದೇಶವೆಂದರೆ ಏಶಿಯಾದ ಪರಂಪರೆ, ಇತಿಹಾಸ, ವಿಜ್ಞಾನ, ಸಾಹಿತ್ಯ, ಕಲೆ ಮುಂತಾದವುಗಳ ಅಧ್ಯಯನ ಮಾಡುವುದಾಗಿತ್ತು. ಹಾಗೆಯೇ ೧೭೮೮ರಲ್ಲಿ ಏಶಿಯಾಟಿಕ್ ರಿಸರ್ಚಸ್ ಎಂಬ ನಿಯತಕಾಲಿಕೆಯನ್ನು ಕೂಡ ಪ್ರಕಟಿಸಿದರು. ಇದರಲ್ಲಿ ಸಂಶೋಧನೆಗಳ ವಿವರಗಳನ್ನು ಪ್ರಕಟಿಸತೊಡಗಿದರು. ಇದು ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರವನ್ನಾಧರಿಸಿ ಭಾರತಶಾಸ್ತ್ರಕ್ಕೆ ಬುನಾದಿಯಾಯಿತು. ಜೋನ್ಸ್ ಭಾರತದ ಸಂಸ್ಕೃತ ಭಾಷೆಯನ್ನು ಕಲಿತು ಸಂಸ್ಕೃತ ಭಾಷೆಯ ಶಾಕುಂತಲ ನಾಟಕ ಹಾಗೂ ಗೀತಗೋವಿಂದ ಕಾವ್ಯವನ್ನು ಇಂಗ್ಲಿಷಿಗೆ ಅನುವಾದಿಸಿದರು.[೧೧] ಈ ನಿಟ್ಟಿನಲ್ಲಿ ಭಾಷೆ ಮತ್ತು ಗ್ರಂಥಗಳ ಅಧ್ಯಯನದ ಪ್ರಯತ್ನಗಳು ೧೯ನೇ ಶತಮಾನದ ಆರಂಭದಲ್ಲಿ ತೀವ್ರತೆಯನ್ನು ಪಡೆದುಕೊಂಡವು. ಅನಂತರ ಹೆನ್ರಿ ಥಾಮಸ್ ಕೋಲ್‌ಬ್ರೂಕ್ ೧೮೨೩ರಲ್ಲಿ 'ರಾಯಲ್ ಏಷಿಯಾಟಿಕ್ ಸೊಸೈಟಿ'ಯನ್ನು ಸ್ಥಾಪಿಸಿದರು. ಮುಂಬಯಿ ಕರ್ನಾಟಕದಲ್ಲಿ ಶಿಕ್ಷಣದ ಶೈಕ್ಷಣಿಕ ಕಾರ್ಯವನ್ನು ಸರ್ಕಾರವೇ ವಹಿಸಿಕೊಂಡರೆ, ಮದ್ರಾಸ್ ಮತ್ತು ಮೈಸೂರು ಪ್ರದೇಶಗಳಲ್ಲಿ ಮಿಷನರಿಗಳು ಆ ಕೆಲಸಕ್ಕೆ ಮುಂದಾದರು. ಈ ಹಿನ್ನೆಲೆಯಲ್ಲಿ ದಕ್ಷಿಣ ಮದರಾಸಿನ ಕಾಲೇಜ್ ಆಫ್ ಪೋರ್ಟ್ ಸೈಂಟ್ ಜಾರ್ಜ್‌ನಲ್ಲಿ ಪ್ರಾರಂಭಿಸಲಾಯಿತು.[೧೨] ಕಲ್ಕತ್ತಾದಲ್ಲಿ ರಾಯಲ್ ಸೊಸೈಟಿ ಆಫ್ ಬೆಂಗಾಲ್ ಇದ್ದರೆ, ಮದರಾಸಿನಲ್ಲಿ ಲಿಟರರಿ ಸೊಸೈಟಿ ಆಫ್ ಮದ್ರಾಸ್ ಪ್ರಾರಂಭವಾಯಿತು. ಕಲ್ಕತ್ತಾ ಶಾಲೆಯು ಹೇಳಿದ 'ಸಂಸ್ಕೃತವೇ ಎಲ್ಲಾ ಭಾರತೀಯ ಭಾಷೆಗಳ ತಾಯಿ' ಎನ್ನುವುದನ್ನು ಮದ್ರಾಸ್ ಕೇಂದ್ರಿತ ವೈಟ್ ಎಲ್ಲಿಸ್ ಮತ್ತು ಅವರ ಭಾರತೀಯ ಸಹೋದ್ಯೋಗಿಗಳು ತಿರಸ್ಕರಿಸಿದರು. ಈ ಸಂಶೋಧಕರು ದ್ರಾವಿಡದ ಭಾಷೆಗಳ ಕುಟುಂಬವನ್ನು

ಆವಿಷ್ಕರಿಸಿದರು. ದ್ರಾವಿಡ ಭಾಷೆಯೇ ಮುಖ್ಯ ಎಂದು ತಿಳಿಸಿದರು. ಅನಂತರದ ಕಾಲಘಟ್ಟದಲ್ಲಿ ಮ್ಯಾಕ್ಸ್‌ಮುಲ್ಲರ್ ಅವರು ಇಂಡೋ ಯೂರೋಪಿಯನ್ ಭಾಷೆಯನ್ನು ಜನಾಂಗಗಳಿಗೆ ಸಮೀಕರಿಸಿ ಈ ಭಾಷೆಗಳ ಮೂಲಪುರುಷರು 'ಆರ್ಯ ಜನಾಂಗ'ವೆಂದು ಪ್ರತಿಪಾದಿಸಿದರು. ಒಟ್ಟಿನಲ್ಲಿ ಇವರು ಆರ್ಯನ್ ಜನಾಂಗವೇ ಶ್ರೇಷ್ಠರು ಎಂದು ಪ್ರತಿಪಾದಿಸಿದರು. ಭಾರತೀಯ ಪ್ರಾಚೀನತೆ, ಅದರ ವಾಸ್ತುಶಿಲ್ಪ, ಕಲೆ, ಸಾಹಿತ್ಯಗಳನ್ನು ಅಧ್ಯಯನ ಮಾಡಲು ಮಾರ್ಗಗಳನ್ನು ಕಂಡುಕೊಂಡರು. ಭಾರತೀಯ ಪುರಾತತ್ವ ಇಲಾಖೆ ಪ್ರಾರಂಭವಾಯಿತು. ಅಲೆಗ್ಸಾಂಡರ್ ಕನ್ನಿಂಗ್ ಹ್ಯಾಂ ಇದರ ನಿರ್ದೇಶಕರಾಗಿ ಅನೇಕ ಪುರಾತನ ಮತ್ತು ಕಲಾತ್ಮಕ ಕಟ್ಟಡಗಳ ಅನ್ವೇಷಣಾಕಾರ್ಯವನ್ನು ಆರಂಭಿಸಿ, ವರದಿ ರೂಪದಲ್ಲಿ ಪ್ರಕಟಿಸಿದರು. ಅಲ್ಲದೇ ಭಾಷೆಗಳ ಬಗೆಗೆ ನಡೆದ ದಕ್ಷಿಣ ಕೇಂದ್ರಿತವಾದ ಸಂಶೋಧನಾತ್ಮಕ ಪ್ರಯತ್ನಗಳೇ ಮೈಸೂರು ಸಂಸ್ಥಾನದ ಚರಿತ್ರೆಯನ್ನು ಬರೆಯುವುದಕ್ಕೂ ಪ್ರೇರಣೆಯಾಗಿತ್ತು ಎಂಬುದು ಗಮನಿಸಬೇಕಾದ ಮುಖ್ಯ ಸಂಗತಿ. ಈ ಭಾರತೀಯ ಚರಿತ್ರೆಯ ಅಧ್ಯಯನಕಾರರು ಕ್ರೈಸ್ತಧರ್ಮ ಪ್ರಚಾರದ ಸಿದ್ಧಾಂತದಿಂದ ಪ್ರೇರಿತವಾಗಿದ್ದರು ಎಂಬುದನ್ನು ಮರೆಯುವಂತಿಲ್ಲ. ಇವರನ್ನು ನಾವು ಚರಿತ್ರೆಕಾರರು ಎಂದು ಕರೆಯಲು ಬರುವುದಿಲ್ಲವಾದರೂ ಇವರ ಸಂಶೋಧನೆಗಳು ಮುಂದಿನ ಚರಿತ್ರೆಯ ಸಂಶೋಧನೆಗೆ ಬೌದ್ಧಿಕ ಹಿನ್ನೆಲೆಯನ್ನು ಮತ್ತು ಪ್ರೇರಣೆಯನ್ನು ಒದಗಿಸಿದವು. ಈ ಹಿನ್ನೆಲೆಯಿಂದ ಪ್ರೇರಣೆಗೊಂಡ ಅನೇಕರು ಕನ್ನಡ ಭಾಷೆ ಮತ್ತು ಸಾಹಿತ್ಯ ಕುರಿತು ಸಂಶೋಧನೆಯನ್ನು ಪ್ರಾರಂಭಿಸಿದರು.[೧೩] ಈ ಹಂತದಲ್ಲಿ ಬರವಣಿಗೆ ಕಾರ್ಯಗಳು ಮುಂದುವರಿದವು.

ಕನ್ನಡ ಭಾಷೆ ಮತ್ತು ಸಾಹಿತ್ಯದ ಕುರಿತಾದ ಅಧ್ಯಯನಗಳು ೧೭ನೇ ಶತಮಾನದ ಮಧ್ಯಭಾಗದಿಂದಲೇ ಪ್ರಾರಂಭಗೊಂಡವು. ಲಿಯೋನಾರ್ದೊ ಸಿನ್ನಾಮಿ(೧೬೦೯–೧೬೭೬)ಯು ಈ ಬಗೆಯ ಕಾರ್ಯಗಳಿಗೆ ಅಸ್ತಿಭಾರವನ್ನು ಹಾಕಿದನು. ಶ್ರೀರಂಗಪಟ್ಟಣ, ಮೈಸೂರುಗಳಲ್ಲಿ ಇದ್ದುಕೊಂಡು ಈತ ಮತಪ್ರಚಾರವನ್ನು ಕೈಗೊಂಡನು. ಅವನಿಗೆ ಗೊತ್ತಿದ್ದ ಭಾಷೆಯಲ್ಲಿ ಕ್ರೈಸ್ತ ಧರ್ಮದ ರಹಸ್ಯತತ್ವಗಳನ್ನು ಕುರಿತ ಸುದೀರ್ಘ ಪ್ರಶ್ನೋತ್ತರ, ಮೈಸೂರು ಜನರ ಜಾತಿಗಳು, ಮೂಢನಂಬಿಕೆಗಳು, ಇವುಗಳ ಖಂಡನೆ ಈ ಕೃತಿಗಳ ರಚನೆಯ ಕುರಿತು ನಿಶ್ಚಿತ ಪುರಾವೆ ದೊರೆತರೂ, ಅವು ಎಲ್ಲಿಯೂ ಲಭ್ಯವಾಗಿಲ್ಲ.[೧೪] ಅವನಿಗೆ ಮತಪ್ರಚಾರದ ಒಲವೇ ಪ್ರಥಮ ಕಾಳಜಿಯಾದರೂ, ಅದರ ವಿಸ್ತರಣೆಯ ಒತ್ತಡದಿಂದಲೇ ಕನ್ನಡ ಭಾಷೆ ಮತ್ತು ಕರ್ನಾಟಕ ಸಂಸ್ಕೃತಿ ಬಗೆಗಿನ ಅಧ್ಯಯನಗಳು ರೂಪುಗೊಳ್ಳತೊಡಗಿದವು.

ಪ್ರಥಮ ಹಂತದಲ್ಲಿ ಕ್ರೈಸ್ತ ಮಿಷನರಿಗಳು ಮಾಡಿರುವ ಕೆಲಸವನ್ನು ಚರಿತ್ರೆಲೇಖನ ಪರಂಪರೆಯ ಶಿಸ್ತಿನ ನೆಲೆಯಲ್ಲಿ ಸಂಶೋಧನೆ ಎಂದು ಕರೆಯಲಾಗುವುದಿಲ್ಲ. ಈಗಾಗಲೇ ಹೇಳಿರುವಂತೆ ಧರ್ಮಪ್ರಚಾರವೇ ಅವರ ಆದ್ಯತೆಯಾಗಿತ್ತು. ಧರ್ಮಪ್ರಚಾರಕ್ಕೆ ಅನುಕೂಲವಾಗುವಂತೆ ಕನ್ನಡ ಭಾಷೆಯ ಅಧ್ಯಯನವನ್ನು ಪ್ರಾರಂಭಿಸಿದರು. ಹಂತ ಹಂತವಾಗಿ ಸಾಹಿತ್ಯ ಚರಿತ್ರೆಯನ್ನು ಕುರಿತ ಅಧ್ಯಯನವನ್ನು ಕೈಗೊಂಡರು.[೧೫] ಭಾರತಕ್ಕೆ ಯುರೋಪಿಯನ್ನರ ಆಗಮನದ ನಂತರ ಕ್ರೈಸ್ತ ಮಿಷನರಿಗಳು ಪ್ರವೇಶ ಪಡೆದು ತಮ್ಮ ಕಾರ್ಯ ಚಟುವಟಿಕೆಗಳನ್ನು ಪ್ರಾರಂಭಿಸಿದರು. ಮೈಸೂರು ಸಂಸ್ಥಾನದಲ್ಲಿ ಲಿಯೋನಾರ್ಡೋ ಸಿನ್ನಾಮಿಯು ಗೋವಾದಲ್ಲಿದ್ದು

ಕೊಂಡು ಮೈಸೂರು ಮಿಷನ್ ಸ್ಥಾಪಿಸಿ, ಮೈಸೂರಿಗೆ ಆಗಮಿಸಿ ಮೈಸೂರು ಒಡೆಯರ ಜೊತೆ ಸ್ನೇಹ ಸಂಪಾದಿಸಿ, ಕಂಠೀರವ ನರಸರಾಜ ಒಡೆಯರು ತಾಮ್ರ ಪಟದಲ್ಲಿ ಅನುಮತಿ ಪತ್ರ ನೀಡಿ ಸ್ವತಃ ಒಡೆಯರೇ ಅದಕ್ಕೆ ಮುದ್ರೆ ಹಾಕಿಸಿಕೊಟ್ಟರು. ಅವರಿಂದ ಒಂದು ಮನೆಯನ್ನು ಪಡೆದು ಸುವಾರ್ತೆಗಳನ್ನು ಪ್ರಚಾರ ಮಾಡಿ ಸಾಕಷ್ಟು ಜನರನ್ನು ಕ್ರೈಸ್ತಧರ್ಮಕ್ಕೆ ಮತಾಂತರಿಸಿದ್ದ ನೆಂದು ತನ್ನ ವರದಿಯಲ್ಲಿ ತಿಳಿಸಿದ್ದಾನೆ.

ಇವನು ಕ್ರೈಸ್ತಮತದ ರಹಸ್ಯತತ್ವಗಳು, ಮೈಸೂರು ಜನರ ಜಾತಿಗಳು, ಮೂಢನಂಬಿಕೆಗಳು, ಇವುಗಳ ಖಂಡನೆ ಮುಂತಾದ ವಿಚಾರಗಳನ್ನು ತಿಳಿಸಿರುವುದಕ್ಕೆ ಪುರಾವೆಗಳಿವೆ. ಆದರೆ ಇವನ ಕೃತಿಗಳು ಲಭ್ಯವಾಗಿಲ್ಲ. ಮುಂದುವರಿದಂತೆ ಮಂಗಳೂರು, ಬಳ್ಳಾರಿ, ಧಾರವಾಡ, ಮಡಿಕೇರಿ ಮತ್ತು ಬೆಂಗಳೂರು ಕೇಂದ್ರಗಳಿಂದ ಈ ಬಗೆಯ ಅಧ್ಯಯನಗಳು ಪ್ರಾರಂಭವಾದವು.[೧೬] ಬಾಸೆಲ್ ಮಿಷನ್ ಜೊತೆ ಗುರುತಿಸಿಕೊಂಡ ಈ ವಿದ್ವಾಂಸರು ಮಾಡಿರುವ ಈ ಅಧ್ಯಯನಗಳು ಆರಂಭದಲ್ಲಿ ಕ್ರೈಸ್ತಧರ್ಮ ಪ್ರಚಾರಕ್ಕೆ ಸೀಮಿತವಾಗಿತ್ತು ನಿಜ, ಆದರೆ ಸ್ಥಳೀಯ ಜನರ ಭಾಷೆಯನ್ನು ಕಲಿಯುವುದು, ಆ ಭಾಷೆಯ ವ್ಯಾಕರಣ ಮತ್ತು ನಿಘಂಟು ತಯಾರಿಸುವುದು ಅವರ ಯೋಜನೆಯಾಗಿತ್ತು.[೧೭] ಬಾಸೆಲ್ ಮಿಷನ್‌ನ ಪಾದ್ರಿಗಳು ಕನ್ನಡ ಕೆಲಸಕ್ಕೆ ವಿಶೇಷವಾದ ಕೊಡುಗೆಗಳನ್ನು ನೀಡಿದ್ದಾರೆ. ಹರ್ಮನ್ ಮೊಗ್ಲಿಂಗ್ ಅವರು ಕನ್ನಡ ಸಾಹಿತ್ಯ ಕೃತಿಗಳನ್ನು ಮುದ್ರಣದ ಹಂತ ತಲುಪಿಸಿದರು. ವೆಸ್ಲಿಯನ್ ಮೆಥೋಡಿಸ್ಟ್ ಮಿಷನ್ ೧೮೨೧ರಲ್ಲಿ ಮೈಸೂರು ಸಂಸ್ಥಾನದಲ್ಲಿ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸಿತು. ೧೮೩೦ರಲ್ಲಿ ಮೈಸೂರಿಗೆ ಥಾಮಸ್ ಹಡ್ಸನ್ ಮೈಸೂರು ಸಂಸ್ಥಾನದಲ್ಲಿ ಪ್ರವಾಸ ಕೈಗೊಂಡು ತುಮಕೂರು, ಬೆಂಗಳೂರು, ಕುಣಿಗಲ್, ಚಿತ್ರದುರ್ಗ, ಶಿವಮೊಗ್ಗ ಮುಂತಾದ ಕಡೆಗಳಲ್ಲಿ ಮಿಷನರಿ ಕೇಂದ್ರಗಳನ್ನು ತೆರೆದು ಮತಾಂತರ ಪ್ರಕ್ರಿಯೆ ಆರಂಭಿಸಿದರು. ಕಿಟೆಲ್ ಅವರು ಲಿಪಿ, ನಿಘಂಟು, ಹಸ್ತಪ್ರತಿ, ಶಾಸನ, ಹಳೆಗನ್ನಡ, ನಡುಗನ್ನಡ ಮತ್ತು ಹೊಸಗನ್ನಡ ಕೃತಿಗಳನ್ನು ಪ್ರಕಟಗೊಳಿಸಿದರು. ಒಟ್ಟಾರೆಯಾಗಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಾಕಷ್ಟು ಅಭಿವೃದ್ಧಿಯಾಯಿತು. ಫ್ಲೀಟ್ ಪ್ರಸಿದ್ಧ ಪುರಾತತ್ವಶಾಸ್ತ್ರಜ್ಞನಾಗಿ ಗುರುತಿಸಿಕೊಂಡಿದ್ದಾನೆ. ನಂತರ ಫ್ಲೀಟ್ ಅವರು ಶಾಸನಗಳ ಪಠ್ಯವನ್ನು ಎಪಿಗ್ರಾಫಿಯಾ ಇಂಡಿಕಾದಲ್ಲಿ ಪ್ರಕಟಿಸಿದ್ದಾರೆ. ಪ್ರಾಚೀನ ಭಾರತದ ಭಾಷೆ, ಲಿಪಿ, ಧರ್ಮ, ಆಡಳಿತ ಮೊದಲಾದವು ಗಳನ್ನು ತಿಳಿಯಲು ಶಾಸನಗಳು ಸಹಾಯಕ ಎಂದಿದ್ದಾರೆ. ಫ್ಲೀಟ್ ಶಾಸನಗಳ ಜೊತೆಗೆ ಜನಪದ ಹಾಡು, ಲಾವಣಿಗಳನ್ನು ಕ್ರೋಢೀಕರಿಸಿದರು. ಕಿಟೆಲ್ ಅವರು ಕನ್ನಡಕ್ಕೆ ಚರಿತ್ರೆಯನ್ನು ಕಟ್ಟುವ ಮೂಲಕ ಕನ್ನಡದ ವರ್ತಮಾನವನ್ನು ತೋರಿಸಿಕೊಟ್ಟರು. ಗತವನ್ನು ಪುನಾರೂಪಿಸುವ ಪ್ರಯತ್ನದ ಹಿಂದೆ ವರ್ತಮಾನವನ್ನೇ ತೋರಿಸುವ ಉದ್ದೇಶ ಕಿಟೆಲ್ ಅವರ ಬರಹದ ಹಿಂದೆ ಇತ್ತು ಎಂಬುದನ್ನು ತಿಳಿಯಬಹುದು. ಫ್ಲೀಟ್ ಅವರು ಮಾಡಿದ ಕಾರ್ಯದಿಂದ ಕರ್ನಾಟಕ ಇತಿಹಾಸದ ರೂಪು ರೇಷೆಯನ್ನು ನಿಖರವಾಗಿ ನೀಡುವ ಮೊದಲ ಯತ್ನ ಇದಾಗಿತ್ತೆಂಬುದು ತಿಳಿಯುತ್ತದೆ. ಮೈಸೂರು ಒಡೆಯರ ಚರಿತ್ರೆಲೇಖನ ಪರಂಪರೆಯ ನಿರ್ಮಿತಿ ದೃಷ್ಟಿಯಿಂದ ಇವರ ಕೃತಿಗಳು ಸಂಬಂಧಿಸಿಲ್ಲವಾದ್ದರಿಂದ ಬ್ರಿಟಿಷ್ ಮತ್ತು ದೇಶಿ ಅಧಿಕಾರಿಗಳ ಕೆಲಸವನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ವಸಾಹತುಶಾಹಿ ಕಾಲಘಟ್ಟದಲ್ಲಿನ ಚಾರಿತ್ರಿಕ ಕೃತಿಗಳನ್ನು ಬ್ರಿಟಿಷ್ ಆಡಳಿತಗಾರರು, ಇಂಗ್ಲಿಷ್ ಮತ್ತು ವಿದೇಶಿ ಚರಿತ್ರೆಕಾರರಾಗಿ ಗುರುತಿಸಿಕೊಂಡವರು ರಚಿಸಿದ್ದಾರೆ. ಹಾಗೆಯೇ ಭಾರತೀಯರು, ಮೈಸೂರು ಒಡೆಯರ ಸರ್ಕಾರದ ಅಧಿಕಾರಿಗಳು ಮತ್ತು ದೇಶಿ ಚರಿತ್ರೆಕಾರರಾಗಿ ಗುರುತಿಸಿಕೊಂಡು ತಮ್ಮ ಕೃತಿಗಳನ್ನು ರಚಿಸಿದ್ದಾರೆ. ವಿದೇಶಿ ಮತ್ತು ಇಂಗ್ಲಿಷ್ ಬರಹಗಾರರಾಗಿ ಅವರ ಚಿಂತನೆಯ ಮೂಲ ಬೇರುಗಳಿರುವುದು ವಸಾಹತುಶಾಹಿಯಲ್ಲಿ ಮತ್ತು ಸಹಜವಾಗಿ ಅವರ ಒಳಿತಿನಲ್ಲಿ. ಭಾರತೀಯರು, ಒಡೆಯರ ಸರ್ಕಾರದ ಉಪಕೃತರು ಮತ್ತು ದೇಶಿ ಬರಹಗಾರರು ಒಡೆಯರ ಹಿತಾಸಕ್ತಿಯಲ್ಲಿ ತಮ್ಮ ಹಿತಾಸಕ್ತಿಯನ್ನು ಗುರುತಿಸಿಕೊಂಡು ಕೃತಿಗಳನ್ನು ರಚಿಸಿದ್ದಾರೆ. ಅಂದರೆ ಇಲ್ಲಿ ವಿದೇಶಿ ಮತ್ತು ದೇಶಿ ಚರಿತ್ರೆಕಾರರಾಗಿ ತಮ್ಮ ಕೃತಿಗಳ ಮೂಲಕ ಒಡೆಯರ ಚರಿತ್ರೆಯನ್ನು ಯಾವ ರೀತಿ ಬರೆದಿದ್ದಾರೆ ಎಂಬುದನ್ನು ವಿಶ್ಲೇಷಿಸಬಹುದು.

ಈ ಬರಹಗಾರರ ಸಿದ್ಧಾಂತಗಳ ಕಡೆ ನಮ್ಮ ಗಮನವನ್ನು ಹರಿಸಿದಾಗ ಎರಡು ಪಂಥಗಳನ್ನು ಚರ್ಚೆಗೆ ಪರಿಗಣಿಸಬಹುದಾಗಿದೆ. ಅವುಗಳೆಂದರೆ ವಸಾಹತುಶಾಹಿ ಪಂಥ ಮತ್ತು ರಾಷ್ಟ್ರೀಯವಾದಿ ಪಂಥ. ವಸಾಹತುಶಾಹಿ ಪಂಥದ ಚರಿತ್ರೆಕಾರರು ಬ್ರಿಟಿಷರ 'ಒಡೆದು ಆಳುವ ನೀತಿ'ಗೆ ಅನುಗುಣವಾಗಿ ಭಾರತೀಯರಲ್ಲಿ ಕೋಮುಭಾವನೆಗಳು ಮೂಡುವಂತೆ ಚರಿತ್ರೆ ರಚಿಸಿದರು. ಒಟ್ಟಿನಲ್ಲಿ ಮಿಲಿಟರಿ ಶಕ್ತಿಯನ್ನು ಬಲಗೊಳಿಸಿ, ಸುಭದ್ರ ನೆಲೆಯನ್ನು ಕಂಡುಕೊಳ್ಳುವಿಕೆ, ಆರ್ಥಿಕ ಸಂಪನ್ಮೂಲಗಳ ಮೇಲೆ ಏಕಸ್ವಾಮ್ಯ ಹೊಂದುವುದು ಮತ್ತು ಸ್ಥಳೀಯ ಭಾಷಾ ನೆಲೆಯಲ್ಲಿ ಸಂಸ್ಕೃತಿಯನ್ನು ಹರಡುವುದರ ಮೂಲಕ ಚರಿತ್ರೆ ಕಟ್ಟುವಿಕೆಯ ಕೆಲಸ ಮಾಡಿದರು. ವಸಾಹತುಶಾಹಿ ಪಂಥದ ವಿಚಾರಗಳನ್ನು ರಾಷ್ಟ್ರೀಯವಾದಿ ಪಂಥ ವಿರೋಧಿಸಿದರೂ ಕೆಲವು ಅಂಶಗಳನ್ನು ತನ್ನ ಪಂಥದಲ್ಲಿ ಸೇರಿಸಿಕೊಳ್ಳಲಾಯಿತು. ರಾಷ್ಟ್ರೀಯವಾದಿ ಪಂಥದ ಚರಿತ್ರೆಕಾರರು ಅರಸುಕೇಂದ್ರಿತ ಮತ್ತು ಧರ್ಮಕೇಂದ್ರಿತ ಚಿಂತನೆಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ಚರಿತ್ರೆ ಬರವಣಿಗೆ ಮೂಡಿಸಿದರು.

ವಸಾಹತುಶಾಹಿ ಕಾಲಘಟ್ಟದಲ್ಲಿ ಸಾಮ್ರಾಜ್ಯಶಾಹಿ ಪ್ರಬಲವಾಗಿ ಬೇರೂರಲು ಕಾರ್ಯತಂತ್ರ ರೂಪಿಸುತ್ತಿತ್ತು. ಸಾಮ್ರಾಜ್ಯಶಾಹಿ ನೆಲೆಯಲ್ಲಿ ಪ್ರದೇಶಗಳ ಮಾಹಿತಿ ಬೇಕಾಗಿದ್ದರಿಂದ ವೀಕ್ಷಣೆ ಕಾರ್ಯವನ್ನು ಪ್ರಾರಂಭಿಸಿದರು. ಇಂಥ ಸನ್ನಿವೇಶದಲ್ಲಿ ಮೈಸೂರು ಒಡೆಯರ ಚರಿತ್ರೆಯ ಆರಂಭಿಕ ಗೆರೆಗಳು ಮೂಡಿದವು. ಮೊದಲು ಕಾಲಿನ್ ಮೆಕೆಂಝಿ ಮತ್ತು ಬುಕಾನನ್ ಸರ್ವೆ ಕಾರ್ಯಗಳನ್ನು ಕೈಗೊಂಡು ಜನಮುಖಿ ಅಧ್ಯಯನಗಳ ಮೂಲಕ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿದರು. ಅಲ್ಲದೇ ಕ್ಷೇತ್ರಕಾರ್ಯದ ಮೂಲಕ ಜನರೊಂದಿಗೆ ನೇರವಾಗಿ ವಿಷಯವನ್ನು ಸಂಗ್ರಹಿಸಿದರು.

ವಸಾಹತುಶಾಹಿಯು ರಾಜಕೀಯ ಮತ್ತು ಆರ್ಥಿಕವಾಗಿ ಸಂಪೂರ್ಣ ನಿಯಂತ್ರಣವನ್ನು ಸಾಧಿಸುವ ಪ್ರಕ್ರಿಯೆಯಲ್ಲಿರುವಾಗಲೇ ಕರ್ನಾಟಕ ಚರಿತ್ರೆ ಮತ್ತು ಕನ್ನಡ ಸಾಹಿತ್ಯದಲ್ಲಿ ಖ್ಯಾತಿ ಪಡೆದಿರುವ 'ಕಾಲಿನ್ ಮೆಕೆಂಝಿ' ದಕ್ಷಿಣ ಭಾರತದಲ್ಲಿ ಕಾಣಿಸಿಕೊಳ್ಳುತ್ತಾನೆ. ಈತ ಇಂಜಿನಿಯರ್

ಪದವೀಧರನಾಗಿದ್ದು, ೧೭೮೩ರಲ್ಲಿ ಪ್ರದೇಶ ವೀಕ್ಷಣೆಯ ಅಧಿಕಾರಿಯಾಗಿ ಮದ್ರಾಸ್ ಪ್ರಾಂತ್ಯದಲ್ಲಿ ಸೇರಿಕೊಳ್ಳುತ್ತಾನೆ. ಕೊನೆಯಲ್ಲಿ ಭಾರತದ ಸರ್ವೇಯರ್ ಜನರಲ್ ಆಗಿ ನಿವೃತ್ತನಾಗುತ್ತಾನೆ. ಬ್ರಿಟಿಷರಿಗೆ ಯುದ್ಧತಂತ್ರ ರೂಪಿಸಲು ಇಲ್ಲಿನ ಪ್ರದೇಶಗಳ ನಕಾಶೆಗಳು ಬೇಕಾಗಿದ್ದವು. ಈ ಕಾರ್ಯಕ್ಕೆ ಮೆಕೆಂಝಿಯನ್ನು ನೇಮಿಸುತ್ತಾರೆ. ಬ್ರಿಟಿಷ್ ಸೈನ್ಯದೊಂದಿಗೆ ಶ್ರೀರಂಗಪಟ್ಟಣಕ್ಕೆ ಬಂದು ಅಲ್ಲಿನ ಪ್ರದೇಶಗಳು ಮತ್ತು ಟಿಪ್ಪು ವಿರುದ್ಧ ಜನಾಭಿಪ್ರಾಯವನ್ನು ಸಂಗ್ರಹಿಸಿದನು. ಬ್ರಿಟಿಷರು ಟಿಪ್ಪುವನ್ನು ಸೋಲಿಸಿ ಅವನಿಂದ ಮೈಸೂರು ಪ್ರದೇಶವನ್ನು ಪಡೆದುಕೊಂಡ ವರ್ಷವೇ ಈತನನ್ನು ಇಲ್ಲಿಯ ಸರ್ವೇಯರ್ ಆಗಿ ನೇಮಕ ಮಾಡಿದರು.[೧೮] ೧೮೦೭ರ ವೇಳೆಗೆ ದಕ್ಷಿಣ ಭಾರತದಲ್ಲಿ ಸುಮಾರು ೪೦ ಸಾವಿರ ಮೈಲಿ ಸುತ್ತಿದನು. ಆತನು ತನ್ನ ಸ್ವಂತ ಹಣ ಸುಮಾರು ೧೫೦೦೦ ಪೌಂಡ್ ಖರ್ಚು ಮಾಡಿ ಸಂಗ್ರಹಿಸಿದ ವಿವರಗಳು ಹೀಗಿವೆ. ೧,೫೬೮ ಹಸ್ತಪ್ರತಿಗಳು, ೨,೦೭೦ ಕೈಫಿಯತ್ತುಗಳು, ೮,೦೭೦ ಶಾಸನ ನಕಲು, ೭೯ ನಕ್ಷೆ, ೨,೬೩೦ ಚಿತ್ರ, ೬,೨೧೮ ನಾಣ್ಯಗಳು, ೧೦೬ ಪ್ರಾಚೀನ ವಿಗ್ರಹಗಳು ಮೊದಲಾದವುಗಳನ್ನು ಕಲೆ ಹಾಕಿದನು.[೧೯] ಹೀಗೆ ವಸಾಹತು ಆಳ್ವಿಕೆಗೆ ಅಗತ್ಯವಾದ ಮಾಹಿತಿಗಳನ್ನು ಸಂಗ್ರಹಿಸಿದನು.

ದಕ್ಷಿಣ ಭಾರತದಲ್ಲಿ ಸುಮಾರು ೪೦ ಸಾವಿರ ಮೈಲು ಪ್ರದೇಶವನ್ನು ಸುತ್ತಿ, ಭೌಗೋಳಿಕ ಸ್ಥಿತಿಗತಿಯ ಬಗ್ಗೆ ಕಂಪನಿಗೆ ಬಹಳಷ್ಟು ಮಾಹಿತಿ ಒದಗಿಸಿದನು ಮೆಕೆಂಝಿ. ಇಡೀ ಭಾರತೀಯ ಪ್ರಾಂತ್ಯಗಳ ನಕಾಶೆಗಳನ್ನೂ ಕಂಪನಿಗೆ ಸಿದ್ಧಗೊಳಿಸಿಕೊಟ್ಟವನೇ ಮೆಕೆಂಝಿ. ಮೈಸೂರಿನ ಬಯಲುಪ್ರದೇಶ, ಗುಡ್ಡಗಾಡು, ಅರಣ್ಯ, ನದಿ, ಹಳ್ಳ, ಬೆಳೆ, ಕೈಗಾರಿಕೆ, ಉತ್ಪಾದನೆ, ವ್ಯಾಪಾರ-ವಾಣಿಜ್ಯ ಇತ್ಯಾದಿಗಳ ವಿವರಗಳನ್ನು ಸಂಗ್ರಹಿಸಿದನು. ಅಲ್ಲಿಯ ಭೂಸ್ವರೂಪ, ಬೆಟ್ಟ-ಗುಡ್ಡ, ಹಳ್ಳ, ನದಿಗಳ ಹೆಸರುಗಳನ್ನು, ಅವುಗಳ ವಿಷಯವಾಗಿ ಜನತೆಗೆ ಇದ್ದ ನಂಬಿಕೆ, ಹೇಳಿಕೆಗಳಲ್ಲಿ ಅವನು ತುಂಬಾ ಎಚ್ಚರಿಕೆಯನ್ನು ವಹಿಸಿದ್ದಾನೆ. ಈ ಕೆಲಸದಲ್ಲಿ ಸ್ಥಳೀಯ ಪಂಡಿತರಾದ ಕಾವಲಿ ಬೊರ್ರಯ್ಯ, ಈತನ ತಮ್ಮ ಲಕ್ಷ್ಮಯ್ಯ ಮತ್ತು ಪುಲಿಗುಡ್ಡ ಮಲ್ಲಯ್ಯ ಮೊದಲಾದ ಸ್ಥಳೀಯ ಪಂಡಿತರ ನೆರವನ್ನು ಪಡೆದನು. ಹೀಗೆ ಈ ಕೆಲಸದಲ್ಲಿ ಸ್ಥಳೀಯ ಪಂಡಿತರನ್ನು ಬಳಸಿಕೊಂಡ ಇವನು 'ಸ್ಥಳೀಯ ಪಂಡಿತರ ಕಛೇರಿ'ಯನ್ನೇ ಸ್ಥಾಪಿಸಿದನು. ಕಾವಲಿ ಬೊರ್ರಯ್ಯನು ಮೆಕೆಂಝಿಯೊಂದಿಗೆ ಭೂಪಟಗಳನ್ನು ರಚಿಸುತ್ತಾ ಅದರೊಂದಿಗೆ ದಕ್ಷಿಣ ಭಾರತದ ಚರಿತ್ರೆಗೆ ಸಂಬಂಧಿಸಿದ ಸಾಕಷ್ಟು ಮಾಹಿತಿಗಳನ್ನೂ ಸಂಗ್ರಹಿಸಿದನು. ಈತನು ಕೈಫಿಯತ್ತುಗಳನ್ನು ಸಂಗ್ರಹಿಸಿದನಲ್ಲದೆ ಕೆಲವನ್ನು ಸ್ಥಳೀಯರು ನೀಡಿದ ಮಾಹಿತಿಯನ್ನಾಧರಿಸಿ ತಾನೇ ರಚಿಸಿದ್ದಾನೆ. ಕೆಲವು ಕೈಫಿಯತ್ತುಗಳನ್ನು ತೆಲುಗಿನಿಂದ ಇಂಗ್ಲಿಷ್‌ಗೆ, ಮರಾಠಿಯಿಂದ ಕನ್ನಡಕ್ಕೆ, ಕನ್ನಡದಿಂದ ಇಂಗ್ಲಿಷ್‌ಗೆ ಅನುವಾದಿಸಿದ್ದಾನೆ. ಹೀಗೆ ಮೆಕೆಂಝಿಯು ಸಂಗ್ರಹಿಸಿದ ಈ ಎಲ್ಲಾ ವಿವರಗಳಲ್ಲಿ ಬೊರ್ರಯ್ಯನ ಪಾತ್ರ ಶ್ಲಾಘನೀಯ.

ಮೆಕೆಂಝಿಗೂ ಕನ್ನಡ ಸಾಹಿತ್ಯಕ್ಕೂ ಮರೆಯಲಾಗದ ಒಂದು ನಂಟು ಇದೆ. ಅಂದರೆ ದೇವಚಂದ್ರನ ರಾಜಾವಳೀ ಕಥೆಯ ರಚನೆಗೆ ಅವನೇ ಸಹಾಯಕನಾಗಿದ್ದನು. ಹೀಗೆ ಕನ್ನಡ ಸಾಹಿತ್ಯ ಕೃತಿಯಲ್ಲಿ ಮೊಟ್ಟ ಮೊದಲಿಗೆ ಕಾಣಿಸಿಕೊಂಡ ಯುರೋಪಿಯನ್ ವ್ಯಕ್ತಿಯೆಂದರೆ ಮೆಕೆಂಝಿ ಇರಬೇಕು. ಮೈಸೂರು ಒಡೆಯರಿಗೆ ಸಂಬಂಧಿಸಿದಂತೆ ಅನೇಕ ಕೈಫಿಯತ್ತುಗಳನ್ನು

ನೋಡಬಹುದು. ಒಡೆಯರು ಎಂಬ ಹೆಸರು ಬರಲು ಇರುವ ಕೈಫಿಯತ್ತು, ಶ್ರೀರಂಗಮ್ಮಳ ಶಾಪ, ಕಂಠೀರವ ನರಸರಾಜ ವಡೇರು, ಚಿಕ್ಕದೇವರಾಜ ಒಡೆಯರು, ಹೈದರಾಲಿ ಮತ್ತು ಟಿಪ್ಪು ಮೊದಲಾದವರ ಕೈಫಿಯತ್ತುಗಳನ್ನು ತಿಳಿಯಬಹುದು. ಮೆಕೆಂಝಿ ಸಂಗ್ರಹಿಸಿದ ದಕ್ಷಿಣ ಭಾರತದ ದಾಖಲೆಗಳನ್ನು ಇಂಗ್ಲಿಷ್ ಭಾಷೆಯ 'Mackenzine collection part II General' ಎಂಬ ಕೆಟಲಾಗ್‌ನಲ್ಲಿ ಸೇರ್ಪಡೆಯಾಗಿದೆ.[೨೦] ಇದರಲ್ಲಿ ದಕ್ಷಿಣ ಭಾರತದ ಹಸ್ತಪ್ರತಿಗಳು, ಕೈಫಿಯತ್ತು, ಶಾಸನಗಳು ಮುಂತಾದ ಮಾಹಿತಿಗಳನ್ನು ನೋಡಬಹುದು.

ಮೆಕೆಂಝಿ ಮೈಸೂರಿನ ಆಡಳಿತದ ವಿವರಗಳನ್ನು ಕ್ರೋಡೀಕರಿಸಿದನು. ಬ್ರಿಟಿಷರು ಟಿಪ್ಪುವನ್ನು ಸೋಲಿಸಿ ಮೈಸೂರು ಸಂಸ್ಥಾನವನ್ನು ವಶಪಡಿಸಿಕೊಂಡ ನಂತರ ಲಾರ್ಡ್ ವೆಲ್ಲೆಸ್ಲಿಯು ಸ್ವಾಭಾವಿಕ ಲಕ್ಷಣಗಳ ನಕ್ಷೆಯನ್ನು ತಯಾರಿಸಲು ಮೆಕೆಂಝಿಯನ್ನು ನೇಮಿಸಿದನು. ಪ್ರಾಕೃತಿಕ ಸಂಪತ್ತಿನ ಅಧ್ಯಯನಕ್ಕೆ ಬೆಂಜಮಿನ್ ಹೈನೆ ಮತ್ತು ಕೃಷಿಯ ಅಧ್ಯಯನಕ್ಕೆ ಬುಕಾನನ್‌ನನ್ನು ನೇಮಿಸಿದನು. ಮೊದಲು ಕೆನರಾ, ಮೈಸೂರು, ಕೂರ್ಗ್ ಮತ್ತು ಕೋಲಾರದ ಗೋಲ್ಡ್ ಫೀಲ್ಡ್‌ನವರೆಗೆ ಮಾತ್ರ ನಕ್ಷೆ ತಯಾರಿಸಿದನು. ಇಲ್ಲಿನ ಆಡಳಿತ ವಿಭಾಗ, ರಸ್ತೆ, ಭೂಮಿ, ದೇವಾಲಯ, ನೀರಾವರಿ, ಬೆಟ್ಟ-ಗುಡ್ಡ ಇವೇ ಮೊದಲಾದವುಗಳನ್ನು ಗುರ್ತಿಸಿ ನಕ್ಷೆಯನ್ನು ಸಿದ್ಧಪಡಿಸಿದನು.[೨೧] ಇಲ್ಲಿನ ಸಂಸ್ಕೃತಿ, ತೆರಿಗೆ, ವ್ಯಾಪಾರ-ಸಂಪರ್ಕ ಹೇಗಿತ್ತು ಎಂಬುದರ ವಿವರಗಳನ್ನು ನೀಡಿದ್ದಾರೆ. ಈ ನಿಟ್ಟಿನಲ್ಲಿ ಈತನು ತನಗೆ ಕಾಣಿಸಿದ್ದೆಲ್ಲ ದಾಖಲಿಸಿದನು. ಸತ್ಯಾಸತ್ಯತೆಯನ್ನು ಒರೆಗಲ್ಲಿಗೆ ಹಚ್ಚಿ ನೋಡುವ ಪ್ರಯತ್ನ ಮಾಡಲಿಲ್ಲ. ಮೆಕೆಂಝಿ ಕಂಡುಹಿಡಿದ ಕಚ್ಚಾ ಸಾಮಗ್ರಿಗಳು(ಆಕರಗಳು) ಟಿಪ್ಪುವಿನ ಮತ್ತು ಅನಂತರ ಕಾಲದ ಮೈಸೂರು ಒಡೆಯರ ಚರಿತ್ರೆಯನ್ನು ಅಧ್ಯಯನ ಮಾಡುವವರಿಗೆ ಮೊದಲ ಆದ್ಯತೆಯಾಗಿ ನಿಲ್ಲುತ್ತದೆ.

'ಫ್ರಾನ್ಸಿಸ್ ಬುಕಾನನ್' ಈಸ್ಟ್ ಇಂಡಿಯಾ ಕಂಪನಿಯ ಮೂಲಕ ಬಂಗಾಳದಲ್ಲಿ ವೈದ್ಯಕೀಯ ಸೇವೆಯಲ್ಲಿದ್ದನು. ಟಿಪ್ಪುವಿನ ಮರಣದ ನಂತರ ಅವನ ವಶದಲ್ಲಿ ಅದುವರೆಗೆ ಇದ್ದ ಮೈಸೂರು, ಕೆನರಾ ಮತ್ತು ಮಲಬಾರ್ ಪರಿಶೀಲನೆಗೆ ಕಳುಹಿಸಲಾಯಿತು. ಅವನು ವರದಿ ಮಾಡಬೇಕಾದದ್ದು ಕೃಷಿಪದ್ಧತಿಯನ್ನು. ಇದರ ಜೊತೆಗೆ ಜನತೆಯ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಜೀವನದ ಬಗೆಯನ್ನು ತನ್ನ ದಿನಚರಿಯಲ್ಲಿ ಬರೆಯುತ್ತಾ ಹೋದನು. ಇಲ್ಲಿನ ಭೌಗೋಳಿಕ ಲಕ್ಷಣ, ಖನಿಜಸಂಪತ್ತು, ಕೃಷಿ ಇವೇ ಮೊದಲಾದ ವಿಷಯಗಳನ್ನು ಪತ್ತೆ ಹಚ್ಚಲು ಮದ್ರಾಸ್‌ನಿಂದ ಏಪ್ರಿಲ್ ೨೩, ೧೮೦೦ರಿಂದ ಜುಲೈ ೫, ೧೮೦೧ರವರೆಗೆ ಸುಮಾರು ಒಂದು ವರ್ಷ, ಎರಡು ತಿಂಗಳು, ಹದಿಮೂರು ದಿವಸಗಳವರೆಗೆ ದಕ್ಷಿಣ ಭಾರತದ ಸಮೀಕ್ಷೆ ಕಾರ್ಯವನ್ನು ಆರಂಭಿಸಿದನು.[೨೨] ಈ ಸಮೀಕ್ಷೆಯ ವರದಿಯನ್ನು 'ಎ ಜರ್ನಿ ಥ್ರೂದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್'(೧೮೧೧, ಲಂಡನ್) ಎಂಬ ಮೂರು ಸಂಪುಟಗಳಲ್ಲಿ ವಿವರಿಸಿದ್ದಾನೆ.[೨೩] ಈ ಸಂಪುಟಗಳು ಬೆಂಗಳೂರಿನ ಗ್ಯಾಸೆಟಿಯರ್ ಇಲಾಖೆಯಿಂದ ೨೦೧೨ರಲ್ಲಿ ಮರುಪ್ರಕಟವಾದವು.

ಫ್ರಾನ್ಸಿಸ್ ಬುಕಾನನ್ ಪ್ರತಿಯೊಂದು ಪಟ್ಟಣ, ಹಳ್ಳಿಗಳಿಗೆ, ಭೇಟಿ ನೀಡುವ ತಾರೀಕು, ಕೃಷಿ ವಿವರಣೆ, ನೀರಾವರಿ, ಜನವಸತಿ, ಆಹಾರ ಬೆಳೆಗಳ ವಿವರ, ಪ್ರಾಣಿ-ಪಕ್ಷಿ, ಧಾರ್ಮಿಕ

ಆಚರಣೆಗಳು, ಕಲೆ ಮತ್ತು ವಾಸ್ತುಶಿಲ್ಪ, ವಿವಿಧ ಜನಾಂಗಗಳ ಸ್ಥಿತಿಗತಿಗಳು ವ್ಯಾಪಾರ-ವಾಣಿಜ್ಯ, ಜಾತಿ ವ್ಯವಸ್ಥೆ, ರೋಗ-ರುಜಿನಗಳು ಇವೇ ಮೊದಲಾದ ಅಂಶಗಳನ್ನು ಈ ಮೂರು ಸಂಪುಟಗಳಲ್ಲಿ ವಿವರಣೆ ನೀಡಿದ್ದಾನೆ.

ಮೊದಲನೇ ಸಂಪುಟದಲ್ಲಿ ಮದ್ರಾಸ್‌ನಿಂದ ೨೩ ಏಪ್ರಿಲ್ ೧೮೦೦ರ ಮಧ್ಯಾಹ್ನ ಹೊರಟ ಬುಕಾನನ್ ಆರ್ಕಾಟ್, ವೆಲ್ಲೂರು ಮುಂತಾದ ಪ್ರದೇಶಗಳ ಮೂಲಕ ಬೆಂಗಳೂರು ತಲುಪಿದನು. ಬೆಂಗಳೂರಿನಿಂದ ಶ್ರೀರಂಗಪಟ್ಟಣ, ದೊಡ್ಡಬಳ್ಳಾಪುರ, ಶಿರಾದವರೆಗೆ ಪ್ರವಾಸ ಮಾಡಿ ವರದಿಗಳನ್ನು ನೀಡಿದ್ದಾನೆ. ಪ್ರಮುಖವಾಗಿ ಮೊದಲು ಸಮಾಜದ ಜನರ ಜೀವನದ ಕಡೆ ಗಮನ ಹರಿಸಿದಾಗ ಜಾತಿಪದ್ಧತಿ ಮುಖ್ಯವಾಗುತ್ತದೆ. ಇಲ್ಲಿ ಬ್ರಾಹ್ಮಣರು ಮೇಲ್ವರ್ಗವಾಗಿ ಗುರುತಿಸಿಕೊಂಡು ಸಮಾಜದಲ್ಲಿ ಮೊದಲಿನಿಂದಲೂ ಎಲ್ಲಾ ಸವಲತ್ತುಗಳನ್ನು ಹೊಂದಿದ್ದರು. ಅಲ್ಲದೇ ಬ್ರಾಹ್ಮಣರಲ್ಲಿ ಇರುವ ಒಳಪಂಗಡಗಳನ್ನು ಗುರುತಿಸಿದ್ದಾನೆ. ವೈದಿಕ, ಲೌಕಿಕ ಬ್ರಾಹ್ಮಣರಲ್ಲಿನ ಭಿನ್ನತೆಗಳನ್ನು ತಿಳಿಸಿದ್ದಾರೆ(ಪು.೨೦-೨೧). ಸಮಾಜದ ಮೇಲ್ವರ್ಗವಾಗಿ ಎಲ್ಲಾ ಸವಲತ್ತುಗಳನ್ನು ಪಡೆದಿದ್ದ ಈ ವರ್ಗ ಆಡಳಿತಾತ್ಮಕ ಕಾರ್ಯಗಳಲ್ಲಿ ಮುಂಚೂಣಿಯಲ್ಲಿತ್ತು. ಆದರೆ ಟಿಪ್ಪುವಿನ ಕಾಲದಲ್ಲಿ ಕೆಲವು ಆಡಳಿತಾತ್ಮಕ ಕಾರ್ಯಗಳಲ್ಲಿ ಬ್ರಾಹ್ಮಣರಿಗಿಂತ ಮುಸಲ್ಮಾನರನ್ನು ನೇಮಕ ಮಾಡಿದನು. ಲೌಕಿಕ ಬ್ರಾಹ್ಮಣರು ಕೆಲವೊಂದು ವ್ಯವಹಾರಗಳನ್ನು ಮಾತ್ರ ನೋಡಿಕೊಳ್ಳು ತ್ತಿದ್ದರು(ಪು.೪೭). ಅವನು ಬೆಂಗಳೂರಿನ ಆಚೆ ಊರುಗಳ ಬಗ್ಗೆ ಮಾಹಿತಿ ನೀಡಿದ್ದು, ಅಲ್ಲಿ ಹೆಚ್ಚಾಗಿ ಮುಸಲ್ಮಾನರಿದ್ದು ಸೈನಿಕ ಹುದ್ದೆಯಲ್ಲಿಯೇ ಇದ್ದರು ಎಂದು ವಿವರಿಸಿದ್ದಾನೆ. ಶ್ರೀರಂಗಪಟ್ಟಣದ ಬಗ್ಗೆ ಹೇಳುತ್ತಾ ಕಂದಾಯ ಇಲಾಖೆಯಲ್ಲಿ ಬ್ರಾಹ್ಮಣರು ಮುಖ್ಯ ಪಾತ್ರ ವಹಿಸಿದ್ದರ ಬಗ್ಗೆ ತಿಳಿಸುತ್ತಾನೆ. ಅಮಲ್ದಾರರು ವ್ಯಾಪಾರ-ವಾಣಿಜ್ಯದ ಆಡಳಿತ ಮತ್ತು ಅದರ ತೆರಿಗೆಯನ್ನು ವಿಧಿಸುವ ಕಾರ್ಯವನ್ನು ನೋಡಿಕೊಳ್ಳುತ್ತಿದ್ದರು(ಪು.೬೯). ಜಾತಿ ವಿಂಗಡನೆಯ ವಿವರಗಳನ್ನು ನೀಡುತ್ತಾ ಹಿಂದೂ, ಮುಸ್ಲಿಂ, ಕ್ರೈಸ್ತರು, ಜೈನರು, ಬೌದ್ಧರು ಇದ್ದರು. ಅದರಂತೆ ಹಿಂದೂಗಳಲ್ಲಿ ಬ್ರಾಹ್ಮಣರು ಮತ್ತು ಲಿಂಗಾಯಿತರು ಮೇಲ್ವರ್ಗವಾಗಿ ಗುರುತಿಸಿ ಕೊಂಡಿದ್ದು, ಜಾತಿಯ ಒಳಪಂಗಡಗಳ ವಿವರಗಳನ್ನು ನೋಡಬಹುದು. ವೃತ್ತಿ ಆಧಾರಿತ ಜಾತಿಗಳಾದ ಕಂಬಾರ, ಬಡಗಿ, ಅಕ್ಕಸಾಲಿಗ, ಬಣಜಿಗ, ಬೇಡ, ಹೊಲೆಯ, ಮಾದಿಗ ಮುಂತಾದವುಗಳನ್ನು ಗುರುತಿಸಿದ್ದಾನೆ. ಹೊಲೆಯ ಮತ್ತು ಮಾದಿಗ ಜಾತಿಯಲ್ಲಿ ಬಲಗೈ ಹಾಗೂ ಎಡಗೈ ಎಂಬ ಎರಡು ವರ್ಗಗಳಾಗಿ ಮಾಡಿ ಬಲಗೈನಲ್ಲಿ ೧೮ ಜಾತಿಗಳಿದ್ದರೆ, ಎಡಗೈಯಲ್ಲಿ ೯ ಜಾತಿ ವರ್ಗಗಳನ್ನು ಗುರುತಿಸಿ ಜಾತಿ ವಿಚಾರವಾಗಿ ಎರಡು ಗುಂಪುಗಳ ಮಧ್ಯೆ ಜಗಳ ಪರಾಕಾಷ್ಠತೆಗೆ ಹೋಗಿದ್ದು ಸರಕಾರದವರಿಗೆ ತಲೆನೋವಾಗಿತ್ತು ಎಂದು ವಿಚಾರ ತಿಳಿಸಿದ್ದಾರೆ(ಪು.೭೭-೭೮). ಇವತ್ತಿನ ಸಂದರ್ಭದಲ್ಲೂ ಹಾಗೆಯೇ ಮುಂದುವರಿದುಕೊಂಡು ಬರುತ್ತಿರುವುದನ್ನು ಗಮನಿಸಬಹುದು.

ಬೆಂಗಳೂರಿನಿಂದ ದೊಡ್ಡಬಳ್ಳಾಪುರದ ಪ್ರವಾಸ ವರದಿಯಲ್ಲಿ ಕೃಷಿಗೆ ಸಂಬಂಧಿಸಿದಂತೆ ವಿಶೇಷವಾದ ವಿವರಗಳನ್ನು ನೀಡಿದ್ದಾರೆ. ಬುಕಾನನ್ ಕೃಷಿಗಾಗಿ ಬಳಸುವ ಉಪಕರಣಗಳ ಮಾಹಿತಿಗಳನ್ನು ತಿಳಿಸುತ್ತಾ, ಬೀಜವನ್ನು ಸಾಲಾಗಿ ಬಿತ್ತುವ ಸಡ್ಡೆ, ಕೂರಿಗೆ ಇನ್ನೂ ಮುಂತಾದ

ಉಪಕರಣಗಳ ಮಾಹಿತಿಗಳನ್ನು ನೀಡುತ್ತಾನೆ(ಪು.೨೮೩). ಇಂದಿನ ಆಧುನಿಕ ಯಂತ್ರಗಳಿಂದಾಗಿ ಈ ಉಪಕರಣಗಳು ಮಾಯವಾಗಿವೆ. ಇಲ್ಲಿ ಬೆಳೆಯುವ ಬೆಳೆಗಳಾದ ರಾಗಿ, ಭತ್ತ, ಹುರುಳಿ, ಎಳ್ಳು, ಹರಳು, ಉದ್ದು ಮುಂತಾದವುಗಳ ವಿವರಗಳಿವೆ.

ಎರಡನೇ ಸಂಪುಟದಲ್ಲಿ ಶಿರಾದಿಂದ ಶ್ರೀರಂಗಪಟ್ಟಣ ಪ್ರಯಾಣದ ಅಂಶಗಳನ್ನು ವಿವರಿಸುತ್ತಾ ಹೋಗುತ್ತಾನೆ. ಮಧುಗಿರಿಯ ಕೆಲವು ಜಿಲ್ಲೆಯಲ್ಲಿ ಕೃಷಿಗಾಗಿ ಯಾವ ಉಪಕರಣಗಳನ್ನು ಬಳಸುತ್ತಿದ್ದರು. ಅಲ್ಲಿನ ಜಾನುವಾರುಗಳು, ಜನರ ಸ್ಥಾನಮಾನ, ಜನರ ವಾಸದ ಮನೆ, ಗುಡಿಸಲುಗಳು, ಜಾನುವಾರುಗಳ ಲಾಲನೆ-ಪಾಲನೆ ಮೊದಲಾದ ಅಂಶಗಳನ್ನು ತಿಳಿಸುತ್ತಾನೆ. ಈ ಜಾನುವಾರುಗಳು ರೈತರಿಗೆ ಸಂಪತ್ತಾಗಿದ್ದವು. ಪಂಚಮ ಬಣಜಿಗರು ವ್ಯಾಪಾರದ ಚಟುವಟಿಕೆಯಲ್ಲಿ ತೊಡಗಿದ್ದರು. ಲಿಂಗಾಯಿತ ಜನಾಂಗದಲ್ಲಿ ಸಾಧರು, ನೊಣಬರು ಎಂಬ ಪಂಗಡಗಳಿದ್ದವು. ಜಂಗಮರು ಹಳ್ಳಿಗಳಲ್ಲಿ ಜೋತಿಷ್ಯದ ಮಂತ್ರಗಳನ್ನು ಪಠಿಸುತ್ತಾ ಅನೇಕ ಕಾರ್ಯಗಳಲ್ಲಿ ಭಾಗವಹಿಸುತ್ತಿದ್ದರು ಎಂದು ವಿವರಿಸುತ್ತಾನೆ(ಪು.೨೫-೨೭).

ಇಲ್ಲಿ ಸ್ಥಳೀಯ ಬಲಾಢ್ಯ ಮತ್ತು ಪುರೋಹಿತವರ್ಗ ಜನಸಾಮಾನ್ಯರನ್ನು ಶೋಷಿಸು ತ್ತಿದ್ದರು ಎಂಬ ವಿವರಗಳನ್ನು ನೋಡಬಹುದು. ಬ್ರಾಹ್ಮಣರ ದಾನದತ್ತಿಗಳ ವಿವರಗಳು ಇವೆ. ಟಿಪ್ಪು ಆಳ್ವಿಕೆಯಲ್ಲಿ ೫೦ ಸಾವಿರ ರೂಪಾಯಿ ಸಂಗ್ರಹಿಸಲಾಗಿತ್ತು. ಟಿಪ್ಪುವನ್ನು ಮತಾಂಧ ಎಂದು ಕರೆಯಲಾಗಿದೆ. ಅನೇಕ ಜನರನ್ನು ಇಸ್ಲಾಂಧರ್ಮಕ್ಕೆ ಮತಾಂತರಗೊಳಿಸಿದನು, ದೇವಾಲಯಗಳ ನಾಶ ಮಾಡಿದನು ಎಂಬ ವಿವರಗಳನ್ನು ನೋಡಬಹುದು.

ಮೈಸೂರು ಪ್ರದೇಶದ ಸುತ್ತಮುತ್ತಲಿರುವ ಸೋಲಿಗ ಬುಡಕಟ್ಟು ಜನಾಂಗದ ವಿವರಗಳನ್ನು ನೋಡಬಹುದು(ಪು.೧೭೮). ಕ್ಯಾಲೆಂಡರ್ ರಚನೆ, ರಸ್ತೆ, ಹಳ್ಳಿಗಳಲ್ಲಿ ತೆರಿಗೆ ವಿಧಿಸಲು ಅಧಿಕಾರಿಗಳ ನೇಮಕ, ತಹಸೀಲ್ದಾರರ ನೇಮಕ, ಅವರ ಕಾರ್ಯಗಳ ವಿವರಗಳನ್ನು ತಿಳಿಸಿದ್ದಾರೆ. ಟಿಪ್ಪು ತನ್ನ ಆಡಳಿತಾವಧಿಯಲ್ಲಿ ಸೇವಾನುಭವ ಇಲ್ಲದ ಅಧಿಕಾರಿಗಳನ್ನು ನೇಮಿಸಿದ್ದರಿಂದ ಆಡಳಿತದ ಕೆಲಸ ಕಾರ್ಯಗಳು ನಿಧಾನವಾದವು(ಪು.೨೫೧). ಹಳ್ಳಿಗಳಲ್ಲಿನ ಜಾತಿಪದ್ಧತಿಯಲ್ಲಿ ಮನೆಗಳೂ ಬೇರೆಬೇರೆ ಆಗಿದ್ದವು. ಬಲಗೈ ಮತ್ತು ಎಡಗೈ ಜಾತಿಗಳ ಜಗಳವನ್ನು ತಹಸೀಲ್ದಾರರು ಬಗೆಹರಿಸುತ್ತಿದ್ದರು. ಭೂಮಿಯ ಆಡಳಿತಕ್ಕಾಗಿ ಜಮೀನ್ದಾರರನ್ನು ನೇಮಕ ಮಾಡಲಾಯಿತು. ಕೃಷಿಗಾಗಿ ಬಳಸುವ ಉಪಕರಣಗಳು ಪ್ರದೇಶದಿಂದ ಪ್ರದೇಶಕ್ಕೆ ಸ್ವಲ್ಪ ಬದಲಾವಣೆಯನ್ನು ಹೊಂದಿದ್ದವು. ತಿರುವಾಂಕೂರು ರಾಜನು ಮಲಬಾರಿನ ಜೊತೆ ವ್ಯಾಪಾರ ಸಂಬಂಧಗಳನ್ನು ಹೊಂದಿದ್ದರ ವಿವರಗಳನ್ನು ತಿಳಿಯಬಹುದು(ಪು.೪೦೫).

ಮೂರನೇ ಸಂಪುಟವು ಮಲಬಾರಿನ ವಿವರಗಳನ್ನು ತಿಳಿಸುತ್ತದೆ. ಸಾಮಾಜಿಕವಾಗಿ ಬ್ರಾಹ್ಮಣರು ಮೇಲ್ವರ್ಗವಾಗಿ ಗುರುತಿಸಿಕೊಂಡಿದ್ದು, ಕೆಲವು ಧಾರ್ಮಿಕ ಕಾರ್ಯಗಳನ್ನು ಕೈಗೊಳ್ಳುತ್ತಿದ್ದರು. ಕಮ್ಮೆ ಬ್ರಾಹ್ಮಣರು, ತುಳುವ ಬ್ರಾಹ್ಮಣರು ಇವರ ಭಿನ್ನತೆಗಳನ್ನು ಗುರುತಿಸಿದ್ದಾರೆ. ಕ್ರೈಸ್ತ ಮಿಷನರಿಗಳ ಮೂಲಕ ಅನೇಕ ಸಾಮಾಜಿಕ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ನೋಡಬಹುದು(ಪು.೨೨-೨೩). ಕೃಷಿಯಲ್ಲಿ ಹೊಸ ಉಪಕರಣಗಳ ಬಳಸುವಿಕೆಯನ್ನು

ನೋಡಬಹುದು. ರಾಣಿ ಬೈರಾದೇವಿಯ ಯುದ್ಧದ ಸನ್ನಿವೇಶಗಳನ್ನು ಚಿತ್ರಿಸಿದ್ದಾರೆ(ಪು.೧೧೯). ಮಂಗಳೂರಿನಲ್ಲಿ ಮೀನು ಮಾರಾಟದ ಅಂಶಗಳನ್ನು ತಿಳಿಸಿದ್ದಾರೆ. ಕಟ್ಟಡಗಳ ವಿವರಣೆ ನೀಡುತ್ತಾ ಮೈಸೂರು, ಶಿರಾ ಮತ್ತು ಕೋಲಾರದ ಮನೆಗಳು ಒಂದೇ ರೀತಿ ಇದ್ದು, ಕಲ್ಲು ಮತ್ತು ಹುಲ್ಲಿನಿಂದ ನಿರ್ಮಿತವಾಗಿವೆ ಎಂದು ವಿವರಿಸಿದ್ದಾರೆ. ಬುಕನನ್ ಅನೇಕ ಶಿಲಾಶಾಸನ ಹಾಗೂ ತಾಮ್ರ ಶಾಸನಗಳ ಪ್ರತಿ ತೆಗೆಯಿಸಿ ಕಲ್ಕತ್ತಾಗೆ ಕಳುಹಿಸಿಕೊಟ್ಟಿರುವ ಉಲ್ಲೇಖಗಳು ಅವನ ಪುಸ್ತಕದಲ್ಲಿ ನೋಡಬಹುದು. ಅನೇಕ ಐತಿಹಾಸಿಕ ಕಡತಗಳು ದೊರೆತಿವೆ.

ಒಟ್ಟಾರೆಯಾಗಿ ಸಾಮಾಜಿಕವಾಗಿ ಇದ್ದ ಜಾತಿ ಪಂಗಡಗಳು, ಕೃಷಿ, ವ್ಯಾಪಾರ-ವಾಣಿಜ್ಯ, ಧಾರ್ಮಿಕತೆ ಇವೇ ಮೊದಲಾದ ಅಂಶಗಳನ್ನು ಇಲ್ಲಿ ವಿವರಿಸಿರುವುದನ್ನು ನೋಡಬಹುದು. ಬ್ರಾಹ್ಮಣವರ್ಗ ಉನ್ನತಸ್ಥಾನದಲ್ಲಿದ್ದು ಡಾಮಿನೆಂಟ್ ಆಗಿತ್ತು. ವ್ಯಾಪಾರಿ-ವಾಣಿಜ್ಯದಲ್ಲಿ ವಸ್ತುಗಳು ವಿನಿಮಯವಾಗುತ್ತಿದ್ದವು. ಉದಾಹರಣೆಗೆ ಚಿತ್ರದುರ್ಗದಿಂದ ಕಂಬಳಿಗಳು, ಶಿವಮೊಗ್ಗದಿಂದ ಅಡಿಕೆ, ಕರಿಮೆಣಸು, ಶ್ರೀಗಂಧ, ಏಲಕ್ಕಿ, ಆಹಾರ ಧಾನ್ಯ, ತಂಬಾಕು ಇತ್ಯಾದಿ ವಸ್ತುಗಳ ವಿವರಣೆ ಸಿಗುತ್ತದೆ. ಬೆಂಗಳೂರು ಪ್ರಮುಖ ವಾಣಿಜ್ಯ ನಗರವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ. ಬಣ್ಣದ ಬಟ್ಟೆಗಳ ವಿವರಣೆ ಹಾಗೂ ವ್ಯಾಪಾರದಲ್ಲಿ ಮಹಿಳೆಯರು ಪಾಲ್ಗೊಳ್ಳುತ್ತಿದ್ದ ಸಂಗತಿ ವಿವರಿಸಿದ್ದಾನೆ. ಆದರೆ ಮಹಿಳೆಯರು ಶಿಕ್ಷಣದಿಂದ ವಂಚಿತರಾಗಿದ್ದುದು ತಿಳಿಯುತ್ತದೆ. ಚಿತ್ರದುರ್ಗದಿಂದ ಸಾಗಿಬಂದು ಇಡೀ ಪ್ರದೇಶ ಕಪ್ಪುಮಣ್ಣಿನ ಎರೆಭೂಮಿ ಹಾಗೂ ಆ ಪ್ರದೇಶದ ಜನರೆಲ್ಲ ಅನಾರೋಗ್ಯದಿಂದ ನರಳುತ್ತಿರುವ, ನೀರಿನ ಕೊರತೆಯಿಂದ ಬಳಲುತ್ತಿರುವ ಚಿತ್ರಣ ನೀಡುತ್ತಾನೆ. ಪಶುಗಳನ್ನು ತೊಳೆಯಲು ಶೌಚಕ್ಕೆ ಬಳಸುವ ನೀರನ್ನೇ ಕುಡಿಯಲು ಬಳಸಬೇಕಾದ ಅನಿವಾರ್ಯತೆ ಇರುವ ಅಶುದ್ಧತೆಯ ಬಗ್ಗೆ ಆಕ್ರೋಶ ವ್ಯಕ್ತಪಡಿಸುತ್ತಾನೆ. ಈ ಪರಿಸರದಿಂದ ಕೇವಲ ಒಂದೇ ದಿನವೇ ಹೋಗಲು ನಿರ್ಧರಿಸಿದ ಅಂಶ ಕುರಿತು ವಿವರಣೆ ನೀಡುತ್ತಾನೆ. ವಾಹನ ಸೌಕರ್ಯಕ್ಕೆ ಪ್ರಾಣಿಗಳ ಬಳಕೆ ಬಗ್ಗೆ ವಿವರಗಳನ್ನು ನೋಡಬಹುದು. ಕೃಷಿಕ್ಷೇತ್ರ ಸರ್ಕಾರದಿಂದ ಉತ್ತೇಜನ ಪಡೆದಿದ್ದು, ಜಮೀನ್ದಾರರು ಉನ್ನತಜೀವನ ನಡೆಸುತ್ತಿದ್ದರು. ಕೂಲಿ ಕೆಲಸದ ಆಳುಗಳ(ಜೀತ) ಜೀವನಮಟ್ಟ ಶೋಚನೀಯವಾಗಿತ್ತು ಎಂಬ ಅಂಶ ತಿಳಿದು ಬರುತ್ತದೆ. ಈ ಮೂರು ಸಂಪುಟಗಳಿಂದ ಅಂದಿನ ಜನರ ಜೀವನಮಟ್ಟ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಇತರೇ ಅಂಶಗಳ ಸ್ಪಷ್ಟ ಮಾಹಿತಿ ಸಿಗುತ್ತದೆ. ಹೀಗೆ ಬುಕಾನನ್ ಚರಿತ್ರೆ ಬರೆಯಲು ಬೇಕಾಗುವ ಆಕರ ಸಾಮಗ್ರಿಗಳನ್ನು ಕಲೆ ಹಾಕುವುದರ ಮೂಲಕ ಇಲ್ಲಿನ ಸಂಸ್ಕೃತಿ, ಪ್ರಾದೇಶಿಕ ವೈವಿಧ್ಯತೆ ಮೊದಲಾದವುಗಳನ್ನು ತನ್ನ ಕೃತಿಯ ಮೂರು ಸಂಪುಟಗಳಲ್ಲಿ ದಾಖಲಿಸುತ್ತಾನೆ. ದಕ್ಷಿಣ ಭಾರತದ ಈ ಪ್ರದೇಶಗಳ ಸಂಶೋಧನೆಯನ್ನು ಕೈಗೊಳ್ಳಲು ಬುಕಾನನ್‌ನ ಈ ವಿವರಗಳ ಸಂಗ್ರಹದ ಕೃತಿ ಪ್ರಮುಖ ಆಕರವಾಗಿ ನಿಲ್ಲುತ್ತದೆ. ಅಲ್ಲದೇ ಚರಿತ್ರೆಯ ಸೆನ್ಸ್ ಒಂದನ್ನು ಮೂರ್ತವಾಗಿಸುತ್ತಾನೆ. ಇದು ಯುರೋಪಿನ ದೃಷ್ಟಿಯಾದರೂ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಮಾಹಿತಿಗಳು ಈ ಕೃತಿಯಲ್ಲಿ ದೊರಕುತ್ತವೆ.

ಮೈಸೂರು ಒಡೆಯರ ಚರಿತ್ರೆಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಅವರನ್ನು ಪ್ರಮುಖರಾಗಿ ಗುರುತಿಸಬಹುದು. ಇವರಿಬ್ಬರನ್ನು ಕುರಿತು ಅನೇಕ ಕೃತಿಗಳು ಹೊರಬಂದಿವೆ.

ಅಲ್ಲದೇ ಅನೇಕ ಕೃತಿಗಳು ಚರ್ಚೆಗೆ ಒಳಗಾಗಿವೆ ಮತ್ತು ಒಳಗಾಗುತ್ತಲೇ ಇವೆ. ಮಾರ್ಕ್ ವಿಲ್ಕ್ಸ್ 'ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯ ಇನ್ ಅಟೆಂಟ್ ಟು ಟ್ರೆಸ್ ದಿ ಹಿಸ್ಟರಿ ಆಫ್ ಮೈಸೂರು' ಕೃತಿಯು ಮುಖ್ಯವಾಗಿದೆ. ಈ ಕೃತಿಯ ಮೂರು ಸಂಪುಟಗಳಲ್ಲಿ ಹೈದರಾಲಿ ಮತ್ತು ಟಿಪ್ಪುವನ್ನು ಕಟುವಾಗಿ ಟೀಕಿಸಿ ಬರೆದಿರುವುದನ್ನು ಗಮನಿಸಬಹುದು. ಟಿಪ್ಪು ವಿರೋಧಿ ನಿಲುವನ್ನು ಪ್ರಕಟಿಸಿದ ಮೊದಲ ಬರಹಗಾರ ವಿಲ್ಕ್ಸ್. ಅನಂತರದ ಬಹುತೇಕ ಬರಹಗಾರರಿಗೆ ಈ ಸಂಪುಟಗಳು ಮತ್ತು ಅವುಗಳ ಧೋರಣೆ ಮಾದರಿಯಾದವು. ತಮ್ಮನ್ನು ವಿರೋಧಿಸಿದವರ ಬಗೆಗಿನ ವಸಾಹತುಶಾಹಿ ಪೂರ್ವಗ್ರಹ ಮತ್ತು ಆಕ್ರೋಶಗಳು ಈ ಬರಹಗಳಲ್ಲಿ ಪ್ರತಿಫಲಿಸಿವೆ. ಪ್ರಕಟವಾಗಿರುವ ಆಕರಸಾಮಗ್ರಿ ಇಂಗ್ಲಿಷ್‌ನಲ್ಲಿದ್ದು ಟಿಪ್ಪುವಿನ ಬಗ್ಗೆ ವಿಕೃತಚಿತ್ರಣ ಕೊಡುತ್ತದೆ. ಭಾರತದಲ್ಲಿದ್ದ ಅಥವಾ ಅಂದಿನ ಭಾರತದೊಂದಿಗೆ ಸಂಬಂಧವಿದ್ದ, ಪ್ರತಿಯೊಬ್ಬ ಇಂಗ್ಲಿಷನೂ ಬ್ರಿಟಿಷ್ ವಸಾಹತು ಆಡಳಿತದಿಂದ ನೇರವಾಗಿ ಅಥವಾ ಪರೋಕ್ಷವಾಗಿ ಉಪಕೃತನಾಗಿದ್ದನು. ಇದರ ಮೂಲಕ ತನ್ನ ನೆನಪನ್ನು ಇದರಲ್ಲಿ ದಾಖಲಿಸಿದನು. ಬ್ರಿಟಿಷರನ್ನು ಉಗ್ರವಾಗಿ ಪ್ರತಿಭಟಿಸಿ, ಯುದ್ಧ ಮಾಡಿದ ಕೊನೆಯ ಪ್ರಬಲರೆಂದರೆ ಮೈಸೂರಿನವರಾದ ಹೈದರ್ ಮತ್ತು ಟಿಪ್ಪು. ಆದ್ದರಿಂದಲೇ ವಸಾಹತುಶಾಹಿ ಬರಹಗಾರರು ಈ ಸುಲ್ತಾನರ ಬಗ್ಗೆ ವಿಷಕಾರಿದ್ದಾರೆ. ಬೀಟ್ಸನ್, ಬುಕಾನನ್, ಬೌರಿಂಗ್, ಪುಲ್ಲರ್‌ಟನ್, ಮೆಕೆಂಝಿ, ಸಿ.ರೋಸ್, ಸ್ಟಿವರ್ಡ್, ಕ್ಯಾಂಪ್‌ಬೆಲ್, ಡಾಡ್‌ವೆಲ್, ಎಚ್.ಜಿ.ವೆಲ್ಸ್, ಮಾರ್ಟಿನ್ಯೂ, ಗ್ಲೀಗ್, ರೈಸ್, ಹ್ಯಾಂಡರ್‌ಸನ್, ಮನ್ರೋ, ಸಿ.ಎ.ಎಚ್.ಫಿಲಿಪ್ಸ್, ರಾಬ್ಬನ್ ಹೀಗೆ ಹಲವಾರು ಇಂಗ್ಲಿಷ್ ಬರಹಗಾರರು ಟಿಪ್ಪುವನ್ನು ಮತಾಂಧ, ಮೂಲಭೂತವಾದಿ ಮತ್ತು ಕ್ರೂರಿಯೆಂದು ಬಣ್ಣಿಸಿದ್ದಾರೆ. ಡಿರೋಮ್, ಜಾನ್‌ಮಾಲ್ಕಮ್, ಮೂರ್, ಗೂಡಾಲ್ ಮತ್ತು ಕಿರ್ಕ್ ಪ್ಯಾಟ್ರಿಕ್ ಮುಂತಾದವರು ಸಾಮಾನ್ಯವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗ್ಗೆ ಭಾರತದ ವಿರೋಧಿಧೋರಣೆ ತಳೆದರೂ, ಆತನನ್ನು ಒಳ್ಳೆಯ ಸಮರ್ಥ ಆಡಳಿತಗಾರನೆಂಬ ನಿಲುವು ವ್ಯಕ್ತಪಡಿಸಿದ್ದಾರೆ.[೨೪]

ಮೆಕೆಂಝಿ ರಚಿಸಿದ **ಸ್ಕೆಚಸ್ ಆಫ್ ದಿ ವಾರ್ ವಿತ್ ಟಿಪ್ಪು ಸುಲ್ತಾನ್**(೧೭೯೩)[೨೫] ಎಂಬ ಕೃತಿಯಲ್ಲಿ ಟಿಪ್ಪು ಸುಲ್ತಾನನ ಯುದ್ಧಗಳನ್ನು ವಿವರಿಸಿದ್ದಾರೆ. ಮಲಬಾರ್ ಪ್ರದೇಶಗಳಲ್ಲಿನ ಸ್ಥಳಗಳನ್ನು ವಶಕ್ಕೆ ತೆಗೆದುಕೊಳ್ಳಲು ನಡೆಸಿದ ಯುದ್ಧದ ಅಂಶಗಳನ್ನು ಈ ಕೃತಿಯಲ್ಲಿ ಗಮನಿಸಬಹುದು. ಹೈದರಾಬಾದ್ ನಿಜಾಮರು, ಮರಾಠರ ನಡುವಿನ ಯುದ್ಧಗಳ ವಿವರಗಳು ಮುಖ್ಯವಾದವುಗಳು. ಬ್ರಿಟಿಷರ ನಡುವಿನ ಆಂಗ್ಲೋ–ಮೈಸೂರು ಯುದ್ಧಗಳು ಟಿಪ್ಪುವಿನ ಅವನತಿಗೆ ಕಾರಣವಾದವು ಎಂಬ ವಿವರಗಳು ನಿರೂಪಿತವಾಗಿವೆ. ಮೆಕೆಂಝಿಯು ಟಿಪ್ಪುವಿನ ಅವನತಿಗೆ ಈ ಯುದ್ಧಗಳೇ ಕಾರಣ ಎಂಬುದನ್ನು ತಿಳಿಸಿದ್ದಾರೆ.

ಬ್ರಿಟಿಷ್ ಸೇನಾಧಿಪತಿಗಳು, ಫ್ರೆಂಚರು, ಪೋರ್ಚುಗೀಸರು ಮತ್ತು ಇತರ ಐರೋಪ್ಯರು ಟಿಪ್ಪು ಬಗೆಗೆ ಕೃತಿಗಳನ್ನು ರಚಿಸಿದ್ದಾರೆ. ಇವರು ಅಲ್ಲಿ ಮಿಷನರಿಗಳಾಗಿದ್ದು, ನಡೆದ ಘಟನೆಗಳಿಗೆ ಪ್ರತ್ಯೇಕ ಸಾಕ್ಷಿಯಾಗಿದ್ದರು. ಟಿಪ್ಪು ಸುಲ್ತಾನನನ್ನು ಸಮರ್ಥಿಸುವ ಫ್ರೆಂಚ್ ದೃಷ್ಟಿಕೋನವನ್ನು ಪ್ರತಿನಿಧಿಸುವ ಗ್ರಂಥವೆಂದರೆ **ಮೈಸ್ತ್ರೆ ದಿ ಲ ತೂರ್**(೧೭೭೪) ಎಂಬಾತನ **Historied Ayder Ali-Khan**. ಇದು **History of Ayder Ali**(೧೭೭೯) ಎಂಬ ಹೆಸರಿನಲ್ಲಿ ಇಂಗ್ಲಿಷಿಗೆ

ಅನುವಾದಗೊಂಡಿದೆ. ಇದನ್ನು ಮುಂದುವರಿಸಿ, ಪರಿಷ್ಕರಿಸಿ **History of Hyder Ali and Tipu Sultan**(೧೮೫೫) ಎಂಬ ಹೆಸರಿನಲ್ಲಿ ಪ್ರಕಟಪಡಿಸಿದವನು ಗುಲಾಮ್ ಮಹಮ್ಮದ್. ಈತನು ಟಿಪ್ಪುವಿನ ಮಗನಾಗಿದ್ದು, ಲಂಡನ್ನಿನಲ್ಲಿ ವಾಸವಾಗಿದ್ದ.[೨೬] ಇವನು ಈ ಕೃತಿಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಆಡಳಿತಾತ್ಮಕ ಕ್ರಮಗಳನ್ನು ಅನಾವರಣಗೊಳಿಸಿದ್ದಾನೆ.

ಬ್ರಿಟಿಷ್ ಆಡಳಿತಗಾರ, ಚರಿತ್ರಕಾರನೂ ಆದ ಮಾರ್ಕ್ ವಿಲ್ಕ್ಸನು ೧೮೦೫–೧೮೦೮ರ ಅವಧಿಯಲ್ಲಿ ಮೈಸೂರು ಸಂಸ್ಥಾನದ ರೆಸಿಡೆಂಟ್ ಆಗಿದ್ದನು. ಈತನು ಚಾರಿತ್ರಿಕ ದಾಖಲೆಗಳನ್ನು ಇಟ್ಟುಕೊಂಡಿದ್ದ ಕರಣಿಕರನ್ನು ಕರೆಯಿಸಿಕೊಂಡು ಅವರಲ್ಲಿದ್ದ ವಿವರಗಳನ್ನು ಕ್ರೋಡೀಕರಿಸಿದನು. ಈ ಕೆಲಸದಲ್ಲಿ ಚಿಕ್ಕದೇವರಾಯನ ಕಾಲದಿಂದ ಸಂಗ್ರಹಿಸಿದ ಕಡತ, ಹಸ್ತಪ್ರತಿ, ಪರ್ಶಿಯನ್ ಅನುವಾದದ ಪ್ರತಿ, ಮದ್ರಾಸಿನ ಪೋರ್ಟ್‌ಸೆಂಟ್ ಜಾರ್ಜ್‌ನಲ್ಲಿದ್ದ ಸರ್ಕಾರಿ ಪತ್ರಗಳನ್ನು ಬಳಸಿಕೊಂಡನು.[೨೭] ಮೈಸೂರಿನ ಸರ್ವೇ ಕಾರ್ಯದಲ್ಲಿ ಮೆಕೆಂಝಿ ಸಂಗ್ರಹಿಸಿದ ಸಾವಿರಾರು ಶಾಸನಗಳು, ನೂರಾರು ಹಸ್ತಪ್ರತಿಗಳು ಮತ್ತು ದಾಖಲೆಗಳನ್ನು ವಿಲ್ಕ್ಸನು 'ಮೆಕೆಂಝಿ ಸಂಗ್ರಹ' ಎನ್ನುವ ಪುಸ್ತಕ ರೂಪದಲ್ಲಿ ಸಂಗ್ರಹಿಸಿದನು. ಇವೆಲ್ಲ ಆಕರಗಳನ್ನು ಬಳಸಿಕೊಂಡು ಮೈಸೂರು ಸಂಸ್ಥಾನದ ದಿವಾನ್ ಪೂರ್ಣಯ್ಯ, ಅವನ ಹಸ್ತಕರಾದ ಬಚ್ಚೆರಾಯನ ನೆರವನ್ನು ಪಡೆದು ಆಧುನಿಕ ರೀತಿಯಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಬರೆದಿದ್ದಾನೆ. ಈ ಎಲ್ಲಾ ವಿವರಗಳನ್ನು ಕ್ರೋಡೀಕರಿಸಿ **ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ** ಮೂರು ಸಂಪುಟಗಳು ೧೮೧೦ ರಿಂದ ೧೮೧೭ರ ನಡುವೆ ಪ್ರಕಟಗೊಂಡು ಪುನಃ ೧೯೩೦ರಲ್ಲಿ ಲಂಡನ್‌ನ ಕಿಂಗ್ಸ್ ಕಾಲೇಜಿನ ಮುರ್ರೆಹ್ಯಾಮಿಕ್ ಅವರ ಟಿಪ್ಪಣಿಯೊಂದಿಗೆ ಮರು ಪ್ರಕಟವಾದವು.[೨೮]

ಭಾರತದ ಚರಿತ್ರೆಯನ್ನು ಮತೀಯ ನೆಲೆಯಲ್ಲಿ ವಿಭಜಿಸಿ ನೋಡುವ ಬ್ರಿಟಿಷ್ ಚರಿತ್ರೆಕಾರರ ಮನೋಧರ್ಮವನ್ನು ಇವನ ಪುಸ್ತಕದ ಶೀರ್ಷಿಕೆಯಲ್ಲಿಯೇ ಪ್ರಕಟಗೊಳ್ಳುವುದನ್ನು ಮುಖ್ಯವಾಗಿ ಗಮನಿಸಬಹುದಾಗಿದೆ. ಇಲ್ಲಿನ ಸಾಂಸ್ಕೃತಿಕ ಬೇರುಗಳನ್ನು ಗ್ರಹಿಸಲು ಅವನೇ ಹೇಳಿಕೊಳ್ಳುವಂತೆ "ಸ್ಥಳೀಯರು ಅಪೇಕ್ಷಿಸುವ" ರೀತಿಯಲ್ಲಿ ಬದುಕಿದನು. ಇವನ ಬರವಣಿಗೆಗಳು ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಆಕ್ರಮಣಕಾರರು, ಧರ್ಮಾಂಧರು ಎಂದು ಬಿಂಬಿಸಿವೆ. ಮೊದಲು ವಿಲ್ಕ್ಸ್ ಮದ್ರಾಸಿನ ಮಿಲಿಟರಿ ಮಂಡಳಿಯಲ್ಲಿ ಕಾರ್ಯದರ್ಶಿಯ ಹುದ್ದೆಗೆ ಸೇರಿದನು. ನಂತರ ಪೋರ್ಟ್ ಅಡ್ಜುಜೆಂಟ್(ಸಹಾಯಕ ಅಧಿಕಾರಿ) ಆಗಿ ನಿಯುಕ್ತನಾದನು. ೧೭೮೯ರಲ್ಲಿ ತಾತ್ಕಾಲಿಕ ಗೌರ್ನರ್ ಜನರಲ್, ಹಾಲೆಂಡ್‌ನಲ್ಲಿ ಅಂಗರಕ್ಷಕನಾಗಿದ್ದನು. ಮೂರನೆಯ ವರ್ಷ ಅವನಿಗೆ ಯುದ್ಧದಲ್ಲಿ ಪಾಲ್ಗೊಳ್ಳುವ ಅವಕಾಶ ದೊರೆಯಿತು. ಬ್ರಿಗೇಡಿಯರ್ ಮೇಜರ್ ಆಗಿ ಹಾಗೂ ಕರ್ನಲ್ ಸ್ಟೂವರ್ಟ್‌ರ ಅಂಗರಕ್ಷಕನಾಗಿ ಬಡ್ತಿ ಪಡೆದನು. ವಿಲ್ಕ್ಸ್ ನಾಲ್ಕನೇ ಆಂಗ್ಲೋ–ಮೈಸೂರು ಯುದ್ಧದಲ್ಲಿಯೂ ಭಾಗವಹಿಸಿದ್ದನು. ಅನಂತರ ಲೆಫ್ಟಿನೆಂಟ್ ಕರ್ನಲ್ ಮಾಡಲಾಯಿತು. ಮದ್ರಾಸ್ ಪ್ರೆಸಿಡೆನ್ಸಿಯ ಗೌರ್ನರ್‌ನ ಕಾರ್ಯದರ್ಶಿಯಾಗಿ ನೇಮಿಸಲಾಯಿತು. ವಿಲ್ಕ್ಸ್‌ನ ಈ ಮೂರು ಸಂಪುಟಗಳಲ್ಲಿ ಯುದ್ಧಗಳು ಮತ್ತು ರಾಜಕೀಯ ಬೆಳವಣಿಗೆಗಳ ಮೇಲೆ ಹೆಚ್ಚು ಕೇಂದ್ರೀ ಕೃತವಾಗಿದ್ದು ಮೈಸೂರಿನ ಇತಿಹಾಸವನ್ನು ನಿರೂಪಿಸುತ್ತದೆ. ಈ

ಕೃತಿಯಲ್ಲಿನ ಹೇಳಿಕೆಗಳು ಇವತ್ತಿನ ಸಂದರ್ಭದಲ್ಲಿ ಬ್ರಿಟಿಷ್ ಲೇಖಕರ ಪಕ್ಷಪಾತ ಧೋರಣೆ ಮತ್ತು ಪೂರ್ವಗ್ರಹಕ್ಕೆ ಒಂದು ಅತ್ಯುತ್ತಮ ನಿದರ್ಶನ.

ವಿಲ್ಕ್ಸ್ ಹಿಂದೂ ಆಡಳಿತದ ಮೂಲದಿಂದ ೧೭೬೯ರಲ್ಲಿ ಮುಸ್ಲಿಂ ವಂಶಾಡಳಿತದ ಅಂತ್ಯದವರೆಗಿನ ಮೈಸೂರು ಇತಿಹಾಸದ ಜಾಡು ಹಿಡಿಯುವ ಪ್ರಯತ್ನವಾಗಿ ದಕ್ಷಿಣ ಭಾರತದ ಐತಿಹಾಸಿಕ ಚಿತ್ರಗಳ ಅಂಶಗಳನ್ನು ವಿವರಿಸುತ್ತಾ ಹೋಗುತ್ತಾನೆ. ಇವನು ಟಿಪ್ಪು ಸುಲ್ತಾನನ ಆಡಳಿತ ಕಾಲದ ಇತಿಹಾಸ ರಚಿಸುವಾಗ ಅವನಿಗೆ ಬ್ರಿಟಿಷರ ಕಡುವೈರಿಯಾದ ಟಿಪ್ಪು ಸುಲ್ತಾನನ ಮೇಲೆ ಇಲ್ಲಸಲ್ಲದ ಅಪವಾದವನ್ನು ಮಾಡಿದ್ದಾನೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಮೈಸೂರು ಒಡೆಯರು ಅವರ ಸಾಮಂತರಾಗಿದ್ದರು. ಶ್ರೀರಂಗಪಟ್ಟಣದ ವಿಭಾಗದಲ್ಲಿ ೩೩ ಪಟ್ಟಣದ ತೆರಿಗೆ ನೀಡುವ ಅಧಿಕಾರವನ್ನು ನೋಡಿಕೊಳ್ಳುತ್ತಿದ್ದರು(ಪು.೧೩). ವಿಜಯನಗರ ಸಾಮ್ರಾಜ್ಯದ ಪತನದ ನಂತರ ರಾಜ ಒಡೆಯರು ಅಧಿಕಾರವನ್ನು ವಹಿಸಿಕೊಂಡಿದ್ದರು. ರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನವು ವಿಸ್ತಾರಗೊಂಡಿತು ಎಂಬುದು ಪ್ರಮುಖ. ಇಲ್ಲಿ ಮುಖ್ಯವಾಗಿ ಅಲಮೇಲಮ್ಮನ ಶಾಪದ ಬಗೆಗೆ ವಿವರಿಸಿರುವುದನ್ನು ನೋಡಬಹುದು(ಪು.೨೬). ಹಾಗೆಯೇ ಮೈಸೂರು ಒಡೆಯರ ಮತ್ತು ಮರಾಠರ ಸಂಬಂಧಗಳನ್ನು ವಿವರಿಸಿದ್ದಾರೆ. ರಾಜ ಒಡೆಯರ ನಂತರ ಮೈಸೂರು ಒಡೆಯರ ಚರಿತ್ರೆಯಲ್ಲಿ ಪ್ರಮುಖರಾಗಿ ಗುರುತಿಸಲ್ಪಡುವವರೆಂದರೆ ಚಿಕ್ಕದೇವರಾಜ ಒಡೆಯರು. ಇವರ ಕಾಲದ ಆಡಳಿತದ ಕಡೆಗೆ ಸೂಕ್ಷ್ಮವಾಗಿ ಗಮನ ಹರಿಸಿದ್ದಾರೆ.

ವಿಲ್ಕ್ಸ್‌ನು ತೆರಿಗೆಯ ವಿವರ ನೀಡುತ್ತಾ ತನ್ನ ವರದಿಯಲ್ಲಿ ಸಾಮಾನ್ಯವಾಗಿ ಮೈಸೂರಿನ ಭಾಗದ ಹೊಲಗಳಿಗೆ ಮೂರನೇ ಒಂದು ಭಾಗವನ್ನೂ, ಗದ್ದೆಗಳಿಗೆ ಅರ್ಧಭಾಗವನ್ನು ತೆರಿಗೆಯಾಗಿ ಸಂಗ್ರಹಿಸಲಾಗುತ್ತಿದ್ದಿತು ಎಂದು ಹೇಳುತ್ತಾನೆ. ಆದರೆ ಇದು ವಾಸ್ತವಿಕವಾಗಿ ದೂರವಾದುದ್ದು ಕೃಷಿಯ ವಾಸ್ತವ ಚಿತ್ರಣವೇ ಬೇರೆ ಇದೆ. ನೆಲವು ಪಾಳು ಬಿದ್ದಿದೆ. ಕೃಷಿ ಮಾಡಿ ಎಂದು ಜನರಿಗೆ ಆಹ್ವಾನ ನೀಡಿದ್ದರೂ ತೆರಿಗೆ ಹಣವೇ ಹೆಚ್ಚಾಗಿದ್ದರಿಂದ ಕೃಷಿಯು ದೊಡ್ಡ ಹೊರೆ ಎಂದು ಜನರು ಭಾವಿಸಿದ್ದರು. ಜಮೀನ್ದಾರರು ಇಲ್ಲಿನ ತೆರಿಗೆ ಸಂಗ್ರಹವನ್ನು ನೋಡಿಕೊಳ್ಳುತ್ತಿದ್ದರು. ಹಾಗೆಯೇ ಗೌಡ, ಪಟೇಲ, ಶಾನುಭೋಗರು, ನೀರಗಂಟಿ, ಜ್ಯೋತಿಷಿಗಳ ಕಾರ್ಯಗಳನ್ನು ನೋಡಬಹುದು. ಆಡಳಿತದ ಶ್ರೇಣೀಕರಣದಲ್ಲಿ ಇವರ ಜವಾಬ್ದಾರಿಗಳನ್ನು ತಿಳಿಸಿದ್ದಾರೆ(ಪು.೭೧-೭೩). ಭಾರತದಲ್ಲಿ ಭೂ ಒಡೆತನ ಹೇಗೆ ಇರುತ್ತದೆ ಎಂಬ ವಿವರಗಳನ್ನು ಕೂಡ ನೋಡಬಹುದು. ಹೀಗಾಗಿ ಇಲ್ಲಿಯ ಹಳ್ಳಿಗಳಲ್ಲಿನ ಆಡಳಿತ, ಆಯಗಾರ ಪದ್ಧತಿ ಮುಂತಾದವುಗಳನ್ನು ಕುರಿತು ವಿಸ್ತೃತವಾಗಿ ಬರೆದಿದ್ದಾನೆ.

ವಿಲ್ಕ್ಸ್ ಸಿಂಹಾಸನಕ್ಕಾಗಿ ಅರಮನೆಯಲ್ಲಿ ನಡೆದ ರಕ್ತಪಾತ, ಹಲವಾರು ಕೊಲೆ, ಸಂಘರ್ಷಗಳನ್ನು ಕುರಿತು ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಅಮಾನವೀಯ ತೆರಿಗೆಗಳು, ಶಿಕ್ಷೆಗಳ ಬಗೆಗೆ ವಿವರಿಸಿರುವುದನ್ನು ನೋಡಬಹುದು. ಅಂದು ವಿಧಿಸಿದ್ದ ತೆರಿಗೆಗಳನ್ನು ವಿರೋಧಿಸಿ, ತೆರಿಗೆ ಕಡಿಮೆ ಮಾಡುವವರೆಗೂ ಭೂಮಿಯನ್ನು

ಉಳುವುದೇ ಬೇಡವೆಂದು ರೈತರನ್ನು ಸಂಘಟಿಸುತ್ತಿದ್ದ ಜಂಗಮರನ್ನು ಕುತಂತ್ರದಿಂದ ಕೊಲ್ಲಿಸಿದ ಕ್ರೌರ್ಯವನ್ನು ಇಲ್ಲಿ ತಿಳಿಸಿದ್ದಾರೆ. ಒಂದು ರೀತಿಯಲ್ಲಿ ಆ ಕಾಲಕ್ಕೆ ಇದು ಅದ್ಭುತವಾದ ಸಂಘಟನೆ. ಆದರೆ ರಾಜನಿಗೆ ಈ ಕ್ರಮ 'ರಾಜದ್ರೋಹ'. ಆದ್ದರಿಂದ ಅವರಿಗೆ ಮರಣದಂಡನೆ ಎಂಬುದನ್ನು ವಿಲ್ಕ್ಸ್ ವಿವರಿಸುತ್ತಾರೆ(ಪು.೧೨೮-೧೩೮). ವಿಲ್ಕ್ಸ್ ಆ ಕಾಲದಲ್ಲಿ ಜನಸಾಮಾನ್ಯರಿಗೆ ಸುಲಭವಾಗಿ ದೊರೆಯಲಾರದಂಥ ಹಲವಾರು ಗೌಪ್ಯ ವಿವರಗಳ ಬಗ್ಗೆ ತಿಳಿಸಿರು ವುದನ್ನು ನೋಡಬಹುದು. ಒಡೆಯರ ವಂಶದ ವಿವಿಧ ಮನೆತನಗಳ ನಡುವೆ ರಾಜ್ಯಾಧಿಕಾರಕ್ಕಾಗಿ ನಡೆದ ಈ ಕುತಂತ್ರಗಳ ಬಗೆಗೆ ವಿಲ್ಕ್ಸ್ ವಿವರಿಸುತ್ತಾರೆ. ಸಿಂಹಾಸನಾಧೀಶರು ರಾಜತ್ವಕ್ಕೇರಿದ ಬಗೆಯನ್ನು ಗಮನಿಸಿ ಹೇಳುವುದಾದರೆ ಅಧಿಕಾರವು ವಂಶಪಾರಂಪರ್ಯವಾದದ್ದು ಎನ್ನುವ ಕಲ್ಪನೆ ಹುರುಳಿಲ್ಲದ್ದು, ರಾಜ್ಯಾಧಿಕಾರ ವಹಿಸಿಕೊಂಡವರೆಲ್ಲಾ ಒಳಸಂಚು, ಷಡ್ಯಂತ್ರ ಮತ್ತು ಹುಸಿ ಅಧಿಕಾರದ ಹಕ್ಕುಗಳ ಮೂಲಕವೇ ಬಹುತೇಕ ಪಟ್ಟಕ್ಕೇರಿದವರು. ಆದ್ದರಿಂದ ಅವರು ಹಿಂದೂ ಆಗಿರಲಿ, ಮುಸಲ್ಮಾನರಾಗಲಿ, ಈ ಸಿಂಹಾಸನಕ್ಕಾಗಿ ನಡೆದ ಮೇಲಾಟಗಳು ನಮ್ಮ ಗಂಭೀರ ಚಿಂತನೆಗೆ ಯೋಗ್ಯವಾದುದಲ್ಲ ಎಂದು ವಿಲ್ಕ್ಸ್ ವಿವರಿಸುವುದನ್ನು ಎಸ್.ಚಂದ್ರಶೇಖರ್ ಅವರು ಚರ್ಚಿಸಿದ್ದಾರೆ(ವಸಾಹತುಕಾಲೀನ ಕರ್ನಾಟಕ. ಪು.೧೫). ಮುಸ್ಲಿಂ ರಾಜಮನೆತನಗಳಲ್ಲಿ ಮಾತ್ರ ನಡೆಯುತ್ತಿದ್ದ ಎನ್ನಲಾದ ಈ ರೀತಿಯ ಭಯಾನಕ ಕೃತ್ಯಗಳ ಬಗ್ಗೆ ತಿಳಿದಿರುವವರಿಗೆ, ಒಡೆಯರ ಅರಮನೆಯಲ್ಲಿ ನಡೆದ ಕೃತ್ಯಗಳು ಕ್ರೂರವಾಗಿದ್ದು, ಹಿಂದೂ ಮನೆತನಗಳು ಈ ವಿಷಯದಲ್ಲಿ ಹಿಂದುಳಿದಿರಲಿಲ್ಲವೆನ್ನುವ ಸತ್ಯವನ್ನು ಮನಗಾಣಿಸುತ್ತವೆ. ಮುಖ್ಯವಾಗಿ ಆ ಕಾಲದಲ್ಲಿ ರಾಜ್ಯಾಧಿಕಾರಕ್ಕಾಗಿ ಸಂಚು ನಡೆಯುತ್ತಿದ್ದದ್ದು ಸರ್ವೇ ಸಾಮಾನ್ಯ. ಅದು ಯಾವ ನಿರ್ದಿಷ್ಟ ಧರ್ಮೀಯರ ಸೊತ್ತೇನೂ ಆಗಿರಲಿಲ್ಲವೆನ್ನುವುದು ವೇದ್ಯವಾಗುತ್ತದೆ.[೯]

ಹೈದರಾಲಿಯು ರಾಜ್ಯಸೂತ್ರಗಳನ್ನು ವಹಿಸಿಕೊಂಡ ಕಾಲವೆಂದರೆ ಭಾರತದ ಇತಿಹಾಸದಲ್ಲೇ ಅದೊಂದು ಸಂದಿಗ್ಧ ಕಾಲವಾಗಿತ್ತು. ದಕ್ಷಿಣದಲ್ಲಿ ನಿಜಾಮರು, ಮರಾಠರು ಪೈಪೋಟಿ ನಡೆಸುತ್ತಿದ್ದರು. ಇಲ್ಲಿ ಹೈದರಾಲಿಯು ಮರಾಠರೊಂದಿಗೆ ಒಪ್ಪಂದ ಮಾಡಿಕೊಂಡನು. ಹೈದರಾಲಿಯು ಅಧಿಕಾರಕ್ಕೆ ಬರುವ ಮೊದಲೇ ಮೈಸೂರು ಸಂಸ್ಥಾನದಲ್ಲಿ ಸ್ಥಳೀಯ ಸಾಮಂತರಾದ ದೇಶ್‌ಮುಖರು, ಪಾಳೆಯಗಾರರು, ಗೌಡರು ಮತ್ತು ಪಟೇಲರ ದೌರ್ಜನ್ಯವಿತ್ತು. ತಮ್ಮ ಒಡೆಯರಿಗೆ ಸ್ವಾಮಿನಿಷ್ಠೆಯ ಮೂಲಕ ಕೆಲವು ಕೃಷಿ ಉತ್ಪಾದನೆ ಮತ್ತು ತೆರಿಗೆ ಆದಾಯದಲ್ಲಿ ಪಾಲುದಾರಿಕೆ ಹೊಂದಿ ದಬ್ಬಾಳಿಕೆ ನಡೆಸುತ್ತಿದ್ದರು. ಅನಂತರ ಹೈದರಾಲಿಯು ಈ ಪದ್ಧತಿಗೆ ಬದಲಾಗಿ ಬೇರೆ ಪದ್ಧತಿಯನ್ನು ಜಾರಿಗೆ ತಂದು ಸ್ಥಳೀಯ ಪಾಳೆಯಗಾರರು, ಪಟೇಲರು, ಗೌಡರು ಇವರೆಲ್ಲರೂ ಪಡೆದ ಸೌಲಭ್ಯಗಳು ಶಾಶ್ವತವಾದುದಲ್ಲ ಎಂದು ಹೇಳಿ ಅವರ ದಬ್ಬಾಳಿಕೆಯನ್ನು ಅಡಗಿಸಿದನು. ತಾನೇ ನೇಮಕ ಮಾಡಿದ ಅಧಿಕಾರಿಗಳು ತೆರಿಗೆ ವಸೂಲಿ ಮಾಡುವಂತೆ ವ್ಯವಸ್ಥೆ ಮಾಡಿದನು. ಇದರಿಂದ ರಾಜ್ಯದ ಬೊಕ್ಕಸಕ್ಕೆ ಹೆಚ್ಚಿನ ಹಣ ಸೇರಿತು. ಇದರ ಮೂಲಕ ಆತನ ಸೈನ್ಯ ಕಟ್ಟಲು ನೆರವಾಯಿತು ಎಂದು ವಿಲ್ಕ್ಸ್‌ನು ವಿವರಿಸುತ್ತಾನೆ(ಪು.೧೭೨-೧೭೩).

ಬ್ರಿಟಿಷರು ಮಂಗಳೂರಿನ ಮೇಲೆ ದಾಳಿ ಮಾಡಿ ಅದನ್ನು ವಶಕ್ಕೆ ತೆಗೆದುಕೊಂಡರು. ಈ ಸಮದಯಲ್ಲಿ ಮಂಗಳೂರಿನ ಕ್ರೈಸ್ತರು ಬ್ರಿಟಿಷರ ಪರವಾಗಿದ್ದರು. ಬ್ರಿಟಿಷರಿಗೆ ಈ ರೀತಿಯ ಸಹಾಯ ಮಾಡಿದ್ದರಿಂದ ಕರಾವಳಿ ಕ್ರೈಸ್ತರನ್ನು ದ್ವೇಷಿಸುತ್ತಾ ವಿಭಿನ್ನ ರೀತಿಯಲ್ಲಿ ನಡೆದುಕೊಂಡನು ಎಂಬುದನ್ನು ತಿಳಿಯಬಹುದು(ಪು.೩೩೧). ಮರಾಠರ ಪ್ರಾಬಲ್ಯವನ್ನು ಅಡಗಿಸಲು ಕೆಲವೊಂದು ತಂತ್ರಗಳನ್ನು ಬಳಸಿಕೊಂಡನು. ಅಲ್ಲದೇ ಚಿತ್ರದುರ್ಗದ ಪಾಳೆಯ ಗಾರನಾದ ಮದಕರಿನಾಯಕನ ಮೇಲೆ ಎರಡನೇ ಬಾರಿ ಯುದ್ಧ ಕೈಗೊಂಡನು. ಈ ರೀತಿಯಾಗಿ ಹೈದರಾಲಿಯ ಯುದ್ಧಗಳ ವಿವರಗಳನ್ನು ಈ ಸಂಪುಟದಲ್ಲಿ ತಿಳಿಯಬಹುದಾಗಿದೆ.

ಅದೇ ರೀತಿ ಟಿಪ್ಪು ಸುಲ್ತಾನನು ಇದೇ ಹಾದಿಯಲ್ಲಿ ನಡೆಯತೊಡಗಿದನು. ಟಿಪ್ಪು ಸುಲ್ತಾನನ ಆಡಳಿತಾವಧಿಯಲ್ಲಿ ಕೊಡಗಿನಲ್ಲಿ ಭೀಕರ ದಂಗೆ ಕಾಣಿಸಿಕೊಂಡಿತು. ಅಲ್ಲಿನ ದಂಗೆ ಅಡಗಿಸಿ, ಜನರನ್ನು ಬಲವಂತವಾಗಿ ಮತಾಂತರಗೊಳಿಸಿದನು ಎಂಬ ವಿವರಗಳನ್ನು ನೀಡಿದ್ದಾರೆ. ಕೊಡಗಿನಲ್ಲಿ ಮತಾಂತರ ಆದಂತೆ ಜನರು ಕಾಡಿನೊಳಗೆ ಆಶ್ರಯ ಪಡೆದರು. ಇಲ್ಲಿ ಸುಮಾರು ೭೦,೦೦೦ ಹಿಂದೂಗಳನ್ನು ಇಸ್ಲಾಂಗೆ ಮತಾಂತರ ಮಾಡಿದನು ಎಂದು ವಿಲ್ಕ್ಸ್ ತಿಳಿಸುತ್ತಾನೆ (ಸಂ.೨, ಪು.೨೮೨-೨೮೩). ಆದರೆ ಇಲ್ಲಿ ರಾಜಕೀಯ ತುರ್ತುಗಳು ಏದ್ದವು ಎಂಬುದನ್ನು ಗಮನಿಸುವುದು ಸೂಕ್ತವಾಗಿದೆ. ಬ್ರಿಟಿಷರನ್ನು ಹೊಡೆದೋಡಿಸಲು ಈತನು ವಿದೇಶಿ ರಾಷ್ಟ್ರ ಗಳೊಂದಿಗೆ ಸ್ನೇಹ ಸಂಪಾದಿಸಲು ಪ್ರಯತ್ನಿಸಿದನು ಎಂಬುದು ಮುಖ್ಯ

ಟಿಪ್ಪುವಿನ ಸುಧಾರಣೆಗಳು ಬ್ರಿಟಿಷರಿಗೆ ತೊಂದರೆ ಎಂಬಂತೆ ವಿಲ್ಕ್ಸ್ ಚಿತ್ರಿಸುತ್ತಾ ಹೋಗುತ್ತಾನೆ. ಟಿಪ್ಪು ಹೊಸ ಬದಲಾವಣೆಗಳನ್ನು ತನ್ನ ಗುರಿ ಸಾಧಿಸಲು ಸುಮ್ಮನೆ ಕುಳಿತು ಮಾಡುತ್ತಿದ್ದನು ಎನ್ನುತ್ತಾನೆ. ಆದರೆ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ವಿರೋಧವಾಗಿ ಬರೆದ ವಿಲ್ಕ್ಸ್ ಹೈದರಾಲಿಯ ಗುಣವನ್ನು ಒಪ್ಪಿಕೊಳ್ಳುತ್ತಾನೆ. ಹೈದರಾಲಿ ಸಾಮಾನ್ಯವಾಗಿ ಧಾರ್ಮಿಕ ಸಹಿಷ್ಣು ಆಗಿದ್ದನೆಂಬುದು ಅವನು ತನ್ನ ಆಡಳಿತಾವಧಿಯಲ್ಲಿ ಇತರ ಪ್ರಜೆಗಳ ಬಗೆಗೆ ಅನುಸರಿಸಿದ ಧೋರಣೆ ಎನ್ನಬಹುದು. ಹೈದರಾಲಿ ಧರ್ಮಸಹಿಷ್ಣುನಾಗಿದ್ದ ಎನ್ನುವುದಕ್ಕೆ ಕೆಲವು ವಿಚಾರಗಳನ್ನು ತಿಳಿಸುತ್ತಾನೆ. ಶ್ರೀರಂಗಪಟ್ಟಣ ದೇವಾಲಯದಲ್ಲಿನ ಬೃಹತ್ ಮೂರ್ತಿ ಯಾವ ಆಧ್ಯಾತ್ಮಿಕ ಪ್ರತೀಕವಾಗಿತ್ತೋ ಹೈದರಾಲಿಯು ಕೂಡ ತನ್ನದೇ ಆದ ಭಕ್ತಿಯನ್ನು ಹೊಂದಿದ್ದನು. ಹೈದರಾಲಿಯು ಹಿಂದೂ ದೇವರನ್ನು ಮತ್ತು ಬ್ರಾಹ್ಮಣರನ್ನು ದ್ವೇಷಿಸುತ್ತಿರಲಿಲ್ಲ. ಅವರಿಗೆ ದಾನ ದತ್ತಿಗಳನ್ನು ನೀಡುತ್ತಿದ್ದ ಎಂದಿದ್ದಾನೆ. ಇದಕ್ಕೆ ಉದಾಹರಣೆ ಯಾಗಿ ಅನೇಕ ಸ್ಥಳಗಳಲ್ಲಿ ಬ್ರಾಹ್ಮಣರಿಗೆ ಅಗ್ರಹಾರಗಳನ್ನು ನೀಡಿರುವುದನ್ನು ನೋಡಬಹುದು. ಅಲ್ಲದೇ ಶೃಂಗೇರಿ ಮಠಕ್ಕೆ ಅನೇಕ ದಾನ ದತ್ತಿಗಳನ್ನು ನೀಡಿರುವುದನ್ನು ಗಮನಿಸಬಹುದಾಗಿದೆ. ಹಾಗೆಯೇ ಮೈಸೂರಿನ ಸೇನೆ ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಶ್ರೀರಂಗನಾಥ ಸ್ವಾಮಿ ದೇವಾಲಯದ ಅರ್ಚಕರು ಬರುವವರೆಗೂ ಪೂಜೆಗಾಗಿ ಕಾಯುತ್ತಿದ್ದು, ನಿತ್ಯವೂ ಪೂಜೆ ಸಲ್ಲಿಸಲು ವ್ಯವಸ್ಥೆ ಮಾಡಿದನೆಂಬುದು ದಾಖಲೆಯಾಗಿದೆ(ಸಂ.೨, ಪು.೭೫೮). ಆದರೆ ಕರಾವಳಿ ಕ್ರೈಸ್ತರ ಬಗೆಗೆ ಹೈದರಾಲಿ ಅಸಮಾಧಾನಗೊಂಡಿದ್ದನು. ಬ್ರಿಟಿಷರು ಕರಾವಳಿಯ ಮೇಲೆ ದಾಳಿ ಮಾಡಿದಾಗ ಕ್ರೈಸ್ತರು ಹೈದರಾಲಿಯ ಸಹಾಯಕ್ಕೆ ಬರಲಿಲ್ಲ. ಅದಕ್ಕಾಗಿ

ಹೈದರಾಲಿ ರೊಚ್ಚಿಗೆದ್ದು ಕ್ರೈಸ್ತರು ಆಶ್ರಯ ಪಡೆದಿದ್ದ ಕೋಟೆಗೆ ಬೆಂಕಿ ಇಡಬೇಕೆಂದು ಸಾರಿದನು. ಇದಕ್ಕಾಗಿ ಕ್ರೈಸ್ತರು ಬ್ರಿಟಿಷರ ಸಹಾಯ ಕೇಳಿದಾಗ ಹೈದರಾಲಿಯನ್ನು ಬ್ರಿಟಿಷರು ಸೋಲಿಸಿ ಮಂಗಳೂರಿನ ವಶಕ್ಕೆ ಸುಲಭ ದಾರಿ ಮಾಡಿಕೊಂಡರು. ಇದರಿಂದ ಹೈದರಾಲಿ ಈ ಕ್ರೈಸ್ತರನ್ನು ದ್ವೇಷಿಸಲೇಬೇಕಾಯಿತು. ಇಲ್ಲಿನ ರಾಜಕೀಯ ತುರ್ತುಗಳನ್ನು ಗಮನಿಸಬೇಕಾಗಿರುವುದು ಅವಶ್ಯವಾಗಿದೆ.

ಒಟ್ಟಾರೆಯಾಗಿ ಈ ಸಂಪುಟಗಳಲ್ಲಿ ವಿಲ್ಕ್ಸ್ ಮೈಸೂರು ಒಡೆಯರ ಚರಿತ್ರೆಯನ್ನು ವಿವರಿಸುತ್ತಾ ಹೋಗುತ್ತಾನೆ. ಇವನು ತಮ್ಮ ಸರ್ಕಾರದ ಒಡೆದು ಆಳುವ ನೀತಿಗೆ ಅನುಗುಣವಾಗಿ ೧೭೯೯ರ ಯುದ್ಧದಲ್ಲಿ ಭಾಗವಹಿಸಿದ ಹೈದರ್ ಮತ್ತು ಟಿಪ್ಪುವನ್ನು ಆಕ್ರಮಣಕಾರರು ಎನ್ನುವ ಮೂಲಕ ಬ್ರಿಟಿಷರ ದಾಳಿ ಅನಿವಾರ್ಯ ಎಂದು ಸಾಮ್ರಾಜ್ಯಶಾಹಿಯ ನೀತಿಯನ್ನು ಎತ್ತಿ ಹಿಡಿದಿದ್ದಾನೆ. ಈತನು ಒಂದು ಮೂಲಭೂತ ಐತಿಹಾಸಿಕ ವಿಧಾನದ ಮೂಲಕ ವಿಜಯನಗರ ಸಾಮ್ರಾಜ್ಯದ ವಿಮೋಚನೆಯ ಚಾರಿತ್ರಿಕ ಘಟ್ಟವನ್ನು ಮತ್ತು ಬ್ರಿಟಿಷರು ದಕ್ಷಿಣ ಭಾರತದಲ್ಲಿ ಎದುರಿಸಿದ ರಾಜಕೀಯ ಪಲ್ಲಟಗಳನ್ನು ತಿಳಿಸಲು ಯತ್ನಿಸಿದನು. ಕಾಲಿನ್ ಮೆಕೆಂಝಿ ಸಂಗ್ರಹಿಸಿದ ವಸ್ತುಗಳು, ಶಿಲಾಶಾಸನಗಳ ಪುರಾವೆಗಳು ಇವನಿಗೆ ಸಹಾಯಕವಾದವು. ಮೊದಲು ಮಾಡಿದ ದೌರ್ಬಲ್ಯಗಳನ್ನು ಸರಿಪಡಿಸಲು ಸಾಮರ್ಥ್ಯ ಬೇಕು ಎಂದು ಎಡ್ವರ್ಡ್ ಸೈದ್ ಹೇಳಿದರು. ಪೌರಸ್ತ್ಯತೆಯ ಹಿನ್ನೆಲೆಯಲ್ಲಿ ನೋಡಿದಾಗ ದಕ್ಷಿಣ ಭಾರತದಲ್ಲಿ ವಿಲ್ಕ್ಸ್ ನೀಡಿದ ಚಿತ್ರಣಗಳು ನಂತರದ ವಸಾಹತು ಸೈದ್ಧಾಂತಿಕ ರಚನೆಯ ಗ್ರಂಥಗಳಲ್ಲಿ ಉಂಟಾದ ಏರಿಕೆ ಗುರುತನ್ನು ಈ ಸಿದ್ಧಾಂತ ಸೂಚಿಸುತ್ತದೆ. ಇವನು ನೀಡಿದ ಕುರುಹುಗಳನ್ನು ಇಂದಿಗೂ ಸಂಶೋಧನೆಗೆ ಒಳಪಡಿಸುವ ಒಂದು ವೈಯಕ್ತಿಕ ಫ್ಯಾಷನ್ ಆಗಿದೆ. ತತ್ವದ ಕ್ರಿಯೆಯಲ್ಲಿ ಒಂದು ಕ್ರಮಬದ್ಧ ಅಧ್ಯಯನ ಸಾಗುತ್ತದೆ ಎಂದು ಬರ್ಟನ್ ಸ್ಟೇನ್ ತಿಳಿಸುತ್ತಾರೆ. ವಿಲ್ಕ್ಸ್‌ನ ಕೃತಿಗಳಲ್ಲಿ ರಾಜಕೀಯ ಮತ್ತು ಆರ್ಥಿಕ ಆಸಕ್ತಿಗಳು ಒಂದು ಹೊಸ ಗ್ರಂಥಗಳ ಒಳಗೆ ಲಿಂಕ್ ಅರ್ಥವಾಗುವ ರೀತಿ ಇರುತ್ತದೆ ಎಂದು ರಾಬರ್ಟ್ ಆರ್ಮ್ಸ್ ಹೇಳಿದ್ದಾರೆ. ಕರ್ನಾಟಕದ ಯುದ್ಧಗಳಲ್ಲಿ ಆಂಗ್ಲೋ–ಮೈಸೂರು ಯುದ್ಧಗಳನ್ನು ನೋಡುತ್ತಾರೆ. ಮಿಲಿಟರಿ ಮತ್ತು ರಾಜಕೀಯ ಸಂದರ್ಭದಲ್ಲಿ ಬ್ರಿಟಿಷರ ಭರವಸೆಗಳು ಈಡೇರಿವೆ ಎಂದು ಬರ್ಟನ್ ಸ್ಟೇನ್ ಅವರು ವಿವರಿಸುತ್ತಾರೆ. ಆರಂಭಿಕ ಇತಿಹಾಸಕಾರರು ಭಾರತೀಯ ಸ್ಟೇಟ್‌ನ ಮಿಲಿಟರಿ ಕದನಗಳಲ್ಲಿ ಭಾಗವಹಿಸುವವರು ಮತ್ತು ತಮ್ಮ ಅಭಿಪ್ರಾಯಗಳನ್ನು ಅಗತ್ಯವಾಗಿ ತಮ್ಮ ಅನುಭವಗಳ ಬಣ್ಣದಲ್ಲಿ ರಚಿಸುತ್ತಾರೆ. ವಿಲ್ಕ್ಸ್‌ನ ಬರವಣಿಗೆಗಳಲ್ಲಿ ಮೂರು ಅಂಶಗಳನ್ನು ಗಮನಿಸಬಹುದು. ಮೊದಲನೆಯದಾಗಿ ಹದಿಮೂರನೇ ಶತಮಾನದ ಮೊದಲ ಬಾರಿಗೆ ಭಾರತದ ಪರ್ಯಾಯ ದ್ವೀಪದ ಇತಿಹಾಸದಲ್ಲಿ ಪರ್ಶಿಯನ್, ಕನ್ನಡ ಮತ್ತು ತೆಲುಗು ಈ ಮೂರು ಭಾಷೆಗಳಲ್ಲಿ ಇರುವ ಐತಿಹಾಸಿಕ ವಿಷಯಗಳ ರಚನೆ ಮೂಲಕ ನಿರಂತರ ನಿರೂಪಣೆ ಪುನಾರಚಿಸಲು ಸಮರ್ಥರಾದರು. ಎರಡನೆಯದಾಗಿ ಐತಿಹಾಸಿಕ ಘಟನೆಗಳು, ಯುದ್ಧಗಳು ಮತ್ತು ರಾಜಮನೆತನಗಳ ಪತನ ನಿರಂತರತೆಯನ್ನು, ರಚನಾತ್ಮಕ ಲಕ್ಷಣಗಳನ್ನು ಹಾಗೂ ಬದಲಾವಣೆಯ ಅನಿಶ್ಚಿತ ವೈಶಿಷ್ಟ್ಯಗಳನ್ನು ಸೂಕ್ಷ್ಮವಾಗಿ ಈ ಸಂದರ್ಭದಲ್ಲಿ ಗಮನಿಸಲಾಯಿತು. ಜ್ಞಾನೋದಯ

ಯೋಜನೆಗೆ ವಿಲ್ಕ್ಸ್ ಸೂಕ್ಷ್ಮ ನಾಗರಿಕ ಸಮಾಜದ ಮತ್ತು ರಾಜಕೀಯ ಶಕ್ತಿ ನಡುವಿನ ಸಂಪರ್ಕ ಕಂಡುಹಿಡಿಯಲು ಪ್ರಯತ್ನಿಸಿದರು. ದಕ್ಷಿಣ ಭಾರತೀಯ ಹಳ್ಳಿಗಳನ್ನು ಕಾರ್ಲ್ ಮಾರ್ಕ್ಸ್ ಬರಹಗಳ ಮೂಲಕ ಪಶ್ಚಿಮದ ಸಾಮಾಜಿಕ ಮತ್ತು ರಾಜಕೀಯ ಸಿದ್ಧಾಂತದ ಪ್ರವೇಶವಾಯಿತು. ಸ್ವಲ್ಪಮಟ್ಟಿಗೆ ಗಣರಾಜ್ಯದ ಪರಿಕಲ್ಪನೆಯನ್ನು ದಾಖಲಿಸಿದರು. ಹೈದರಾಲಿ ಮತ್ತು ಟಿಪ್ಪುಸುಲ್ತಾನರು ದಬ್ಬಾಳಿಕೆಯನ್ನು ರಾಜಕೀಯಕ್ಕೆ ಅಡಿಪಾಯವಾಗಿ ಹಾಕಿದರು. ಈ ಹಿನ್ನೆಲೆಯಲ್ಲಿ ಸಾಮಾಜಿಕ ರಚನೆಯ ಬದಲಾವಣೆ ಪರಿಸರವನ್ನು ವಿಶ್ಲೇಷಿಸಿದ್ದಾರೆ. ಸ್ವಲ್ಪಮಟ್ಟಿಗೆ ಗಣರಾಜ್ಯಗಳ ಐತಿಹಾಸಿಕ ಚಿತ್ರಣವು ಮಾರ್ಕ್ಸ್‌ವಾದಿ ನೆಲೆಯಲ್ಲಿ ಮೂಡಿಬಂದಿದೆ. ಮೈಸೂರು ಗ್ರಾಮೀಣ ಕೃಷಿಕ ಸಮುದಾಯಗಳ ಆರಂಭಿಕ ವಿವರಣೆಯನ್ನು ಇಲ್ಲಿ ವಿಲ್ಕ್ಸ್ ಉದಾಹರಿಸಿದರು.[೨೦] ಮೆಕೆಂಝಿಯ ಸಂಗ್ರಹದಿಂದ ವಿಲ್ಕ್ಸ್ ಮೈಸೂರು ಇತಿಹಾಸದ ಪುನರ್ನಿರ್ಮಾಣವನ್ನು ಮಾಡಲು ಮಾಹಿತಿಯನ್ನು ಪಡೆದಿದ್ದಾರೆ. ಇಲ್ಲಿ ಪೌರಸ್ತ್ಯ ನಿರಂಕುಶ ಪರಿಕಲ್ಪನೆಯನ್ನು ವಿಜಯನಗರ ಇತಿಹಾಸ ಅವರ ರಚನೆಯಲ್ಲಿ ಬಳಸಿರುವುದು ಗಮನ ಸೆಳೆದಿರುವುದನ್ನು ನೋಡಬಹುದು. ಈ ರೀತಿಯಾಗಿ ೧೮ನೇ ಶತಮಾನದ ರಾಜಕೀಯ ಪ್ರವಚನದಲ್ಲಿ ನಿರಂಕುಶದ ಕಲ್ಪನೆ ಸಂದರ್ಭೀಕರಣಗೊಳಿಸಲು ಪ್ರಯತ್ನಿಸಿದ್ದಾರೆ. ದಕ್ಷಿಣ ಭಾರತದ ಇತಿಹಾಸದ ವಿಚಾರಗಳನ್ನು ತಿಳಿಸಿದ್ದಾರೆ. ದಿವಾನ್ ಪೂರ್ಣಯ್ಯ ಅವರ ಬಗೆಗೆ ಹಠಮಾರಿ ಪ್ರಶ್ನೆಯನ್ನು ಇಲ್ಲಿ ಕಂಡುಕೊಳ್ಳಬಹುದು. ಕ್ರಿ.ಶ.೧೮೪೯ರ ನಂತರ ಟಿಪ್ಪುಸುಲ್ತಾನ್‌ನ ಆಡಳಿತದ ಬಗ್ಗೆ ಈಸ್ಟ್ ಇಂಡಿಯಾ ಕಂಪನಿಯ ಆಡಳಿತದ ವೃತ್ತಗಳಲ್ಲಿ ಚರ್ಚೆ ನಡೆದು ದೊಡ್ಡ ಸನ್ನಿವೇಶದಲ್ಲಿ ಈ ಪುಸ್ತಕಗಳಲ್ಲಿ ವಿಚಾರಗಳು ನೆಲೆಗೊಳ್ಳುವಂತೆ ಮಾಡಿದರು.

ವಿಲ್ಕ್ಸ್ ಹೈದರಾಲಿ ಮತ್ತು ಟಿಪ್ಪು ಮೈಸೂರಿನಲ್ಲಿ ಇಂಥದೇ ಕೃತ್ಯಗಳನ್ನು ಎಸಗಿದರು ಎಂದು ಸಮರ್ಥಿಸಲು ಹೊರಟು, ಮೈಸೂರು ಪ್ರಾಂತ್ಯ ಕುರಿತಾದ ಬ್ರಿಟಿಷ್ ಧೋರಣೆಯನ್ನು ವಿಶ್ಲೇಷಿಸುತ್ತಾರೆ. ಮೈಸೂರಿನಲ್ಲಿ ೧೭೬೧ರಲ್ಲಿ ಹೈದರಾಲಿ ಆಕ್ರಮಣ ಮಾಡುವ ಮೊದಲು ಇದ್ದ ಪ್ರಾಚೀನ ಹಿಂದೂ ಸಂಸ್ಕೃತಿ ಮತ್ತು ಸಂಪ್ರದಾಯವನ್ನು ಪುನರ್‌ನಿರ್ಮಿಸುವುದು ಬ್ರಿಟಿಷರ ಪ್ರಾಮಾಣಿಕ ಪ್ರಯತ್ನವೆಂದು ತಿಳಿಸುತ್ತಾನೆ. ಅಂದರೆ ಮೈಸೂರಿನಲ್ಲಿ ಹಿಂದೂ ಸಂಸ್ಕೃತಿ ಮತ್ತು ಜೀವನಕ್ರಮಗಳ ಅವನತಿಗೆ ಹೈದರಾಲಿಯ ಸೈನಿಕ ಕಾರ್ಯಾಚರಣೆ ಮತ್ತು ಅನಂತರ ಸ್ಥಾಪಿಸಿದ ಪ್ರಭುತ್ವದ ನಿಯಮಗಳು ಕಾರಣವೆಂದು ಪರೋಕ್ಷವಾಗಿ ಹೇಳಲಾಯಿತು. ಈ ರೀತಿಯ ಹೇಳಿಕೆಗಳಿಂದ ಜನತೆ ಹೈದರಾಲಿ ಮತ್ತು ಟಿಪ್ಪು ಪ್ರಭುತ್ವವನ್ನು ನಿರಾಕರಿಸಿ ಅವರ ವಿರುದ್ಧ ಸಿಡಿದೇಳಬೇಕು ಹಾಗೂ ಅವರು ಸ್ಥಾಪಿಸಿದ ಪ್ರಭುತ್ವ ನ್ಯಾಯಬಾಹಿರವೆಂದು ತಿಳಿಯಬೇಕು ಎಂಬುದು ಬ್ರಿಟಿಷ್ ಬರಹಗಾರರ ಆಶಯ. ಸಮಕಾಲೀನವಾಗಿ ಬೇರೆ ಯಾವ ರಾಜರು ಇವರಿಗೆ ಪೈಪೋಟಿ ಆಗಿರಲಿಲ್ಲ. ಆದುದರಿಂದ ಈ ರಾಜರ ಬಗೆಗೆ ವ್ಯತ್ಯಾಸಗಳನ್ನು ಬರೆಯಲಿಲ್ಲ. ಆದರೆ ಮೈಸೂರನ್ನು ವಶಪಡಿಸಿಕೊಳ್ಳಲು ಅಷ್ಟು ಸುಲಭವಾಗಿರದು ಎಂದು ಹೈದರಾಲಿ ಮತ್ತು ಟಿಪ್ಪುವನ್ನು ಸೋಲಿಸಲು ಈ ತಂತ್ರವನ್ನು ರೂಪಿಸಿದರು. ಇದೇ ಕಾರಣಕ್ಕಾಗಿ ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ಸ್ಥಳೀಯರಲ್ಲಿ ಕೆಟ್ಟ ಭಾವನೆ ಬೆಳೆಸುವ ಯೋಜನೆ ಇದಾಗಿತ್ತು.

ಮಾರ್ಕ್ ವಿಲ್ಕ್ಸ್ ಈ ಕೃತಿಯ ಸಂಪುಟಗಳಲ್ಲಿ ಬೇರೆಬೇರೆ ಕಾಲಘಟ್ಟಗಳಲ್ಲಿ ನಡೆದ ಈ ರೀತಿಯ ಹಿಂಸಾತ್ಮಕ ಘಟನೆಗಳನ್ನು ಚಿತ್ರಿಸುವ ಮೂಲಕ ಒಡೆಯರು ಮತ್ತು ಹೈದರ್, ಟಿಪ್ಪು ಆಡಳಿತಕ್ಕೆ ಪರ್ಯಾಯವಾದ ಬ್ರಿಟಿಷ್ ಆಡಳಿತ, ಜನರ ಹಿತದೃಷ್ಟಿಯಿಂದ ಅನಿವಾರ್ಯವಾಗಿತ್ತು ಎಂಬುದನ್ನು ಸಮರ್ಥಿಸುತ್ತಾನೆ. ಹೀಗೆ ವಸಾಹತುಶಾಹಿ ಆಡಳಿತವು ಗಟ್ಟಿಗೊಳ್ಳಲು ಬೇಕಾದ ಮಾಹಿತಿಗಳನ್ನು ತನ್ನ ಕೃತಿಯಲ್ಲಿ ನೀಡಿರುವುದನ್ನು ಮುಖ್ಯವೆಂದು ಭಾವಿಸುತ್ತಾನೆ. ಆದರೆ ಅರಮನೆಯಲ್ಲಿ ನಡೆದ ರಕ್ತಪಾತ, ಕೊಲೆ, ಸಂಘರ್ಷಗಳನ್ನು ದೇಶಿ ಇತಿಹಾಸಕಾರರು ಮರೆ ಮಾಚುತ್ತಾರೆ. ಇಲ್ಲಿ ಒಡೆಯರ ಆಡಳಿತದಲ್ಲಿದ್ದ ಕೆಲವು ವಾಸ್ತವ ಅಂಶಗಳನ್ನು ತಿಳಿಯಲು ಇವನ ಕೃತಿ ಅನಿವಾರ್ಯವಾಗಿದೆ. ಇವನು ದ್ವಂದ್ವತೆಯಲ್ಲಿ ಇತಿಹಾಸಕಾರರನ್ನು ದಾರಿ ತಪ್ಪಿಸುವ ಎರಡು ರೀತಿಯ ನಿಲುವನ್ನು ಹೊಂದಿದ್ದು, ಒಂದು ಕಡೆ ಅರಮನೆಯಲ್ಲಿ ನಡೆದ ಘಟನಾವಳಿಗಳು, ಮತ್ತೊಂದೆಡೆ ಹೈದರ್ ಮತ್ತು ಟಿಪ್ಪು ಬಗೆಗೆ ಹೇಳಿರುವ ವಿಷಯಗಳು ಇಂದಿಗೂ ಸಂಶೋಧನೆಗೆ ಒಳಪಡುತ್ತಿದ್ದು, ಕೆಲವೇ ಇತಿಹಾಸಕಾರರು ವಾಸ್ತವಿಕತೆಗೆ ಹತ್ತಿರವಾದ ಇತಿಹಾಸವನ್ನು ರಚನೆ ಮಾಡಿದ್ದು, ಇನ್ನೂ ಹೆಚ್ಚಿನ ಮಟ್ಟಿಗೆ ಇತಿಹಾಸಕಾರರು ಮತ್ತು ಸಂಶೋಧಕರು ಇತ್ತ ಕಡೆ ಗಮನ ಹರಿಸಬೇಕಾಗಿದೆ.

ಮೈಸೂರಿನ ಒಡೆಯರ ಚರಿತ್ರೆಯಲ್ಲಿ ಹೈದರಾಲಿಯನ್ನು ಚಾರಿತ್ರಿಕವಾಗಿ ಗುರುತಿಸಬಹುದು. ಇವನ ಬಗೆಗೆ ಅನೇಕ ಕೃತಿಗಳು ಹೊರ ಬಂದಿವೆ. **Selected Letters of Tipu Sultan**(ಅನು: ವಿಲಿಯಮ್ ಕಿರ್ಕ್ ಪ್ಯಾಟ್ರಿಕ್)(೧೮೧೧)[೩೧] ಎಂಬುದು ಒಂದು ಕೃತಿಯಾಗಿ ಹೊರಬಂದಿದೆ. ಈ ಕೃತಿಯು ಟಿಪ್ಪು ಬರೆದ ಪತ್ರಗಳ ಸಂಗ್ರಹದ ಆಕರವಾಗಿದೆ. ಟಿಪ್ಪುವಿಗೆ ಪತ್ರಗಳನ್ನು ಬರೆಯುವುದು ಅಭ್ಯಾಸವಾಗಿತ್ತು. ಅವನು ಬರೆದಿದ್ದ ನೂರಾರು ಪತ್ರಗಳು ಮತ್ತು ಇನ್ನಿತರ ಬರಹಗಳು ಅವನ ಸಾವಿನ ಅನಂತರ ಶ್ರೀರಂಗಪಟ್ಟಣದಲ್ಲಿ ದೊರೆತವು. ಈ ಪತ್ರಗಳು ಅವನ ಆಡಳಿತದ ವೈಖರಿಯನ್ನು ತಿಳಿಸುತ್ತವೆ ಎಂಬುದನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ.

ಕಬೀರ್ ಕೌಸರ್‌ನ **ಸಿಕ್ರೇಟ್ ಕರೆನ್ಸ್‌ಪಾಂಡೆನ್ಸ್ ಆಫ್ ಟಿಪ್ಪುಸುಲ್ತಾನ್**[೩೨] ಎಂಬ ಕೃತಿ ಪ್ರಮುಖವಾದುದು. ಈ ಕೃತಿಯಲ್ಲಿ ಟಿಪ್ಪು ಸುಲ್ತಾನ್ ಇತರರೊಂದಿಗೆ ನಡೆಸಿದ ಪತ್ರ ವ್ಯವಹಾರಗಳನ್ನು ತಿಳಿಸಿದ್ದಾರೆ. ಗೌರ್ನರ್ ಜನರಲ್ ಕಾರನ್‌ವಾಲೀಸ್‌ಗೆ ಢಾಕಾದ ನವಾಬ ಸೈಯದ್ ಅಲೀಖಾನ್ ನುಸ್ರತ್ ಜಂಗ್ ಕಳುಹಿಸಿದ ಅಭಿನಂದನ ಸಂದೇಶವನ್ನು ಇಲ್ಲಿ ನೋಡಬಹುದು. ಮೂರನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಸೋತ ಟಿಪ್ಪು ಶಾಂತಿ ಒಪ್ಪಂದಕ್ಕಾಗಿ ಮೊರೆಯಿಡುತ್ತಿದ್ದಾನೆ ಎಂಬುದನ್ನು ಕೇಳಿ ಸಂತೋಷಪಟ್ಟು ನವಾಬರು ಪ್ರಭುಗಳ ಪ್ರಯತ್ನಕ್ಕೆ ಭಗವಂತನು ಸದಾ ಯಶಸ್ಸನ್ನು ಅನುಗ್ರಹಿಸಲಿ ಎಂದು ಢಾಕಾದ ನವಾಬನಾದ ಸಯ್ಯದ್ ಅಲೀಖಾನ್ ನುಸ್ರತ್‌ಜಂಗ್ ಅಭಿನಂದನ ಸಂದೇಶವನ್ನು ಕಳುಹಿಸಿದನು(ಪು.೩೩). ಇದನ್ನು ನೋಡಿದಾಗ ಟಿಪ್ಪುವನ್ನು ಎಲ್ಲರೂ ದ್ವೇಷಿಸುತ್ತಿದ್ದರು ಎಂಬುದು ತಿಳಿಯುತ್ತದೆ.

ಟಿಪ್ಪು ಸುಲ್ತಾನ ಜಮಾನ್ ಶಾಹನಿಗೆ ಬರೆದ ಪತ್ರಗಳನ್ನು ಇಲ್ಲಿ ಗಮನಿಸಬಹುದು. ಮೈಸೂರು ರಾಜ್ಯವನ್ನು ಇಸ್ಲಾಮಿ ರಾಜ್ಯವಾಗಿ ಪರಿವರ್ತಿಸಿಬಿಟ್ಟಿದ್ದೇನೆ ಎಂಬ ವಿಚಾರದ ಬಗ್ಗೆ

ಟಿಪ್ಪು ತುಂಬಾ ಹೆಮ್ಮೆ ಪಟ್ಟುಕೊಳ್ಳುತ್ತಿದ್ದ. ಟಿಪ್ಪು ತನ್ನ ಪ್ರಸಿದ್ಧ ಇಸ್ಲಾಮಿ ಉದ್ಘೋಷಣೆಯನ್ನು ಹೊರಡಿಸಿದನು. ಧರ್ಮಭ್ರಷ್ಟರ(ಬಹುಶಃ ನಿಜಾಮ ಮತ್ತು ಕರ್ನಾಟಕದ ನವಾಬ) ಮತ್ತು ನಾಸ್ತಿಕರ(ಮರಾಠರ ಮತ್ತು ಬ್ರಿಟಿಷರ) ಪ್ರದೇಶಗಳಿಂದ ಹೊರಬಂದು, ಅಲ್ಲಾಹನ ಪ್ರಭುತ್ವದಲ್ಲಿ ಶರಣು ಪಡೆಯಿರಿ ನಿಮ್ಮ ಎಲ್ಲಾ ಆಸ್ತಿ-ಪಾಸ್ತಿಗಳು ಅಲ್ಲಾಹನ ಸಂರಕ್ಷಣೆಗೆ ಒಳಪಡುತ್ತವೆ ಎಂದು ಹೇಳುತ್ತಾನೆ. ಅಲ್ಲಾಹನ ನೆರವಿನಿಂದ ಹಾಗೂ ಖಾವಂದರ ಸತ್ಪ್ರಭಾವದಿಂದ ಆ ದೂರುಗಳನ್ನೆಲ್ಲ ತಮಗೆ ತೃಪ್ತಿಯಾಗುವ ರೀತಿಯಲ್ಲಿ ನಿವಾರಿಸಬೇಕೆಂದು ಹೇಳಿರುವ ವಿಷಯವನ್ನು ಈ ಪತ್ರಗಳ ಮೂಲಕ ತಿಳಿಸಿರುವುದನ್ನು ಇಲ್ಲಿ ನೋಡಬಹುದು. ಈ ನಿಟ್ಟಿನಲ್ಲಿ ಕೃತಿಯು ಪತ್ರಗಳ ಮೂಲಕ ಟಿಪ್ಪುವಿನ ಮನೋಚಿಂತನೆಯನ್ನು ಇಲ್ಲಿ ಚಿತ್ರಿಸಲಾಗಿದೆ.

ಹೈದರಾಲಿಯನ್ನು ಕುರಿತ ಕೃತಿಗಳಲ್ಲಿ ಮುಖ್ಯವಾದ ಕೃತಿ ಎಂದರೆ ಕಿರ್ಮಾನಿ ರಚಿಸಿದ **ದಿ ಹಿಸ್ಟರಿ ಆಫ್ ಹೈದರ್ ನಾಯಕ್**(೧೮೨೮).[೩೩] ಈ ಕೃತಿಯ ರಚನಾಕಾರನು ಟಿಪ್ಪುವಿನ ಸಮಕಾಲೀನನಾಗಿದ್ದನು. ಕಿರ್ಮಾನಿಯು ಒಬ್ಬ ಲೇಖಕನಂತೆ ಪದಪ್ರಯೋಗ ಮಾಡಿ ಹೊಗಳಿ ಬರೆಯುತ್ತಾನೆಯೋ ಹೊರತು ವಸ್ತುನಿಷ್ಠವಾಗಿ ಇತಿಹಾಸಕಾರನಂತೆ ಬರೆಯುವುದಿಲ್ಲ. ಇವನು ಬರೆದ **ನಿಶಾನ್-ಇ-ಹೈದರಿ** ಎಂಬ ಕೃತಿಯನ್ನು ಮೈಲ್ಸ್ ಇಂಗ್ಲಿಷ್ ಭಾಷೆಗೆ ಅನುವಾದಿಸಿ **ಹಿಸ್ಟರಿ ಆಫ್ ಹೈದರ್ ನಾಯಕ್**(೧೮೪೨) ಮತ್ತು **ದಿ ಹಿಸ್ಟರಿ ಆಫ್ ದಿ ರೀಜನ್ ಆಫ್ ಟಿಪ್ಪು ಸುಲ್ತಾನ್**(೧೮೪೪) ಎಂಬ ಎರಡು ಸಂಪುಟಗಳಲ್ಲಿ ಹೊರ ತಂದಿದ್ದಾನೆ. ಈ ಕೃತಿಯಲ್ಲಿ ಕೆಲವು ಘಟನೆಗಳನ್ನು ವಾಸ್ತವವಾಗಿ ಗ್ರಹಿಸಿ, ರಚಿಸಲು ಪ್ರಯತ್ನಿಸಿರುವುದನ್ನು ಕಾಣಬಹುದು. ಈ ಕೃತಿಯಲ್ಲಿ ಹೈದರಾಲಿಯ ಏಳಿಗೆ, ಹೈದರಾಲಿಯು ಸೈನಿಕನಾಗಿ ಮಾಡಿದ ಸಮರ್ಥ ಕಾರ್ಯಗಳ ವಿವರಗಳು ನಿರೂಪಿತವಾಗಿವೆ. ಆರ್ಕಾಟಿನ ಸಿಂಹಾಸನ ಉತ್ತರಾಧಿಕಾರಕ್ಕಾಗಿ ನಡೆದ ಜಗ್ಗಾಟದ ಪರಿಣಾಮವಾಗಿ ಜರುಗಿದ ೧೭೫೧ರ ಜಿಂಜಿ ಕಾಳಗದಲ್ಲಿ ಪ್ರಮುಖ ಪಾತ್ರ ವಹಿಸಿರುವುದು ತಿಳಿಯುತ್ತದೆ. ಹೈದರಾಲಿಯು ದಿಂಡಿಗಲ್‌ನ ಫೌಜುದಾರನಾದದ್ದು, ಅನಂತರ ಹಂತಹಂತವಾಗಿ ಉನ್ನತ ಹುದ್ದೆಗಳನ್ನು ಪಡೆಯುತ್ತಾ ಕೊನೆಗೆ ಮೈಸೂರು ಅರಸರನ್ನು ಮೂಲೆಗುಂಪು ಮಾಡಿ ಎಲ್ಲಾ ಅಧಿಕಾರವನ್ನು ತನ್ನಲ್ಲೇ ಕೇಂದ್ರೀಕರಿಸಿಕೊಂಡು ಆಡಳಿತ ನಡೆಸಿದ್ದ ವಿವರಗಳನ್ನು ಈ ಕೃತಿಯಲ್ಲಿ ಗಮನಿಸಬಹುದು.

ಹೈದರಾಲಿಯು ರಾಜ್ಯದ ವಿಸ್ತರಣೆಗೆ ರಾಜಕೀಯ ತಂತ್ರಗಾರಿಕೆಯಷ್ಟೇ ಮುಖ್ಯವಾಗಿ ಇತಿಹಾಸದಲ್ಲಿ ದಾಖಲಾಗುವುದು ಅವನ ಆಡಳಿತ ಮತ್ತು ಸೈನ್ಯದಲ್ಲಿ ತಂದ ಆಧುನಿಕತೆಯಿಂದ. ಸೈನ್ಯದ ಆಧುನೀಕರಣ ಮುಖ್ಯವಾದದು. ೬ರಿಂದ ೭ ಸಾವಿರ ಕುದುರೆಗಳ ಸೈನ್ಯದಿಂದ ನವಾಬನ ಸೈನ್ಯವನ್ನು ಎದುರಿಸಿತು ಎಂಬ ವಿವರಣೆ ಇದೆ. ಈ ಹಿನ್ನೆಲೆಯಲ್ಲಿ ಸೈನ್ಯದ ಬಲಾಢ್ಯತೆ ತಿಳಿಯುತ್ತದೆ. ಮರಾಠ ಮತ್ತು ನವಾಬರ ಸೈನ್ಯ ಯಾವ ರೀತಿಯ ಯುದ್ಧಗಳನ್ನು ಕೈಗೊಂಡರು ಎಂಬ ವಿವರಗಳನ್ನು ಇಲ್ಲಿ ಗಮನಿಸಬಹುದು(ಪು.೧೭೦). ಈ ನಿಟ್ಟಿನಲ್ಲಿ ಕೃತಿಯು ಪೂರ್ತಿಯಾಗಿ ಹೈದರಾಲಿಯ ಏಳಿಗೆ, ಮರಾಠ ಮತ್ತು ನಿಜಾಮರ ನಡುವಿನ ಯುದ್ಧಗಳ ಮಾಹಿತಿಗಳು ಹೆಚ್ಚಾಗಿ ಮೂಡಿಬಂದಿವೆ. ಹೈದರಾಲಿಯು ತನ್ನ ಸೈನಿಕ ಕಾರ್ಯಾಚರಣೆ ಯಲ್ಲಿ ಒಂದು ಹಿಂದೂ ದೇವಾಲಯವನ್ನು ಕೋಟೆಯಾಗಿ ಮಾರ್ಪಡಿಸಿದ್ದರ ವಿವರವನ್ನು

ನೋಡಬಹುದು(ಪು.೫೨೯). ಈ ಕೃತಿಯಲ್ಲಿ ಕಿರ್ಮಾನಿಯು ಹೈದರಾಲಿಯ ಸೈನಿಕ ಸಾಧನೆಗಳನ್ನು ಹೆಚ್ಚಾಗಿ ವಿವರಿಸಿದ್ದಾರೆ.

ಮೈಸೂರಿನ ಚರಿತ್ರೆಯಲ್ಲಿ ಅತ್ಯಂತ ತೀವ್ರವಾಗಿ ಚರಿತ್ರೆಕಾರರನ್ನು 'ಎಂಗೇಜ್' ಮಾಡಿರುವ ಚಾರಿತ್ರಿಕ ವ್ಯಕ್ತಿಯೆಂದರೆ ಟಿಪ್ಪು ಸುಲ್ತಾನ್. ಸುಮಾರು ಐವತ್ತಕ್ಕೂ ಮಿಗಿಲಾದ ಕೃತಿಗಳು ಟಿಪ್ಪು ಮತ್ತು ಅವನ ಕಾಲಕ್ಕೆ ಸಂಬಂಧಿಸಿದಂತೆ ರಚನೆಯಾಗಿರುವುದನ್ನು ಕಾಣುತ್ತೇವೆ. ಕೇವಲ ಮೈಸೂರಿನ ಚರಿತ್ರೆಕಾರರು ಮಾತ್ರವಲ್ಲ ಮೈಸೂರಿನಿಂದಾಚೆಗಿನ ಅನೇಕರು ಇವನ ಬಗೆಗೆ ಸಂಶೋಧನೆಯಲ್ಲಿ ತೊಡಗಿಸಿಕೊಂಡಿದ್ದಾರೆ. ಹೀಗಾಗಿ 'ಟಿಪ್ಪು' ಚರಿತ್ರೆ ಸಂಶೋಧನೆ ನಿರಂತರ 'ಡಿಸ್‌ಕೋರ್ಸ್'(ಸಂಕಥನಕ್ಕೆ) ಒಳಗಾದವನು. ಇಲ್ಲಿ ಮುಖ್ಯವಾಗಿ ಎರಡು ರೀತಿಯ ಪರಿಪ್ರೇಕ್ಷ್ಯಗಳ ಧಾರೆಗಳನ್ನು ಕಾಣುತ್ತೇವೆ. ಮೊದಲನೆಯದಾಗಿ ಅವನನ್ನು ನಿರಂಕುಶ, ಮತಾಂಧ ಎನ್ನುವ ನೆಲೆಯಲ್ಲಿ ಚಿತ್ರಿಸಿದರೆ, ಎರಡನೆಯದು ಅವನೊಬ್ಬ ದೂರದೃಷ್ಟಿಯ ನಾಯಕ, ಅನ್ವೇಷಕ, ಮತಸಹಿಷ್ಣು ಎನ್ನುವ ದೃಷ್ಟಿಕೋನದ್ದು. ವಿದೇಶಿ ಬರಹಗಾರರು ಹಾಗೂ ಚರಿತ್ರೆಕಾರರು ಅವನನ್ನು ಅಪ್ರತಿಮ ನಾಯಕ ಎನ್ನುವುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಅವನನ್ನು ಸಾಮ್ರಾಜ್ಯಶಾಹಿ ಶಕ್ತಿಯನ್ನು ವಿರೋಧಿಸುವ ನೆಲೆಗಳನ್ನು ಕಟ್ಟಿದವನು ಎಂದು ಚಿತ್ರಿಸುತ್ತಾರೆ. ಮೈಸೂರು ಚರಿತ್ರೆಯನ್ನು ಕುರಿತು ಬರೆದ ಆರಂಭಿಕ ಸ್ಥಳೀಯ ನೆಲೆಯ ಚರಿತ್ರೆಕಾರರು ಅವನನ್ನು ಮತಾಂಧ ಎಂತಲೇ ಚಿತ್ರಿಸಿದ್ದಾರೆ.[೩೪] ಹೀಗೆ ಚರಿತ್ರೆಕಾರರಲ್ಲಿ ದ್ವಂದ್ವತೆಯ ನೆಲೆಯನ್ನು ತಿಳಿಯುವುದು ಮುಖ್ಯ

ಟಿಪ್ಪು ಸುಲ್ತಾನನ ಬಗೆಗೆ ಅನೇಕ ಕೃತಿಗಳು ಪ್ರಕಟನೆಗೊಂಡು ಚರ್ಚೆಗೆ ಒಳಗಾಗಿವೆ. ಈ ಹಿನ್ನೆಲೆಯಲ್ಲಿ **ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್**(೧೮೬೪, ಮರುಮುದ್ರಣ ೧೮೭೪, ೧೯೮೦)[೩೫] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯ ರಚನಕಾರರಾದ ಹುಸ್ಸೇನ್ ಅಲಿಖಾನ್ ಕಿರ್ಮಾನಿಯು ಟಿಪ್ಪುವಿನ ಸಮಕಾಲೀನನಾಗಿದ್ದು, ಟಿಪ್ಪುವನ್ನು ಪರಮವೀರನೆಂದು ಚಿತ್ರಿಸುತ್ತಾನೆ. ಮೊದಲನೆಯದಾಗಿ ಮೈಸೂರು ಪ್ರದೇಶದ ರಾಜಕೀಯ ವಿಚಾರಗಳತ್ತ ಗಮನಿಸಬಹುದು. ಟಿಪ್ಪು ಅಧಿಕಾರವನ್ನು ವಹಿಸಿಕೊಂಡು ಎರಡನೆಯ ಆಂಗ್ಲೋ–ಮೈಸೂರು ಯುದ್ಧವನ್ನು ಮುಂದುವರಿಸಿದನು. ರೆವಿನ್ಯೂ ದಾಖಲೆಗಳನ್ನೆಲ್ಲ ಕನ್ನಡ ಮತ್ತು ಇತರ ಸ್ಥಳೀಯ ಭಾಷೆಗಳಿಗೆ ಬದಲಾಗಿ ಫಾರಸಿ ಭಾಷೆಯಲ್ಲಿಯೇ ಇಟ್ಟಿರಬೇಕು ಎಂಬುದಾಗಿ ಟಿಪ್ಪು ಅಪ್ಪಣೆ ಮಾಡಿದನು. ಇದರ ಪರಿಣಾಮವಾಗಿ, ರೆವಿನ್ಯೂ ಇಲಾಖೆಯಲ್ಲಿದ್ದ ಹಿಂದೂ ಸಿಬ್ಬಂದಿಗೆ ಬದಲಾಗಿ ಅಲ್ಲಿ ಮುಸ್ಲಿಂ ಸಿಬ್ಬಂದಿಯನ್ನು ನೇಮಿಸಲಾಯಿತು. ಇವರಲ್ಲಿ ಕೆಲವರಿಗೆ ಓದುವುದಾಗಲಿ, ಬರೆಯುವುದಾಗಲಿ ಬರುತ್ತಿರಲಿಲ್ಲ. ಭೋಗಜೀವನಕ್ಕೆ ಒಳಗಾಗಿದ್ದರು ಎಂಬುದನ್ನು ತಿಳಿಸುತ್ತಾ ಟಿಪ್ಪು ಇಸ್ಲಾಂಧರ್ಮಕ್ಕೆ ನೀಡಿದ ಪ್ರೋತ್ಸಾಹವನ್ನು ವಿವರಿಸುತ್ತಾರೆ. ಅವನ ಮಾತುಕತೆ, ರೀತಿ–ನೀತಿಗಳು ಸಂತೋಷಕರವಾಗಿದ್ದವು. ವಿದ್ವಾಂಸರ ಸ್ವಭಾವವನ್ನು ಅಳೆದು ನೋಡುವಲ್ಲಿ ಅವನು ತುಂಬಾ ಬುದ್ಧಿವಂತನಾಗಿದ್ದನು. ಇಸ್ಲಾಂಧರ್ಮಕ್ಕೆ ಹಾಗೂ ಸುನ್ನಿ ಸಂಪ್ರದಾಯ ಧಾರ್ಮಿಕ ಸೂತ್ರಗಳಿಗೆ ಅಥವಾ ಕಟ್ಟುಪಾಡುಗಳಿಗೆ ಪ್ರೋತ್ಸಾಹ ಮತ್ತು ರಕ್ಷಣೆ ನೀಡುವುದು ಅವನ ಮುಖ್ಯ ಗುರಿ ಹಾಗೂ ಧ್ಯೇಯ ಆಗಿತ್ತು. ನಿಷೇಧಿತ ಆಚರಣೆಗಳಿಂದ ಸ್ವತಃ ಅವನೇ ಹಿಂದೆ

ಸರಿದಿರುತ್ತಿದ್ದನು ಮಾತ್ರವಲ್ಲ, ಅಂಥ ಕಾರ್ಯಗಳನ್ನು ಎಸಗದಂತೆ ತನ್ನ ಸೇವಕರಿಗೆ ಅವನು ಕಟ್ಟಪ್ಪಣೆ ಮಾಡಿದನು ಎಂಬುದನ್ನು ಕಿರ್ಮಾನಿ ಈ ಕೃತಿಯಲ್ಲಿ ವಿವರಿಸುತ್ತಾ ಹೋಗುತ್ತಾನೆ(ಸಂ.೧, ಪು.೨೮೧).

ಮಂಗಳೂರು ಮತ್ತು ಮಲಬಾರ್‌ನಲ್ಲಿ ನಡೆದ ದಂಗೆಗಳಲ್ಲಿ ಬ್ರಿಟಿಷರ ವಿರುದ್ಧ ಜಯ ದೊರಕಿದ ನಂತರ ಟಿಪ್ಪು ಅಲ್ಲಿನ ಸಾವಿರಾರು ಕ್ರಿಶ್ಚಿಯನ್ನರಿಗೆ ಎರಡು ಆಯ್ಕೆಗಳನ್ನು ನೀಡಿದನು. ಒಂದು ಇಸ್ಲಾಂಧರ್ಮಕ್ಕೆ ಮತಾಂತರ, ಇನ್ನೊಂದು ಸಾವು. ಮತಾಂತರಕ್ಕೆ ಒಪ್ಪದಿದ್ದ ನೂರಾರು ಕ್ರಿಶ್ಚಿಯನ್ನರನ್ನು ಶ್ರೀರಂಗಪಟ್ಟಣಕ್ಕೆ ನಡೆಸಿಕೊಂಡು ಬಂದು ಅವರನ್ನು ಸೆರೆಯಲ್ಲಿಟ್ಟು ದಾಖಲಿಸುತ್ತಾರೆ. ಈ ವಿಷಯವಾಗಿ ಇಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಕ್ರಿಶ್ಚಿಯನ್ ಜನಾಂಗವು ಬ್ರಿಟಿಷರಿಗೆ ಟಿಪ್ಪು ವಿರುದ್ಧ ಸಹಾಯ ಮಾಡಿದ್ದು, ಟಿಪ್ಪು ಈ ರೀತಿ ನಡೆದುಕೊಳ್ಳಲು ಕಾರಣ ಎನ್ನಬಹುದು.

ಟಿಪ್ಪು ಪ್ರತಿಯೊಂದು ಪಟ್ಟಣದಲ್ಲಿಯೂ ಒಂದೊಂದು ಮಸೀದಿಯನ್ನು ಕಟ್ಟಿಸಿದನು. ಪ್ರತಿಯೊಂದಕ್ಕೂ ಒಬ್ಬೊಬ್ಬ 'ಮುಅಜ್ಜನ್', ಒಬ್ಬೊಬ್ಬ 'ಮೌಲ್ವಿ' ಮತ್ತು ಒಬ್ಬೊಬ್ಬ 'ಕಾಜಿ'ಯನ್ನು ನೇಮಿಸಿದನು. ತನ್ನ ಶಕ್ತಿ ಮೀರಿ ಮುಸಲ್ಮಾನರಿಗೆ ಶಿಕ್ಷಣವನ್ನೂ ತರಬೇತಿಯನ್ನೂ ಕೊಡಿಸಿದನು. ತನ್ನ ಧರ್ಮಕ್ಕೆ ಸೇರಿಲ್ಲದಂಥವರ ಬಗ್ಗೆ ದ್ವೇಷಭಾವನೆಯನ್ನಿರಿಸಿಕೊಂಡಿದ್ದ ಹಾಗೂ ಇಸ್ಲಾಂ ಧರ್ಮಕ್ಕೆ ಸೇರಿದವರನ್ನು ಬಿಟ್ಟು ಬೇರೆ ಯಾರನ್ನೂ ತನ್ನ ಸ್ನೇಹಿತರೆಂದು ಪರಿಗಣಿಸುತ್ತಿರಲಿಲ್ಲ. ಅವರ ಆಡಳಿತದ ಅಧಿಕಾರದ ಎದುರಿನಲ್ಲಿ ಮಾನವ ಜನಾಂಗ ಭಯದಿಂದ ನಡುಗುತ್ತಾ ಇತ್ತು. ಅವನ ಕ್ರೌರ್ಯದೆದುರಿನಲ್ಲಿ, ಹಗಲು ರಾತ್ರಿ ಜನರೆಲ್ಲ ಭಯ ಮತ್ತು ಶಂಕೆಗಳಿಗೆ ಸಿಲುಕಿ ತತ್ತರಿಸುತ್ತಿದ್ದರು. ಭಯಾನಕವಾದ ಶಿಕ್ಷೆಗಳನ್ನು ನೀಡುತ್ತಿದ್ದನು ಎಂಬ ವಿಚಾರಗಳನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ(ಸಂ.೧, ಪು.೫೧೦-೫೧೧).

ಈ ನಿಟ್ಟಿನಲ್ಲಿ ಕಿರ್ಮಾನಿಯು ಮುಸ್ಲಿಂ ದೃಷ್ಟಿಕೋನವನ್ನು ಪ್ರಸ್ತುತಪಡಿಸುತ್ತಾರೆ. ವೈಯಕ್ತಿಕ ಅರಿವಿನ ಆಧಾರದ ಮೇಲೆ ಅವರು ಬರೆಯುತ್ತಾರೆ. ಆದರೆ, ತನ್ನ ಪೋಷಕರಾಗಿದ್ದ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ಇವರಿಬ್ಬರ ಬಗೆಗಿನ ಅಪ್ರಿಯ ಸಂಗತಿಗಳು ಬಂದಾಗ ಅವರನ್ನು ತೇಲಿಸಿಬಿಡುತ್ತಾರೆ. ಕಿರ್ಮಾನಿಯು ಈ ಕೃತಿಯಲ್ಲಿ ಕೆಲವೊಂದು ವಿಷಯಗಳನ್ನು ಆಲಂಕಾರಿಕ ಶೈಲಿಯಲ್ಲಿ ಅಳವಡಿಸಿಕೊಂಡಿದ್ದಾರೆ.

ಮೈಸೂರು ಒಡೆಯರ ಚರಿತ್ರೆಲೇಖನ ಪರಂಪರೆಯಲ್ಲಿ ಬಿ.ಎಲ್.ರೈಸ್(೧೮೩೭-೧೯೨೭) ಅವರ ಪಾತ್ರ ಮಹತ್ವದ್ದಾಗಿದೆ. ಬಿ.ಎಲ್.ರೈಸ್ ಅವರು ತಮ್ಮ ತಂದೆಯ ಮೂಲಕ ವಿದೇಶಿಯರಾದರೂ ಬೆಂಗಳೂರಿನಲ್ಲಿಯೇ ಹುಟ್ಟಿ, ಬೆಳೆದವರು. ಇಲ್ಲಿಯ ಜನರ ವಿಚಾರಧಾರೆಗಳು, ಕಲೆ, ಸಂಸ್ಕೃತಿ, ಪರಂಪರೆಯನ್ನು ಚೆನ್ನಾಗಿ ಅರಿತುಕೊಂಡಿದ್ದರು. ಇಂಗ್ಲೆಂಡ್‌ನಲ್ಲಿ ವಿದ್ಯಾಭ್ಯಾಸ ಮುಗಿಸಿದ ನಂತರ ಬೆಂಗಳೂರಿನಲ್ಲಿ ಸೆಂಟ್ರಲ್ ಹೈಸ್ಕೂಲ್‌ನ ಮುಖ್ಯೋಪಾಧ್ಯಾಯನಾಗಿ ತಮ್ಮ ವೃತ್ತಿಜೀವನವನ್ನು ಆರಂಭಿಸಿದರು. ಅನಂತರ ಮೈಸೂರು ಮತ್ತು ಕೊಡಗು ಸೀಮೆಗಳ ಶಾಲಾ ತನಿಖಾಧಿಕಾರಿಯಾಗಿ, ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್, ಶಿಕ್ಷಣ ಇಲಾಖೆಯ ನಿರ್ದೇಶಕರಾಗಿ

ಹಾಗೂ ಪುರಾತತ್ವ ಸಂಶೋಧನಾ ಸಂಸ್ಥೆಯ ನಿರ್ದೇಶಕರಾಗಿ ಕೆಲಸ ಮಾಡಿದರು. ತನ್ನ ಕೆಲಸದ ನಿಮಿತ್ತವಾಗಿ ಇಲ್ಲಿನ ಗ್ರಾಮೀಣ ಪ್ರದೇಶಗಳಿಗೆ ಪ್ರವಾಸ ಕೈಗೊಳ್ಳಬೇಕಾಗಿ ಬಂದಾಗ ಅನೇಕ ಶಿಲಾಶಾಸನಗಳು, ಕನ್ನಡ ಮತ್ತು ಸಂಸ್ಕೃತ ತಾಳೆಗರಿ, ಹಸ್ತಪ್ರತಿಗಳು ಅವರ ಗಮನ ಸೆಳೆದವು. ಈ ಬಗೆಗೆ ಆಸಕ್ತಿ ವಹಿಸಿ ಕನ್ನಡ ಸಾಹಿತ್ಯ, ಸಂಸ್ಕೃತಿ ಮತ್ತು ಚರಿತ್ರೆಯ ಪರಿಚಯವಾಯಿತು. ಮುಂದಿನ ದಿನಗಳಲ್ಲಿ ತಮ್ಮ ಆಡಳಿತದ ಜೊತೆಗೆ ಶಾಸನ ಸಂಶೋಧನಾ ಕಾರ್ಯಗಳಲ್ಲಿ ನಿರತರಾದರು. **ಮೈಸೂರು ಶಾಸನ ಸಂಪುಟ, ಹನ್ನೆರಡು ಸಂಪುಟಗಳ ಎಪಿಗ್ರಾಫಿಯಾ ಕರ್ನಾಟಿಕಾ** ಎಂಬ ಶಾಸನಗಳ ಸಂಪಾದನೆ, ಮೈಸೂರು ಗ್ಯಾಸೆಟಿಯರ್‌ನ ಎರಡು ಸಂಪುಟಗಳು ಹಾಗೂ ಕೊಡಗು ಜಿಲ್ಲೆಯ ಒಂದು ಸಂಪುಟವನ್ನು ಪ್ರಕಟಿಸಿದರು. ಮೈಸೂರು ಒಡೆಯರ ಚರಿತ್ರೆ ಸಂಶೋಧನೆಗೆ ಇವರ ಕೃತಿಗಳು ಪ್ರಮುಖ ಆಕರಗಳಾಗಿವೆ. ಇವುಗಳ ವಿಶ್ಲೇಷಣೆಯನ್ನು ಹಿಂದಿನ ಅಧ್ಯಾಯದಲ್ಲಿ ಮಾಡಲಾಗಿದೆ(ಅಧ್ಯಾಯ ೪, ಗ್ಯಾಸೆಟಿಯರ್‌ಗಳ ವಿಶ್ಲೇಷಣೆ).

ಪಿ.ಕೃಷ್ಣರಾವ್ ಅವರು **ಹಿಸ್ಟರಿ ಆಫ್ ಮೈಸೂರು, ಫ್ರಮ್ ದಿ ಆರಿಜನ್ ಹೌಸ್ ಆಫ್ ಮೈಸೂರು ಪ್ರಿನ್ಸ್**(೧೮೬೮)[೩೬] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಪ್ರಾರಂಭದ ಒಡೆಯರಿಂದ ಹಿಡಿದು ಟಿಪ್ಪು ಪತನದವರೆಗಿನ ವಿವರಗಳನ್ನು ತಿಳಿಸಿದ್ದಾರೆ. ಮೈಸೂರು ಬಗೆಗೆ ಇರುವ ಪೌರಾಣಿಕ ಹಿನ್ನೆಲೆಯನ್ನು ವಿವರಿಸಿದ್ದಾರೆ. ಮೈಸೂರು ಅಷ್ಟಗ್ರಾಮ, ಬೆಂಗಳೂರು ನಂದಿದುರ್ಗದ ವಿಭಾಗಕ್ಕೆ ಸೇರಿಕೊಂಡಿದ್ದವು. ಮೈಸೂರು ಸಂಪದ್ಭರಿತವಾಗಿತ್ತು. ಯಾವ ರೀತಿ ಮೈಸೂರು ಒಡೆಯರು ಅಧಿಕಾರ ಸ್ಥಾಪಿಸಿದರು ಎಂಬುದರ ವಿವರಗಳನ್ನು ಇಲ್ಲಿ ನೋಡಬಹುದು. ರಾಜ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನ ತನ್ನ ಅಸ್ತಿತ್ವವನ್ನು ಕಂಡುಕೊಂಡಿತು. ಮುಂದಿನ ಒಡೆಯರು ಸಂಸ್ಥಾನದ ಆಳ್ವಿಕೆಯನ್ನು ಹಾಗೆಯೇ ಮುಂದುವರಿಸಿದರು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಡೆದ ತೆರಿಗೆ ವಿರುದ್ಧ ಹೋರಾಟದ ವಿವರಗಳನ್ನು ತಿಳಿಸಿದ್ದಾರೆ. ಜಂಗಮರ ಕಗ್ಗೊಲೆಯ ವಿವರಗಳನ್ನು ವಿಲ್ಕ್ಸ್ ಹೇಳಿರುವ ರೀತಿಯಲ್ಲಿಯೇ ವಿವರಿಸುತ್ತಾ ಹೋಗುತ್ತಾರೆ. ಆದರೆ ನಂತರ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ಬರೆದ ಕೃತಿಗಳಲ್ಲಿ ಇದರ ಬಗೆಗೆ ಮಾಹಿತಿಗಳಿಲ್ಲ. ಹಾಗೆಯೇ ಅನಂತರದ ಒಡೆಯರು ಮತ್ತು ಹೈದರಾಲಿಯ ಏಳಿಗೆಯ ಅಂಶಗಳನ್ನು ಇಲ್ಲಿ ಗಮನಿಸಬಹುದು.

ಇಲ್ಲಿ ಕೃತಿಕಾರರು ವಿಲ್ಕ್ಸ್‌ರ ಕೃತಿಗಳನ್ನು ಬಳಸಿಕೊಂಡರೂ ಕೆಲವೊಂದು ಅಂಶಗಳ ತಾತ್ವಿಕ ಚರ್ಚೆ ಇರುವುದಿಲ್ಲ. ಹೈದರಾಲಿಯ ಯುದ್ಧಗಳ ವಿವರಗಳು, ಟಿಪ್ಪು ಸುಲ್ತಾನನ ಏಳಿಗೆ, ಯುದ್ಧಗಳು, ಮಂಗಳೂರಿನಲ್ಲಿ ಕೈಗೊಂಡ ಕಾರ್ಯಾಚರಣೆಗಳು, ಕೊಡಗಿನ ಬಿಕ್ಕಟ್ಟು ನಿವಾರಣೆ, ವಿದೇಶಗಳಲ್ಲಿ ಸೈನಿಕ ಸಹಾಯಕ್ಕೆ ಸಂಧಾನ ಇವೇ ಮೊದಲಾದ ವಿಷಯಗಳನ್ನು ಕ್ರೋಡೀಕರಿಸಿರುವುದನ್ನು ನೋಡಬಹುದು. ಮೈಸೂರಿನ ಒಡೆಯರ ಬಗೆಗೆ ಇರುವ ವಿಷಯಗಳನ್ನು ಒಂದು ಕಡೆ ಕ್ರೋಡೀಕರಿಸಿದ್ದಾರೆ. ವಿಲ್ಕ್ಸ್ ನೀಡಿರುವ ವಿವರಣೆಗಳನ್ನು ಚರ್ಚೆಗೆ ತೆಗೆದುಕೊಳ್ಳದೇ ಈ ಕೃತಿಯಲ್ಲಿ ರಾಜಕೀಯ ವಿಚಾರಗಳತ್ತ ಹೆಚ್ಚಿನ ಗಮನ ಹರಿಸಿದ್ದಾರೆ. ಹೈದರಾಲಿ ಮತ್ತು ಟಿಪ್ಪುವಿನ ಧಾರ್ಮಿಕ ವಿಚಾರಗಳನ್ನು ಸ್ವಲ್ಪಮಟ್ಟಿಗೆ ವಿವರಿಸಿರುವುದನ್ನು ನೋಡಬಹುದು(ಪು.೧೧೦). ಈ ಕೃತಿಯ ವ್ಯಾಪ್ತಿಯು ಪ್ರಾರಂಭದ ಒಡೆಯರ ವಿಚಾರಗಳಿಂದ ಹಿಡಿದು ಟಿಪ್ಪುವಿನ

ಪತನದವರೆಗೆ ದಾಖಲಾಗಿದೆ. ಅನಂತರದ ಕಾಲದಲ್ಲಿ ಒಡೆಯರ ಅಧಿಕಾರವು ಪುನಃ ಬ್ರಿಟಿಷರ ವಶವಾಯಿತು ಎಂಬುದನ್ನು ತಿಳಿಸಲಾಗಿದೆ. ಅಲ್ಲಿ ಆದಂತಹ ಸಾಮಾಜಿಕ ಬದಲಾವಣೆ ಅಂಶಗಳ ಕಡೆ ಗಮನ ಹರಿಸಿರುವುದಿಲ್ಲ. ಈ ಕೃತಿಯು ಸಾಂಪ್ರದಾಯಿಕ ಮಾದರಿಯನ್ನು ಅನುಸರಿಸಿದೆ.

ಚಾಮರಾಜೇಂದ್ರ ಒಡೆಯರ್ ಅವರ ಕಾಲದಲ್ಲಿ(೧೮೮೭) ಎಂ.ಎ.ಕೆ. ಮತ್ತು ಎಂ.ಎಲ್.ಎನ್. ಅವರು ಬರೆದ **ಶ್ರೀಮನ್ ಮಹಾರಾಜ ಚಾಮರಾಜೇಂದ್ರ ಒಡೆಯರ್ ಅವರ ವಂಶ ರತ್ನಾಕರ**[೩೭] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಪ್ರಾರಂಭದ ಒಡೆಯರಿಂದ ಹಿಡಿದು ಚಾಮರಾಜೇಂದ್ರ ಒಡೆಯರ್ ಅವರ ಆಳ್ವಿಕೆಯವರೆಗೂ ಮಾಹಿತಿಯನ್ನು ನೀಡುತ್ತದೆ. ಪ್ರಾರಂಭದ ಒಡೆಯರಿಂದ ಮೈಸೂರು ಸಂಸ್ಥಾನ ಹೇಗೆ ಪ್ರಗತಿಯತ್ತ ಸಾಗಿತು ಮತ್ತು ಕಮೀಷನರ್‌ಗಳ ಆಳ್ವಿಕೆಯು ಮಾದರಿ ಸಂಸ್ಥಾನವಾಗಿ ಪ್ರಸಿದ್ಧಿ ಪಡೆಯಿತು ಎಂಬ ವಿವರಗಳನ್ನು ನೋಡಬಹುದು. ಇಲ್ಲಿ ಮುಖ್ಯವಾಗಿ ಹೈದರಾಲಿ ಮತ್ತು ಟಿಪ್ಪುವಿನ ವಿಚಾರಗಳು ಕಾಣಬರುತ್ತವೆ. ಹೈದರಾಲಿಯು ಅಧಿಕಾರವನ್ನು ಹಂತಹಂತವಾಗಿ ಪಡೆಯುತ್ತಾ ಸರ್ವಾಧಿಕಾರಿಯಾದನು. ಟಿಪ್ಪು ಮತಾಂಧ, ದರ್ಪಿಷ್ಠನಾಗಿ ಹಿಂದೂಗಳನ್ನು ಬಲವಂತವಾಗಿ ಮುಸ್ಲಿಂಧರ್ಮಕ್ಕೆ ಮತಾಂತರಿಸಿ, ಅಲ್ಲಿನ ದೇವಾಲಯಗಳಲ್ಲಿನ ವಿಗ್ರಹಗಳನ್ನು ಹೊಡೆದುಹಾಕಿದನು. ರಾಜರ ಪರವಾಗಿದ್ದಂತಹ ಅಂಚೆ ಸಾಮಯ್ಯ ಅವನ ತಮ್ಮ ರಂಗಯ್ಯನನ್ನು ಕಬ್ಬಿಣದ ಪಂಜರದಲ್ಲಿಟ್ಟು ಕೊಲ್ಲಿಸಿದಾಗ ಪ್ರಧಾನ್ ತಿರುಮಲರಾವ್ ತಪ್ಪಿಸಿಕೊಂಡು ಹೋಗಿ ಮದ್ರಾಸ್‌ನಲ್ಲಿ ಬ್ರಿಟಿಷರ ಆಶ್ರಯ ಪಡೆದನು ಎಂದು ವಿವರಿಸಲಾಗಿದೆ. ವಿಧವೆ ರಾಣಿ ಲಕ್ಷ್ಮಮ್ಮಣ್ಣಿಯನ್ನು ಸೆರೆಮನೆಯಲ್ಲಿಟ್ಟ ವಿವರಗಳು, ಪುನಃ ಅಧಿಕಾರವನ್ನು ಪಡೆಯಲು ರಾಣಿ ಲಕ್ಷ್ಮಮ್ಮಣ್ಣಿಯು ಪ್ರಧಾನ್ ತಿರುಮಲ ರಾವ್ ಸಹಾಯ ಪಡೆದು ಬ್ರಿಟಿಷ್‌ರೊಂದಿಗೆ ಸಂಧಾನ ನಡೆಸಿದ ವಿವರಗಳು ಮುಖ್ಯವಾಗಿವೆ. ಅನಂತರ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅಧಿಕಾರ, ನಗರದಂಗೆಯ ವಿಚಾರಗಳು ಮಿಳಿತವಾಗಿದ್ದು, ಕಮೀಷನರುಗಳ ಆಳ್ವಿಕೆ ಮತ್ತು ಚಾಮರಾಜೇಂದ್ರ ಒಡೆಯರ್ ಅವರ ಪಟ್ಟಾಭಿಷೇಕ, ಅವರ ಆಡಳಿತದ ವಿಚಾರಗಳನ್ನು ತಿಳಿಯಬಹುದಾಗಿದೆ. ಇವರ ಕಾಲದಲ್ಲಿ ಸ್ಥಾಪನೆಯಾದ ಪ್ರಜಾಪ್ರತಿನಿಧಿ ಸಭೆಯು ಆಡಳಿತಾತ್ಮಕವಾಗಿ ಮುಖ್ಯವಾದುದು. ಸ್ತ್ರೀಯರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಪ್ರೋತ್ಸಾಹವನ್ನು ನೀಡಿದ್ದರ ವಿವರಗಳು, ತಮ್ಮ ಪ್ರಜೆಗಳ ಸ್ಥಿತಿಯನ್ನು ಉನ್ನತಮಟ್ಟಕ್ಕೆ ತರಲು ಹಿಂದೂಸ್ತಾನವನ್ನೆಲ್ಲ ಸಂಚರಿಸಿದರು. ಇವರ ಆಳ್ವಿಕೆಯು ಬ್ರಿಟಿಷರಿಗೂ ಅಚ್ಚುಮೆಚ್ಚಾಗಿತ್ತು ಎಂದು ಈ ಕೃತಿಯಲ್ಲಿ ವಿವರಿಸುತ್ತಾ ಹೋಗುತ್ತಾರೆ. ಈ ಕೃತಿ ಸಾಂಪ್ರದಾಯಿಕವಾಗಿ ರಾಜಕೀಯ ವಿಚಾರಗಳಿಗೆ ಹೆಚ್ಚು ಒತ್ತು ನೀಡಲಾಗಿದೆ.

ಲಿವಿನ್ ಬಿ. ಬೌರಿಂಗ್ ೧೮೬೨ರಿಂದ ೧೮೭೦ರವರೆಗೆ ಮೈಸೂರಿನ ಕಮೀಷನರ್ ಆಗಿದ್ದನು. ಅಲ್ಲದೇ ಮೈಸೂರಿನ ಇತಿಹಾಸ ಮತ್ತು ಸಂಸ್ಕೃತಿಯ ಬಗ್ಗೆ ಆಳವಾದ ಆಸಕ್ತಿಯನ್ನು ಹೊಂದಿದ್ದನು. ಲಿವಿನ್ ಬಿ. ಬೌರಿಂಗ್‌ನು **ಹೈದರಾಲಿ ಅಂಡ್ ಟಿಪ್ಪು ಸುಲ್ತಾನ್**(೧೮೯೩)[೩೮] ಎಂಬ ಕೃತಿಯನ್ನು ರಚಿಸಿದ್ದಾನೆ. ಇದು ಡಬ್ಲ್ಯುಡಬ್ಲ್ಯುಹಂಟರ್ ಅವರ ಸಂಪಾದಕತ್ವದ **ರೂಲರ್ಸ್ ಆಫ್ ಇಂಡಿಯಾ** ಎಂಬ ಮಾಲೆಯಲ್ಲಿ ಹೊರಬಂದಿರುವ ಸಂಪುಟ. ಇದನ್ನು

ಎಸ್.ಚಾಂದ್ ಅಂಡ್ ಕಂಪನಿ ಭಾರತದಲ್ಲಿ ಪುನರ್‌ಮುದ್ರಿಸಿದೆ. ಈ ಕೃತಿ ಚಿಕ್ಕದಾದರೂ, ಪುನಃ ಪುನಃ ಉದ್ಧೃತವಾಗಿರುವ ಕೃತಿಯಾಗಿದೆ. ಕೃತಿಯಲ್ಲಿ ಈತನು ಬ್ರಿಟಿಷ್ ಅಧಿಕಾರಿ ಆಗಿ ಹೈದರಾಲಿ ಮತ್ತು ಟಿಪ್ಪುಸುಲ್ತಾನ್‌ರನ್ನು ತನ್ನ ಶತೃಗಳಾಗಿಯೇ ಚಿತ್ರಿಸಿರುವುದನ್ನು ಗಮನಿಸಬಹುದು. ಹೈದರಾಲಿಯ ಏಳಿಗೆ, ಆತನ ಯುದ್ಧಗಳ ವಿವರಗಳು, ನಿಜಾಮರ ಯುದ್ಧಗಳು, ಮಿಲಿಟರಿ ಕಾರ್ಯಾಚರಣೆಗಳ ವಿಚಾರಗಳು ಕೃತಿಯೊಳಗೆ ಸೇರಿಕೊಂಡಿವೆ.

ಹೈದರಾಲಿ ಮತ್ತು ಟಿಪ್ಪು ಹಂತಹಂತವಾಗಿ ರಾಜಕೀಯ ಪ್ರಭುತ್ವವನ್ನು ಸ್ಥಾಪಿಸಿದ್ದರ ವಿವರಗಳನ್ನು ಈ ಕೃತಿಯಲ್ಲಿ ನೋಡಬಹುದು. ಆಂಗ್ಲೋ-ಮೈಸೂರು ಯುದ್ಧಗಳು ನಡೆದ ಸಂದರ್ಭದಲ್ಲಿ ಬ್ರಿಟಿಷರು ಮಾಡಿಕೊಂಡ ಒಪ್ಪಂದ ಮೊದಲಾದ ವಿವರಗಳು ಮಿಳಿತವಾಗಿವೆ (ಪು.೪೮).

ಟಿಪ್ಪು ಮರಣದ ನಂತರ ಶ್ರೀರಂಗಪಟ್ಟಣದ ಚಿತ್ರಣವನ್ನು ನೀಡಿರುವುದನ್ನು ಇಲ್ಲಿ ವಿಶೇಷವಾಗಿ ಗಮನಿಸಬಹುದು. ಟಿಪ್ಪುವಿನ ಪತನದ ನಂತರ ಬ್ರಿಟಿಷರಿಗೆ ವಾಸ ಮಾಡಲು ಶ್ರೀರಂಗಪಟ್ಟಣದಲ್ಲಿ ಆರೋಗ್ಯಕರವಾದ ವಾತಾವರಣ ಕಾಣಲಿಲ್ಲ. ಆದ್ದರಿಂದ ಎಲ್ಲರೂ ಬೆಂಗಳೂರನ್ನು ಇಷ್ಟಪಟ್ಟು ಅಲ್ಲಿಗೆ ಹೋಗಿ ನೆಲೆಸಿದರು. ಇದರ ಪರಿಣಾಮವಾಗಿ ಶ್ರೀರಂಗಪಟ್ಟಣ ದುರ್ದಿನಗಳನ್ನು ಕಾಣಬೇಕಾಗಿ ಬಂತು. ಅರಮನೆಯ ಗಂಧದ ಮರವನ್ನು ದಾಸ್ತಾನು ಮಾಡಿ, ಉಗ್ರಾಣಕ್ಕಾಗಿ ಬಳಸಿಕೊಂಡರು. ಅಲ್ಲಿ ಫಿರಂಗಿ ಗಾಡಿಗಳ ಕಾರ್ಖಾನೆಯನ್ನು ಸ್ಥಾಪಿಸಿದರು. ಲಾಲ್‌ಬಾಗ್‌ನಲ್ಲಿದ್ದ ಅರಮನೆಯನ್ನು ಕೆಡವಿಸಿದರು ಹಾಗೂ ಅಲ್ಲಿ ದೊರೆತ ಸಾಮಗ್ರಿಗಳನ್ನು ಊಟಿಯಲ್ಲಿ ಸೈಂಟ್ ಸ್ಟೀಫನ್ಸ್ ಚರ್ಚಿನ ನಿರ್ಮಾಣಕ್ಕೆ ಬಳಸಿಕೊಂಡರು. ಇದು ಟಿಪ್ಪುವಿನ ಸಾವಿನ ಅನಂತರದಲ್ಲಿ ಸುಮಾರು ಒಂದು ಶತಮಾನದ ಬಳಿಕ ಶ್ರೀರಂಗಪಟ್ಟಣಕ್ಕೆ ಭೇಟಿ ನೀಡಿದ ಎಲ್.ಬಿ.ಬೌರಿಂಗ್ ಕಂಡ ಚಿತ್ರವನ್ನು ಇಲ್ಲಿ ತಿಳಿಸಿದ್ದಾರೆ. ಇಡೀ ಶ್ರೀರಂಗಪಟ್ಟಣ ಅನಾರೋಗ್ಯಕರವಾಗಿದೆ, ಒಮ್ಮೆ ಒಂದು ಮಹಾನ್ ರಾಜಧಾನಿ ಇದ್ದ ಸ್ಥಳದಲ್ಲಿ ಇಂದು ಕೆಲವು ಹಾಳು ಬಿದ್ದಿರುವ ಮನೆಗಳಷ್ಟೇ ಉಳಿದಿವೆ ಎಂಬುದನ್ನು ವಿವರಿಸಿದ್ದಾರೆ(ಪು.೪೬).

ಧರ್ಮಕ್ಕಾಗಿ ಹೋರಾಡಿದ ಹೈದರಾಲಿಯನ್ನು ಗುಣಗಾನ ಮಾಡಿದ ಅಂಶಗಳನ್ನು ತಿಳಿಸಿದ್ದಾರೆ. ಇಸ್ಲಾಂಧರ್ಮದ ಜ್ಯೋತಿ ಲೋಕದಿಂದ ಕಣ್ಮರೆಯಾಗಿದೆ. ಮಹಮ್ಮದ್‌ರ ಧರ್ಮಕ್ಕಾಗಿ ಟಿಪ್ಪು ಹುತಾತ್ಮನಾಗಿದ್ದಾನೆ ಎಂದು ಮೀರ್ ಹುಸ್ಸೇನ್ ಅಲ್ಲಿ ಈ ಶಾಸನವನ್ನು ರಚಿಸಿದನು. ಇದನ್ನು ಅಬ್ದುಲ್ ಖಾದಿರ್ ಎಂಬುವನು ಕೆತ್ತಿದನು. ಧಾರ್ಮಿಕ ಅಂಧಾಭಿಮಾನ, ಅಂತರಾಳದ ಕ್ರೌರ್ಯ ಮತ್ತು ನಿರಂಕುಶಪ್ರಭುತ್ವ ಇವುಗಳ ಒತ್ತಡಕ್ಕೊಳಗಾಗಿ, ತನ್ನ ಸ್ವಾರ್ಥಕ್ಕಾಗಿ ಸಾವಿರಾರು ಜೀವಗಳನ್ನು ಬಲಿಕೊಡುವ ಬಗ್ಗೆ ಅಷ್ಟಾಗಿ ಯೋಚಿಸದೇ ಹೋದ ದೊರೆಯ ಸ್ವಭಾವವನ್ನು ತೋರಿಸುವ ಸಲುವಾಗಿ ಸಾಕಷ್ಟು ಮಾತುಗಳನ್ನು ನೋಡಬಹುದು. ಆದ್ದರಿಂದ ಟಿಪ್ಪು, ಘಜ್ನಿ ಮಹಮ್ಮದ್, ನಾದಿರ್ ಷಾಹ ಇವರು ಖೂನಿ(ಕೊಲೆಗಾರ) ಎಂಬ ಉಪನಾಮವನ್ನೇ ಹೊಂದಿದ್ದು, ದೆಹಲಿಯ ಪಠಾಣ ಚಕ್ರವರ್ತಿ ಅಲ್ಲಾ-ಉದ್-ದೀನ್ ಪ್ರತಿಸ್ಪರ್ಧಿಯೇ ಆಗಿದ್ದನು. ಇವರೆಲ್ಲರೂ ಕೂಡ ನಾಸ್ತಿಕರ ಕಗ್ಗೊಲೆಯಿಂದ ಪ್ರಸಿದ್ಧರಾಗಿದ್ದಾರೆ. ಈ ಸಾಲಿನಲ್ಲಿ ಟಿಪ್ಪುಸುಲ್ತಾನನು

ನಿಲ್ಲುತ್ತಾನೆ. ಆದರೆ ನಂಬಿರುವ ಧರ್ಮವನ್ನು ಪ್ರಸಾರ ಮಾಡುವ ಉತ್ಸಾಹದಿಂದ ಈ ಕಗ್ಗೊಲೆ ಮಾಡಿರಬೇಕು ಎನಿಸುತ್ತದೆ. ಈ ನಿಟ್ಟಿನಲ್ಲಿ ಬ್ರಿಟಿಷ್ ವಸಾಹತುಶಾಹಿಯ ಕಮೀಷನರ್ ಆದ ಬೌರಿಂಗ್ ಅವರು ಹೈದರಾಲಿ ಮತ್ತು ಟಿಪ್ಪು ಬಗೆಗಿನ ಧೋರಣೆಗಳನ್ನು ಈ ಕೃತಿಯಲ್ಲಿ ಬಿಂಬಿಸಿದ್ದಾರೆ. ಹಾಗೆಯೇ ಲೇಡಿ ಬೌರಿಂಗ್ ಅವರ **ಈಸ್ಟರ್ನ್ ಎಕ್ಸ್‌ಪೀರಿಯನ್ಸಸ್**(೧೮೮೨) ಕೃತಿಯಲ್ಲಿ ಇಲ್ಲಿನ ಆಡಳಿತ, ತೆರಿಗೆ ಆದಾಯ ಮೊದಲಾದ ವಿಚಾರಗಳನ್ನು ತಿಳಿಸಿದ್ದಾರೆ. ಕ್ಷಾಮದ ಸಂದರ್ಭದಲ್ಲಿ ಬ್ರಿಟಿಷರು ಹೆಚ್ಚಿನ ಮಟ್ಟದಲ್ಲಿ ಪರಿಹಾರ ಕಾರ್ಯಗಳನ್ನು ಕೈಗೊಂಡಿದ್ದರು ಎಂಬ ಅಂಶಗಳನ್ನು ವಿವರಿಸುತ್ತಾ ಹೋಗುತ್ತಾರೆ. ಬ್ರಿಟಿಷರು ಕೈಗೊಂಡ ಪ್ರತಿಯೊಂದು ಕಾರ್ಯವನ್ನು ತಿಳಿಸುತ್ತಾರೆ.

ಮೈಸೂರು ಒಡೆಯರ ಚರಿತ್ರೆಯಲ್ಲಿ ದೇಶೀಯ ಚರಿತ್ರೆಕಾರರಾಗಿ ರಚಿಸಿದ ಕೃತಿಗಳು ಪ್ರಮುಖವಾಗಿವೆ. ಹೀಗೆ ಪ್ರಕಟವಾದ ಕನ್ನಡದಲ್ಲಿನ ಮೊಟ್ಟಮೊದಲ ಐತಿಹಾಸಿಕ ಗ್ರಂಥ ಎಂದರೆ ಶಾನುಭೋಗ ವೆಂಕಟರಮಣ ಅವರ **ಮೈಸೂರು ರಾಜರ ಚರಿತ್ರೆ**, ಈ ಕೃತಿಯಲ್ಲಿ ಪ್ರಾರಂಭದ ಒಡೆಯರಿಂದ ಹಿಡಿದು ಹೈದರಾಲಿ ಮತ್ತು ಟಿಪ್ಪುವಿನ ಏಳಿಗೆವರೆಗೆ ಇರುವ ವಿವರಗಳನ್ನು ನೋಡಬಹುದು. ತಮ್ಮ ಒಡೆಯರ ಮೇಲಿನ ಅಭಿಮಾನದಿಂದ ಅವರು ಮಾಡಿದ ಪ್ರತಿಯೊಂದು ಕಾರ್ಯಸಾಧನೆಗಳನ್ನು ಶ್ಲಾಘಿಸುತ್ತಾ ಹೋಗುತ್ತಾರೆ. ಈ ಕೃತಿಯು ಸಾಂಪ್ರದಾಯಕ ಮಾದರಿಯಲ್ಲಿ ರಾಜಕೀಯ ವಿಷಯಗಳಿಗೆ ಒತ್ತನ್ನು ನೀಡಲಾಗಿದೆ.

ಮೈಸೂರು ಒಡೆಯರ ವಸಾಹತು ಸರ್ಕಾರದ ಅಧಿಕಾರಿಗಳು ಮತ್ತು ದೇಶಿ ಚರಿತ್ರೆಕಾರರೂ ಆಗಿದ್ದ ಎಂ.ಶಾಮರಾವ್ ಅವರು ಮೈಸೂರು ಒಡೆಯರ ಚರಿತ್ರೆಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡವರು. ಇವರು ಕೃತಿಗಳ ಪ್ರಕಟಣೆಯ ಮೂಲಕ ಮೈಸೂರು ಒಡೆಯರ ಚರಿತ್ರೆಯನ್ನು ವಿವರಿಸಿದ್ದಾರೆ. ಎಂ.ಶಾಮರಾವ್ ಅವರು ಪ್ರಥಮ ಬಾರಿಗೆ **ಟೆನ್ ಇಯರ್ಸ್ ಆಫ್ ನೇಟೀವ್ ರೂಲ್ ಇನ್ ಮೈಸೂರ್**(೧೮೯೧)[೩೯] ಎಂಬ ಕೃತಿಯನ್ನು ರಚಿಸಿದರು. ಈ ಕೃತಿಯಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಬ್ರಿಟಿಷ್ ಆಳ್ವಿಕೆಯ ಸಿಂಹಾವಲೋಕನ ಮಾಡಲಾಗಿದೆ(ಪು.೧-೨೯). ಎರಡನೇ ಭಾಗದಲ್ಲಿ ದೇಶೀಯರಾದ ಮೈಸೂರು ಒಡೆಯರ ಆಳ್ವಿಕೆಯ ನಿರೂಪಣೆಯೂ ಮೂಡಿಬಂದಿದೆ. ಮೊದಲ ಭಾಗದಲ್ಲಿ ಟಿಪ್ಪುವಿನ ಪತನದ ಅನಂತರದಲ್ಲಿ ಮೈಸೂರು ರಾಜ್ಯದ ಆಡಳಿತವನ್ನು, ಮುಮ್ಮಡಿ ಕೃಷ್ಣರಾಜ ಒಡೆಯರ ಕೈಯಿಂದ ತಮ್ಮ ಕೈಗೆ ತೆಗೆದುಕೊಂಡು ಬ್ರಿಟಿಷರು ಹೇಗೆ ನಿರ್ವಹಿಸಿದರು ಎಂಬ ವಿವರಗಳನ್ನು ನೋಡಬಹುದು. ಈ ಅವಧಿಯಲ್ಲಿ ಕಮೀಷನರುಗಳ ಆಳ್ವಿಕೆಯು ಮೈಸೂರನ್ನು ಆಧುನಿಕತೆಯತ್ತ ಕೊಂಡೊಯ್ಯುತ್ತದೆ ಎಂಬ ವಿಚಾರಗಳು ಮಿಳಿತವಾಗಿವೆ. ಉಳಿದ ದೇಶೀಯ ಸಂಸ್ಥಾನಗಳು ಮೈಸೂರಿನ ಪ್ರಗತಿಯತ್ತ ನೋಡುವಂತಾಯಿತು. ಬ್ರಿಟಿಷ್ ಸರ್ಕಾರವು ಸಹ ಕೆಲವು ಸುಧಾರಣೆಗಳನ್ನು ಕ್ರಿಯಾಶೀಲವಾಗಿ ಮಾಡುವಂತಾಯಿತು ಎಂಬುದನ್ನು ಕೃತಿಕಾರರು ವಿವರಿಸುತ್ತಾ ಹೋಗುತ್ತಾರೆ. ವಾಕ್ ಸ್ವಾತಂತ್ರ್ಯ, ಬೌದ್ಧಿಕ ಸ್ವಾತಂತ್ರ್ಯವಿದ್ದು, ವಾಕ್ ಸ್ವಾತಂತ್ರ್ಯಕ್ಕೆ ಬೆಲೆ ಬಂದಿತು. ಆರ್ಥಿಕ ಏರುಪೇರುಗಳು ಸುಧಾರಣೆ ಆದವು. ವ್ಯವಸಾಯದ ಭೂಮಿಗೆ ವಿಶೇಷ ಕಟ್ಟುಪಾಡುಗಳಾದವು. ಈ ಅವಧಿಯಲ್ಲಿ ಆದ ಸುಧಾರಣೆಗಳು ಮುಂದಿನ ಸುಧಾರಣೆಗಳಿಗೆ

ಅಡಿಪಾಯ ಆದವು. ಇಲ್ಲಿ ಸಾಂಪ್ರದಾಯಿಕವಾಗಿ ರಾಜಭಕ್ತಿ, ಪ್ರಜಾಹಿತದೃಷ್ಟಿ ಇವುಗಳನ್ನು ಬಿಟ್ಟುಕೊಡದೆ, ಸಂಗತಿಗಳಿಗೆ ಅನುಗುಣವಾಗಿ ಈ ಕೃತಿಯನ್ನು ರಚಿಸಿರುವುದನ್ನು ನೋಡಬಹುದು.

ಎಂ.ಶಾಮರಾವ್ ಅವರು **ಮಹಿಸೂರು ಸಂಸ್ಥಾನದ ಚರಿತ್ರೆ**(೧೮೯೩)[೪೦]ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯು ಕನ್ನಡದಲ್ಲಿ ಮೈಸೂರು ಇತಿಹಾಸ ರಚನೆಯ ಮೊದಲ ಪ್ರಯತ್ನ. ಈ ಕೃತಿಯಲ್ಲಿ ನಾಲ್ಕು ಭಾಗಗಳಿವೆ. ಇವುಗಳಲ್ಲಿ ಕ್ರಮವಾಗಿ ಪೀಠಿಕಾ ಪ್ರಕರಣ ಸಹಿತವಾಗಿ ಪೂರ್ವರಾಜರು(೬ ಪ್ರಕರಣಗಳು), ಯಾದವ ಕುಲದ ರಾಜರು(೧೦ ಪ್ರಕರಣಗಳು), ಮುಸಲ್ಮಾನರ ಆಧಿಪತ್ಯ(೧೫ ಪ್ರಕರಣಗಳು), ಬ್ರಿಟಿಷ್‌ನವರ ಮೇಲ್ವಿಚಾರಣೆ(೫ ಪ್ರಕರಣಗಳು) ಹೀಗೆ ವಿಷಯವನ್ನು ವಿಭಜನೆ ಮಾಡಿದ್ದಾರೆ. ಮೊದಲು ಮೈಸೂರಿನಲ್ಲಿ ಆಳ್ವಿಕೆ ಮಾಡಿದ ರಾಜ ಮನೆತನಗಳ ವಿವರಗಳನ್ನು ನೋಡಬಹುದು. ಒಂದನೇ ಪ್ರಕರಣದಲ್ಲಿ ದಕ್ಷಿಣ ದೇಶಕ್ಕೆ ಆರ್ಯರ ಪ್ರವೇಶ, ಎರಡನೆಯ ಪ್ರಕರಣದಲ್ಲಿ ಕದಂಬರು, ಪಲ್ಲವರು, ಗಂಗರು, ಮೂರನೇ ಪ್ರಕರಣದಲ್ಲಿ ಚಾಲುಕ್ಯರು, ಕಾಲಭ್ಯೂರರು, ವಿಜಯನಗರದ ಅರಸರು ಆಳ್ವಿಕೆ ನಡೆಸಿದ ಬಗೆಯನ್ನು ತಿಳಿಸುತ್ತಾರೆ. ಅನಂತರದ ಪ್ರಕರಣಗಳಲ್ಲಿ ಯದುರಾಯನ ರಾಜ್ಯ ಸ್ಥಾಪನೆ, ರಾಜ ಒಡೆಯರ್, ಚಾಮರಾಜ ಒಡೆಯರ್, ಇಮ್ಮಡಿ ರಾಜ ಒಡೆಯರ್, ಚಿಕ್ಕದೇವರಾಜ ಒಡೆಯರ್ ಅವರ ಆಡಳಿತದ ವಿಚಾರಗಳು ಮಿಳಿತವಾಗಿವೆ. ಇಲ್ಲಿ ಮುಖ್ಯವಾಗಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತೆರಿಗೆ ವಿರುದ್ಧ ನಡೆದ ಘಟನೆಯು ಪ್ರಮುಖವಾದುದು ಎಂದು ಸ್ವಲ್ಪ ಮಾಹಿತಿಯನ್ನು ನೀಡುತ್ತಾರೆ. ಕಂಠೀರವ ನರಸರಾಜ ಒಡೆಯರು, ದೊಡ್ಡ ಕೃಷ್ಣರಾಜ, ಚಾಮರಾಜ ಒಡೆಯರು, ದಳವಾಯಿಗಳಾದ ದೇವರಾಜಯ್ಯ, ನಂಜರಾಜಯ್ಯ ಅವರ ಆಡಳಿತ, ಹೈದರಾಲಿಯ ಏಳಿಗೆ, ಟಿಪ್ಪು ಅವರ ಆಡಳಿತವನ್ನು ನೋಡಬಹುದು. ದೇವರಾಜಯ್ಯ, ನಂಜರಾಜಯ್ಯ ಅವರ ಮನಸ್ತಾಪದಿಂದಾಗಿ ಹೈದರ್‌ನು ಹಂತಹಂತವಾಗಿ ಮೇಲೇರಿದನು. ಇಲ್ಲಿ ಆಂಗ್ಲರು ಮತ್ತು ಫ್ರೆಂಚರ ನಡುವೆ ರಾಜಕೀಯ ಕಾದಾಟಗಳು ನಡೆಯುತ್ತಿದ್ದವು. ಮೊಘಲರ ಅವನತಿ ಮುಂತಾದ ಸಂಘರ್ಷಗಳ ಸಂಕ್ರಮಣಗಳ ಮೂಸೆಯಲ್ಲಿಯೇ ಹೈದರ್‌ನು ಹೇಗೆ ಪ್ರವರ್ಧಮಾನಕ್ಕೆ ಬಂದನು ಎಂಬ ವಿವರಣೆಯನ್ನು ನೋಡಬಹುದು(ಪು.೭೫). ಟಿಪ್ಪು ಮತ್ತು ಬ್ರಿಟಿಷರ ನಡುವಿನ ಯುದ್ಧಗಳು, ಬ್ರಿಟಿಷರು ಟಿಪ್ಪುವನ್ನು ಹೇಗೆ ರಾಜಕೀಯವಾಗಿ ನಿಭಾಯಿಸಿ ಕೊನೆಗೆ ಸಫಲಗೊಂಡರೆಂಬ ವಿವರಗಳನ್ನು ತಿಳಿಸಿದ್ದಾರೆ. ಒಟ್ಟಾರೆಯಾಗಿ ಈ ಕೃತಿಯು ದೇಶ ಭಾಷೆಯ ಮಾಧ್ಯಮದ ಶಿಕ್ಷಣವಿರುವ ಶಾಲೆಗಳ ವಿದ್ಯಾರ್ಥಿಗಳಿಗೆ ಪಠ್ಯ ಗ್ರಂಥವಾಗಿ ಇದು ಸಿದ್ಧವಾಗಿದ್ದರೂ, ಸಾಮಾನ್ಯ ಓದುಗರಿಗೆ ಸಹ ಇದು ಇಷ್ಟವಾಗಬಹುದುದೆಂದು ಆಶಿಸಿದ್ದಾರೆ. ಈ ಕೃತಿಯಲ್ಲಿ ಕೆಲವೊಂದು ಐತಿಹ್ಯದ ಮಾಹಿತಿಗಳನ್ನು ಅಡಿಟಿಪ್ಪಣಿಯಲ್ಲಿ ನೀಡಿದ್ದಾರೆ. ಮೊದಲ ಬಾರಿಗೆ ಮೈಸೂರು ಸಂಸ್ಥಾನದ ಚರಿತ್ರೆಯನ್ನು ಕನ್ನಡ ಭಾಷೆಯ ಮೂಲಕ ರಚಿಸಿದ್ದಾರೆ.

ಎಂ.ಎ.ನಾರಾಯಣ ಅಯ್ಯಂಗಾರ್ ಮತ್ತು ಎಂ.ವಿ.ಶ್ರೀನಿವಾಸಾಚಾರ್ ಅವರು **ಮೈಸೂರು ಪ್ರಧಾನರು**(The Mysore Pradhanas), (೧೯೦೨, ಮರುಮುದ್ರಣ ೧೯೮೧)[೪೧] ಎಂಬ ಕೃತಿಯನ್ನು ರಚಿಸಿದ್ದಾರೆ. ತಿರುಮಲರಾವ್ ಮತ್ತು ನಾರಾಯಣರಾವ್ ಅವರು ಪ್ರಧಾನರಾಗಿದ್ದು, ಒಡೆಯರ ಕುಟುಂಬದವರಿಗೆ ಆಡಳಿತವನ್ನು ಹೈದರಾಲಿಯಿಂದ ಪಡೆಯಲು ರಾಜ ಕುಟುಂಬ

ದವರಿಗೆ ಹೇಗೆ ಸಹಾಯ ಮಾಡಿದರು ಹಾಗೂ ರಾಣಿ ಲಕ್ಷ್ಮಮ್ಮಣ್ಣಿ ಅವರು ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ಬ್ರಿಟಿಷರಿಗೆ ನೀಡಿದ ಮಾಹಿತಿಗಳು, ಪತ್ರಗಳ ವಿವರಗಳನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ. ಮೊದಲಿಗೆ ಮೈಸೂರಿನ ಸಂಸ್ಥಾನ ವಿಜಯನಗರದ ಅರಸರ ಅಧೀನ ದಲ್ಲಿದ್ದು, ರಾಜ ಒಡೆಯರಿಂದ ತನ್ನದೇ ಆದ ಒಂದು ಐಡೆಂಟಿಟಿಯನ್ನು ಪಡೆಯಿತು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮಂತ್ರಿಯಾದ ವಿಶಾಲಾಕ್ಷ ಪಂಡಿತನು ಲಿಂಗಾಯತರಿಂದ ಕೊಲೆಯಾದನು. ಅನಂತರ ಪ್ರಧಾನಮಂತ್ರಿಯಾಗಿ ಅಪ್ಪಾಜಯ್ಯ ನೇಮಕವಾದರು. ಹಾಗೆಯೇ ಗೋವಿಂದರಾಜಯ್ಯ ಅಧಿಕಾರಕ್ಕೆ ಬಂದರು. ೧೭೬೨ರಲ್ಲಿ ಹೈದರಾಲಿಯು ಪ್ರಧಾನ್ ಗೋವಿಂದ ರಾಜಯ್ಯನ ಐಶ್ವರ್ಯವನ್ನು ಅಪಹರಿಸಿ ಸೈನಿಕರನ್ನು ಕಳುಹಿಸಿದಾಗ ಪ್ರಧಾನ್‌ನು ತನ್ನ ನಿಧಿಯನ್ನು ಬಚ್ಚಿಟ್ಟಿದ್ದರಿಂದ ಅವನನ್ನು ಕೊಲ್ಲಲಾಯಿತು. ಇವನಿಗೆ ತಿರುಮಲರಾವ್ ಮತ್ತು ನಾರಾಯಣರಾವ್ ಎಂಬ ಮಕ್ಕಳಿದ್ದರು. ತದನಂತರ ತಿರುಮಲರಾವ್ ಪ್ರಧಾನಮಂತ್ರಿಯಾಗಿ ಆಡಳಿತವನ್ನು ವಹಿಸಿಕೊಂಡನು. ನಾರಾಯಣರಾವ್ ಇವನ ಸಹೋದರನಾಗಿದ್ದು ಕೆಲವು ಕಾರ್ಯಗಳಲ್ಲಿ ಸಹಾಯ ಮಾಡಿದನು. ಲಕ್ಷ್ಮಮ್ಮಣ್ಣಿ ಅವರು ಒಡೆಯರ ಅಧಿಕಾರವನ್ನು ಹೈದರಾಲಿಯಿಂದ ಪಡೆಯಲು ಕ್ರಿಶ.೧೭೭೬ರಲ್ಲಿ ಪ್ರಧಾನ್ ತಿರುಮಲರಾವ್‌ನನ್ನು ರಾಯಭಾರಿ ಯಾಗಿ ಮದ್ರಾಸ್ಸಿನ ರಾಜ್ಯಪಾಲನಾಗಿದ್ದ ಲಾರ್ಡ್ ಪಿಗಟ್‌ನನ್ನು ಸಂಧಿಸಿ, ಆಂಗ್ಲರ ನೆರವನ್ನು ಪಡೆಯುವುದಕ್ಕಾಗಿ ರಹಸ್ಯವಾಗಿ ಕಳುಹಿಸಿಕೊಟ್ಟರು. ಇವನು ಮಹಾರಾಣಿ ಲಕ್ಷ್ಮಮ್ಮಣ್ಣಿ ಅವರ ಪ್ರತಿನಿಧಿಯಾಗಿ ಆರು ವರ್ಷಗಳ ಕಾಲ ಮದ್ರಾಸಿನಲ್ಲಿದ್ದು, ಆಂಗ್ಲ ಅಧಿಕಾರಿಗಳೊಂದಿಗೆ ಪತ್ರ ವ್ಯವಹಾರ ನಡೆಸುತ್ತಿದ್ದನು(ಪು.೪). ಹೀಗೆ ನಡೆಸಿದ ಪತ್ರ ವ್ಯವಹಾರದ ಮಾಹಿತಿಗಳನ್ನು ಈ ಕೃತಿಯಲ್ಲಿ ವಿವರಿಸುತ್ತಾ ಹೋಗುತ್ತಾರೆ. ಅಧಿಕಾರ ಪಡೆಯಲು ರಾಜಕುಟುಂಬದವರ ಪ್ರಯತ್ನಗಳನ್ನು ಇಲ್ಲಿ ನೋಡಬಹುದು. ಹೈದರಾಲಿಯ ಅಧಿಕಾರವನ್ನು ಕಿತ್ತೊಗೆದು ತಮ್ಮ ರಾಜ್ಯವನ್ನು ಮರಳಿ ದೊರಕಿಸಿ ಕೊಡುವುದಾದರೆ ಸೈನ್ಯದ ವೆಚ್ಚಕ್ಕಾಗಿ ಹಣವನ್ನು ಕೊಡುವುದಾಗಿ ರಾಣಿ ಲಕ್ಷ್ಮಮ್ಮಣ್ಣಿಯು ಪತ್ರ ಕಳುಹಿಸಿದ್ದರ ವಿವರಗಳು ಈ ಕೃತಿಯಲ್ಲಿ ಮಿಳಿತವಾಗಿವೆ. ಟಿಪ್ಪುವಿನ ಯುದ್ಧದ ವಿವರಗಳು, ಪ್ರಧಾನರಾಗಿ ತಿರುಮಲರಾವ್ ಅವರ ಕೆಲಸ ಕಾರ್ಯಗಳ ವಿವರಗಳನ್ನು ಇಲ್ಲಿ ಗಮನಿಸಬಹುದು(ಪು.೯).

ಮಹಾರಾಜ ಇಮ್ಮಡಿ ಕೃಷ್ಣರಾಜ ಒಡೆಯರ್ ನಿಧನರಾಗಿ ವಿಧವೆ ಮಹಾರಾಣಿ ಲಕ್ಷ್ಮಮ್ಮಣ್ಣಿ ಅವರ ಅಧಿಕಾರ ಕಸಿದ ನವಾಬರನ್ನು ಓಡಿಸಲು ಪ್ರಧಾನ್ ತಿರುಮಲರಾವ್ ಸೋದರರ ಜೊತೆ ಒಳಸಂಧಾನ ನಡೆಸಿ, ಬ್ರಿಟಿಷರೊಡನೆ ಪತ್ರ ವ್ಯವಹಾರ ಮಾಡಿದನು. ಟಿಪ್ಪುವು ಅದನ್ನು ತಿಳಿದು ತಿರುಮಲರಾವ್ ಮತ್ತು ಸುಬ್ಬರಾವ್ ಅರಸ್ ಅವರ ಏಳುನೂರು ಬಂಧುಗಳನ್ನು, ಗಂಡಸರು, ಹೆಂಗಸರು, ಮಕ್ಕಳು ಸೇರಿ ಎಲ್ಲರನ್ನು ಸೆರೆಯಲ್ಲಿಟ್ಟನು. ಆದರೆ ಪ್ರಧಾನ್ ತಿರುಮಲರಾವ್ ಟಿಪ್ಪು ಹಿಡಿತದಿಂದ ಕಣ್ಮರೆಯಾದ್ದರಿಂದ ಏಳುನೂರು ಜನರೆಲ್ಲರನ್ನೂ ನಿರ್ದಯವಾಗಿ ಕೊಲ್ಲಿಸಿದನು. ತಪ್ಪಿಸಿಕೊಂಡ ತಿರುಮಲರಾವ್ ಮದ್ರಾಸ್ ಪ್ರಾಂತ್ಯಕ್ಕೆ ಹೋಗಿ ಬ್ರಿಟಿಷರಿಗೆ ಬೆಂಬಲವಾಗಿ ನಿಂತು ರಾಜ್ಯವನ್ನು ಮೈಸೂರಿನ ಅರಸರಿಗೆ ದೊರಕುವಂತೆ ಮಾಡಲು ಶ್ರಮಿಸಿದ ವಿವರಗಳನ್ನು ಇಲ್ಲಿ ಮುಖ್ಯವಾಗಿ ನೋಡಬಹುದಾಗಿದೆ.

ಕೊನೆಯಲ್ಲಿ ಟಿಪ್ಪುವಿನ ಮರಣವಾರ್ತೆಯನ್ನು ಪ್ರಧಾನಿ ತಿರುಮಲರಾವ್‌ನು ಮಹಾರಾಣಿ ಲಕ್ಷ್ಮಮ್ಮಣ್ಣಿಗೆ ತಿಳಿಸಿದನು. ಕೊನೆಗೆ ರಾಜ್ಯವು ಬ್ರಿಟಿಷರಿಂದ ಮಹಾರಾಜ ಕೃಷ್ಣರಾಜ ಒಡೆಯರಿಗೆ ಹಸ್ತಾಂತರವಾದ ವಿವರಗಳನ್ನು ತಿಳಿಯಬಹುದು. ಈ ಕೃತಿಯಲ್ಲಿ ಬಹುಮುಖ್ಯವಾಗಿ ಆಡಳಿತದ ಪ್ರಧಾನರಾಗಿ ಕಾರ್ಯ ನಿರ್ವಹಿಸಿದ ವೈಖರಿಯನ್ನು ನೋಡಬಹುದು. ಈ ಕೃತಿಯ ಕೊನೆಯಲ್ಲಿ ಪತ್ರಗಳ ಮೂಲಕ ನಡೆದ ವ್ಯವಹಾರಗಳ ವಿವರವನ್ನು ನೋಡಬಹುದು. ವಿಶೇಷವಾಗಿ ೧೭೭೦ರಲ್ಲಿ ಸೆರೆಮನೆಯಿಂದ ಲಕ್ಷ್ಮಮ್ಮಣ್ಣಿ ಮದರಾಸಿನ ತನ್ನ ಪ್ರಧಾನ್ ತಿರುಮಲಾರಾವ್‌ಗೆ ಬರೆದ ಪತ್ರವನ್ನು ಗಮನಿಸಬಹುದು. ತನ್ನನ್ನು ಟಿಪ್ಪು ಯಾವ ಕ್ಷಣದಲ್ಲಿ ಬೇಕಾದರೂ ಕೊಲ್ಲಬಹುದೆಂದೂ ಶ್ರೀರಂಗಪಟ್ಟಣದ ಏಳುನೂರು ಕುಟುಂಬಗಳ ಕೊಲೆ ಮಾಡಿದ್ದಾನೆಂದೂ ತಿಳಿಸಿದ್ದಾರೆ. ಕೊನೆಯಲ್ಲಿ 'ಶ್ರೀರಂಗ' ಎಂಬ ರುಜು ಇರುವುದನ್ನು ನೋಡಬಹುದು(ಪು.೨೯). ಸ್ತ್ರೀಯಾದರೂ ಲಕ್ಷ್ಮಮ್ಮಣ್ಣಿಯ ಧೈರ್ಯ, ರಾಜತಂತ್ರ ಮತ್ತು ಸತತ ಪ್ರಯತ್ನಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ. ಒಡೆಯರು, ದಿವಾನರುಗಳ ಬಗೆಗೆ ಇರುವ ಕೃತಿಗಳನ್ನೇ ಹೆಚ್ಚು ನೋಡುತ್ತಿರುವ ಸಂದರ್ಭದಲ್ಲಿ ಪ್ರಧಾನರಾಗಿ ಗುರುತಿಸಿಕೊಂಡವರ ವಿವರಗಳನ್ನು ತಿಳಿಯಲು ಈ ಕೃತಿ ವಿಶೇಷವಾಗಿ ಗಮನ ಸೆಳೆಯುತ್ತದೆ.

ಎಂ.ಶಿಂಗ್ರಯ್ಯ ಅವರು ಬರೆದಿರುವ **ಮೈಸೂರು ಮಹಾರಾಜಾಧಿರಾಜಾ ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ**(೧೯೦೫)[೬೨] ಕೃತಿಯು ಪ್ರಮುಖವಾದುದಾಗಿದೆ. ವ್ಯಕ್ತಿ ಕೇಂದ್ರಿತವಾಗಿ ಮೈಸೂರಿನ ಆಡಳಿತದ ವಿಚಾರಗಳನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಬ್ರಿಟಿಷ್ ಕಮೀಷನರ್‌ಗಳ ಆಳ್ವಿಕೆಯ ನಂತರ ಒಡೆಯರಿಗೆ ಪುನಃ ಅಧಿಕಾರವನ್ನು ನೀಡಿದರು. ಈ ಅಧಿಕಾರದ ಗದ್ದುಗೆಯನ್ನು ಏರಿದ ಚಾಮರಾಜ ಒಡೆಯರ ಜೀವನ ಚಿತ್ರಣದ ಮೂಲಕ ಆಡಳಿತವನ್ನು ನೋಡಿರುವುದು ಈ ಕೃತಿಯಿಂದ ತಿಳಿಯಬಹುದು. ಒಡೆಯರ ವಂಶವು ಸ್ಥಾಪನೆಗೊಂಡ ವಿವರಗಳನ್ನು ಮೊದಲು ತಿಳಿಸುತ್ತಾ ಅನಂತರ ಒಡೆಯರ ಆಡಳಿತದ ವಿವರಗಳನ್ನು ಗಣನೆಗೆ ತೆಗೆದುಕೊಂಡಿದ್ದಾರೆ. ಹೈದರಾಲಿ ಮತ್ತು ಟಿಪ್ಪುವಿನ ವಿವರಗಳು, ಬ್ರಿಟಿಷರು ಒಡೆಯರಿಗೆ ಅಧಿಕಾರ ಮರಳಿಸಿದ ವಿವರ, ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತದ ವಿಚಾರಗಳು ಮಿಳಿತವಾಗಿವೆ. ನಗರದಂಗೆಯಿಂದ ಕಳೆದುಕೊಂಡ ಅಧಿಕಾರವನ್ನು ಕಮೀಷನರ್ ಆದ ಬೌರಿಂಗ್ ಮತ್ತು ಎಲಿಯೆಟ್ ಸಾಹೇಬರು ಚಾಮರಾಜ ಒಡೆಯರಿಗೆ ಪುನಃ ಅಧಿಕಾರವನ್ನು ನೀಡಿದ್ದರ ವಿವರಗಳನ್ನು ನೋಡಬಹುದು(ಪು.೬೨). ಒಟ್ಟಾರೆಯಾಗಿ ಈ ಕೃತಿಯ ಮೊದಲ ಭಾಗದಲ್ಲಿ ಚಾಮರಾಜ ಒಡೆಯರ್ ಅವರ ಬಾಲ್ಯ, ವಿದ್ಯಾಭ್ಯಾಸ, ವಿವಾಹ, ರಾಜ್ಯಾಭಿಷೇಕೋತ್ಸವ ಮುಂತಾದ ವಿಚಾರಗಳನ್ನು ತಿಳಿಸಿದ್ದಾರೆ.

ಎರಡನೆಯ ಭಾಗದಲ್ಲಿ ಮುಖ್ಯವಾಗಿ ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆಯ ವಿವರಗಳನ್ನು ನೋಡಬಹುದು(ಪು.೧೧೫). ದಿವಾನರಾದ ಸಿ.ರಂಗಾಚಾರ್ಲು ಅವರು ಈ ಸಭೆಯ ಸ್ಥಾಪನೆಗೆ ಕಾರಣರಾದರು. ಅಲ್ಲದೆ ವಿದೇಶಿ ಸಂಚಾರದ ಮಾಹಿತಿಗಳನ್ನು ಇಲ್ಲಿ ಗಮನಿಸಬಹುದು. ಒಡೆಯರ ರಾಜ್ಯಾಭಾರ ಕ್ರಮವನ್ನು ತಿಳಿಸುತ್ತಾ ೧೮೮೧ರಿಂದ ೧೮೯೪ರವರೆಗಿನ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಆದಾಯ ವೆಚ್ಚಗಳ ಬಗೆಗೆ ಗಮನ ಹರಿಸಿ, ದುಂದುವೆಚ್ಚಕ್ಕೆ ಕಡಿವಾಣ

ಹಾಕಿದರು. ಮೈಸೂರಿನಲ್ಲಿ ಓರಿಯೆಂಟಲ್ ಲೈಬ್ರರಿಯನ್ನು ಸ್ಥಾಪಿಸಿ, ಅನೇಕ ಪ್ರಾಚೀನ ಗ್ರಂಥಗಳನ್ನು ಶುದ್ಧಪ್ರತಿಗಳಾಗಿ ಬರೆಯಿಸಿ ಇಟ್ಟರು. ಪಾಳೆಯಗಾರರಿಗೆ ಪೆನ್‌ಷನ್‌ಗಳನ್ನು ನೀಡುವ ಸೌಲಭ್ಯ ಕಲ್ಪಿಸಿದರು. ಬಾಲ್ಯವಿವಾಹ ನಿಷೇಧ ಕಾಯ್ದೆಯನ್ನು ಜಾರಿಗೊಳಿಸಿದರು. ವ್ಯವಸಾಯ, ನೀರಾವರಿ, ಸಾರಿಗೆ ಸಂಪರ್ಕದ ಅಭಿವೃದ್ಧಿ ಹೀಗೆ ಇವರ ಆಡಳಿತದಲ್ಲಿ ಅನೇಕ ಸುಧಾರಣೆಗಳಾದವು ಎಂಬುದನ್ನು ವಿವರಿಸಿದ್ದಾರೆ(ಪು.೧೯೪-೨೦೬). ಆದರೆ ಇಲ್ಲಿ ಮುಖ್ಯವಾಗಿ ಅಸ್ಪೃಶ್ಯತೆ ನಿವಾರಣೆಗಾಗಿ ಕೈಗೊಂಡ ಕಾರ್ಯಗಳನ್ನು ಈ ಕೃತಿಯಲ್ಲಿ ವಿವರಿಸಿರುವುದಿಲ್ಲ. ಅಕ್ಷರ ಬಲ್ಲ ಬರಹಗಾರರು ಈ ಸೂಕ್ಷ್ಮ ವಿಷಯಗಳತ್ತ ಗಮನಹರಿಸಿಲ್ಲ. ಪ್ರಭುತ್ವಮುಖಿಯಾಗಿ ಕೃತಿಯನ್ನು ರಚಿಸಿದ್ದಾರೆಯೇ ಹೊರತು ಜನಮುಖಿಯಾಗಿ ನೋಡಿರುವುದಿಲ್ಲ. ಸಾಂಪ್ರದಾಯಿಕ ಮಾದರಿಯನ್ನು ಈ ಕೃತಿಯಲ್ಲಿ ನೋಡಬಹುದು.

ಯಂ.ರಾಮರಾವ್ ಅವರು ಬರೆದಿರುವ **ಚಾಮರಾಜ ಒಡೆಯರವರು**ಎಂಬ ಕೃತಿಯು ಕೂಡ ಚಾಮರಾಜ ಒಡೆಯರ್ ಅವರ ಜೀವನ ಚರಿತ್ರೆಯನ್ನು ಕುರಿತದ್ದಾಗಿದೆ. ಈ ಕೃತಿಯಲ್ಲಿ ಅವರ ದತ್ತು ಸ್ವೀಕಾರ, ಬಾಲ್ಯ, ವಿದ್ಯಾಭ್ಯಾಸ, ಪಟ್ಟಾಭಿಷೇಕ ಮಹೋತ್ಸವದ ವಿವರಗಳನ್ನು ತಿಳಿಸಿದ್ದಾರೆ. ಆಡಳಿತದಲ್ಲಿ ಅವರು ಕೈಗೊಂಡ ಕಾರ್ಯಗಳು, ದೇಶ ಸಂಚಾರ ಮುಂತಾದ ಅಂಶಗಳನ್ನು ಈ ಕೃತಿಯಲ್ಲಿ ನೋಡಬಹುದು. ಎಂ.ಶಿಂಗ್ರಯ್ಯ ಅವರು ಬರೆದಿರುವ ಕೃತಿಗೂ ಈ ಕೃತಿಗೂ ಇರುವ ತಾತ್ವಿಕತೆಯನ್ನು ನೋಡಿದಾಗ ಇವರೆಡೂ ಸಾಂಪ್ರದಾಯಿಕ ಮಾದರಿಯಲ್ಲಿ ರಚನೆ ಆಗಿವೆ. ಮೊದಲನೆಯ ಕೃತಿಯು ಚಾಮರಾಜ ಒಡೆಯರ ರಾಜ್ಯಭಾರದ ಅಂಶಗಳನ್ನು ವಿವರವಾಗಿ ತಿಳಿಸಿದರೆ, ಎರಡನೇ ಕೃತಿಯು ಸ್ವಲ್ಪಮಟ್ಟಿನ ವಿಚಾರಗಳನ್ನು ತಿಳಿಸುತ್ತದೆ.

ಬಿ.ರಾಮಕೃಷ್ಣರಾವ್ ಅವರು **ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜರವರ ವಂಶಾವಳಿ**(೧೯೬೧-೧೯೨೨)[೪೩]ಎಂಬ ಕೃತಿಯನ್ನು ಎರಡು ಸಂಪುಟಗಳಲ್ಲಿ ಪ್ರಕಟಿಸಿದ್ದಾರೆ. ಮೊದಲು ಈ ಕೃತಿಯನ್ನು ಇಂಗ್ಲಿಷ್‌ನಲ್ಲಿ **ಆ್ಯನಲ್ಸ್ ಆಫ್ ದಿ ಮೈಸೂರು ರಾಯಲ್ ಫ್ಯಾಮಿಲಿ** (Annals of the Mysore Royal Family) ಎನ್ನುವ ಎರಡು ಸಂಪುಟಗಳಲ್ಲಿ ಹೊರತಂದಿದ್ದರು. ಅನಂತರ ಕನ್ನಡದಲ್ಲಿ ಈ ಕೃತಿಯನ್ನು 'ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜರವರ ವಂಶಾವಳಿ' ಎಂದು ಎರಡು ಸಂಪುಟಗಳಲ್ಲಿ ಪ್ರಕಟಿಸಿದರು. ಮೊದಲನೆಯ ಸಂಪುಟವು ಒಡೆಯರ ಮನೆತನ ಸ್ಥಾಪಿಸಿದ ಯದುರಾಯನ ಆಗಮನ, ಆತನ ಯುದ್ಧಗಳಿಂದ ಹಿಡಿದು ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರ ಸ್ವೀಕರಿಸುವ ತನಕ ಮಾಹಿತಿಗಳನ್ನು ವಿವರಿಸುತ್ತದೆ. ಯದುರಾಯನಿಂದ ಹಿಡಿದು ಏಳನೆಯ ಒಡೆಯರಾದ ಬೋಳ ಚಾಮರಾಜ ಒಡೆಯರ್‌ರವರೆಗಿನ ಮೈಸೂರಿನ ಚರಿತ್ರೆಯಲ್ಲಿ ಮಹತ್ತರ ಘಟನೆಗಳೇನೂ ನಡೆದಂತಿಲ್ಲ. ನಂತರ ಅಧಿಕಾರಕ್ಕೆ ಬಂದ ರಾಜ ಒಡೆಯರು ಅವರಿಂದ ಮೈಸೂರು ಒಡೆಯರ ನೈಜ ಇತಿಹಾಸ ಪ್ರಾರಂಭವಾಯಿತು. ಹೀಗೆ ಈ ಸಂಪುಟದಲ್ಲಿ ವಿವರಗಳನ್ನು ಕಾಲಾನುಕ್ರಮಣಿಕೆಯಲ್ಲಿ ವಿವರಿಸುತ್ತಾ ಹೋಗುತ್ತಾರೆ.

ಅಲಮೇಲಮ್ಮನ ಶಾಪದ ಪ್ರಸ್ತಾಪವನ್ನು ಇಲ್ಲಿ ವಿವರಿಸಿದ್ದಾರೆ. ಈ ರಾಜ ಒಡೆಯರ ಕಾಲದಲ್ಲಿ ನಡೆದ ದಸರಾದ ವಿಶೇಷತೆಯನ್ನು ತಿಳಿಸಿದ್ದಾರೆ. ರಣಧೀರ ಕಂಠೀರವ ನರಸರಾಜ

ಒಡೆಯರ ಕಾಲದಲ್ಲಿ ದಳವಾಯಿಯಾಗಿದ್ದ ವಿಕ್ರಮರಾಯನ ಮೋಸದ ವಿವರಗಳನ್ನು ಇಲ್ಲಿ ಗಮನಿಸಬಹುದು(ಪು.೬೮). ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಡೆದಂತಹ ರೈತ ಹೋರಾಟದ ಅಂಶಗಳನ್ನು ಈ ಕೃತಿಯಲ್ಲಿ ನೋಡಿದಾಗ ತೆರಿಗೆ ವಿರುದ್ಧ ರೈತರನ್ನು ಸಂಘಟಿಸುತ್ತಿದ್ದ ಜಂಗಮರನ್ನು ಕೊಲ್ಲಿಸಿದ ವಿಚಾರಗಳನ್ನು ತಿಳಿಸಿರುವುದಿಲ್ಲ. ಆದರೆ ಕೊಬ್ಬಿದ ರೈತರನ್ನು ಅಡಗಿಸಿ ತೆರಿಗೆಯನ್ನು ಹಾಕಲಾಯಿತು ಎಂದು ತಿಳಿಸಿದ್ದಾರೆ. ಅಂದರೆ ರೈತರು ದವಸಧಾನ್ಯಗಳನ್ನು ಬೆಳೆದರೂ ಸರಿಯಾಗಿ ತೆರಿಗೆ ನೀಡುತ್ತಿಲ್ಲ ಎಂದು ಕೆಲವು ಷರತ್ತುಗಳನ್ನು ವಿಧಿಸಿದರು ಎಂಬ ಅಂಶಗಳನ್ನು ತಿಳಿಸಿದ್ದಾರೆ. ಇಲ್ಲಿ ದೇಶೀಯ ಕೃತಿಕಾರರಾಗಿ ಈ ಜಂಗಮರ ಕಗ್ಗೊಲೆ ನಡೆಸಿದ ಚಿಕ್ಕದೇವರಾಜ ಒಡೆಯರ ಬಗೆಗೆ ಯಾವುದೇ ಮಾಹಿತಿ ನೀಡಿರುವುದಿಲ್ಲ. ಕೃತಿಕಾರರು ಒಡೆಯರ ಮೇಲಿನ ಗೌರವ, ಪ್ರೀತಿಯಿಂದ ಈ ಕೃತ್ಯಗಳನ್ನು ಮರೆಮಾಚಿಸಿರುವುದನ್ನು ಗಮನಿಸಬಹುದು(ಪು.೧೨೩).

ಒಟ್ಟಿನಲ್ಲಿ ಒಡೆಯರ ಆಳ್ವಿಕೆ, ಪಟ್ಟಾಭಿಷೇಕ, ರಾಯಭಾರದ ಅವಧಿಯ ವಿವರ, ಸಂತಾನ, ದಳವಾಯಿಗಳ ಆಡಳಿತದ ವಿವರ, ಸ್ಥಳಗಳ ಗೆಲ್ಲುವಿಕೆ, ಧರ್ಮಕಾರ್ಯಗಳು, ಫಿರಂಗಿಗಳನ್ನಿರಿಸಿದ್ದ ವಿವರ, ಗಡಿಗಳ ವಿಚಾರ, ಅಭಿವೃದ್ಧಿ ಕಾರ್ಯಗಳು ಇವೇ ಮೊದಲಾದ ಅಂಶಗಳನ್ನು ಈ ಸಂಪುಟವು ತಿಳಿಸುತ್ತದೆ. ಒಡೆಯರನ್ನು ಕೇಂದ್ರಿತವಾಗಿರುವುದರಿಂದ ಮೈಸೂರು ಒಡೆಯರ ಚರಿತ್ರೆಯನ್ನು ಎಂಗೇಜ್ ಮಾಡಿರುವ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ಹೆಚ್ಚಿನ ಮಾಹಿತಿಗಳಿಲ್ಲ. ಈ ಕೃತಿಯ ಮೊದಲ ಸಂಪುಟವು ಮುಮ್ಮಡಿ ಕೃಷ್ಣರಾಜ ಒಡೆಯರ ಪಟ್ಟಾಭಿಷೇಕ, ಆಡಳಿತ ಕೆಲ ವಿವರಗಳೊಂದಿಗೆ ಮುಕ್ತಾಯವಾಗುತ್ತದೆ.

ಈ ಕೃತಿಯ ಎರಡನೇ ಭಾಗದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತ, ದಿವಾನ್ ಪೂರ್ಣಯ್ಯ ಅವರ ಆಡಳಿತದ ಸುಧಾರಣೆಗಳು, ಕಛೇರಿ, ತಾಲ್ಲೂಕುಗಳ ಆಡಳಿತ, ರೈತರು, ತೆರಿಗೆ, ಆರೋಗ್ಯ, ರಸ್ತೆ–ಸಾರಿಗೆ, ಶಿಕ್ಷಣ ಇವೇ ಮೊದಲಾದ ವಿಷಯಗಳನ್ನು ನೋಡಬಹುದು. ನಗರದಂಗೆಯಿಂದಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರವನ್ನು ಕಳೆದುಕೊಂಡರು. ಹಾಗೆಯೇ ಕಮೀಷನರ್‌ಗಳ ಆಳ್ವಿಕೆಯ ಪ್ರಾರಂಭವಾದ ಅಂಶಗಳನ್ನು ನೋಡಬಹುದು. ಕಮೀಷನರ್‌ಗಳ ಆಳ್ವಿಕೆಯು ಮೈಸೂರಿನ ಅಭಿವೃದ್ಧಿಗೆ ಪೂರಕವಾಯಿತು ಎಂಬ ಅಂಶಗಳನ್ನು ವಿವರಿಸಿದ್ದಾರೆ. ಕೃಷಿ, ಕೈಗಾರಿಕೆ, ಸಾರಿಗೆ–ಸಂಪರ್ಕ, ನ್ಯಾಯ, ವಿದ್ಯಾಭ್ಯಾಸ ಇನ್ನೂ ಮುಂತಾದ ಮಾಹಿತಿಗಳನ್ನು ನೀಡಿದ್ದಾರೆ. ನಗರ ದಂಗೆಯಿಂದಾಗಿ ಕಳೆದುಕೊಂಡಿದ್ದ ಒಡೆಯರ ಅಧಿಕಾರವನ್ನು ಪುನಃ ಚಾಮರಾಜ ಒಡೆಯರಿಗೆ ನೀಡಿದ್ದರ ವಿವರಗಳನ್ನು ಗಮನಿಸಬಹುದು. ಚಾಮರಾಜ ಒಡೆಯರ ಧರ್ಮ ಕಾರ್ಯಗಳನ್ನು ಇಲ್ಲಿ ಚಿತ್ರಿಸಿದ್ದಾರೆ. ದೇವಾಲಯಗಳಿಗೆ ದಾನ ನೀಡಿದ್ದರ ವಿವರಗಳನ್ನು ತಿಳಿಸಿದ್ದಾರೆ. ಆದರೆ ಜನಮುಖಿ ಅಭಿವೃದ್ಧಿ ಕಾರ್ಯಗಳನ್ನು ಅಷ್ಟಾಗಿ ವಿವರಿಸಿರುವುದಿಲ್ಲ. ಸ್ವಾಮಿ ವಿವೇಕಾನಂದರ ಮೈಸೂರಿನ ಭೇಟಿಯ ವಿಚಾರಗಳನ್ನು ವಿವರಿಸಿರುವುದಿಲ್ಲ. ಒಟ್ಟಿನಲ್ಲಿ ಈ ಕೃತಿಯು ಮೈಸೂರು ಒಡೆಯರ ವಂಶಾವಳಿಯ ಮೂಲವನ್ನು ತಿಳಿಸುತ್ತದೆ. ಈ ಕೃತಿಯ ಬರವಣಿಗೆಯಲ್ಲಿ ತಾಂತ್ರಿಕ ಪರಿಣತಿ ಇಲ್ಲದಿದ್ದರೂ ದೊರೆತ ಮಾಹಿತಿಗಳಿಂದ ಈ ಕೃತಿಯನ್ನು ಕಟ್ಟಿದ್ದಾರೆ.

ಎಂ.ಶಾಮರಾವ್ ಅವರು ಕನ್ನಡ ಭಾಷೆಯಲ್ಲಿ ಬರೆದ ಮತ್ತೊಂದು ಕೃತಿ **ಮೈಸೂರು ಸಂಸ್ಥಾನದ ಚರಿತ್ರೆಸಾರ(೧೯೨೧),**[೪೪] ಈ ಕೃತಿಯು ಮೈಸೂರು ವಿದ್ಯಾಭ್ಯಾಸ ಇಲಾಖೆಯ ಪ್ರಕಟಣೆಯಾಗಿದ್ದು, ಇದನ್ನು ಚರಿತ್ರೆಯ ಪಠ್ಯಪುಸ್ತಕವಾಗಿ ಶಾಲೆಗಳಲ್ಲಿ ಹಲವು ವರ್ಷಗಳ ಕಾಲ ಬೋಧಿಸಲಾಗುತ್ತಿತ್ತು. ಈ ಕೃತಿಯು ನಾಲ್ಕು ಭಾಗಗಳನ್ನು ಹೊಂದಿದೆ. ಅದರಲ್ಲಿ ಕ್ರಮವಾಗಿ ೫, ೬, ೧೦ ಮತ್ತು ೧೬ ಪ್ರಕರಣಗಳಿವೆ. ಮೊದಲನೇ ಭಾಗದಲ್ಲಿ ಪೂರ್ವದ ಹಿಂದೂ ಅರಸರ ಆಳ್ವಿಕೆಯನ್ನು ವಿವರಿಸಿದ್ದಾರೆ. ಕರ್ನಾಟಕವನ್ನಾಳಿದ ಕದಂಬ, ಗಂಗ, ಪಲ್ಲವರು ಮೊದಲಾದ ರಾಜಮನೆತನಗಳ ಚರಿತ್ರೆಯನ್ನು ನೋಡಬಹುದು. ಎರಡನೆಯದಾಗಿ ದ್ವಾರಕೆಯಿಂದ ಮೈಸೂರು ಸೀಮೆಗೆ ಬಂದ ಯದುರಾಯ ಮತ್ತು ಕೃಷ್ಣರಾಯರೆಂಬ ಸಹೋದರರು ಸಂಸ್ಥಾನ ಸ್ಥಾಪಿಸಿದ ವಿವರಗಳನ್ನು ತಿಳಿಸಲಾಗಿದೆ(ಪು.೧೫). ಅನಂತರದ ಒಡೆಯರುಗಳಾದ ಇಮ್ಮಡಿ ರಾಜ ಒಡೆಯರು, ಕಂಠೀರವ ನರಸರಾಜ ಒಡೆಯರು, ದೊಡ್ಡ ದೇವರಾಜ ಒಡೆಯರು ಆಳ್ವಿಕೆ ನಡೆಸಿದರು. ದಳವಾಯಿ ವಿಕ್ರಮರಾಯನ ಕುತಂತ್ರದ ವಿವರಗಳನ್ನು ಗಮನಿಸಬಹುದು.

ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಹೊಸದಾಗಿ ವಿಧಿಸಿದ ತೆರಿಗೆಯನ್ನು ರೈತರು ವಿರೋಧಿಸಿದರು. ರೈತರಿಗೆ ಸಹಾಯ ಮಾಡುತ್ತಿದ್ದ ಜಂಗಮರನ್ನು ಮತ್ತು ರೈತರನ್ನು, ವಿಶಾಲಾಕ್ಷ ಪಂಡಿತರನ್ನು ಕುತಂತ್ರದಿಂದ ಕೊಲ್ಲಿಸಿದರು ಎಂಬ ಮಾಹಿತಿಯನ್ನು ನೀಡಿದ್ದಾರೆ. ದಳವಾಯಿಗಳಾದ ದೇವರಾಜಯ್ಯ ಮತ್ತು ನಂಜರಾಜಯ್ಯ ಅವರ ಆಡಳಿತದ ಅಂಶಗಳು ಮುಖ್ಯವಾಗಿವೆ. ನಂತರ ಹೈದರಾಲಿ ಏಳಿಗೆ, ಟಿಪ್ಪುವಿನ ಆಡಳಿತದ ಎಲ್ಲಾ ಅಂಶಗಳು ನಿರೂಪಿತವಾಗಿವೆ. ಮುಖ್ಯವಾಗಿ ಇಲ್ಲಿ ಟಿಪ್ಪುವನ್ನು ವಿಲ್ಕ್ಸ್ ತಿಳಿಸಿರುವಂತೆ ಆತ ಮತಾಂಧ ಎನ್ನುವ ಹೇಳಿಕೆಯನ್ನು ಮುಂದುವರಿಸಲಾಗಿದೆ. ಹಿಂದೂಗಳನ್ನು ಮತಾಂತರಕ್ಕೆ ಒಳಪಡಿಸಿ, ಅನೇಕ ಮಸೀದಿಗಳನ್ನು ನಿರ್ಮಾಣ ಮಾಡಿದನು. ಆತನು ಪ್ರತಿಯೊಂದು ಹಳ್ಳಿಗಳಲ್ಲಿ ಮದ್ಯಪಾನದ ಅಂಗಡಿಗಳನ್ನು ಮುಚ್ಚಿದನು. ಇದರಿಂದ ರಾಜ್ಯಕ್ಕೆ ಇರುವ ಆದಾಯ ಕಡಿಮೆಯಾಯಿತು. ಇದನ್ನು ಭರ್ತಿ ಮಾಡಲು ದೇವಾಲಯಗಳಿಗೆ ಕೊಡುತ್ತಿದ್ದ ಹಣವನ್ನು ನಿಲ್ಲಿಸಿದನು. ಕೆಲವು ದೇವಾಲಯಗಳನ್ನು ನಾಶಪಡಿಸಿದನು ಎಂಬ ಈ ಹೇಳಿಕೆಗಳನ್ನು ನೀಡುತ್ತಾ ಟಿಪ್ಪು ಮತಾಂಧ ಎಂದು ವಿವರಿಸುತ್ತಾರೆ. ಲೆಕ್ಕಪತ್ರಗಳನ್ನು ಕೂಡ ಪರ್ಶಿಯನ್ ಭಾಷೆಯಲ್ಲಿಯೇ ವ್ಯವಹರಿಸುತ್ತಿದ್ದು, ಉನ್ನತ ಮಟ್ಟದ ಹುದ್ದೆಗಳಲ್ಲಿ ಮುಸ್ಲಿಂರೇ ಇದ್ದರು. ಆ ಮುಸ್ಲಿಂ ಅಧಿಕಾರಿಗಳೆಲ್ಲ ತಮ್ಮ ನಿಷ್ಠೆಗೆ ಅನುಗುಣವಾಗಿ 'ಕುರಾನ್' ಪುಸ್ತಕವನ್ನು ತನ್ನ ತಲೆಯ ಮೇಲೆ ಇರಿಸಿಕೊಂಡು ಪ್ರಮಾಣ ಮಾಡುವ ಪದ್ಧತಿಯನ್ನು ಜಾರಿಗೆ ತಂದಿದ್ದನು(ಪು.೬೭). ಈ ಹಿನ್ನೆಲೆಯಲ್ಲಿ ಕೃತಿಕಾರರು ಒಡೆಯರ ಆಡಳಿತವನ್ನು ವಿವರಿಸುತ್ತಾ, ಒಡೆಯರ ಅಧಿಕಾರವನ್ನು ಕಿತ್ತುಕೊಂಡ ಹೈದರಾಲಿ ಮತ್ತು ಟಿಪ್ಪುವನ್ನು ಚಿತ್ರಿಸಿರುವ ಬಗೆ ಈ ಕೃತಿಯಲ್ಲಿ ಎದ್ದು ಕಾಣುತ್ತದೆ. ಟಿಪ್ಪುವಿನ ಮರಣದ ನಂತರ ಸಂಸ್ಥಾನದ ಆಡಳಿತವನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಹಸ್ತಾಂತರಿಸಿರುವ ವಿವರಗಳು, ಹಾಗೆಯೇ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದವರೆಗೆ ಸಾಗಿ ಬಂದ ಆಡಳಿತದ ವಿಚಾರಗಳನ್ನು ಈ ಕೃತಿಯು ಒಳಗೊಂಡಿದೆ. ಈ ಕೃತಿಯು ಶಾಲೆಯ ಮಕ್ಕಳ ಗ್ರಹಣಶಕ್ತಿಯನ್ನು

ಗಮನಿಸಿ, ಸರಳಭಾಷೆಯಲ್ಲಿ ವಿವರಿಸಿದ್ದಾರೆ. ಆಕರಗಳಾಗಿ ವಿಲ್ಕ್ಸ್, ಬುಕಾನನ್‌ನ ಕೃತಿಗಳು ಮತ್ತು ಇತರ ಲಿಖಿತ ದಾಖಲೆಗಳನ್ನು ಬಳಸಿಕೊಂಡಿದ್ದಾರೆ. ಮೈಸೂರು ಒಡೆಯರ ಚರಿತ್ರೆಯನ್ನು ತಿಳಿಸುವ ಕೃತಿಗಳು ಕನ್ನಡದಲ್ಲಿ ಇಲ್ಲದೇ ಇರುವಾಗ ಈ ಕೃತಿಯು ಅಂದಿನ ಕಾಲಕ್ಕೆ ಮುಖ್ಯವಾದ ಇತಿಹಾಸ ಗ್ರಂಥವಾಗಿತ್ತು.

ಪ್ರಮುಖವಾಗಿ **ದಿ ಪೊಲಿಟಿಕಲ್ ಹಿಸ್ಟರಿ ಆಫ್ ಮೈಸೂರು**[೪೫] ಎಂಬ ಕೃತಿಯಲ್ಲಿ ಮೈಸೂರು ಒಡೆಯರ ರಾಜಕೀಯದ ವಿಚಾರಗಳು ಹೆಚ್ಚಾಗಿ ಮಿಳಿತವಾಗಿವೆ. ಪ್ರಾರಂಭದ ಒಡೆಯರಿಂದ ವಿಷಯಗಳನ್ನು ಕ್ರೋಡೀಕರಿಸಲಾಗಿದೆ. ಯದುವಂಶದಿಂದ ಮೈಸೂರು ಒಡೆಯರ ಆಡಳಿತದ ಸ್ಥಾಪನೆ, ನಂತರದ ಒಡೆಯರ್‌ಗಳ ಆಳ್ವಿಕೆಯನ್ನು ನೋಡಬಹುದು. ರಾಜ ಒಡೆಯರಿಂದ ಈ ಸಂಸ್ಥಾನ ಒಂದು ಪ್ರವರ್ಧಮಾನಕ್ಕೆ ಬಂದಿತು. ನಂತರ ಚಿಕ್ಕದೇವರಾಜ ಒಡೆಯರ್ ಮೈಸೂರಿನ ಆಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು ಎಂಬ ವಿಚಾರಗಳು ಇಲ್ಲಿ ಮುಖ್ಯ. ಪ್ರಮುಖವಾಗಿ ತೆರಿಗೆ ವಸೂಲಿಯಲ್ಲಿ ಆದ ಒಂದು ಘಟನೆಯನ್ನು ಇಲ್ಲಿ ಚರ್ಚಿಸಲೇ ಬೇಕಾದ ಅನಿವಾರ್ಯವಾಗಿದೆ. ಮಠಗಳಲ್ಲಿನ ಜಂಗಮರು ರೈತರಿಗೆ ತೆರಿಗೆ ಕೊಡದಂತೆ ಅವರ ಮನವೊಲಿಸಿ ಸಂಘಟಿಸುತ್ತಿದ್ದರು ಎಂಬ ವಿಚಾರಕ್ಕೆ ಅವರನ್ನು ಕೊಲೆಗೈದರು ಎನ್ನುವುದಾಗಿದೆ. ಕೃತಿಯಲ್ಲಿ ೭೦೦ ಲಿಂಗಾಯತ ಮಠಗಳನ್ನು ಒಂದೇ ಬಾರಿಗೆ ಮುಚ್ಚಿದರು ಎಂಬುದು ಮುಖ್ಯ. ಹೈದರಾಲಿ ಮತ್ತು ಟಿಪ್ಪು ಆಡಳಿತದ ವಿವರಗಳು, ಮಲಬಾರ್ ಪ್ರದೇಶಗಳಲ್ಲಿ ಹಿಂದೂಗಳ ಮತಾಂತರ ಹಾಗೂ ಹಿಂದೂ ದೇವಾಲಯಗಳು ನಾಶಗೊಳಿಸಿದನು ಎಂಬ ವಿಚಾರಗಳು ನಿರೂಪಿತವಾಗಿವೆ(ಪು.೭೫). ಕಮೀಷನರ್‌ಗಳ ಆಳ್ವಿಕೆ ಮೈಸೂರು ಸಂಸ್ಥಾನ ಯಾವ ರೀತಿ ಪ್ರಗತಿ ಹೊಂದಲು ಸಹಕಾರಿಯಾದವು ಎಂಬುದನ್ನು ತಿಳಿಸುತ್ತಾರೆ. ಈ ಕೃತಿಯ ಕೊನೆಯಲ್ಲಿ ಬ್ರಿಟಿಷರಿಂದ ಅಧಿಕಾರವನ್ನು ಪಡೆಯಲು ಒಡೆಯರು ಮತ್ತು ಕಮೀಷನರ್‌ಗಳ ಪತ್ರಗಳ ವಿವರಗಳನ್ನು ಗಮನಿಸಬಹುದು. ಈ ನಿಟ್ಟಿನಲ್ಲಿ ಕೃತಿಯನ್ನು ರಾಜಕೀಯ ವಿಷಯಗಳಿಗೆ ಹೆಚ್ಚು ಒತ್ತುಕೊಟ್ಟು ರಚಿಸಿರುವುದನ್ನು ಗಮನಿಸಬಹುದು.

ಸುಬ್ಬರಾವ್ ಎನ್. ಅವರು ಬರೆದಿರುವ **'ಮೈಸೂರು ವಡೆಯರ ಎರಡು ಶತಮಾನಗಳ ಆಳ್ವಿಕೆ(೧೫೬೫–೧೭೬೧)(೧೯೩೨)**[೪೬] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಪ್ರಮುಖವಾಗಿ ರಾಜ್ಯಾಭಾರಕ್ರಮವನ್ನು ಕುರಿತು ವಿವರಿಸಲಾಗಿದೆ. ತಾಳಿಕೋಟೆಯ ಯುದ್ಧದ ನಂತರ ಸಂತತಿಗಳು ಯಾವ ರೀತಿ ರಾಜ್ಯ ಕಟ್ಟಿ ಆಳ್ವಿಕೆ ಪ್ರಾರಂಭಿಸಿದರು ಎಂಬುದು ಮುಖ್ಯ. ಈ ನಿಟ್ಟಿನಲ್ಲಿ ಮೈಸೂರು ಒಡೆಯರು ರಾಜ್ಯ ಕಟ್ಟಿ ಪ್ರವರ್ಧಮಾನಕ್ಕೆ ಬಂದರು. ಇವರ ಆಡಳಿತ, ಆರ್ಥಿಕ ಪರಿಸ್ಥಿತಿ, ಸಾಮಾಜಿಕ ರೀತಿ–ನೀತಿಗಳು ಇವೇ ಮೊದಲಾದ ಅಂಶಗಳ ಚಿತ್ರಣವನ್ನು ಈ ಕೃತಿಯು ತಿಳಿಸುತ್ತದೆ. ರಾಜ ಒಡೆಯರಿಂದ ಮೈಸೂರು ಸಂಸ್ಥಾನವು ಹೆಚ್ಚು ಪ್ರಖ್ಯಾತಿಗೆ ಒಳಗಾಗಿ ತನ್ನ ಐಡೆಂಟಿಟಿಯನ್ನು ಪಡೆಯಿತು ಹಾಗೂ ರಾಜ ಒಡೆಯರ ನಂತರ ರಾಜ್ಯಾಡಳಿತವು ಮುಂದುವರಿಯುತ್ತಾ ಹೋಯಿತು ಎಂಬುದನ್ನು ಗಮನಿಸಬಹುದು. ದಳವಾಯಿಗಳ ಹುದ್ದೆ ರಾಜ ಒಡೆಯರಿಂದ ಪ್ರಾರಂಭವಾದುದು ಮುಖ್ಯವಾಗಿದ್ದು, ರಾಜ್ಯಾಡಳಿತದಲ್ಲಿ ದಳವಾಯಿಗಳ ಅಧಿಕಾರವನ್ನು ನೋಡಬಹುದು. ರಕ್ತಸಂಬಂಧಿಗಳೇ ಹೆಚ್ಚಾಗಿ

ಈ ಹುದ್ದೆಯನ್ನು ಅಲಂಕರಿಸುತ್ತಿದ್ದುದು ಗಮನಾರ್ಹ. ದಳವಾಯಿಗಳ ಸಹಾಯವಿಲ್ಲದಿದ್ದರೆ ರಾಜ್ಯವು ರಾಜಕೀಯ ವಾತಾವರಣದಲ್ಲಿ ಮುಂದುವರಿದು ಪ್ರಾಮುಖ್ಯತೆಗೆ ಬರುವುದು ಅಸಾಧ್ಯವಾಗುತ್ತಿದ್ದಿತು. ಇಲ್ಲಿ ಮುಖ್ಯವಾಗಿ ಜಾತಿವ್ಯವಸ್ಥೆ, ಜಾತಿಗಳಿಗೆ ಅವರದೇ ಆದ ಕಸುಬಿದ್ದು (ಬಣಜಿಗರು, ವೈಶ್ಯರು, ಪಾಂಚಾಳರು) ತಮ್ಮ ಜಾತಿಪದ್ಧತಿಗಳ ಹದ್ದುಬಸ್ತು ಮೀರಿ ನಡೆಯದಂತೆ, ಸ್ಥಳೀಯ ನೆಮ್ಮದಿಗೆ ಭಂಗ ತರದಂತೆ ನೋಡಿಕೊಳ್ಳಬೇಕು ಎಂಬ ಆಜ್ಞೆಗಳಿದ್ದವು ಎಂಬುದನ್ನು ಈ ಕೃತಿಯಲ್ಲಿ ಗಮನಿಸಬಹುದು. ಇತ್ತೀಚೆಗೆ ಈ ಜಾತಿಯ ವೃತ್ತಿಗಳು ಪಲ್ಲಟವಾಗಿವೆ. ವರ್ತಕರು ಮೋಸ ಮಾಡಿದರೆ ಶಿಕ್ಷೆಯ ವಿವರ, ನ್ಯಾಯ ತೀರ್ಮಾನದ ಚಾವಡಿಗಳು ಹೀಗೆ ರಾಜ್ಯಾಡಳಿತದ ವಿವರಗಳನ್ನು ಇಲ್ಲಿ ಗಮನಿಸಬಹುದು. ಈ ಕೃತಿಯ ವಿವರವನ್ನು ಬೆಂಗಳೂರು ಮಿಥಿಕ್ ಸೊಸೈಟಿಯ 'ಕ್ವಾರ್ಟರ್ಲಿ ಜರ್ನಲ್ ಆಫ್ ದಿ ಮಿಥಿಕ್ ಸೊಸೈಟಿ' ಎಂಬ ತ್ರೈಮಾಸಿಕ ಪತ್ರಿಕೆಯ 'ಟು ಸೆಂಚುರಿಸ್ ಆಫ್ ಒಡೆಯರ್ ರೂಲ್ ಇನ್ ಮೈಸೂರು'(Two Centuries of wodeyar Rule in Mysore)(ವಾಲ್ಯೂಮ್ XXIII, ನಂ.೨, ಅಕ್ಟೋಬರ್ ೧೯೩೨, ಪು.೧೭೦) ಎಂಬ ಲೇಖನದಲ್ಲಿ ಗಮನಿಸಬಹುದು.

ವಸಾಹತುಶಾಹಿ ಕಾಲಘಟ್ಟದ ಚರಿತ್ರೆ ಕುರಿತಾದ ಕೃತಿಗಳಲ್ಲಿ ಕೆ.ಎನ್.ವೆಂಕಟಸುಬ್ಬಾಶಾಸ್ತ್ರಿ ಅವರು ೧೯೩೨ರಲ್ಲಿ ಹೊರತಂದ **ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರು ಅಂಡರ್ ಸರ್ ಮಾರ್ಕ್ಸ್ ಕಬ್ಬನ್(೧೮೩೪–೧೮೬೧)**[೪೭] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯ ಶೀರ್ಷಿಕೆಯೇ ಹೇಳುವಂತೆ ಇದರ ಕೇಂದ್ರದ ವಿಷಯ ಕಮೀಷನರ್ ಆದ ಮಾರ್ಕ್ಸ್ ಕಬ್ಬನ್‌ನ ಆಡಳಿತ. ವ್ಯಕ್ತಿಯ ಮೂಲಕ ಇಡೀ ಅಭಿವೃದ್ಧಿಯ ಸಂಕೇತವನ್ನು ಸೂಚಿಸುವುದಾಗಿದೆ. ಮೈಸೂರು ಸಂಸ್ಥಾನದಲ್ಲಿ ನಡೆದ ನಗರದಂಗೆಯಿಂದಾಗಿ ಲಾರ್ಡ್ ವಿಲಿಯಂ ಬೆಂಟಿಂಕ್‌ನು ಮೈಸೂರು ಸಂಸ್ಥಾನವನ್ನು ಬ್ರಿಟಿಷರ ನೇರವಾದ ಆಡಳಿತಕ್ಕೆ ಒಳಪಡಿಸಿದನು. ಮಾರ್ಕ್ ಕಬ್ಬನ್ ಮೊದಲು ಮೈಸೂರು ಸಂಸ್ಥಾನದಲ್ಲಿ ಉಂಟಾಗಿದ್ದ ಕೆಲವು ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಪ್ರಯತ್ನಿಸಿದನು. ಸರ್ಕಾರದ ವಿವಿಧ ಇಲಾಖೆಗಳಲ್ಲಿ ಅನ್ಯಾಯಗಳನ್ನು ತಡೆಗಟ್ಟುವುದು, ಶಾಂತಿ ನೆಲೆಸುವಂತೆ ಮಾಡುವುದು, ಆರ್ಥಿಕಾಭಿವೃದ್ಧಿಗಾಗಿ ದೇಶದ ಮೂಲಸಂಪತ್ತನ್ನು ಅಭಿವೃದ್ಧಿಗೊಳಿಸು ವುದು. ಹೀಗೆ ಕೃಷಿ, ಕೈಗಾರಿಕೆಗಳ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು, ಮೈಸೂರು ಅರ್ಥ ವ್ಯವಸ್ಥೆಯ ಅಭಿವೃದ್ಧಿಗಾಗಿ ಶ್ರಮಿಸಿದನು ಎಂಬುದನ್ನು ಚರ್ಚಿಸುತ್ತಾರೆ(ಪು.೨೧–೩೧).

ಮೈಸೂರು ಸಂಸ್ಥಾನದಲ್ಲಿ ಉಂಟಾಗಿದ್ದ ಬಿಕ್ಕಟ್ಟುಗಳಿಗೆ ಅನುಗುಣವಾಗಿ ಅನೇಕ ಆಡಳಿತಾತ್ಮಕ ಸುಧಾರಣೆಗಳನ್ನು ಜಾರಿಗೆ ತಂದನು. ಈ ಸುಧಾರಣೆಗಳು ಬ್ರಿಟಿಷ್ ಮಾದರಿಯನ್ನೇ ಅನುಸರಿಸಿವೆ. ಮೊದಲು ರಕ್ಷಣೆಗಾಗಿ ಸೈನಿಕ ವ್ಯವಸ್ಥೆಯನ್ನು ಸುಸಜ್ಜಿತಗೊಳಿಸಿದನು. ತರೀಕೆರೆ ಪಾಳೇಗಾರರಲ್ಲಿ ಮುಖಂಡನಾದ ಕೆಂಗಲ್ ನಾಯಕ, ಬೆಲೆಗುಟ್ಟಿ ತಿಮ್ಮಣ್ಣ ನಾಯಕ, ಮರಿಯಪ್ಪ ನಾಯಕ, ದಿಗಂಬರಪ್ಪ, ಶಿವಮೊಗ್ಗ ಜಿಲ್ಲೆಯ ಹೊನ್ನಾವಳ್ಳಿ ತಾಲ್ಲೂಕಿನ ಮುಖಂಡರು ಇನ್ನೂ ಮುಂತಾದವರು ಮಾರ್ಕ್ ಕಬ್ಬನ್‌ನ ಆಡಳಿತಾವಧಿಯ ಹಳ್ಳಿಗಳಲ್ಲಿ ಅಮಲ್ದಾರರು ಮತ್ತು ಪಟೇಲರು ಸಹಾಯಕರಾಗಿದ್ದರು. ಸಾಮಾಜಿಕವಾಗಿ ಸಮಾಜದಲ್ಲಿ ಮೇಲ್ವರ್ಗವಾದ ಬ್ರಾಹ್ಮಣ ವರ್ಗದವರಿಗೆ ಶಾನುಭೋಗ ವೃತ್ತಿಯನ್ನು ನೀಡಲಾಗಿತ್ತು. ಹಾಗೆಯೇ ಲಿಂಗಾಯತರಿಗೆ

ಕೆಲವೊಂದು ಆಡಳಿತ ಇಲಾಖೆಗಳಲ್ಲಿ ಸ್ಥಾನ ದೊರಕಿತ್ತು. ಈ ರೀತಿಯಾಗಿ ಕಬ್ಬನ್‌ನ ಆಡಳಿತ ದಲ್ಲಿ ಸ್ಥಳೀಯರು ಸಹಾಯಕರಾಗಿ ಕಾರ್ಯ ನಿರ್ವಹಿಸಿರುವುದನ್ನು ಈ ಕೃತಿಯು ಕಟ್ಟುತ್ತಾ ಹೋಗುತ್ತದೆ.

ಸಾಮಾಜಿಕ ಪಿಡುಗುಗಳನ್ನು ತೊಲಗಿಸಲು ಪ್ರಯತ್ನಪಟ್ಟರು. ಅದರಲ್ಲಿ ಗುಲಾಮಗಿರಿಯನ್ನು ತೊಡೆದು ಹಾಕಲು ಕ್ರಮ ಕೈಗೊಂಡು, ಕೆಲಸ ಮಾಡುತ್ತಿದ್ದ ಬಾಲಕಾರ್ಮಿಕರನ್ನು ಬಿಡುಗಡೆ ಗೊಳಿಸಿದನು. ಬೆಂಗಳೂರಿನ ಕಂಟೋನ್ಮೆಂಟ್‌ನಲ್ಲಿ ನಿರಾಶ್ರಿತರಿಗೆ ಮನೆಗಳನ್ನು ಕಟ್ಟಿಸಿದ ವಿವರಗಳನ್ನು ನೋಡಬಹುದು(ಪು.೮೯-೯೨). ಕಾರಾಗೃಹದ ಕೈದಿಗಳ ಜೀವನ ಪರಿಸ್ಥಿತಿಯನ್ನು ಉತ್ತಮ ಗೊಳಿಸುವ ಕಾರ್ಯ ನಡೆಯಿತು. ಮೈಸೂರು, ಬೆಂಗಳೂರು, ತುಮಕೂರು ಮತ್ತು ಶಿವಮೊಗ್ಗ ನಗರಗಳಲ್ಲಿನ ಜೈಲುಗಳಲ್ಲಿ ಆರೋಗ್ಯಕರವಾದ ವಾತಾವರಣವನ್ನು ಸೃಷ್ಟಿಸಿದರು(ಪು.೯೬). ನೀರಾವರಿ ಯೋಜನೆಗಳನ್ನು ಕೈಗೊಂಡು ಮಾರಿಕಣಿವೆ, ಶಿಂಷಾ, ಹೇಮಾವತಿ, ಕಾವೇರಿ, ತುಂಗಾ ಮತ್ತು ಭದ್ರಾ, ಕಾವೇರಿ ನದಿ ಯೋಜನೆಗಳ ಮೂಲಕ ನೀರಾವರಿ ಸಮಸ್ಯೆಗಳನ್ನು ಬಗೆಹರಿಸಿದರು. ಈ ರೀತಿಯಾಗಿ ಕೃಷಿಗೆ ಬೇಕಾದ ನೀರಾವರಿ ವ್ಯವಸ್ಥೆಯನ್ನು ಉತ್ತಮಗೊಳಿಸಿದರು. ರೈತರಿಗೆ ಎಲ್ಲಿ ಸರ್ಕಾರಕ್ಕೆ ಕೊಡಬೇಕಾದ ಹಣ ಹೊರೆಯಾಗಿತ್ತೋ ಅಲ್ಲಿ ಕಡಿಮೆ ಮಾಡಿದನು. ಅರಣ್ಯವನ್ನು ಸಂರಕ್ಷಿಸಲು ಅರಣ್ಯಪಾಲನಾಧಿಕಾರಿಯನ್ನು ಮತ್ತು ಇತರ ಅಧಿಕಾರಿಗಳನ್ನೊಳಗೊಂಡ ಒಂದು ಅರಣ್ಯಾ ಇಲಾಖೆಯನ್ನು ಸ್ಥಾಪಿಸಿದನು. ಕೈಗಾರಿಕೆಗಳು ಮತ್ತು ವ್ಯಾಪಾರ-ವಾಣಿಜ್ಯವನ್ನು ಅಭಿವೃದ್ಧಿಗೊಳಿಸಿದನು. ಕಬ್ಬಿಣ ಮತ್ತು ಉಕ್ಕು ಕೈಗಾರಿಕೆಗಳನ್ನು ಸ್ಥಾಪಿಸಿದನು. ಹತ್ತಿ, ಉಣ್ಣೆ ಮತ್ತು ರೇಷ್ಮೆ ಮೊದಲಾದ ವಸ್ತುಗಳ ದರ್ಜೆಯನ್ನು ಉತ್ತಮಪಡಿಸಿದನು. ಇವನ ಆಡಳಿತದಲ್ಲಿ ಭೂಕಂದಾಯ, ಸುಂಕದ ತೆರಿಗೆ, ಏಕಸ್ವಾಮ್ಯ ತೆರಿಗೆ, ಗಂಧದ ಮರ, ಛಾಪಾಕಾಗದ, ಜುಲ್ಮಾನೆ ಮತ್ತು ಇತರ ಆಸ್ತಿ-ಪಾಸ್ತಿ ಮುಟ್ಟುಗೋಲು, ಅಂಚೆಗಳಿಂದ ಬರುವ ಆದಾಯ ಮುಖ್ಯವಾಗಿತ್ತು. ರಸ್ತೆ, ರೈಲ್ವೆ ಮತ್ತು ದೂರಸಂಪರ್ಕವನ್ನು ಅಭಿವೃದ್ಧಿಪಡಿಸಿದರು. ಕ್ಷಾಮದ ಸಂದರ್ಭದಲ್ಲಿ ಅನೇಕ ಕಾರ್ಯಗಳನ್ನು ಕೈಗೊಳ್ಳಲಾಯಿತು. ಜನಸಾಮಾನ್ಯರಿಗೆ ಆಹಾರ ಧಾನ್ಯಗಳನ್ನು ಕ್ಷಾಮದ ಸಂದರ್ಭದಲ್ಲಿ ವಿತರಿಸಿದನು. ಈ ಎಲ್ಲಾ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಆರ್ಥಿಕವಾಗಿ ಮೈಸೂರು ಸಂಸ್ಥಾನವನ್ನು ಉತ್ತಮಪಡಿಸಿದನು ಎಂಬುದನ್ನು ವಿವರಿಸುತ್ತಾನೆ. ಹೀಗೆ ಐದು ಅಧ್ಯಾಯಗಳಲ್ಲಿ ಮಾರ್ಕ್ಸ್ ಕಬ್ಬನ್ ಜಾರಿಗೆ ತಂದ ಬ್ರಿಟಿಷ್ ಮಾದರಿಯ ಆಡಳಿತ ವ್ಯವಸ್ಥೆಯ ವಿವರಗಳನ್ನು ನೀಡುತ್ತಾರೆ. ಕಬ್ಬನ್‌ನು ಒಬ್ಬ ಆದರ್ಶ ಆಡಳಿತತಜ್ಞ ಎಂದು ಕೊಂಡಾಡುತ್ತಾನೆ. ಮೈಸೂರು ಸಂಸ್ಥಾನ ಒಂದು ಮಾದರಿ ಸಂಸ್ಥಾನವಾಗಲು ಮಾರ್ಕ್ ಕಬ್ಬನ್‌ನು ಜಾರಿಗೆ ತಂದ ಸುಧಾರಣೆಗಳೇ ಕಾರಣ ಎಂದು ಹೇಳುತ್ತಾರೆ.

ಕಬ್ಬನ್‌ನ ಆಡಳಿತ ಕುರಿತು ಟೀಕೆಗಳನ್ನು ಒಂದೊಂದಾಗಿಯೇ ವಿವರಿಸುತ್ತಾ ಅವುಗಳಿಗೆ ತೀಕ್ಷ್ಣವಾಗಿ ಪ್ರತಿಕ್ರಿಯಿಸಿ ಕಬ್ಬನ್‌ನನ್ನು ಸಮರ್ಥಿಸುತ್ತಾರೆ. ಮುಖ್ಯವಾಗಿ ಕಬ್ಬನ್‌ನು ಶಿಕ್ಷಣಕ್ಕೆ ಸಾಕಷ್ಟು ಗಮನ ಕೊಡಲಿಲ್ಲ ಎನ್ನುವುದು. ಅದಕ್ಕಾಗಿ ಮಾಡಿದ ಖರ್ಚು ಕಡಿಮೆ ಎಂದು ಹೇಳುವ ಹೇಳಿಕೆಗೆ ಅನುಗುಣವಾಗಿ ಆಂಗ್ಲ ಮಾಧ್ಯಮ ಪಾಠಶಾಲೆಗಳ ಮುಖಾಂತರ ವಿದ್ಯಾಭ್ಯಾಸ ಕಾರ್ಯವನ್ನು ವೆಸ್ಲಿಯನ್ ಮಿಷನ್ನಿನವರು ಆರಂಭಿಸಿದರು. ಮಿಷನರಿ ಮತ್ತು ಶಿಕ್ಷಣ ಪ್ರೇಮಿಯಾದ

ರೆವರೆಂಡ್ ಎಂಬುವವನು ಹೆಸರಾಂತ ಶಿಕ್ಷಣತಜ್ಞನಾಗಿದ್ದನು ಎಂಬುದನ್ನು ತಿಳಿಸಿದ್ದಾರೆ. ಈ ಕೃತಿಯು ಮೈಸೂರಿನ ಅರ್ಥವ್ಯವಸ್ಥೆಯ ಮೂಲದಲ್ಲಿ ವಸಾಹತುಶಾಹಿ ಆಡಳಿತವು ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಹಿನ್ನೆಲೆಯಲ್ಲಿ ಸೃಷ್ಟಿಸುತ್ತಿದ್ದ ಸಮುದಾಯದ್ರೋಹಿ ತಲ್ಲಣಗಳನ್ನು ಕಟ್ಟಿಕೊಡುವುದಿಲ್ಲ. ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ ಅಂದಿನ ಕಾಲಘಟ್ಟದಲ್ಲಿ ತಳಸಮುದಾಯವಾದ ಲಂಬಾಣಿಗಳ ನಾಯಕ, ಕೊರಮ ಮತ್ತು ವಡ್ಡರ ಗುಂಪಿನ ಮುಖ್ಯಸ್ಥರು ಕಳ್ಳ ಕಸುಬಿನ ಪಂಗಡದವರೆಂದು ಪರಿಗಣಿತರಾಗಿದ್ದರಿಂದ ಅವರು ತಮ್ಮ ವರ್ತನೆಯ ಬಗೆಗೆ ಜಾಮೀನು ಕೊಡಬೇಕಾಗಿತ್ತು ಎಂದು ಸಿ.ಕೆ.ವೆಂಕಟರಾಮಯ್ಯ ಅವರು ತಮ್ಮ ಆಳಿದ ಮಹಾಸ್ವಾಮಿಯವರು ಎಂಬ ಕೃತಿಯಲ್ಲಿ ವಿವರಿಸಿರುವುದನ್ನು ಎನ್.ಚಿನ್ನಸ್ವಾಮಿ ಸೋಸಲೆ ಅವರು 'ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ (ಪು.೪೮). ಈ ರೀತಿಯಾಗಿ ಜನಮುಖಿ ಅಧ್ಯಯನದಲ್ಲಿ ತೊಡಗಿಕೊಂಡಾಗ ಈ ಅಂಶಗಳು ತಿಳಿದುಬರುತ್ತವೆ. ಈ ಕೃತಿಯ ಪ್ರಮುಖ ಉದ್ದೇಶ ಭಾರತದ ಮಾದರಿ ಸಂಸ್ಥಾನವೆನಿಸಿದ ಮೈಸೂರಿನ ಬೆಳವಣಿಗೆಯನ್ನು ಮಾರ್ಕ್ ಕಬ್ಬನ್‌ನ ಮೂಲಕ ಗುರುತಿಸುವುದಾಗಿದೆ ಎಂಬುದನ್ನು ಬರಹಗಾರರು ತಮ್ಮ ಮುನ್ನುಡಿಯಲ್ಲಿಯೇ ಹೇಳಿದ್ದಾರೆ. ವಿಲ್ಕ್ಸ್‌ನ ಕೃತಿಯ ಅಂಶಗಳಂತೆಯೇ ಅದರ ಮುಂದುವರಿದ ಭಾಗ ಎಂದು ಹೇಳುತ್ತಾ ಈ ಕೃತಿಯನ್ನು ಕಟ್ಟಿರುವುದನ್ನು ನೋಡಬಹುದು. ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರಿಂದ ಆಡಳಿತವ್ಯವಸ್ಥೆಯನ್ನು ಬ್ರಿಟಿಷರು ನೇರವಾಗಿ ತಮ್ಮ ಹತೋಟಿಗೆ ತೆಗೆದುಕೊಂಡಿದ್ದು ಸರಿ ಎನ್ನುವ ಬ್ರಿಟಿಷರ ಧೋರಣೆಯನ್ನು ಒಪ್ಪಿ ಅದನ್ನು ಸಮರ್ಥಿಸಿ, ಕಬ್ಬನ್‌ನ ಆಡಳಿತದ ಕ್ರಮಗಳನ್ನು ಚರ್ಚಿಸುತ್ತಾರೆ.

ಮೈಸೂರು ಒಡೆಯರ ಚರಿತ್ರೆಯನ್ನು ಕುರಿತು ರಚಿಸಿದ ಕೃತಿಗಳಲ್ಲಿ ಶಾಲಾಪಠ್ಯಗಳನ್ನು ಗಮನಿಸಿದಾಗ ೧೮೯೩ರಲ್ಲಿಯೇ ಎಂ.ಶಾಮರಾವ್ ಅವರಿಂದ ರಚಿತವಾದ **ಮಹಿಸೂರು ಸಂಸ್ಥಾನದ ಚರಿತ್ರೆ** ಎಂಬ ಕೃತಿ ಹೈಸ್ಕೂಲ್‌ನ ಪಠ್ಯವಾಗಿತ್ತು. ೧೯೩೦ರಲ್ಲಿ ವಿದ್ಯಾ ಇಲಾಖೆಯ ಟೆಕ್ಸ್ ಬುಕ್ ಕಮಿಟಿಯವರು ಒಂದು ಉಪಸಮಿತಿಯನ್ನು ಏರ್ಪಡಿಸಿ, ಮೈಸೂರು ಸಂಸ್ಥಾನಕ್ಕೆ ಸಂಬಂಧಿಸುವ ಎಲ್ಲಾ ಸಂಗತಿಗಳೂ ನಾಡಿನ ವಿದ್ಯಾರ್ಥಿಗಳಿಗೆ ತಿಳಿಯುವಂತೆಯೂ ಅವರಲ್ಲಿ ದೇಶಾಭಿಮಾನ ಹೆಚ್ಚುವಂತೆಯೂ ಪಠ್ಯಪುಸ್ತಕಗಳನ್ನು ರಚಿಸಿ ಪ್ರಕಟಿಸಬೇಕೆಂದು ತೀರ್ಮಾನಿಸಿ, ಆ ಕೆಲಸಕ್ಕಾಗಿ ಒಂದು ಲೇಖಕ ಮಂಡಳಿಯನ್ನು ನೇಮಿಸಿದರು. ಪ್ರೈಮರಿ, ಮಿಡಲ್ ಮತ್ತು ಹೈಸ್ಕೂಲ್ ತರಗತಿಗಳಲ್ಲಿಯೂ ವಿದ್ಯಾರ್ಥಿಗಳು ಸುಲಭವಾಗಿ ಓದುವಂತೆ, ಆಯಾ ಬುದ್ಧಿಮಟ್ಟಕ್ಕೆ ಅನುಗುಣವಾಗಿ ಕೇಂದ್ರ ಕ್ರಮದಲ್ಲಿ ಮೈಸೂರಿನ ಭೂವಿವರಣೆ, ಚರಿತ್ರೆ, ಜನಜೀವನ, ಪೌರ, ರಾಜಕೀಯ ವಿಚಾರ ಮುಂತಾದ ಸಂಗತಿಗಳನ್ನೊಳಗೊಂಡ **ಮೈಸೂರು ಕೈಪಿಡಿ**[೮೮] ಎಂಬುದನ್ನು ಪ್ರಕಟಿಸಲಾಯಿತು. ೧೯೧೫ರಲ್ಲಿಯೇ **ಮೈಸೂರಿನ ಕೈಗನ್ನಡಿ** ಎಂಬ ಕರ್ನಾಟಕ ವಾರ್ಷಿಕ ಪುಸ್ತಕದಲ್ಲಿಯೂ ಮೈಸೂರು ಒಡೆಯರ ಕೆಲವೊಂದು ವಿಚಾರಗಳನ್ನು ವಿವರಿಸಿರುವುದನ್ನು ನೋಡಬಹುದು.

ಹೈಸ್ಕೂಲ್ ತರಗತಿಯ ಅನುಕೂಲಕ್ಕಾಗಿ ಇಲ್ಲಿ ಬರೆದಿದ್ದು, ವಿಷಯವು ವಿವರಣಾತ್ಮಕ ರೂಪದಲ್ಲಿ ಮೂಡಿಬಂದಿದೆ. ಇದರಲ್ಲಿ ದೇಶದ ಭೌಗೋಳಿಕತೆಯನ್ನು ತಿಳಿಸಿ, ವಿದ್ಯಾರ್ಥಿಗಳಿಗೆ

ದೇಶಪ್ರೇಮ, ರಾಜಭಕ್ತಿ, ತಿಳುವಳಿಕೆ, ಪೌರದೃಷ್ಟಿ ಇವು ಉಂಟಾಗುವಂತೆ ವಿಷಯಗಳನ್ನು ಕುರಿತು ಬರೆಯುವ ಪ್ರಯತ್ನ ಇಲ್ಲಿ ನಡೆದಿದೆ ಎನ್ನಬಹುದು. ಪ್ರಾರಂಭದ ಚರಿತ್ರೆಯನ್ನು ಗುರ್ತಿಸುತ್ತಾ ಕರ್ನಾಟಕವನ್ನು ಆಳಿದ ಮೊದಲ ರಾಜಮನೆತನಗಳು, ವಿಜಯನಗರದ ಅವನತಿ, ಮರಾಠರು ಮತ್ತು ನಿಜಾಮರ ಯುದ್ಧಗಳ ವಿವರಗಳನ್ನು ಇಲ್ಲಿ ನೋಡಬಹುದು. ಮುಖ್ಯವಾಗಿ ಚಿಕ್ಕದೇವರಾಜ ಒಡೆಯರ ಆಡಳಿತದ ಕಾಲದಲ್ಲಿ ಜರುಗಿದ ರೈತರ ದಂಗೆಯ ವಿವರಗಳು ಮಿಳಿತವಾಗಿವೆ. ಇಲ್ಲಿ ಜಂಗಮರು ರೈತರನ್ನು ಸಂಘಟಿಸುತ್ತಿದ್ದಾರೆ ಎಂದು ಒಳತಂತ್ರದಿಂದ ಕೊಲ್ಲಿಸಿದರು ಎಂಬುದನ್ನು ತಿಳಿಸಿದ್ದಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಡಳಿತ ಕ್ರಮ, ಯುದ್ಧಗಳು, ಒಪ್ಪಂದಗಳು ಇವೇ ಮೊದಲಾದ ವಿಚಾರಗಳನ್ನು ಅವಲೋಕನ ಮಾಡಿರುವ ವಿಚಾರ ಈ ಕೃತಿಯಲ್ಲಿ ವ್ಯಕ್ತವಾಗಿದೆ. ಕಮೀಷನರ್‌ಗಳ ಆಳ್ವಿಕೆ, ೧೦ನೇ ಚಾಮರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತವನ್ನು ಇಲ್ಲಿ ನೋಡಬಹುದು. ಆ ಕಾಲದ ಸಾಹಿತ್ಯ, ಕವಿಗಳು ಮುಂತಾದ ವಿವರಗಳನ್ನು ಇಲ್ಲಿ ಗುರುತಿಸಬಹುದು. ಈ ನಿಟ್ಟಿನಲ್ಲಿ ಪ್ರೈಮರಿ ಶಾಲೆಯಿಂದ ಹೈಸ್ಕೂಲಿನವರೆಗೆ ವಿವಿಧೋದ್ದೇಶಗಳಿಗಾಗಿ ರಚಿತವಾದ ಮೈಸೂರಿನ ಇತಿಹಾಸದ ಪಠ್ಯಗ್ರಂಥಗಳನ್ನು ಗಮನಿಸಿದಾಗ ಒಂದು ಕಾಲದಲ್ಲಿ ಮೈಸೂರು ಚರಿತ್ರೆ ಪಠ್ಯದ ವಿಷಯವಾಗಿದ್ದು, ಎಲ್ಲರಿಗೂ ಪರಿಚಿತ ವಿಷಯವಾಗಿತ್ತು. ೧೯೫೭ರ ನಂತರ ಸ್ವಲ್ಪಮಟ್ಟಿಗೆ ಕರ್ನಾಟಕ ಇತಿಹಾಸದ ಅಂಗವಾಗಿ ಮೈಸೂರು ಚರಿತ್ರೆ ಬಂದರೂ ಮೈಸೂರು ಚರಿತ್ರೆ ಕೃತಿಗಳು ಪ್ರತ್ಯೇಕ ಅಧ್ಯಯನವಾಗುವಷ್ಟು ಇವೆ ಎಂಬುದನ್ನು ತಿಳಿಯಬಹುದು.

ಎಂ.ಶಾಮರಾವ್ ಅವರು ರಚಿಸಿದ **ಮಹಿಸೂರು ಸಂಸ್ಥಾನದ ಚರಿತ್ರೆ**(೧೯೯೩), **ಮೈಸೂರು ಸಂಸ್ಥಾನದ ಚರಿತ್ರಸಾರ**(೧೯೨೧) ಎಂಬ ಕೃತಿಗಳು ಕನ್ನಡದಲ್ಲಿ ಪ್ರಕಟವಾದವು. ಇಂಗ್ಲಿಷ್‌ನಲ್ಲಿ **ಮಾಡರ್ನ್ ಮೈಸೂರು**(೧೯೩೬)[೪೯] ಎಂಬ ಕೃತಿಯನ್ನು ಎರಡು ಸಂಪುಟಗಳಲ್ಲಿ ಹೊರತಂದರು. **ಮಾರ್ಡನ್ ಮೈಸೂರು ಫ್ರಂ ದ ಬಿಗಿನಿಂಗ್ ಟು ೧೮೬೮** ಎನ್ನುವ ಪ್ರಥಮ ಸಂಪುಟ ಮತ್ತು **ಮಾಡರ್ನ್ ಮೈಸೂರು ಫ್ರಂ ದ ಕಾರೋನೇಶನ್ ಆಫ್ ದ ಚಾಮರಾಜ ಒಡೆಯರ್ ಇನ್ ಟು ದ ೧೮೬೮ ಪ್ರೆಸೆಂಟ್ ಟೈಮ್ಸ್** ಎನ್ನುವ ಎರಡು ಸಂಪುಟಗಳನ್ನು ಪ್ರಕಟಿಸಿದರು. ಮೊದಲನೆಯ ಸಂಪುಟವನ್ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅರ್ಪಿಸುತ್ತಾರೆ. ಮುಮ್ಮಡಿ ಅವರ "ರಾಜಕೀಯ ದೂರದೃಷ್ಟಿ ಮತ್ತು ಮೈಸೂರು ರಾಜ್ಯವನ್ನು ಉಳಿಸಿದ್ದಕ್ಕೆ ಜನರು ಎಂದೆಂದಿಗೂ ಅವರಿಗೆ ಋಣಿಗಳಾಗಿರುತ್ತಾರೆ" ಎಂದು ಬರೆದು ಒಡೆಯರ ಬಗೆಗಿನ ತಮ್ಮ ಮನೋಧರ್ಮವನ್ನು ಮೊದಲೇ ಹೇಳಿಬಿಡುವುದನ್ನು ಗಮನಿಸಬಹುದು.[೫೦]

ಮೊದಲನೇ ಸಂಪುಟದಲ್ಲಿ ಹತ್ತನೇ ಚಾಮರಾಜ ಒಡೆಯರ ಆಡಳಿತಾವಧಿಗಿಂತ ಮುಂಚಿನ ವಿಷಯಗಳನ್ನು ಇಲ್ಲಿ ತಿಳಿಸುತ್ತಾರೆ. ಯದುರಾಯನು ಮೈಸೂರು ಒಡೆಯರ ಸಂಸ್ಥಾನವನ್ನು ಸ್ಥಾಪಿಸಿದ್ದರಿಂದ ಹಿಡಿದು ಚಿಕ್ಕದೇವರಾಜ ಒಡೆಯರ ಆಡಳಿತದಿಂದ ಮೊದಲು ವಿವರಣೆಯನ್ನು ನೀಡುತ್ತಾ ಹೋಗುತ್ತಾರೆ. ಮೈಸೂರಿನ ಆಡಳಿತದಲ್ಲಿದ್ದ ಆಂತರಿಕ ಘರ್ಷಣೆಗಳು, ಆಂಗ್ಲರು ಮತ್ತು ಫ್ರೆಂಚರು ಹೋರಾಡಿದ ಯುದ್ಧಗಳು, ಇವರ ರಾಜಕೀಯ ಸಂಬಂಧಗಳು, ಮೊಘಲರ ಅವನತಿ ಮುಂತಾದ ಕಾದಾಟಗಳ ನಡುವೆ ಹೈದರ್‌ನು ಪ್ರವರ್ಧಮಾನಕ್ಕೆ ಬಂದನು

ಎಂಬುದನ್ನು ವಿವರಿಸುತ್ತಾರೆ. ಹೈದರ್ ಮತ್ತು ಟಿಪ್ಪು ಸುಲ್ತಾನನ ಮೂಲಕ ಮೈಸೂರನ್ನು ಮುಸ್ಲಿಂ ರಾಜಕೀಯ ಪ್ರಭುತ್ವವು ಹೇಗೆ ಆವರಿಸಿತು ಎಂದು ಹೇಳುವುದೇ ಮುಖ್ಯ ಉದ್ದೇಶವಾಗಿದೆ.

ಯದುರಾಯನು ಒಡೆಯರ ವಂಶವನ್ನು ಸ್ಥಾಪಿಸಲು ಇದ್ದ ಬಿಕ್ಕಟ್ಟುಗಳು, ಅನಂತರ ಒಡೆಯರುಗಳು ನಡೆಸಿದ ಆಡಳಿತವನ್ನು ನೋಡಬಹುದು. ಆದರೆ ರಾಜ ಒಡೆಯರಿಂದ ಮೈಸೂರು ಸಂಸ್ಥಾನ ಒಂದು ಐಡೆಂಟಿಟಿಯನ್ನು ಪಡೆಯಿತು. ವಿಜಯನಗರ ಸಾಮ್ರಾಜ್ಯದ ಅಧೀನದಲ್ಲಿದ್ದ ಶ್ರೀರಂಗಪಟ್ಟಣವನ್ನು ರಾಜ ಒಡೆಯರು ತಮ್ಮ ವಶಕ್ಕೆ ತೆಗೆದುಕೊಂಡು ರಾಜಧಾನಿಯನ್ನಾಗಿ ಮಾಡಿಕೊಂಡರು. ಇದರಿಂದ ರಾಜ ಒಡೆಯರು ಮೈಸೂರು ಸಂಸ್ಥಾನಕ್ಕೆ ಒಂದು ಸ್ವತಂತ್ರವಾದ ಅಸ್ತಿತ್ವವನ್ನು ತಂದುಕೊಟ್ಟರು ಎಂದು ಎಂ.ಶಾಮರಾವ್ ಅವರು ವಿವರಿಸುತ್ತಾ ಹೋಗುತ್ತಾರೆ. ಮೈಸೂರು ಸಂಸ್ಥಾನವನ್ನು ವಿಜಯನಗರದ ಚಕ್ರಾಧಿಪತ್ಯದ ಪರಂಪರೆಯಲ್ಲಿ ಕಾಣಲು ಎಂ. ಶಾಮರಾಯರು ತಮ್ಮ ಬರವಣಿಗೆಯ ಮೂಲಕ ಪ್ರಯತ್ನಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಆಡಳಿತವು ಮೈಸೂರನ್ನು ಪ್ರಗತಿಯತ್ತ ಕೊಂಡೊಯ್ದಿತು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಡೆದ ಕೃತ್ಯದ ಬಗೆಗೆ ವಿವರಗಳಿಲ್ಲ. ಅದು ಕ್ರೂರ ತೆರಿಗೆಗಳನ್ನು ವಿರೋಧಿಸಿ, ಒಡೆಯರ ವಿರುದ್ಧ ಪ್ರತಿಭಟಿಸಲು ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕೊಲ್ಲಿಸಿದ ಕ್ರೌರ್ಯವನ್ನು ಈ ಸಂಪುಟದಲ್ಲಿ ತಿಳಿಸಿರುವುದಿಲ್ಲ. ಆದರೆ ವಿಲ್ಕ್ಸ್‌ನು ತನ್ನ ಕೃತಿಯಲ್ಲಿ ಇದರ ಬಗೆಗೆ ಮಾಹಿತಿಯನ್ನು ನೀಡುತ್ತಾನೆ(ಸಂ.೧, ಪು.೧೨೮-೧೩೮). ತೆರಿಗೆಗಳನ್ನು ಕಡಿಮೆ ಮಾಡುವವರೆಗೆ, ಭೂಮಿಯನ್ನು ಉಳುವುದೇ ಬೇಡವೆಂದು ಜಂಗಮರು ರೈತರನ್ನು ಸಂಘಟಿಸುತ್ತಿದ್ದರು. ಒಂದು ರೀತಿಯಲ್ಲಿ ಆ ಕಾಲಕ್ಕೆ ಇದು ಅದ್ಭುತವಾದ ಸಂಘಟನೆ, ಪ್ರತಿಭಟನೆ. ಆದರೆ ಈ ಶ್ರಮ ರಾಜನಿಗೆ 'ರಾಜದ್ರೋಹ'. ಆದ್ದರಿಂದ ಅವರಿಗೆ ಮರಣದಂಡನೆ. ಆದರೆ ಈ ಬಗ್ಗೆ ನಮ್ಮ ದೇಶಿ ಚರಿತ್ರೆಕಾರರಾದ ಎಂ.ಶಾಮರಾವ್ ಅವರು ಸೊಲ್ಲೆತ್ತುವುದಿಲ್ಲ. ಅವರ ಪ್ರಕಾರ ಇದೇ 'ರಾಷ್ಟ್ರೀಯ ಧೋರಣೆ'ಯ ಇತಿಹಾಸವಿರಬೇಕು ಎಂದು ಎಸ್.ಚಂದ್ರಶೇಖರ್ ಅವರು ಹೇಳಿದ್ದಾರೆ(ವಸಾಹತುಕಾಲೀನ ಕರ್ನಾಟಕ, ಪು.೧೫). ಸೈನ್ಯದ ಸಾಮಾನ್ಯ ಸೈನಿಕನೊಬ್ಬ ನಾಗಿದ್ದ ಹೈದರಾಲಿ ಮೇಲೆ ಬರಲು ದಳವಾಯಿಗಳ ಆಡಳಿತ ಸಹಾಯಕವಾಯಿತು. ಈ ನಿಟ್ಟಿನಲ್ಲಿ ಎಂ.ಶಾಮರಾವ್ ಅವರು ಹೈದರಾಲಿಯ ಏಳಿಗೆ ಕುರಿತು ವಿವರಿಸುತ್ತಾ ಹೋಗುತ್ತಾರೆ. ಹೈದರಾಬಾದಿನ ನಿಜಾಮರೊಂದಿಗೆ ಹೋರಾಟ, ತಿರುಚನಾಪಳ್ಳಿಯ ಹೋರಾಟ, ಬಿದನೂರಿನ ದಂಗೆ ಇವೇ ಮೊದಲಾದ ಹೋರಾಟಗಳು ಹೈದರಾಲಿಯು ಪ್ರವರ್ಧಮಾನಕ್ಕೆ ಬರಲು ಅನುಕೂಲವದವು ಎಂಬ ಚಿತ್ರಣವನ್ನು ನೀಡುತ್ತಾರೆ. ಮೊದಲನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಹೈದರಾಲಿ ತೋರಿದ ಸಾಹಸ ಮತ್ತು ಮಾಡಿಕೊಂಡ ಒಪ್ಪಂದ ಮುಖ್ಯ(ಪು.೭೩-೭೮). ಚಿತ್ರದುರ್ಗದ ಪಾಳೆಯಗಾರನಾದ ಮದಕರಿನಾಯಕನ ಕೋಟೆಯ ಮುತ್ತಿಗೆ ಹೈದರಾಲಿಯ ಯುದ್ಧದ ಒಂದು ಮೈಲಿಗಲ್ಲು ಎನ್ನುತ್ತಾರೆ(ಪು.೯೧-೯೨). ಆಂಗ್ಲೋ-ಮೈಸೂರು ಯುದ್ಧದ ವಿವರಗಳನ್ನು ಗಮನಿಸಬಹುದು. ಹೈದರಾಲಿಯ ಬಗೆಗೆ ಎಂ.ಶಾಮರಾವ್ ಅವರು ಹೈದರ್‌ನ ಸಾವು ಭಾರತದ ಚರಿತ್ರೆಯಲ್ಲಿ ಒಂದು ಘಟನೆ ಮಾತ್ರವಲ್ಲದೇ ಬ್ರಿಟಿಷ್ ಶಕ್ತಿಯನ್ನು ಆ ಸಮಯದಲ್ಲೇ ಸ್ಥಾಪಿಸಲು ಸಾಧ್ಯಗೊಳಿಸಿದನು ಎಂದಿದ್ದಾರೆ (ಪು.೧೧೭). ಆದರೆ ಇಲ್ಲಿ

ವಾಸ್ತವವಾಗಿ ಬ್ರಿಟಿಷರನ್ನು ಹೈದರಾಲಿ ಅಂದೇ ಸೋಲಿಸಿದ್ದರೆ, ಬ್ರಿಟಿಷರ ಆಳ್ವಿಕೆ ಅಂದೇ ಕೊನೆಗೊಳ್ಳುತ್ತಿತ್ತು.

ಈ ಯುದ್ಧದ ಸಮಯದಲ್ಲಿ ಟಿಪ್ಪು ತೋರಿದ ನಾಯಕತ್ವದ ಕೊರತೆ, ಅವನ ಸೇನಾಧಿಪತಿಗಳಾದ ಶೇಕ್ ಆಯಾಜ್ ಮತ್ತು ಮಹಮ್ಮದ್ ಅಲಿ ಇವರಿಬ್ಬರನ್ನು ನಡೆಸಿಕೊಂಡ ರೀತಿ ವಿಮರ್ಶೆಗೆ ಒಳಗಾಗಿದೆ. ಈ ಮಧ್ಯೆ ಟಿಪ್ಪುವಿನ ಪರಿಸ್ಥಿತಿ ಗಂಭೀರವಾಗುತ್ತಿತ್ತು. ಅವನ ಸೈನ್ಯದಿಂದ ಶತ್ರುಪಾಳ್ಯಕ್ಕೆ ಸೈನಿಕರು ತೊರೆದು ಹೋಗುತ್ತಿದ್ದರು. ಲಾರ್ಡ್ ಕಾರನ್‌ವಾಲೀಸ್‌ನಿಗೆ ಟಿಪ್ಪುವನ್ನು ಗೆಲ್ಲುವುದು ಅವನಿಗೆ ಸಾಧ್ಯವಿದ್ದರೂ ಸಹ ಶಾಂತಿ ಒಪ್ಪಂದಕ್ಕೆ ಸಹಿ ಹಾಕಲು ಒಪ್ಪಿಕೊಂಡನು. ಏಕೆಂದರೆ ಟಿಪ್ಪು ಇಲ್ಲದ ಪರಿಸ್ಥಿತಿಯಲ್ಲಿ ಮರಾಠರು ಬಲವಾದ ಶತ್ರುಗಳಾಗಬಹುದು ಎಂಬ ಯೋಚನೆ ಕಾರನ್‌ವಾಲೀಸ್‌ಗೆ ಬಂದಿರಬಹುದು. ಏನೇ ಆಗಲಿ, ಶ್ರೀರಂಗಪಟ್ಟಣ ಒಪ್ಪಂದದ ನಂತರ ಮೈಸೂರಿನ ಅಧಃಪತನ ಆರಂಭವಾಯಿತೆನ್ನಬಹುದು ಎಂದು ವಿವರಿಸುತ್ತಾರೆ.

ಈ ಯುದ್ಧದ ನಿಜವಾದ ಕಾರಣದ ಬಗ್ಗೆ ಹೇಳುತ್ತಾ ಶಾಮರಾವ್ ಬರೆಯುತ್ತಾರೆ. ಟಿಪ್ಪುವಿನ ವಿರುದ್ಧ ಇಂಗ್ಲಿಷರಿಗೆ ಏನೇ ದ್ವೇಷ ಅಥವಾ ಪೂರ್ವಗ್ರಹ ಇದ್ದಿರಲಿ, ಇಂಗ್ಲಿಷರು ಮತ್ತು ಫ್ರೆಂಚರ ನಡುವಿನ ಪೈಪೋಟಿ(ಭಾರತದ ಪ್ರಭುತ್ವಕ್ಕಾಗಿ) ಅವನ ನಾಶಕ್ಕೆ ಕಾರಣವಾಯಿತು. ಟಿಪ್ಪುವಿನ ನಾಯಕತ್ವದ ಕೊರತೆಯಿಲ್ಲದೇ ಅವನ ವ್ಯಕ್ತಿತ್ವದ ದೋಷಗಳು, ಆಡಳಿತದ ವಿಷಯಗಳಲ್ಲಿ ಗಟ್ಟಿತನ ಇಲ್ಲದಿರುವುದು, ಅವನು ಸೇನಾಧಿಪತಿಗಳನ್ನು ಅಪನಂಬಿಕೆಯಿಂದ ನೋಡುವುದು ಹಾಗೂ ಅವನ ದೋಷಪೂರಿತ ರಾಜಕೀಯ ತಿಳುವಳಿಕೆ ಇವುಗಳಿಂದಾಗಿ ಒಂದು ಪರಿಸ್ಥಿತಿಯನ್ನು ಸರಿಯಾಗಿ ಅಳೆಯುವ ಶಕ್ತಿ ಅವನಲ್ಲಿ ಕಂಡುಬರಲಿಲ್ಲ. ಹೀಗಾಗಿ ಒಂದು ಸಂಸ್ಥಾನವನ್ನು ಛಿದ್ರಗೊಳಿಸಬಲ್ಲ ಕ್ರಮಗಳನ್ನು ಅವನು ತೆಗೆದುಕೊಳ್ಳುವಂತಾಯಿತು ಎಂದಿದ್ದಾರೆ. ಈ ಸಂಪುಟದ ಮೊದಲ ೨೬೨ ಪುಟಗಳು ಮೈಸೂರಿನಲ್ಲಿ ಇದ್ದ ಆಂತರಿಕ ಘರ್ಷಣೆಗಳು, ಆಂಗ್ಲರು ಮತ್ತು ಫ್ರೆಂಚರ ನಡುವೆ ಇದ್ದ ರಾಜಕೀಯ ಕಾದಾಟಗಳು, ಮೊಘಲರ ಅವನತಿ, ಹೈದರ್ ಮತ್ತು ಟಿಪ್ಪು ಸುಲ್ತಾನರ ಆಡಳಿತದ ಕ್ರಮಗಳನ್ನು ತಿಳಿಸಿವೆ. ಹೀಗೆ ಹಂತಹಂತವಾಗಿ ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ಬ್ರಿಟಿಷರು ಮೈಸೂರಿನ ಆಡಳಿತವನ್ನು ಕಸಿದುಕೊಂಡರು ಎಂಬುದರ ವಿವರಗಳನ್ನು ತಿಳಿಸುತ್ತಾರೆ. ಬಹುಸಂಖ್ಯಾತರಾದ ಹಿಂದೂಗಳ ರಕ್ಷಣೆಗಾಗಿ ಬ್ರಿಟಿಷರು ಹೈದರ್ ಮತ್ತು ಟಿಪ್ಪು ಸುಲ್ತಾನರ ವಿರುದ್ಧ ಸಾಮ್ರಾಜ್ಯಶಾಹಿ ದಾಳಿಗಳು ಅನಿವಾರ್ಯವಾಗಿದ್ದವು ಎಂದು ಬ್ರಿಟಿಷ್ ಚರಿತ್ರಕಾರರು ನೀಡಿರುವ ವಿವರಣೆಯನ್ನು ಇವರು ಒಪ್ಪಿಕೊಳ್ಳುತ್ತಾರೆ. ಏಕೆಂದರೆ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮೈಸೂರಿನ ಒಡೆಯರನ್ನು ಮೂಲೆಗುಂಪು ಮಾಡಿ ಅಧಿಕಾರವನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಇದರಿಂದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಆಕ್ರಮಣಕಾರರು ಎಂಬುದನ್ನು ವಿವರಿಸಿದ್ದಾರೆ. ಇಲ್ಲಿ ಬ್ರಿಟಿಷ್ ಅಧಿಕಾರಿಗಳ ಒಡೆದು ಆಳುವ ನೀತಿಗೆ ಅನುಗುಣವಾಗಿ ವಿವರಣೆ ನೀಡಿರುವುದನ್ನು ನೋಡಬಹುದು. ಅಲ್ಲದೇ ಟಿಪ್ಪುವು ಮತಾಂಧನಾಗಿದ್ದನು ಎಂಬುದರ ಬಗೆಗೆ ತಿಳಿಸುತ್ತಾ ಟಿಪ್ಪು ಹಿಂದೂ ದೇವರುಗಳ ಕಂಚಿನ ವಿಗ್ರಹಗಳನ್ನು ತೋಪಿಖಾನೆಯಲ್ಲಿ ಎಸೆದಿದುದ್ದನ್ನು ಜನರಲ್ ಹ್ಯಾಲಿಸ್ಸನು

ಹಿಂದೂ ದೇವಾಲಯದ ಅರ್ಚಕರಿಗೆ ವಿತರಿಸಿದನು ಎಂದಿದ್ದಾರೆ(ಪು.೨೫೧). ಬ್ರಿಟಿಷರು ಮೈಸೂರನ್ನು ಹೈದರ್ ಮತ್ತು ಟಿಪ್ಪುವಿನಿಂದ ರಕ್ಷಿಸಿದರು ಎನ್ನುವ ತೀರ್ಮಾನಕ್ಕೆ ಬರುತ್ತಾರೆ.

ಟಿಪ್ಪುವಿನ ಮರಣದ ನಂತರ ಮೈಸೂರು ಸಂಸ್ಥಾನದ ಪುನಃ ಸ್ಥಾಪನೆಯ ವಿವರಗಳು, ಆಡಳಿತದ ಸೂತ್ರ ಹಿಡಿದ ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರಗತಿಪರ ಕಾರ್ಯಗಳನ್ನು ಇಲ್ಲಿ ತಿಳಿಸಲಾಗಿದೆ. ದಿವಾನರಾಗಿ ಪೂರ್ಣಯ್ಯ ನೇಮಕಗೊಂಡರು. ಅನಂತರದ ಆಡಳಿತಾತ್ಮಕ ಸುಧಾರಣೆಗಳಲ್ಲಿ ೧೮೦೦ರ ದೋಂಡಿಯ ವಾಘನ ದಂಗೆ, ಮಜುರಾಬಾದಿನ ಬಲ್ಲಂಗ ಸೀಮೆಯ ಪಾಳೆಯಗಾರ ಕೃಷ್ಣಪ್ಪನಾಯಕನ ದಂಗೆ, ೧೮೦೩ರ ಮರಾಠ ಯುದ್ಧ, ೧೮೦೫ ಮತ್ತು ೧೮೦೬ರ ವೆಲ್ಲೂರು ದಂಗೆ ಇವೇ ಮೊದಲಾದ ಪ್ರಮುಖ ದಂಗೆಗಳನ್ನು ಅಡಗಿಸಲಾಯಿತು. ಹೀಗೆ ಆರ್ಥಿಕ ಸ್ಥಿತಿಗತಿಗಳು, ರಾಜಕೀಯ ಸ್ಥಿತ್ಯಂತರದ ವಿವರಗಳನ್ನು ನೋಡಬಹುದು. ನಗರದಂಗೆಯ ವಿವರಗಳು ಮತ್ತು ಈ ದಂಗೆಯಿಂದ ಒಡೆಯರ ಅಧಿಕಾರವನ್ನು ಲಾರ್ಡ್ ವಿಲಿಯಂ ಬೆಟಿಂಕ್‌ನು ಹಿಂತೆಗೆದುಕೊಂಡ ವಿವರಗಳು ಪ್ರಮುಖವಾದವು. ಕಮೀಷನರ್‌ಗಳ ಆಳ್ವಿಕೆ ಪ್ರಾರಂಭವಾಗಿ, ಮತ್ತೆ ಒಡೆಯರಿಗೆ ಸಿಂಹಾಸನ ಪ್ರಾಪ್ತವಾಗಲು ಸುಮಾರು ವರ್ಷಗಳೇ ಬೇಕಾದವು. ಅನಂತರ ಕ್ಯಾಂಪ್‌ಬೆಲ್ಲನ ಪ್ರಯತ್ನದಿಂದಾಗಿ ಮೈಸೂರಿನ ಪುನರ್‌ಕೊಡುಗೆ ಸಾಧ್ಯವಾಯಿತು. ಇವರ ಪಾತ್ರ ಇಲ್ಲದಿದ್ದರೆ ಮೈಸೂರಿನ ಪುನರ್ ಕೊಡುಗೆ ಕಷ್ಟವಾಗುತ್ತಿತ್ತು ಅಥವಾ ವಿಳಂಬವಾಗುತ್ತಿತ್ತು ಎಂದು ವಿವರಿಸುತ್ತಾ ಹೋಗುತ್ತಾರೆ. ದಿವಾನ್ ಪೂರ್ಣಯ್ಯನು ಆಡಳಿತದಲ್ಲಿ ಪ್ರಮುಖ ಪಾತ್ರವನ್ನು ವಹಿಸಿರುವುದನ್ನು ನೋಡಬಹುದು. ಸಂಧಾನ ಮತ್ತು ಸೈನ್ಯದ ವ್ಯೂಹ ರಚಿಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ. ಬೆಂಗಳೂರಿನಲ್ಲಿ ನೆಲೆಸಿದ್ದ ಯೂರೋಪಿಯನ್ ಸೇವಾ ತುಕಡಿಯಲ್ಲಿ ಒಂದು ಬಂಡಾಯವೆದ್ದಾಗ ಅದನ್ನು ಅಡಗಿಸಲು ಕಾರಣನಾದವನೂ ಪೂರ್ಣಯ್ಯನೇ. ಆದುದರಿಂದ ಈ ದೊಡ್ಡಮಟ್ಟದ ರಾಜಕೀಯ ಅಧಿಕಾರವನ್ನು ಈ ಮುದುಕ ಬ್ರಾಹ್ಮಣನ ಹೆಗಲ ಮೇಲೆ ಹೊರಿಸುವುದರಲ್ಲಿ ಬ್ರಿಟಿಷರ ಆಯ್ಕೆ ಸಮರ್ಪಕವೇ ಆಗಿತ್ತು. ಪೂರ್ಣಯ್ಯ ಅವರು ಎರಡು ರೀತಿಯ ಆಳರಸರ ಕೈಕೆಳಗೆ ಕೆಲಸ ಮಾಡಿದವರು. ಟಿಪ್ಪು ಸುಲ್ತಾನನ ಆಡಳಿತ ಮತ್ತು ಒಡೆಯರ ಆಡಳಿತದಲ್ಲಿ ಪಾತ್ರ ವಹಿಸಿದ್ದಾರೆ. ಆದರೆ ಪೂರ್ಣವಾಗಿ ವಿಭಿನ್ನ ಸನ್ನಿವೇಶಗಳಲ್ಲಿ ವಿಲ್ಕ್ಸ್ ಮತ್ತು ರೈಸ್ ಅವರ ಪ್ರಕಾರ ಪೂರ್ಣಯ್ಯ ಟಿಪ್ಪುವಿನ ಪತನದ ನಂತರ ಬ್ರಿಟಿಷರು ಆಜ್ಞೆ ಮಾಡಿದ ತಕ್ಷಣ ಅವರಿಗೆ 'ಶರಣಾಗಿ' ಆಜ್ಞಾವರ್ತಿಯಾಗಿ ನಡೆದುಕೊಂಡ ಬುದ್ಧಿವಂತ ಸಮರ್ಥ ಬ್ರಾಹ್ಮಣ ಎಂದಿದ್ದಾರೆ. ಪೂರ್ಣಯ್ಯ ಪರಿಸ್ಥಿತಿಗೆ ಹೊಂದಿಕೊಳ್ಳುವ ಮಾತುಗಳನ್ನು ಉದ್ಧರಿಸುತ್ತಾರೆ. ನನ್ನ ಜನಾಂಗದ ರಕ್ಷಣೆ ಮಾಡುತ್ತಿರುವ ರಾಷ್ಟ್ರವೊಂದು ಶರಣಾಗಲೆಂದು ನನಗೆ ಹೇಳುತ್ತಿದ್ದರೆ ನಾನು ಹಿಂದೆ ಮುಂದೆ ನೋಡದೇ ಒಪ್ಪಿದೆನು ಎನ್ನುತ್ತಾನೆ. ಇಲ್ಲಿ ಕೃತಿಕಾರರು ಪೂರ್ಣಯ್ಯ ಹೇಗೆ ತತ್‌ಕ್ಷಣ ತಮ್ಮ ಬಣ ನಿಷ್ಠೆ ಬದಲಾಯಿಸಿದರು ಎಂಬುದರ ಬಗ್ಗೆ ವಿಚಾರ ಮಾಡಲು ಹೋಗುವುದೇ ಇಲ್ಲ. ಈ ಚರಿತ್ರೆಕಾರರು ಪೂರ್ಣಯ್ಯ ಅವರ ಜನಾಂಗಕ್ಕೆ ಸೇರಿರುವುದೇ ಇದಕ್ಕೆ ಕಾರಣವಿರಬಹುದೇ? ಎಂದು ಎಸ್.ಚಂದ್ರಶೇಖರ್ ಅವರು ವಿಶ್ಲೇಷಿಸಿದ್ದಾರೆ(ವಸಹಾತುಕಾಲೀನ ಕರ್ನಾಟಕ, ಪು.೧೭-೧೮). ಶಾಮರಾವ್ ಅವರು ಈ ಮೊದಲ ಸಂಪುಟವನ್ನು ಮುಮ್ಮಡಿ

ಕೃಷ್ಣರಾಜ ಒಡೆಯರ ಸಾವಿನೊಂದಿಗೆ ಮುಗಿಸುತ್ತಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಬಗೆಗೆ ಗೌರವ ಮನೋಭಾವನೆಯಿಂದಲೇ ಬರೆಯುವುದನ್ನು ಈ ಸಂಪುಟದಲ್ಲಿ ನೋಡಬಹುದು.

ಎರಡನೆಯ ಸಂಪುಟವು ೧೦ನೇ ಚಾಮರಾಜ ಒಡೆಯರು ಅಧಿಕಾರ ವಹಿಸಿಕೊಂಡಿದ್ದರಿಂದ ಹಿಡಿದು, ೧೯೩೫ರ ಕಾಯ್ದೆ ಅನುಷ್ಠಾನದವರೆಗೆ ವಿವರಣೆಯನ್ನು ನೀಡುತ್ತದೆ. ೧೦ನೇ ಚಾಮರಾಜ ಒಡೆಯರ ಅಧಿಕಾರ, ಅವರ ಅಭಿವೃದ್ಧಿ ಕಾರ್ಯಗಳನ್ನು ವಿವರಿಸುತ್ತಾರೆ. ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಕೈಗೊಂಡ ಯೋಜನೆಗಳ ಬಗೆಗೆ ತಿಳಿಸುತ್ತಾರೆ. ದಿವಾನರಾದ ರಂಗಾಚಾರ್ಲು ಅವರ ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆ, ಇವರು ಜಾರಿಗೆ ತಂದ ಆಡಳಿತಾತ್ಮಕ ಸುಧಾರಣೆಗಳು ಇವೇ ಮೊದಲಾದವುಗಳ ವಿವರ ನೀಡುತ್ತಾರೆ. ಒಂದು ರೀತಿಯಲ್ಲಿ ಮರುವಸಾಹತು ಬ್ರಿಟಿಷ್ ರಾಜಕೀಯ ಸಂಬಂಧಗಳನ್ನು ಇಲ್ಲಿ ಗಮನಿಸಬಹುದು. ಸಾಂವಿಧಾನಿಕ ಸರ್ಕಾರದಲ್ಲಿ ಪ್ರಯೋಗವನ್ನು ಮಾಡಿರುವ ವಿವರಗಳು ಪ್ರಮುಖವಾಗಿವೆ(ಪು.೪೪). ಕೃಷಿ ಮತ್ತು ಕೈಗಾರಿಕೆಗಳ ಸ್ಥಾಪನೆ, ಕ್ಷಾಮಗಳ ನಿವಾರಣೆಯ ಕ್ರಮಗಳನ್ನು ಕೈಗೊಂಡರು. ಬೆಂಗಳೂರು, ಮೈಸೂರು ಸ್ಥಳಗಳಿಗೆ ರೈಲ್ವೆ ಸಂಪರ್ಕವನ್ನು ಕಲ್ಪಿಸಿದ್ದರ ಅಂಶಗಳು, ಕೋಲಾರದ ಚಿನ್ನದ ಗಣಿಗಾರಿಕೆಯ ಆದಾಯ ಮತ್ತು ತೆರಿಗೆಯ ಮಾಹಿತಿಯನ್ನು ನೋಡುತ್ತಾರೆ. ದಿವಾನರಾದ ಶೇಷಾದ್ರಿ ಅಯ್ಯರ್ ಅವರ ಆಡಳಿತದ ವೈಖರಿ, ಆರ್ಥಿಕ ಪ್ರಗತಿ, ನೀರಾವರಿ, ವಿದ್ಯುತ್, ರೈಲ್ವೆ, ಬ್ಯಾಂಕ್‌ಗಳು, ಶಿಕ್ಷಣ, ಕೈಗಾರಿಕಾ ಯೋಜನೆಗಳ ಬಗೆಗೆ ವಿವರಣೆಗಳನ್ನು ನೀಡಿದ್ದಾರೆ. ಸ್ಥಳೀಯ, ದೇಶಿಯ ಭಾಷೆಗಳ ಮೂಲಕ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದ್ದರ ವಿವರಗಳು ಇವೆ(ಪು.೧೩೬). ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ಮೂಲಕ ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನ ಆಗಿ ಅಭಿವೃದ್ಧಿ ಹೊಂದಿದ ಕಾರ್ಯಗಳ ಬಗೆಗೆ ಚರ್ಚಿಸುತ್ತಾರೆ. ಇವರ ಕಾಲದ ದಿವಾನರುಗಳಾದ ಪಿ.ಎನ್. ಕೃಷ್ಣಮೂರ್ತಿ, ವಿ.ಪಿ.ಮಾಧವರಾವ್, ಟಿ.ಆನಂದರಾವ್, ಸರ್.ಎಂ.ವಿಶ್ವೇಶ್ವರಯ್ಯ, ಕಾಂತರಾಜ ಅರಸ್, ಆಲ್ಬಿಯನ್ ಬ್ಯಾನರ್ಜಿ ಅವರು ಕೈಗೊಂಡ ಕಾರ್ಯಕ್ರಮಗಳು, ಮೈಸೂರು ಸಂಸ್ಥಾನವನ್ನು ಮಾದರಿ ಸಂಸ್ಥಾನವಾಗಿ ಪರಿವರ್ತಿಸಿದ ಬಗೆಯನ್ನು ವಿವರಿಸುತ್ತಾರೆ. ೧೯೧೪ರ ಮೊದಲ ಯುದ್ಧದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಮಾಡಿದ ಸಹಾಯದ ವಿವರವನ್ನು ತಿಳಿಸಿದ್ದಾರೆ(ಪು.೨೫೫–೨೫೮). ಹಾಗೆಯೇ ಶೈಕ್ಷಣಿಕ ಸಾಧನೆಗಳನ್ನು ಇಲ್ಲಿ ಗುರುತಿಸಲಾಗಿದೆ. ಪಂಚಮರಿಗೆ ಶಾಲೆಗಳನ್ನು ಪ್ರಾರಂಭಿಸಿದವರ ಅಂಶಗಳನ್ನು ಇಲ್ಲಿ ತಿಳಿಯಬಹುದು. ವಿದ್ಯಾಭ್ಯಾಸಕ್ಕಾಗಿ ಹಾಸ್ಟೆಲ್‌ಗಳ ಸ್ಥಾಪನೆ ಮತ್ತು ವಿದ್ಯಾರ್ಥಿವೇತನದ ಸೌಲಭ್ಯಗಳನ್ನು ಒದಗಿಸಿದರು ಎಂಬುದು ಮುಖ್ಯ.

ಜವಾಬ್ದಾರಿ ಸರ್ಕಾರದ ರಚನೆ ಕುರಿತು ಬಂದ ಆಯೋಗಗಳು, ಅವು ತಿಳಿಸುವ ಅಂಶಗಳನ್ನು ಇಲ್ಲಿ ಗಮನಿಸಬಹುದು. ಜಿಲ್ಲಾ ಮತ್ತು ತಾಲೂಕು ಮಂಡಳಿಗಳು, ಪುರಸಭೆಗಳ ಅಧಿಕಾರ, ಗ್ರಾಮ ಪಂಚಾಯಿತಿಗಳು ನಡೆಸುವ ಆಡಳಿತದ ವಿಕೇಂದ್ರಿಕರಣವನ್ನು ನೋಡಬಹುದು. ದುಂಡುಮೇಜಿನ ಸಮ್ಮೇಳನಗಳು, ದಿವಾನರಾದ ಸರ್.ಮಿರ್ಜಾ ಇಸ್ಮಾಯಿಲ್ ಅವರ ಭಾಗವಹಿಸುವಿಕೆಯ ಅಂಶಗಳು ಮಿಳಿತವಾಗಿವೆ(ಪು.೩೩೯). ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲ್ ಅವರ ಕಾಲದಲ್ಲಿ ನಡೆದ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆಯ ವಿವರಗಳು

ಇಲ್ಲ. ಮೊದಲ ಬಾರಿಗೆ ಕೆಲವು ಮಹಿಳೆಯರಿಗೆ ವಿಧಾನ ಪರಿಷತ್ತಿನಲ್ಲಿ ಸದಸ್ಯತ್ವವನ್ನು ನೀಡಿದರು ಎಂಬುದು ಇಲ್ಲಿ ಮುಖ್ಯ(ಪು.೪೨೫). ಹಿಂದೂ ಕಾನೂನಿನ ವಿವರಗಳು, ೧೯೩೫ರ ಕಾಯ್ದೆಯ ಅನುಷ್ಠಾನ, ಮೈಸೂರಿನ ಜನರಲ್ಲಿ ಬೆಳೆಯುತ್ತಿದ್ದ ರಾಷ್ಟ್ರೀಯ ಭಾವನೆಯ ಅಂಶಗಳನ್ನು ತಿಳಿಸುತ್ತಾರೆ. ೧೯೩೫ರ ಕಾಯ್ದೆಯ ಮೂಲಕ ಕೇಂದ್ರ ಮತ್ತು ರಾಜ್ಯಗಳ ಸಂಬಂಧಗಳನ್ನು ನಿರ್ಧರಿಸಲಾಯಿತು. ಹಾಗೆಯೇ ಮೈಸೂರು ಅದಕ್ಕೆ ಹೇಗೆ ಪ್ರತಿಕ್ರಿಯಿಸಿತು ಎಂಬುದು ಮುಖ್ಯ. ಈ ಸಂಪುಟಗಳನ್ನು ಗಮನಿಸಿದಾಗ ಒಂದು ರೀತಿಯಲ್ಲಿ ಗ್ಯಾಸೆಟಿಯರ್ ಒಕ್ಕಣಿಕೆಯ ಮಾದರಿಯಲ್ಲೇ ಒಟ್ಟು ಬರವಣಿಗೆ ಮೂಡಿಬಂದಿದೆ.

ಆಶ್ಚರ್ಯವೆಂದರೆ ೨೦ನೇ ಶತಮಾನದ ಪ್ರಮುಖ ಚಳವಳಿಯಾದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಎಲ್ಲಿಯೂ ಪ್ರಸ್ತಾಪವೇ ಇಲ್ಲದಿರುವುದು ಕಂಡುಬರುತ್ತದೆ. ಸರ್.ಎಂ. ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಈ ಚಳವಳಿಯ ಬಗ್ಗೆ ಸ್ವಲ್ಪವೂ ಮಾಹಿತಿಯೇ ಇಲ್ಲ. ಈ ಚಳವಳಿಯ ಬಗೆಗೆ ಕೃತಿಕಾರರಿಗೆ ಇರುವ ಮೌನವು ಆ ಕಾಲದ ಮೇಲ್ವರ್ಗದ ಮತೀಯ ದೃಷ್ಟಿಕೋನದ ಚರಿತ್ರೆಯ ಗ್ರಹಿಕೆ ಕ್ರಮವನ್ನು ಖಚಿತಪಡಿಸುತ್ತದೆ.

ಮೈಸೂರು ಒಡೆಯರಿಗೆ ಸಂಬಂಧಿಸಿದಂತೆ ಒಡೆಯರ ಕೇಂದ್ರಿತವಾಗಿ ಹಲವಾರು ಕೃತಿಗಳು ಹೊರಬಂದಿವೆ. ಆ ಕೃತಿಗಳಲ್ಲಿ ಸಿ.ಕೆ.ಜಯಸಿಂಹರಾವ್ ಅವರು ಬರೆದಿರುವ **ನಾಲ್ವಡಿ ಕೃಷ್ಣನ ಮೈಸೂರು**(೧೯೪೦)[೫೧] ಎಂಬ ಕೃತಿ ಪ್ರಮುಖವಾದುದು. ಮೈಸೂರು ಸಂಸ್ಥಾನ ಒಂದು ಮಾದರಿ ಸಂಸ್ಥಾನ ಎಂದು ಹೆಸರು ಪಡೆಯಲು ಕಾರಣಕರ್ತರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತದ ಸುಧಾರಣೆಯನ್ನು ತಿಳಿಸುವ ಕೃತಿ ಆಗಿದೆ. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತದಲ್ಲಿ ಮೈಸೂರು ಸಂಸ್ಥಾನದ ಪ್ರಗತಿಯನ್ನು ಚಿತ್ರಿಸಲು ಈ ಕೃತಿಯಲ್ಲಿ ಪ್ರಯತ್ನಿಸಲಾಗಿದೆ. ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಮೊದಲ ದಿವಾನರಾದ ಪಿ.ಎನ್.ಕೃಷ್ಣಮೂರ್ತಿ ಅವರು ಮೈಸೂರು ನಗರದ ಅಭಿವೃದ್ಧಿಗಾಗಿ ಅನೇಕ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ಇಲ್ಲಿ ಗುರುತಿಸಬಹುದು. 'ಮೈಸೂರು ಸಿಟಿ ಇಂಪ್ರೂವ್‌ಮೆಂಟ್ ಟ್ರಸ್ಟ'ನ್ನು ಸ್ಥಾಪಿಸಲಾಯಿತು. ಈ ಸಂಸ್ಥೆಯ ಸೇವೆಯ ಫಲವಾಗಿ ಮೈಸೂರು ನಗರ ಸೌಂದರ್ಯ, ಸ್ವಚ್ಛತೆಗಳಲ್ಲಿ ಇಡೀ ಭಾರತಕ್ಕೆ ಆದರ್ಶವಾಗಿದೆ ಎಂಬುದು ಮುಖ್ಯವಾಗಿದೆ. ರೈಲ್ವೆ, ಬ್ಯಾಂಕ್, ನೀರಾವರಿ, ವಿದ್ಯುತ್, ವೈದ್ಯಕೀಯ, ಸೌಲಭ್ಯಗಳು ಮತ್ತು ಆರ್ಥಿಕಾಭಿವೃದ್ಧಿಗಾಗಿ ಕೈಗೊಂಡ ಆರ್ಥಿಕ ಸಮ್ಮೇಳನಗಳು, ಛೇಂಬರ್ ಆಫ್ ಕಾಮರ್ಸ್ ಸಂಸ್ಥೆಯ ಸ್ಥಾಪನೆ ಇವೆ ಮೊದಲಾದವುಗಳು ಮೈಸೂರು ಸಂಸ್ಥಾನದ ಪ್ರಗತಿಗೆ ಸಹಾಯಕವಾದವು ಎಂಬುದನ್ನು ಈ ಕೃತಿಯಲ್ಲಿ ವಿವರಿಸಲಾಗಿದೆ. ದಿವಾನರಾದ ಸರ್ ಎಂ.ವಿಶ್ವೇಶ್ವರಯ್ಯ ಅವರು ವಾಣಿಜ್ಯ ಕೈಗಾರಿಕೆಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿ ಮೈಸೂರಿನ ಪ್ರಗತಿಗೆ ಕಾರಣರಾದರು. ಆದರೆ ಸರ್ ಎಂ.ವಿಶ್ವೇಶ್ವರಯ್ಯ ಅವರ ರಾಜೀನಾಮೆಗೆ ಕಾರಣವಾದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಎಲ್ಲೂ ಪ್ರಸ್ತಾಪವಿಲ್ಲ. ಮೇಲ್ವರ್ಗ ಜಾತಿಯ ಒಂದು ಐಡೆಂಟಿಟಿ ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ಈ ಸಂದರ್ಭದಲ್ಲಿ ತಿಳಿಯಬಹುದು. ಸರ್ ಆಲ್ಬಿಯನ್ ಬ್ಯಾನರ್ಜಿ ಅವರು ದಿವಾನರಾಗಿ ನೇಮಕವಾದ ನಂತರ ನ್ಯಾಯ ವಿಧಾಯಕ ಸಭೆ ಮತ್ತು ಪ್ರಜಾಪ್ರತಿನಿಧಿ ಸಭೆಗಳ ಸುಧಾರಣ ಕ್ರಮಗಳನ್ನು

ನೋಡಬಹುದು. ಅನಂತರ ಸರ್ ಮಿರ್ಜಾ ಇಸ್ಮಾಯಿಲ್ ಅವರ ಆಡಳಿತವು ಹಲವು ದೃಷ್ಟಿಗಳಿಂದ ಪ್ರಾಮುಖ್ಯತೆಯನ್ನು ಪಡೆದಿದೆ. ಮಿರ್ಜಾ ಅವರು ಮೈಸೂರನ್ನು 'ಭಾರತದ ಉದ್ಯಾನ ನಗರಿ' ಎಂದು ಹೆಸರು ಪಡೆಯುವಂತೆ ಮಾಡುವಲ್ಲಿ ಶ್ರಮಿಸಿದರು. ಕೃಷಿ, ಕೈಗಾರಿಕೆ, ರೈಲ್ವೆ, ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಆದ ಅಭಿವೃದ್ಧಿ ಕಾರ್ಯಗಳನ್ನು ಇಲ್ಲಿ ತಿಳಿಸಿದ್ದಾರೆ. ಕಾಂತರಾಜ್ ಅರಸು ದಿವಾನರಾದ ಮೇಲೆ ಹಿಂದುಳಿದ ವರ್ಗಗಳ ಏಳಿಗೆಗೆ ಸೌಲಭ್ಯಗಳನ್ನು ಒದಗಿಸಿದರು.

ಸ್ತ್ರೀಯರು ಕೂಡ ಮತ ನೀಡುವ ಹಕ್ಕನ್ನು ಪಡೆದಿರುವ ಅಂಶವನ್ನು ಗಮನಿಸಬಹುದು. ನಾಲ್ವಡಿ ಕೃಷ್ಣರಾಜ ಒಡೆಯರ ಸಹೋದರರಾದ ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ಅವರು ಕೂಡ ಇವರ ಆಡಳಿತಕ್ಕೆ ಅನುಕೂಲವಾದ ಕಾರ್ಯಕ್ರಮಗಳನ್ನು ಜಾರಿಗೊಳಿಸಿದರು. ಬೆಂಗಳೂರು ಮತ್ತು ಕೋಲಾರದಲ್ಲಿ ಅವರ ಹೆಸರಿನಲ್ಲಿಯೇ ನಿಮ್ನ ವರ್ಗಗಳ ಹಾಸ್ಟೆಲ್‌ಗಳು ಪ್ರಾರಂಭವಾದವು. ಹೀಗೆ ಅವರು ಕೈಗೊಂಡ ಕೆಲವೊಂದು ಕಾರ್ಯಗಳನ್ನು ಮಾತ್ರ ತಿಳಿಸಿದ್ದಾರೆ. ಮುಖ್ಯವಾಗಿ ಪಂಚಮರ ಏಳಿಗೆಗಾಗಿ ಶ್ರಮಿಸಿದ ಆರ್.ಗೋಪಾಲಸ್ವಾಮಿ ಮತ್ತು ಯುವರಾಜರಾದ ಕಂಠೀರವ ನರಸಿಂಹರಾಜ ಒಡೆಯರ್ ಇವರಿಬ್ಬರ ಜೊತೆಗಿನ ಕಾರ್ಯಗಳನ್ನು ವಿವರಿಸಬಹುದಿತ್ತು. ಒಟ್ಟಿನಲ್ಲಿ ಈ ಕೃತಿಯು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿನ ಮೈಸೂರಿನ ಪ್ರಗತಿಯನ್ನು ವಿವರಿಸಿದ್ದಾರೆ. ಆದರೆ ಸಮಾಜದಲ್ಲಿ ಆದ ಬದಲಾವಣೆಗಳನ್ನು ಗುರುತಿಸಿರುವುದಿಲ್ಲ. ಇಲ್ಲಿ ನಡೆದ ಬ್ರಾಹ್ಮಣೇತರ ಚಳವಳಿ, ಗಣಪತಿ ಗಲಾಟೆಗಳ ಬಗೆಗೆ ಮಾಹಿತಿಗಳಿಲ್ಲ. ಇಲ್ಲಿ ಅರಸುಕೇಂದ್ರಿತ ಚರಿತ್ರೆ ನಿರೂಪಿತವಾಗಿದೆ.

ಸಿ.ಕೆ.ಜಯಸಿಂಹರಾವ್ ಅವರೇ ಬರೆದಿರುವ **ಪ್ರಗತಿ ಪರ ಮೈಸೂರು**(೧೯೪೦)[೫] ಎಂಬ ಕೃತಿಯಲ್ಲಿ ಮೈಸೂರು ಯಾವ ರೀತಿ ಅಭಿವೃದ್ಧಿಗೊಂಡಿತು ಎಂಬುದನ್ನು ವಿವರಿಸುತ್ತಾರೆ. ಈ ಕೃತಿಯಲ್ಲಿ ಮುಖ್ಯವಾಗಿ ಸರ್ ಮಿರ್ಜಾ ಇಸ್ಮಾಯಿಲ್ ಅವರ ಆಡಳಿತದಲ್ಲಿನ ಮೈಸೂರಿನ ಪ್ರಗತಿಯನ್ನು ಚಿತ್ರಿಸಲು ಪ್ರಯತ್ನಿಸಿದೆ. ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಸರ್ ಮಿರ್ಜಾ ಇಸ್ಮಾಯಿಲ್ ಅವರು ದಿವಾನ್ ಪದವಿಗೆ ಬಂದು ಹದಿನಾಲ್ಕು ವರ್ಷಗಳು ಆಡಳಿತ ನಡೆಸಿ, ಎಲ್ಲಾ ರೀತಿಯ ಪ್ರಗತಿಗೆ ಕಾರಣರಾದರು. ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ದಿವಾನರಾದ ಮಿರ್ಜಾ ಇಸ್ಮಾಯಿಲ್ ಅವರ ಬಗೆಗೆ ನೇರ ಕೃತಿಗಳು ಕೆಲವು ಹೊರಬಂದಿವೆ. ಆದರೆ ಮೈಸೂರಿನ ಪ್ರಗತಿಯಲ್ಲಿ ಮಿರ್ಜಾ ಇಸ್ಮಾಯಿಲ್ ಅವರನ್ನು ಗುರುತಿಸಿರುವುದು ಈ ಕೃತಿಯ ವಿಶೇಷವಾಗಿದೆ.

ಮಿರ್ಜಾ ಅವರ ಆಡಳಿತವು ಹಲವು ದೃಷ್ಟಿಗಳಿಂದ ಪ್ರಾಮುಖ್ಯತೆಯನ್ನು ಪಡೆದಿದೆ. ರಾಜಕೀಯ ವಿಷಯಗಳಲ್ಲಿ ಹಲವು ಬದಲಾವಣೆಗಳಾದವು. ಇಂಗ್ಲೆಂಡಿನಲ್ಲಿ ನಡೆದ ಚಕ್ರಗೋಷ್ಠಿಯಲ್ಲಿ ಮಿರ್ಜಾ ಅವರು ಭಾಗವಹಿಸಿ ದೇಶೀಯ ಸಂಸ್ಥಾನಗಳ ಹಕ್ಕು ಬಾಧ್ಯತೆಗಳನ್ನು ಭದ್ರಪಡಿಸಿ, ಮೈಸೂರು ಸಂಸ್ಥಾನಕ್ಕೆ ಹೆಚ್ಚಿನ ಕೀರ್ತಿಯನ್ನು ತಂದರು ಎಂಬುದು ಗಮನಾರ್ಹ. ಆಡಳಿತದ ದೃಷ್ಟಿಯಿಂದ ಇವರ ಕಾಲ ಪ್ರಮುಖವಾದುದು. ಕೈಗಾರಿಕೆ ಮತ್ತು ವಾಣಿಜ್ಯ

ಕ್ಷೇತ್ರದಲ್ಲಿ ಹಲವು ಬೆಳವಣಿಗೆಗಳು ಆದವು. ಪ್ರಮುಖವಾಗಿ ವರ್ತಕ ಸಂಘದ ಕಾರ್ಯಗಳನ್ನು ಗಮನಿಸಬಹುದು. ಆರ್ಥಿಕ ಸಮ್ಮೇಳನವನ್ನು ಏರ್ಪಡಿಸಿ ಸಂಸ್ಥಾನದ ಅಭಿವೃದ್ಧಿಗೆ ಶ್ರಮಿಸಿದರು ಎಂಬುದನ್ನು ತಿಳಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿನ ಕೃಷಿ, ಕೈಗಾರಿಕೆಗಳು, ವಿದ್ಯಾಭ್ಯಾಸ, ನಿರುದ್ಯೋಗ ಸಮಸ್ಯೆ ನಿವಾರಣೆ, ರೈಲ್ವೆ ಆರೋಗ್ಯ, ಗ್ರಾಮೋದ್ಧಾರ ಕಾರ್ಯಕ್ರಮಗಳ ವಿವರಗಳನ್ನು ನೋಡಬಹುದು. ಮೈಸೂರನ್ನು ಸೌಂದರ್ಯದ ಖನಿಯನ್ನಾಗಿಸಿದ್ದರ ವಿವರಗಳನ್ನು ಗಮನಿಸಬಹುದು.

ಕರ್ನಾಟಕ ವೀರರತ್ನಗಳ ಸಾಲಿನಲ್ಲಿ ರಣಧೀರ ಕಂಠೀರವ ನರಸರಾಜ ಒಡೆಯರು ಸೇರಿರುವುದನ್ನು ವೆಂಕಟೇಶ ಭೀಮರಾವ್ ಆಲೂರ ಅವರು ಬರೆದಿರುವ **ಕರ್ನಾಟಕ ವೀರ ರತ್ನಗಳು**(೧೯೪೦)[೫೩] ಎಂಬ ಕೃತಿಯಲ್ಲಿ ವಿವರಿಸಿದ್ದಾರೆ. ಮೈಸೂರು ಒಡೆಯರ ಸಂಸ್ಥಾಪಕನಾದ ಯದುರಾಯನಿಂದ ಹಿಡಿದು ರಣಧೀರ ಕಂಠೀರವ ನರಸರಾಜ ಒಡೆಯರ್ ಅವರು ಹನ್ನೆರಡೆಯವರು. ಪರಾಕ್ರಮಶಾಲಿಯಾಗಿದ್ದು, ಇಮ್ಮಡಿ ರಾಜ ಒಡೆಯರ್ ಅವರ ಮಹಾರಾಣಿ ಇವನನ್ನು ದತ್ತು ತೆಗೆದುಕೊಂಡರು. ಸಂಸ್ಥಾನದಲ್ಲಿ ನಡೆಯುತ್ತಿದ್ದ ಕಲಹಗಳನ್ನು ಅಡಗಿಸಿದ ವಿವರಗಳನ್ನು ನೋಡಬಹುದು. ರಣದುಲ್ಲಾಖಾನ್‌ನೊಡೆನ ನಡೆದ ಯುದ್ಧದ ವರ್ಣನೆಯನ್ನು ಗಮನಿಸಬಹುದು. ಮೈಸೂರು ಸಂಸ್ಥಾನವನ್ನು ವಿಸ್ತರಿಸಿದ ಮಾಹಿತಿಗಳನ್ನು ನೀಡಿದ್ದಾರೆ. ರಣಧೀರ ಕಂಠೀರವ ನರಸರಾಜ ಒಡೆಯರ್ ಅವರು ಜಟ್ಟಿಯಾಗಿ ಗುರುತಿಸಿಕೊಂಡು, ಅನಂತರ ಒಡೆಯರಾಗಿ ಆಡಳಿತವನ್ನು ನಡೆಸಿ, ಸಂಸ್ಥಾನವನ್ನು ಶಾಂತಿ ನೆಲೆಸುವಂತೆ ಮಾಡಿದರು ಎಂಬುದನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ.

ರಾಜಕೀಯ ಸುಧಾರಣೆಗಳ ವರದಿಯ ಮೇಲೆ ಮೈಸೂರು ಸರ್ಕಾರದವರು ದೀರ್ಘವಾದುದೊಂದು ಆಜ್ಞೆಯನ್ನು ಹೊರಡಿಸಿದರು. ಆ ಆಜ್ಞೆಯ ನಿರ್ಣಯಗಳನ್ನು ಕುರಿತು ನಾನಾ ಕಡೆಗಳಿಂದ ಟೀಕೆಗಳು ಬಂದವು. ಇವು 'ವಿಶ್ವ ಕರ್ನಾಟಕ' ಪತ್ರಿಕೆಗಳಲ್ಲಿ ಒಂದರ ಹಿಂದೊಂದರಂತೆ ಒಂಬತ್ತು ಲೇಖನಗಳು ಪ್ರಕಟವಾದವು. ಇವುಗಳನ್ನು ಸೇರಿಸಿ ತೀ.ತಾ.ಶರ್ಮ ಅವರು ಮೈಸೂರು **ರಾಜಕೀಯ ಸುಧಾರಣೆಗಳ ತಿರುಳು**(೧೯೪೦)[೫೪] ಎಂಬ ಕೃತಿಯನ್ನು ರಚಿಸಿದರು. ಹತ್ತೊಂಬತ್ತನೇ ಶತಮಾನದಿಂದೀಚೆಗೆ ಮೈಸೂರು ಸಂಸ್ಥಾನದ ಆಧುನಿಕ ರಾಜಕೀಯ ಚರಿತ್ರೆಯಲ್ಲಿ ಮೂರು ಯುಗಗಳೆಂದು ಕರೆಯಬಹುದು. ಮೊದಲನೆಯದು ೧೮೩೧ ರಿಂದ ೧೮೮೧ರವರೆಗೆ ಇದನ್ನು ಕ್ರಮ ಪರಿವರ್ತನೆಯ ಯುಗವೆಂದು ಕರೆಯಬಹುದು. ಹಿಂದಿನ ರಾಜ್ಯಾಡಳಿತದಲ್ಲಿದ್ದ ಅವ್ಯವಸ್ಥೆ, ಅಕ್ರಮಗಳನ್ನು ಬ್ರಿಟಿಷ್ ಕಮೀಷನರುಗಳು ತಿದ್ದಿ ಸರಿಪಡಿಸಿ, ಇಲಾಖೆಗಳ ಏರ್ಪಾಡನ್ನು ಕಛೇರಿಯ ಶಿಸ್ತನ್ನು ಜಾರಿಗೆ ತಂದು ಸರ್ಕಾರಕ್ಕೆ ಒಂದು ಹೊಸ ಆಯಕಟ್ಟನ್ನು ಕೊಟ್ಟರು. ಅದನ್ನು ಅಧಿಕಾರಿ ಮಂಡಲ ಪ್ರಭುತ್ವ ಎಂದು ಕರೆಯಬಹುದು. ೧೮೮೧ರಿಂದ ಸುಮಾರು ೧೯೨೦–೨೨ರವರೆಗಿನ ಕಾಲವನ್ನು ಅಭ್ಯುದಯೋದ್ಯಮದ ಯುಗವೆಂದು ಕರೆಯಬಹುದು. ಈ ಕಾಲದಲ್ಲಿ ಸರಕಾರದ ಅಂಗರಚನೆ ಒಂದು ಸೀಮಿತಕ್ಕೆ ಬಂದು, ರಸ್ತೆ, ರೈಲು, ವೈದ್ಯಶಾಲೆ, ವಿದ್ಯಾಪ್ರಸಾರ, ಕಾರ್ಖಾನೆಗಳು, ಇಂಥ ಪ್ರಜಾನುಕೂಲವಾದ ಮತ್ತು ಬುದ್ಧಿವಿಕಾಸಕಾರಕವಾದ ಸಾರ್ವಜನಿಕ ಕಾರ್ಯಗಳು ಜಾರಿಯಾದವು. ಇಂತಹ ಅಭಿವೃದ್ಧಿಯ ಕಾರ್ಯಗಳಿಂದ ಜನರಲ್ಲಿ ತಿಳುವಳಿಕೆ ಉಂಟಾದವು. ಇದರಿಂದ ರಾಜಕೀಯ

ಪ್ರಗತಿಗೆ ಅವಶ್ಯಕವಾಗಿರುವ ಸಿದ್ಧತೆಗಳನ್ನು ಶ್ರೀರಂಗಾಚಾರ್ಲು ಅವರಿಂದ ವಿಶ್ವೇಶ್ವರಯ್ಯನವರೆಗಿನ ದಿವಾನರುಗಳು ಮಾಡಿಕೊಟ್ಟರು. ಇದರ ಪರಿಣಾಮವಾಗಿ ಇವು ಜನರಿಗೆ ಉತ್ತಮ ಸರ್ಕಾರದ ಲಕ್ಷಣಗಳು ಎಂಬುದು ತಿಳಿಯುವಂತಾಯಿತು.

ಜನಸಾಮಾನ್ಯರ ನೋವು ನಲಿವುಗಳನ್ನು ಸರ್ಕಾರದ ಗಮನಕ್ಕೆ ತರುವ ಉದ್ದೇಶದಿಂದ ದಿವಾನ್ ರಂಗಾಚಾರ್ಲು ಅವರು 'ಪ್ರಜಾಪ್ರತಿನಿಧಿ' ಸಭೆಯೊಂದನ್ನು ರೂಪಿಸಿದರು. ಇದರಿಂದ ಜನಸಾಮಾನ್ಯರ ಪ್ರತಿನಿಧಿಗಳಾಗಿದ್ದ ಆಯಾ ತಾಲ್ಲೂಕಿನ ಮುಖ್ಯಸ್ಥರಲ್ಲಿ ಸಮಾಜದ ಕಳಕಳಿ, ದೇಶದ ಆಗುಹೋಗುಗಳ ಪ್ರಜ್ಞೆ ಮೂಡಲು ಸಾಧ್ಯವಾಯಿತು. ಅಲ್ಲಿಂದ ಸಭೆ ಪದೇ ಪದೇ ಅಭಿವೃದ್ಧಿ ಪಡೆದು ವಿಶ್ವೇಶ್ವರಯ್ಯ ಅವರ ಕಾಲದಲ್ಲಿ ವರ್ಷಕ್ಕೆ ಎರಡು ಸಲ ಸಭೆ ಸೇರಲು ತಕ್ಕದೆನಿಸಿಕೊಳ್ಳುವಷ್ಟರ ಮಟ್ಟಿಗೆ ಬೆಳೆದಿತ್ತು. ಹೀಗೆ ಬರಹಗಾರರು ಪ್ರಜಾಪ್ರತಿನಿಧಿ ಸಭೆಯು ಮೈಸೂರಿನ ರಾಜಕೀಯದಲ್ಲಿ ಅತ್ಯಂತ ಪ್ರಮುಖವಾದ ಪಾತ್ರ ವಹಿಸಿದೆ ಎಂದಿದ್ದಾರೆ.

ಮೈಸೂರು ಭಾರತದ ಗರ್ಭದಲ್ಲಿದೆ. ಬ್ರಿಟಿಷರು ಭಾರತಕ್ಕೆ ಜವಾಬ್ದಾರಿ ಸರ್ಕಾರ ಕೊಡಲು ಎಲ್ಲಾ ಪ್ರಾಂತ್ಯಗಳು ಒಂದಾಗಬೇಕು. ಮೈಸೂರು ಜನರಲ್ಲಿ ರಾಜಕೀಯ ಪ್ರಜ್ಞೆಯ ಬಗೆಗೆ ತಿಳಿಸುತ್ತಾ ಬ್ರಾಹ್ಮಣರು, ಬ್ರಾಹ್ಮಣೇತರ ಜನಾಂಗದ ತಾರತಮ್ಯ, ಗ್ರಾಮಪಂಚಾಯಿತಿ, ಪೌರಸಭೆ, ಜಿಲ್ಲಾ ಸಭೆ, ನಾನಾ ಸಮಿತಿಗಳಲ್ಲಿ ಕೆಲಸ ಮಾಡಲು ಅವಕಾಶ ಕಲಿಸಿದ್ದರೂ ಕೆಲವರು ಮಾತ್ರ ಉಪಯೋಗಿಸಿ ಕೊಳ್ಳುತ್ತಿದ್ದರು. ಹೀಗೆ ಹತ್ತು ಹಲವಾರು ವಿಚಾರಗಳ ಬಗೆಗೆ ತಿಳಿಸುತ್ತಾ ರಾಜ್ಯವ್ಯವಸ್ಥೆಯಲ್ಲಿ ಇರಬೇಕಾದ ಮೂಲ ಲಕ್ಷಣಗಳನ್ನು ಎತ್ತಿ ತೋರಿಸಿದ್ದಾರೆ. ಸರಿಯಾದ ಜ್ಞಾನವಿಲ್ಲದೇ ರಾಜಕೀಯ ಸುಧಾರಣೆಗಳಿಗೆ ತಕ್ಕಂತೆ ಬೆಲೆ ಕಟ್ಟುವುದು ಯಾರಿಗೂ ಸಾಧ್ಯವಾಗಲಾರದು. ಮೂಲತತ್ವಗಳಾಗಿ ಪ್ರಜೆಗಳಿಗೆ ಪ್ರಶ್ನಿಸುವ ಹಕ್ಕು ಇದ್ದಾಗ ಮಾತ್ರ ರಾಜಕೀಯ ಸುಧಾರಣೆ ಆಗುತ್ತದೆ ಎಂಬ ಅಂಶಗಳನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ಒಟ್ಟಿನಲ್ಲಿ ಈ ಕೃತಿಯು ಜನರ ರಾಜಕೀಯ ವಿದ್ಯಾಭ್ಯಾಸಕ್ಕೆ ಸಹಾಯಕವಾದದ್ದು.

ಎಂ.ಶಿಂಗ್ರಯ್ಯ ಅವರು ಬರೆದಿರುವ **ಮೈಸೂರಿನ ಆಳಿದ ಮಹಾಸ್ವಾಮಿಯವರಾದ ನಾಲ್ವಡಿ ಶ್ರೀಕೃಷ್ಣರಾಜ ಒಡೆಯರವರು(೧೯೪೧)**[೫೫] ಎಂಬ ಕೃತಿಯು ಪ್ರಮುಖವಾದುದು. ನಾಲ್ವಡಿ ಕೃಷ್ಣರಾಜ ಒಡೆಯರ ಬಾಲ್ಯ, ಪಟ್ಟಾಭಿಷೇಕ, ವಿದ್ಯಾಭ್ಯಾಸ, ಸ್ವದೇಶ ಸಂಚಾರದ ಅಂಶಗಳನ್ನು ಮೊದಲಿಗೆ ಇಲ್ಲಿ ನೋಡಬಹುದು. ಯುರೋಪಿನಲ್ಲಿ ನಡೆದ ಯುದ್ಧದಲ್ಲಿ ಮಹಾರಾಜ ಅವರ ಸಹಾಯ ಹೇಗಿತ್ತು ಎಂಬುದನ್ನು ತಿಳಿಯಬಹುದು. ಇಂಗ್ಲಿಷರಿಗೂ ಮತ್ತು ಜರ್ಮನ್ನರಿಗೆ ನಡೆದ ಯುದ್ಧದಲ್ಲಿ ಹೋರಾಡಲು ಸೈನಿಕರು ಮತ್ತು ಯುದ್ಧದ ಖರ್ಚಿಗಾಗಿ ಹಣವನ್ನು ಸಹಾಯ ಮಾಡಿದರು. ಅವರ ರಾಜ್ಯಭಾರವು ಆದರ್ಶಪ್ರಾಯವಾಗಿದ್ದು, ಪ್ರಜಾಪ್ರತಿನಿಧಿ ಸಭೆ, ಶಾಸನಸಭೆಗಳ ಮೂಲಕ ಆಡಳಿತದ ಸುಧಾರಣೆಗಳನ್ನು ಜಾರಿಗೆ ತಂದರು. ಭಾರತದ ಐನೂರ ಅರವತ್ತೆರಡು ಸಂಸ್ಥಾನಗಳಲ್ಲಿ ಮೈಸೂರು ಕೃಷಿ, ಕೈಗಾರಿಕೆ, ವಾಣಿಜ್ಯ, ಜೀವನಪದ್ಧತಿ, ಪ್ರಯಾಣ ಸೌಕರ್ಯ, ಚಿಕಿತ್ಸಾಸೌಲಭ್ಯ, ಶಿಕ್ಷಣವ್ಯವಸ್ಥೆ, ಜಲವಸತಿ ಮೊದಲಾದ ಪ್ರಜಾಸೌಖ್ಯದ ಸುಧಾರಣೆಗಳಲ್ಲಿ ಅಗ್ರಸ್ಥಾನವನ್ನು ಗಳಿಸಿದೆ. ಪ್ರತಿ ದಿವಸವೂ

ಮೈಸೂರು ಪ್ರಜೆಗಳ ಹಲವು ಆಶೋತ್ತರಗಳು, ಒಕ್ಕಲುಮಕ್ಕಳ ಸಂಕಷ್ಟಗಳು, ವಾಣಿಜ್ಯ ಕೈಗಾರಿಕೆಗಳ ಪ್ರಗತಿಗಳು, ಮೇಲಿಂದ ಮೇಲೆ ಒದಗುತ್ತಿದ್ದ ರಾಷ್ಟ್ರೀಯ ಸಮಸ್ಯೆಗಳು ಮುಂತಾದವುಗಳ ನಡುವೆ ಮೈಸೂರು ಮುಂದುವರಿಯಬೇಕಾಗಿತ್ತು. ವಿರಾಮವಿಲ್ಲದೆ ೩೮ ವರ್ಷಗಳ ಕಾಲ ದುಡಿದುದರ ಫಲವಾಗಿ ಮೈಸೂರು ಸಂಸ್ಥಾನದಲ್ಲಿ ಎತ್ತ ಕಡೆ ತಿರುಗಿದರೂ ಅತ್ತ ಕಡೆಯೆಲ್ಲಾ ಮಹಾಸ್ವಾಮಿ ಅವರು ತಮ್ಮ ಪ್ರಜೆಗಳ ಸೌಖ್ಯಕ್ಕಾಗಿ, ಆರೋಗ್ಯಕ್ಕಾಗಿ, ಬದುಕಿಗಾಗಿ, ಮುಂದುವರಿಯುವುದಕ್ಕಾಗಿ ಮಾಡಿರತಕ್ಕ ಮಹಾಕಾರ್ಯಗಳೇ ಅಡಕವಾಗಿವೆ ಎಂದು ವಿವರಿಸುತ್ತಾರೆ. ಮೈಸೂರು ಮಾದರಿ ಸಂಸ್ಥಾನವಾಗಲು ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತವೇ ಕಾರಣ ಎಂದಿದ್ದಾರೆ. ಈ ನಿಟ್ಟಿನಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತದ ವಿವರಗಳ ಮಧ್ಯೆ ಎಣೆದಿರುವ ಕೃತಿಯಾಗಿದೆ. ಕೇವಲ ಮಾಹಿತಿಯನ್ನು ನೀಡುವ ಕೃತಿಯಾಗಿ ಗುರುತಿಸಿಕೊಂಡಿದೆ.

ಸಿ.ಕೆ.ವೆಂಕಟರಾಮಯ್ಯ ಅವರು ಬರೆದಿರುವ **ಆಳಿದ ಮಹಾಸ್ವಾಮಿಯವರು (ದಿವಂಗತರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀಕೃಷ್ಣರಾಜೇಂದ್ರ ಒಡೆಯರವರ ಜೀವನ ಚರಿತ್ರೆ)**(೧೯೪೧, ಮರುಮುದ್ರಣ-೨೦೧೧)[೫೯] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ವ್ಯಕ್ತಿಕೇಂದ್ರಿತವಾಗಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಜೀವನಚರಿತ್ರೆ ಚಿತ್ರಿತವಾಗಿದೆ. ನಾಲ್ವಡಿ ಅವರ ಆಡಳಿತಾವಧಿಯಲ್ಲಿ ನಡೆದ ಘಟನಾವಳಿಗಳನ್ನು ವಿವರಿಸುತ್ತಾ ಹೋಗುತ್ತಾರೆ. ನಾಲ್ವಡಿ ಅವರು ರಾಜ್ಯಾಡಳಿತದಲ್ಲಿ ಕೈಗೊಂಡ ಅನೇಕ ಸುಧಾರಣೆಗಳು ಈ ಕೃತಿಯಲ್ಲಿ ಉಲ್ಲೇಖಗೊಂಡಿವೆ. ಮೊದಲ ಬಾರಿಗೆ ಮೈಸೂರು ಅರಮನೆ ಪ್ರವೇಶಕ್ಕೆ ಕೆಳವರ್ಗದ ಹಾಗೂ ಪರಿಶಿಷ್ಟರಿಗೆ ಅವಕಾಶ ಕಲ್ಪಿಸಿಕೊಟ್ಟ ಉದಾರ ಹೆಗ್ಗಳಿಕೆ ನಾಲ್ವಡಿ ಕೃಷ್ಣರಾಜ ಒಡೆಯರದು. ಇವರ ಕಾಲದಲ್ಲಿ ಕೈಗೊಂಡ ಕಾರ್ಯಗಳಿಂದ ಮೈಸೂರು ಪ್ರಗತಿಯನ್ನು ಹೊಂದಿ ಮಾದರಿ ಸಂಸ್ಥಾನ ಎಂಬ ಹೆಗ್ಗಳಿಕೆಗೆ ಪಾತ್ರವಾಯಿತು. ಗಾಂಧೀಜಿ ಅವರು ಮೈಸೂರು ಸಂಸ್ಥಾನವನ್ನು ರಾಮರಾಜ್ಯ ಎಂದು ಕರೆದರು. ಈ ಕೃತಿಯಲ್ಲಿ ಅವರ ಬಾಲ್ಯದ ದಿನಗಳಿಂದ ಹಿಡಿದು ಅವರು ದೈವಾಧೀನರಾಗುವವರೆಗಿನ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಅವರು ಉತ್ತಮ ಪ್ರತಿಭೆ, ಪಾಂಡಿತ್ಯ, ಸದ್ಗುಣಗಳನ್ನು ಹೊಂದಿದ್ದರು ಎಂದು ವಿವರಿಸುತ್ತಾ ಬ್ರಿಟಿಷರ ಅಧೀನದಲ್ಲಿದ್ದು ಕೊಂಡು ಮೈಸೂರು ಸಂಸ್ಥಾನವನ್ನು ಅಭಿವೃದ್ಧಿ ಪಥದಲ್ಲಿ ಕೊಂಡೊಯ್ದ ನಾಲ್ವಡಿ ಅವರ ಸಾಧನೆ ನಿಜಕ್ಕೂ ಶ್ಲಾಘನೀಯವಾದುದು ಎಂಬುದನ್ನು ತಿಳಿಸಿದ್ದಾರೆ. ಕೃತಿಕಾರರು ನಾಲ್ವಡಿಯವರೊಂದಿಗೆ ನಿಕಟವರ್ತಿಯಾಗಿದ್ದು, ಅವರ ಪ್ರತಿಯೊಂದು ಕಾರ್ಯಗಳನ್ನು ಶ್ಲಾಘಿಸುತ್ತಾ ಹೋಗುವುದನ್ನು ಈ ಕೃತಿಯಲ್ಲಿ ಕಾಣಬಹುದು.

ಉತ್ತರ ಭಾರತದ ಸಂಚಾರದಲ್ಲಿ ಬರೋಡ ಸಂಸ್ಥಾನದ ಶ್ರೀ ಸಯ್ಯಾಜಿರಾವ್ ಗಾಯಕವಾಡ ಮಹಾರಾಜ ಅವರನ್ನು ಭೇಟಿ ಮಾಡಿದರು. ಅವರು ಈ ಸಂಸ್ಥಾನದಲ್ಲಿ ಕೈಗೊಂಡ ಸುಧಾರಣೆಗಳನ್ನು ನಾಲ್ವಡಿ ಅವರು ಮೈಸೂರು ಸಂಸ್ಥಾನದಲ್ಲಿ ಕೈಗೊಂಡರು ಎಂಬುದನ್ನು ತಿಳಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ಕಾರ್ಯಗಳಿಗೆ ದಿವಾನರುಗಳಾದ

ಕೆ.ಶೇಷಾದ್ರಿ ಅಯ್ಯರ್, ಪಿ.ಎನ್.ಕೃಷ್ಣಮೂರ್ತಿ, ಸರ್.ಎಂ.ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಅವರು ಸಹಾಯ ಮಾಡಿದ್ದರ ವಿವರಗಳನ್ನು ನೋಡಬಹುದು(ಪು.೧೭೭).

ತಮ್ಮ ವಿದ್ಯಾಭ್ಯಾಸದ ದಿನಗಳಲ್ಲಿ ಬರ್ಮಾ, ವಿದೇಶಿ ಪ್ರಯಾಣದ ವಿವರಗಳನ್ನು ಇಲ್ಲಿ ಗಮನಿಸಬಹುದು. ಇಲ್ಲಿ ಪಾಶ್ಚಾತ್ಯ ಶಿಕ್ಷಣ, ಇತರ ಅಂಶಗಳನ್ನು ತಮ್ಮ ಸಂಸ್ಥಾನದಲ್ಲಿ ಅಳವಡಿಸಲು ಈ ಪ್ರಯಾಣ ಸಹಾಯಕವಾಯಿತು. ಹಿನ್ನೆಲೆಯಾಗಿ ಮುಮ್ಮಡಿ ಕೃಷ್ಣರಾಜ ಒಡೆಯರ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಆದಂತಹ ಪುರೋವೃದ್ಧಿ ಕಾರ್ಯಗಳನ್ನು ವಿವರಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಅಧಿಕಾರವನ್ನು ವಹಿಸಿಕೊಂಡ ಮೇಲೆ ಜನತೆಯ ಸುಭಿಕ್ಷತೆಯ ಕಡೆಗೆ ಗಮನ ಹರಿಸಿ, ಅವರ ಸಮಸ್ಯೆಗಳನ್ನು ಬಗೆಹರಿಸುತ್ತಿದ್ದರ ವಿವರಗಳನ್ನು ಇಲ್ಲಿ ತಿಳಿಸಲಾಗಿದೆ(ಪು.೨೧೬-೨೧೭). ನಾಲ್ವಡಿ ಕೃಷ್ಣರಾಜ ಒಡೆಯರ ದಿನಚರಿಯ ವಿವರಗಳು ಇಲ್ಲಿ ಮುಖ್ಯವಾಗಿವೆ. ಇವರ ಸಹೋದರರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಕೂಡ ಇವರ ಆಡಳಿತ ಸುಸೂತ್ರವಾಗಿ ನಡೆಯಲು ಸಹಾಯ ಮಾಡಿದ್ದರ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ(ಪು.೨೬೧-೨೬೩).

ಸರ್ ಎಂ.ವಿಶ್ವೇಶ್ವರಯ್ಯ ಅವರು ದಿವಾನರಾಗಿ ಕೃಷಿ, ಕೈಗಾರಿಕೆ, ಶಿಕ್ಷಣ, ನೀರಾವರಿ ಮುಂತಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಜಾರಿಗೊಳಿಸಿದ್ದರ ವಿವರಗಳನ್ನು ಈ ಕೃತಿಯಲ್ಲಿ ನೋಡಬಹುದು. ಆದರೆ ಇದರಲ್ಲಿ ೨೦ನೇ ಶತಮಾನದ ಪ್ರಮುಖ ಚಳವಳಿಯಾದ ಬ್ರಾಹ್ಮಣೇತರ ಚಳವಳಿಯ ಬಗ್ಗೆ ಎಲ್ಲಿಯೂ ಪ್ರಸ್ತಾಪವೇ ಇಲ್ಲದಿರುವುದು, ಹಾಗೆಯೇ ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಈ ಬ್ರಾಹ್ಮಣೇತರ ಚಳವಳಿಯ ಬಗ್ಗೆ ಇರುವ ಮೌನ ಆ ಕಾಲದ ಮೇಲ್ವರ್ಗದ ಮತೀಯ ದೃಷ್ಟಿಕೋನದ ಚರಿತ್ರೆಯ ಗ್ರಹಿಕೆಯ ಕ್ರಮವನ್ನು ಖಚಿತ ಪಡಿಸುತ್ತದೆ(ಪು.೨೫೫).

ಇಲ್ಲಿ ಮುಖ್ಯವಾಗಿ ಅಸ್ಪೃಶ್ಯರಿಗೆ ನೀಡಿದ ಸಾಮಾಜಿಕ ಸ್ಥಾನಮಾನದ ಮನ್ನಣೆಯನ್ನು ಗಮನಿಸಬಹುದು. ಅಸ್ಪೃಶ್ಯರಿಗೆ ಅರಮನೆಯ ಪ್ರವೇಶವನ್ನು ಕಲ್ಪಿಸಿದರು. ಅವರ ವಿದ್ಯಾಭ್ಯಾಸ, ವಿದ್ಯಾರ್ಥಿವೇತನ, ವ್ಯವಸಾಯದ ಭೂಮಿಯ ರಿಯಾಯಿತಿಗಳು, ಪ್ರತ್ಯೇಕವಾದ ವಸಾಹತುಗಳ ಏರ್ಪಾಡು ಸಹಕಾರಿ ಸಂಘಗಳು, ಉದ್ಯೋಗ ಮೀಸಲಾತಿ, ಚುನಾವಣೆ ಸ್ಥಾನಗಳಲ್ಲಿ ಮೀಸಲಾತಿ, ಸಾರ್ವಜನಿಕ ಜಲಾಶಯಗಳಲ್ಲಿ ನೀರನ್ನು ತೆಗೆದುಕೊಳ್ಳುವುದು ಇನ್ನೂ ಮುಂತಾದ ಹಕ್ಕು ಬಾಧ್ಯತೆಗಳನ್ನು ನೀಡಿದ್ದರ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ(ಪು.೨೭೦-೨೭೧).

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ದೀರ್ಘಾವಧಿಯ(೧೯೨೬-೧೯೪೦) ದಿವಾನರಾದ ಸರ್ ಮಿರ್ಜಾ ಎಂ.ಇಸ್ಮಾಯಿಲ್ ಅವರ ಕಾರ್ಯದಕ್ಷತೆಯನ್ನು ತಿಳಿಸಿರುವುದು ಇಲ್ಲಿ ಗಮನಾರ್ಹ. ದುಂಡು ಮೇಜಿನ ಸಮ್ಮೇಳನದಲ್ಲಿ ಭಾಗವಹಿಸುವಿಕೆ, ನಗರಾಭಿವೃದ್ಧಿ ಕಾರ್ಯಗಳು, ಕೈಗಾರಿಕೆ, ವಿದ್ಯುಚ್ಛಕ್ತಿ, ಆಸ್ಪತ್ರೆಗಳು, ರೈಲ್ವೆ, ಶಿಕ್ಷಣ, ಕೃಷಿ ಹೀಗೆ ಈ ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ತಿಳಿಸಿದ್ದಾರೆ(ಪು.೩೦೩-

೩೩೯). ಮಿರ್ಜಾ ಇಸ್ಮಾಯಿಲ್ ಅವರು ದಿವಾನರಾದ ಅವಧಿಯಲ್ಲಿ ನಡೆದ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆಯ ಬಗೆಗೆ ಯಾವುದೇ ಮಾಹಿತಿಗಳಿಲ್ಲ. ಸಾಮಾಜಿಕವಾಗಿ ಕೋಮು ತಲ್ಲಣಗಳನ್ನು ಸೃಷ್ಟಿಸಿದ ಈ ಗಲಾಟೆಯನ್ನು ವಿವರಿಸದೇ ಇರುವುದನ್ನು ಇಲ್ಲಿ ಗಮನಿಸಬಹುದು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಸಂಗೀತದಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದರು. ವೀಣೆ ಶೇಷಣ್ಣ, ಸುಬ್ಬಣ್ಣ ಮುಂತಾದ ಸಂಗೀತಗಾರರ ಮಾಹಿತಿಗಳನ್ನು ಈ ಕೃತಿಯಲ್ಲಿ ನೋಡಬಹುದು. ಈ ಕೃತಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಪ್ರತಿಯೊಂದು ಗುಣಗಳನ್ನು ಪ್ರಶಂಸಿಸಿದ್ದಾರೆಯೇ ಹೊರತು ವಿಶ್ಲೇಷಣೆಯ ಗೋಜಿಗೆ ಹೋಗುವುದಿಲ್ಲ. ಹೀಗೆ ಕೃತಿಯು ಮಾಹಿತಿ ಪ್ರಧಾನ ಕೃತಿಯಾಗಿ ಗುರುತಿಸಿಕೊಂಡಿದೆ.

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಗೆ ಸಂಬಂಧಿಸಿದಂತೆ ಇನ್ನೂ ಅನೇಕ ಕೃತಿಗಳನ್ನು ನೋಡಬಹುದು. ಶ್ರೀನಾಥ ಅವರು ಬರೆದಿರುವ **ನಾಲ್ವಡಿ ಕೃಷ್ಣರಾಜನ ಮೈಸೂರು,** ನಾ.ಕಸ್ತೂರಿ ಅವರು ಬರೆದಿರುವ **ಶ್ರೀಕೃಷ್ಣರಾಜೇಂದ್ರ ಒಡೆಯರ್** ಮತ್ತು ಆರ್.ಚನ್ನೇಗೌಡ ಅವರು ಬರೆದಿರುವ **ನಮ್ಮ ಮಹಾರಾಜರು** ಎಂಬ ಕೃತಿಗಳು ಕೂಡ ವಿವರಣಾತ್ಮಕ ಮಾದರಿಯಲ್ಲಿ ಸಾಗಿವೆ. ನಾಲ್ವಡಿ ಅವರು ವಿದ್ಯಾಭ್ಯಾಸ, ಪಟ್ಟಾಭಿಷೇಕ, ಆಡಳಿತಸೂತ್ರದ ವಿವರಗಳು ಮಿಳಿತವಾಗಿವೆ. ಇವರ ಕಾಲದಲ್ಲಿ ಮೈಸೂರು ಸಂಸ್ಥಾನ ಹೇಗೆ ಅಭಿವೃದ್ಧಿ ಹೊಂದಿತು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಇವರು ಕೈಗೊಂಡ ಕಾರ್ಯಗಳಿಂದ ಮೈಸೂರು ಸಂಸ್ಥಾನ ಹೇಗೆ ಮಾದರಿ ಸಂಸ್ಥಾನವಾಗಿ ಹೆಸರು ಪಡೆಯಿತು ಮತ್ತು ಗಾಂಧೀಜಿ ಅವರು ಈ ಸಂಸ್ಥಾನವನ್ನು ರಾಮರಾಜ್ಯ ಎಂದು ಕರೆದ ವಿಚಾರಗಳನ್ನು ಕೃತಿಗಳಲ್ಲಿ ವಿವರಿಸಲಾಗಿದೆ. ಇವರ ಆಡಳಿತದಲ್ಲಿ ದಿವಾನರಾಗಿ ಕೈಗೊಂಡ ಅಭಿವೃದ್ದಿ ಕಾರ್ಯಗಳು ಮುಖ್ಯ ಪ್ರಮುಖವಾಗಿ ಅಸ್ಪೃಶ್ಯರಿಗೆ ಅನೇಕ ಸೌಲಭ್ಯಗಳನ್ನು ನೀಡಿದರು. ಅರಮನೆಯ ಪ್ರವೇಶ, ವಿದ್ಯಾಭ್ಯಾಸ, ವಿದ್ಯಾರ್ಥಿವೇತನ, ಹಾಸ್ಟೆಲ್ ಸೌಲಭ್ಯ ಇವೇ ಮೊದಲಾದ ಕಾರ್ಯಗಳನ್ನು ಕೈಗೊಂಡು ಅಸ್ಪೃಶ್ಯರಿಗೆ ಸಾಮಾಜಿಕ ಸ್ಥಾನಮಾನ ದೊರೆಯುವಂತೆ ಮಾಡಿದರು ಎಂಬ ವಿವರಗಳನ್ನು ಗಮನಿಸಬಹುದು. ಈ ಎಲ್ಲಾ ಕೃತಿಗಳು ವಿವರಣಾತ್ಮಕವಾದ ಕೃತಿಗಳಾಗಿ ಗುರುತಿಸಿಕೊಂಡಿವೆ.

ಮೈಸೂರು ಒಡೆಯರ ವಿವರಣಾತ್ಮಕ ಕೃತಿಗಳಲ್ಲಿ ಲಿಂಗಯ್ಯ ಓ.ಎಂ. ಅವರು ಬರೆದಿರುವ **ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರು(೧೯೪೧)**[೫೭] ಎಂಬ ಕೃತಿಯು ಪ್ರಮುಖವಾದುದು. ಮೈಸೂರು ಸಂಸ್ಥಾನವು ಸ್ಥಾಪನೆಯಾದ ವಿವರಗಳು, ರಾಜ ಒಡೆಯರಿಂದ ರಾಜ್ಯದ ವಿಸ್ತರಣೆಯ ಅಂಶಗಳು, ದಳವಾಯಿಗಳ ಆಡಳಿತ, ಹೈದರಾಲಿ ಮತ್ತು ಟಿಪ್ಪುವಿನ ಆಡಳಿತ, ಬ್ರಿಟಿಷರ ಆಡಳಿತ, ಸಂಸ್ಥಾನದ ಅಧಿಕಾರ ಹಂಚಿಕೆ ಇವೇ ಮೊದಲಾದ ಅಂಶಗಳನ್ನು ಪ್ರಾಸ್ತಾವಿಕದಲ್ಲಿ ತಿಳಿಸಿರುವುದನ್ನು ನೋಡಬಹುದು. ಮುಮ್ಮಡಿ ಕೃಷ್ಣರಾಜ ಒಡೆಯರ ಬಾಲ್ಯ, ರಾಜ್ಯಾಭಿಷೇಕ ವಿಚಾರಗಳು ಮಿಳಿತವಾಗಿದ್ದು, ದಿವಾನರಾದ ಪೂರ್ಣಯ್ಯ ಅವರ ಆಡಳಿತದ ವೈಖರಿಯನ್ನು ನೋಡಬಹುದಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಮೊದಲು ಆಡಳಿತವು ದಕ್ಷತೆಯಿಂದ ಕೂಡಿತ್ತು. ಅನಂತರ ಪರಿಸ್ಥಿತಿ ಹದಗೆಟ್ಟು ಅನೇಕ ದಂಗೆಕೋರರು, ತುಂಟರು,

ಪುಂಡರು, ದರೋಡೆಕೋರ ಪ್ರಜೆಗಳ ಸಂಪತ್ತನ್ನು ದೋಚುವ ಕಾರ್ಯದಲ್ಲಿ ತೊಡಗಿದ್ದನ್ನು ವಿವರಿಸಿದ್ದಾರೆ(ಪು.೩೮).

ಒಡೆಯರ ಆಪ್ತ ಅಧಿಕಾರಿಗಳು ಸ್ವಾರ್ಥಸಾಧಕರಾಗಿ ಹೇಗೆ ಆಡಳಿತವನ್ನು ದುರುಪಯೋಗ ಪಡಿಸಿಕೊಂಡರು ಎಂಬುದು ಇಲ್ಲಿ ಮುಖ್ಯ. ರೈತರ ಮೇಲೆ ಅನೇಕ ತೆರಿಗೆಗಳನ್ನು ವಿಧಿಸಿ ಕಟ್ಟುನಿಟ್ಟಾಗಿ ವಸೂಲಿ ಮಾಡುತ್ತಿದ್ದು, ರೈತರಿಗೆ ಅಸಮಾಧಾನವಾಗಿತ್ತು. ಈ ಮಧ್ಯದಲ್ಲಿ ನಗರದಲ್ಲಿ ಬೂದಿಬಸಪ್ಪನ ಏಳಿಗೆಯ ವಿವರಗಳನ್ನು ಇಲ್ಲಿ ತಿಳಿಯಬಹುದು. ಬೂದಿಬಸಪ್ಪನು ನಗರದ ಮುಖಂಡನೆಂಬುದಾಗಿ ಘೋಷಿಸಿಕೊಂಡು ದಂಗೆಗೆ ಕಾರಣನಾದ ಅಂಶಗಳನ್ನು ಗಮನಿಸಬಹುದು(ಪು.೬೮-೬೯). ಈ ದಂಗೆಯಿಂದಾಗಿ ಸಂಸ್ಥಾನದಾದ್ಯಂತ ದಂಗೆಗಳು ಜರುಗಿದವು. ಇದರಿಂದಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಅಧಿಕಾರವನ್ನು ಕಳೆದುಕೊಳ್ಳುವ ಪ್ರಸಂಗ ಒದಗಿತು. ಎಷ್ಟೇ ಪ್ರಯತ್ನಿಸಿದರೂ ಅಧಿಕಾರವನ್ನು ಉಳಿಸಿಕೊಳ್ಳಲು ಆಗಲಿಲ್ಲ. ಅಧಿಕಾರವನ್ನು ಬ್ರಿಟಿಷ್ ಕಮೀಷನರ್‌ಗಳ ಆಳ್ವಿಕೆಗೆ ಒಳಪಡಿಸಿದ್ದರ ವಿವರಗಳನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ. ಆದರೂ ಅಧಿಕಾರವನ್ನು ಪಡೆಯಲು ಸರ್ವ ಪ್ರಯತ್ನವನ್ನು ನಡೆಸುತ್ತಾರೆ. ಇದರ ಮಧ್ಯೆ ದತ್ತುಸ್ವೀಕಾರ ಮಾಡುತ್ತಾರೆ. ಇವರ ಆಡಳಿತಾವಧಿಯಲ್ಲಿ ದೇವಾಲಯಗಳಿಗೆ ದಾನ, ಸಾಹಿತ್ಯಕ್ಷೇತ್ರದಲ್ಲಿ ಅದ ಪ್ರಗತಿಯನ್ನು ಇಲ್ಲಿ ಗಮನಿಸಬಹುದು. ಈ ನಿಟ್ಟಿನಲ್ಲಿ ಕೃತಿಯ ಒಳಗಡೆ ಮುಮ್ಮಡಿ ಕೃಷ್ಣರಾಜ ಒಡೆಯರ ಜೀವಮಾನದ ಸಾಧನೆಯನ್ನು ತಿಳಿಸುವ ವಿವರಣಾತ್ಮಕ ಕೃತಿಯಾಗಿದೆ.

ವಿ.ಎಂ.ರಾಜಾರಾವ್ ಅವರು ಬರೆದಿರುವ ಆಧುನಿಕ ಮೈಸೂರು ನಿರ್ಮಾಪಕರು (೧೯೪೬)[೫೮] ಎಂಬ ಕೃತಿಯು ಮಹತ್ವದ್ದಾಗಿದೆ. ಏಕೆಂದರೆ ಮೈಸೂರು ಸಂಸ್ಥಾನದ ದಿವಾನರುರ ಕಾರ್ಯ ಸಾಧನೆಯನ್ನು ತಿಳಿಸುತ್ತಾ ದಿವಾನರ ಒಂದು ಐಡೆಂಟಿಟಿಯನ್ನು ಮೊದಲ ಬಾರಿಗೆ ಪ್ರತ್ಯೇಕವಾಗಿಯೇ ಈ ಕೃತಿಯಲ್ಲಿ ವಿವರಿಸಿದ್ದಾರೆ. ಈ ಕೃತಿಯಲ್ಲಿ ಐದು ಮಂದಿ ದಿವಾನರ ಕಾರ್ಯಸಾಧನೆಯನ್ನು ವಿವರಿಸುತ್ತಾ ಇವರಿಂದ ಮೈಸೂರು ಒಂದು ಮಾದರಿ ಸಂಸ್ಥಾನ ಎಂಬ ಕೀರ್ತಿಯನ್ನು ಪಡೆಯಿತು ಎಂಬ ಅಂಶಗಳನ್ನು ಚರ್ಚಿಸಿದ್ದಾರೆ. ಬ್ರಿಟಿಷರು ಟಿಪ್ಪುವಿನಿಂದ ವಶಪಡಿಸಿಕೊಂಡ ಮೈಸೂರನ್ನು ಷರತ್ತುಗಳಿಗೆ ಅನುಗುಣವಾಗಿ ಒಡೆಯರಿಗೆ ಪುನಃ ಅಧಿಕಾರವನ್ನು ನೀಡಿದರು ಎಂಬುದು ಚಾರಿತ್ರಿಕ ದಾಖಲೆ. ಅಧಿಕಾರವನ್ನು ವಹಿಸಿಕೊಟ್ಟ ತರುವಾಯ ಒಂಬತ್ತು ಮಂದಿ ದಿವಾನರುಗಳು ಮೈಸೂರು ಆಡಳಿತದ ಅತ್ಯುತ್ತಮ ಪದವಿಯನ್ನು ಅಲಂಕರಿಸಿದರು. ಅದರಲ್ಲಿ ಮುಖ್ಯವಾಗಿ ದಿವಾನ್ ಪೂರ್ಣಯ್ಯ, ರಂಗಾಚಾರ್ಲು, ಕೆ.ಶೇಷಾದ್ರಿ ಅಯ್ಯರ್, ಸರ್ ಎಂ.ವಿಶ್ವೇಶ್ವರಯ್ಯ, ಸರ್ ಮಿರ್ಜಾ ಎಂ.ಇಸ್ಮಾಯಿಲ್ ಅವರ ಕಾರ್ಯ ಸಾಧನೆಗಳನ್ನು ವಿವರಿಸುತ್ತಾರೆ.

ದಿವಾನ್ ಪೂರ್ಣಯ್ಯ ಅವರು ಟಿಪ್ಪು ಸುಲ್ತಾನ, ಆಡಳಿತಾವಧಿಯಲ್ಲಿ ದಿವಾನರಾಗಿ ಕಾರ್ಯ ನಿರ್ವಹಿಸಿದರು. ಹಾಗೆಯೇ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದವರೆಗೆ ಸ್ವಲ್ಪ ಸಮಯ ದಿವಾನರಾಗಿ ಕಾರ್ಯ ನಿರ್ವಹಿಸಿ ನಿವೃತ್ತರಾದರು. ಟಿಪ್ಪುವಿನ ಪ್ರಶಂಸೆಗೆ ಒಳಗಾದ

ದಿವಾನ್ ಪೂರ್ಣಯ್ಯ ಹಂತಹಂತವಾಗಿ ಮೈಸೂರು ಸಂಸ್ಥಾನದ ಆರ್ಥಿಕಾಭಿವೃದ್ಧಿಗೆ ಕಾರಣಕರ್ತರಾದರು ಎಂಬ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ. ವಿಲ್ಕ್ಸ್, ಮಿಂಟೋ ಮೊದಲಾದವರು ಪೂರ್ಣಯ್ಯ ಅವರನ್ನು ಹೊಗಳಿದ್ದಾರೆ. ಆದರೆ ವೆಂಕಟಸುಬ್ಬಶಾಸ್ತ್ರಿ ಕೆ.ಎನ್. ಅವರ **ಆಡ್ಮಿನಿಸ್ಟ್ರೇಷನ್ ಆಫ್ ಮೈಸೂರು ಅಂಡರ್ ಮಾರ್ಕ್ ಕಬ್ಬನ್**(೧೮೩೪-೧೮೬೧) ಎಂಬ ಕೃತಿಯಲ್ಲಿ ಅವರು ಗುರ್ತಿಸಿರುವ ಪೂರ್ಣಯ್ಯ ಅವರ ಸಮಯಸಾಧಕತನ, ಜಾತಿವಾದ, ಸ್ವಜನಪಕ್ಷಪಾತ ಮತ್ತು ಸ್ವಕೇಂದ್ರಿತ ಆಡಳಿತದ ವಿವರಗಳನ್ನು ಇಲ್ಲಿ ವಿವರಿಸಿಲ್ಲ. ಬ್ರಿಟಿಷರಿಗೆ ಆಜ್ಞಾವರ್ತಿಯಾಗಿಯೇ ಆಡಳಿತ ಕಾರ್ಯ ನಿರ್ವಹಿಸುತ್ತಾರೆ ಎಂಬುದು ತಿಳಿಯುತ್ತದೆ.

ಸಿ.ರಂಗಾಚಾರ್ಲು ಅವರು ದಿವಾನರಾಗಿ ಆಡಳಿತವನ್ನು ಹೇಗೆ ನಿರ್ವಹಿಸಿದರು ಎಂಬುದನ್ನು ತಿಳಿಸುವ ಪ್ರಯತ್ನ ಮಾಡಿದ್ದಾರೆ. ಅವರು ಅರಮನೆಯಲ್ಲಿ ನಡೆಯುತ್ತಿದ್ದ ಅವ್ಯವಹಾರಗಳನ್ನು ಮುಟ್ಟುಗೋಲು ಹಾಕಿದರು. ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ಇಲ್ಲಿ ಕಾಣಬಹುದು. ಇವರು ಬಹುಮುಖ್ಯವಾಗಿ ಪ್ರಜಾಪ್ರತಿನಿಧಿಯನ್ನು ಸ್ಥಾಪಿಸಿದ್ದು ಮಹತ್ವದ್ದಾಗಿದೆ. ಇದರಿಂದ ಸರ್ಕಾರ ಮತ್ತು ಪ್ರಜೆಗಳು ಹತ್ತಿರ ಸೇರುವಂತೆ ಆಯಿತು. ಆದರೆ ಬ್ರಿಟಿಷರು ಭಾರತೀಯರಿಗೆ ಪ್ರಜಾಪ್ರಭುತ್ವ ಕಲ್ಪನೆ ಬಂದಿಲ್ಲ ಎಂದು ಟೀಕಿಸಿರುವುದನ್ನು ಈ ಕೃತಿಯಲ್ಲಿ ತಿಳಿಯಬಹುದು. ಮೊಟ್ಟಮೊದಲ ಭಾರಿಗೆ ಭರತಖಂಡದ ಪ್ರಜಾಸತ್ತೆಯ ಆಡಳಿತ ತತ್ವವನ್ನು ಜಾರಿಗೆ ತಂದವರಲ್ಲಿ ಮೊದಲಿಗರು ಎಂಬ ಕೀರ್ತಿಗೆ ಪಾತ್ರರಾದರು(ಪು.೩೪). ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ನೋಡಬಹುದು.

ಶೇಷಾದ್ರಿ ಅಯ್ಯರ್ ಅವರು ಆಡಳಿತದಲ್ಲಿ ಜಾರಿಗೆ ತಂದ ಸುಧಾರಣೆಗಳ ವಿವರಗಳನ್ನು ಇಲ್ಲಿ ಗಮನಿಸಬಹುದು. ಆಸ್ಪತ್ರೆ, ಕುಡಿಯುವ ನೀರಿನ ಸೌಲಭ್ಯ, ಬಡಾವಣೆಗಳ ನಿರ್ಮಾಣ, ವಿದ್ಯಾಭ್ಯಾಸ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದರ ಬಗೆಗೆ ವಿವರಗಳಿವೆ. ಮುಖ್ಯವಾಗಿ ಶಿವನಸಮುದ್ರದಲ್ಲಿ ಕಾವೇರಿ ನದಿಯಿಂದ ವಿದ್ಯುಚ್ಛಕ್ತಿ ಉತ್ಪಾದನೆ ಇವರ ಕಾಲದಲ್ಲಿ ನಡೆದ ಒಂದು ಉತ್ತಮ ಪ್ರಯತ್ನ ಎನ್ನಬಹುದು. ಇವರ ಕಾಲದ ಆಡಳಿತದ ವೈಖರಿಯನ್ನು ಈ ಕೃತಿಯಲ್ಲಿ ತಿಳಿಸಿದ್ದಾರೆ.

ಸರ್.ಎಂ.ವಿಶ್ವೇಶ್ವರಯ್ಯ ಅವರು ದಿವಾನರಾಗಿ ಜಾರಿಗೆ ತಂದ ಕಾರ್ಯಗಳನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ. ಕೈಗಾರಿಕೆಗಳಲ್ಲಿ ಹೆಚ್ಚಿನ ಪ್ರೋತ್ಸಾಹ ನೀಡಿದ ಇವರು ಮೈಸೂರನ್ನು ಪ್ರಗತಿಯತ್ತ ಕೊಂಡ್ಯೊಯ್ದರು ಎಂಬ ಅಂಶಗಳು ಇಲ್ಲಿ ಮುಖ್ಯ. ನೀರಾವರಿ ವ್ಯವಸ್ಥೆಯಲ್ಲಿ 'ಬ್ಲಾಕ್' ಪದ್ಧತಿಯನ್ನು ಜಾರಿಗೆ ತಂದರು. ಕಾವೇರಿ ನದಿಗೆ ಕೆ.ಆರ್.ಎಸ್. ಅಣೆಕಟ್ಟೆಯ ನಿರ್ಮಾಣ ಇವರ ಮಹತ್ವದ ಸಾಧನೆಯಾಗಿದೆ. ಮೈಸೂರು ಬ್ಯಾಂಕ್ ಸ್ಥಾಪನೆ, ಚೇಂಬರ್ ಆಫ್ ಕಾಮರ್ಸ್‌ನ ಸ್ಥಾಪನೆ, ಶಾಲೆಗಳ ಸ್ಥಾಪನೆ, ಮೈಸೂರು ವಿಶ್ವವಿದ್ಯಾನಿಲಯದ ಸ್ಥಾಪನೆ, ಸಾಬೂನು ತಯಾರಿಕಾ ಕೈಗಾರಿಕೆ ಸ್ಥಾಪನೆ. ಇವೇ ಮೊದಲಾದ ವಿಚಾರಗಳನ್ನು ತಿಳಿಸಿದ್ದಾರೆ. ಮೈಸೂರು ಒಂದು ಮಾದರಿ ಸಂಸ್ಥಾನವಾಗಿ ರೂಪುಗೊಳ್ಳಲು ಸರ್.ಎಂ.ವಿಶ್ವೇಶ್ವರಯ್ಯ ಅವರ ಕಾರ್ಯಸಾಧನೆಗಳು ಮುಖ್ಯ ಎಂದು ಕೃತಿಕಾರರು ಇಲ್ಲಿ ತಿಳಿಸಿದ್ದಾರೆ. ಇಲ್ಲಿ ಮದ್ರಾಸ್ ಮತ್ತು

ಮೈಸೂರು ಬ್ರಾಹ್ಮಣರ ನಡುವೆ ದಿವಾನ್ ಹುದ್ದೆಗೆ ನಡೆದ ಹೋರಾಟದ ವಿವರಗಳಿಲ್ಲ ಹಾಗೂ ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಪ್ರಸ್ತಾಪವಿಲ್ಲ.

ದಿವಾನರಾದ ಮಿರ್ಜಾ ಇಸ್ಮಾಯಿಲ್ ಅವರು ದೀರ್ಘಕಾಲ ದಿವಾನ ಹುದ್ದೆಯಲ್ಲಿದ್ದು ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದರ ವಿವರಗಳನ್ನು ಈ ಕೃತಿಯಲ್ಲಿ ತಿಳಿಯಬಹುದು. ಕೃಷಿ, ಕೈಗಾರಿಕೆ, ರಸ್ತೆ, ಶಿಕ್ಷಣ, ಆಸ್ಪತ್ರೆ, ಪಶುಪಾಲನೆ, ನೀರಾವರಿ ಇನ್ನೂ ಮುಂತಾದ ಕ್ಷೇತ್ರಗಳಲ್ಲಿ ಕೈಗೊಂಡ ಅಭಿವೃದ್ಧಿಯ ಕಾರ್ಯಗಳನ್ನು ಇಲ್ಲಿ ಗಮನಿಸಬಹುದು. ರೌಂಡ್‌ಟೇಬಲ್ ಸಮ್ಮೇಳನಗಳಲ್ಲಿ ಭಾಗವಹಿಸಿದ್ದು ಆಡಳಿತಾತ್ಮಕ ವಿಚಾರಗಳನ್ನು ತಿಳಿಯುತ್ತಿದ್ದರು. ಜನರ ಕಷ್ಟಕ್ಕೆ ಮರುಗುತ್ತಿದ್ದ ರೀತಿಯನ್ನು ವಿವರಿಸಿದ್ದಾರೆ. ಜನರ ಕಷ್ಟಕ್ಕೆ ತಕ್ಷಣವೇ ಪರಿಹಾರಕ್ಕೆ ಸಂಬಂಧಪಟ್ಟ ಅಧಿಕಾರಿಗಳಿಗೆ ಸೂಚಿಸುತ್ತಿದ್ದ ರೀತಿ ಶ್ಲಾಘನೀಯವಾದದ್ದು ಎಂಬುದನ್ನು ತಿಳಿಯಬಹುದು(ಪು.೧೦೬). ಆದರೆ ಇವರ ಕಾಲದಲ್ಲಿ ನಡೆದ ಮತೀಯ ಹಿನ್ನೆಲೆ ಹೊಂದಿರುವ ಗಣಪತಿ ಗಲಾಟೆ ಬಗೆಗೆ ಎಲ್ಲೂ ವಿವರಗಳಿಲ್ಲದಿರುವುದನ್ನು ಈ ಕೃತಿಯಲ್ಲಿ ಗಮನಿಸಬಹುದು. ಈ ಕೃತಿಯಲ್ಲಿ ಕೃತಿಕಾರರು ಮುಖ್ಯವಾಗಿ ದಿವಾನರ ಪ್ರತಿಯೊಂದು ಕಾರ್ಯವನ್ನು ಶ್ಲಾಘಿಸುತ್ತಾರೆ. ಆಧುನಿಕ ಮೈಸೂರಿನ ಪ್ರಗತಿಗೆ ಕಾರಣಕರ್ತರು ಎಂದು ಪ್ರಶಂಸಿದ್ದಾರೆ.

ಮೈಸೂರು ಒಡೆಯರ ವಸಾಹತುಶಾಹಿ ಸರ್ಕಾರದ ಅಧಿಕಾರಿಗಳು ಮತ್ತು ಚರಿತ್ರೆಕಾರರೂ ಆಗಿದ್ದ ಸಿ.ಹಯವದನರಾವ್ ಅವರು ಮೈಸೂರು ಒಡೆಯರ ಚರಿತ್ರೆಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡವರು. ಸಿ.ಹಯವದನರಾವ್ ಅವರು **ಹಿಸ್ಟರಿ ಆಫ್ ಮೈಸೂರು ಮೂರು ಸಂಪುಟಗಳು(೧೯೪೩-೧೯೪೬)**[೫೯] ಎಂಬ ಕೃತಿಯನ್ನು ರಚಿಸಿದರು. ಈ ಮೂರು ಸಂಪುಟಗಳಲ್ಲಿ ೧೩೯೯ರ ಮೈಸೂರು ಸಂಸ್ಥಾನದ ಆಳ್ವಿಕೆಯಿಂದ ೧೭೯೯ರ ಟಿಪ್ಪು ಸುಲ್ತಾನನ ಆಳ್ವಿಕೆಯ ಕೊನೆಯವರೆಗಿನ ಅಂಶಗಳನ್ನು ಚರ್ಚಿಸುತ್ತಾರೆ. ಮೊದಲೆರಡು ಸಂಪುಟಗಳಲ್ಲಿ ಪ್ರಾರಂಭದ ಒಡೆಯರ ಆಡಳಿತದ ಅಂಶಗಳು ಮತ್ತು ಹೈದರಾಲಿ ಏಳಿಗೆಯ ಕಡೆಗೆ ಗಮನ ಹರಿಸಿದ್ದಾರೆ. ಮೂರನೆಯ ಸಂಪುಟವು ಹೈದರಾಲಿ ಮತ್ತು ಟಿಪ್ಪುವಿನ ಆಡಳಿತ ಅಂಶಗಳು. ನಾಲ್ಕನೇ ಆಂಗ್ಲೋ-ಮೈಸೂರು ಯುದ್ಧಗಳು ಮತ್ತು ಇತರೆ ವಿಷಯಗಳನ್ನು ಚರ್ಚೆ ಮಾಡಿರುವುದನ್ನು ನೋಡಬಹುದು.

ಮೊದಲ ಸಂಪುಟದಲ್ಲಿ ಸಿ.ಹಯವದನರಾವ್ ಅವರು ಮೈಸೂರು ಸಂಸ್ಥಾನವನ್ನು ವಿಜಯನಗರದ ಚಕ್ರಾಧಿಪತ್ಯದ ಪರಂಪರೆಯಲ್ಲಿ ವಿವರಿಸುತ್ತಾ ಹೋಗುತ್ತಾರೆ. ಪ್ರಾರಂಭದ ಒಡೆಯರು ಯಾವ ರೀತಿ ಮೈಸೂರು ಸಂಸ್ಥಾನದಲ್ಲಿ ಅಧಿಕಾರವನ್ನು ಸ್ಥಾಪಿಸಿದರು ಎಂಬುದರ ವಿವರಗಳನ್ನು ಮೊದಲು ಈ ಕೃತಿಯಲ್ಲಿ ಗಮನಿಸಬಹುದು. ಅಂದರೆ ಮೈಸೂರಿನ ಮೂಲವನ್ನು ವಿವರಿಸುತ್ತಾರೆ(ಪು.೧-೪೦). ಪ್ರಾರಂಭದ ಒಡೆಯರು ಮೈಸೂರು ಸಂಸ್ಥಾನಕ್ಕೆ ಅಡಿಪಾಯ ಹಾಕಿದ್ದರ ವಿವರಗಳನ್ನು ನೋಡಿದರೆ, ರಾಜ ಒಡೆಯರಿಂದ ಮೈಸೂರು ಸಂಸ್ಥಾನ ಒಂದು ಭದ್ರ ನೆಲೆಯನ್ನು ಕಂಡುಕೊಂಡಿತು. ರಾಜ ಒಡೆಯರಿಂದ ಮೈಸೂರು ಸಂಸ್ಥಾನ ಪ್ರವರ್ಧಮಾನಕ್ಕೆ

ಬಂದಿತು ಎಂಬುದು ಮುಖ್ಯ ಪ್ರಮುಖವಾಗಿ ಇವರ ಕಾಲದಲ್ಲಿ ಅಲಮೇಲಮ್ಮನ ಶಾಪದ ವಿವರಗಳನ್ನು ನೋಡಬಹುದು(ಪು.೫೮-೬೦). ರಾಜ ಒಡೆಯರು ಮೈಸೂರು ಸಂಸ್ಥಾನಕ್ಕೆ ಒಂದು ಭದ್ರಬುನಾದಿಯನ್ನು ಹಾಕಿದ್ದರಿಂದ ಅವರನ್ನು 'ಮೇಕರ್ ಆಫ್ ಮೈಸೂರು' ಎಂದು ಕರೆದಿದ್ದಾರೆ. ರಣಧೀರ ಕಂಠೀರವ ನರಸರಾಜ ಒಡೆಯರ್ ಅವರು ರಾಜ್ಯವಿಸ್ತರಣೆಯ ವಿವರಣೆಗಳು, ಚಿಕ್ಕದೇವರಾಜ ಒಡೆಯರ್ ಅವರ ರಾಜ್ಯವಿಸ್ತರಣೆಯ ವಿವರಣೆಗಳು, ಸಾಹಿತ್ಯಕ್ಕೆ ನೀಡಿದ ಪ್ರೋತ್ಸಾಹ, ಆಡಳಿತಾತ್ಮಕವಾಗಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದ ವಿವರಗಳಿವೆ. ಕೃಷಿಯ ತೆರಿಗೆ ಹೆಚ್ಚಾಗಿದ್ದರಿಂದ ಅಲ್ಲಿನ ಜಂಗಮರು ರೈತರನ್ನು ಈ ತೆರಿಗೆ ವಿರುದ್ಧ ಪ್ರತಿಭಟಿಸಲು ಸಂಘಟಿಸುತ್ತಿದ್ದರು. ಜಂಗಮರನ್ನು ಕುತಂತ್ರದಿಂದ ಕೊಲ್ಲಿಸಿದ ಕ್ರೌರ್ಯವನ್ನು ತಿಳಿಸಿಲ್ಲ(ಪು.೪೭೯). ಆದರೆ ವಿಲ್ಕ್ಸ್ ಇದರ ಬಗೆಗೆ ನೀಡಿರುವ ವಿವರಗಳನ್ನು ಸಿ.ಹಯವದನರಾವ್ ಅವರು ಮೇಲ್ನೋಟಕ್ಕೆ ತಿಳಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲವು ರಾಜಕೀಯವಾಗಿ ಹೆಚ್ಚು ಪ್ರವರ್ಧಮಾನಕ್ಕೆ ಬಂದ ಕಾಲವಾಗಿದೆ ಎಂಬುದನ್ನು ಸಿ.ಹಯವದನರಾವ್ ಅವರು ಹೇಳಿದ್ದಾರೆ. ಈ ಮೊದಲನೆಯ ಸಂಪುಟದಲ್ಲಿ ಪ್ರಾರಂಭದ ಒಡೆಯರಿಂದ ಹಿಡಿದು ಚಿಕ್ಕದೇವರಾಜ ಒಡೆಯರ ಆಡಳಿತಕ್ರಮದ ವಿವರಗಳವರೆಗೆ ಕೃತಿಕಾರರು ಚರ್ಚಿಸುತ್ತಾರೆ. ಇಲ್ಲಿ ಮೇಲ್ನೋಟಕ್ಕೆ ಮೈಸೂರು ಒಡೆಯರ ಚಾರಿತ್ರಿಕ ಘಟನೆಗಳನ್ನು ಕಟ್ಟುತ್ತಾ ಹೋಗುತ್ತಾರೆ. ಅರಮನೆಯಲ್ಲಿ ನಡೆದ ಕೊಲೆ, ರಕ್ತಪಾತ, ಷಡ್ಯಂತ್ರಗಳ ಬಗೆಗೆ ಈ ಕೃತಿಯಲ್ಲಿ ಮರೆಮಾಚುತ್ತಾರೆ.

ಎರಡನೆಯ ಸಂಪುಟದಲ್ಲಿ ದಳವಾಯಿಗಳ ಆಳ್ವಿಕೆಯಿಂದ ಹೈದರ್‌ನು ಏಳಿಗೆಗೆ ಬರುವವರೆಗೂ ವಿಚಾರಗಳನ್ನು ಚರ್ಚಿಸುತ್ತಾರೆ. ಮೈಸೂರಿನ ಭವಿಷ್ಯವು ಹೇಗೆ ದಳವಾಯಿಗಳ ಆಳ್ವಿಕೆಯಿಂದ ರೂಪಿತವಾಯಿತು ಎಂದು ತಿಳಿಸುತ್ತಾರೆ. ಕಳಚೂರಿ ನಂಜರಾಜಯ್ಯನು ಮರಾಠ ಮತ್ತು ನಿಜಾಮರ ಆಕ್ರಮಣಗಳ ವಿರುದ್ಧ ಮೈಸೂರನ್ನು ರಕ್ಷಿಸುವುದೇ ಅಲ್ಲದೇ ವಿಸ್ತರಣೆಗೆ ಅವಕಾಶ ಸಿಕ್ಕಾಗಲೆಲ್ಲ ಬಳಸಿಕೊಳ್ಳುತ್ತಾ, ಶತ್ರುವನ್ನು ಹಿಮ್ಮೆಟ್ಟಿಸಲು ಒಂದು ಒಕ್ಕೂಟವನ್ನು ಮಾಡಿಕೊಳ್ಳಲಾಯಿತು. ನಂಜರಾಜಯ್ಯನ ಯೋಚನೆಗಳು ಸಾಮ್ರಾಜ್ಯವನ್ನು ಬೆಳೆಸುವುದರ ಬಗ್ಗೆ ಇದ್ದವು ಎನ್ನುವುದಕ್ಕಿಂತ ಸ್ವಯಂ ಬೆಳವಣಿಗೆಯ ಸ್ವಾತಂತ್ರ್ಯವನ್ನು ಉಳಿಸಿಕೊಳ್ಳುವುದರ ಬಗ್ಗೆ ಇದ್ದವು. ಅತ್ಯಂತ ಶ್ರೇಷ್ಠವಾದ ಹಿಂದೂಧರ್ಮ ಮತ್ತು ನಾಗರಿಕತೆಗಳ ರಕ್ಷಕ ತಾನೆಂದು ನಂಜರಾಜಯ್ಯ ನಂಬಿದ್ದನು ಹಾಗೂ ಅವನ ಕಾರ್ಯಗಳಿಗೆಲ್ಲಕ್ಕೂ ಅದೇ ಸ್ಫೂರ್ತಿಯಾಗಿತ್ತು ಎಂಬುದು ನಿಜ.

೧೭೬೧ರಿಂದ ೧೭೮೨ರವರೆಗೆ ಹೈದರ್ ಅಲಿ ಸರ್ವಾಧಿಕಾರಿಯಾಗಿದ್ದನು. ಬೃಹತ್ ಮೈಸೂರು ಅಥವಾ ಮೈಸೂರಿನ ದಕ್ಷಿಣ ಸಾಮ್ರಾಜ್ಯವನ್ನು ಗಳಿಸುವುದು ಹೈದರ್ ಗುರಿಯಾಗಿತ್ತು. ಈ ಗುರಿ ಸಾಧನೆಗೆ ಅವನು 'ಒಳಗೆ ಶಾಂತಿ ಹೊರಗೆ ಶಕ್ತಿ' ಎಂಬ ನೀತಿಯನ್ನು ಪಾಲಿಸಿದ. ಎಲ್ಲಾ ಆಡಳಿತವನ್ನೂ ತನ್ನಲ್ಲೇ ಕೇಂದ್ರೀಕರಿಸಿಕೊಂಡನು. ಮರಾಠರ ಮತ್ತು ನಿಜಾಮರ ಯುದ್ಧಗಳನ್ನು ಎದುರಿಸಬೇಕಾಯಿತು(ಸಂ.೩, ಪು.೯೫-೯೬). ಹೈದರ್‌ನು ದಕ್ಷಿಣದಲ್ಲಿ ಮರಾಠರ ಹಾವಳಿ ತಡೆಯದೆ ಶಾಂತಿಗಾಗಿ ಮಾತುಕತೆ ಆರಂಭಿಸಿದನು. ಆದರೆ ಮರಾಠರ ನಿಲುವು ಬ್ರಿಟಿಷರ ಪರವಾಗಿ ತಿರುಗಿತು. ಒಂದನೇ ಆಂಗ್ಲೋ-ಮೈಸೂರು ಯುದ್ಧ, ಎರಡನೇ ಆಂಗ್ಲೋ-

ಮೈಸೂರು ಯುದ್ಧದ ವಿವರಗಳನ್ನು ನೋಡಬಹುದು. ಸಿ.ಹಯವದನ ರಾವ್ ಅವರು ಹೈದರ್ ತನ್ನ ಅಕ್ಕಪಕ್ಕದವರೊಡನೆ ಲಾಭದಾಯಕವಾಗಿ ಸಂಬಂಧ ಬೆಳೆಸಬೇಕಾಗಿತ್ತು. ರಾಜನೀತಿಯನ್ನು ಬಿಟ್ಟು ಯುದ್ಧ ಒಂದನ್ನೇ ಅವಲಂಬಿಸಿದ್ದರಿಂದ ಹೈದರ್ ತನ್ನ ಉದ್ದೇಶಗಳನ್ನು ಸಂಪೂರ್ಣವಾಗಿ ಸಾಧಿಸದೇ ಹೋದ ಎಂದಿದ್ದಾರೆ.

೧೭೮೩ರಲ್ಲಿ ಹೈದರಾಲಿಯು ಮರಣದ ನಂತರ ಟಿಪ್ಪು ಮೈಸೂರಿನ ಸರ್ವಾಧಿಕಾರಿ ಯಾದನು. ಆಗ ಅವನ ಅರಿವಿಗೆ ಬಂದದ್ದು, ದೇಶದಲ್ಲಿ ರಾಜಕೀಯ ಬೆಳವಣಿಗೆಗಳಿಂದಾಗಿ ಹಿಂದೆ ಇದ್ದ ಶಕ್ತಿಯ ಸಮತೋಲನ ಈಗ ಇಲ್ಲವಾಗಿರುವುದು. ಬ್ರಿಟಿಷರೊಂದಿಗೆ ಎರಡನೇ ಆಂಗ್ಲೋ-ಮೈಸೂರು ಯುದ್ಧವನ್ನು ಮುಂದುವರಿಸಿದನು. ಎರಡನೇ ಆಂಗ್ಲೋ-ಮೈಸೂರು ಯುದ್ಧ ನಡೆಯುತ್ತಿದ್ದ ಸಮಯದಲ್ಲಿ ಟಿಪ್ಪು ಸುಲ್ತಾನ್ ಮೈಸೂರಿನ ಆಳ್ವಿಕೆಯನ್ನು ಕೈಗೆ ತೆಗೆದುಕೊಂಡನು. ಹೈದರಾಲಿ ಮತ್ತು ಮೊಹಮ್ಮದ್ ಆಲಿ ಹಾಗೂ ಅವರ ಬೆಂಬಲಕ್ಕೆ ನಿಂತ ಫ್ರೆಂಚ್ ಮತ್ತು ಇಂಗ್ಲೀಷರ ನಡುವೆ ದಕ್ಷಿಣ ಭಾರತದ ಒಡೆತನಕ್ಕಾಗಿ ಯುದ್ಧ ನಡೆಯುತ್ತಿತ್ತು. ಈ ಯುದ್ಧದ ಕೊನೆಯಲ್ಲಿ ಅನುಕೂಲಕರವಾದ ಒಪ್ಪಂದ ಆದರೂ ಕೂಡ ಟಿಪ್ಪು ಸುಲ್ತಾನ್ ಟೀಕೆಗೆ ಒಳಗಾಗಬೇಕಾಯಿತು ಎಂಬ ವಿವರಗಳು ಮುಖ್ಯ

ಈ ಸಂಪುಟದಲ್ಲಿ ಸಿ.ಹಯವದನರಾವ್ ಅವರು ಒಡೆಯರನ್ನು ಹಿಂದೂಧರ್ಮದ ರಕ್ಷಕರು ಮತ್ತು ಧರ್ಮಾತ್ಮರು ಎಂದು ಬರೆಯುತ್ತಾರೆ. ಆದರೆ ಹೈದರಾಲಿ ಮತ್ತು ಟಿಪ್ಪು ಬಗೆಗೆ ಬರೆಯುವಾಗ ಅವರನ್ನು ಧರ್ಮಾಂಧರು ಎಂದು ಖಂಡಿಸುತ್ತಾರೆ. ಸಿ.ಹಯವದನ ರಾವ್ ಅವರು ೧೮೯೯ರ ಹೊತ್ತಿಗೆ ಮೈಸೂರು ಪ್ರಾಂತ್ಯದಲ್ಲಿ ಎರಡು ದೇವಾಲಯಗಳು ಮಾತ್ರ ತೆರೆದಿದ್ದವು ಎಂದು ಹೇಳುತ್ತಾ, ಎಲ್ಲಾ ದೇವಾಲಯಗಳನ್ನು ನಾಶ ಮಾಡಿ ಅದರಲ್ಲಿರುವ ಸಂಪತ್ತನ್ನು ದೋಚಿಕೊಂಡು ಹೋದನು ಎಂದು ವಿವರಿಸುತ್ತಾರೆ. ಆಶ್ಚರ್ಯವೆಂದರೆ ಸಿ.ಹಯವದನ ರಾವ್ ಅವರೇ ಸ್ವತಃ ತಮ್ಮ ಗ್ರಂಥದಲ್ಲಿ ಹೈದರನ ಸೇನೆ ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಶ್ರೀರಂಗ ದೇವಾಲಯದಲ್ಲಿ ಸ್ವತಃ ಹೈದರ್‌ನೇ ಅರ್ಚಕರು ಬರುವವರೆಗೆ ಕಾಯ್ದಿದ್ದ ವಿವರಗಳನ್ನು ನೀಡುತ್ತಾರೆ(ಸಂ.೩, ಪು.೪೧೨). ಇವರ ವಿವರಗಳು ಮುಂದಿನ ಪುಟಗಳಲ್ಲಿ ಹಾಗೆಯೇ ಉಳಿಯದೇ ಹೈದರ್ ಮತ್ತು ಟಿಪ್ಪು ಅವರನ್ನೇ ಮತಾಂಧ, ಕ್ರೂರಿಗಳೆಂದು ಕರೆಯುತ್ತಾರೆ. ಹಾಗೆಯೇ ಹೈದರ್‌ನಾಗಲೀ, ಟಿಪ್ಪು ಆಗಲೀ ಮತಾಂಧನಾಗಿರಲು ಸಾಧ್ಯವೇ ಇರಲಿಲ್ಲ ಎಂಬುದಕ್ಕೆ ಶೃಂಗೇರಿ ಮಠದಲ್ಲಿ ದಾಖಲೆಗಳಿವೆ. ರಾವ್ ಮತ್ತು ಇತರರು 'ಹಿಂದೂ ಧರ್ಮ ಸಾಮ್ರಾಜ್ಯ ಸಂಸ್ಕೃತಿಗಳ ಮಹಾರಕ್ಷಕರೆಂದು' ಹಾಡಿ ಹೊಗಳುವ ಮರಾಠ ಪೇಶ್ವೆಗಳ ಸರದಾರ ಪರಶುರಾಮ ಬಾಹು ಶೃಂಗೇರಿ ಮಠ, ದೇವಸ್ಥಾನಗಳನ್ನು ದೋಚಿಕೊಂಡು ಹೋದಾಗ ದೇವಸ್ಥಾನಗಳಿಗೆ ಕಳೆದುಕೊಂಡಷ್ಟು ಹಣವನ್ನು ತನ್ನ ಬೊಕ್ಕಸದಿಂದ ಕೊಡಿಸಿದಕ್ಕೆ ಶೃಂಗೇರಿ ಮಠದ ದಾಖಲೆಗಳ ವಿವರವನ್ನು ನೋಡಬಹುದು. ಹೀಗೆ ಪೂರಕವಾದ ಅಂಶಗಳನ್ನು ಪರಿಗಣನೆ ಮಾಡದೇ ಸ್ಪಷ್ಟ ನಿಲುವನ್ನು ತಿಳಿಯುವುದು ಸಮಂಜಸವಲ್ಲವಾಗಿದೆ. ಆದರೆ ಇಲ್ಲಿ ಹೈದರ್ ಆಗಲಿ ಮತ್ತು ಟಿಪ್ಪು ಆಗಲಿ ಮಾಡಿದ ಕೃತ್ಯಗಳಿಗೆ ಅಲ್ಲಿನ ರಾಜಕೀಯ ತುರ್ತುಗಳೇ ಕಾರಣವೆಂಬುದನ್ನು ತಿಳಿಯಬಹುದು.

ಟಿಪ್ಪುವನ್ನು ಗೆಲ್ಲುವುದು ಸಾಧ್ಯವಿದ್ದರೂ ಸಹ ಲಾರ್ಡ್ ಕಾರನ್‌ವಾಲೀಸ್ ಶಾಂತಿ ಒಪ್ಪಂದಕ್ಕೆ ಸಹಿ ಹಾಕಲು ಒಪ್ಪಿಕೊಂಡನು. ಟಿಪ್ಪು ಇಲ್ಲದ ಪರಿಸ್ಥಿತಿಯಲ್ಲಿ ಮರಾಠರು ಬಲವಾದ ಶತ್ರುಗಳಾಗಬಹುದು ಎಂಬ ಯೋಚನೆ ಕಾರನ್‌ವಾಲೀಸ್‌ಗೆ ಬಂದಿರಬೇಕು(ಸಂ.೩, ಪು.೮೭೪-೮೭೫). ಏನೇ ಆಗಲಿ ಶ್ರೀರಂಗಪಟ್ಟಣ ಒಪ್ಪಂದದ ನಂತರ ಮೈಸೂರಿನ ಅಧಃಪತನ ಆರಂಭವಾಯಿತೆನ್ನಬಹುದು. ಟಿಪ್ಪುವಿನ ಬಗ್ಗೆ ಹಯವದನರಾವ್ ಟಿಪ್ಪು ಯಾವ ನಿರ್ಧಾರವನ್ನೂ ತೆಗೆದುಕೊಳ್ಳದೆ ನಾಲ್ಕನೇ ಮೈಸೂರು ಯುದ್ಧಕ್ಕೆ ದಾರಿ ಮಾಡಿಕೊಟ್ಟನು. ಯುದ್ಧಭೂಮಿಯಿಂದ ಓಡಿ ಹೋಗಿ ಜೀವ ಉಳಿಸಿಕೊಳ್ಳದೇ ದೃಢನಿರ್ಧಾರದಿಂದ ಅಲ್ಲಿಯೇ ನಿಂತು ಸಾವನ್ನಪ್ಪಿದ್ದು ಟಿಪ್ಪುವಿನ ದಡ್ಡತನ ಎನ್ನಬೇಕು ಎಂಬುದನ್ನು ತಿಳಿಸಿದ್ದಾರೆ.

ಸಿ.ಹಯವದನರಾವ್ ಅವರು ಟಿಪ್ಪುವನ್ನು ತೀಕ್ಷ್ಣವಾಗಿ ಟೀಕಿಸಿದ್ದಾರೆ. ಅವನು ತನ್ನ ತಂದೆಯ ಆದರ್ಶಗಳನ್ನು, ಯೋಜನೆಗಳನ್ನು ಮಾರ್ಗಗಳನ್ನು ಅನುಸರಿಸದೇ ತಾನೇ ಕೆಳಗೆ ಬೀಳುವುದಲ್ಲದೆ, ಮೈಸೂರನ್ನು ಕೆಳಗೆ ಬೀಳುವಂತೆ ಮಾಡಿದ ಎಂದಿದ್ದಾರೆ. ಇದು ಏಕೆಂದರೆ ೧೭೯೯ರ ನಾಲ್ಕನೇ ಮೈಸೂರು ಯುದ್ಧದ ನಂತರ ಬಲಿಷ್ಠವಾಗಿದ್ದ ಮೈಸೂರು ಬ್ರಿಟಿಷರ ಅಧೀನ ರಾಷ್ಟ್ರವಾಗಿ ಮಾರ್ಪಾಟಾಯಿತು ಎಂಬ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ. ನಾಯಕತ್ವದ ಗುಣಗಳ ಅಭಾವವಲ್ಲದೇ ಟಿಪ್ಪುವಿಗೆ ತನ್ನ ಸೇನಾಧಿಪತಿಗಳಲ್ಲಿ ಸಂಶಯ, ರಾಜಕೀಯ ತಿಳುವಳಿಕೆ ಇಲ್ಲದಿರುವುದು, ಆಡಳಿತದಲ್ಲಿ ಕುಂದುಕೊರತೆ ಇವು ಅವನನ್ನು ಅಸಮರ್ಥನನ್ನಾಗಿ ಮಾಡಿದವು ಎಂದು ವಿವರಿಸುತ್ತಾ ಹೋಗುತ್ತಾರೆ. ಹೀಗಾಗಿ ಒಂದು ಸಾಮ್ರಾಜ್ಯವನ್ನು ಛಿದ್ರಗೊಳಿಸಬಲ್ಲ ಕ್ರಮಗಳನ್ನು ಅವನು ತೆಗೆದುಕೊಳ್ಳುವಂತಾಯಿತು.

ಒಟ್ಟಾರೆ ಸಿ.ಹಯವದನರಾವ್ ಅವರು **ಹಿಸ್ಟರಿ ಆಫ್ ಮೈಸೂರು** ಎಂಬ ಮೂರು ಸಂಪುಟಗಳಲ್ಲಿ ಒಡೆಯರ ಚರಿತ್ರೆಯನ್ನು ಚಿತ್ರಿಸುತ್ತಾ ಹೋಗುತ್ತಾರೆ. ಒಡೆಯರ ಬಗೆಗೆ ಬರೆಯುವಾಗ ಹೊಗಳಿಕೆಯಾಗಿಯೇ ವಿವರಿಸುತ್ತಾರೆ. ವಸಾಹತುಶಾಹಿಯ ಪಂಥದ ನೆಲೆಯಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಬಿಂಬಿಸಿದ್ದಾರೆ. ಈ ವಸಾಹತುಶಾಹಿ ಪಂಥದ ನೆಲೆಯಲ್ಲಿ ದೇಶಿ ಇತಿಹಾಸಕಾರರಾಗಿ ಗುರುತಿಸಿಕೊಂಡ ಸಿ.ಹಯವದನರಾವ್ ಅವರು ಅರಮನೆಯಲ್ಲಿ ನಡೆದ ಒಳಸಂಚು, ಷಡ್ಯಂತ್ರಗಳ ವಿವರಗಳನ್ನು ತಿಳಿಸಿಲ್ಲ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಡೆದ ಬರ್ಬರಕೃತ್ಯದ ಬಗೆಗೆ ಗಮನ ಹರಿಸಿಲ್ಲ. ಕ್ರೂರ ತೆರಿಗೆಯ ವಿರುದ್ಧ ನಡೆದ ಹೋರಾಟದಲ್ಲಿ ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕೊಲ್ಲಿಸಿದ ಕ್ರೌರ್ಯದ ಬಗೆಗೆ ವಿವರಗಳಿಲ್ಲ. ಇದು ಒಂದು ರಾಷ್ಟ್ರೀಯ ಧೋರಣೆಯಾಗಿಯೇ ಗುರುತಿಸಿಕೊಂಡಿದೆ. ಇಲ್ಲಿ ವಸಾಹತುಶಾಹಿ ಚರಿತ್ರೆಕಾರರು ಒಡೆದು ಆಳುವ ನೀತಿಗೆ ಅನುಗುಣವಾಗಿ ರಚಿಸಿದ ಬರಹಗಳನ್ನು ಸಿ.ಹಯವದನರಾವ್ ಅವರು ಒಪ್ಪಿಕೊಂಡು ಈ ಸಂಪುಟಗಳಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ಇಲ್ಲ ಸಲ್ಲದ ಆರೋಪಗಳನ್ನು ಮಾಡಿದ್ದಾರೆ. ಒಡೆಯರು ವಿಜಯನಗರ ಸಾಮ್ರಾಜ್ಯದ ನಂತರ 'ಹಿಂದೂಧರ್ಮದ ರಕ್ಷಕರು' ಎನ್ನುವ ರೀತಿ ಬರೆಯುತ್ತಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಮುಸ್ಲಿಂ ಸಮುದಾಯಕ್ಕೆ ಸೇರಿದ್ದು, ಹಿಂದೂ ಸಾಮ್ರಾಜ್ಯವೆನಿಸಿಕೊಂಡಿದ್ದ ವಿಜಯನಗರ ಪತನದ ನಂತರ, ಹಿಂದೂ ಧರ್ಮ, ಸಂಸ್ಕೃತಿಗಳ

ರಕ್ಷಣೆಯ ಭಾರವನ್ನು ಹೊತ್ತವರು ಮೈಸೂರು ಒಡೆಯರು. ಇಂತಹ ಒಡೆಯರನ್ನು ಹೈದರ್ ಮತ್ತು ಟಿಪ್ಪು ಸುಲ್ತಾನರು ಅಧಿಕಾರದಿಂದ ಇಳಿಸಿ ರಾಜ್ಯಾಧಿಕಾರಕ್ಕೇರಿದವರು. ಆದ್ದರಿಂದ ಅವರು 'ಆಕ್ರಮಣಕಾರಿಗಳು' ಎಂದು ವಿವರಿಸುತ್ತಾರೆ. ಇಲ್ಲಿ ಬ್ರಿಟಿಷರ 'ಒಡೆದು ಆಳುವ ನೀತಿ' ಒಂದು ಅಸ್ತ್ರವಾಗಿ ಬೇರೂರಿರುವುದನ್ನು ಗಮನಿಸಬಹುದು. ಆ ಮೂಲಕ ಹೈದರ್ ಮತ್ತು ಟಿಪ್ಪು ವಿರುದ್ಧದ ಸಾಮ್ರಾಜ್ಯಶಾಹಿ ದಾಳಿಗಳು ಅನಿವಾರ್ಯವಾಗಿದ್ದವೆಂದು ಬ್ರಿಟಿಷ್ ಚರಿತ್ರೆಕಾರರು ಹೇಳುತ್ತಾರೆ. ಈ ಹೇಳಿಕೆಯನ್ನು ಸಿ.ಹಯವದನ ರಾವ್ ಅವರೂ ಒಪ್ಪಿಕೊಳ್ಳುವ ವಿವರವನ್ನು ಈ ಸಂಪುಟಗಳಲ್ಲಿ ತಿಳಿಯಬಹುದು.

ಬ್ರಿಟಿಷ್ ಸಾಮ್ರಾಜ್ಯಶಾಹಿ ಅಧಿಕಾರಿಗಳು ರಚಿಸಿದ ಕೃತಿಗಳು ತಮ್ಮ ಆಡಳಿತದ ಅನುಕೂಲದ ದೃಷ್ಟಿಯಲ್ಲಿ ಕಾಣಸಿಗುವುವು. ಈ ಧಾಟಿಯಲ್ಲಿಯೇ ಮೈಸೂರು ಒಡೆಯರಿಂದ ಉಪಕೃತರಾದ ಅಧಿಕಾರಿಗಳು, ಚರಿತ್ರೆಕಾರರು ಮುಂದುವರಿಸಿದ್ದಾರೆ. ಈ ಸಂಪುಟಗಳಲ್ಲಿ ಸಿ.ಹಯವದನರಾವ್ ಅವರು ಮೈಸೂರು ಒಡೆಯರ ಚರಿತ್ರೆಯನ್ನು ಪ್ರಭುತ್ವ ಕೇಂದ್ರಿತ ಮತ್ತು ಧರ್ಮಕೇಂದ್ರಿತವಾಗಿ ವಿವರಿಸಿರುವುದನ್ನು ನೋಡಬಹುದು. ಇಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ೧೭೯೯ರ ಟಿಪ್ಪು ಪತನದವರೆಗೆ ವಿವರಿಸಿದ್ದಾರೆ. ಆದರೆ ಈ ಕೃತಿಯ ಸಂಪುಟಗಳು ೧೯೪೩–೧೯೪೬ರ ಕಾಲಾವಧಿಯಲ್ಲಿ ರಚನೆಯಾಗಿದ್ದು ಅಲ್ಲಿಯವರೆಗಿನ ಮೈಸೂರು ಒಡೆಯರ ಚರಿತ್ರೆಯನ್ನು ಚಿತ್ರಿಸಿದ್ದರೆ ಹೆಚ್ಚಿನ ಮಾಹಿತಿ ದೊರೆಯುತ್ತಿತ್ತು. ವಸಾಹತುಶಾಹಿ ಪರವಾಗಿ ದೇಶಿ ಮತ್ತು ವಿದೇಶಿ ಬರಹಗಾರರು ರಚಿಸಿದ ಈ ಕೃತಿಗಳು ಈಗಲೂ ಚರ್ಚೆಗೆ ಒಳಗಾಗುತ್ತಿವೆ. ಅಲ್ಲದೇ ಒಡೆಯರು, ಹೈದರಾಲಿ ಮತ್ತು ಟಿಪ್ಪು ಬಗೆಗೆ ಹೇಳಿರುವ ಹೇಳಿಕೆಗಳು ಇಂದಿಗೂ ಚರ್ಚೆಗೆ ಒಳಗಾಗುತ್ತಿವೆ.

ವಸಾಹತುಶಾಹಿಯ ಭಾಗವಾದ ಅಧಿಕಾರಿಗಳು, ಚರಿತ್ರೆಕಾರರು ಬ್ರಿಟಿಷ್ ಸಾಮ್ರಾಜ್ಯವಾದಿಗಳು ಮಾಡಿದ ಪ್ರತಿಯೊಂದನ್ನು ಸಮರ್ಥಿಸಿ ಎತ್ತಿ ಹಿಡಿದಿರುವುದು ಅವರ ಕೃತಿಗಳಲ್ಲಿ ಸ್ಪಷ್ಟವಾಗಿದೆ. ಆದರೆ ಒಂದು ಮಾತನ್ನು ಒಪ್ಪಿಕೊಳ್ಳಬೇಕು. ಅವರು ಒಂದು ವ್ಯವಸ್ಥೆಯನ್ನು ಎತ್ತಿ ಹಿಡಿದಿದ್ದಾರೆ. ವಸಾಹತುಶಾಹಿ ಪರವಾಗಿ ಅಧಿಕಾರಿಗಳು ಆಡಳಿತದ ಅನುಕೂಲಕ್ಕಾಗಿ ಇಲ್ಲಿನ ಮಾಹಿತಿಗಳನ್ನು ಸಂಗ್ರಹಿಸಿ ಕೃತಿಗಳನ್ನು ರಚಿಸಿರುವುದು ಒಂದು ಕಡೆಯಾದರೆ, ಮತ್ತೊಂದು ಕಡೆ ಒಡೆಯರ ಸರ್ಕಾರದಿಂದ ಉಪಕೃತರಾದ ಅಧಿಕಾರಿಗಳು, ಚರಿತ್ರೆಕಾರರು ಒಡೆಯರ ಹಿತಾಸಕ್ತಿಗೆ ಅನುಗುಣವಾಗಿ ಕೃತಿಗಳನ್ನು ರಚಿಸಿರುವುದನ್ನು ನೋಡಬಹುದು. ವಸಾಹತುಶಾಹಿಯ ನೆಲೆಯಲ್ಲಿ ರಾಜಕೀಯದ ವಿಚಾರಗಳು ಮುಖ್ಯ. ವಸಾಹತುಶಾಹಿ ಅಂದ ತಕ್ಷಣವೇ ಒಂದು ಪೊಲಿಟಿಕಲ್ ಎಸ್ಟಾಬ್ಲಿಷ್‌ಮೆಂಟ್ ಅನ್ನುವ ರೀತಿಯಲ್ಲಿ ಬಹುತೇಕ ಚರ್ಚೆ ಆಗಿರುವಂತಹದ್ದು. ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಮೊದಲು ರಚನೆಯಾದ ಕೃತಿಗಳು ಬಹುತೇಕವಾಗಿ ಸಾಂಪ್ರದಾಯಿಕ ರಚನಾ ಮಾದರಿಯಲ್ಲಿರುವುದು ಕಂಡುಬರುತ್ತದೆ. ೧೯೩೦, ೧೯೪೦ರ ದಶಕದ ಕೃತಿಗಳು ವಿವರಣಾತ್ಮಕ ಕೃತಿಗಳು. ಈ ಕಾಲಘಟ್ಟದಲ್ಲಿ ಬರಹಗಾರರು ತಮ್ಮ ಕೃತಿಗಳನ್ನು ಮಾಹಿತಿಯ ಮೂಲಕ ಕಟ್ಟಿಕೊಡುತ್ತಾರೆ. ವಿಶ್ಲೇಷಣೆಯ ವ್ಯಾಪ್ತಿಗೆ ಹೋಗುವುದಿಲ್ಲ. ಫ್ರಾನ್ಸಿಸ್ ಬುಕಾನನ್, ಕಾಲಿನ್ ಮೆಕೆಂಝಿಯಿಂದ ಹಿಡಿದು ೧೯೪೭ರವರೆಗೆ

ಬಂದಿರುವ ಮೈಸೂರು ಒಡೆಯರ ಚರಿತ್ರೆ ಕುರಿತಾದ ಕೃತಿಗಳು ಸಾಮ್ರಾಜ್ಯಶಾಹಿ ಮತ್ತು ಒಡೆಯರ ವಿವರಣಾತ್ಮಕ ಚರಿತ್ರೆಯನ್ನು ಕಟ್ಟಿಕೊಡುವ ಪ್ರಯತ್ನವನ್ನು ಮಾಡುತ್ತವೆ. ಬ್ರಿಟಿಷ್ ಅಧಿಕಾರಿಗಳು ಮತ್ತು ಇತರರು ಮೈಸೂರು ಒಡೆಯರ ಚರಿತ್ರೆಯಲ್ಲಿ ಸಾಮ್ರಾಜ್ಯಶಾಹಿ ವ್ಯವಸ್ಥೆಯನ್ನು ಬಲಗೊಳಿಸಲು ಬೇಕಾದ ಮಾಹಿತಿಯನ್ನು ಚರಿತ್ರೆ ಬರವಣಿಗೆಯ ವಿವರಗಳ ರೂಪದಲ್ಲಿ ಕಟ್ಟಿಕೊಡುತ್ತಾರೆ. ಅನಂತರ ಸರಕಾರಿ ಅಧಿಕಾರಿಗಳು, ಚರಿತ್ರೆಕಾರರೂ ಆದ ಸಿ.ಹಯವದನ ರಾವ್ ಮತ್ತು ಎಂ.ಶಾಮರಾವ್ ಅವರೂ ಕೂಡ ವಸಾಹತುಶಾಹಿ ವ್ಯವಸ್ಥೆಯನ್ನಾಗಲಿ ಅಥವಾ ರಾಜಶಾಹಿವ್ಯವಸ್ಥೆಯನ್ನಾಗಲಿ ವಿಮರ್ಶಿಸುವ ಪ್ರಯತ್ನ ಮಾಡುವುದಿಲ್ಲ. ಇತರ ಚರಿತ್ರಕಾರರೂ ಸಹ ಒಡೆಯರನ್ನು ಕೇಂದ್ರೀಕರಿಸಿಯೇ ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಸಾಮ್ರಾಜ್ಯ ವಿಸ್ತರಿಸುವ ಬ್ರಿಟಿಷರ ಒಳ ಹೊರಗಿನ ಲೆಕ್ಕಾಚಾರಗಳನ್ನು ಓದುಗರಿಗೆ ಕಟ್ಟಿಕೊಡುವುದೇ ಇಲ್ಲ. ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆಯ ಆಡಳಿತಾತ್ಮಕ ಪ್ರಯೋಗಗಳು ಮೈಸೂರು ಸಂಸ್ಥಾನವನ್ನು 'ಮಾದರಿ' ರಾಜ್ಯವನ್ನಾಗಿಸಲು ಸಹಕಾರಿಯಾದವು ಎಂತಲೇ ಸಮರ್ಥಿಸುತ್ತಾರೆ. ಇಂಗ್ಲಿಷ್ ಭಾಷೆಯನ್ನು ಶಿಕ್ಷಣದ ಮಾಧ್ಯಮವನ್ನಾಗಿ ಮಾಡಿದ ಬ್ರಿಟಿಷರ ಪ್ರಯತ್ನಗಳನ್ನು ಶ್ಲಾಘಿಸುತ್ತಾರೆ. ಇವರ ಬರಹಗಳು ಸಂಶೋಧನೆಯ ನೆಲೆಯಿಂದ ಕೂಡಿರದೆ ಕೇವಲ ದಾಖಲೆಗಳನ್ನು ವರದಿ ರೂಪದಲ್ಲಿ ಕಟ್ಟಿಕೊಡುತ್ತವೆ.

### ೫.೨. ಆಧುನಿಕ ಕಾಲಘಟ್ಟದ ಚಾರಿತ್ರಿಕ ಕೃತಿಗಳ ವಿಶ್ಲೇಷಣೆ

ಆಧುನಿಕ ಕಾಲಘಟ್ಟವು ಮೈಸೂರು ಒಡೆಯರ ಚರಿತ್ರೆಯ ಕೃತಿಗಳ ರಚನೆಯಲ್ಲಿ ಪ್ರಮುಖವಾದುದು. ಏಕೆಂದರೆ ಮೈಸೂರು ಒಡೆಯರ ಚರಿತ್ರೆಯ ಕೃತಿಗಳನ್ನು ಒಂದು ವಿಶ್ಲೇಷಣಾತ್ಮಕ ರೀತಿಯಲ್ಲಿ ನೋಡುವ ಕ್ರಮ ಆಧುನಿಕ ಕಾಲಘಟ್ಟದಲ್ಲಿ ನಡೆಯಿತು. ಆಧುನಿಕ ಸಂದರ್ಭದಲ್ಲಿ ಬೇರೆಬೇರೆ ಅಗತ್ಯಗಳಿಗೆ ಅನುಗುಣವಾಗಿ ಚರಿತ್ರೆಯನ್ನು ಮತ್ತೇ ಮತ್ತೇ ಪುನರ್‌ರಚಿಸುವ ಪ್ರಯತ್ನಗಳು ನಡೆದಿವೆ. ಶೋಧನೆಯ ಹೊಸಹೊಸ ಸಾಧ್ಯತೆಗಳು ಎಲ್ಲಾ ಜ್ಞಾನಶಾಸ್ತ್ರಗಳಿಗೂ ಇರುವಂತೆ ಚರಿತ್ರೆಗೂ ಇರುವುದರಿಂದ ಬೇರೆಬೇರೆ ಕಾಲಘಟ್ಟದಲ್ಲಿ ನಡೆದ ಹೊಸಹೊಸ ಶೋಧಗಳಿಂದ ನಮ್ಮ ಹಳೆಯ ತಿಳುವಳಿಕೆಗಳು ಬಿದ್ದುಹೋಗಿವೆ ಎಂಬುದು ಮುಖ್ಯ. ಆಧುನಿಕ ಕಾಲಘಟ್ಟದ ಚಾರಿತ್ರಿಕ ಕೃತಿಗಳ ವಿಶ್ಲೇಷಣೆಯಲ್ಲಿ ೧೯೪೭ರ ನಂತರ ರಚನೆ ಆಗಿರುವ ಕೃತಿಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಚರಿತ್ರೆಯನ್ನು ಕಟ್ಟುವ ಕಾಲದಲ್ಲಿ ವಿಚಾರವನ್ನು ರಾಷ್ಟ್ರೀಯವಾದಿ ಮತ್ತು ಪ್ರಭುತ್ವಕೇಂದ್ರಿತವಾಗಿ ರಚಿಸಿದ ಕೃತಿಗಳಲ್ಲಿ ನೋಡಬಹುದು. ಚರಿತ್ರೆಯನ್ನು ಬಿಚ್ಚುವ ಕಾಲದಲ್ಲಿ ವಿಚಾರವನ್ನು ಮಾರ್ಕ್ಸ್‌ವಾದಿ, ಸಬಾಲ್ಟರ್ನ್ ನೆಲೆಯಲ್ಲಿ ಜನಕೇಂದ್ರಿತವಾಗಿ ರಚಿಸಿದ ಕೃತಿಗಳಲ್ಲಿ ನೋಡಬಹುದು. ಮುಖ್ಯವಾಗಿ ಭಾರತದಲ್ಲಿ ೧೯೭೦ರ ದಶಕವು ಅನೇಕ ಚಳವಳಿಗಳನ್ನು ಕಂಡ ಕಾಲ. ರೈತ ಚಳವಳಿಗಳು, ಸಮಾಜವಾದಿ ಚಳವಳಿ, ಜೆ.ಪಿ.ಕ್ರಾಂತಿ, ಭೂಸುಧಾರಣೆಗಳು, ಜಾತಿವಿನಾಶ ಸಮಾವೇಶಗಳು ಚರಿತ್ರೆಯ ಸಂವಾದಕ್ಕೆ ರೂಪಿಸಿಕೊಂಡ ಕಾಲ. ಹೀಗಾಗಿ ೧೯೭೦ ಮತ್ತು ೧೯೮೦ರ ದಶಕದಲ್ಲಿ ಬಂದ ಕೃತಿಗಳು ಸಾಮಾಜಿಕ ಚರಿತ್ರೆಗೆ ವಿಶೇಷವಾಗಿ ಮುಖಾಮುಖಿಯಾಗಿವೆ. ಅಂದರೆ ಮೊದಲ ದಶಕದಲ್ಲಿ ಚರಿತ್ರೆಯನ್ನು ಇಡಿಯಾಗಿ ಕಟ್ಟುತ್ತಾರೆ. ಅನಂತರ ಬಿಡಿಬಿಡಿಯಾಗಿ ಚರಿತ್ರೆಯನ್ನು ಕಟ್ಟುತ್ತಾರೆ.

ಇವತ್ತಿನ ಸಂದರ್ಭಕ್ಕೆ ಮುಖಾಮುಖಿಯಾಗಿ ಸಂಶೋಧನೆ ಸಾಗಬೇಕಾಗಿದೆ. ಇಲ್ಲಿ ಯಾರ ವಿರುದ್ಧ ಬರೆದರೋ ಅವರು ಓದುವುದಕ್ಕೂ ಹೋಗುವುದಿಲ್ಲ, ಯಾರ ಪರ ಬರೆದರೋ ಅವರು ಓದುವುದಕ್ಕೆ ಅಕ್ಷರ ಗೊತ್ತಿಲ್ಲ ಎನ್ನುವುದು ಮುಖ್ಯ. ಅಂದರೆ ಪ್ರಭುತ್ವಕ್ಕೆ ಪೂರಕವಾಗಿ ಬರೆದವರು ಅಕ್ಷರ ಬಲ್ಲವರಾಗಿದ್ದರು. ಆದರೆ ಅವರ ವಿರುದ್ಧ ಬರೆದರೆ ಅದನ್ನು ಓದುವುದಿಲ್ಲ. ಕೆಳವರ್ಗಗಳ ಬಗೆಗೆ ಬರೆದರೆ ಅವರಿಗೆ ಅಕ್ಷರ ಗೊತ್ತಿಲ್ಲದ ಕಾರಣ ಅವರು ಓದುವುದಕ್ಕೆ ಹೋಗಲ್ಲ. ಈ ಹಿನ್ನೆಲೆಯಲ್ಲಿ ಮೊದಲು ಬರವಣಿಗೆಯ ಕಾರ್ಯಗಳು ನಡೆದವು. ಅನಂತರ ಬರವಣಿಗೆ ಸಾಮಾಜಿಕ ಚರಿತ್ರೆಗೆ ವಿಶೇಷವಾಗಿ ಮುಖಾಮುಖಿಯಾಗಿ ಸಾಗುತ್ತಿದೆ. ಅಂದರೆ ಜನರೊಂದಿಗೆ ಮುಖಾಮುಖಿಯಾಗಿ ಕ್ಷೇತ್ರಕಾರ್ಯದ ಮೂಲಕ ಬರವಣಿಗೆ ಸಾಗುತ್ತಿರುವುದನ್ನು ನೋಡಬಹುದು. ವಸಾಹತುಶಾಹಿ ಕಾಲಘಟ್ಟದಲ್ಲಿ ತಮ್ಮ ಅನುಕೂಲಕ್ಕೆ ತಕ್ಕಂತೆ ಚರಿತ್ರೆ ರಚಿಸಿದ ಅವಕಾಶವಾದಿ ಚರಿತ್ರಕಾರರನ್ನು ನೋಡಬಹುದು. ಅದರಂತೆ ಆಧುನಿಕ ಕಾಲಘಟ್ಟದಲ್ಲಿ ಸತ್ಯಾಸತ್ಯತೆಯನ್ನು ಒರೆ ಹಚ್ಚುವ ನಿಷ್ಠುರವಾದಿ ಚರಿತ್ರಕಾರರನ್ನು ನೋಡಬಹುದು. ಮೊದಲು ಪ್ರಭುತ್ವಪೂರ್ವಕವಾಗಿ ಬಂದ ಕೃತಿಗಳನ್ನು ನೋಡಬಹುದು. ಅನಂತರ ಸಾಮಾಜಿಕ ಬದಲಾವಣೆಗಳಿಂದ ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿ ರಚಿಸಿದ ಕೃತಿಗಳನ್ನು ನೋಡಬಹುದು. ಏಕೆಂದರೆ ಕೃತಿಗಳಿಗೆ ಒಂದು ಚರಿತ್ರೆಯನ್ನು ಕಟ್ಟುವುದು ಯಾವಾಗಲೂ ತಮ್ಮ ಸಮಕಾಲೀನ ಅಪೇಕ್ಷೆ ಮತ್ತು ಸಾಮಾಜಿಕ ಒತ್ತಡಗಳ ಫಲವಾಗಿಯೇ ರೂಪುಗೊಂಡಿರುತ್ತದೆ.

ಜೊಸನರ್ ಜಿಯಾರ್ ಅವರು **ಹಿಸ್ಟರಿ ಆಫ್ ಮೈಸೂರ್ ಅಂಡ್ ದಿ ಯಾದವ ಡೈನಾಸ್ಟಿ**(೧೯೫೧)[೬೦] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಮೈಸೂರು ಒಡೆಯರ ಯದುವಂಶದ ರಾಜಕೀಯ ವಿಚಾರಗಳನ್ನು ವಿವರಿಸಿರುವುದನ್ನು ಗಮನಿಸಬಹುದು. ಯದುವಂಶದ ಅಡಿಯಲ್ಲಿ ಮೈಸೂರು ಒಡೆಯರ ಸಂಸ್ಥಾನ ಸ್ಥಾಪನೆಯಾದ ವಿವರಗಳನ್ನು ಈ ಕೃತಿಯು ವಿವರಿಸುತ್ತದೆ. ಒಡೆಯರ ಮೂಲವನ್ನು ಒರೆಗಲ್ಲಿಗೆ ಹಚ್ಚಿ ವಿವರಿಸುತ್ತಾ ಹೋಗುತ್ತಾರೆ. ಮೈಸೂರು ಮೊದಲು ಹದಿನಾಡು ಎಂದು ಕರೆಸಿಕೊಳ್ಳುತ್ತಿತ್ತು. ಹದಿನಾಡಿನ ನಾಯಕನಿಲ್ಲದ ಸಮಯದಲ್ಲಿ ನೆರೆಯ ಕಾರುಗಹಳ್ಳಿಯ ಮಾರನಾಯಕನು ಮಗಳನ್ನು ವಿವಾಹ ಮಾಡಿಕೊಡಬೇಕೆಂದು ಅಸಹಾಯಕಳಾಗಿದ್ದ ಅವಳ ತಾಯಿಯನ್ನು ಪೀಡಿಸುತ್ತಿದ್ದನು. ಇದನ್ನು ತಿಳಿದ ದ್ವಾರಕೆಯಿಂದ ಬಂದಿದ್ದ ವಿಜಯ, ಕೃಷ್ಣರು ಆಕೆಗೆ ನೆರವಾದರು. ಇದರ ಪರಿಣಾಮವಾಗಿ ಮಗಳನ್ನು ವಿಜಯನಿಗೆ ಕೊಟ್ಟು, ಆಡಳಿತದ ಎಲ್ಲಾ ಜವಾಬ್ದಾರಿಯನ್ನು ವಹಿಸಿಕೊಡಲಾಯಿತು. ಈ ವಿಜಯನೇ 'ಯದುಗಾಜ'ನೆಂಬ ಒಡೆಯರ ಮನೆತನದ ಮೂಲಪುರುಷ ಎಂದು ಇವರು ಉತ್ತರದ ದ್ವಾರಕ ನಗರದಿಂದ ಯದುವಂಶಿಯರಾಗಿ ದಕ್ಷಿಣ ಯಾತ್ರೆಗೆ ಬಂದಿದ್ದರು. ಇಲ್ಲಿಯೇ ಆಡಳಿತವನ್ನು ವಹಿಸಿದ್ದರಿಂದ ನೆಲೆ ನಿಂತರು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಅನಂತರ ಒಡೆಯ ಎಂಬ ಒಬ್ಬ ಜಂಗಮ ಇವರಿಗೆ ಸಹಾಯ ಮಾಡಿದ್ದರಿಂದ ಮುಂದೆ ಈ ವಂಶಕ್ಕೆ ಒಡೆಯ ಎಂಬ ಹೆಸರು ಬಂದಿತು ಎಂಬುದನ್ನು ಇಲ್ಲಿ ಮುಖ್ಯವಾಗಿ ತಿಳಿಸಿದ್ದಾರೆ. ಆದರೆ ಮಾರ್ಕ್ ವಿಲ್ಕ್ಸ್‌ನು ಒಡೆಯ ಎಂಬ ಪದಕ್ಕೆ ೩೩ ಹಳ್ಳಿಗಳನ್ನು ಆಳುತ್ತಿದ್ದ ಅಧಿಕಾರಿ ಎಂದು ವಿವರಣೆ ನೀಡುತ್ತಾನೆ.

ವಿಜಯನಗರದ ಪ್ರತಿನಿಧಿಯು ಶ್ರೀರಂಗಪಟ್ಟಣದಲ್ಲಿ ಆಡಳಿತವನ್ನು ನೋಡಿಕೊಳ್ಳುತ್ತಿದ್ದನು. ಈತನನ್ನು ರಾಜ ಒಡೆಯರು ಸೋಲಿಸಿ ಶ್ರೀರಂಗಪಟ್ಟಣವನ್ನು ಪಡೆದು ಸ್ವತಂತ್ರವಾದ ಆಳ್ವಿಕೆಯನ್ನು ಸ್ಥಾಪಿಸಿದನು ಎಂಬ ವಿಚಾರಗಳನ್ನು ತಿಳಿಸುತ್ತಾರೆ. ಇಲ್ಲಿ ಅಲಮೇಲಮ್ಮಳ ಶಾಪದ ವಿವರಗಳು ಮುಖ್ಯ. ಮೈಸೂರು ಸಂಸ್ಥಾನವು ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದಿತು ಎಂಬುದನ್ನು ತಿಳಿಸುತ್ತಾ ಸುತ್ತಮುತ್ತಲಿನ ಮರಾಠರೊಂದಿಗೆ ಯಾವ ರೀತಿ ಸಂಬಂಧವನ್ನು ಹೊಂದಿದ್ದರು ಎಂಬುದನ್ನು ಗುರುತಿಸಿದ್ದಾರೆ.

ಈ ನಿಟ್ಟಿನಲ್ಲಿ ಯದುವಂಶ ಮೈಸೂರಿನಲ್ಲಿ ಹೇಗೆ ಸ್ಥಾಪಿತವಾಯಿತು ಎಂಬುದನ್ನು ಕೃತಿಕಾರರು ಈ ಕೃತಿಯಲ್ಲಿ ವಿವರಿಸುತ್ತಾ ಹೋಗುತ್ತಾರೆ. ಮೊದಲು ಮೈಸೂರು ಒಡೆಯರು ವಿಜಯನಗರದ ಅರಸರಿಗೆ ಸಾಮಂತರಾಗಿದ್ದ ಕಾಲ, ಅನಂತರ ಮೈಸೂರು ಅರಸರು ಸ್ವತಂತ್ರರಾಗಿ, ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಪ್ರಾಬಲ್ಯದವರೆಗಿನ ಕಾಲ, ಆಮೇಲೆ ಟಿಪ್ಪುವಿನ ಪತನದವರೆಗಿನ ಕಾಲ, ತದನಂತರ ಮೈಸೂರು ರಾಜ್ಯ ಭಾರತದ ಗಣರಾಜ್ಯದಲ್ಲಿ ವಿಲೀನವಾದವರೆಗಿನ ಕಾಲ ಎಂದು ವಿಂಗಡಿಸಿ ವಿಚಾರಗಳನ್ನು ತಿಳಿಸಿದ್ದಾರೆ. ಈ ಚಿಕ್ಕದೇವರಾಜ ಒಡೆಯರ ಕಾಲದ ಆಡಳಿತವು ಮೈಸೂರನ್ನು ಪ್ರಗತಿಯತ್ತ ಕೊಂಡೊಯ್ದಿತು ಎಂಬುದನ್ನು ತಿಳಿಸಿದ್ದಾರೆ. ಆದರೆ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಕ್ರೂರ ತೆರಿಗೆಗಳನ್ನು ವಿರೋಧಿಸಿ, ಒಡೆಯರ ವಿರುದ್ಧ ಪ್ರತಿಭಟಿಸಲು ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕೊಲ್ಲಿಸಿದ ಕ್ರೌರ್ಯವನ್ನು ಈ ಕೃತಿಯಲ್ಲಿ ತಿಳಿಸಿರುವುದಿಲ್ಲ. ಆದರೆ ವಿಲ್ಕ್ಸ್‌ನು ತನ್ನ ಕೃತಿಯಲ್ಲಿ ಇದರ ಬಗೆಗೆ ಮಾಹಿತಿಯನ್ನು ನೀಡುತ್ತಾನೆ(ಸಂ.೧, ಪು.೧೨೮–೧೩೮). ಅನಂತರ ದಳವಾಯಿಗಳ ಅಧಿಕಾರ, ಹೈದರಾಲಿಯ ಮತ್ತು ಟಿಪ್ಪು ಸುಲ್ತಾನರ ಏಳಿಗೆ, ಆಂಗ್ಲೋ–ಮೈಸೂರು ಯುದ್ಧಗಳು, ಮುಮ್ಮಡಿ ಕೃಷ್ಣರಾಜ ಒಡೆಯರು, ನಗರದಂಗೆ, ಕಮೀಷನರ್‌ಗಳ ಆಳ್ವಿಕೆ, ೧೦ನೇ ಚಾಮರಾಜ ಒಡೆಯರ ಆಳ್ವಿಕೆ, ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ಮೂಲಕ ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನವಾಗಿ ಅಭಿವೃದ್ಧಿ ಹೊಂದಿದ ಕಾರ್ಯಗಳು, ಜಯಚಾಮರಾಜ ಒಡೆಯರು, ದಿವಾನರಾದ ಪೂರ್ಣಯ್ಯ, ಸಿ.ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ಪಿ.ಎನ್.ಕೃಷ್ಣಮೂರ್ತಿ, ವಿ.ಪಿ.ಮಾಧವರಾವ್, ಟಿ.ಆನಂದರಾವ್, ಸರ್ ಎಂ.ವಿಶ್ವೇಶ್ವರಯ್ಯ, ಕಾಂತರಾಜ ಅರಸ್, ಆಲ್ಬಿಯನ್ ಬ್ಯಾನರ್ಜಿ, ಮಿರ್ಜಾ ಇಸ್ಮಾಯಿಲ್, ಮಾಧವರಾವ್, ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಇವರ ಕಾರ್ಯಗಳನ್ನು ಚರ್ಚಿಸಿದ್ದಾರೆ. ಇಲ್ಲಿ ಯಾದವ ವಂಶದಲ್ಲಿ ಹುಟ್ಟಿದವರು ವಂಶಪಾರಂಪರ್ಯ ವಾಗಿ ಆಡಳಿತ ನಡೆಸಿಕೊಂಡು ಬಂದರು ಎಂಬ ಅಂಶಗಳನ್ನು ವಿವರಿಸಿದ್ದಾರೆ. ಸಣ್ಣ ಜಾತಿಯ ವಂಶವಾಗಿ ಇಡೀ ಅಧಿಕಾರವನ್ನು ಹೇಗೆ ನಿಭಾಯಿಸಿದರು ಎಂಬುದು ಮುಖ್ಯ.

ಮೊಹಿಬುಲ್ ಹಸನ್‌ಖಾನ್ ಅವರು **ಹಿಸ್ಟರಿ ಆಫ್ ಟಿಪ್ಪುಸುಲ್ತಾನ್**(೧೯೫೧)[೬೧] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಕೃತಿಕಾರರು ಟಿಪ್ಪುವಿನ ಇಡೀ ಜೀವನದ ವೃತ್ತಾಂತವನ್ನು ಎಳೆ ಎಳೆಯಾಗಿ ಚಿತ್ರಿಸಿದ್ದಾರೆ. ಹೈದರಾಲಿಯು ಅನಕ್ಷರಸ್ಥರಾಗಿದ್ದರೂ ತನ್ನ ಮಗ ಟಿಪ್ಪು ಸುಲ್ತಾನನಿಗೆ ಸಮರ್ಥ ಅಧ್ಯಾಪಕರನ್ನು ನೇಮಿಸಿದ್ದ. ಟಿಪ್ಪುವಿಗೆ ಕುದುರೆ ಸವಾರಿ, ಬೇಟೆಗಾರಿಕೆ, ಕತ್ತಿ ವರಸೆ, ಐರೋಪ್ಯರು ಅನುಸರಿಸುತ್ತಿದ್ದ ಯುದ್ಧಕಲೆಯ ಬಗೆಗಿನ ಅರಿವನ್ನು ತಿಳಿಸುವ

ಸೈನಿಕ ತರಬೇತಿಯನ್ನು ನೀಡಿದನು. ಉರ್ದು, ಫಾರಸಿ, ಅರಬ್ಬಿ, ಕನ್ನಡ ಭಾಷೆಗಳನ್ನು ಕಲಿಸಲು ಅವಕಾಶ ಮಾಡಿಕೊಟ್ಟನು. ಹೀಗೆ ಹೈದರಾಲಿಯು ಟಿಪ್ಪುವಿನ ಏಳಿಗೆಗಾಗಿ ಸಾಕಷ್ಟು ತರಬೇತಿ ನೀಡಿದ ವಿವರಗಳನ್ನು ಇಲ್ಲಿ ಗಮನಿಸಬಹುದು(ಪು.೭). ಬ್ರಿಟಿಷರ ವಿರುದ್ಧ ಹೋರಾಡಲು ಫ್ರಾನ್ಸ್ ದೇಶಕ್ಕೆ ಒಂದು ರಾಯಭಾರಿ ನಿಯೋಗವನ್ನು ಕಳುಹಿಸಿದ್ದು, ಕಾನ್ಸ್‌ಟಂಟಿನೋಪಲ್‌ನಲ್ಲಿ ಚರ್ಚೆ ಆಗಿ ಕೆಲವು ಶಸ್ತ್ರಾಸ್ತ್ರಗಳನ್ನು ನೀಡಿದ ವಿವರಗಳನ್ನು ತಿಳಿಸಿದ್ದಾರೆ.

ಕೊಡಗು ಮತ್ತು ಮಲಬಾರ್ ಪ್ರದೇಶಗಳಲ್ಲಿ ಟಿಪ್ಪುಸುಲ್ತಾನ ದಂಗೆಗಳನ್ನು ಅಡಗಿಸಲು ಕ್ರಮ ಕೈಗೊಂಡನು. ಮಲಬಾರಿನ ಮೇಲೆ ಟಿಪ್ಪುವಿನ ಆಧಿಪತ್ಯ ಇತ್ತು. ಅಲ್ಲದೇ ಈ ಪ್ರದೇಶದಲ್ಲಿ ಮತಾಂತರ ಕಾರ್ಯವನ್ನು ವ್ಯಾಪಕವಾಗಿ ಕೈಗೊಂಡನು. ಇದು ಅವನ ಬದುಕಿನ ಕಪ್ಪು ಚುಕ್ಕಿಯಾಗಿದೆ. ಟಿಪ್ಪು ಹಿಂದೂ ದೇವಾಲಯಗಳಿಗೆ ಮತ್ತು ಮಠಗಳಿಗೆ ಉದಾರವಾಗಿ ದಾನದತ್ತಿಗಳನ್ನು ನೀಡಿದ್ದರೂ, ಮಲಬಾರಿನಲ್ಲಿ ಇವನು ಉದ್ಧಟತನದಿಂದ ನಡೆದುಕೊಂಡಿರುವುದು ಅವನ ಪತನಕ್ಕೆ ಮನ್ಸೂಚಿಯಾಯಿತು ಎನ್ನುವುದನ್ನು ಇಲ್ಲಿ ಗಮನಿಸಬಹುದು(ಪು.೧೩೯-೧೪೩).

ಟಿಪ್ಪು ಸುಲ್ತಾನನು ಮುಸ್ಲಿಮೇತರ ಪ್ರಜೆಗಳನ್ನು ಹಿಂಸಿಸಿದ ಎಂದು ಹೇಳುವುದಾದರೆ ಅದಕ್ಕೆ ಅವನ ಧರ್ಮ ಕಾರಣವಾಗಿರಲಿಲ್ಲ. ಬದಲಾಗಿ ಅವಿಧೇಯತೆ, ಅಪರಾಧ ಎಸಗಿದ್ದು ಆಗಿದೆ. ಜಾತ್ಯತೀತ ಹಾಗೂ ಪ್ರಬುದ್ಧ ಆಡಳಿತಗಾರ ತಾನು ನಾಸ್ತಿಕರನ್ನು ಕೊಂದ ಮತ್ತು ಬಲವಂತವಾಗಿ ಮತಾಂತರಗೊಳಿಸಿದ ಹಾಗೂ ದೇವಾಲಯಗಳನ್ನು ನಾಶಗೊಳಿಸಿದ ಎಂದು ಹೇಳುವುದು ಹುರುಳಿಲ್ಲದ್ದು ಎನ್ನಬಹುದು. ಟಿಪ್ಪು ಕೂಡ ಹೈದರಾಲಿಯಂತೆ ಹಿಂದೂ ಪ್ರಜೆಗಳನ್ನು ಸಾಕಷ್ಟು ಪ್ರಮಾಣದಲ್ಲಿ ಸರಕಾರದ ಚಟುವಟಿಕೆಗಳಿಗೆ ತನ್ನ ಆಡಳಿತದಲ್ಲಿ ನೇಮಿಸಿದ್ದನು. ದಿವಾನ್ ಪೂರ್ಣಯ್ಯನು ಟಿಪ್ಪುವಿನ ಕೆಲವೇ ಕೆಲವು ಪ್ರಮುಖ ವ್ಯಕ್ತಿಗಳಲ್ಲಿ ಒಬ್ಬರು.

ಟಿಪ್ಪು ಧಾರ್ಮಿಕ ವಿಚಾರದಲ್ಲಿ ಮುಸ್ಲಿಮೇತರರನ್ನು ಕೊಲ್ಲುವುದರಲ್ಲೇ ಅಥವಾ ಬಲವಂತವಾಗಿ ಅವರನ್ನು ಇಸ್ಲಾಂಧರ್ಮಕ್ಕೆ ಮತಾಂತರಗೊಳಿಸುವುದರಲ್ಲಿಯೇ ನಿರತನಾಗಿದ್ದ ಎಂಬುದನ್ನು ಮೊಹಿಬ್ಬುಲ್ ಹಸನ್ ಅವರೇ ಒಪ್ಪಿಕೊಳ್ಳುತ್ತಾರೆ. ಹೀಗೆ ಟಿಪ್ಪುವಿನ ಜೀವನ ಚರಿತ್ರೆಯನ್ನು ಎಳೆ ಎಳೆಯಾಗಿ ಬಿಚ್ಚಿಡುವ ಪ್ರಯತ್ನವನ್ನು ಮಾಡಿದ್ದಾರೆ. ಒಂದು ಹೊಗಳಿಕೆಯ ನೆಲೆಯಲ್ಲಿಯೇ ಟಿಪ್ಪುವನ್ನು ಚಿತ್ರಿಸಿದ್ದಾರೆ. ಇಲ್ಲಿ ಬಳಸಿಕೊಂಡಿರುವ ಆಕರಗಳು ಉತ್ತಮವಾಗಿವೆ. ಆದರೆ ಅವುಗಳನ್ನು ಮತ್ತಷ್ಟು ದುಡಿಸಿಕೊಳ್ಳಬೇಕಾಗಿತ್ತು.

ನಾರಾಯಣರಾವ್ ಎ.ಎಸ್. ಅವರು ಬರೆದಿರುವ **ಮೋಕ್ಷಗುಂಡಂ ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ**(೧೯೫೨)[೮](ಮರುಮುದ್ರಣ ೧೯೭೮) ಎಂಬ ಕೃತಿಯು ಪ್ರಮುಖ ವಾದುದು. ಈ ಕೃತಿಯಲ್ಲಿ ಮೊದಲು ವಿಶ್ವೇಶ್ವರಯ್ಯ ಅವರ ಬಾಲ್ಯಜೀವನ, ಶಿಕ್ಷಣ, ವೈವಾಹಿಕ ಜೀವನದ ಅಂಶಗಳನ್ನು ತಿಳಿಸಲಾಗಿದೆ. ಅನಂತರ ಅವರು ಇಂಜನಿಯರ್ ಆಗಿ ಕೈಗೊಂಡ ಕಾರ್ಯಗಳನ್ನು ತಿಳಿಯಬಹುದು. ಮೊದಲಬಾರಿಗೆ ನೀರಾವರಿಯಲ್ಲಿ 'ಬ್ಲಾಕ್ ಸಿಸ್ಟಂನ್ನು' ಜಾರಿಗೆ ತಂದು ಕೃಷಿಗೆ ಅನುಕೂಲ ಮಾಡಿಕೊಟ್ಟರು ಎಂಬುದು ಮುಖ್ಯ. ಮೈಸೂರಿನ ದಿವಾನರಾದ

ಮೇಲೆ ಆರ್ಥಿಕ ಪ್ರಗತಿಗೆ ಕೈಗೊಂಡ ಕಾರ್ಯಗಳ ವಿವರಗಳನ್ನು ಗಮನಿಸಬಹುದು. ಕೈಗಾರಿಕೆಗಳ ಸ್ಥಾಪನೆಯ ವಿವರಗಳು, ಗ್ರಾಮೋದ್ಧಾರದ ಅಂಶಗಳನ್ನು ಮುಖ್ಯವಾಗಿ ವಿವರಿಸುತ್ತಾರೆ. ಕೈಗಾರಿಕೆಗೆ ಮೊದಲ ಪ್ರಾಶಸ್ತ್ಯ ನೀಡಿದ್ದು, ಕೃಷಿಯ ಅಭಿವೃದ್ಧಿಗೆ ಪೆಟ್ಟು ಬಿದ್ದಿತು ಎಂಬುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ವಿಚಾರ. ಪ್ರಮುಖವಾಗಿ ಕೃಷ್ಣರಾಜ ಸಾಗರದ ಅಣೆಕಟ್ಟು ನಿರ್ಮಾಣದಿಂದ ಮೈಸೂರಿನ ಪ್ರಗತಿ ಎನ್ನುವುದನ್ನು ಮನಗಂಡು ಸಾಕಾರಗೊಳಿಸಿದ ವಿಚಾರಗಳು ಮುಖ್ಯವಾಗಿವೆ. ಮುಖ್ಯವಾಗಿ ಗಾಂಧೀಜಿ ಮತ್ತು ವಿಶ್ವೇಶ್ವರಯ್ಯ ಅವರ ಹೋಲಿಕೆಯ ವಿಚಾರಗಳನ್ನು ತಿಳಿಸಿದ್ದಾರೆ. ಗಾಂಧೀಜಿ ಅವರು ಸ್ವಾತಂತ್ರ್ಯ ಹೋರಾಟಕ್ಕೆ ಶ್ರಮಿಸಿದ ವಿವರಗಳನ್ನು ಗಮನಿಸಬಹುದು. ಗಾಂಧೀಜಿಯವರ ಭೇಟಿ ಆದಾಗ ವಿಶ್ವೇಶ್ವರಯ್ಯ ಅವರ ವಿಚಾರಗಳನ್ನು ಚರ್ಚಿಸುತ್ತಿದ್ದುದು ಗಮನಾರ್ಹವಾಗಿದೆ. ಬೆಂಗಳೂರಿನ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆ ವಿಚಾರಣಾ ಸಮಿತಿಯಲ್ಲಿ ಭಾಗವಹಿಸಿದರು. ಈ ಘಟನೆಯ ಇತ್ಯರ್ಥದಲ್ಲಿ ಸೂಕ್ತವಾದ ತೀರ್ಮಾನವನ್ನು ತೆಗೆದುಕೊಂಡರು ಎಂಬುದು ಮುಖ್ಯ. ಈ ಕೃತಿಯಲ್ಲಿ ವಿಶ್ವೇಶ್ವರಯ್ಯ ಅವರ ಜೀವನ ಮತ್ತು ಸಾಧನೆಯ ಅಂಶಗಳು ಮೂಡಿಬಂದಿರುವುದು ಶ್ಲಾಘನೀಯವಾಗಿದೆ. ಆದರೆ ಬೇರೆ ಬರಹಗಾರರು ರಚಿಸಿದ ಈ ಮಾಹಿತಿಗಳು ಮತ್ತು ವಿಶ್ವೇಶ್ವರಯ್ಯ ಅವರೇ ಬರೆದ ಆತ್ಮ ಕಥನ 'ಮೆಮೊರೀಸ್ ಆಫ್ ಮೈ ವರ್ಕಿಂಗ್ ಲೈಫ್'ನಲ್ಲಿ ವೃತ್ತಿಜೀವನದ ಸಾಧನೆಗಳನ್ನು ಮಾತ್ರ ತಿಳಿಸಿದ್ದಾರೆ. ಈ ಕೃತಿಯಲ್ಲಿ ವಿಶ್ವೇಶ್ವರಯ್ಯ ಅವರ ಎಲ್ಲಾ ವಿಚಾರಧಾರೆಗಳನ್ನು ತಿಳಿಸಿದ್ದಾರೆ.

ತಿರುಮಲೆ ತಾತಾಚಾರ್ಯಶರ್ಮ ಅವರು **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಸಂಗ್ರಾಮೇತಿಹಾಸ ಸಂಗ್ರಹ**(೧೯೫೬)[೬೩] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯನ್ನು ೧೮೫೭ರ ಸಿಪಾಯಿ ದಂಗೆಯಿಂದ ಗುರುತಿಸುತ್ತಾ ಹೋಗುತ್ತಾರೆ. ಬ್ರಿಟಿಷರ ವಿರುದ್ಧ ಮೊದಲ ಬಾರಿಗೆ ಹೋರಾಟದ ಚಿಹ್ನೆಯಾಗಿ ಗುರುತಿಸುತ್ತಾ ಮೈಸೂರು ಸಂಸ್ಥಾನದಲ್ಲಿ ಮೊದಲು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಹೋರಾಟವನ್ನು ಇಲ್ಲಿ ಉಲ್ಲೇಖಿಸುತ್ತಾರೆ. ಅನಂತರ ಬ್ರಿಟಿಷರು ಆಧಿಪತ್ಯವನ್ನು ಸ್ಥಾಪಿಸಿದರು. ತಮಗೆ ಅನುಕೂಲವಾಗುವ ರೀತಿಯಲ್ಲಿ ಇಲ್ಲಿಯ ಆಡಳಿತವನ್ನು ಮಾರ್ಪಡಿಸಿಕೊಂಡ ಔಚಿತ್ಯವನ್ನು ಕಾಣಬಹುದು. ಗಾಂಧೀಜಿ ಅವರ ಆಗಮನದಿಂದಾಗಿ ಸ್ವಾತಂತ್ರ್ಯ ಹೋರಾಟ ಒಂದು ಹೊಸ ತಿರುವನ್ನು ಪಡೆದುಕೊಂಡಿತು. ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆಯ ಮೂಲಕ ಜನರಲ್ಲಿ ಪ್ರಜಾಪ್ರಭುತ್ವದ ಕಲ್ಪನೆಯು ಮೂಡತೊಡಗಿತು. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟವು ಒಂದು ಹೊಸ ಆಯಾಮವನ್ನು ಪಡೆದುಕೊಂಡಿತು ಎಂಬುದು ಮುಖ್ಯ. ರಾಷ್ಟ್ರೀಯ ಕಾಂಗ್ರೆಸ್‌ಗೆ ಎಲ್ಲಾ ವರ್ಗದ ಬೆಂಬಲ ದೊರೆಯಿತು. ಈ ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ಲಾ ವರ್ಗದ ಐಡೆಂಟಿಟಿಯ ವಿಚಾರವನ್ನು ಗಮನಿಸಬಹುದು.

ಬ್ರಾಹ್ಮಣೇತರ ಚಳವಳಿಯಿಂದ ಸರ್ ಎಂ.ವಿಶ್ವೇಶ್ವರಯ್ಯ ಅವರು ರಾಜೀನಾಮೆ ನೀಡಬೇಕಾದ ಪ್ರಸಂಗ, ಹಿಂದುಳಿದ ವರ್ಗಗಳ ತಲ್ಲಣಗಳನ್ನು ಕಟ್ಟಿಕೊಡುತ್ತಾರೆ. ಮಿರ್ಜಾ ಇಸ್ಮಾಯಿಲ್ ಅವರ ಆಡಳಿತಾವಧಿಯಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಹೋರಾಟ ನಡೆಸುವುದನ್ನು ಹತ್ತಿಕ್ಕ ಲಾಯಿತು. ಅವರು ಗಾಂಧೀಜಿಯ ರಚನಾತ್ಮಕ ಕಾರ್ಯಗಳನ್ನು ಜಾರಿಗೊಳಿಸಿದರು ಎಂಬುದರ

ಹಿಂದೆ ಜನಪರ ಧೋರಣೆಯನ್ನು ಗಮನಿಸಬಹುದು. ಹಿಂದೂ ಮತ್ತು ಮುಸ್ಲಿಂರ ಸಮಸ್ಯೆಯಲ್ಲಿ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆ ಹೇಗೆ ಪ್ರತಿಕ್ರಿಯಿಸಿತು ಎಂಬುದರ ವಿವರ, ಬ್ರಾಹ್ಮಣರ ಪಿತೂರಿ ಕಥೆ, ವಿಶ್ವೇಶ್ವರಯ್ಯ ಅವರ ಸಮಿತಿಯ ನಿರ್ಧಾರದ ಅಂಶಗಳ ವಿಚಾರಗಳನ್ನು ಸೂಕ್ಷ್ಮವಾಗಿ ತಿಳಿಸಿದ್ದಾರೆ. ಮಿರ್ಜಾ ಇಸ್ಮಾಯಿಲ್ ಅವರು ಒಂದು ಕಡೆ ಬ್ರಿಟಿಷ್ ರೆಸಿಡೆಂಟ್‌ರು, ಇನ್ನೊಂದು ಕಡೆ ಗಾಂಧೀಜಿ ಅವರ ಕಾರ್ಯಗಳನ್ನು ಹೇಗೆ ನಿಭಾಯಿಸುತ್ತಿದ್ದರು ಎಂಬುದು ಮುಖ್ಯ. ವಿದುರಾಶ್ವತ್ಥ ಘಟನೆ ಸ್ವಾತಂತ್ರ್ಯ ಸಾಧನೆಯಲ್ಲಿ ಜನರಿಗೆ ಶೌರ್ಯ ಮತ್ತು ದೃಢ ಸಂಕಲ್ಪವನ್ನು ಕೊಟ್ಟಿತು. ಗಾಂಧೀಜಿ ಅವರು ಅಧಿಕಾರಿಗಳು ಈ ಘಟನೆಯಲ್ಲಿ ನಡೆದುಕೊಂಡ ವರ್ತನೆಯನ್ನು ಖಂಡಿಸಿ, ಮುಂದೆ ಈ ತರಹದ ಘಟನೆಗಳು ನಡೆಯದಂತೆ ಮಾಡಬೇಕಾದರೆ ಪ್ರಜಾಸರ್ಕಾರ ಸ್ಥಾಪನೆ ಆಗಬೇಕು ಎಂದು ಹೇಳಿರುವ ವಿವರವನ್ನು ನೋಡಬಹುದು. ಜವಾಬ್ದಾರಿ ಸರ್ಕಾರದ ಅಸ್ಮಿತೆಯ ನೆಲೆಯಲ್ಲಿಯೇ ಈ ಕೃತಿಯನ್ನು ಕಟ್ಟಿಕೊಡುವ ಪ್ರಯತ್ನ ಮಾಡಿರುವುದನ್ನು ನೋಡಬಹುದು.

ಭಾರತಕ್ಕೆ ಸ್ವಾತಂತ್ರ್ಯ ದೊರೆತ ನಂತರ ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಮೈಸೂರು ಚಲೋ ಚಳವಳಿ ಪ್ರಾರಂಭವಾಗಿ ತೀವ್ರ ಸ್ವರೂಪವನ್ನು ಪಡೆಯಿತು ಎಂಬುದು ಪ್ರಮುಖ. ಕೊನೆಗೆ ಮೈಸೂರು ಸಂಸ್ಥಾನದಲ್ಲಿ ಪ್ರಜಾಸರ್ಕಾರ ಸ್ಥಾಪನೆಯಾದ ವಿವರಗಳನ್ನು ತಿಳಿಸಿದ್ದಾರೆ. ಈ ಕೃತಿಯು ವಿವರಣಾತ್ಮಕ ವಿಚಾರಗಳನ್ನು ತಿಳಿಸುವುದಂತಹದ್ದು.

ತಿರುಮಲೆ ತಾತಾಚಾರ್ಯ ಶರ್ಮ ಅವರು ಬರೆದಿರುವ **ಭಾರತ ರತ್ನ ಎಂ.ವಿಶ್ವೇಶ್ವರಯ್ಯ** (೧೯೬೦)[೬೪] ಎಂಬ ಕೃತಿಯು ವಿವರಣಾತ್ಮಕ ಮಾದರಿಯಲ್ಲಿ ಸಾಗುತ್ತದೆ. ಈ ಕೃತಿಯಲ್ಲಿ ದಿವಾನರಾದ ಎಂ.ವಿಶ್ವೇಶ್ವರಯ್ಯ ಅವರ ಬಾಲ್ಯ, ಶಿಕ್ಷಣ, ವೃತ್ತಿ ಇವೇ ಮೊದಲಾದ ವಿಚಾರಗಳನ್ನು ತಿಳಿಸಲಾಗಿದೆ. ವಿಶ್ವೇಶ್ವರಯ್ಯ ಅವರು ಶಿಕ್ಷಣ ಪಡೆದು ಇಂಜಿನಿಯರಿಂಗ್ ವೃತ್ತಿಯನ್ನು ಆರಂಭಿಸಿ, ಅನೇಕ ಅಭಿವೃದ್ಧಿ ಕಾರ್ಯಗಳನ್ನು ಜಾರಿಗೆ ತಂದ ವಿವರಗಳನ್ನು ಈ ಅಧ್ಯಯನದ ವ್ಯಾಪ್ತಿಯೊಳಗೆ ಮೊದಲು ತಿಳಿಯಬಹುದು. ದಿವಾನರಾಗಿ ಸರ್.ಎಂ.ವಿಶ್ವೇಶ್ವರಯ್ಯ ಅವರು ಆಯ್ಕೆಯಾದರು. ಆದರೆ ಈ ಕೃತಿಯಲ್ಲಿ ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ನಡುವೆ ದಿವಾನ ಹುದ್ದೆಗೆ ನಡೆದ ಕಲಹದ ವಿವರಗಳಿಲ್ಲ. ದಿವಾನರಾಗಿ ಅನೇಕ ಕೈಗಾರಿಕೆಗಳ ಸ್ಥಾಪನೆ, ವ್ಯಾಪಾರ-ವಾಣಿಜ್ಯ, ನೀರಾವರಿ, ಇವೇ ಮೊದಲಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿವರಗಳು ಮಿಳಿತವಾಗಿವೆ. ಮುಖ್ಯವಾಗಿ ಸರ್ ಎಂ. ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಎಲ್ಲಿಯೂ ಪ್ರಸ್ತಾಪವೇ ಇಲ್ಲ. ಇದು ಮೇಲ್ವರ್ಗದ ಮತೀಯ ದೃಷ್ಟಿಕೋನದ ಚರಿತ್ರೆಯ ಗ್ರಹಿಕೆಯನ್ನು ನೋಡಬಹುದು. ಆದರೆ ದಿವಾನರಾದ ಮಿರ್ಜಾ ಇಸ್ಮಾಯಿಲ್ ಅವರ ಕಾಲದಲ್ಲಿನ ಗಣಪತಿ ಗಲಾಟೆ ಕುರಿತು ವಿಚಾರಣೆ ಸಮಿತಿಯ ಸದಸ್ಯರಾಗಿ ವಿಶ್ವೇಶ್ವರಯ್ಯ ಅವರು ನಿರ್ವಹಿಸಿದ ಪಾತ್ರವನ್ನು ತಿಳಿಸಿದ್ದಾರೆ(ಪು.೮೨). ಈ ನಿಟ್ಟಿನಲ್ಲಿ ಇದು ವಿಶ್ವೇಶ್ವರಯ್ಯ ಅವರ ಕಾರ್ಯಸಾಧನೆ ಗಳನ್ನು ತಿಳಿಸುವ ಕೃತಿಯಾಗಿದೆ.

ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಸಂಪಾದಕತ್ವದಲ್ಲಿ **ಸರ್ ಎಂ.ವಿಶ್ವೇಶ್ವರಯ್ಯ** (೧೯೬೦)[೬೫] ಎಂಬ ಕೃತಿ ಪ್ರಕಟವಾಗಿದೆ. ಇಲ್ಲಿ ಸಾಹಿತಿಯಾಗಿ ಗುರುತಿಸಿಕೊಂಡ ಸಂಪಾದಕರು ಸರ್.ಎಂ.ವಿಶ್ವೇಶ್ವರಯ್ಯ ಅವರನ್ನು ಹೇಗೆ ಚಿತ್ರಿಸಿದ್ದಾರೆ. ಈ ಕೃತಿಯ ಲೇಖನದ ಲೇಖಕರು ಭಿನ್ನ ಭಿನ್ನ ನೆಲೆಯಲ್ಲಿ ಯಾವ ರೀತಿ ಬಿಂಬಿಸಿದ್ದಾರೆ ಎಂಬುದನ್ನು ಈ ಕೃತಿಯಲ್ಲಿ ನೋಡಬಹುದು. ಸರ್ ಎಂ.ವಿಶ್ವೇಶ್ವರಯ್ಯ ಅವರ ಕೆಲಸ ಕಾರ್ಯಗಳು, ಅಧಿಕಾರ ನಿರ್ವಹಣೆ, ಆರ್ಥಿಕ ಯೋಜನೆಗಳು, ಜೀವನ, ಹಿರಿಮೆ, ವ್ಯಕ್ತಿತ್ವ ಇವೇ ಮೊದಲಾದ ವಿಚಾರಗಳ ಲೇಖನಗಳನ್ನು ಈ ಕೃತಿಯಲ್ಲಿ ಕ್ರೋಢೀಕರಿಸಿದ್ದಾರೆ. ಅವರ ಆತ್ಮಕಥನದ ಕೆಲವು ಘಟ್ಟಗಳನ್ನು ಇಲ್ಲಿ ತಿಳಿಸಿದ್ದಾರೆ. ಜನನ, ವಿದ್ಯಾಭ್ಯಾಸ, ವೃತ್ತಿಜೀವನ, ದಿವಾನರಾಗಿ ಕೈಗೊಂಡ ಕಾರ್ಯಗಳ ನಿರೂಪಣೆಯನ್ನು ನೀಡುತ್ತಾರೆ. ವಿಶ್ವೇಶ್ವರಯ್ಯ ಅವರು ಮೊದಲು ಇಂಜಿನಿಯರ್ ಆಗಿ ನಿರ್ವಹಿಸಿದ ಕಾರ್ಯಗಳು, ಅನಂತರ ದಿವಾನರಾಗಿ ನಿರ್ವಹಿಸಿದ ಕಾರ್ಯಗಳು ಇವೇ ಮೊದಲಾದ ವಿಷಯವಾಗಿ ಇರುವ ಲೇಖನಗಳನ್ನು ಇಲ್ಲಿ ನೋಡುತ್ತೇವೆ. ಈ ಪುಸ್ತಕದ ಸಂಪಾದಕರು ಕೃತಿಯ ಎಲ್ಲಾ ಲೇಖನಗಳಲ್ಲಿ ಸರ್ ಎಂ. ವಿಶ್ವೇಶ್ವರಯ್ಯ ಅವರ ಪ್ರತಿಯೊಂದು ಕಾರ್ಯವನ್ನು ಶ್ಲಾಘಿಸಿ ವಿವರಿಸಿರುವುದನ್ನು ಕಾಣುತ್ತೇವೆ. ಇವರು ಕೈಗಾರಿಕೆಗಳ ಸ್ಥಾಪನೆಗೆ ಹೆಚ್ಚು ಪ್ರೋತ್ಸಾಹ ನೀಡಿದರು. ಆದರೆ ವಿಶ್ವೇಶ್ವರಯ್ಯ ಅವರ ಯೋಜನೆಗಳು ಅನುಷ್ಠಾನಗೊಂಡರೂ, ಅವುಗಳ ಬೃಹತ್ ಉತ್ಪಾದನೆಗಳಿಗೆ ಮಾರುಕಟ್ಟೆ ಸಿಗುವುದು ದುಸ್ತರವಿತ್ತು. ವಸಾಹತುಶಾಹಿ ಸ್ಥಿತಿಯಲ್ಲಿ ಬಂಡವಾಳಶಾಹಿ ಪಥದಲ್ಲಿ ನಿಧಾನವಾಗಿ ಸಾಗುತ್ತಿದ್ದ ಭಾರತದ ಪ್ರಜೆ ಈ ವಸ್ತುಗಳನ್ನು ಕೊಳ್ಳಲು ಹೇಗೆ ಸಾಧ್ಯ ಎಂಬುದರ ಕಡೆಗೆ ಗಮನ ಹರಿಸಬೇಕಾಗಿತ್ತು(ಪು.೧೫೫).

ವಿಶ್ವೇಶ್ವರಯ್ಯ ಅವರು ಇಂಜಿನಿಯರ್ ಆಗಿದ್ದರು. ಈ ನಡುವೆ ಮದ್ರಾಸ್ ಮತ್ತು ಮೈಸೂರಿನ ಬ್ರಾಹ್ಮಣರ ನಡುವೆ ದಿವಾನ ಪದವಿಗೆ ತಿಕ್ಕಾಟ ಪ್ರಾರಂಭವಾಯಿತು ಎಂಬುದರ ವಿಚಾರಗಳನ್ನು ಚರ್ಚಿಸಬೇಕಾಗಿತ್ತು. ಹಾಗೆಯೇ ಮೈಸೂರು ದಿವಾನರಾಗಿ ವಿಶ್ವೇಶ್ವರಯ್ಯ ಅವರು ಆಯ್ಕೆಯಾದ ವಿಚಾರಗಳು ಮುಖ್ಯ ಅನಂತರ ದಿವಾನ ಹುದ್ದೆಗೆ ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಬ್ರಾಹ್ಮಣೇತರ ಚಳವಳಿಯ ವಿಚಾರಗಳಿಲ್ಲದಿರುವುದು ಮೇಲ್ವರ್ಗದ ಮತೀಯ ದೃಷ್ಟಿಕೋನವನ್ನು ಬಿಂಬಿಸುತ್ತದೆ. ವಿಶ್ವೇಶ್ವರಯ್ಯ ಮತ್ತು ಐತಿಹ್ಯ ಲೇಖನದಲ್ಲಿ ತಮ್ಮ ಸಂಬಂಧಿಕರನ್ನು ಯಾವುದೇ ಹುದ್ದೆಗೆ ನೇಮಿಸಲಿಲ್ಲ ಎಂಬ ವಿಚಾರ ಮುಖ್ಯ. ಈ ಕೃತಿಯು ವಿಶ್ವೇಶ್ವರಯ್ಯ ಅವರ ಸಾಧನೆಗಳ ಬಗೆಗೆ ವಿವಿಧ ಲೇಖಕರು ರಚಿಸಿದ ಅಭಿನಂದನಾ ಕೃತಿಯಾಗಿ ಗುರುತಿಸಬಹುದಾಗಿದೆ.

೧೯೬೦ರ ನಂತರ ಕರ್ನಾಟಕ ಚರಿತ್ರೆಗೆ ಸಂಬಂಧಿಸಿ ಬಂದ ಕೃತಿಗಳು ನೇರವಾಗಿ ಒಡೆಯರ ಚರಿತ್ರೆಗೆ ಅಥವಾ ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿರದಿದ್ದರೂ, ಕರ್ನಾಟಕದ ಚರಿತ್ರೆಯ ಭಾಗವಾಗಿ ಮೈಸೂರು ಒಡೆಯರ ಚರಿತ್ರೆಯನ್ನು ಕುರಿತು ರಚಿಸಿದ್ದಾರೆ. ೧೯೬೮ರಲ್ಲಿ ಸಂಪಾದಿಸಿರುವ ಆರ್.ಆರ್.ದಿವಾಕರ್ ಅವರ **ಕರ್ನಾಟಕ ಥ್ರೂ ದಿ ಏಜಸ್**[೬೬] ಕೃತಿಯು ಮೊದಲು ಇಂಗ್ಲಿಷ್‌ನಲ್ಲಿ ಪ್ರಕಟಗೊಂಡು, ಇದರ ಕನ್ನಡ ಆವೃತ್ತಿ ಎರಡು ಸಂಪುಟಗಳಲ್ಲಿ ೧೯೭೦ರಲ್ಲಿ ಪ್ರಕಟಗೊಂಡವು. ಈ ಕೃತಿಯಲ್ಲಿ ಇತಿಹಾಸಪೂರ್ವ ಯುಗದಿಂದ ಆರಂಭಗೊಂಡು

ಕರ್ನಾಟಕ ಏಕೀಕರಣದವರೆಗಿನ ವಿಚಾರಗಳನ್ನು ಸಮೀಕ್ಷಿಸಲಾಗಿದೆ. ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಎರಡನೇ ಸಂಪುಟದ ೬೪೯ ಪುಟದಿಂದ ವಿಷಯವನ್ನು ಗ್ರಹಿಸ ಬಹುದು. ಮೈಸೂರು ಒಡೆಯರ ರಾಜ್ಯ ಸ್ಥಾಪನೆ, ವಿಜಯನಗರದ ಸಾಮ್ರಾಜ್ಯದ ಅಧಿಕಾರಿಗಳಾದ ಎರಡನೇ ವೆಂಕಟ ಮತ್ತು ತಿರುಮಲ ಅವರಿಂದ ಶ್ರೀರಂಗಪಟ್ಟಣವನ್ನು ವಶಪಡಿಸಿಕೊಂಡು ರಾಜ ಒಡೆಯರು ಸಂಸ್ಥಾನವನ್ನು ಭದ್ರಪಡಿಸಿಕೊಂಡ ವಿವರಗಳನ್ನು ತಿಳಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಆಡಳಿತ, ದಳವಾಯಿಗಳ ಅಧಿಕಾರ, ಹೈದರಾಲಿಯ ಏಳಿಗೆ, ಆಂಗ್ಲರು ಮತ್ತು ಫ್ರೆಂಚರ ನಡುವೆ ಇದ್ದ ರಾಜಕೀಯ ಕಾದಾಟಗಳು, ಮೊಘಲರ ಅವನತಿ ಮುಂತಾದ ಸಂಘರ್ಷಗಳ ನೆಲೆಯಲ್ಲಿ ಹೈದರ್‌ನು ಹಂತಹಂತವಾಗಿ ಮೈಸೂರಿನ ಇಡೀ ಆಡಳಿತವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡ ವಿವರಗಳನ್ನು ನೋಡಬಹುದು. ಅನಂತರ ಟಿಪ್ಪುವನ್ನು ಹೇಗೆ ರಾಜಕೀಯವಾಗಿ ಬ್ರಿಟಿಷರು ಬಳಸಿಕೊಂಡರು ಎಂಬುದು ಮುಖ್ಯ ಟಿಪ್ಪು ಮತಾಂಧನಾಗಿದ್ದ, ಹಿಂದೂಗಳನ್ನು ಮುಸ್ಲಿಂಧರ್ಮಕ್ಕೆ ಮತಾಂತರಗೊಳಿಸಿದನು ಎಂಬ ಹೇಳಿಕೆ, ಹಿಂದೂ ದೇವಾಲಯಗಳನ್ನು ನಾಶಗೊಳಿಸಿದನು ಎಂಬ ವಿಷಯಕ್ಕೆ ಶೃಂಗೇರಿಯಲ್ಲಿರುವ ದಾಖಲೆಗಳನ್ನು ಆಧಾರವಾಗಿ ನೀಡಿ, ಶೃಂಗೇರಿ ಮಠದಲ್ಲಿರುವ ಶಾರದ ದೇವಿಯ ದೇವಾಲಯಕ್ಕೆ ನೀಡಿದ ದಾನ-ದತ್ತಿಗಳ ವಿವರವನ್ನು ತಿಳಿಸಿದ್ದಾರೆ(ಪು.೭೦೮). ಒಟ್ಟಿನಲ್ಲಿ ಹೈದರಾಲಿ ಮತ್ತು ಟಿಪ್ಪುವಿನ ಈ ರೀತಿಯ ನಡವಳಿಕೆಗೆ ಅಂದಿನ ರಾಜಕೀಯ ತುರ್ತುಗಳು ಕಾರಣವಾಗಿದ್ದವು ಎಂಬುದನ್ನು ಗಮನಿಸಬೇಕು. ಏಕೆಂದರೆ ಶತ್ರುಗಳಿಂದ ಬ್ರಿಟಿಷರಿಗೆ ಇಲ್ಲಿನ ಸ್ಥಳೀಯರು ಸಹಾಯ ಮಾಡಿದ್ದರಿಂದ ಈ ರೀತಿ ನಡೆದುಕೊಳ್ಳಬೇಕಾಯಿತು ಎಂಬುದು ಅನಿವಾರ್ಯ. ಟಿಪ್ಪು ನಂತರ ಒಡೆಯರ ಅಧಿಕಾರವನ್ನು ಮರಳಿ ಪಡೆಯಲು ಲಕ್ಷಮ್ಮಣ್ಣಿಯ ಅವಿರತ ಹೋರಾಟ, ಮುಮ್ಮಡಿ ಕೃಷ್ಣರಾಜ ಒಡೆಯರ ಆಡಳಿತ, ನಗರದಂಗೆಯಿಂದ ಪುನಃ ಅಧಿಕಾರವನ್ನು ಬ್ರಿಟಿಷರು ಹಿಂತೆಗೆದುಕೊಂಡ ವಿವರ ಇವೇ ಮೊದಲಾದ ವಿಚಾರಗಳನ್ನು ಗಮನಿಸಬಹುದು.

೧೦ನೇ ಚಾಮರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರ ಅಧಿಕಾರ, ಅವರು ಕೈಗೊಂಡ ಅಭಿವೃದ್ಧಿ ಕಾರ್ಯಗಳು, ರಂಗಾಚಾರ್ಲು, ಶೇಷಾದ್ರಿ ಅಯ್ಯರ್, ಪಿ.ಎನ್.ಕೃಷ್ಣಮೂರ್ತಿ, ವಿ.ಪಿ.ಮಾಧವರಾಯರು, ಟಿ.ಆನಂದರಾಯರು, ಸರ್ ಎಂ.ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್, ಕಾಂತರಾಜ ಅರಸು, ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ದಿವಾನರ ಆರ್ಥಿಕ ಪ್ರಗತಿ, ಪ್ರಜಾಪ್ರತಿನಿಧಿಯ ಸ್ಥಾಪನೆ, ರೈಲ್ವೆ ವ್ಯವಸ್ಥೆ, ಶಿಕ್ಷಣ, ಕ್ಷಾಮಗಳು, ಕೈಗಾರಿಕಾ ಯೋಜನೆಗಳು, ನೀರಾವರಿ ಯೋಜನೆ, ಎರಡನೇ ಮಹಾಯುದ್ಧ, ಸ್ವಾತಂತ್ರ್ಯ ಹೋರಾಟದ ತೀವ್ರತೆ, ಜವಾಬ್ದಾರಿ ಸರ್ಕಾರಕ್ಕಾಗಿ ಅರಮನೆ ಸತ್ಯಾಗ್ರಹ ಇವೇ ಮೊದಲಾದ ವಿಷಯಗಳ ಬಗೆಗೆ ಸುದೀರ್ಘವಾಗಿ ಬರೆಯುತ್ತಾರೆ. ಆದರೆ ಪ್ರಮುಖ ಚಳವಳಿಯಾದ ಬ್ರಾಹ್ಮಣೇತರ ಚಳವಳಿ ಬಗೆಗೆ ಮಾಹಿತಿ ಇಲ್ಲ. ಆದರೆ ಕೋಮು ತಲ್ಲಣವನ್ನು ಹುಟ್ಟು ಹಾಕಿದ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆಯ ಬಗೆಗೆ ಚರ್ಚಿಸಿದ್ದಾರೆ. ರಾಜಕೀಯ ಹಿನ್ನೆಲೆಯಲ್ಲಿಯೇ ಈ ಕೃತಿಯ ವಿಚಾರಗಳು ಮಿಳಿತವಾಗಿವೆ.

ಪ್ರಾಕ್ಸಿ ಪೆರ್ನಂಡಸ್ ಅವರ **ದಿ ಟೈಗರ್ಸ್ ಆಫ್ ಮೈಸೂರು-ಎ ಬಯಾಗ್ರಫಿ ಆಫ್ ಹೈದರ್ ಅಲಿ ಅಂಡ್ ಟಿಪ್ಪು ಸುಲ್ತಾನ**(೧೯೬೯)[೬೭] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯಲ್ಲಿ

ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಜೀವನ ಚರಿತ್ರೆಯನ್ನು ವಿವರಿಸಲಾಗಿದೆ. ಈ ಕೃತಿಯಲ್ಲಿ ಒಡೆಯರ ದೌರ್ಬಲ್ಯವನ್ನು ಬಳಸಿಕೊಂಡು ದಳವಾಯಿಗಳು ಅಧಿಕಾರವನ್ನು ಕೇಂದ್ರೀಕರಿಸಿ ಕೊಂಡರು. ಅದರಂತೆ ಹೈದರಾಲಿಯು ಕೂಡ ದಳವಾಯಿಗಳ ಅಸಮರ್ಥನೆಯನ್ನು ಬಳಸಿಕೊಂಡು ಹಂತಹಂತವಾಗಿ ಅಧಿಕಾರವನ್ನು ಕೇಂದ್ರಿಕರಿಸಿಕೊಂಡನು ಎಂಬ ವಿಚಾರಗಳನ್ನು ಮೊದಲು ತಿಳಿಸಿದ್ದಾರೆ. ಅನಂತರ ಹೈದರಾಬಾದ್‌ನ ನಿಜಾಮರ ಯುದ್ಧಗಳು, ಕರ್ನಾಟಕ ಯುದ್ಧ, ಫ್ರೆಂಚರ ರಾಜಕೀಯ ಕಾದಾಟಗಳು ಇವೇ ಮೊದಲಾದ ವಿಚಾರಗಳನ್ನು ಮೊದಲು ವಿವರಿಸಿದ್ದಾರೆ. ತಿರುಚನಾಪಳ್ಳಿ ಯುದ್ಧದಿಂದ ಲಾಭ ಪಡೆದ ಹೈದರಾಲಿಯು ದಿಂಡಿಗಲ್ಲಿನ ಫೌಜುದಾರನಾಗಿ ತನ್ನ ಅಧಿಕಾರದ ಮೊದಲ ಪ್ರಯತ್ನ ಪಡೆದುಕೊಂಡ ಎಂಬ ವಿಚಾರ ಮುಖ್ಯ(ಪು.೧೫-೨೦). ಅನಂತರ ಸದವಕಾಶವನ್ನು ಬಳಸಿಕೊಂಡು ಇಡೀ ಮೈಸೂರಿನ ಅಧಿಕಾರವನ್ನು ಕೇಂದ್ರೀಕರಿಸಿಕೊಂಡನು. ಮುಖ್ಯವಾಗಿ ಬ್ರಿಟಿಷರ ನಡುವೆ ಪ್ರಾರಂಭವಾದ ಮೊದಲನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಗೆದ್ದ ಹೈದರ್‌ನ ಒಪ್ಪಂದದಿಂದಾಗಿ ಕೆಲವು ಷರತ್ತುಗಳನ್ನು ವಿಧಿಸಲಾಯಿತು. ಆದರೆ ಎರಡನೇ ಆಂಗ್ಲೋ-ಮೈಸೂರು ಯುದ್ಧದಲ್ಲಿ ಹೈದರಾಲಿ ಮೃತನಾದರೂ ಟಿಪ್ಪು ಯುದ್ಧವನ್ನು ಮುಂದುವರಿಸಿ ಒಪ್ಪಂದ ಮಾಡಿಕೊಂಡನು. ಇಲ್ಲಿ ಟಿಪ್ಪು ಸುಲ್ತಾನನು ಬ್ರಿಟಿಷರ ವಿರುದ್ಧ ಹೋರಾಡಲು ಇತರ ರಾಷ್ಟ್ರಗಳೊಂದಿಗೆ ಒಪ್ಪಂದ ಮತ್ತು ಶಸ್ತ್ರಾಸ್ತ್ರಗಳನ್ನು ಸುಸಜ್ಜಿತ ಗೊಳಿಸಿದ ವಿಚಾರಗಳನ್ನು ತಿಳಿಸಿದ್ದಾರೆ. ಆರ್ಥಿಕತೆಯ ವಿಚಾರಗಳನ್ನು ಮುಖ್ಯವಾಗಿ ತಿಳಿಯಬೇಕಾಗಿದೆ. ಒಟ್ಟಿನಲ್ಲಿ ಈ ಕೃತಿಯು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಜೀವನ ಚರಿತ್ರೆಯನ್ನು ತಿಳಿಸುತ್ತದೆ.

ಎಂ.ವಿ.ಕೃಷ್ಣರಾವ್ ಮತ್ತು ಕೇಶವಭಟ್ಟ ಎಂ. ಅವರ **ಕರ್ನಾಟಕ ಇತಿಹಾಸ ದರ್ಶನ** (೧೯೭೦)[೬೮], ಪಿ.ಬಿ.ದೇಸಾಯಿ, ಎಸ್.ಎಚ್.ರಿತ್ತಿ ಮತ್ತು ಬಿ.ಆರ್.ಗೋಪಾಲ್ ಅವರ **ಎ ಹಿಸ್ಟರಿ ಆಫ್ ಕರ್ನಾಟಕ**(೧೯೭೦)[೬೯] ಮುಂತಾದ ಕೃತಿಗಳಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಕರ್ನಾಟಕ ಚರಿತ್ರೆಯ ಭಾಗವಾಗಿ ಕುರಿತು ಬರೆದಿದ್ದಾರೆ. ಈ ಕೃತಿಗಳಲ್ಲಿ ಇತಿಹಾಸಪೂರ್ವ ಯುಗದಿಂದ ಆರಂಭಗೊಂಡು ಕರ್ನಾಟಕ ಏಕೀಕರಣದವರೆಗಿನ ವಿಚಾರಗಳನ್ನು ವಿವರಿಸಿದ್ದಾರೆ. ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಒಡೆಯರ ರಾಜ್ಯ ಸ್ಥಾಪನೆ, ರಾಜ ಒಡೆಯರು, ಚಿಕ್ಕದೇವರಾಜ ಒಡೆಯರ ಆಳ್ವಿಕೆ, ದಳವಾಯಿಗಳ ಅಧಿಕಾರ, ಮರಾಠರ ಯುದ್ಧಗಳು, ಆಂಗ್ಲರು ಮತ್ತು ಫ್ರೆಂಚರ ಹೋರಾಟಗಳು, ಮೊಘಲರ ಅವನತಿ ಮುಂತಾದ ಸಂಘರ್ಷಗಳ ನೆಲೆಯಲ್ಲಿ ಹೈದರ್‌ನು ಹಂತಹಂತವಾಗಿ ಮೈಸೂರಿನ ಇಡೀ ಆಡಳಿತವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡ ವಿಚಾರಗಳನ್ನು ತಿಳಿಸಿದ್ದಾರೆ. ಅನಂತರ ಟಿಪ್ಪುವನ್ನು ಹೇಗೆ ರಾಜಕೀಯವಾಗಿ ಬಳಸಿಕೊಂಡರು ಎಂಬುದು ಮುಖ್ಯ. ಟಿಪ್ಪುವಿನ ಯುದ್ಧಗಳಲ್ಲಿ ಬ್ರಿಟಿಷರು ತಮ್ಮ ಉಪಯೋಗ ಪಡೆದುಕೊಂಡರು ಎಂಬುದರ ಕಡೆ ಗಮನಹರಿಸಬೇಕಾಗಿತ್ತು. ಟಿಪ್ಪುವಿನ ನಂತರ ಮುಮ್ಮಡಿ ಕೃಷ್ಣರಾಜರಿಗೆ ಪುನಃ ಅಧಿಕಾರವನ್ನು ವಿತರಣೆ ಮಾಡಲಾದ ಅಂಶಗಳು, ನಗರದಂಗೆಯಿಂದಾಗಿ ಕಮೀಷನರ್‌ಗಳ ಆಳ್ವಿಕೆ, ಕಮೀಷನರ್ ಆಳ್ವಿಕೆಯಿಂದ ಮೈಸೂರು

ಸಂಸ್ಥಾನ ಮಾದರಿ ಸಂಸ್ಥಾನವಾಗಿ ರೂಪುಗೊಂಡಿತು ಎಂಬ ವಿಚಾರಗಳನ್ನು ಇಲ್ಲಿ ಗಮನಿಸಬಹುದು.

ಕ್ಯಾಂಪ್‌ಬೆಲ್ಲರ ಸಹಕಾರದಿಂದಾಗಿ ಅಧಿಕಾರ ೧೦ನೇ ಚಾಮರಾಜ ಒಡೆಯರಿಗೆ ಹಸ್ತಾಂತರವಾಯಿತು. ಅನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತ, ಅವರ ಕಾಲದಲ್ಲಿ ಕೈಗೊಂಡ ಪ್ರಗತಿಪರ ಕಾರ್ಯಗಳು, ದಿವಾನರುಗಳ ಆರ್ಥಿಕ ಪ್ರಗತಿ, ಪ್ರಜಾಪ್ರತಿನಿಧಿ ಸಭೆ ಸ್ಥಾಪನೆ, ಕೈಗಾರಿಕಾ ಯೋಜನೆಗಳು, ನೀರಾವರಿ ಯೋಜನೆಗಳು, ರೈಲ್ವೆವ್ಯವಸ್ಥೆ, ಶಿಕ್ಷಣ, ಕ್ಷಾಮಗಳು, ಮಹಾಯುದ್ಧದ ಪರಿಣಾಮ, ಸ್ವಾತಂತ್ರ್ಯ ಹೋರಾಟದ ತೀವ್ರತೆ, ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಅರಮನೆ ಸತ್ಯಾಗ್ರಹ ಇವೇ ಮೊದಲಾದ ವಿಚಾರಗಳನ್ನು ವಿವರವಾಗಿ ತಿಳಿಸಿದ್ದಾರೆ. ನಿಮ್ನವರ್ಗಗಳ ಚಳವಳಿಯಲ್ಲಿ ಸರ್ಕಾರದ ಪಾತ್ರ ಏನು ಎಂಬುದನ್ನು ಇಲ್ಲಿ ಗಮನಿಸಬಹುದು. ಈ ನಿಟ್ಟಿನಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ವಿಚಾರವನ್ನು ವಿವರಣೆ ರೂಪದಲ್ಲಿ ಈ ಕೃತಿಗಳಲ್ಲಿ ಕಟ್ಟಿಕೊಟ್ಟಿರುತ್ತಾರೆ.

ಎಂ.ಫಜಲ್ ಹಸನ್ ಅವರ **ಬೆಂಗಳೂರು ಥ್ರೂ ದ ಸೆಂಚುರೀಸ್**(೧೯೭೦)[೭೦] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಮೈಸೂರು ಸಂಸ್ಥಾನಕ್ಕೆ ಸೇರಿದ ಬೆಂಗಳೂರು ನಗರದ ಚಾರಿತ್ರಿಕ ಬೆಳವಣಿಗೆಯನ್ನು ವಿವರಿಸುತ್ತಾರೆ. ಮಾಗಡಿ ಕೆಂಪೇಗೌಡನಿಂದ ಬೆಂಗಳೂರು ಸ್ಥಾಪಿತವಾದ ಚಾರಿತ್ರಿಕ ವಿವರಗಳನ್ನು ಮೊದಲು ಈ ಕೃತಿಯಲ್ಲಿ ತಿಳಿಸುತ್ತಾರೆ. ಅನಂತರ ಬಿಜಾಪುರದ ಸುಲ್ತಾನರು, ಮರಾಠರು ಮತ್ತು ಮೊಘಲರ ಆಡಳಿತದಲ್ಲಿ ಬೆಂಗಳೂರಿನ ಬೆಳವಣಿಗೆಯನ್ನು ವಿವರಿಸುತ್ತಾರೆ. ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ಸಿರಾದ ಫೌಜುದಾರನೂ ಮೊಘಲರ ಪ್ರತಿನಿಧಿಯೂ ಆದ ಖಾಸಿಂಖಾನ್‌ನಿಂದ ಮೂರು ಲಕ್ಷ ರೂಪಾಯಿಗಳಿಗೆ ಕೊಂಡುಕೊಂಡನು ಎಂಬುದು ಚಾರಿತ್ರಿಕ ದಾಖಲೆ.

ಹೈದರಾಲಿಯ ಬೆಂಗಳೂರಿನ ಆಡಳಿತ, ಬೆಂಗಳೂರಿನಲ್ಲಿ ನಡೆದ ಯುದ್ಧ, ಮೊದಲಾದ ವಿಚಾರಗಳು ಈ ಕೃತಿಯಲ್ಲಿ ಮಿಳಿತವಾಗಿವೆ. ಬ್ರಿಟಿಷರ ಆಡಳಿತದಲ್ಲಿ ಬೆಂಗಳೂರಿನ ಲಕ್ಷಣಗಳ ಚಿತ್ರಣವನ್ನು ತಿಳಿಸುತ್ತಾರೆ. ಬಹುಮುಖ್ಯವಾಗಿ ಬೆಂಗಳೂರಿನಲ್ಲಿ ನಡೆಯುವ ಸಾಂಸ್ಕೃತಿಕ ಹಬ್ಬ ಕರಗದ ಮಾಹಿತಿಗಳನ್ನು ಗಮನಿಸಬಹುದು. ಇಲ್ಲಿ ಜಾತಿಗಳ ಐಡೆಂಟಿಟಿಗಳ ಮೂಲಕ ಕರಗದ ಉತ್ಸವವನ್ನು ಬಿಂಬಿಸಿದ್ದಾರೆ. ತಿಗಳರು ಇಲ್ಲಿನ ಆಚಾರ-ವಿಚಾರಗಳನ್ನು ಹೇಗೆ ಪಾಲಿಸುತ್ತಿದ್ದರು ಎಂಬುದನ್ನು ತಿಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಬೆಂಗಳೂರು ಹೇಗೆ ಬೆಳವಣಿಗೆಯಾಗುತ್ತಾ ಆರ್ಥಿಕ, ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಚಹರೆಯಲ್ಲಿ ಗುರುತಿಸಿಕೊಂಡಿತು ಎಂಬುದನ್ನು ಈ ಕೃತಿಯಲ್ಲಿ ನೋಡುತ್ತೇವೆ.

ಡೆನ್ನಿ ಫಾರ್ರೆಸ್ಟ್ ಅವರ **ಟೈಗರ್ ಆಫ್ ಮೈಸೂರ್**(೧೯೭೦)[೭೧] ಎಂಬ ಕೃತಿಯನ್ನು ಹೊರತಂದಿದ್ದಾರೆ. ಇದು ಬ್ರಿಟಿಷ್ ಲೇಖಕನೊಬ್ಬ ಬರೆದಿರುವ ಟಿಪ್ಪುವಿನ ಜೀವನಚರಿತ್ರೆಯಾಗಿದೆ. ಟಿಪ್ಪುವಿನ ಪ್ರತಿಯೊಂದು ವಿಚಾರವನ್ನು ವಿವರವಾಗಿ ಬರೆಯಲಾಗಿದೆ. ಈತನ ಬಗೆಗೆ ಬ್ರಿಟಿಷರು ತಳೆದ ಧೋರಣೆಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಬ್ರಿಟಿಷರು ಟಿಪ್ಪುವನ್ನು ದುರಾಕ್ರಮಣರು

ಎಂದು ಬಣ್ಣಿಸಿದ್ದಾರೆ. ಬ್ರಿಟಿಷರು ತಾವು ಮೈಸೂರನ್ನು ಆಕ್ರಮಿಸಿಕೊಂಡಿದ್ದನ್ನು ಸಮರ್ಥಿಸಿಕೊಳ್ಳಲು ಹೇಳಿದ್ದಾರೆ ಎಂಬ ವಿಚಾರವನ್ನು ತಿಳಿಯಬಹುದು. ಆದರೆ ಇಲ್ಲಿ ಬ್ರಿಟಿಷರ ನಿಷ್ಪಕ್ಷಪಾತ ದೃಷ್ಟಿ ಕಾಣುತ್ತದೆ. ಅಂದರೆ ಬ್ರಿಟಿಷ್ ಸೇನಾನಿಗಳನ್ನು ಮತ್ತು ಯೋಧರನ್ನು ಕುರಿತ ವಿವರಗಳು ಫಾರ್ರೆಸ್ಟ್ ಅವರ ಸ್ವದೇಶದ ಓದುಗರಿಗೆ ಪ್ರಿಯವಾಗುವಂತೆ ಭಾರತೀಯ ಓದುಗರಿಗೆ ಪ್ರಿಯವಾಗಲಾರವು ಎನ್ನುವುದನ್ನು ಈ ಕೃತಿಯಲ್ಲಿ ಗಮನಿಸಬಹುದು.

ಮಾನಪ್ಪ ನಾಯಕ ಎಚ್. ಅವರ ಪ್ರದಾನ ಸಂಪಾದಕತ್ವದಲ್ಲಿ **ಮುಮ್ಮಡಿ ಕೃಷ್ಣರಾಜ ಒಡೆಯರು**(೧೯೭೦)[೨] ಎಂಬ ಕೃತಿ ಪ್ರಕಟವಾಗಿದೆ. ಹಾ.ಮಾ.ನಾಯಕ ಅವರು ಮುಮ್ಮಡಿ ಕೃಷ್ಣರಾಜ ಒಡೆಯರ್ ಅವರ ಒಂದು ಕಿರು ಪರಿಚಯವನ್ನು ಮಾಡಿಕೊಡುತ್ತಾರೆ. ದೇ. ಜವರೇಗೌಡರು ಗದ್ಯಸಾಹಿತ್ಯವನ್ನು ಮುಮ್ಮಡಿ ಕೃಷ್ಣರಾಜ ಒಡೆಯರ್ ಗುರುತಿಸಿಕೊಂಡಿರುವ ಬಗೆಯನ್ನು ತಿಳಿಸಿಕೊಡುತ್ತಾರೆ. ಶ್ರೀತತ್ವನಿಧಿ ಕೃತಿಯು ಪ್ರಮುಖವಾಗಿದ್ದು, ಇದರಲ್ಲಿ ಕ್ರೀಡೆಗಳ ವಿವರ, ಚದುರಂಗದಾಟ, ತ್ರಿಮೂರ್ತಿಗಳು, ಪಂಚೇಂದ್ರಿಯಗಳ ಚಿತ್ರಗಳನ್ನು ತಿಳಿಸಿದ್ದಾರೆ. ಎಸ್.ವಿ.ಪರಮೇಶ್ವರ ಭಟ್ಟರು ಶಾಕುಂತಲ ನಾಟಕದ ನವೀನ ಟೀಕೆಯ ಬಗ್ಗೆ ವಿಚಾರ ತಿಳಿಸಿದ್ದಾರೆ. ಸಿ.ಪಿ.ಕೃಷ್ಣಕುಮಾರ್ ಅವರು ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದ ಸಾಹಿತ್ಯದ ಬಗ್ಗೆ ತಿಳಿಸುತ್ತಾರೆ. ಮುದ್ರಾಮಂಜೂಷ, ಪಾರಿಜಾತ ಪರಿಣಯ ಇವೇ ಮೊದಲಾದ ಕೃತಿಗಳ ವಿವರಗಳನ್ನು ನೀಡುತ್ತಾರೆ. ಈ ನಿಟ್ಟಿನಲ್ಲಿ ಕೃತಿಯ ಲೇಖನಗಳು ಮುಮ್ಮಡಿ ಕೃಷ್ಣರಾಜ ಒಡೆಯರ ಸಾಹಿತ್ಯದ ವಿಚಾರಗಳನ್ನು ವಿವರಿಸಿದ್ದಾರೆ.

ಡಿ.ವಿ.ಗುಂಡಪ್ಪ ಅವರು ರಚಿಸಿರುವ **ಮೈಸೂರಿನ ದಿವಾನರುಗಳು** ಜ್ಞಾಪಕ ಚಿತ್ರಶಾಲೆ ಸಂಪುಟ-೪, (೧೮೭೧, ಮರು ಮುದ್ರಣ ೧೯೯೯)[೩] ಎಂಬ ಕೃತಿಯು ಪ್ರಮುಖವಾದುದು. ಡಿ.ವಿ.ಗುಂಡಪ್ಪ ಅವರು ಸಾಹಿತ್ಯಕ್ಷೇತ್ರದಲ್ಲಿ ಹೆಚ್ಚು ಗುರುತಿಸಿಕೊಂಡರೂ ಚಾರಿತ್ರಿಕ ವ್ಯಕ್ತಿಗಳ ಚರಿತ್ರೆಯನ್ನು ತಮ್ಮ ಬರವಣಿಗೆಯ ಮೂಲಕ ಕಟ್ಟಿಕೊಡುತ್ತಾರೆ. ಇವರು ಈ ಕೃತಿಯಲ್ಲಿ ಕೆಲವು ಮಂದಿ ದಿವಾನರ ಸಮಕಾಲೀನರಾಗಿ, ಆತ್ಮೀಯರಾಗಿ ವಿಚಾರಗಳನ್ನು ತಿಳಿಸಿದ್ದಾರೆ. ಮೊದಲು ದಿವಾನರಾಗಿ ಪೂರ್ಣಯ್ಯ ಅವರು ನೇಮಕಗೊಂಡರು. ಮಹಾರಾಣಿ ಅವರ ಮಾತಿಲ್ಲದೇ ಯಾವ ಕಾರ್ಯ ಕೈಗೊಳ್ಳುವಂತಿರಲಿಲ್ಲ. ಅನಂತರ ಸಿ.ರಂಗಾಚಾರ್ಲು ಅವರು ಭಾರತದ ಪ್ರಪ್ರಥಮ ಪ್ರಜಾರಾಜ್ಯವಾದಿ ಎಂದು, ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆಯ ವಿವರಗಳನ್ನು ತಿಳಿಸಿದ್ದಾರೆ. ದೇಶದ ಹಿತಚಿಂತನೆಯಲ್ಲಿ ಕಾರ್ಯ ನಿರ್ವಹಿಸಿದರು ಎಂದಿದ್ದಾರೆ. ಕೆ.ಶೇಷಾದ್ರಿ ಅಯ್ಯರ್ ಅವರ ಆಡಳಿತದ ವಿಚಾರಗಳಲ್ಲಿ ಮುಖ್ಯವಾಗಿ ನೀರಾವರಿ, ಸ್ಥಾಯಿ ಸಮಿತಿ, ಕೈಗಾರಿಕೆ, ಶಿಕ್ಷಣ ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ವಿವರಿಸಿದ್ದಾರೆ. ಟಿ.ಆರ್.ಎ. ತಂಬೂಚೆಟ್ಟಿ, ಸರ್ ಪಿ.ಎನ್.ಕೃಷ್ಣಮೂರ್ತಿ, ವಿ.ಪಿ.ಮಾಧವ ರಾಯರು ಅವರ ಕಾಲದ ಆಡಳಿತ ವಿಚಾರಗಳು, ಟಿ.ಆನಂದರಾಯರ ಆಡಳಿತದಲ್ಲಿ ಮಂಡಿ ಪೇಟೆ ಬಂದ್‌ನ ವಿಷಯವು ಮುಖ್ಯವಾದುದು. ಭಾರತರತ್ನ ಸರ್ ಎಂ.ವಿಶ್ವೇಶ್ವರಯ್ಯ ಅವರ ಕಾಲದ ಆಡಳಿತ, ಕೈಗಾರಿಕೆ, ನೀರಾವರಿ ಯೋಜನೆ, ಆರ್ಥಿಕ ಸಮ್ಮೇಳನ, ಸಮಿತಿಯ ವಿಚಾರಗಳನ್ನು ವಿವರಿಸಿದ್ದಾರೆ. ಕೋಮುವಾರು ಚಳವಳಿ ಎಂದು ಲೇಖಕರು ವಿವರಿಸುತ್ತಾ ಹಿಂದುಳಿದ ವರ್ಗಗಳ ಮೀಸಲಾತಿಯ

ವಿಚಾರವಾಗಿ ಸರ್ ಎಂ.ವಿಶ್ವೇಶ್ವರಯ್ಯ ಅವರ ನಡುವೆ ಉಂಟಾದ ವಿವಾದವನ್ನು ವಿವರಿಸುತ್ತಾರೆ. ಇದರಲ್ಲಿ ಇವರ ಪ್ರತಿಯೊಂದು ವಿಚಾರವನ್ನು ತಿಳಿಸುತ್ತಾ ಹೋಗುತ್ತಾರೆ. ಆದರೆ ಬ್ರಾಹ್ಮಣೇತರ ಚಳವಳಿಯಿಂದ ರಾಜೀನಾಮೆ ಕೊಡಬೇಕಾದ ಸಂದರ್ಭದ ಪ್ರಸ್ತಾಪವೇ ಇಲ್ಲದಿರುವುದು ಮೇಲ್ವರ್ಗದ ಮತೀಯ ದೃಷ್ಟಿಕೋನವನ್ನು ತಿಳಿಸುತ್ತದೆ.

ಸರ್.ಎ.ಆರ್.ಬ್ಯಾನರ್ಜಿ ಅವರ ಆಡಳಿತ, ಸರ್ ಮಿರ್ಜಾ ಎಂ.ಇಸ್ಮಾಯಿಲ್ ಅವರ ಆಡಳಿತದ ವಿಚಾರಗಳು ಮುಖ್ಯ ಸುಮಾರು ಹದಿನೈದು ವರ್ಷಗಳ ಕಾಲ ದಿವಾನರಾಗಿ ಆಡಳಿತ ನಡೆಸಿದ ಮಿರ್ಜಾ ಇಸ್ಮಾಯಿಲ್ ಅವರ ವಿಚಾರಗಳು ಪ್ರಮುಖವಾಗಿವೆ. ಮಿರ್ಜಾ ಅವರ ಕಾಲದಲ್ಲಿ ಮೊದಲು ಬಿನ್ನಿ ಮಿಲ್ ಗದ್ದಲ ಪ್ರಾರಂಭವಾಯಿತು. ಈ ಗದ್ದಲ ಮುಗಿಯುವ ಹೊತ್ತಿಗೆ ಸುಲ್ತಾನ್‌ಪೇಟೆಯ ಗಲಭೆ ಪ್ರಾರಂಭವಾಯಿತು. ಮಿರ್ಜಾ ಅವರ ಆಡಳಿತದ ಮೇಲೆ ಪ್ರಭಾವ ಬೀರಿತು ಎಂಬುದು ಮುಖ್ಯ ಒಂದು ರೀತಿಯ ಮತೀಯ ಭಾವನೆ ಉಂಟಾಯಿತು. ಈ ಗಲಭೆಯಿಂದ ನಾರೀಮನ್, ವಿದುರಾಶ್ವತ್ಥ ಗಲಭೆಯು ನಡೆಯಿತು. ಒಟ್ಟಿನಲ್ಲಿ ಮಿರ್ಜಾರ ಕಾಲದಲ್ಲಿ ಅರ್ಧಭಾಗ ಗಲಭೆಗಳನ್ನು ದಮನ ಮಾಡುವುದರಲ್ಲಿ ಕಳೆಯಿತು. ಇವರ ಕಾಲದಲ್ಲಿ ನೀರಾವರಿ, ಕೈಗಾರಿಕೆ, ಶಿಕ್ಷಣ ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿಚಾರಗಳನ್ನು ತಿಳಿಸಿದ್ದಾರೆ. ಸ್ವಾತಂತ್ರ್ಯ ಪಡೆದ ನಂತರ ಜವಾಬ್ದಾರಿ ಸರಕಾರದ ರಚನೆಗಾಗಿ ಚಳವಳಿ ಆರಂಭವಾಯಿತು. ಮೈಸೂರು ಸಂಸ್ಥಾನ ಕೊನೆಗೆ ಪ್ರಜಾಪ್ರಭುತ್ವದಲ್ಲಿ ವಿಲೀನವಾಯಿತು ಎಂಬುದನ್ನು ಗಮನಿಸಬಹುದು. ಈ ನಿಟ್ಟಿನಲ್ಲಿ ಡಿ.ವಿ.ಗುಂಡಪ್ಪ ಅವರು ಕೃತಿಯಲ್ಲಿ ದಿವಾನರುಗಳ ಆಡಳಿತದ ವೈಖರಿಯನ್ನು ವಿವರಿಸಿದ್ದಾರೆ. ಕೆಲವು ದಿವಾನರ ಸಮಕಾಲೀನರಾಗಿ, ಅವರ ಜೊತೆ ಆತ್ಮೀಯರಾಗಿ ಇದ್ದು ಕೂಡ ವಿಚಾರಗಳನ್ನು ತಿಳಿಸಿದ್ದಾರೆ.

ಶ್ರೀನಿವಾಸ ಅಯ್ಯಂಗಾರ್ ಸಿ.ಆರ್. ಅವರು **ಮೈಸೂರು ರಾಜ್ಯದ ಮಹಾಶಿಲ್ಪಿ ಶ್ರೀ ಕೃಷ್ಣರಾಜ ಒಡೆಯರು**(೧೯೭೧)[೨೪] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ಮುಖ್ಯವಾಗಿ ಮೈಸೂರು ಸಂಸ್ಥಾನವನ್ನು ಮಾದರಿ ಸಂಸ್ಥಾನವಾಗಿ ಮಾರ್ಪಡಿಸಿದ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಕುರಿತದ್ದಾಗಿದೆ. ಒಡೆಯರ ಅಭಿವೃದ್ಧಿ ಕಾರ್ಯಗಳಿಗೆ ದಿವಾನರು ಕೂಡ ಚಾಲನೆ ನೀಡಿದರು. ಒಡೆಯರು ಮೈಸೂರು ಸಂಸ್ಥಾನದಲ್ಲಿ ಕೃಷಿ, ಕೈಗಾರಿಕೆ, ಶಿಕ್ಷಣ, ರೈಲ್ವೆ, ನೀರಾವರಿ, ಸ್ತ್ರೀಯರ ಅಭಿವೃದ್ಧಿ, ದಲಿತರ ಕಲ್ಯಾಣ ಕಾರ್ಯಗಳು, ಆರ್ಥಿಕ ಬಿಕ್ಕಟ್ಟು ನಿವಾರಣೆ ಕಾರ್ಯಗಳು ಇವೇ ಮೊದಲಾದ ಬಗೆಗೆ ಮಾಹಿತಿ ನೀಡುವುದು ಈ ಕೃತಿಯ ವಿಶೇಷ. ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ವಿಚಾರಗಳನ್ನು ಕ್ರೂಢೀಕರಿಸುವ ಪ್ರಯತ್ನವೇ ಹೊರತು ವಿಶ್ಲೇಷಣೆಯ ಗೋಜಿಗೆ ಹೋಗುವುದಿಲ್ಲ. ಪ್ರತಿಯೊಂದು ವಿಚಾರವನ್ನು ವಿವರಣೆ ಮಾದರಿಯಲ್ಲಿ ತಿಳಿಸುತ್ತಾರೆ. ಯಾವ ವಿಚಾರವನ್ನು ಹೇಗೆ, ಯಾವ ಸನ್ನಿವೇಶ, ಹಿನ್ನೆಲೆಯಲ್ಲಿ ತಿಳಿಸಬೇಕು ಎಂಬುದು ಮುಖ್ಯವಾಗಿತ್ತು.

ಮ.ಶ್ರೀಧರಮೂರ್ತಿ ಅವರ **ಒಡೆಯರು ಮತ್ತು ಮೈಸೂರು**(೧೯೭೨)[೨೫] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯು ಒಡೆಯರ ಜೀವನಚರಿತ್ರೆಯನ್ನು ಅನಾವರಣಗೊಳಿಸುವುದಾಗಿದೆ.

೧೩೯೯ರಿಂದ ೧೫೭೮ರವರೆಗೆ ವಿಜಯನಗರದ ಅರಸರಿಗೆ ಒಡೆಯರು ಸಾಮಂತರಾಗಿದ್ದು, ಸ್ವತಂತ್ರರಾಗಿ ೧೬೭೦ರವರೆಗೆ, ೧೭೯೯ ಟಿಪ್ಪುವಿನವರೆಗೆ, ೧೭೯೯ರಿಂದ ೧೯೪೭ರವರೆಗೆ ಮೈಸೂರು ರಾಜ್ಯ ಭಾರತದ ಗಣರಾಜ್ಯ ಸೇರುವವರೆಗೂ ಈ ವಿಚಾರಗಳನ್ನು ಕೃತಿಯಲ್ಲಿ ಸಂಕ್ಷಿಪ್ತಗೊಳಿಸಿ ವಿವರಿಸಿದ್ದಾರೆ. ಒಡೆಯರ ಅಧಿಕಾರ ಸ್ಥಾಪನೆ, ರಾಜ ಒಡೆಯರಿಂದ ಸ್ವತಂತ್ರ ಆಡಳಿತ ಸ್ಥಾಪನೆ, ಅಲಮೇಲಮ್ಮಳ ಶಾಪ, ರಣಧೀರ ಕಂಠೀರವ ನರಸರಾಜ ಒಡೆಯರ ಆಡಳಿತ, ಚಿಕ್ಕದೇವರಾಜ ಒಡೆಯರ ಆಡಳಿತದ ವಿಚಾರಗಳನ್ನು ತಿಳಿಸಿದ್ದಾರೆ. ತೆರಿಗೆಯ ವಿಚಾರದಲ್ಲಿ ಜಂಗಮರನ್ನು ಕೊಲ್ಲಿಸಿದ ಕ್ರೌರ್ಯದ ಬಗೆಗೆ ವಿವರಗಳಿಲ್ಲ.

ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ಅಷ್ಟಾಗಿ ವಿವರಗಳಿಲ್ಲ. ಇವರ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರಕ್ಕೆ ಬಂದ ವಿಚಾರ ಮುಖ್ಯ. ನಗರದಂಗೆಯಿಂದ ಅಧಿಕಾರವನ್ನು ಕಳೆದುಕೊಂಡರು. ಕಮೀಷನರ್‌ಗಳ ಆಳ್ವಿಕೆ ಕೊನೆಗೊಂಡು ಹತ್ತನೇ ಚಾಮರಾಜ ಒಡೆಯರು ಅಧಿಕಾರವನ್ನು ಸ್ವೀಕರಿಸಿದರು. ಚಾಮರಾಜ ಒಡೆಯರ ಕಾಲದಲ್ಲಿ ಸ್ವಾಮಿ ವಿವೇಕಾನಂದರ ಭೇಟಿ, ಅವರ ಮೂಲಕ ಕೈಗೊಂಡ ಅಸ್ಪೃಶ್ಯ ಉದ್ಧಾರದ ಕಾರ್ಯಗಳ ಅಂಶಗಳನ್ನು ತಿಳಿಸಿದ್ದಾರೆ. ಅನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತ, ದಿವಾನರ ಅಭಿವೃದ್ಧಿ ಸಾಧನೆಗಳು, ಆರ್ಥಿಕ ಪ್ರಗತಿ, ನೀರಾವರಿ ಯೋಜನೆ, ಶಿಕ್ಷಣ, ಕೈಗಾರಿಕಾ ಯೋಜನೆಗಳ ವಿವರಗಳನ್ನು ಗಮನಿಸಬಹುದು. ಈ ಕಾರ್ಯಗಳ ಮೂಲಕ ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನ ಎಂಬ ಬಿರುದನ್ನು ಪಡೆಯಿತು. ಕೊನೆಯ ಒಡೆಯರಾಗಿ ಜಯಚಾಮರಾಜ ಒಡೆಯರು ಅಧಿಕಾರಕ್ಕೆ ಬಂದರು. ಅವರ ಆಡಳಿತಾವಧಿಯಲ್ಲಿ ಮೈಸೂರು ಸಂಸ್ಥಾನವು ಭಾರತದ ಗಣರಾಜ್ಯದಲ್ಲಿ ವಿಲೀನಗೊಳಿಸಿದ ವಿವರಗಳನ್ನು ತಿಳಿಸಿರುವುದನ್ನು ಗಮನಿಸಬಹುದು.

ವಿ.ಎಂ.ಇನಾಂದಾರ್ ಸಂಪಾದಕತ್ವದಲ್ಲಿ ನರಸಿಂಹಮೂರ್ತಿ ಎನ್.ಕೆ. ಅವರು **ದಿವಾನ್ ಪೂರ್ಣಯ್ಯ**(೧೯೭೩)[೭೬] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಪೂರ್ಣಯ್ಯ ಅವರು ತನ್ನ ಬುದ್ಧಿಸಾಮರ್ಥ್ಯದಿಂದ ಹಂತಹಂತವಾಗಿ ದಿವಾನ್ ಹುದ್ದೆಗೆ ಏರಿದರು ಎಂಬ ವಿಚಾರಗಳನ್ನು ತಿಳಿಸುತ್ತಾರೆ. ಮೊದಲು ವ್ಯಾಪಾರಸ್ಥರ ಸಂಪರ್ಕ ಹೊಂದಿದ್ದು, ಅನಂತರ ಹೈದರಾಲಿಯ ಹತ್ತಿರ ಆಪ್ತಸಚಿವರಾಗಿ ಹುದ್ದೆಗೆ ಸೇರಿಕೊಂಡರು. ಹೈದರಾಲಿಯ ನಂತರ ಟಿಪ್ಪುವಿನ ಆಡಳಿತದಲ್ಲಿಯೂ ಅಧಿಕಾರದಲ್ಲಿ ಮುಂದುವರಿದ ವಿಚಾರವನ್ನು ವಿವರಿಸುತ್ತಾರೆ. ಬುಕಾನನ್ ಮತ್ತು ವಿಲ್ಕ್ಸ್ ಅವರು ಪೂರ್ಣಯ್ಯ ಅವರು ಜಾಗರೂಕತೆಯಿಂದಲೇ ಆಡಳಿತ ನಡೆಸುತ್ತಿದ್ದರು ಎಂದು ವಿವರಿಸುತ್ತಾರೆ. ಟಿಪ್ಪುವಿನ ಆಳ್ವಿಕೆಯಲ್ಲಿ ಹಿಂದೂಗಳಿಗೆ ತುಂಬಾ ತೊಂದರೆ ಆಯಿತು ಎನ್ನುತ್ತಾ ಸಾವಿರಾರು ಜನರನ್ನು ಅವನು ಬಲತ್ಕಾರದಿಂದ ಮತಾಂತರ ಗೊಳಿಸಿದನು ಎನ್ನುವುದನ್ನು ತಿಳಿಸುತ್ತಾರೆ. ಈ ಕಡೆ ಟಿಪ್ಪುವಿನ ಕಿರುಕುಳದಿಂದ ಬೇಸತ್ತು ಅವನ ಹಿಡಿತದಿಂದ ತಪ್ಪಿಸಿಕೊಳ್ಳಲು ಲಕ್ಷ್ಮಮ್ಮಣ್ಣಿ ಅವರು ದಿವಾನ್ ಪೂರ್ಣಯ್ಯ ಅವರ ಸಹಾಯವನ್ನು ಕೋರಿದರು. ಪೂರ್ಣಯ್ಯ ಯಾವುದೇ ಪ್ರತಿಕ್ರಿಯೆ ತೋರಲಿಲ್ಲ. ಕೊನೆಗೆ ಟಿಪ್ಪುವಿನ ಮರಣದ ನಂತರ ಅಧಿಕಾರವನ್ನು ಟಿಪ್ಪುವಿನ ಮಗನಿಗೆ ನೀಡುವಂತೆ ಹುನ್ನಾರ

ಮಾಡಿದರು. ಆದರೂ ಬ್ರಿಟಿಷರು ಅಧಿಕಾರವನ್ನು ಒಡೆಯರಿಗೆ ಮರಳಿ ನೀಡಿದರು. ದಿವಾನ್ ಪದವಿಗೆ ಪೂರ್ಣಯ್ಯನವರೇ ಮುಂದುವರಿದರು. ಆದರೆ ಬ್ರಿಟಿಷರು ಆಜ್ಞೆ ಮಾಡಿದ ಕೂಡಲೇ ಒಪ್ಪಿಕೊಂಡಿದ್ದು ತನ್ನ ವಂಶಜರ ರಕ್ಷಣೆಗೆ ಎಂದು ಹೇಳಿರುವುದನ್ನು ನೋಡಬಹುದು. ಇಲ್ಲಿ ದಿವಾನ್ ಪೂರ್ಣಯ್ಯ ಅವರ ಸಮಯಸಾಧಕತನವನ್ನು ಗಮನಿಸಬಹುದು. ಹೀಗೆ ದಿವಾನ್ ಪೂರ್ಣಯ್ಯ ಅವರ ಆಡಳಿತದ ವಿಚಾರಗಳನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ.

ತಿ.ತಾ.ಶರ್ಮ ಅವರು **ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ**(೧೯೭೩)[೭೭] ಎಂಬ ಕೃತಿಯನ್ನು ಹೊರತಂದಿದ್ದಾರೆ. ಬ್ರಿಟಿಷರ ವಿರುದ್ಧ ಮೊದಲು ಹೋರಾಡಿದವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರು. ಅದರಲ್ಲೂ ಟಿಪ್ಪು ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂದು ಹಾಕಿದ ಯೋಜನೆಗಳು ಅಪಾರ. ಆದರೆ ಅದು ಸಾಧ್ಯವಾಗದೇ ಬ್ರಿಟಿಷರು ಇಲ್ಲಿಯೇ ನೆಲೆಯೂರಿದರು. ಈ ಹಂತದಲ್ಲಿ ಬ್ರಿಟಿಷರು ತಮ್ಮ ಆಧಿಪತ್ಯವನ್ನು ಎಲ್ಲಾ ಕ್ಷೇತ್ರಗಳಲ್ಲಿ ಸ್ಥಾಪಿಸಿದರು. ಆದರೆ ಸ್ಥಳೀಯ ನಾಯಕರು ಹೋರಾಟಗಳನ್ನು ಹಾಗೆಯೇ ಮುಂದುವರಿಸಿದರು. ದೋಂಡಿಯವಾಘ, ಕಿತ್ತೂರು ರಾಣಿ ಚೆನ್ನಮ್ಮ, ಸಂಗೊಳ್ಳಿ ರಾಯಣ್ಣ, ಸುರಪುರದ ಚಿಕ್ಕವೆಂಕಟಪ್ಪ ನಾಯಕ, ನರಗುಂದದ ಬಂಡಾಯ, ಭೀಮರಾವ್ ಮುಂಡರಗಿ, ಹಲಗಲಿಯ ವೀರರು ಇವೇ ಮೊದಲಾದ ಹೋರಾಟಗಳ ಬಗೆಗೆ ವಿಚಾರಗಳನ್ನು ಅನಾವರಣಗೊಳಿಸಿದ್ದಾರೆ. ಸಮುದಾಯಗಳು ಕೂಡ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದ್ದ ವಿಚಾರಗಳನ್ನು ವಿವರಿಸುತ್ತಾರೆ.

ಮೈಸೂರಿನ ಚರಿತ್ರೆಗೆ ಸಂಬಂಧಿಸಿದಂತೆ ಅನೇಕ ವಿಚಾರಗಳು, ಆಕರಗಳನ್ನು ತಿಳಿಸುವ ಆಕರ ಕೃತಿಯನ್ನು ಹೊರತಂದಿರುವುದನ್ನು ಗಮನಿಸಬಹುದು. ಈ ನಿಟ್ಟಿನಲ್ಲಿ ಶ್ರೀನಿವಾಸ ಹಾವನೂರ ಅವರ **ಹೊಸಗನ್ನಡದ ಅರುಣೋದಯ**[೭೮] ಎಂಬ ಕೃತಿ ೧೯೭೪ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಪ್ರಕಟವಾಯಿತು. ತದನಂತರ ತಿದ್ದಿ ಬೆಳೆಸಿದ ಎರಡನೆಯ ಆವೃತ್ತಿಯು ಕನ್ನಡ ಪುಸ್ತಕ ಪ್ರಾಧಿಕಾರದಿಂದ ೨೦೦೦ರಲ್ಲಿ ಪ್ರಕಟನೆಗೊಂಡಿತು. ಈ ಕೃತಿಯಲ್ಲಿ ೧೯ನೇ ಶತಮಾನದ ಸಾಹಿತ್ಯ ಚರಿತ್ರೆಗಿಂತ ಮಿಗಿಲಾಗಿ ಸಾಹಿತ್ಯದ ಹಿನ್ನೆಲೆಯನ್ನು, ಸಾಧನ ಸಾಮಗ್ರಿಯನ್ನು ವ್ಯವಸ್ಥಿತವಾಗಿ ಕ್ರೋಡೀಕರಿಸಿದ್ದಾರೆ. ಈ ಕೃತಿಯ ಪೂರ್ವಾರ್ಧದಲ್ಲಿ ಮುದ್ರಣ, ಇಂಗ್ಲಿಷ್ ಶಿಕ್ಷಣ ಹಾಗೂ ಕ್ರೈಸ್ತಮತ ಪ್ರಸಾರ ಈ ಸಾಧನಗಳ ಮೂಲಕ ಹಬ್ಬಿದ ಪಾಶ್ಚಾತ್ಯ ಪ್ರಭಾವವನ್ನು ವಿವರಿಸಲಾಗಿದೆ. ಹಾಗೆಯೇ ಮಿಷನರಿಯ ಜನರು, ಬ್ರಿಟಿಷ್ ಅಧಿಕಾರಿಗಳು, ದೇಶೀಯ ವಿದ್ಯಾವಂತರು, ಶಿಕ್ಷಕರು ಮುಂತಾದ ಜನರ, ಲೇಖಕರ ಸಾಹಿತ್ಯಿಕ ಬದುಕನ್ನು ತಿಳಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನಿಕರು, ಹರಿದಾಸರು, ವೀರಶೈವ ಸ್ವಾಮಿಗಳು, ಕವಯತ್ರಿಯರು ಹಾಗೂ ಯಕ್ಷಗಾನ ಕವಿಗಳು, ಸಂಪ್ರದಾಯನಿಷ್ಠವಾದ ಸಾಹಿತ್ಯವನ್ನು ನಿರ್ಮಿಸಿದರು. ಹೊಸ ವಿಚಾರಗಳು ಮಿಳಿತವಾಗಿದ್ದು, ಪಾಶ್ಚಾತ್ಯ ವಿಚಾರಗಳು ಕೂಡ ಸೇರಿವೆ ಎಂಬ ವಿಚಾರ ವಿದೆ. ಈ ಕೃತಿಯ ಉತ್ತರಾರ್ಧದಲ್ಲಿ ಮಹತ್ವಪೂರ್ಣ ಕೃತಿಗಳ ಸಮೀಕ್ಷೆ ಮತ್ತು ಇತರ ಅನೇಕಾನೇಕ ಕೃತಿಗಳ ಇಣಕು ನೋಟವಿದೆ. ಅಂದಿನ ಕೋಶ, ವ್ಯಾಕರಣ ಗ್ರಂಥಗಳು, ಹೊಸ ಬಗೆಯ ಕವಿತೆ, ನಾಟಕಾನುಭಾವಗಳು, ವಿವಿಧ ಪ್ರಬಂಧಗಳು ಕ್ರೈಸ್ತ ಬರಹ, ಪತ್ರಿಕೋದ್ಯಮ,

ಕಥೆ–ಕಾದಂಬರಿ ಇವನ್ನು ವ್ಯವಸ್ಥಿತವಾಗಿ ವರ್ಗೀಕರಿಸಿ ಪರಿಚಯ ಮಾಡಿಕೊಟ್ಟಿದೆ. ಕೆಲವೊಂದು ಕೃತಿಗಳನ್ನು ಬಿಡಲಾಗಿದ್ದು, ಕಾಲಾವಧಿಯ ಅನುಗುಣವಾಗಿ ಕೃತಿಗಳ ಮಾಹಿತಿಗಳನ್ನು ನೀಡಿದ್ದಾರೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಮಿಷನರಿ ಜನರ ಸಾಹಿತ್ಯ ಕಾರ್ಯದಲ್ಲಿ ಕ್ಯಾಥೋಲಿಕ್ ಮಿಷನರಿಗಳ ಪಾತ್ರವನ್ನು ಗಮನಿಸಬಹುದು. ಮುಖ್ಯವಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯದ ಕುರಿತಾದ ಅಧ್ಯಯನಗಳು ೧೭ನೇ ಶತಮಾನದ ಮಧ್ಯಭಾಗದಿಂದಲೇ ಪ್ರಾರಂಭಗೊಂಡವು. ಲಿಯೋನಾರ್ಡೊ ಸಿನ್ನಾಮಿಯು ಈ ಬಗೆಯ ಕಾರ್ಯಗಳಿಗೆ ಅಸ್ತಿಭಾರವನ್ನು ಹಾಕಿದನು. ಇದರಿಂದ ಕನ್ನಡ ಭಾಷೆ ಮತ್ತು ಕರ್ನಾಟಕ ಸಂಸ್ಕೃತಿ ಬಗೆಗಿನ ಅಧ್ಯಯನಗಳು ನಡೆದವು. ಇದರಿಂದ ಮೈಸೂರು ಒಡೆಯರ ಚರಿತ್ರೆಯಲ್ಲಿ ಭಾಷೆ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಅಡಿಪಾಯವನ್ನು ಹಾಕಲಾಯಿತು. ಬಾಸೆಲ್ ಮಿಷನ್ ಅವರು ಮುದ್ರಣ, ಶಿಕ್ಷಣ ಕ್ಷೇತ್ರಗಳಲ್ಲಿ ಕಾರ್ಯ ಕೈಗೊಂಡಿದ್ದು ಮುಂದಿನ ಅಧ್ಯಯನಕ್ಕೆ ದಾರಿ ಆಯಿತು.

ಮೈಸೂರು ಒಡೆಯರ ಚರಿತ್ರೆಯಲ್ಲಿ ಬ್ರಿಟಿಷ್ ಅಧಿಕಾರಿಗಳ ಕನ್ನಡ ಕಾರ್ಯಗಳು ಮುಖ್ಯ ಪ್ರಮುಖವಾಗಿ ಇತಿಹಾಸದ ಅಭ್ಯಾಸಿಗಳು ಹೇಗೆ ಮೈಸೂರು ಒಡೆಯರ ಚರಿತ್ರೆಯಲ್ಲಿ ಐಡೆಂಟಿಟಿಯನ್ನು ಕಂಡುಕೊಂಡರು ಎಂಬುದರ ವಿಚಾರಗಳನ್ನು ತಿಳಿಸಿದ್ದಾರೆ. ಮೆಕೆಂಝಿ, ಬುಕಾನನ್‌ರ ಸರ್ವೇ ಕೆಲಸದಿಂದ ಮೈಸೂರಿನ ಚರಿತ್ರೆಲೇಖನ ಪರಂಪರೆಯ ಆರಂಭಿಕ ಗೆರೆಗಳು ಮೂಡಿದವು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ವಿಲ್ಕ್ಸ್, ಬಿ.ಎಲ್.ರೈಸ್, ಫ್ಲೀಟ್ ಇನ್ನೂ ಮುಂತಾದವರು ನಾಡಿನ ಇತಿಹಾಸ ರಚನೆಯಲ್ಲಿ ನಿರ್ವಹಿಸಿದ ಪಾತ್ರವನ್ನು ವಿವರಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರಿಂದ ರಚನೆಯಾದ ಸಾಹಿತ್ಯದ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಹೀಗೆ ಮಾಹಿತಿಗಳನ್ನು ಕಲೆ ಹಾಕಿರುವ ಕ್ರಮ ಮತ್ತು ವಿಸ್ತಾರ ಅನನ್ಯವಾದುದ್ದು. ಈ ಕೃತಿಯಲ್ಲಿ ಹೊಸಗನ್ನಡದ ಹುಟ್ಟಿನ ಹಿನ್ನೆಲೆಯ ಚಾರಿತ್ರಿಕ ಸಂದರ್ಭವನ್ನು ಕಟ್ಟಿಕೊಡುತ್ತಾರೆ.

ನಾರಾಯಣರಾವ್ ವಿ.ಎಸ್. ಅವರು ಬರೆದಿರುವ **ಮಿರ್ಜಾ ಇಸ್ಮಾಯಿಲ್ ಅವರ ಜೀವನ ಚರಿತ್ರೆ**(೧೯೭೩, ಮರುಮುದ್ರಣ ೨೦೦೯)[೬೯] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಮಿರ್ಜಾ ಇಸ್ಮಾಯಿಲ್ ಅವರು ಮೈಸೂರಿನ ದಿವಾನರಾಗಿ ಹದಿನೈದು ವರ್ಷಗಳ ದೀರ್ಘ ಕಾಲದವರೆಗೆ ಆಡಳಿತ ನಡೆಸಿದ ವಿವರಗಳನ್ನು ಕೃತಿಕಾರರು ಕಟ್ಟಿಕೊಡುತ್ತಾರೆ. ಬಹುಮುಖ್ಯವಾಗಿ ಇವರ ಆಡಳಿತಕ್ಕೆ ಒಡ್ಡಿದ ಸವಾಲುಗಳನ್ನು ವಿವರಿಸಿದ್ದಾರೆ. ಬಿನ್ನಿ ಮಿಲ್ ಘಟನೆ, ಮತೀಯ ಭಾವನೆ ಸೃಷ್ಟಿಸಿದ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆಯ ವಿಚಾರಗಳನ್ನು ತಿಳಿಸಿದ್ದಾರೆ. ರಾಷ್ಟ್ರೀಯ ಜಾಗೃತಿ ಮೂಡಿಸುತ್ತಿದ್ದ ಅಸ್ಮಿತೆಯ ಆಯಾಮಗಳನ್ನು ವಿಶೇಷವಾಗಿ ಅರ್ಥೈಸಿದ್ದಾರೆ. ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದರ ವಿವರ, ಕಾಂಗ್ರೆಸ್‌ನ ಹೋರಾಟ, ಹರಿಜನರ ಅಭಿವೃದ್ಧಿ ಕಾರ್ಯಕ್ರಮಗಳು, ಸ್ವಾತಂತ್ರ್ಯ ಹೋರಾಟದಲ್ಲಿ ನಡೆದ ವಿದುರಾಶ್ವತ್ಥ ಘಟನೆ, ಈಸೂರು ಘಟನೆಗಳ ವಿವರಗಳು, ಬೆಂಗಳೂರು ದಂಡಿನ ವಿಲೀನೀಕರಣದ ವಿಚಾರ, ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಜೊತೆಗಿನ ಸಂಬಂಧ ಇವೇ ಮೊದಲಾದ ವಿಚಾರಗಳನ್ನು

ಈ ಕೃತಿಯು ಕಟ್ಟಿಕೊಡುತ್ತದೆ. ಮೈಸೂರು ಸಂಸ್ಥಾನದಲ್ಲಿ ಅಲ್ಲದೆ ಇತರೇ ರಾಜ್ಯಗಳಾದ ಜಯಪುರ, ಹೈದರಾಬಾದ್‌ನಲ್ಲಿ ನಿರ್ವಹಿಸಿದ ಕಾರ್ಯ, ಗಾಂಧೀಜಿ ಅವರೊಂದಿಗೆ ಮಿರ್ಜಾ ಅವರ ಸಂಬಂಧ, ಮತೀಯ ಸೌಹಾರ್ದತೆಗಾಗಿ ಕೈಗೊಂಡ ಕಾರ್ಯ, ರಾಜಕೀಯ ಕ್ಷೇತ್ರದ ದುಂಡುಮೇಜಿನ ಸಮ್ಮೇಳನದಲ್ಲಿ ಭಾಗವಹಿಸಿದ ಚರ್ಚೆ, ಇವೇ ಮೊದಲಾದ ವಿಚಾರಗಳು ಮುಖ್ಯವಾಗಿವೆ. ಈ ನಿಟ್ಟಿನಲ್ಲಿ ಮಿರ್ಜಾ ಅವರು ದಿವಾನರಾದ ನಂತರ ತನ್ನ ಆಡಳಿತಾವಧಿಯಲ್ಲಿ ಮುಸ್ಲಿಂ ಸಮುದಾಯದಲ್ಲಾದ ಅಸ್ಮಿತೆಯ ಆಲೋಚನೆಗಳು ಮುಖ್ಯ. ಹಾಗೆಯೇ ಕ್ರೈಸ್ತ ಸಮುದಾಯದೊಂದಿಗೆ ಉತ್ತಮ ಬಾಂಧವ್ಯವಿತ್ತು ಎನ್ನುತ್ತಾರೆ. ವಿದೇಶಿಗಳ ಪ್ರಯಾಣದಿಂದ ಕೆಲವು ವಿಚಾರಗಳ ಅಳವಡಿಕೆಯನ್ನು ನೋಡಬಹುದು. ಒಟ್ಟಾರೆಯಾಗಿ ಮೈಸೂರಿನ ಚರಿತ್ರೆಯ ಸಾಮಾಜಿಕ ರಾಜಕೀಯ ಅಸ್ಮಿತೆಯ ಒಳಸುಳಿಗಳ ಅಧ್ಯಯನಕ್ಕೆ ಈ ಕೃತಿಯು ಪ್ರೇರಣೆ ಆಗಿದೆ.

ಹಾಗೆಯೇ ಕೆ.ವೀರತಪ್ಪ ಅವರು ಬರೆದಿರುವ **ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ** (೧೯೭೭)[೮೦] ಎಂಬ ಕೃತಿಯನ್ನು ಇಲ್ಲಿ ಚರ್ಚೆ ಮಾಡಬಹುದಾಗಿದೆ. ಈ ಕೃತಿಯು ಮಾಹಿತಿ ಪ್ರಧಾನ ಕೃತಿಯೆಂದು ಹೇಳಬಹುದು. ಇದರಲ್ಲಿ ವಿವರಣೆಯ ಅಂಶಗಳೇ ಹೆಚ್ಚಾಗಿವೆ. ಅಲ್ಲದೇ ಯಾವುದೇ ಅಂಶಗಳನ್ನು ಚರ್ಚೆಯಾಗಲೀ ವಿಶ್ಲೇಷಣೆಯಾಗಲೀ ಮಾಡುವುದಿಲ್ಲ. ಜಾತಿ, ಪ್ರಾದೇಶಿಕತೆ, ಭಾಷೆಗಳ ಐಡೆಂಟಿಟಿಗಳನ್ನು ಗುರುತಿಸುವುದಿಲ್ಲ. ಈ ಅಸ್ಮಿತೆ, ಹುಡುಕಾಟವೂ ಇಲ್ಲ. ಈ ಕೃತಿಯ ಪ್ರಜಾಪ್ರತಿನಿಧಿ ಸಭೆಯನ್ನು ಆಡಳಿತಾತ್ಮಕ ಚಟುವಟಿಕೆಗಳಲ್ಲಿ ಹೇಗೆ ಗುರುತಿಸಿಕೊಂಡಿತು ಎಂಬುದನ್ನು ವಿವರಿಸುವುದರ ಮೂಲಕ ಪ್ರಾರಂಭಿಸುತ್ತಾರೆ. ಬರಹಗಾರರು ರಾಜಕೀಯದ ಆಡಳಿತಾತ್ಮಕ ಅಂಶಗಳ ಕಡೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದಾರೆ.

ರಾಷ್ಟ್ರೀಯ ಕಾಂಗ್ರೆಸ್ ಮೈಸೂರಿನ ಪ್ರಜೆಗಳ ಮೂಲಭೂತ ಹಕ್ಕುಗಳಿಗಾಗಿ ಮತ್ತು ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆಸಿದ ಚಳವಳಿಯಲ್ಲಿ ಸಹಾಯ ಮಾಡಿದ ವಿವರಗಳನ್ನು ತಿಳಿಸುತ್ತಾರೆ. ರಾಷ್ಟ್ರೀಯ ಮಟ್ಟದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯ ಮೂಲಕ ಮೈಸೂರು ಸಂಸ್ಥಾನದಲ್ಲಿ ನಡೆದ ಸ್ವಾತಂತ್ರ್ಯ ಚಳವಳಿಯನ್ನು ವಿವರಿಸುತ್ತಾ ಹೋಗುತ್ತಾರೆ. ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ನಡೆದ ಧ್ವಜ ಸತ್ಯಾಗ್ರಹಗಳು, ಮೈಸೂರು ಚಲೋ ಚಳವಳಿ, ಹೀಗೆ ಮೈಸೂರು ಸಂಸ್ಥಾನ ಗಣತಂತ್ರ ವ್ಯವಸ್ಥೆಯಲ್ಲಿ ಸೇರಿಕೊಳ್ಳುವ ತನಕ ವಿವರಣೆಗಳನ್ನು ನೀಡುತ್ತಾರೆ. ಈ ಕೃತಿಯು ಮಾಹಿತಿಪ್ರಧಾನ ಕೃತಿಯಾದರೂ ಪ್ರಸ್ತುತವಾಗಿ ಹೊಸಹೊಸ ಐಡೆಂಟಿಟಿಗಳ ಮೂಲಕ ಕೃತಿ ರಚಿಸಲು ಸಾಂಪ್ರದಾಯಿಕ(ಮೂಲಭೂತವಾದಿ)ಅಂಶವೂ ವಿಶ್ಲೇಷಣೆಗೆ ಅವಶ್ಯಕ ಎಂದು ಹೇಳಬಹುದು.

ಮೈಸೂರಿನ ಒಡೆಯರ ಚರಿತ್ರೆಗೆ ಸಂಬಂಧಪಟ್ಟಂತೆ ಹೊಸ ಪರಿಪ್ರೇಕ್ಷ್ಯಗಳು ಹುಟ್ಟಿಕೊಳ್ಳ ತೊಡಗಿದ್ದು, ವಿದೇಶಿ ಸಂಶೋಧಕರು ಮೈಸೂರು ಚರಿತ್ರೆಯನ್ನು ಕುರಿತು ಸಂಶೋಧನಾ ಪ್ರಬಂಧಗಳನ್ನು ಬರೆಯುವುದಕ್ಕೆ ಪ್ರಾರಂಭಿಸಿದ ನಂತರ. ಈ ಸಂಶೋಧಕರು ವಸಾಹತು ಕಾಲದ ಚರಿತ್ರೆಗೆ ಸಂಬಂಧಿಸಿದಂತೆ ತೀವ್ರವಾಗಿ ತೊಡಗಿಸಿಕೊಂಡು ಈ ಸಂಶೋಧನಾ

ಕೃತಿಗಳನ್ನು ಬರೆದಿದ್ದಾರೆ. ಈ ವಿದೇಶಿ ಸಂಶೋಧಕರು ಮೈಸೂರಿನ ಚರಿತ್ರೆಗೆ ಸಂಬಂಧಿಸಿದ ವಿಷಯಗಳನ್ನು ಕುರಿತು ಬರೆಯಲು ಇಂಗ್ಲೆಂಡಿನ ದಾಖಲೆಗಳ ನಿರ್ವಹಣಾ ಕೇಂದ್ರಗಳಿಂದ ಆಕರ ಸಾಮಗ್ರಿಗಳನ್ನು ಬಳಸಿಕೊಂಡಿದ್ದಾರೆ. ಹಾಗೆಯೇ ತಮ್ಮ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಕನ್ನಡ ಭಾಷೆಯಲ್ಲಿರುವ ಪ್ರಾಥಮಿಕ ಮತ್ತು ವಿಶೇಷವಾಗಿ ಆನುಷಂಗಿಕ ಆಧಾರಗಳನ್ನೂ ದುಡಿಸಿಕೊಂಡಿದ್ದಾರೆ. ಈ ಹಂತದಲ್ಲಿ ಬಂದ ಕೃತಿಗಳು ಮೈಸೂರು ಸಂಸ್ಥಾನಕ್ಕೆ ಸಂಬಂಧಿಸಿದಂತೆ ಹೊಸ ಪರಿಪ್ರೇಕ್ಷ್ಯಗಳನ್ನು ತೀವ್ರ ಸಂಶೋಧನೆಗಳ ಮುಖಾಂತರ ಕಟ್ಟಿಕೊಟ್ಟವು. ಈ ಕೃತಿಗಳಲ್ಲಿ ಚರ್ಚಿಸಲಾಗಿರುವ ವಿಷಯಗಳ ವಿವರಗಳನ್ನು ನೀಡಿ ಆ ಮೂಲಕ ನಮಗೆಂತಹ ಒಳನೋಟಗಳನ್ನು ನೀಡುತ್ತಾರೆ ಎಂಬುದನ್ನು ಅರಿಯುವ ಪ್ರಯತ್ನ ಮಾಡಲಾಗಿದೆ.[೮೧] ಈ ಕೃತಿಗಳಲ್ಲಿ ಯಾವ ರೀತಿಯ ಆಯಾಮಗಳನ್ನು ನೋಡಬಹುದು ಎಂಬುದನ್ನು ಚರ್ಚಿಸುವುದಾಗಿದೆ.

ಜೇಮ್ಸ್ ಮೇನರ್ ಮತ್ತು ಬಿ.ಹೆಟ್ನೆ ಅವರು ವಿದೇಶಿ ಸಂಶೋಧಕರಾಗಿ ಗುರುತಿಸಿಕೊಂಡವರು. ಇವರು ತಮ್ಮ ಕೃತಿಗಳನ್ನು ಹೊಸ ರೀತಿಯ ಪರಿಪ್ರೇಕ್ಷ್ಯದಲ್ಲಿ ಆಧುನಿಕ ಮೈಸೂರಿನ ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ರಚನೆ ಮಾಡಿದ್ದಾರೆ. ಜೇಮ್ಸ್ ಮೇನರ್ ಅವರು **ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು: ೧೯೧೭–೧೯೫೫**(೧೯೭೮), ಬಿ.ಹೆಟ್ನೆ ಅವರು 'ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು ೧೮೮೧–೧೯೪೭'(೧೯೭೮) ಎಂಬ ಕೃತಿಗಳನ್ನು ಇಲ್ಲಿ ಚರ್ಚಿಸಿ, ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಜೇಮ್ಸ್ ಮೇನರ್ ಅವರು ದಕ್ಷಿಣ ಏಶಿಯಾ ಕುರಿತಂತೆ ಆಸ್ಟ್ರೇಲಿಯಾದ ರಾಷ್ಟ್ರೀಯ ವಿಶ್ವವಿದ್ಯಾಲಯ ತಂದ ಮಾಲಿಕೆಯಲ್ಲಿ **ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು ೧೯೧೭–೧೯೫೫**[೮೨] ಎಂಬ ಕೃತಿಯನ್ನು ೧೯೭೮ರಲ್ಲಿ ಹೊರ ತಂದಿದ್ದಾರೆ. ಈ ಕೃತಿಯು ಆಧುನಿಕ ಮೈಸೂರಿನ ರಾಜಕೀಯ ಸ್ಥಿತ್ಯಂತರದ ಪ್ರಕ್ರಿಯೆಯನ್ನು ವಿಶ್ಲೇಷಿಸುತ್ತಾರೆ. ಬ್ರಿಟಿಷರ ನೇರ ಆಡಳಿತಕ್ರಮದಿಂದ ತಪ್ಪಿಸಿಕೊಳ್ಳಲು ಸಂಸ್ಥಾನದ ಅಭಿವೃದ್ಧಿಗಾಗಿ ಅನೇಕ ಯೋಜನೆಗಳನ್ನು ಕೈಗೊಂಡು, ಸಮರ್ಥ ಆಡಳಿತ ನಡೆಸಿದರೂ ಕೂಡ ರಾಜಕೀಯ ಕಂದರಗಳು ಏರ್ಪಟ್ಟವು. ಈ ಕಂದರಗಳನ್ನು ನಿವಾರಿಸಿಕೊಂಡು ಮೈಸೂರು ರಾಜಕಾರಣಿಗಳು, ರಾಜ್ಯಶಾಹಿಯಿಂದ ರಾಜ್ಯವನ್ನು ವಿಮುಕ್ತಿಗೊಳಿಸಿ ಕಾಂಗ್ರೆಸ್ ಆಡಳಿತಕ್ಕೆ ಒಳಪಡಿಸಿದರು. ಪ್ರಜಾಪ್ರಭುತ್ವ ಬಂದ ನಂತರ ಮೈಸೂರು ಸಂಸ್ಥಾನ ಅದರಡಿಯಲ್ಲಿ ಸೇರಿತು ಎಂಬುದನ್ನು ವಿವರಿಸುತ್ತಾರೆ. ಈ ಕೃತಿಯ ಒಟ್ಟು ಆಶಯ ೧೯೧೭ರಿಂದ ೧೯೫೫ರವರೆಗಿನ ಆಧುನಿಕ ಮೈಸೂರು ಸಂಸ್ಥಾನದ ರಾಜಕೀಯ ಸ್ಥಿತ್ಯಂತರದ ಪ್ರಕ್ರಿಯೆಯನ್ನು ವಿಶ್ಲೇಷಿಸುವುದಾಗಿದೆ.

೧೯೨೦ರ ನಂತರ ಮೈಸೂರು ಸಂಸ್ಥಾನದ ಅಭಿವೃದ್ಧಿಗಾಗಿ ಹೆಚ್ಚಿನ ಮಟ್ಟದಲ್ಲಿ ಯೋಜನೆಗಳನ್ನು ಹಾಕಿಕೊಂಡು ಮಾದರಿ ಸಂಸ್ಥಾನವಾಯಿತು ಎಂಬ ವಿವರಗಳನ್ನು ನೀಡುತ್ತಾರೆ. ಅಲ್ಲದೇ ಸಾಮ್ರಾಜ್ಯಶಾಹಿಗಳು ಯಾವುದೇ ಯೋಜನೆಯನ್ನು ಕೈಗೊಂಡರೂ ಯಾವ ರೀತಿಯ ನಿಯಮವನ್ನು ಸಡಿಲಗೊಳಿಸಿದರು ಎಂಬುದನ್ನು ಚರ್ಚಿಸುತ್ತಾರೆ. ಆದರೆ ದಿವಾನರು ನೇಮಕವಾಗಬೇಕಾದರೆ ಬ್ರಿಟಿಷರ ಅನುಮತಿ ಅವಶ್ಯಕವಾಗಿತ್ತು. ಕೆಲವು ತಿದ್ದುಪಡಿಗಳು ಬ್ರಿಟಿಷರ

ಅನುಕೂಲಕ್ಕೆ ತಕ್ಕಂತೆ ಮಾಡಲಾಗಿದೆ ಎಂದು ತಿಳಿಯಬಹುದು. ಏಕೆಂದರೆ ೧೯೨೩ರ ಸಂವಿಧಾನ ಸುಧಾರಣೆಗಳ ಕರಡುಪ್ರತಿಯಲ್ಲಿ ಮೈಸೂರು ಒಡೆಯರ ಮನೆತನವನ್ನು Royal Family ಎಂದು ನಮೂದಿಸಿದಕ್ಕೆ ರೆಸಿಡೆಂಟ್‌ನು ಆ ಪದದ ಬಳಕೆ ಬೇಡವೆಂದು, ಬೇಕಾದರೆ Ruling Family ಎಂದು ಕರೆದುಕೊಳ್ಳಬಹುದೆಂದು ತಿದ್ದುಪಡಿ ಮಾಡಲಾಯಿತು. ೧೯೨೪ರ ತಿದ್ದುಪಡಿಯು ಬ್ರಿಟಿಷರಿಗೋಸ್ಕರವೇ ಮಾಡಲಾಗಿತ್ತು. ಮಿರ್ಜಾ ಅವರ ರಾಜೀನಾಮೆಯಲ್ಲೂ ಬ್ರಿಟಿಷರ ಕೈವಾಡವಿತ್ತು ಎಂಬುದನ್ನು ತಿಳಿಯಬಹುದು. ದೇಶಿಯ ಹಿತಾಸಕ್ತಿಗಳ ಅಧಿಕಾರಕ್ಕೆ ಕೈಹಾಕದೇ ರಾಜ್ಯ ಮತ್ತು ಗ್ರಾಮ(ಪ್ರಾದೇಶಿಕತೆ)ಗಳ ನಡುವೆ ಕಂದರ ಉಳಿಯುವಂತೆ ಆಡಳಿತ ನಡೆಸಿತು. ಗ್ರಾಮಾಧಿಕಾರಿಗಳು ನೀಡಿದ ಭೂಕಂದಾಯ ವಿವರಗಳನ್ನು ಪ್ರಶ್ನಿಸುವುದಿಲ್ಲ. ಏಕೆಂದರೆ ಅವರು ರೊಚ್ಚಿಗೇಳುವ ಸಂಭವ ಇರುತ್ತಿತ್ತು. ಅಲ್ಲದೇ ಸರ್ಕಾರ ಮತ್ತು ಗ್ರಾಮಾಂತರ ಅಧಿಕಾರೇತರ ಯಜಮಾನರ ನಡುವೆ ಒಂದು ಒಡಂಬಡಿಕೆ ಮಾಡಲಾಗಿತ್ತು ಎಂದು ಎಸ್.ಚಂದ್ರಶೇಖರ್ ಅವರು 'ಆಧುನಿಕ ಕರ್ನಾಟಕದ ಆಂದೋಲನಗಳು' ಎಂಬ ಕೃತಿಯಲ್ಲಿ ಚರ್ಚಿಸಿದ್ದಾರೆ(ಪು.೧೫೬).

ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ ವಿವರಗಳು ಪ್ರಮುಖವಾದವು. ೧೯೨೫-೨೬ರಲ್ಲಿ ಉನ್ನತ ವಿದ್ಯಾಭ್ಯಾಸಕ್ಕೆ ತಗಲುವ ವೆಚ್ಚ ೮ ಲಕ್ಷದಲ್ಲಿಯೇ ನಿಂತಿತು. ಸ್ಕಾಲರ್‌ಶಿಪ್ಪನ್ನು ಕೂಡ ಹೆಚ್ಚು ಮಾಡಲಾಯಿತು. ಆದರೆ ಅನಂತರ ಶಾಲೆಗಳ ಸಂಖ್ಯೆ ಗಣನೀಯವಾಗಿ ಇಳಿಮುಖ ವಾಯಿತು. ಇದು ಹಣದ ಮುಗ್ಗಟ್ಟಿನಿಂಥ ಆದುದಲ್ಲ. ೧೯೧೯ರಲ್ಲಿ ಪಂಚಮರಿಗೆ ಸಾರ್ವಜನಿಕ ಶಾಲೆಗಳಲ್ಲಿ ಪ್ರವೇಶ ನೀಡಿದ್ದರಿಂದ ಎಂದಿದ್ದಾರೆ.

ರಾಜ್ಯದ ರಾಜಕೀಯದಲ್ಲಿ ವೃತ್ತಪತ್ರಿಕೆಗಳ ಪಾತ್ರ ಮತ್ತು ಪತ್ರಿಕೆಗಳ ಬಗ್ಗೆ ಸರ್ಕಾರದ ನೀತಿಯನ್ನು ವಿವರಿಸುತ್ತಾ 'ಭಾಷಾ ಪತ್ರಿಕೆಗಳು ಸರ್ಕಾರದ ವಿಮರ್ಶೆ ಮಾಡುತ್ತಾ ಕಾಂಗ್ರೆಸಿಗೆ ಬೆಂಬಲ ನೀಡುತ್ತಿತ್ತು. ಪತ್ರಿಕೆಗಳಿಗೆ ಮುಕ್ತವಾಗಿರಲು ಸರ್ಕಾರದ ಅನುಮತಿ ಇತ್ತು ಎಂದಿದ್ದಾರೆ (ಪು.೪೯). ಆದರೆ ಇಲ್ಲಿ ಪತ್ರಿಕೆಗಳ ನಿಜಸ್ಥಿತಿಯನ್ನು ಹೇಳಬೇಕೆಂದರೆ ಸರ್ಕಾರ ೧೯೨೬ರ ಸುಮಾರಿಗೆ ೧೨೬ ಪತ್ರಿಕೆಗಳಿಗಿದ್ದ ಅನುಮತಿ ರದ್ದುಪಡಿಸಿ ಅವುಗಳ ಬಾಯಿ ಮುಚ್ಚಿಸಿತ್ತು ಹಾಗೂ ಮೈಸೂರಿನ ಪತ್ರಿಕಾಶಾಸನ ಆಂಗ್ಲ ಭಾರತದ ಶಾಸನಕ್ಕಿಂತ ಹೆಚ್ಚು ಕ್ರೂರವಾಗಿತ್ತು. ಈ ಶಾಸನವನ್ನು, ಬ್ರಿಟಿಷರನ್ನು ಸಂತೃಪ್ತಿಗೊಳಿಸಲು ಮತ್ತು ಪತ್ರಿಕೆಗಳನ್ನು ಮಟ್ಟ ಹಾಕಲು ತಂದ ಶಾಸನ ಎನ್ನಬಹುದು. ಅಲ್ಲದೇ ಪತ್ರಿಕಾ ಮುದ್ರಣಾಲಯಗಳನ್ನು ಮುಟ್ಟುಗೋಲು ಹಾಕಿಕೊಂಡಿತು(ಈ ಪತ್ರಿಕೆ ತಗಡೂರು ರಾಮಚಂದ್ರರಾಯರ ಕಣಿಯರ ಪತ್ರಿಕೆ ಹಾಗೂ ಮುಟ್ಟ ಮುದ್ರಣಾಲಯವೂ ಅವರದೇ). ಇಲ್ಲಿ ಸರ್ಕಾರ ನಾಗರಿಕ ಹಕ್ಕುಗಳ ವಿರೋಧಿಯಾಗಿದ್ದು ದನ್ನು ಗೌಣಗೊಳಿಸಿದೆ ಎಂಬುದನ್ನು ತಿಳಿಯಬಹುದು(ಶಿವರುದ್ರಪ್ಪ ಜಿ.ಎಸ್.(ಸಂ), ಸಾಧನೆ, ಬೆಂಗಳೂರು ವಿಶ್ವವಿದ್ಯಾಲಯ, ತ್ರೈಮಾಸಿಕ ಸಂಪುಟ ೧೦, ಸಂಖ್ಯೆ ೪, ಅಕ್ಟೋಬರ್-ಡಿಸೆಂಬರ್, ೧೯೮೧, ಪು.೧೧-೧೭).

ಸಿ.ಆರ್.ರೆಡ್ಡಿ ಅವರು ಬ್ರಾಹ್ಮಣೇತರ ಚಳವಳಿಯಲ್ಲಿ ಮುಂಚೂಣಿಯಲ್ಲಿದ್ದು, ಹೋರಾಟ ನಡೆಸಿದರು ಎಂಬುದು ಪ್ರಮುಖವಾದುದು(ಪು.೬೦). ಆರ್ಥಿಕ ಹಾಗೂ ಸಾಮಾಜಿಕವಾಗಿ ಪ್ರಬಲವಾಗಿದ್ದ ಜಾತಿಗಳು ರಾಜಕೀಯವನ್ನು ಹೇಗೆ ನಿಯಂತ್ರಿಸುತ್ತಿದ್ದವು ಎನ್ನುವುದನ್ನು

ವಿಶ್ಲೇಷಿಸಿರುವುದು ಕಾಣುತ್ತದೆ. ಬ್ರಾಹ್ಮಣೇತರ ಚಳವಳಿಯು ಪ್ರಾರಂಭವಾಗಿ ಕೆಲವು ವಿನಾಯಿತಿಗಳನ್ನು ನೀಡಲಾಯಿತು. ಆದರೆ ಇಲ್ಲಿ ಬ್ರಾಹ್ಮಣೇತರರಲ್ಲಿಯೇ ವಿಶೇಷವಾಗಿ ಡಾಮಿನೆಂಟ್ ಆಗಿದ್ದ ಗುಂಪುಗಳು ಮತ್ತೆ ಸರಕಾರದಿಂದ ವಿನಾಯಿತಿಗಳನ್ನು ಪಡೆಯಲು ನಡೆಸಿದ ರಾಜಕಾರಣವನ್ನು ವಿವರಿಸುತ್ತಾರೆ. ೧೯೩೦ರ ದಶಕದ ರಾಷ್ಟ್ರೀಯ ಚಳವಳಿಯು ಬ್ರಾಹ್ಮಣ-ಬ್ರಾಹ್ಮಣೇತರ ಗುಂಪುಗಳ ನಡುವೆ ಇದ್ದ ದ್ವೇಷ ಮತ್ತು ವಿರೋಧಗಳನ್ನು ತಾತ್ಕಾಲಿಕವಾಗಿ ಶಮನ ಮಾಡಿತು. ಅಂದರೆ ರಾಷ್ಟ್ರೀಯ ಚಳವಳಿಯು ಈ ಚಳವಳಿಯನ್ನು ಒಂದು ರೀತಿಯ ಸಂಧಾನ ರೀತಿಯಲ್ಲಿ ಕಾರ್ಯಾಚರಣೆ ಮಾಡಿತು. ಹಾಗೆಯೇ ಈ ಸಂದರ್ಭದ ಅನುಕೂಲತೆಗಳನ್ನು ಬ್ರಾಹ್ಮಣ ಸಮುದಾಯ ಸಮರ್ಥವಾಗಿ ತನ್ನ ಅನುಕೂಲಕ್ಕೆ ಬಳಸಿಕೊಂಡಿತು ಎಂಬುದನ್ನು ವಿಶ್ಲೇಷಿಸುತ್ತಾರೆ. ಕೊನೆಗೆ ಈ ಗುಂಪುಗಳು ಪ್ರಜಾಸಂಯುಕ್ತ ಪಕ್ಷದ ಸ್ಥಾಪನೆಯೊಂದಿಗೆ ನಿರ್ಣಾಯಕ ಪ್ರತಿರೋಧವನ್ನು ಪ್ರಕಟಿಸಿ ರಾಷ್ಟ್ರೀಯ ಚಳವಳಿಯಲ್ಲಿ ಸೇರಿಕೊಂಡವು ಎಂಬುದನ್ನು ಚರ್ಚಿಸುತ್ತಾರೆ. ೧೯೩೬-೩೭ರ ಕಾಲಾವಧಿಯ ರಾಜಕೀಯದಲ್ಲಿ ಕೆಲವು ನಾಯಕರು ಮುಖ್ಯ ಭೂಮಿಕೆಯಲ್ಲಿ ಕಾಣಿಸಿಕೊಂಡರು. ಎಸ್.ನಿಜಲಿಂಗಪ್ಪ, ಟಿ. ಸಿದ್ಧಲಿಂಗಯ್ಯ ಮೊದಲಾದವರು ಮೈಸೂರು ಕಾಂಗ್ರೆಸ್ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದನ್ನು ತಿಳಿಸಿದ್ದಾರೆ(ಪು.೭೩-೧೦೪). ೧೯೩೭ರಿಂದ ೧೯೪೨ರವರೆಗಿನ ರಾಷ್ಟ್ರೀಯ ಹೋರಾಟ, ಗಾಂಧೀಜಿಯ ಪ್ರಭಾವ, ವಿಧುರಾಶ್ವತ್ಥ ಘಟನೆ ಇನ್ನಿತರ ಅಂಶಗಳನ್ನು ಚರ್ಚಿಸಿದ್ದಾರೆ. ೧೯೪೭ರವರೆಗೆ ಆದಂತಹ ರಾಷ್ಟ್ರೀಯ ಹೋರಾಟ ಮತ್ತು ಸ್ವಾತಂತ್ರ್ಯ ದೊರಕಿದ ರೀತಿಯ ಅಂಶಗಳನ್ನು ತಿಳಿಸಿದ್ದಾರೆ. ಅನಂತರ ಮೈಸೂರು ಚಲೋ ಚಳುವಳಿಯು ಪ್ರಾರಂಭವಾಯಿತು. ಕೊನೆಗೆ ಪ್ರಜಾಪ್ರಭುತ್ವದ ಅಡಿಯಲ್ಲಿ ವಿಲೀನವಾಗುವ ಅಂಶಗಳನ್ನು ತಿಳಿಸಿರುವುದನ್ನು ನೋಡಬಹುದು(ಪು.೧೬೨). ೧೯೪೭ರಿಂದ ೧೯೫೫ರವರೆಗೆ ನಡೆದ ಚುನಾವಣೆಗಳು, ಸರ್ಕಾರದ ರಚನೆ, ಸಂವಿಧಾನದ ಕರಡುಪ್ರತಿ ಸಿದ್ಧಪಡಿಸುವಿಕೆ, ಮಂತ್ರಿಗಳ ಅಧಿಕಾರ ಸ್ವೀಕಾರ ಮೊದಲಾದ ಅಂಶಗಳನ್ನು ಒಟ್ಟಾರೆಯಾಗಿ ವಿಶ್ಲೇಷಿಸುತ್ತಾ ಹೋಗುತ್ತಾರೆ. ಒಟ್ಟಿನಲ್ಲಿ ಈ ಕೃತಿಯು ಮೈಸೂರಿನ ಸಾಮಾಜಿಕ ಸಂರಚನೆಯು ರಾಜಕೀಯ ಆಂದೋಲನದ ಸಂವೇದನೆಗಳನ್ನು ನಿರ್ಧರಿಸಿದ ಮಹತ್ವದ ಅಂಶವನ್ನು ಅನಾವರಣಗೊಳಿಸುತ್ತದೆ. ಸಾಮಾಜಿಕ ಅಸ್ಮಿತೆಯ ನೆಲೆಯನ್ನು ರಾಜಕೀಯದ ಬದಲಾವಣೆಯ ಹಿನ್ನೆಲೆಯಲ್ಲಿ ನೋಡಿರುವುದನ್ನು ಗಮನಿಸಬಹುದು.

ಸರ್ಕಾರಿ ದಾಖಲೆಗಳನ್ನು ಮತ್ತು ವೃತ್ತಪತ್ರಿಕೆ ವರದಿಗಳನ್ನು ಸಮಗ್ರವಾಗಿ ಬಳಸಿಕೊಂಡು ಈ ಕೃತಿಯನ್ನು ರಚಿಸಿದ್ದಾರೆ. ಇತಿಹಾಸ ಸಂಶೋಧನೆಯಲ್ಲಿ ಮೌಖಿಕ ಚರಿತ್ರೆ(oral History) ಸಂಶೋಧನಾಕ್ರಮವನ್ನು ಕರ್ನಾಟಕ ಇತಿಹಾಸ ಸಂಶೋಧನೆಯಲ್ಲಿ ತಂದವರಲ್ಲಿ ಪ್ರಾಯಶಃ ಮೇನರ್ ಮೊದಲಿಗರು ಎಂದು ಎಸ್.ಚಂದ್ರಶೇಖರ್ ಅವರು ತಿಳಿಸಿದ್ದಾರೆ(ಆಧುನಿಕ ಕರ್ನಾಟಕದ ಆಂದೋಲನಗಳು, ಪು.೧೫೮). ಆದರೆ ಅಡಿಟಿಪ್ಪಣಿಗಳಿಂದ ತಿಳಿದುಬರುವಂತೆ ಸಂದರ್ಶಿಸಿದ ಬಹುತೇಕ ವ್ಯಕ್ತಿಗಳು ಆಗಿನ ಸರ್ಕಾರದ ವಿರೋಧಿಗಳು. ಬಹುಮಂದಿ ಸರ್ಕಾರದಿಂದ ತೊಂದರೆಗೊಳಗಾಗಿ ಮತ್ತು ಸ್ವಾತಂತ್ರ್ಯ ಹೋರಾಟಗಾರರಾಗಿ ಜೈಲಿಗೆ ಹೋದವರು. ಇವರು ಕೊಟ್ಟ ಮಾಹಿತಿ ನಿಖರವಾದದ್ದೇ ಅಥವಾ ಇಲ್ಲವೇ ಎನ್ನುವ ಚರ್ಚೆ ಮಾಡದೇ ಆ

ಮಾಹಿತಿಯನ್ನು ಸಮಕಾಲೀನ ಆಕರಗಳೊಂದಿಗೆ ಸಮರ್ಪಕವಾಗಿ ಮರುಪರೀಕ್ಷಿಸಿ, ಲೇಖಕರು ಸಮಕಾಲೀನ ಆಕರಗಳ ಬಗೆಗೆ ಸೂಕ್ತ ಅಭಿಪ್ರಾಯ ಕೊಟ್ಟಿಲ್ಲ ಎನ್ನಬೇಕಾಗುತ್ತದೆ. ಅಂದರೆ ವಿಷಯದ ಮಾಹಿತಿಯು ಗ್ರಹಿಕೆಯ ಹಿಂದೆ ಇದೆ.

ಬಿ.ಹೆಟ್ನೆ ಅವರ **ದಿ ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೂಲ್ ಇನ್ ಮೈಸೂರ್ ೧೮೮೧–೧೯೪೭**[೨೩] ಕೃತಿಯು ೧೯೭೮ರಲ್ಲಿ ಪ್ರಕಟವಾಯಿತು. ೧೮೮೧ರಿಂದ ೧೯೪೭ರ ನಡುವಿನ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಾದ ಆರ್ಥಿಕ ಮತ್ತು ರಾಜಕೀಯ ಬದಲಾವಣೆಯ ಪ್ರಕ್ರಿಯೆಯ ಅನಾವರಣವೇ ಈ ಕೃತಿಯ ಪ್ರಮುಖ ಆಶಯ. ೧೮೮೧ ರಿಂದ ೧೯೪೭ರ ಕಾಲಾವಧಿಯಲ್ಲಿ ಮೈಸೂರು ಸಂಸ್ಥಾನದ ಒಳಾಡಳಿತದಲ್ಲಿನ ಸ್ವಾಯತ್ತತೆ ಹೇಗೆ ಬ್ರಿಟಿಷರ ಪರೋಕ್ಷ ಆಡಳಿತ(Indirect Rule)ದಿಂದ ಮಿತಿಗೊಂಡಿತ್ತು ಅಥವಾ ಕೆಲವು ವೇಳೆ ನಿಷ್ಕ್ರಿಯಗೊಂಡಿತ್ತು ಎಂಬುದನ್ನು ಎಸ್.ಚಂದ್ರಶೇಖರ್ ಅವರು ತಿಳಿಸಿದ್ದಾರೆ(ಆಧುನಿಕ ಕರ್ನಾಟಕ ಆಂದೋಲನಗಳು, ಪು.೧೫೫).

ಮೈಸೂರು ಸಂಸ್ಥಾನ ಎಲ್ಲಾ ರಾಜಕೀಯ, ಆರ್ಥಿಕ ಬೆಳವಣಿಗೆಗಳೂ ಬ್ರಿಟಿಷರಿಂದಲೇ ಪರೋಕ್ಷ ನಿಯಂತ್ರಿತಗೊಂಡಿದ್ದವೆಂದು ಸಾಬೀತುಪಡಿಸುವ ಭರದಲ್ಲಿ ಆಂತರಿಕ ಬೆಳವಣಿಗೆಗಳು ಯಾವುದೇ ಪ್ರಭಾವ ಬೀರಲಿಲ್ಲವೇ ಎನ್ನುವ ಪ್ರಶ್ನೆ ಏಳಲು ಅಲ್ಲಲ್ಲಿ ಸಂಶೋಧಕರು ಕಾರಣ ರಾಗುತ್ತಾರೆ. ಅದರಲ್ಲಿ ೧೮೮೧ರಲ್ಲಿ ಆದ ಆಂಗ್ಲೋ–ಮೈಸೂರು ಒಪ್ಪಂದದಲ್ಲಿ ಈ ರೀತಿ ಬ್ರಿಟಿಷರು ರಾಜ್ಯವನ್ನು ಕಸಿದುಕೊಳ್ಳಲು ಅವಕಾಶವಿತ್ತು. ಅನಂತರ ಒಡೆಯರಿಗೆ ಅಧಿಕಾರದ ಹಸ್ತಾಂತರವು ಒಪ್ಪಿಗೆ ಒಪ್ಪಂದದ ಮೇರೆಗೆ ನಡೆಯಿತು. ಮೈಸೂರು ರಾಜ್ಯದ ಮೇಲೆ ಬ್ರಿಟಿಷರ ನೇರ ಆಡಳಿತದಿಂದಾದ ಮುಖ್ಯ ಪ್ರಭಾವವೆಂದರೆ ಆಡಳಿತವನ್ನು ಸಮರ್ಥವಾಗಿ ನಡೆಸಿ ಶಕ್ತಗೊಳಿಸಿದ್ದು ಹಾಗೂ ವಿದ್ಯಾಭ್ಯಾಸ ಕ್ರಮವನ್ನು ಜಾತ್ಯತೀತಗೊಳಿಸಿದ್ದು, ಕೇವಲ ಮೇಲ್ವರ್ಗಗಳ ಸ್ವತ್ತಾಗಿದ್ದ ವಿದ್ಯೆ, ಮಧ್ಯಮ ವರ್ಗಗಳಿಗೂ ದೊರೆಯುವಂತಾಯಿತು. ಈ ರೀತಿಯ ಬದಲಾವಣೆ ಕೆಲವು ಗ್ರಾಮ ಕೇಂದ್ರಗಳಲ್ಲಿ ಶಾಲೆಗಳನ್ನು ತೆರೆಯುವ ಮೂಲಕ ಸಾಧ್ಯವಾಯಿತು. ರಾಜ್ಯಾಡಳಿತ ಮತ್ತು ಆರ್ಥಿಕ ಅಭಿವೃದ್ಧಿಯನ್ನು ವಿವಿಧ ಸ್ತರಗಳಲ್ಲಿ ಯೋಜನೆ ಕೈಗೊಂಡಿರುವುದನ್ನು ಕಾಣಬಹುದು. ಶೇಷಾದ್ರಿ ಅಯ್ಯರ್, ವಿಶ್ವೇಶ್ವರಯ್ಯ, ಕಾಂತರಾಜ ಅರಸ್ ಮೊದಲಾದವರ ರಾಜಕೀಯ ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಗಳನ್ನು ಚರ್ಚಿಸುತ್ತಾರೆ(ಪು.೪೩–೬೪). ಆದರೆ ಎಲ್ಲಾ ರಾಜಕೀಯ ಮತ್ತು ಆರ್ಥಿಕ ಬೆಳವಣಿಗೆಗಳೂ ಕೂಡ ಬ್ರಿಟಿಷರ ಪರೋಕ್ಷ ನಿಯಂತ್ರಣದಲ್ಲಿ ಇದ್ದವು ಎಂಬುದು ತಿಳಿಯುತ್ತದೆ. ದಿವಾನರಾದ ಪಿ.ಎನ್.ಕೃಷ್ಣಮೂರ್ತಿ, ಸರ್ ಎಂ.ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಎಲ್ಲರ ರಾಜೀನಾಮೆಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಬ್ರಿಟಿಷರ ಕೈವಾಡದಿಂದಲೇ ಆದವು ಎಂಬುದು ಕಂಡುಬರುತ್ತದೆ. ಬ್ರಿಟಿಷರ ಆರ್ಥಿಕ ಬಂಡವಾಳಶಾಹಿಯು ಮುಂದುವರಿದಂತೆ ರಾಜಕೀಯವಾಗಿಯೂ ಪ್ರಬಲವಾಗುತ್ತಾ ಹೋದುದನ್ನು ವಿಶ್ಲೇಷಿಸುತ್ತಾರೆ. ಮೈಸೂರು ಸಂಸ್ಥಾನವು ರಾಜಕೀಯ ಮತ್ತು ಆರ್ಥಿಕ ಸ್ವಾಯತ್ತತೆಯನ್ನು ಪಡೆಯಲು ಹೋರಾಟ ನಡೆಸಿತು. ಕೊನೆಯಲ್ಲಿ ಮಿಶ್ರ ಆರ್ಥಿಕವ್ಯವಸ್ಥೆ ರೂಪುಗೊಂಡಿತು ಎಂಬುದು ಮುಖ್ಯವಾದ ಸಂಗತಿ.

ಬ್ರಾಹ್ಮಣ, ಬ್ರಾಹ್ಮಣೇತರರು ಮತ್ತು ಕಾಂಗ್ರೆಸ್ ಆಡಳಿತದಲ್ಲಿ ಯಾವ ರೀತಿಯ ರಾಜಕೀಯ ಬದಲಾವಣೆಗಳಿದ್ದವು ಎಂಬುದನ್ನು ಚರ್ಚಿಸುತ್ತಾರೆ(ಪು.೧೩೧-೧೫೭). 'ಮೊಬಿಲೈಸೇಷನ್' ಎನ್ನುವ ಪ್ರಕ್ರಿಯೆಯು ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ನೆಲೆಗಳಲ್ಲಿ ಪ್ರಕಟಗೊಂಡು ಅನೇಕ ಸ್ಥಿತ್ಯಂತರಗಳನ್ನು ಹುಟ್ಟುಹಾಕಿತು ಎನ್ನುವ ವಿಶ್ಲೇಷಣೆಯನ್ನು ಈ ಕೃತಿಯು ಪರಿಚಯಿಸುತ್ತದೆ. ಬ್ರಿಟಿಷ್ ಆಡಳಿತವು ಮತ್ತು ರಾಜ್ಯಶಾಹಿವ್ಯವಸ್ಥೆ ಮೈಸೂರಿನಲ್ಲಿ ಕಾಂಗ್ರೆಸ್ ವಿರುದ್ಧ ಬ್ರಾಹ್ಮಣೇತರ ಚಳವಳಿಗೆ ಬೆಂಬಲವನ್ನು ಪರೋಕ್ಷವಾಗಿ ನೀಡಿದ್ದು ರಾಜಕೀಯ ಕಾರಣಕ್ಕೆ ಎಂಬುದನ್ನು ವಿಶ್ಲೇಷಿಸುತ್ತಾರೆ. ಏಕೆಂದರೆ ಕಾಂಗ್ರೆಸ್ಸನ್ನು ಬ್ರಾಹ್ಮಣರ ಜೊತೆ ಸಮೀಕರಿಸಲಾಗಿತ್ತು. ಅಲ್ಲದೇ ಬ್ರಾಹ್ಮಣ ವರ್ಗವು ಬ್ರಾಹ್ಮಣೇತರ ಚಳವಳಿಯ ವಿರುದ್ಧ ದಲಿತ ಸಂಘಟನೆಯನ್ನು ಬಳಸಿಕೊಳ್ಳುವ ಪ್ರಯತ್ನ ಮಾಡಿತು. ಆದರೆ ಈ ಮೈತ್ರಿಕೂಟ ಪ್ರಾರಂಭದಿಂದಲೇ ಕಳಚಿಕೊಂಡಿತು. ಗಾಂಧೀಜಿ ಅವರು ಈ ಸಂಸ್ಥಾನದ ಕಾಂಗ್ರೆಸ್ಸಿಗರ ದೂರುಗಳಿಗೆ ಹೆಚ್ಚಿನ ಮಾನ್ಯತೆ ಕೊಡುತ್ತಿರಲಿಲ್ಲ. ಮೇಲಾಗಿ ಮೈಸೂರು ಸಂಸ್ಥಾನ ತನ್ನ ಕನಸಿನ 'ರಾಮರಾಜ್ಯ'ವನ್ನು ಹೋಲುತ್ತದೆ ಎಂದು ಬಹಿರಂಗವಾಗಿ ಹೇಳಿಕೆಯನ್ನು ಕೊಟ್ಟರು. ರಾಜ್ಯ ಕಾಂಗ್ರೆಸ್ಸಿಗರಿಗೆ ಈ ಬಗ್ಗೆ ಹೆಚ್ಚಿನ ಅಸಮಾಧಾನ ಇದ್ದರೂ ಅದನ್ನು ಬಹಿರಂಗಗೊಳಿಸಲಾಗದ ಸಂದಿಗ್ಧತೆಯಲ್ಲಿ ತೊಳಲಾಡಬೇಕಾಯಿತು. ಏಕೆಂದರೆ ಮೈಸೂರು ಸರ್ಕಾರ ದಲಿತೋದ್ಧಾರ ಕಾರ್ಯಕ್ರಮ, ಖಾದಿ ಗ್ರಾಮೋದ್ಯೋಗ ಕಾರ್ಯ, ಸ್ವದೇಶಿ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರಿಂದ ಈ ಕಾಂಗ್ರೆಸ್ಸಿನ ಬೇಡಿಕೆಗಳಿಗೆ ಗಾಂಧೀಜಿ ಅವರು ಗಮನ ಕೊಡಲಿಲ್ಲ(ಪು.೧೮೬).

ಮೈಸೂರಿನ ಆರ್ಥಿಕ ಅಭಿವೃದ್ಧಿಯಲ್ಲಿ ಯಾವ ರೀತಿಯ ಮಿಶ್ರ ಆರ್ಥಿಕ ನೀತಿ ಇದ್ದಿತು ಎಂಬುದನ್ನು ವಿಶ್ಲೇಷಣೆ ಮಾಡಿರುವುದು ಮುಖ್ಯವಾದ ಸಂಗತಿ(ಪು.೨೨೩-೩೧೫). ಆರ್ಥಿಕ ನೀತಿಯ ಯೋಜನೆಗಳ ಅನುಷ್ಠಾನವನ್ನು ಜಾರಿಗೆ ತಂದರು. ಕಾರ್ಮಿಕ ಚಳವಳಿಯು ಕಾಂಗ್ರೆಸ್‌ನ ಹೊರಗಿನಿಂದ ಬಂದ ನಾಯಕರ ನೇತೃತ್ವದಲ್ಲಿ ರೂಪುಗೊಂಡಿತು. ಈ ಸಂಬಂಧಗಳು ಕಾಂಗ್ರೆಸ್ ಕಾರ್ಯಕ್ರಮಗಳು ಯಶಸ್ವಿಯಾಗಲು ಹೇಗೆ ನೆರವಾದವು ಎಂಬುದನ್ನು ವಿಶ್ಲೇಷಿಸಲಾಗಿದೆ. ಕಾಫಿ ಮತ್ತು ಹತ್ತಿ ಪ್ಲಾಂಟೇಷನ್ನನ್ನು ಪ್ರಾರಂಭಿಸಿದರು. ಚಿನ್ನದ ಗಣಿಗಳಿಗೆ ಕಾರ್ಮಿಕರ ನೇಮಕ ಮಾಡಿ ಸೌಲಭ್ಯಗಳನ್ನು ಒದಗಿಸಿದರು. ಮೊದಲ ಬಾರಿಗೆ ಸರ್ ಎಂ.ವಿಶ್ವೇಶ್ವರಯ್ಯ ಅವರು ಮಿಶ್ರ ಆರ್ಥಿಕ ನೀತಿಯನ್ನು ಜಾರಿಗೆ ತಂದರು. ಆ ಮೂಲಕ ಅಭಿವೃದ್ಧಿ ಸಾಧಿಸಿ ಮಾದರಿ ಸಂಸ್ಥಾನವಾಗಿ ಜನಪ್ರಿಯವಾಯಿತು ಎನ್ನುತ್ತಾರೆ.

ಬ್ರಿಟಿಷ್ ವಸಾಹತು ಆಡಳಿತ ಇಲ್ಲಿಯ ಆಡಳಿತವನ್ನು ತನಗೆ ಅನುಕೂಲಕರವಾದ ರೀತಿಯಲ್ಲಿ ಮಾರ್ಪಡಿಸಿದ್ದು, ವಸಾಹತು ರಾಜಕಾರಣದ ಮೂಲ ಉದ್ದೇಶ ತನ್ನ ಬಂಡವಾಳವನ್ನು ಹೂಡುವುದು. ತನ್ನವರಿಗೆ ಇಲ್ಲಿಯ ಸಂಪತ್ತಿನ ಮೇಲೆ ಹತೋಟಿ ಸಾಧಿಸಲು ಅನುವು ಮಾಡಿ ಕೊಡುವುದು. ಅಭಿವೃದ್ಧಿ ಯೋಜನೆಗಳು ಕೂಡ ಆರ್ಥಿಕ ಸಂಪನ್ಮೂಲಗಳನ್ನು ಪಡೆಯಲು ಹೂಡಿದ ಉಪಾಯ. ಮೈಸೂರಿನ ಸಂಪತ್ತನ್ನು ಹೇಗೆ ಬೇರೆಯವರು ಅನುಭವಿಸಿ ಮತ್ತು ಆ ಮೂಲಕ ಮೈಸೂರು ಸಂಸ್ಥಾನ ಹೇಗೆ ಬರಿದಾಗುತ್ತ ಸಾಗಿತು ಎಂಬ ವಿಷಯಗಳನ್ನು ವಿಶ್ಲೇಷಿಸಲಾಗಿದೆ.

ಜೇಮ್ಸ್ ಮೇನರ್ ಮತ್ತು ಬಿ.ಹೆಟ್ನೆ ಅವರು ವಸಾಹತು ಕಾಲದ ಚರಿತ್ರೆಗೆ ಸಂಬಂಧಿಸಿದಂತೆ ತೀವ್ರವಾಗಿ ತೊಡಗಿಸಿಕೊಂಡು ತಮ್ಮ ಸಂಶೋಧನ ಕೃತಿಗಳನ್ನು ರಚಿಸಿದ್ದರ ಮೂಲಕ ಅವರ ಐಡಿಯಾಲಜಿಯನ್ನು ತಿಳಿಯಬಹುದು. ಇವರ ಕೃತಿಗಳ ಐಡಿಯಾಲಜಿಕಲ್ ಡಿಫರೆನ್ಸ ಮತ್ತು ಸೆಂಟ್ರಲ್ ಆರ್ಗ್ಯುಮೆಂಟ್ ಏನು ಎಂಬುದನ್ನು ಗಮನಿಸಿದಾಗ ಜೇಮ್ಸ್ ಮೇನರ್ ಅವರು ರಾಜಕೀಯ ಸ್ಥಿತ್ಯಂತರಗಳನ್ನು ವಿಶ್ಲೇಷಿಸಿದರೆ, ಬಿ.ಹೆಟ್ನೆ ಅವರು ಬ್ರಿಟಿಷರ ಪರೋಕ್ಷ ಆಡಳಿತದಲ್ಲಿ ರಾಜಕೀಯ ಮತ್ತು ಆರ್ಥಿಕ ಬದಲಾವಣೆಗಳನ್ನು ವಿಶ್ಲೇಷಿಸುತ್ತಾರೆ. ೧೯೭೦ ಮತ್ತು ೧೯೮೦ರ ದಶಕವು ಚಳವಳಿಗಳ ಕಾಲ. ಸಾಮಾಜಿಕ ಬದಲಾವಣೆಯ ಕಾಲ. ಆದುದರಿಂದ ಈ ಕೃತಿಗಳು ೧೯೭೮ರ ದಶಕದಲ್ಲಿ ಹೊರಬಂದು ಸಾಮಾಜಿಕ ಚರಿತ್ರೆಗೆ ವಿಶೇಷವಾಗಿ ಮುಖಾಮುಖಿ ಯಾಗಿವೆ. ಸಮಾಜದ ಸಾಂಸ್ಕೃತಿಕ ಬದುಕಿನ ವಿವಿಧ ಮಜಲುಗಳನ್ನು ತೆರೆದಿಡುವ ಪ್ರಯತ್ನದಲ್ಲಿ ಬಹುಮಟ್ಟಿಗೆ ಯಶಸ್ಸನ್ನು ನೋಡಬಹುದು.

ಷೇಕ್ ಅಲಿ ಬಿ. ಅವರು **ಟಿಪ್ಪು ಸುಲ್ತಾನ್**[೮೪] ಎಂಬ ಕೃತಿಯನ್ನು ೧೯೭೯ರಲ್ಲಿ ಹೊರ ತಂದಿದ್ದಾರೆ(ಮರುಮುದ್ರಣ, ೨೦೧೧). ಈ ಕೃತಿಯು ಟಿಪ್ಪು ಸುಲ್ತಾನನ ಆಡಳಿತವನ್ನು ಅನಾವರಣಗೊಳಿಸುತ್ತದೆ. ಮೈಸೂರು ಒಡೆಯರ ಚರಿತ್ರೆಯಲ್ಲಿ ಅತ್ಯಂತ ತೀವ್ರವಾಗಿ ಚರಿತ್ರೆಕಾರರನ್ನು 'ಎಂಗೇಜ್' ಮಾಡಿರುವ ಚಾರಿತ್ರಿಕ ವ್ಯಕ್ತಿಯೆಂದರೆ ಟಿಪ್ಪುಸುಲ್ತಾನ್. ಈ ಕೃತಿಯಲ್ಲಿ ಬರಹಗಾರರು ಟಿಪ್ಪು ಸುಲ್ತಾನನ ಆಡಳಿತದ ವಿಚಾರ ಹೆಚ್ಚಾಗಿ ಚರ್ಚಿಸುತ್ತಾರೆ. ಸೈನಿಕ ಹುದ್ದೆಯ ಮೂಲಕ ಹಂತ ಹಂತವಾಗಿ ಮೈಸೂರು ಒಡೆಯರ ಪೂರ್ಣ ಅಧಿಕಾರವನ್ನು ಪಡೆದ ಹೈದರಾಲಿಯ ಕೆಲವು ವಿಚಾರಗಳನ್ನು ವಿವರಿಸುತ್ತಾ ಹೋಗುತ್ತಾರೆ. ಬ್ರಿಟಿಷರ ವಿರುದ್ಧ ನಡೆದ ಮೊದಲನೆಯ ಮತ್ತು ಎರಡನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಹೈದರಾಲಿಯ ಹೋರಾಟದ ವಿಚಾರಗಳು ಮುಖ್ಯವಾಗಿವೆ. ಅನಂತರ ಟಿಪ್ಪು-ಬ್ರಿಟಿಷರೊಂದಿಗೆ ಒಪ್ಪಂದದ ವಿಚಾರಗಳನ್ನು ತಿಳಿಸುತ್ತಾ ಟಿಪ್ಪು ಹೋರಾಟದ ಅಂಶಗಳನ್ನು ವಿವರಿಸಿರುತ್ತಾರೆ. ಇಲ್ಲಿ ಮುಖ್ಯವಾಗಿ ಟಿಪ್ಪುವು ತನ್ನ ಧ್ಯೇಯವನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರೂ ಸಫಲವಾಗಲಿಲ್ಲ. ಆಡಳಿತವನ್ನು ವಿಭಾಗ ಮಾಡಲಾಗಿದ್ದು, ಟಿಪ್ಪು ಮತಾಂಧ ಆಗಿರಲಿಲ್ಲ ಎಂಬುದಕ್ಕೆ ನಿದರ್ಶನಗಳನ್ನು ವಿವರಿಸಿದ್ದಾರೆ (ಪು.೭೧). ಅವನು ವಾಣಿಜ್ಯಕ್ಷೇತ್ರದಲ್ಲಿ ಜಾರಿಗೆ ತಂದ ನಾಣ್ಯ, ಅಳತೆ, ತೂಕ, ಹಣಕಾಸು, ಕಂದಾಯ, ನ್ಯಾಯ, ಸೇನೆ, ನೌಕಾದಳ, ನೈತಿಕತೆಗಳ ಬಗ್ಗೆ ತಂದ ಸುಧಾರಣೆಗಳು ಅವನಿಗೆ ಇತಿಹಾಸದಲ್ಲಿ ಅಗ್ರಸ್ಥಾನವನ್ನು ಗಳಿಸಿಕೊಟ್ಟವು ಎನ್ನುತ್ತಾರೆ. ಕೊಡಗಿನಲ್ಲಿದ್ದ ಹಿಂದೂಗಳನ್ನೂ, ಮಲಬಾರಿನ ನಾಯರ್‌ಗಳನ್ನು ರಾಜಕೀಯ ಕಾರಣಗಳಿಗೋಸ್ಕರ ಸದೆಬಡಿದನು ಎಂಬುದು ಮುಖ್ಯ ಎಂದಿದ್ದಾರೆ. ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂಬ ನಿಲುವನ್ನು ಹೊಂದಿ, ಸಾಮ್ರಾಜ್ಯಶಾಹಿ ಶಕ್ತಿಯನ್ನು ವಿರೋಧಿಸುವ ನೆಲೆಗಳನ್ನು ಕಟ್ಟಿದವನು ಎಂದು ಚಿತ್ರಿಸುತ್ತಾ ಅಪ್ರತಿಮ ನಾಯಕ ಎಂದಿದ್ದಾರೆ.

ಸೂರ್ಯನಾಥ ಯು. ಕಾಮತ್ ಅವರ **ಎ ಕನ್‌ಸೈಸ್ ಹಿಸ್ಟರಿ ಆಫ್ ಕರ್ನಾಟಕ** (೧೯೮೦)[೮೫] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಕರ್ನಾಟಕದ ಚರಿತ್ರೆಯ ಒಂದು ಭಾಗವಾಗಿ ಕುರಿತು ವಿವರಿಸಿದ್ದಾರೆ. ಈ

ಕೃತಿಯಲ್ಲಿ ಇತಿಹಾಸಪೂರ್ವಯುಗದಿಂದ ಆರಂಭಗೊಂಡು ಕರ್ನಾಟಕ ಏಕೀಕರಣದವರೆಗಿನ ವಿಚಾರಗಳನ್ನು ತಿಳಿಸುತ್ತಾರೆ. ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಒಡೆಯರ ರಾಜ್ಯ ಸ್ಥಾಪನೆ, ರಾಜ ಒಡೆಯರು, ಚಿಕ್ಕದೇವರಾಜ ಒಡೆಯರ ಆಳ್ವಿಕೆ, ದಳವಾಯಿಗಳ ಅಧಿಕಾರ, ಮರಾಠರ ಯುದ್ಧಗಳು, ಆಂಗ್ಲರು ಮತ್ತು ಫ್ರೆಂಚರ ಹೋರಾಟಗಳು, ಮೊಘಲರ ಅವನತಿ ಮುಂತಾದ ಸಂಘರ್ಷಗಳ ನೆಲೆಯಲ್ಲಿ ಹೈದರ್‌ನು ಹಂತಹಂತವಾಗಿ ಮೈಸೂರಿನ ಇಡೀ ಆಡಳಿತವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಅನಂತರ ಟಿಪ್ಪುವನ್ನು ಹೇಗೆ ರಾಜಕೀಯವಾಗಿ ಬ್ರಿಟಿಷರು ಬಳಸಿಕೊಂಡರು ಹಾಗೂ ಟಿಪ್ಪುವಿನ ಯುದ್ಧಗಳಲ್ಲಿ ಬ್ರಿಟಿಷರು ತನ್ನ ಉಪಯೋಗ ಪಡೆದುಕೊಂಡ ಬಗೆಯನ್ನು ತಿಳಿಸುವುದು ಸೂಕ್ತ ಎನಿಸುತ್ತದೆ. ಟಿಪ್ಪುವಿನ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಪುನಃ ಅಧಿಕಾರ, ನಗರದಂಗೆಯಿಂದ ಕಮೀಷನರ್‌ಗಳ ಆಳ್ವಿಕೆ ಪ್ರಾರಂಭ, ಕಮೀಷನರ್‌ಗಳ ಆಳ್ವಿಕೆಯಿಂದ ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನವಾಗಿ ರೂಪುಗೊಂಡಿತು ಎಂಬ ವಿಚಾರಗಳನ್ನು ಇಲ್ಲಿ ತಿಳಿಸಿದ್ದಾರೆ. ಕ್ಯಾಂಪ್‌ಬೆಲ್ಲರ ಸಹಾಯದಿಂದ ೧೦ನೇ ಚಾಮರಾಜ ಒಡೆಯರಿಗೆ ಅಧಿಕಾರ, ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತ, ಕೈಗೊಂಡ ಅಭಿವೃದ್ಧಿ ಕಾರ್ಯಗಳು, ದಿವಾನರು ಕೈಗೊಂಡ ಆರ್ಥಿಕ ಪ್ರಗತಿ, ಪ್ರಜಾಪ್ರತಿನಿಧಿ ಸಭೆ ಸ್ಥಾಪನೆ, ಕೈಗಾರಿಕಾ ಯೋಜನೆಗಳು, ನೀರಾವರಿ, ರೈಲ್ವೆ, ಶಿಕ್ಷಣ, ಕ್ಷಾಮಗಳು, ಮಹಾಯುದ್ಧದ ಪರಿಣಾಮ, ಸ್ವಾತಂತ್ರ್ಯ ಹೋರಾಟದ ತೀವ್ರತೆ, ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಅರಮನೆ ಸತ್ಯಾಗ್ರಹ ಹಿಂದುಳಿದ ವರ್ಗಗಳ ಚಳವಳಿಯಲ್ಲಿ ಸರ್ಕಾರದ ಪಾತ್ರ ಇವೇ ಮೊದಲಾದ ವಿಚಾರಗಳನ್ನು ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ವಿವರಣೆ ರೂಪದಲ್ಲಿ ಕಟ್ಟಿಕೊಡುತ್ತಾರೆ.

ಮುತ್ತಣ್ಣ ಐ.ಎಂ. ಅವರ **ಟಿಪ್ಪು ಎಕ್‌ರೇಯ್ಡ್**(೧೯೮೦)[೮೬] ಎಂಬ ಕೃತಿಯಲ್ಲಿ ಟಿಪ್ಪುವಿನ ಬಗೆಗೆ ಹೇಳಿರುವ ವಿಚಾರಗಳನ್ನು ಗಮನಿಸಬಹುದು. ಟಿಪ್ಪು ಫ್ರೆಂಚರಿಗೆ ಪತ್ರ ಬರೆದು ಅವರನ್ನು ಹಿಂದೂಸ್ತಾನಕ್ಕೆ ಆಹ್ವಾನಿಸಿದ್ದು ದೇಶದ್ರೋಹ ಎಂದಿದ್ದಾರೆ. ಬ್ರಿಟಿಷರನ್ನು ಓಡಿಸಲು ನೀವು ಸಹಾಯ ನೀಡಿರಿ ಎಂದು ಪತ್ರ ಬರೆದಿದ್ದು ಕೆಲವರು ಇದನ್ನು 'ಸ್ವಾತಂತ್ರ್ಯ ಯುದ್ಧದ' ಮೊದಲಿಗ ಟಿಪ್ಪು ಎಂದು ಅರ್ಥೈಸಿದ್ದಾರೆ. ಇದು 'ದೇಶಪ್ರೇಮ' ಎಂದು ಕೆಲ ಲೇಖಕರು ಹೇಳುತ್ತಾರೆ. ಟಿಪ್ಪು ತನ್ನ ಹಾದಿಯಲ್ಲಿ ಮುಳ್ಳಾಗಿದ್ದ ಬ್ರಿಟಿಷರನ್ನು ಈ ದೇಶದಿಂದ ಹೊರಗೆ ಹಾಕಲು ಮಾಡಿದ ಕುತಂತ್ರವಿದು. ಒಬ್ಬ ವಿದೇಶಿ ಶತ್ರುವನ್ನು ಹೊರಗೆ ಹಾಕಲು ಇನ್ನೊಬ್ಬ ವಿದೇಶಿ ಶತ್ರವನ್ನು ಈ ದೇಶಕ್ಕೆ ಆಹ್ವಾನಿಸುವುದು ದೇಶಪ್ರೇಮವೇ? ದೇಶದ್ರೋಹವೇ? ಎಂಬುದನ್ನು ತಿಳಿಸಿದ್ದಾರೆ. ಟಿಪ್ಪುನ ಮತಾಂತರದ ಪ್ರಕ್ರಿಯೆಯನ್ನು ವಿವರಿಸುತ್ತಾ, ಕೆನರಾ ಕ್ರಿಶ್ಚಿಯನ್ ಮತ್ತು ಮಲಬಾರನ ನಾಯರ್ ಅವರಿಗೆ ನೀಡಿದ ಚಿತ್ರಹಿಂಸೆಯ ವಿವರಗಳನ್ನು ತಿಳಿಸಿದ್ದಾರೆ. ಈ ಕೃತಿಯಲ್ಲಿ ಟಿಪ್ಪು ವಿರೋಧಿ ನಿಲುವನ್ನು ಗಮನಿಸಬಹುದು.

ಬ.ನ.ಸುಂದರರಾವ್ ಮತ್ತು ಬಿ.ವೆಂಕಟೇಶಶಾಸ್ತ್ರಿ ಅವರು **ಸರ್.ಎಂ.ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ**(೧೯೮೨)[೮೭] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಸರ್.ಎಂ.ವಿಶ್ವೇಶ್ವರಯ್ಯ ಅವರ ಜೀವನ ಘಟ್ಟಗಳನ್ನು ವಿವರಣಾತ್ಮಕ ರೀತಿಯಲ್ಲಿ ವಿವರಿಸಿದ್ದಾರೆ. ಮುಂಬೈ ಸರ್ಕಾರದಲ್ಲಿ

ಇಂಜಿನಿಯರ್ ಆಗಿ ನಿರ್ವಹಿಸಿದ ಕರ್ತವ್ಯಗಳ ವಿವರ, ಅನಂತರ ಮೈಸೂರಿನ ದಿವಾನರಾಗಿ ನೇಮಕಗೊಂಡು ನಿರ್ವಹಿಸಿದ ಕಾರ್ಯಗಳನ್ನು ವಿವರಿಸಿದ್ದಾರೆ. ಆರ್ಥಿಕಾಭಿವೃದ್ಧಿಗಾಗಿ ಸಮ್ಮೇಳನ, ಕೃಷಿ, ಕೈಗಾರಿಕೆ, ನೀರಾವರಿ ಯೋಜನೆಗಳನ್ನು ಕೈಗೊಂಡು ಮೈಸೂರನ್ನು ಅಭಿವೃದ್ಧಿಗೊಳಿಸಿದರು ಎನ್ನುತ್ತಾರೆ. ಶಿಕ್ಷಣದ ಅಭಿವೃದ್ಧಿ ಕಾರ್ಯಗಳು ಮುಖ್ಯ. ಶಾಲಾ ಕಾಲೇಜುಗಳ ಸ್ಥಾಪನೆ, ವಿಶ್ವವಿದ್ಯಾಲಯ ಸ್ಥಾಪನೆಯ ವಿಚಾರಗಳನ್ನು ತಿಳಿಸಿದ್ದಾರೆ. ದಿವಾನರಾಗಿ ಅನೇಕ ಕಾರ್ಯಗಳನ್ನು ಕೈಗೊಂಡು ಮೈಸೂರಿನ ಆರ್ಥಿಕ ನೀತಿಯ ಮೇಲೆ ಪ್ರಭಾವ ಬೀರಿದವು ಎಂಬುದು ಮುಖ್ಯ. ಆದರೆ ಇಲ್ಲಿ ಹಿಂದುಳಿದ ವರ್ಗಗಳ ಮೀಸಲಾತಿ ಸೌಲಭ್ಯಗಳ ಬಗೆಗೆ ಇರುವ ಗೊಂದಲ, ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಮಾಹಿತಿಗಳಿಲ್ಲ. ಈ ಹಿನ್ನೆಲೆಯಲ್ಲಿ ಸರ್ ಎಂ.ವಿಶ್ವೇಶ್ವರಯ್ಯ ಅವರ ಜೀವನ ಮತ್ತು ಸಾಧನೆಗಳನ್ನು ಹೊಗಳಿಕೆಯ ನೆಲೆಯಲ್ಲಿ ವಿವರಿಸಿರುವುದನ್ನು ನೋಡಬಹುದು.

ಮುದ್ದಾಚಾರಿ ಬಿ. ಅವರು **ಯುವರಾಜ ಕಂಠೀರವ ನರಸಿಂಹರಾಜ ಒಡೆಯರು (೧೮೮೮-೧೯೪೦)**(೧೯೮೩)[೮೮] ಎಂಬ ಕೃತಿಯನ್ನು ರಚಿಸಿದ್ದಾರೆ. ಮುಖ್ಯವಾಗಿ ಮೈಸೂರು ಸಂಸ್ಥಾನದ ನಾಲ್ವಡಿ ಕೃಷ್ಣರಾಜ ಒಡೆಯರ ತಮ್ಮ ಕಂಠೀರವ ನರಸಿಂಹರಾಜ ಒಡೆಯರ ಜೀವನದ ಸಾಧನೆಗಳನ್ನು ತಿಳಿಸುವುದು ಈ ಕೃತಿಯ ಆಶಯವಾಗಿದೆ. ಮೊದಲಿಗೆ ಇವರ ಸಹಕಾರದ ಅಂಶಗಳನ್ನು ಚಿತ್ರಿಸಿದ್ದಾರೆ. ವಿಶ್ವೇಶ್ವರಯ್ಯ ಅವರು ಕೈಗೊಂಡ ಕೃಷ್ಣರಾಜಸಾಗರ ಜಲಾಶಯ ನಿರ್ಮಾಣ ಕಾರ್ಯದಲ್ಲಿ ಕೆಲವೊಂದು ಸಲಹೆ ನೀಡಿ, ಬೃಂದಾವನದ ನಿರ್ಮಾಣಕ್ಕೆ ಸಹಾಯವಾದರು. ಅಲ್ಲದೇ ಹರಿಜನರ ಉನ್ನತಿಗಾಗಿ 'ಸೋಷಿಯಲ್ ಸರ್ವೀಸ್ ಲೀಗ್' ಸ್ಥಾಪಿಸಿ, ಅಸ್ಪೃಶ್ಯತಾ ನಿವಾರಣೆಗೆ ಶ್ರಮಿಸಿದರು. ಯುರೋಪಿಗೆ ಪ್ರವಾಸ ಕೈಗೊಂಡು ಅಲ್ಲಿನ ರಮಣೀಯ ಸ್ಥಳಗಳ ಮಾಹಿತಿಯಂತೆ ಸಂಸ್ಥಾನದಲ್ಲಿ ಅಳವಡಿಸಲು ಮುಂದಾದರು ಎನ್ನುವುದು ಸೂಕ್ತ. ಆದರೆ ಇಲ್ಲಿ ಪಂಚಮರಿಗಾಗಿ ಕೈಗೊಂಡ ಕಾರ್ಯಗಳತ್ತ ಗಮನ ಹರಿಸಿದಾಗ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಎಂದೇ ಹೆಸರಾದ ಇವರ ಜೊತೆ ಯುವರಾಜರ ಸಂಬಂಧ ಕೈಗೊಂಡ ಸುಧಾರಣೆಗಳತ್ತ ಗಮನ ಹರಿಸದೇ ಇರುವುದು ಈ ಕೃತಿಯ ಮಿತಿಯಾಗಿದೆ. ಗೋಪಾಲಸ್ವಾಮಿ ಅಯ್ಯರ್ ಅವರು ಯುವರಾಜರನ್ನು ಪಂಚಮರ ಹಾಸ್ಟೆಲ್‌ಗೆ ಕರೆತಂದು ಭಾಷಣ ಮಾಡಿಸಿ, ನೀಡಿದ ಸೌಲಭ್ಯಗಳ ಕಡೆಗೆ ಗಮನ ಹರಿಸಿರುವುದಿಲ್ಲ.

ನಾಗಲಿಂಗಸ್ವಾಮಿ ನ. ಅವರು **ರಾಜಋಷಿ ಜಯಚಾಮರಾಜೇಂದ್ರ ಒಡೆಯರ್**(೧೯೮೩)[೮೯] ಎಂಬ ಕೃತಿಯನ್ನು ಹೊರತಂದಿದ್ದಾರೆ. ಇಲ್ಲಿ ಮೈಸೂರು ಸಂಸ್ಥಾನದ ಕೊನೆಯ ಒಡೆಯರಾದ ಜಯಚಾಮರಾಜೇಂದ್ರ ಒಡೆಯರ್ ಅವರ ವಿಚಾರಗಳನ್ನು ವಿವರಿಸಿದ್ದಾರೆ. ಅವರ ಬಾಲ್ಯ, ಶಿಕ್ಷಣ, ಪಟ್ಟಾಭಿಷೇಕ ಇವೇ ಮೊದಲಾದ ವಿವರಗಳನ್ನು ತಿಳಿಸಿದ್ದಾರೆ. ಸಾಹಿತ್ಯ ಕ್ಷೇತ್ರದಲ್ಲಿ ದತ್ತಾತ್ರೇಯ ಮಾರ್ಗ ಮತ್ತು ಧ್ಯೇಯ, ಗೀತಾ ಮತ್ತು ಭಾರತ ಜೀವನ, ಮತ ಮತ್ತು ಧ್ಯೇಯ, ಆತ್ಮ ಮತ್ತು ಬ್ರಹ್ಮ, ಭಾರತೀಯ ಸೌಂದರ್ಯದ ಹಲವು ಮುಖಗಳು ಎಂಬ ಕೃತಿಗಳ ಮಾಹಿತಿ ನೀಡಿದ್ದಾರೆ. ಸಂಗೀತ ಕ್ಷೇತ್ರದಲ್ಲಿ ಸುಮಾರು ೯೪ ಕೀರ್ತನೆಗಳನ್ನು ರಚಿಸಿದ್ದಾರೆ ಎಂಬ ವಿಚಾರಗಳು ಮುಖ್ಯವಾಗಿವೆ. ಅವರ ಆಡಳಿತ, ಅಭಿವೃದ್ಧಿ ಕಾರ್ಯಗಳನ್ನು ವಿವರಿಸಿದ್ದಾರೆ.

ಆದರೆ ಈ ಕೃತಿಯಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ನಡೆದ ಮೈಸೂರು ಚಲೋ ಚಳವಳಿಯ ಬಗೆಗೆ ಯಾವುದೇ ವಿಚಾರಗಳಿಲ್ಲ. ಅನಂತರ ಕರ್ನಾಟಕದ ನಾಮಕರಣದ ಕಾರ್ಯಕ್ರಮ ಮುಖ್ಯವಾದುದು. ಹಂಪಿಯಲ್ಲಿ ನಡೆದ ಈ ಕಾರ್ಯಕ್ರಮದಲ್ಲಿ 'ಕರ್ನಾಟಕ' ಎಂಬ ಹೆಸರನ್ನು ಕನ್ನಡ ನಾಡಿಗೆ ಘೋಷಿಸಿದ ವಿಚಾರವನ್ನು ತಿಳಿಸಿದ್ದಾರೆ.

ಚಂದ್ರಶೇಖರ್ ಎಸ್. ಅವರ **ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು**(೧೮೮೧–೧೯೪೦)(೧೯೯೩)[೯೦] ಎಂಬುದು ಹತ್ತು ಲೇಖನಗಳ ಸಂಗ್ರಹ. ಈ ಎಲ್ಲಾ ಲೇಖನಗಳು ಸಂಶೋಧನಾ ಲೇಖನಗಳೇ. ಮೈಸೂರು ಸಂಸ್ಥಾನದಲ್ಲಿ ೧೮೮೧–೧೯೪೦ರ ಅವಧಿಯಲ್ಲಾದ ರಾಜಕೀಯ ಬೆಳವಣಿಗೆಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ಲೇಖಕರೇ ಹೇಳುವಂತೆ 'ಮೈಸೂರು ಸಂಸ್ಥಾನದ ಬಗೆಗೆ ಕನ್ನಡದಲ್ಲಿ ಯಾವುದೇ ಅಧ್ಯಯನ ಪ್ರಕಟವಾಗಿಲ್ಲ. ಸಂಶೋಧನಾ ಅಧ್ಯಯನಗಳಂತೂ ದೂರದ ಮಾತೇ. ಈ ನಿಟ್ಟಿನಲ್ಲಿ ಈ ಲೇಖನ ಮಾಲೆ ಮೊದಲ ಪ್ರಯತ್ನ. ಲೇಖಕರು ಇತಿಹಾಸವನ್ನು ವ್ಯಕ್ತಿಕೇಂದ್ರಿತವೆಂಬಂತೆ ನೋಡುವುದಿಲ್ಲ. ಮೈಸೂರು ಒಡೆಯರ ಆಳ್ವಿಕೆಯಲ್ಲಿ ಕಂಡ ಹಲವಾರು ಸಾಮಾಜಿಕ ಬದಲಾವಣೆಗಳು, ಬದಲಾವಣೆಯನ್ನು ಪ್ರೇರೇಪಿಸಿದ ಶಕ್ತಿಗಳು ಮತ್ತು ಪ್ರಕ್ರಿಯೆಯಲ್ಲಿ ಬೆಳೆದ ದೇಶಿ ರಾಜಕೀಯ ಕ್ರಿಯಾತ್ಮಕತೆಯ ಬಗೆಗೆ ಆಧಾರಭೂತ ವಿಶ್ಲೇಷಣೆಯನ್ನು ಇಲ್ಲಿನ ವಿವಿಧ ಲೇಖನಗಳಲ್ಲಿ ಕಾಣಬಹುದು. ಇಲ್ಲಿ ಒಡೆಯರು, ದಿವಾನರ ವೈಯಕ್ತಿಕ ವಿಚಾರಗಳು ಮುಖ್ಯವಲ್ಲ. ಅವರ ಆಡಳಿತದ ಸಾಮಾಜಿಕ ಮತ್ತು ರಾಜಕೀಯ ಆಯಾಮಗಳು ಹೇಗೆ ಬಿಂಬಿತವಾದವು ಎನ್ನುವುದು ಪ್ರಮುಖವಾದುದು. ಇಲ್ಲಿ ವಿಚಾರಗಳನ್ನು ಅಧಿಕಾರಸ್ಥರ ಮೇಲುಸ್ತರದಲ್ಲಿ ತಿಳಿಸುವುದಲ್ಲದೇ ಸಮಾಜದ ಅತ್ಯಂತ ಕೆಳಸ್ತರಗಳೂ ಆ ಕಾಲದ ಸಾಮಾಜಿಕ–ರಾಜಕೀಯ ಬೆಳವಣಿಗೆಗಳಲ್ಲಿ ಪಡೆದಿದ್ದ ಸ್ಥಾನವನ್ನೂ ಒಟ್ಟಾಗಿ ಹಿಡಿಯುವುದರಿಂದ ಸಮಗ್ರತೆಯನ್ನೂ, ವಸ್ತುನಿಷ್ಠತೆಯನ್ನೂ ಸಾಧಿಸಿಕೊಂಡಿದ್ದಾರೆ. ಮುಖ್ಯವಾಗಿ ಇವರಿಗೆ ಅರಮನೆಯ ಒಳ ರಾಜಕೀಯವಾಗಲಿ, ಅಧಿಕಾರಕ್ಕಾಗಿ ಬ್ರಾಹ್ಮಣ–ಬ್ರಾಹ್ಮಣೇತರ ಸಂಘರ್ಷವಾಗಲಿ, ದಲಿತ ಚಳವಳಿಯ ಸೋಲುಗಳಾಗಲಿ, ಬ್ರಿಟಿಷ್ ಮತ್ತು ಕಾಂಗ್ರೆಸ್ ರಾಜಕಾರಣವಾಗಲೀ ಬಿಡಿಬಿಡಿಯಾಗಿ ಕಂಡುಬರದೆ ಅವೆಲ್ಲವೂ ಒಂದು ಕಾಲದ ಐತಿಹಾಸಿಕ ಪ್ರಕ್ರಿಯೆಯ ಅವಿಭಾಜ್ಯ ಸಾವಯವ ಅಂಶಗಳಾಗಿಯೇ ತೋರುತ್ತವೆ. ಐದನೆಯದಾಗಿ ಹೊಸಗನ್ನಡ ಸಾಹಿತ್ಯದ ಸಾಂಸ್ಕೃತಿಕ ಅಧ್ಯಯನಕ್ಕೂ ಅವರ ಪುಸ್ತಕ ಒಂದು ಸಾಮಾಜಿಕ ಹಿನ್ನೆಲೆಯನ್ನು ಒದಗಿಸ ಬಹುದಾಗಿದೆ(ಟಿ.ಪಿ.ಕೈಲಾಸಂ, ಪುಸ್ತಕ ಪ್ರೀತಿ, ಪು.೬೩). ಈ ನಿಟ್ಟಿನಲ್ಲಿ ಕೃತಿಯ ಲೇಖನಗಳು ವಿಚಾರಗಳನ್ನು ತಿಳಿಸುತ್ತವೆ.

ಈ ಕೃತಿಯ ಮೊದಲ ಲೇಖನವು "ಮೈಸೂರು ಸಂಸ್ಥಾನ: ಪ್ರಾಂತೀಯ ರಾಜಕೀಯದ ಉದಯ" ೧೮೮೦ರಿಂದ ೧೯೨೦ರ ಬೆಳವಣಿಗೆಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸುತ್ತದೆ. ಇಲ್ಲಿ ಸರ್ಕಾರಿ ಹುದ್ದೆಗಳಿಗಾಗಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರಲ್ಲಿ ಪೈಪೋಟಿ ಇದ್ದು ಶೇಕಡ ೭೦ಕ್ಕೂ ಹೆಚ್ಚು ಸ್ಥಾನ ಹೊಂದಿದ್ದು, ಬ್ರಾಹ್ಮಣೇತರರು ಕೆಳದರ್ಜೆಯ ಹುದ್ದೆಗಳಲ್ಲಿ ಮಾತ್ರ ಇದ್ದರು. ಬ್ರಾಹ್ಮಣೇತರರ ನಾಯಕರಾದ ಸಿ.ಆರ್.ರೆಡ್ಡಿ ಮತ್ತು ಬಸವಯ್ಯ ಅವರು ಅನೇಕ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ನೋಡಬಹುದು. ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು

‘ಪ್ರಜಾಮಿತ್ರ ಮಂಡಳಿ’ಯನ್ನು ಪ್ರಥಮ ರಾಜಕೀಯ ಸಭೆ ಆಗಿ ಸ್ಥಾಪಿಸಿದರು. ಪ್ರಥಮ ಬ್ರಾಹ್ಮಣೇತರ ದಿವಾನರಾಗಿ ಕಾಂತರಾಜ ಅರಸರು ನೇಮಕವಾಗಲು ಈ ಬೆಳವಣಿಗೆಗಳು ಕಾರಣವಾದವು.

ಎರಡನೆಯ ಲೇಖನವು ೧೮೮೧ರಿಂದ ೧೯೧೦ರವರೆಗಿನ ಮೈಸೂರು ಸಂಸ್ಥಾನದ ಸಾಮಾಜಿಕ-ರಾಜಕೀಯ ಸುಧಾರಣೆಗಳನ್ನು ಅವುಗಳ ಉದ್ದೇಶ ಮತ್ತು ಪರಿಣಾಮಗಳನ್ನು ಚರ್ಚಿಸುತ್ತದೆ. ಒಡೆಯರಿಗಿದ್ದ ಸಮಸ್ಯೆ ಎಂದರೆ ಏಕಕಾಲದಲ್ಲಿ ಬ್ರಿಟಿಷರನ್ನು, ಸ್ಥಳೀಯ ಮುಖಂಡರನ್ನು ಸಂತೃಪ್ತಿಗೊಳಿಸುವುದಾಗಿತ್ತು. ಪ್ರಜಾಪ್ರತಿನಿಧಿ ಸಭೆಯ ಮೂಲಕ ಕೆಲವು ಕಾರ್ಯಗಳನ್ನು ಕೈಗೊಳ್ಳಲಾಯಿತು. ರಾಜಮನೆತನದ ರಾಜಕೀಯ ಜರೂರು ಇರದಿದ್ದರೂ ಪ್ರಜೆಗಳ ಅಭ್ಯುದಯ ಮುಖ್ಯವಾಗಿತ್ತು. ಬ್ರಿಟಿಷ್‌ರ ಪ್ರಭಾವ, ವಿವೇಕಾನಂದರ ಪ್ರಭಾವ, ಮೈಸೂರಿನ ಸಂಸ್ಥಾನ ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರಗಳಲ್ಲೂ ಅಪಾರವಾದ ಸುಧಾರಣೆಗಳನ್ನು ಕಂಡಿತು. ಇದರ ಪರಿಣಾಮವಾಗಿ ಬ್ರಾಹ್ಮಣೇತರರು ವಿಶೇಷವಾಗಿ ಜಾಗೃತಗೊಂಡರು. ಈ ಹೊಸ ಜಾಗೃತಿ ಮೈಸೂರು ರಾಜಕಾರಣದ ಮೇಲೆ ತುಂಬ ಪ್ರಭಾವ ಬೀರಿತು.

ಮೂರನೆಯ ಲೇಖನದಲ್ಲಿ ಲೇಖಕರು ಮೈಸೂರು ಪ್ರಜಾಪ್ರತಿನಿಧಿ ಸಭೆ ಎಷ್ಟು ಪ್ರಾತಿನಿಧಿಕವಾಗಿತ್ತು ಎಂಬ ಚರ್ಚೆಯನ್ನು ಮಾಡುತ್ತಾರೆ. ಮೊದಲು ಕೆಲವು ನಾಮಕರಣ ಸದಸ್ಯರನ್ನು ಮಾತ್ರ ಹೊಂದಿದ್ದು, ಅನಂತರ ಚುನಾಯಿತ ಮತ್ತು ಮಹಿಳಾ ಪ್ರತಿನಿಧಿಗಳನ್ನು ಒಳಗೊಂಡಿತು. ಕ್ರಮೇಣ ಈ ಸಭೆಯ ಮೂಲಕ ಜನತೆಗೆ ಹೆಚ್ಚಿನ ಹಕ್ಕುಗಳಿಗಾಗಿ ಒತ್ತಾಯ ಬರತೊಡಗಿತು. ಎಚ್ಚರಗೊಳ್ಳುತ್ತಿದ್ದ ಜನವರ್ಗಗಳು ತಮ್ಮ ಆಸಕ್ತಿಗಳ ಹಿತರಕ್ಷಣೆಗಾಗಿ ಸಭೆಯಲ್ಲಿ ಹೋರಾಡುತ್ತಿದ್ದವು ಎಂಬುದರ ಬಗೆಗೆ ತಿಳಿಯಬಹುದು.

ಬ್ರಾಹ್ಮಣೇತರ ಚಳವಳಿಯಿಂದ ದಿವಾನ್ ವಿಶ್ವೇಶ್ವರಯ್ಯ ಅವರು ರಾಜೀನಾಮೆಗೆ ತೊಡಕಾಗಿತ್ತೇ? ಎಂಬುದನ್ನು ನಾಲ್ಕನೆಯ ಲೇಖನದಲ್ಲಿ ಚರ್ಚಿಸಲಾಗಿದೆ. ದಿವಾನ್ ಪದವಿಗಾಗಿ ಮದ್ರಾಸ್ v/s ಮೈಸೂರು ಬ್ರಾಹ್ಮಣರಿಗೆ ದಿವಾನ್ ಪದವಿ ದೊರೆಯಿತು. ಅದೇ ರೀತಿ ತಮ್ಮ ಸೌಲಭ್ಯಗಳಿಗಾಗಿ ಹಿಂದುಳಿದ ವರ್ಗದವರು ಚಳವಳಿ ಆರಂಭಿಸಿದರು. ಜಾತಿಯ ಆಧಾರದ ಮೇಲೆ ಮಾಡಿದ ಸೌಲಭ್ಯಗಳನ್ನು ವಿಶ್ವೇಶ್ವರಯ್ಯ ಅವರು ಅರ್ಹತೆಯ ಆಧಾರದ ಮೇಲೆ ಸೌಲಭ್ಯಗಳನ್ನು ನೀಡಬೇಕೆಂದು ವಾದಿಸಿದರು(ಪು.೪೬). ಹುದ್ದೆಗಳೆಲ್ಲ ಒಂದೇ ಜಾತಿಗೆ(ಬ್ರಾಹ್ಮಣ) ಸೇರಿದವು. ಇದರಿಂದ ಮಹಾರಾಜರು ಕೆಳಜಾತಿಗಳ ಸಾಮಾಜಿಕ ಸ್ಥಿತಿಯನ್ನು ಗಮನಿಸಬೇಕು ಎಂದು ಬ್ರಾಹ್ಮಣೇತರರಿಗೂ ಅವಕಾಶ ಕಲ್ಪಿಸಿದರು. ಈ ಎಲ್ಲಾ ಜಾತಿಯವರಿಗೆ ಹೇರಳ ಪ್ರಾತಿನಿಧ್ಯ ಕೊಡಲು ಮಹಾರಾಜರು ಕಮಿಟಿಯನ್ನು ನೇಮಿಸಲು ಒಪ್ಪಿದರು. ಇದರಿಂದ ತಾನು ನಂಬಿದ ನೀತಿಯ ವಿರುದ್ಧ ನಡೆದ ಕಾರ್ಯದಿಂದ ಬೇಸತ್ತ ವಿಶ್ವೇಶ್ವರಯ್ಯ ಅವರು ರಾಜೀನಾಮೆ ನೀಡಿದರು. ಒಟ್ಟಿನಲ್ಲಿ ಬ್ರಾಹ್ಮಣೇತರ ವರ್ಗಗಳ ರಾಜಕೀಯ ಚಟುವಟಿಕೆಗಳ ಕಾರಣದಿಂದ ತಮ್ಮ ದಿವಾನ ಹುದ್ದೆಗೆ ರಾಜೀನಾಮೆ ನೀಡಲಾಯಿತು ಎಂಬ ವಿಷಯವನ್ನು ಈ ಲೇಖನ ತಿಳಿಸುತ್ತದೆ.

ವಿಶ್ವೇಶ್ವರಯ್ಯ ಅವರ ರಾಜೀನಾಮೆ ನಂತರ ಬ್ರಾಹ್ಮಣೇತರ ಮೊದಲ ದಿವಾನರಾಗಿ ಕಾಂತರಾಜ ಅರಸರು ಅಧಿಕಾರ ವಹಿಸಿಕೊಂಡರು. ಹಿಂದುಳಿದ ವರ್ಗಗಳಿಗೆ ಒಂದು ಪರ್ವಕಾಲ ಎಂಬುದು ಐದನೆಯ ಲೇಖನದ ಚರ್ಚೆ ಆಗಿದೆ. ದಿವಾನ ಕಾಂತರಾಜ ಅರಸರು ಸಾಮಾಜಿಕ, ಆರ್ಥಿಕ, ರಾಜಕೀಯ ಬೆಳವಣಿಗೆ ವಿಶೇಷವಾಗಿ ಹಿಂದುಳಿದವರ ಮತ್ತು ಗ್ರಾಮೀಣ ಜನತೆಯ ಪರ ಕಾರ್ಯನೀತಿಯ ಬಗ್ಗೆ ವಿಶ್ಲೇಷಿಸುವ ಉದ್ದೇಶವನ್ನು ಹೊಂದಿದೆ. ಮುಖ್ಯವಾಗಿ ಇವರ ಆಡಳಿತದಲ್ಲಿ ಸರ್ಕಾರಿ ಸೇವೆ ಮತ್ತು ವಿದ್ಯಾಭ್ಯಾಸಕ್ಕೆ ಹಿಂದುಳಿದ ವರ್ಗಗಳು ತೊಡಗಿಕೊಳ್ಳಲು ಸಾಧ್ಯವಾದ ಪರ್ವಕಾಲ ಎನ್ನಬಹುದು ಎಂಬ ವಿಚಾರವನ್ನು ವಿಶ್ಲೇಷಿಸಿದ್ದಾರೆ.

ಆರನೆಯ ಲೇಖನವು ಮೈಸೂರು ಸರ್ಕಾರ ಹಿಂದುಳಿದವರ ಏಳ್ಗೆಯನ್ನು ೧೯೧೮ರಿಂದ ೧೯೨೭ರವರೆಗೆ ತೆಗೆದುಕೊಂಡ ವಿವಿಧ ಕ್ರಮವನ್ನು ಕುರಿತು, ಈ ವರ್ಗಗಳ ಸಾಧನೆಯ ಮಟ್ಟವನ್ನು ಚರ್ಚಿಸಲಾಗಿದೆ. ಮಿಲ್ಲರ್ ಸಮಿತಿಯ ಮೂಲಕ ಸರ್ಕಾರಿ ಸೇವೆಯಲ್ಲಿ ಹಿಂದುಳಿದ ವರ್ಗಗಳು ಪ್ರಾತಿನಿಧ್ಯ ಪಡೆಯಲು ಅವಕಾಶ ಕಲ್ಪಿಸಲು ಕಾಂತರಾಜ ಅರಸರು ಹೋರಾಡಿದರು ಎಂಬ ವಿಚಾರ ಮುಖ್ಯ

ಏಳನೆಯ ಲೇಖನವು ೧೯೨೭ರಿಂದ ೧೯೪೦ರ ಅವಧಿಯ ಮೈಸೂರು ಸಂಸ್ಥಾನ: ಹಿಂದುಳಿದ ವರ್ಗಗಳು ಹಾಗೂ ರಾಜಕೀಯ ಬೆಳವಣಿಗೆಯ ಅಂಶಗಳನ್ನು ಚರ್ಚಿಸುತ್ತದೆ. ಮಿರ್ಜಾ ಇಸ್ಮಾಯಿಲ್ ಅವರು ರಾಜ್ಯದಲ್ಲಿ ಬೆಳೆಯುತ್ತಿದ್ದ ಜಾತಿ-ವರ್ಗ ಸಂಘರ್ಷವನ್ನು ತಡೆಗಟ್ಟಿ, ರಾಜಶಾಹಿಯ ಅಧಿಕಾರ ನೆಲೆಯನ್ನು ವಿಸ್ತರಿಸಲು ಪ್ರಯತ್ನಪಟ್ಟರು. ಬ್ರಾಹ್ಮಣ-ಬ್ರಾಹ್ಮಣೇತರರಲ್ಲಿ ಮಿಲ್ಲರ್ ಸಮಿತಿಯ ವಿಚಾರಗಳು ಗೊಂದಲವಾದವು. ಈ ಮಧ್ಯೆ ಮಿರ್ಜಾ ಇಸ್ಮಾಯಿಲ್‌ರು ಮುಸ್ಲಿಂ ಎಂಬ ಅಪವಾದ ಬಂದಿತು. ಅಲ್ಲದೇ ಸರ್ಕಾರವನ್ನು ಹೆಚ್ಚು ವಿರೋಧಿಸುತ್ತಿದ್ದ ಶಕ್ತಿಗಳು ಕ್ಷುಲ್ಲಕ ಘಟನೆಯನ್ನು ತಮ್ಮ ರಾಜಕೀಯ ಬಂಡವಾಳವಾಗಿ ಮಾಡಿಕೊಂಡರು. ಮೈಸೂರಿನ ಚರಿತ್ರೆಯಲ್ಲಿಯೇ ಒಂದು ದೊಡ್ಡ ಕೋಮುಗಲಭೆಯಾಗಿ ಬೆಳೆಯಲು ಪ್ರೇರಣೆ ಕೊಟ್ಟರು. ಈ ಗಲಭೆಯೇ 'ಸುಲ್ತಾನ್ ಪೇಟೆಯ ಗಣಪತಿ ಗಲಭೆ'. ಈ ಗಲಭೆಯಿಂದ ಮೈಸೂರಿನ ರಾಜಕೀಯ ಬದಲಾಯಿತು ಎಂಬುದು ತಿಳಿಯುತ್ತದೆ.

ಮುಂದಿನ ಲೇಖನದಲ್ಲಿ ಅಸ್ಪೃಶ್ಯರ ಸಮಸ್ಯೆ ಮತ್ತು ಮೈಸೂರು ರಾಜಕೀಯ ವಿಚಾರವನ್ನು ವಿಶ್ಲೇಷಿಸಿದ್ದಾರೆ. ಸರ್ಕಾರವನ್ನು ಅಲ್ಪಸಂಖ್ಯಾತ ಜಾತಿಗೆ ಸೇರಿದ ದಿವಾನರನ್ನು ನಿರ್ಲಕ್ಷಿಸಿ ಅದರಿಂದ ಪ್ರಯೋಜನ ಪಡೆಯಲು ರಾಜ್ಯದ ರಾಜಕೀಯ ಗುಂಪುಗಳು ಅಸ್ಪೃಶ್ಯರ ಸಮಸ್ಯೆಯನ್ನು ಯಥೇಚ್ಛವಾಗಿ ಬಳಸಿಕೊಂಡವು. ಅಲ್ಲಿ ದಲಿತರಿಗೆ ಶೂದ್ರರಿಗೆ ಬ್ರಾಹ್ಮಣರು ಹೆಚ್ಚಿನ ಆಸಕ್ತಿ ತೋರಿಸಿದ್ದು ಕುತೂಹಲದ ಸಂಗತಿಯಾಗಿದೆ. ಮುಖ್ಯವಾಗಿ ಎಸ್.ಚಂದ್ರಶೇಖರ್ ಅವರು ಎರಡು ಮುಖ್ಯ ಕಾರಣಗಳನ್ನು ಕೊಡುತ್ತಾರೆ. ಸಾಮಾಜಿಕ-ಆರ್ಥಿಕ ಸಂಬಂಧಗಳ ಸ್ವರೂಪದಲ್ಲಿ ಗುರುತಿಸಬೇಕಾಗುತ್ತದೆ. ಮೊದಲನೆಯದಾಗಿ ಬ್ರಾಹ್ಮಣೇತರರ ಪ್ರಜಾ ಮಿತ್ರಮಂಡಳಿಯಿಂದ ಯಾವುದೇ ಪ್ರಯೋಜನವಾಗಲಿಲ್ಲ. ಅಲ್ಲಿ ತಮ್ಮ ಕೋಮುಗಳ ಹಿತ ಸಾಧಿಸುವುದರಲ್ಲಿಯೇ ಹೆಚ್ಚು ಆಸಕ್ತಿ ವಹಿಸಿದ್ದನ್ನು ತಿಳಿಸುತ್ತಾರೆ. ಎರಡನೆಯದಾಗಿ ಗೋಪಾಲಸ್ವಾಮಿ ಅಯ್ಯರ್‌ರಂಥ

ನಿಸ್ಪೃಹರನ್ನು ಹೊರತುಪಡಿಸಿ, ದಲಿತರನ್ನು ಸಂಘಟಿಸಲು ಹೊರಟ ಬ್ರಾಹ್ಮಣವರ್ಗ ಎಷ್ಟು ನಿಸ್ಪೃಹವಾಗಿತ್ತು ಎಂಬ ಪ್ರಶ್ನೆಯನ್ನು ಚಂದ್ರಶೇಖರ್ ಎತ್ತುತ್ತಾರೆ. ಬ್ರಾಹ್ಮಣವರ್ಗ, ಬ್ರಾಹ್ಮಣೇತರ ಚಳವಳಿಯ ವಿರುದ್ಧ ದಲಿತ ಸಂಘಟನೆಯನ್ನು ಬಳಸಿಕೊಳ್ಳುವ ಪ್ರಯತ್ನ ಮಾಡಿತು ಎಂಬ ಹೆಟ್ನೆ ಅವರ ಅಭಿಪ್ರಾಯವನ್ನು ಚಂದ್ರಶೇಖರ್ ಅನುಮೋದಿಸುತ್ತಾರೆ. ಈ ಕಡೆ ದಲಿತರು ಸರ್ಕಾರದಿಂದ ಶಿಕ್ಷಣದ ಸೌಲಭ್ಯ ಪಡೆದು ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸು ಮಾಡಿದರು. ತಮ್ಮ ಸೌಲಭ್ಯಗಳಿಗೆ ಮಾತ್ರ ಹೋರಾಡಿದ್ದು, ಸರ್ಕಾರದ ಬೆಂಬಲಿಗರಾಗಿಯೇ ದಲಿತರು ಮುಂದುವರಿದರು ಎಂಬ ವಿಚಾರಗಳನ್ನು ಚರ್ಚಿಸಿದ್ದಾರೆ(ಟಿ.ಪಿ.ಕೈಲಾಸಂ, ಪುಸ್ತಕ ಪ್ರೀತಿ, ಪು.೬೬). ರಾಜಕೀಯವಾಗಿ ಡಾಮಿನೆಂಟ್ ವರ್ಗ ತನ್ನ ಹಿತಾಸಕ್ತಿಯ ಸಾಧನೆಗಾಗಿ ಇತರ ವರ್ಗಗಳನ್ನು ಬಳಸಿಕೊಂಡಿರುವುದು ಇಲ್ಲಿ ಮುಖ್ಯ.

ಬ್ರಾಹ್ಮಣೇತರ ಚಳವಳಿಯಿಂದ ಸೌಲಭ್ಯ ಪಡೆದುಕೊಂಡವರು ಅನಂತರ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿ ಜವಾಬ್ದಾರಿ ಸರ್ಕಾರದ ಒತ್ತಾಯಕ್ಕೆ ಮುಂದಾದರು. ಹೀಗೆ ಜನರ ಹೋರಾಟ ತೀವ್ರವಾಯಿತು. ಈ ಹಿನ್ನೆಲೆಯೇ ಮಿರ್ಜಾರ ರಾಜೀನಾಮೆಗೆ ಕಾರಣವೆನ್ನಬಹುದು. ಆದರೆ ಚಂದ್ರಶೇಖರ್ ಅವರ ವಿಶ್ಲೇಷಣೆ ಭಿನ್ನವಾಗಿದೆ. 'ಯುವರಾಜ ಕಂಠೀರವ ನರಸಿಂಹರಾಜ ಒಡೆಯರಿಗೂ ಮತ್ತು ನಂತರ ಮಹಾರಾಜರಾದ ಅವರ ಮಗ ಜಯ ಚಾಮರಾಜೇಂದ್ರ ಒಡೆಯರಿಗೂ ಬೆಳೆಯುತ್ತಿದ್ದ ಅತೃಪ್ತಿ ಮತ್ತು ಅಪನಂಬಿಕೆಗಳು ಮಿರ್ಜಾ ಅವರ ರಾಜೀನಾಮೆಗೆ ಕಾರಣವಾದ ಮುಖ್ಯ ಸಂಗತಿಗಳು ಎಂದಿದ್ದಾರೆ. ಒಟ್ಟಾರೆಯಾಗಿ ೧೮೮೧ರಿಂದ ೧೯೪೦ರ ಅವಧಿಯಲ್ಲಿ ಮೈಸೂರು ಸಂಸ್ಥಾನದ ರಾಜಕೀಯ ಬೆಳವಣಿಗೆ ಸಾಮಾಜಿಕವಾಗಿ ಬೀರಿದ ಪರಿಣಾಮಗಳನ್ನು ಚರ್ಚಿಸಲಾಗಿದೆ. ವರ್ಗಸಂಘರ್ಷಕ್ಕಿಂತ ಜಾತಿ ಸಂಘರ್ಷ ಮುಖ್ಯ, ರಾಷ್ಟ್ರೀಯ ಚಳವಳಿ, ಗಾಂಧಿ ಮತ್ತು ವಿವೇಕಾನಂದರ ಪ್ರಭಾವಗಳು, ತೀವ್ರಗಾಮಿ ಚಳವಳಿಗಿಂತ ಉದಾರವಾದದಿಂದ ಪ್ರಭಾವಿತವಾದ ಚಳವಳಿ, ಸರ್ಕಾರಿ ಸುಧಾರಣೆಗಳಿಂದ ಜನಜಾಗೃತಿ, ಅದೇ ಸರಕಾರದ ಬದಲಾವಣೆಗೆ ಕಾರಣವಾದ ಅಂಶಗಳನ್ನು ವಿಶ್ಲೇಷಿಸಿದ್ದಾರೆ.

ಅಲಕ್ಷಿತ ಸಮುದಾಯದ ದನಿಗಳನ್ನು ದಾಖಲಿಸುವ ಮೂಲಕ ಚಾರಿತ್ರಿಕ ವಿದ್ಯಮಾನಗಳನ್ನು ಗ್ರಹಿಸುವ ಪ್ರಮುಖ ಇತಿಹಾಸಕಾರರಲ್ಲಿ ಎಸ್.ಚಂದ್ರಶೇಖರ್ ಅವರೂ ಒಬ್ಬರು. ಚಾರಿತ್ರಿಕ ವಿವರಗಳ ಸ್ಪಷ್ಟ ಮಂಡನೆ, ಸತ್ಯಶೋಧನೆಯ ಬದ್ಧತೆ ಹಾಗೂ ನೈತಿಕ ಜವಾಬ್ದಾರಿಗಳು ರೂಪಿಸಿದ ಚರಿತ್ರೆಕಾರನ ಇರುವನ್ನು ಚಂದ್ರಶೇಖರ್ ಅವರ ಚರಿತ್ರೆ ಬರವಣಿಗೆ ಎಲ್ಲೆಡೆ ಸೂಚಿಸುತ್ತದೆ. ಎಸ್.ಚಂದ್ರಶೇಖರ್ ಅವರ ಪಿಎಚ್.ಡಿ. ಸಂಶೋಧನಾ ಕೃತಿಯಾದ **ಡೈಮೆಂನ್ಷನ್ ಆಫ್ ಸೋಶಿಯೋ ಪೊಲಿಟಿಕಲ್ ಚೇಂಜ್** ಇನ್ ಮೈಸೂರು ೧೯೧೮–೧೯೪೦(೧೯೮೫)[೧೧] ಪ್ರಮುಖವಾದುದು. ಮೈಸೂರು ಒಡೆಯರ ಆಳ್ವಿಕೆಯಲ್ಲಿ ಕಂಡ ಸಾಮಾಜಿಕ ಬದಲಾವಣೆಗಳನ್ನು ಪ್ರೇರೇಪಿಸಿದ ಶಕ್ತಿಗಳು ಮತ್ತು ಪ್ರಕ್ರಿಯೆಯಲ್ಲಿ ಬೆಳೆದ ದೇಶಿ ರಾಜಕೀಯ ಸ್ಥಿತ್ಯಂತರ ಅಂಶಗಳನ್ನು ಈ ಕೃತಿಯಲ್ಲಿ ಚರ್ಚಿಸಿ ವಿಶ್ಲೇಷಿಸಿದ್ದಾರೆ. ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರಿನ ರಾಜಕೀಯದ ಒಳನೋಟಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಿದ್ದಾರೆ(ಪು.೧–೧೮). ಭಾರತೀಯ ಸಾಮಾಜಿಕ

ಹಿನ್ನೆಲೆಯಲ್ಲಿ ಮೈಸೂರು ಸಮಾಜದ ಸಂರಚನೆಯನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಬ್ರಿಟಿಷರ ಆಡಳಿತ ಮೈಸೂರು ಸಮಾಜದಲ್ಲಿ ಹಲವಾರು ಬದಲಾವಣೆಗಳನ್ನು ತಂದಿತು. ಜನರಲ್ಲಿದ್ದ ನಂಬಿಕೆಗಳಿಗೆ ಕೈ ಹಾಕಲಿಲ್ಲ ಎಂಬ ವಿಷಯಗಳನ್ನು ತಿಳಿಸಿರುವುದು ಸಮಂಜಸವಾಗಿದೆ. ದೇಶಿ ಆಡಳಿತ ತನ್ನ ಉಳಿವಿಗಾಗಿ ಸಾಮಾಜಿಕ ಮತ್ತು ರಾಜಕೀಯ ಸುಧಾರಣೆಗಳನ್ನು ಕೈಗೊಂಡಿರುವ ವಿವರಗಳನ್ನು ಚರ್ಚಿಸಲಾಗಿದೆ. ಸರ್ಕಾರ ಕೆಲವು ಸುಧಾರಣೆಗಳನ್ನು ಕೈಗೊಂಡು ತನ್ನ ಹಿತಾಸಕ್ತಿಗೆ ಧಕ್ಕೆ ಬಾರದಂತೆ ಸಮಯೋಚಿತವಾಗಿ ಬೆಳವಣಿಗೆಯ ದಿಕ್ಕನ್ನು ಬದಲಾಯಿಸಿತು ಎಂದಿದ್ದಾರೆ. ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆಯಿಂದ ಸ್ಥಳೀಯ ಜನರ ಬೆಂಬಲ ಗಳಿಸಿ ಕೊಳ್ಳುವುದು, ಬ್ರಿಟಿಷರ ಷರತ್ತುಗಳಲ್ಲಿಯೇ ಕೆಲಸ ಸಾಧಿಸಿಕೊಳ್ಳುವುದಾಗಿತ್ತು. ಈ ಸಭೆಯ ಸ್ಥಾಪನೆಯಿಂದ ಜನತೆಯು ತಮ್ಮ ಹಕ್ಕುಗಳಿಗಾಗಿ ಹೋರಾಟ ನಡೆಸಿದರು. ಕೊನೆಗೆ ಪ್ರಜಾಭಿಪ್ರಾಯ ವನ್ನು ರೂಪಿಸುವ ಸಾಧನವಾಗಿ ಹಾಗೆಯೇ ಮುಂದುವರಿಯಿತು ಎಂಬ ವಿಚಾರಗಳನ್ನು ತಿಳಿಸುತ್ತಾರೆ(ಪು.೧೯-೩೩).

ಮೈಸೂರಿನಲ್ಲಿ ಬದಲಾಗುತ್ತಿದ್ದ ಸಾಮಾಜಿಕ ಹಾಗೂ ರಾಜಕೀಯ ಪರಿಸ್ಥಿತಿ ಹೇಗೆ ಜಾತಿ-ವರ್ಗ ಸಂಘರ್ಷಕ್ಕೆ ಕಾರಣವಾಯಿತು ಎಂಬುದು ಮುಖ್ಯ ಇವರ ಸಂಶೋಧನೆಯ ಮುಖ್ಯ ಆಶಯ ಮೈಸೂರಿನ ಸಮಾಜದಲ್ಲಿ ಬ್ರಾಹ್ಮಣರ ಸಾಂಪ್ರದಾಯಿಕ ಯಜಮಾನಿಕೆಯನ್ನು ಹಾಗೂ ಬಹುಸಂಖ್ಯಾತ ಬ್ರಾಹ್ಮಣೇತರರು ಹೇಗೆ ಪ್ರಶ್ನಿಸುವುದರ ಮೂಲಕ ಸವಾಲೊಡ್ಡಿದರು ಎಂಬುದು. ಲಿಂಗಾಯತರಿಂದ ಪ್ರಾರಂಭವಾದ ಈ ಸವಾಲು ಒಕ್ಕಲಿಗರು ಹಾಗೂ ಇತರೆ ಡಾಮಿನೆಂಟ್ ಬ್ರಾಹ್ಮಣೇತರರು ಸೇರಿ ಪ್ರಶ್ನಿಸತೊಡಗಿದರು ಎಂಬುದನ್ನು ಕಟ್ಟಿಕೊಡುತ್ತಾರೆ. ಹೀಗಾಗಿ ಇಪ್ಪತ್ತನೇ ಶತಮಾನದ ಮೊದಲರ್ಧದ ಕಾಲದಲ್ಲಿ ಬ್ರಾಹ್ಮಣೇತರ ಚಳವಳಿ ಇಲ್ಲಿಯ ಚರಿತ್ರೆಯ ಗತಿಯನ್ನು ಬದಲಿಸಿದ ಚಳವಳಿ ಎಂದು ವಿಶ್ಲೇಷಿಸುತ್ತಾರೆ(ವಸು ಎಂ.ವಿ.(ಸಂ), ಅಶ್ವತ್ಥನಾರಾಯಣ(ಲೇ) ಕನ್ನಡದೊಳ್ ಭಾವಿಸಿದ ಜನಪದಂ, ಪು.೧೯೫). ಈ ಸಂದರ್ಭದಲ್ಲಿ ರಾಜಶಾಹಿಯ ಆಸಕ್ತಿ ಮತ್ತು ಪರಿಸ್ಥಿತಿಯನ್ನು, ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಹೇಗೆ ಉಪಯೋಗಿಸಿಕೊಂಡಿತು ಎಂಬುದರ ಬಗ್ಗೆ ಚರ್ಚಿಸಲಾಗಿದೆ(ಪು.೩೬-೪೩). ಮೈಸೂರು ಸಂಸ್ಥಾನವು ಆಡಳಿತಾತ್ಮಕವಾಗಿ, ಶೈಕ್ಷಣಿಕವಾಗಿ ಆಧುನಿಕವಾಗುತ್ತಾ ಹೋಯಿತು ಎಂದು ಹೇಳುತ್ತಲೇ, ಈ ಬೆಳವಣಿಗೆಗಳು ಹೇಗೆ ಬ್ರಾಹ್ಮಣೇತರ ಚಳವಳಿಗೂ ಕಾರಣವಾದವು ಎಂಬುದನ್ನು ವಿಶ್ಲೇಷಿಸಿದ್ದಾರೆ. ಈ ಬ್ರಾಹ್ಮಣೇತರ ಚಳವಳಿಯಿಂದ ವಿಶ್ವೇಶ್ವರಯ್ಯ ಅವರು ದಿವಾನ್ ಪದವಿಯಿಂದ ನಿರ್ಗಮಿಸಿದರು ಎಂಬುದನ್ನು ಚರ್ಚಿಸಿದ್ದಾರೆ(ಪು.೪೫-೪೯). ಕೊನೆಗೆ ಈ ಬ್ರಾಹ್ಮಣೇತರ ವರ್ಗಗಳೆಲ್ಲವೂ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದವು ಎಂಬುದು ತಿಳಿಯುತ್ತದೆ.

ಹಿಂದುಳಿದ ವರ್ಗಗಳ ಏಳಿಗೆಯಲ್ಲಿ ಪ್ರಮುಖ ಪಾತ್ರ ವಹಿಸಿದ ಕಾಂತರಾಜ ಅರಸು ಅವರು ದಿವಾನರಾಗಿ ಮೊದಲು ತೆಗೆದುಕೊಂಡ ಕ್ರಮವೆಂದರೆ ಎಲ್ಲ ಸರ್ಕಾರಿ ಮತ್ತು ಸರ್ಕಾರಿ ಅನುದಾನ ಪಡೆಯುತ್ತಿದ್ದ ಶಾಲೆಗಳಲ್ಲಿ ದಲಿತರಿಗೆ ಪ್ರವೇಶಾವಕಾಶದ ಆಜ್ಞೆ ಹೊರಡಿಸಿದರು. ಕೆಲ ಸಂಪ್ರದಾಯವಾದಿಗಳು ಶೃಂಗೇರಿಯನ್ನು ಕೇಂದ್ರವಾಗಿಟ್ಟುಕೊಂಡು ಶಾಲೆಗಳಿಗೆ ದಲಿತರನ್ನು ಸೇರಿಸುವ ಆಜ್ಞೆಯ ಬಗ್ಗೆ ಪ್ರತಿಭಟಿಸಿ, ಆಜ್ಞೆಗೆ ತಿದ್ದುಪಡಿ ಮಾಡಿ,

ಪ್ರತ್ಯೇಕವಾಗಿ ಶಾಲೆಗಳನ್ನು ನಡೆಸಲು ಅನುಮತಿ ನೀಡಿದರು. ಪ್ರೌಢಶಾಲೆಯವರೆವಿಗೂ ಉಚಿತ ಶಿಕ್ಷಣ ದೊರೆಯುವಂತೆ ಆಜ್ಞೆ ಹೊರಡಿಸಿ ಪಂಚಮರಿಗೆ ವಿದ್ಯಾಭ್ಯಾಸವನ್ನು ಕೊಡಿಸಿದ ವಿವರಗಳಿವೆ. ಹಿಂದುಳಿದ ವಿದ್ಯಾರ್ಥಿಗಳಿಗೆ ಕೊಡುತ್ತಿದ್ದ ಸ್ಕಾಲರ್‌ಶಿಪ್ ಹಣ ಕಾಂತರಾಜ ಅರಸು ಅವರ ಕಾಲದಲ್ಲಿ ಹೆಚ್ಚಾಯಿತು(ಪು.೫೫). ಮೊದಲು ಹಿಂದುಳಿದ ವರ್ಗಗಳ ಏಳಿಗೆಗಾಗಿ ವಿದ್ಯಾಭ್ಯಾಸದ ಸವಲತ್ತುಗಳನ್ನು ಒದಗಿಸಿದರು ಎಂಬ ವಿಚಾರಗಳನ್ನು ತಿಳಿಯಬಹುದು. ಕಾಂತರಾಜ ಅರಸು ಅವರು ಪ್ರಮುಖವಾಗಿ ಆರ್ಥಿಕ ನೀತಿಯನ್ನು ಜಾರಿಗೆ ತಂದರು. ಈ ಹಿನ್ನೆಲೆಯಲ್ಲಿ ಕೃಷಿ ಆಧಾರಿತ ಕೈಗಾರಿಕೆಗಳು ಪ್ರಾರಂಭವಾದವು(ಪುಟ.೫೬-೫೭). ಇಲ್ಲಿಯೂ ಬ್ರಾಹ್ಮಣ-ಬ್ರಾಹ್ಮಣೇತರ ಎಂದು ರೂಪುಗೊಂಡ ದೃಷ್ಟಿಕೋನಗಳು ಒಟ್ಟಾರೆ ಮೈಸೂರು ಆರ್ಥಿಕ ನೀತಿಯ ಮೇಲೆ ಪ್ರಭಾವ ಬೀರಿದವು ಎಂದು ಅರ್ಥಪೂರ್ಣವಾಗಿ ವಿಶ್ಲೇಷಿಸಿದ್ದಾರೆ.

ಸರ್ಕಾರಿ ಹುದ್ದೆಗಳಲ್ಲಿ ಮುಸ್ಲಿಮರ ಸಂಖ್ಯೆ ದಿನೇ ದಿನೇ ಏರುತ್ತಾ ಹೋಯಿತು. ಹಿಂದುಳಿದ ಮುಸ್ಲಿಂ ನಾಯಕ ಅಬ್ಬಾಸ್ ಖಾನ್‌ರು, ತಮ್ಮ ಕೋಮಿನ ದಿವಾನರೊಂದಿಗೆ ಸೇರಿ ಮುಸ್ಲಿಮರಿಗೆ ಹೆಚ್ಚು ಅನುಕೂಲವಾಗುವಂತೆ ಮಾಡಿದರು ಎಂಬ ಅಸಮಾಧಾನ ಕೆಲವು ಹಿಂದೂ ಬ್ರಾಹ್ಮಣೇತರರಲ್ಲಿ ಬೆಳೆಯಿತು. ಇದರಿಂದ ೧೯೨೮ರ ಗಣಪತಿ ಗಲಾಟೆ ನಡೆದು ಮಿರ್ಜಾ ಅವರ ಸರ್ಕಾರವನ್ನು ಅಲುಗಾಡಿಸಿತು(ಪು.೭೬). ಕೆಲವು ಸಂಪ್ರದಾಯ ಶಕ್ತಿಗಳ ಆಕ್ರೋಶದಿಂದ ಮೈಸೂರು ಸಂಸ್ಥಾನವು ಮತೀಯ ಬೆಳವಣಿಗೆಗೆ ಒಳಗಾಯಿತು ಎಂಬುದನ್ನು ವಿಶ್ಲೇಷಿಸುತ್ತಾ, ಸರಕಾರವು ಹೇಗೆ ಈ ಬೆಳವಣಿಗೆಗಳಿಗೆ ಪ್ರತಿಕ್ರಿಯಿಸಿತು ಎಂಬುದನ್ನು ವಿವರಿಸುತ್ತಾರೆ.

ಮೈಸೂರಿನಲ್ಲಿ ದಲಿತ ಸಮುದಾಯಗಳ 'ಸಾಮಾಜಿಕ ಚಲನಶೀಲತೆ'ಯ ಬಗೆಗಿನ ಚರ್ಚೆ ಇಲ್ಲಿಯ ಬಹುಮುಖ್ಯ ಭಾಗವಾಗಿದೆ. ರಾಜ್ಯದಲ್ಲಿ ಅಸ್ಪೃಶ್ಯರ ಸಮಸ್ಯೆಯನ್ನು ವಿವಿಧ ಶಕ್ತಿ ಬಣಗಳು ತಮಗೆ ಬೇಕಾದ ರೀತಿ ಬಳಸಿಕೊಂಡವು ಎಂಬುದನ್ನು ಚರ್ಚಿಸಲಾಗಿದೆ. ಬ್ರಾಹ್ಮಣೇತರರು ಎನ್ನುವ ಹೆಸರಿನಲ್ಲಿ ಡಾಮಿನೆಂಟ್ ಆದ ವರ್ಗದವರು ಸರ್ಕಾರದ ಸವಲತ್ತು ಗಳನ್ನು ತಮ್ಮದಾಗಿಸಿಕೊಂಡವು ಎಂಬುದನ್ನು ಚರ್ಚಿಸಿದ್ದಾರೆ. ರಾಜ್ಯದ ರಾಜಕೀಯ ಗುಂಪುಗಳ ಅಸ್ಪೃಶ್ಯರ ಸಮಸ್ಯೆಯನ್ನು ಹೆಚ್ಚಾಗಿ ಬಳಸಿಕೊಂಡವು. ಅಸ್ಪೃಶ್ಯತಾ ನಿವಾರಣೆಗಾಗಿ ಸಂಘಗಳ ಸ್ಥಾಪನೆ, ಅಸ್ಪೃಶ್ಯರಿಗೆ ದೇವಸ್ಥಾನ ಪ್ರವೇಶ ಮುಂತಾದ ಬೇಡಿಕೆಗಳನ್ನು ಸರ್ಕಾರದ ಮುಂದಿಟ್ಟವು. ಆದರೆ ಸರಕಾರ ಒಪ್ಪಲಿಲ್ಲ ಎಂದು ನಾಟಕವಾಡುತ್ತಾರೆ. ಅನಂತರ ಈ ವರ್ಗಗಳು ನೇರವಾಗಿ ಸರಕಾರದಿಂದಲೇ ಸವಲತ್ತುಗಳನ್ನು ಪಡೆಯಲಾರಂಭಿಸಿದವು. ಹೀಗೆ ಅಸ್ಪೃಶ್ಯ ವರ್ಗಗಳ ಏಳಿಗೆ ಕುರಿತಾಗಿ ನಡೆದ ಪ್ರಯತ್ನಗಳನ್ನು ಸಮಗ್ರವಾಗಿ ಕಟ್ಟಿ ಕೊಡುತ್ತಾರೆ. ಸಿ.ಆರ್.ರೆಡ್ಡಿ ಅವರು ದಲಿತರ ಸಮಸ್ಯೆಗಳನ್ನು ನಿವಾರಿಸಲು ಮನವಿಪತ್ರವನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಮಾಡಿದರು. ಗಾಂಧೀಜಿಯ ದಲಿತೋದ್ಧಾರ ಕಾರ್ಯಗಳಿಗೆ ಬೆಂಬಲ ನೀಡಿದರು. ರಾಜಮನೆತನವು ದಲಿತರಿಗೆ ಸಾಮಾಜಿಕ ಕಾನೂನುಗಳನ್ನು ಜಾರಿಗೆ ತಂದು ಸೌಲಭ್ಯಗಳನ್ನು ಒದಗಿಸಿತು ಎಂಬುದರ ಬಗೆಗೆ ಮಾಹಿತಿಗಳನ್ನು ನೀಡುತ್ತಾರೆ(ಪು.೮೭-೧೦೨).

ಕೊನೆಯದಾಗಿ ಮಿರ್ಜಾ ಇಸ್ಮಾಯಿಲ್ ಅವರು ನೀಡಿದ ರಾಜೀನಾಮೆಗೆ ಒಂದು ಹೊಸ ವಿಶ್ಲೇಷಣೆಯನ್ನು ನೀಡಿದ್ದಾರೆ. ಯುವರಾಜ ಕಂಠೀರವ ನರಸಿಂಹರಾಜ ಒಡೆಯರಿಗೂ ಮತ್ತು ಆತನ ಮಗ ಜಯಚಾಮರಾಜ ಒಡೆಯರಿಗೂ ಮಿರ್ಜಾ ಅವರ ಮೇಲೆ ಅತೃಪ್ತಿ ಮತ್ತು ಅಪನಂಬಿಕೆಗಳು ಅವರ ರಾಜೀನಾಮೆಗೆ ಕಾರಣ ಎಂದಿದ್ದಾರೆ.

ಆದರೆ ಚಂದ್ರಶೇಖರ್ ಎಸ್. ಅವರು ತಮ್ಮ ಕೃತಿಯಲ್ಲಿ ಕ್ರೈಸ್ತ ಮಿಷನರಿಗಳು ತಮ್ಮ ಸಾಮಾಜಿಕ ಚರಿತ್ರೆಯ ಅನೇಕ ಪ್ರಶ್ನೆಗಳ ಸಂದರ್ಭದಲ್ಲಿ ಯಾವ ಬಗೆಯ ಪಾತ್ರವನ್ನು ನಿರ್ವಹಿಸಿದವು ಎಂಬುದನ್ನು ಶೋಧನೆ ಮಾಡಿಲ್ಲ. ಉದ್ಯೋಗದ ಅವಕಾಶಗಳಿಗಾಗಿ ಮೈಸೂರು v/s ಮದ್ರಾಸ್ ಬ್ರಾಹ್ಮಣರ ಸಂಘರ್ಷ ಪ್ರಾರಂಭವಾಯಿತು. ಕೊನೆಗೆ ಉದ್ಯೋಗ ಪಡೆದುಕೊಳ್ಳುವ ಪೈಪೋಟಿ ಪ್ರಾರಂಭವಾಗಿ ಉದ್ಯೋಗ ಪಡೆದರು. ಅಂದರೆ ಬ್ರಿಟಿಷರ ನೇರ ಆಳ್ವಿಕೆಯಲ್ಲಿ ಇಂಗ್ಲಿಷ್ ಶಿಕ್ಷಣ ಅನ್ನುವುದು ಬಂದಿತು. ಅಷ್ಟೊತ್ತಿಗೆ ಕ್ರೈಸ್ತ ಮಿಷನರಿಗಳು ಸಾಕಷ್ಟು ಕೆಲಸಗಳನ್ನು ಮಾಡಿದ್ದವು. ಶಾಲೆಗಳಲ್ಲಿ ಶೂದ್ರರನ್ನು ಸೇರಿಸದೇ ಇರುವ ಸಂದರ್ಭದಲ್ಲಿ ಅವರನ್ನು ಕ್ರೈಸ್ತ ಮಿಷನರಿಗಳು ತಮ್ಮ ಶಾಲೆಗಳಿಗೆ ಸೇರಿಸಿಕೊಂಡು ಶಿಕ್ಷಣ ನೀಡಿದರು. ಹೀಗೆ ಸಾಮಾಜಿಕವಾಗಿ ಬ್ರಾಹ್ಮಣೇತರ ವರ್ಗದಲ್ಲಿ ಒಂದು ಸಣ್ಣ ವಿದ್ಯಾವಂತ ವರ್ಗ ಉದಯವಾಯಿತು. ಹೀಗಾಗಿ ೧೮೮೧ರ ನಂತರ ಮೈಸೂರು v/s ಮದ್ರಾಸ್ ಬ್ರಾಹ್ಮಣರ ಈ ಗೊಂದಲ, ಇನ್ನೊಂದು ಟೆನ್ಷನ್‌ಗೆ ಕಾರಣವಾಯಿತು. ಅದೇನೆಂದರೆ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ವರ್ಗದಲ್ಲಿ ಸೌಲಭ್ಯಗಳಿಗಾಗಿ ಚಳವಳಿ ಪ್ರಾರಂಭವಾಯಿತು. ಈ ಚಳವಳಿಯಿಂದ ಬ್ರಾಹ್ಮಣೇತರರು ಸೌಲಭ್ಯಗಳನ್ನು ಪಡೆದುಕೊಂಡರು. ಹಾಗೆಯೇ ಬ್ರಾಹ್ಮಣೇತರ ಚಳವಳಿಯ ಮೂಲಕ ದಲಿತ ಅಸ್ಮಿತೆಯು ಪ್ರಜ್ಞೆಯಾಗಿ ರೂಪುಗೊಂಡು, ತಮ್ಮದೇ ಆದ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸಿದ ವ್ಯಕ್ತಿಗಳು, ಖಾಸಗಿ ಸಂಸ್ಥೆಗಳು ಹಾಗೂ ಸರಕಾರದ ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಕೃತಿಕಾರರು ಹೀಗೆ ಪ್ರಭುತ್ವದ ಒಳಗಡೆಯೇ ನೋಡುತ್ತಾರೆ. ಕ್ರೈಸ್ತ ಮಿಷನರಿಗಳು ಕೈಗೊಂಡ ಕಾರ್ಯಗಳ ಬಗೆಗೆ ಹೇಳದಿರುವುದು ಈ ಕೃತಿಯ ಮಿತಿಯೆನಿಸುತ್ತದೆ. ಕ್ರೈಸ್ತ ಮಿಷನರಿಗಳಲ್ಲಿ ಯಾವುದೇ ಸಾಮಾಜಿಕ ಸಂಕೋಲೆಗಳಿರದೇ ಶಾಲೆ, ದೇವಾಲಯ(ಚರ್ಚೆ)ಗಳಿಗೆ ಮುಕ್ತ ಅವಕಾಶ ಇತ್ತು. ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಯಾವುದೇ ಅಡೆತಡೆಗಳಿರಲಿಲ್ಲ. ಈ ನಿಟ್ಟಿನಲ್ಲಿ ಕ್ರೈಸ್ತ ಮಿಷನರಿಗಳು ದಲಿತರಿಗೆ ಮೂಲಭೂತ ಸೌಲಭ್ಯಗಳನ್ನು ನೀಡಿದರು. ಅನಂತರ ಮೈಸೂರು ಸಂಸ್ಥಾನದಲ್ಲಿ ದಲಿತರನ್ನು ಕ್ರೈಸ್ತ ಮಿಷನರಿಗಳು ಮತಾಂತರಗೊಳಿಸಿದ ಬಗೆಯನ್ನು ಕೃತಿ ರಚನಕಾರರು ಸೂಕ್ಷ್ಮವಾಗಿ ಗಮನಿಸಿರಬೇಕಾಗಿತ್ತು. ಅಲ್ಲದೇ ಈ ಕಡೆ ಸಾಮಾಜಿಕವಾಗಿ ಸಮಾಜದ ಇತರ ಜನವರ್ಗಗಳ ಬವಣೆಯ ಒಂದು ಅಂಶವನ್ನು ಗುರುತಿಸಬಹುದು. ಅದೇನೆಂದರೆ ಜನರ ಭೂಮಿಯ ಪ್ರಶ್ನೆ. ಏಕೆಂದರೆ ೧೯೩೦ರಲ್ಲಿಯೇ ಶಿವರಾಮ ಕಾರಂತರು ಬರೆದ 'ಚೋಮನ ದುಡಿ' ಕೃತಿಯನ್ನು ನೋಡಿದಾಗ ದಲಿತರ ಬದುಕಿನ ಚಿತ್ರಣದೊಂದಿಗೆ, ದಲಿತರು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಬಗೆಯನ್ನು ನೋಡಬಹುದು. ಭೂಮಿಯ ಒಕ್ಕಲುತನಕ್ಕಾಗಿ ದಲಿತನೊಬ್ಬ ಮತಾಂತರಗೊಂಡ ಬಗೆಯನ್ನು ಗಮನಿಸಿದಾಗ ಭೂಮಿ

ಮತ್ತು ದಲಿತರ ಹಸಿವಿನ ಪ್ರಜ್ಞೆ ಮೂಡುತ್ತದೆ. ಆದರೆ ಇಲ್ಲಿ ಎಸ್.ಚಂದ್ರಶೇಖರ್ ಅವರು ರಾಜಕೀಯ ಒಳನೋಟದಲ್ಲಿ ಸರ್ಕಾರಿ ಹುದ್ದೆಗಳತ್ತ ಗಮನ ಹರಿಸಿದ್ದಾರೆ.

ದೇವೇಗೌಡ ಎ.ಸಿ. ಮತ್ತು ಪರಮೇಶ್ವರನ್ ಟಿ.ಆರ್. ಅವರು ಬರೆದಿರುವ **ಹಿಸ್ಟರಿ ಆಫ್ ಎಜುಕೇಶನ್ ಇನ್ ಮೈಸೂರು**(೧೯೮೫)[೬೨] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಜಾರಿಯಾದ ಶಿಕ್ಷಣವ್ಯವಸ್ಥೆಯನ್ನು ವಿವರಿಸುತ್ತದೆ. ಈ ಕೃತಿಯು ವರದಿ ರೂಪದಲ್ಲಿ ವಿಚಾರಗಳನ್ನು ತಿಳಿಸುತ್ತದೆ. ಕಾಲಾನುಕ್ರಮಣಿಕೆಯಲ್ಲಿ ಶಿಕ್ಷಣ ವ್ಯವಸ್ಥೆಯು ಹೇಗೆ ಬೆಳವಣಿಗೆ ಆಯಿತು ಎಂಬುದನ್ನು ವಿಸ್ತೃತವಾಗಿ ತಿಳಿಸುತ್ತಾರೆ. ಮೊದಲು ಥಾಮಸ್ ಮನ್ರೋ ಅವರು ಪ್ರತಿ ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆಯಲು ಆದೇಶ ಹೊರಡಿಸಿದರು. ಈ ಅವಧಿಯಲ್ಲಿ ಇಂಗ್ಲಿಷ್ ಶಿಕ್ಷಣ ಜಾರಿಯಾಯಿತು. ಇದರಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರವು ಮುಖ್ಯ. ಮೊದಲು ಬೆಂಗಳೂರಿನಲ್ಲಿ ಶಾಲೆಗಳು ಪ್ರಾರಂಭವಾದ ವಿವರಗಳನ್ನು ತಿಳಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಇಂಗ್ಲಿಷ್ ಶಾಲೆಗಳು ಪ್ರಾರಂಭವಾದವು. ಹಾಗೆಯೇ ಕ್ರೈಸ್ತ ಮಿಷನರಿಗಳು ಮೊದಲ ಭಾರಿಗೆ ಪಂಚಮರಿಗೆ ಶಾಲೆಗಳಲ್ಲಿ ಶಿಕ್ಷಣಕ್ಕೆ ಅವಕಾಶ ನೀಡಿದರು. ಅನಂತರ ಸಿ.ಆರ್.ರೆಡ್ಡಿ ಅವರು ಕೆಲವು ಬದಲಾವಣೆಗಳೊಂದಿಗೆ ಜನಸಂಖ್ಯೆಗೆ ಅನುಗುಣವಾಗಿ ಶಾಲೆಗಳನ್ನು ತೆರೆದರು. ಪ್ರತ್ಯೇಕವಾಗಿ ದಲಿತರಿಗೆ ಶಾಲೆಗಳ ಪ್ರಾರಂಭದ ವಿವರಗಳು ಮುಖ್ಯ. ಹೀಗೆ ಮೈಸೂರು ಸಂಸ್ಥಾನದಲ್ಲಿ ಜಾರಿಯಾದ ಶಿಕ್ಷಣವ್ಯವಸ್ಥೆಯನ್ನು ವಿಸ್ತೃತವಾಗಿ ಈ ಕೃತಿಯಲ್ಲಿ ವಿವರಿಸಿದ್ದಾರೆ.

ಬ.ನ.ಸುಂದರರಾವ್ ಅವರ **ಬೆಂಗಳೂರಿನ ಇತಿಹಾಸ**(೧೯೮೫)[೬೩] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯು ಮೈಸೂರು ಒಡೆಯರು, ಅವರ ಆಡಳಿತ, ಆರ್ಥಿಕ ಪ್ರಗತಿ, ಕ್ಷಾಮಗಳು, ರೈಲ್ವೆವ್ಯವಸ್ಥೆ, ಶಿಕ್ಷಣ, ನೀರಾವರಿ ಯೋಜನೆಗಳು, ದಿವಾನರ ಸಾಧನೆಗಳು, ಕೈಗಾರಿಕಾ ಯೋಜನೆಗಳು, ಕಮೀಷನರ್‌ಗಳ ಆಳ್ವಿಕೆ, ಅಭಿವೃದ್ಧಿ ಕಾರ್ಯಗಳು ಇವೇ ಮೊದಲಾದ ವಿಚಾರಗಳನ್ನು ವಿವರಿಸುತ್ತಾರೆ. ಬೆಂಗಳೂರಿನ ವ್ಯಾಪಾರ–ವಾಣಿಜ್ಯದ ಬೆಳವಣಿಗೆಯ ವಿಚಾರಗಳು ಮುಖ್ಯ. ಇಲ್ಲಿನ ನಗರೀಕರಣದ ಪ್ರಕ್ರಿಯೆ, ವಸಾಹತುಶಾಹಿ ಆಡಳಿತದ ವಿಚಾರಗಳು, ಕೈಗಾರಿಕೋದ್ಯಮದ ವಿಸ್ತರಣೆಯ ವಿಚಾರಗಳು ಮಿತವಾಗಿವೆ. ಸ್ವಾತಂತ್ರ್ಯ ಚಳವಳಿಯಲ್ಲಿ ಬೆಂಗಳೂರಿನ ಪಾತ್ರ, ಜವಾಬ್ದಾರಿ ಸರ್ಕಾರದ ಜಾರಿಗೆ ಹೋರಾಡಿದ ರೀತಿಯನ್ನು ವಿವರಿಸಿದ್ದಾರೆ.

ವೀರತಪ್ಪ ಕೆ. ಅವರ **ರೀಡಿಂಗ್ ಇನ್ ಮಾಡರ್ನ್ ಹಿಸ್ಟರಿ ಆಫ್ ಮೈಸೂರ್**(೧೯೮೫)[೬೪] ಕೃತಿಯು ಮೈಸೂರು ಸಂಸ್ಥಾನದ ಚರಿತ್ರೆಗೆ ಸಂಬಂಧಿಸಿದ ಹದಿನಾರು ಬಿಡಿ ಲೇಖನಗಳ ಸಂಗ್ರಹವಾಗಿದೆ. ಇವು ಸಂಶೋಧನಾ ಲೇಖನಗಳಾಗಿದ್ದು, ವಸಾಹತುಶಾಹಿ ವ್ಯವಸ್ಥೆಯ ಸಂದರ್ಭದಲ್ಲಾದ ವಿವಿಧ ಬದಲಾವಣೆಗಳನ್ನು ಗ್ರಹಿಸಿ ಬರೆದಿರುವ ಲೇಖನಗಳಾಗಿವೆ. ಕೃತಿಕಾರರು ಬಿಡಿ ಲೇಖನಗಳಲ್ಲಿ ಪ್ರಜಾಪ್ರತಿನಿಧಿ ಸಭೆ ಸ್ಥಾಪನೆ, ಸಾರ್ವಜನಿಕ ಅಭಿಪ್ರಾಯಕ್ಕೆ ತಕ್ಕಂತ ನ್ಯಾಯವ್ಯವಸ್ಥೆ, ಬ್ರಾಹ್ಮಣೇತರ ಚಳುವಳಿ, ರಾಷ್ಟ್ರೀಯ ಚಳವಳಿಗಳ ಬೆಳವಣಿಗೆ ಹಾಗೂ ಏಕೀಕರಣ ಹೋರಾಟದ ಸಂಕ್ಷಿಪ್ತ ಘಟನೆಗಳನ್ನು ಕಟ್ಟಿಕೊಡುವಲ್ಲಿ ಯಶಸ್ವಿಯಾಗಿದ್ದಾರೆ. ಈ

ಲೇಖನಗಳಲ್ಲಿ ಪ್ರಾಥಮಿಕ ಆಕರಗಳಾಗಿ ಪತ್ರಾಗಾರ ಇಲಾಖೆಯ ದಾಖಲೆಗಳನ್ನು ಬಳಸಿಕೊಂಡಿರುವುದು ಶ್ಲಾಘನೀಯವಾಗಿದೆ. ಈ ಲೇಖನಗಳು ಮೈಸೂರು ಒಡೆಯರ ಚರಿತ್ರೆಯನ್ನು ಭಿನ್ನ ನೆಲೆಯಲ್ಲಿ ಕಟ್ಟಿಕೊಡುತ್ತವೆ.

ವೀರತಪ್ಪ ಕೆ. ಅವರ **ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್**(೧೯೮೬)[೫] ಎಂಬ ಕೃತಿಯು ಕರ್ನಾಟಕದ ಹಿಸ್ಟರಿ ಕಾಂಗ್ರೆಸ್(ಬೆಂಗಳೂರು)ನಲ್ಲಿ ಪ್ರಕಟ ಗೊಂಡಿದ್ದು, ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ಕೆಲವು ಬಿಡಿ ಲೇಖನಗಳ ಸಂಗ್ರಹವನ್ನು ನೋಡಬಹುದು. ಚಂದ್ರಶೇಖರ್ ಎಸ್. ಅವರ 'ದಿ ಅನ್‌ಟಚಬಲ್ ಪ್ರಾಬ್ಲಮ್ ಇನ್ ಮೈಸೂರು ಪಾಲಿಟಿಕ್ಸ್ ೧೯೧೫–೧೯೪೦' ಲೇಖನವು ಪ್ರಮುಖವಾಗಿದ್ದು, ಈ ಲೇಖನವು 'ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು(೧೮೮೧–೧೯೪೦)' ಎಂಬ ಲೇಖನಗಳ ಸಂಗ್ರಹದ ಕೃತಿಯಲ್ಲಿ ಪ್ರಕಟವಾಗಿದ್ದು, ಈ ಲೇಖನವನ್ನು ಅಲ್ಲಿಯೇ ವಿಶ್ಲೇಷಿಸಲಾಗಿದೆ. ಅನಂತರಾಮಯ್ಯ ಓ. ಅವರ 'ಡೆವಲಪ್‌ಮೆಂಟ್ ಆಫ್ ಡಿಪ್ರೆಸ್ಡ್ ಕ್ಲಾಸ್ ಎಜುಕೇಷನ್ ಇನ್ ಪ್ರಿನ್ಸ್ಲಿ ಮೈಸೂರು ೧೯೦೨–೧೯೪೦' ಎಂಬ ಲೇಖನವು ನಿಮ್ನ ವರ್ಗಗಳು ಪಡೆದ ಶಿಕ್ಷಣದ ಸೌಲಭ್ಯಗಳನ್ನು ತಿಳಿಸುತ್ತಾರೆ. ಈ ಹಿನ್ನೆಲೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಮತ್ತು ದಿವಾನರು ಪಂಚಮರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಲು ಅನುಮತಿ ನೀಡಿದರು. ಹೀಗೆ ಶಾಲೆಗಳ ಸಂಖ್ಯೆ ಹೆಚ್ಚಾಗುತ್ತಾ ಹೋಯಿತು. ನಿಮ್ನವರ್ಗಗಳ ಅಭಿವೃದ್ಧಿಗಾಗಿ ಸ್ಥಾಪನೆಯಾದ ಸಂಘಗಳು, ಮಿಲ್ಲರ್ ಕಮಿಟಿಯ ಶಿಫಾರಸ್ಸುಗಳು, ಗೋಪಾಲಸ್ವಾಮಿ ಅಯ್ಯರ್ ಹೋರಾಟಗಳು, ಮುರುಗೇಶನ್ ಪಿಳ್ಳೆ ಅವರು ಕೈಗೊಂಡ ಪಂಚಮರ ಅಭಿವೃದ್ಧಿಯ ಕೆಲಸಗಳನ್ನು ವಿವರಿಸಿದ್ದಾರೆ.

ಗಾಯಿತ್ರಿ ದೇವಿ ಎ.ಹೆಚ್. ಅವರು **ದಿ ಮೈಸೂರು ಏಕಾನಮಿಕ್ ಕಾನ್‌ಫರೆನ್ಸ್ ಅನ್ ಅಸೆಸ್‌ಮೆಂಟ್** ಎಂಬ ಲೇಖನವು ಮೈಸೂರಿನ ಆರ್ಥಿಕಾಭಿವೃದ್ಧಿಯಲ್ಲಿ ಆರ್ಥಿಕ ಸಮ್ಮೇಳನದ ಪಾತ್ರವನ್ನು ತಿಳಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಿವಾನರಾದ ಸರ್.ಎಂ. ವಿಶ್ವೇಶ್ವರಯ್ಯ ಅವರು ಈ ಸಮ್ಮೇಳನದಲ್ಲಿ ಕೆಲವು ಪ್ರಮುಖ ತೀರ್ಮಾನಗಳನ್ನು ತೆಗೆದುಕೊಂಡರು. ಹಾಗೆಯೇ ಕೃಷಿಸಮಿತಿ, ಶಿಕ್ಷಣಸಮಿತಿ, ಕೈಗಾರಿಕೆ ಮತ್ತು ವಾಣಿಜ್ಯಸಮಿತಿ, ಹಿಂದುಳಿದ ವರ್ಗಗಳ ಶಿಕ್ಷಣ, ಪ್ರಾಥಮಿಕ ಮತ್ತು ತಾಂತ್ರಿಕ ಕಡ್ಡಾಯ ಶಿಕ್ಷಣ, ವಿಶ್ವವಿದ್ಯಾಲಯ ಅಭಿವೃದ್ಧಿ, ಕೃಷಿಯ ಅಭಿವೃದ್ಧಿ, ಕೈಗಾರಿಕಾಭಿವೃದ್ಧಿಯ ಯೋಜನೆಗಳ ವಿವರಗಳನ್ನು ಚರ್ಚಿಸಿದ್ದಾರೆ.

ವೆಂಕಟರತ್ನಂ ಎಂ.ಬಿ. ಅವರ **ಮೈಸೂರು ರೆಪ್ರೆಸೆಂಟೀವ್ ಅಸೆಂಬ್ಲಿ**(೧೮೮೧–೧೯೪೭) ಎಂಬ ಲೇಖನದಲ್ಲಿ ಸರ್ಕಾರದ ಧ್ಯೇಯ–ಧೋರಣೆಗಳ ಮತ್ತು ಕೈಗೊಂಡ ಕಾರ್ಯಕ್ರಮಗಳನ್ನು ಇಲ್ಲಿ ಚರ್ಚಿಸಿರುವುದನ್ನು ಗಮನಿಸಬಹುದು. ಈ ಸಭೆಗೆ ಭೂಮಾಲೀಕರು ಮತ್ತು ಗಣ್ಯ ವರ್ತಕರನ್ನು ಸದಸ್ಯರನ್ನಾಗಿ ನೇಮಕ ಮಾಡಿದ್ದು, ಮೇಲ್ವರ್ಗದ ಹಿತಾಸಕ್ತಿಯನ್ನು ತೋರಿಸುವುದೇ ಆಗಿದೆ. ಜನರ ಅಭಿಪ್ರಾಯ, ಸಂಕಷ್ಟಗಳಿಗೆ ಸ್ಪಂದಿಸುವುದು ಎಂಬುದು ಇವರ ಮುಖ್ಯ ಉದ್ದೇಶವಾಗಿದೆ. ೧೯೩೨ರಲ್ಲಿ ಹಿಂದುಳಿದ ವರ್ಗಗಳು ಈ ಕಮಿಟಿಯಲ್ಲಿ ಭಾಗವಹಿಸಿದವು. ಸ್ಥಳೀಯ ಚುನಾವಣೆ, ಸಂವಿಧಾನಾತ್ಮಕ ಬೆಳವಣಿಗೆಗಳು, ಮೈಸೂರು ಸಂಸ್ಥಾನ ವಿಲೀನವಾದ ಪ್ರಮುಖ ಅಂಶಗಳನ್ನು ಇವೇ ಮೊದಲಾದ ಅಂಶಗಳನ್ನು ಚರ್ಚಿಸಿದ್ದಾರೆ.

ವೀರತಪ್ಪ ಕೆ. ಅವರು **ಕ್ವಿಟ್ ಇಂಡಿಯಾ ಮೂಮೆಂಟ್ ಇನ್ ಪ್ರಿನ್ಸ್ಲಿ ಮೈಸೂರು ೧೯೪೨** ಎಂಬ ಲೇಖನವು ಮೈಸೂರು ಸಂಸ್ಥಾನದಲ್ಲಿ ಒಡೆಯರ ಆಳ್ವಿಕೆ ಇದ್ದರೂ, ಸ್ವಾತಂತ್ರ್ಯ ಚಳವಳಿ ದಿನದಿಂದ ದಿನಕ್ಕೆ ತೀವ್ರವಾಗುತ್ತಾ ಹೋಯಿತು. ಮೈಸೂರಿನ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಲು ಜನರು ಸಿದ್ಧರಾದರು. ಬಿನ್ನಿ ಮತ್ತು ಮಹಾರಾಜ ಮಿಲ್‌ನ ನೌಕರರು ಮತ್ತು ಮಹಾರಾಜ ಕಾಲೇಜಿನ ವಿದ್ಯಾರ್ಥಿಗಳು ಬಾವುಟ ಹಾರಿಸುವುದರ ಮೂಲಕ ಈ ಚಳವಳಿಯಲ್ಲಿ ಭಾಗವಹಿಸಿದರು ಎಂಬುದನ್ನು ತಿಳಿಸಿದ್ದಾರೆ. ಬಹುಮುಖ್ಯವಾಗಿ ಈಸೂರು ದುರಂತದ ನಂತರ ಚಳವಳಿಯು ಉಗ್ರಸ್ವರೂಪವನ್ನು ಪಡೆಯಿತು. ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಂದ ಹೊರಬಂದು ಚಳವಳಿಯಲ್ಲಿ ಭಾಗವಹಿಸಿದರು. ರಸ್ತೆಗಳ ಬದಿಯಲ್ಲಿ ಪಿಕೆಟಿಂಗ್, ಅಂಚೆ ಕಛೇರಿ ಮತ್ತು ರೈಲ್ವೆ ನಿಲ್ದಾಣಗಳು ಚಳವಳಿಗಾರರ ಆಕ್ರೋಶಕ್ಕೆ ಒಳಗಾದವು. ಇಲ್ಲಿ ಎಚ್.ಎಸ್.ದೊರೆಸ್ವಾಮಿ, ಕೋಟೆ ನಂಜಪ್ಪ ಮುಂತಾದವರು ಭೂಗತವಾಗಿ ಹೋರಾಟವನ್ನು ಮುಂದುವರಿಸಿದರು ಎಂಬುದನ್ನು ಚರ್ಚಿಸಿದ್ದಾರೆ. ಹೀಗೆ ಈ ಕೃತಿಯಲ್ಲಿ ಮೈಸೂರು ಒಡೆಯರ ಆಡಳಿತದ ವಿವಿಧ ಆಯಾಮಗಳನ್ನು ಚರ್ಚಿಸುತ್ತವೆ.

ಸೂರ್ಯನಾಥ ಕಾಮತ್ ಅವರು **ಸ್ವಾತಂತ್ರ್ಯ ಹೋರಾಟದ ಹಲವು ಮುಖಗಳು(೧೯೮೮)** ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿಯ ಕಾವಿನ ಹಿನ್ನೆಲೆಯಲ್ಲಿ ಹಳೇ ಮೈಸೂರು ಸಂಸ್ಥಾನದ ರಾಜಕೀಯದಲ್ಲಿ ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ವರ್ಗಗಳು ಯಾವ ರೀತಿ ಹೋರಾಟದಲ್ಲಿ ಭಾಗವಹಿಸಿದವು ಹಾಗೂ ಬ್ರಾಹ್ಮಣೇತರ ನಾಯಕರು ರಾಷ್ಟ್ರೀಯವಾದ ಮತ್ತು ಮಹಾತ್ಮರ ಪ್ರಭಾವದಿಂದ ಕಾಂಗ್ರೆಸ್ಸಿನ ಕಡೆ ಆಕರ್ಷಿತರಾದರು ಎಂಬುದನ್ನು ವಿವರಿಸಿದ್ದಾರೆ. ಕರ್ನಾಟಕ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಮಹಿಳೆಯರ ಪಾತ್ರವನ್ನು ವಿವರಿಸಿರುವುದು ವಿಶೇಷವಾಗಿದೆ ಹಾಗೂ ಮಹಿಳಾ ಐಡೆಂಟಿಟಿಯನ್ನು ಗುರುತಿಸಿದ್ದಾರೆ. ಹಳೆಯ ಮೈಸೂರು ರಾಜ್ಯದ ಸ್ವಾತಂತ್ರ್ಯ ಚಳವಳಿಯಲ್ಲಿ ಯಶೋಧರಮ್ಮ ದಾಸಪ್ಪ ಅವರ ಹೆಸರು ಚಿರಸ್ಮರಣೀಯ. ಶಿವಪುರ, ಕ್ವಿಟ್ ಇಂಡಿಯಾದ ಹೋರಾಟಗಳಲ್ಲಿ ಸಮಾಜಸೇವೆಗಳಲ್ಲಿ ಭಾಗವಹಿಸಿದ ವಿವರಗಳನ್ನು ತಿಳಿಸಿದ್ದಾರೆ(ಪು.೨೬-೨೭). ಸ್ವಾತಂತ್ರ ಚಳವಳಿಯಲ್ಲಿ ಆಲೂರು ವೆಂಕಟರಾವ್, ದ.ರಾ.ಬೇಂದ್ರೆ, ಬಿ.ಎಂ.ಶ್ರೀಕಂಠಯ್ಯ ಹೀಗೆ ಹಲವರು ಪ್ರಮುಖ ಕವಿ ಸಾಹಿತಿಗಳ ಪಾತ್ರವನ್ನು ವಿವರಿಸುತ್ತಾರೆ. ಬೇಂದ್ರೆ ಅವರು ರಂಗಭೂಮಿಯ ನಾಟಕ ಕೃತಿಗಳಲ್ಲಿ ರೈತರ ಪಾತ್ರ ಹಾಗೂ ಕ್ಷಾಮ ಮತ್ತು ಬರಗಾಲದ ಸಂದರ್ಭದಲ್ಲಿ ರೈತರ ಸಮಸ್ಯೆಗಳಿಗೆ ಕಾಂಗ್ರೆಸ್ ಸ್ಪಂದಿಸಿದ ರೀತಿಯನ್ನು ವಿವರಿಸಿದ್ದಾರೆ. ಕರ್ನಾಟಕದಲ್ಲಿ ಕ್ವಿಟ್ ಇಂಡಿಯಾ ಚಳವಳಿ ತೀವ್ರ ರೂಪ ಪಡೆಯಿತು. ಶಿವಮೊಗ್ಗದ ಈಸೂರು ಚಳವಳಿ ಮುಖ್ಯ ಚಾರಿತ್ರಿಕ ದಾಖಲೆಯಾಗಿದೆ. ಇದರಲ್ಲಿ ವಿದ್ಯಾರ್ಥಿಗಳು, ಕಾರ್ಮಿಕರು ಭಾಗವಹಿಸಿದ ವಿವರಗಳನ್ನು ವಿಸ್ತೃತವಾಗಿ ಈ ಕೃತಿಯು ವಿವರಿಸುತ್ತದೆ.

ಟಿಪ್ಪು ಬಗೆಗೆ ಒಂದಲ್ಲ ಒಂದು ವಿವಾದಗಳು ನಡೆಯುತ್ತಲೇ ಇವೆ. ಈ ಹಿನ್ನೆಲೆಯಲ್ಲಿ ೧೯೯೦ರಲ್ಲಿ ಟಿಪ್ಪು ಸುಲ್ತಾನನನ್ನು ಕೇಂದ್ರ ವಸ್ತುವನ್ನಾಗಿಟ್ಟುಕೊಂಡು ಪ್ರಸಾರ ಮಾಡಿದ ದಿ

**ಸ್ವೋರ್ಡ್ ಆಫ್ ಟಿಪ್ಪು ಸುಲ್ತಾನ್**[೯೭] ಎಂಬ ಹಿಂದಿ ಧಾರಾವಾಹಿ ಪ್ರಸಾರವಾಗುತ್ತಿತ್ತು. ಭಾರತೀಯ ಜನತಾ ಪಾರ್ಟಿ ಮುಂಬಯಿ ನ್ಯಾಯಾಲಯದಿಂದ ಇದಕ್ಕೆ ತಡೆಯಾಜ್ಞೆ ತಂದು ಪ್ರಸಾರವಾಗುತ್ತಿದ್ದ ಧಾರಾವಾಹಿಯನ್ನು ತಡೆ ಹಿಡಿಯಲಾಯಿತು. ಈ ಕೃತಿಯನ್ನು ಗಮನಿಸಿದಾಗ ಹಿಂದೂಗಳ ಬದ್ಧ ವೈರಿ ಹಾಗೂ ಮತಾಂಧ ಎಂದು ಹೇಳದೆ ಅವನೊಬ್ಬ ಜಾತ್ಯತೀತ ರಾಜ ವಸಾಹತುಶಾಹಿಯನ್ನು ವಿರೋಧಿಸಿದ ಮೊದಲ ದೇಶೀಯ ರಾಜನಾಗಿ ಗುರುತಿಸಲ್ಪಟ್ಟನು ಎಂದು ಹೇಳಿರುವುದು ಜಿಜ್ಞಾಸೆ ಉಂಟುಮಾಡಿದೆ ಎನ್ನಬಹುದು. ಭಗವಾನ್ ಎಸ್.ಗಿದ್ವಾನಿ ಅವರು ತಮ್ಮ ಈ ಕಾದಂಬರಿಯಲ್ಲಿ ಟಿಪ್ಪುವನ್ನು ಸಮಕಾಲೀನ ಚಿಂತನೆಗೆ ಒಳಪಡಿಸಿದ್ದಾರೆ.

ಶೇಷಗಿರಿರಾವ್ ಎಲ್.ಎಸ್. ಅವರು **ಮೋಕ್ಷ ಗುಂಡಂ ವಿಶ್ವೇಶ್ವರಯ್ಯ(೧೯೯೧, ಮರು ಮುದ್ರಣ, ೨೦೧೦)**[೯೮] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಲೇಖಕರು ವಿಶ್ವೇಶ್ವರಯ್ಯ ಅವರ ಕಾರ್ಯಗಳನ್ನು ವಿವರಿಸುತ್ತಾರೆ. ಅವರು ಇಂಜನಿಯರ್ ಆಗಿ ಮಾಡಿದ ಕಾರ್ಯಗಳು, ನೀರಾವರಿಯ ಯೋಜನೆಗಳಲ್ಲಿ ಮೊದಲ ಭಾರಿಗೆ ಜಾರಿಗೆ ತಂದ ಬ್ಲಾಕ್ ಪದ್ಧತಿ. ಸ್ವಯಂಚಾಲಿತ ಕವಾಟ ಇವೇ ಮೊದಲಾದ ವಿಚಾರಗಳನ್ನು ಪ್ರಶಂಸಿಸಿ ವಿವರಿಸಿದ್ದಾರೆ. ಕೈಗಾರಿಕೆಗಳ ಸ್ಥಾಪನೆಯಲ್ಲಿ ಇವರ ಪಾತ್ರ ಏನು ಎಂಬುದನ್ನು ಮುಖ್ಯವಾಗಿ ತಿಳಿಸಿದ್ದಾರೆ. ಇವರಿಗೆ ಒಡೆಯರ ಸಹಕಾರ ಅಗತ್ಯವಾಗಿ ದೊರಕಿತ್ತು. ಒಟ್ಟಿನಲ್ಲಿ ಮೈಸೂರು ಸಂಸ್ಥಾನದ ಸರ್ವತೋಮುಖ ಅಭಿವೃದ್ಧಿಗೆ ವ್ಯವಸ್ಥಿತ ಮಾರ್ಗವನ್ನು ಗುರುತಿಸಿ ರೂಪಿಸಿದ ವ್ಯಕ್ತಿ ವಿಶ್ವೇಶ್ವರಯ್ಯ ಎಂದಿದ್ದಾರೆ. ಸಾಹಿತಿಯಾಗಿ ವಿಶ್ವೇಶ್ವರಯ್ಯ ಅವರ ಜೀವನಚರಿತ್ರೆಯ ವಿವಿಧ ಘಟ್ಟಗಳನ್ನು ಪ್ರಶಂಸೆಯ ಹಿನ್ನೆಲೆಯಲ್ಲಿಯೇ ವಿವರಿಸಿದ್ದಾರೆ. ಆದರೆ ಇಲ್ಲಿ ಹಿಂದುಳಿದ ವರ್ಗಗಳ ಸರ್ಕಾರಿ ಸೌಲಭ್ಯಗಳ ಬಗೆಗೆ ವಿಶ್ವೇಶ್ವರಯ್ಯ ಅವರಿಗಿದ್ದ ಭಿನ್ನಾಭಿಪ್ರಾಯಗಳ ಬಗೆಗೆ ವಿಚಾರಗಳನ್ನು ಹಾಗೂ ಅವರ ರಾಜೀನಾಮೆ ಕೊಡಬೇಕಾದ ಪ್ರಸಂಗದ ಒಳನೋಟಗಳನ್ನು ಕಟ್ಟಿ ಕೊಡುವುದಿಲ್ಲ.

ಸೂರ್ಯನಾಥ ಯು.ಕಾಮತ್ ಅವರು **ಹಿಸ್ಟೋರಿಯೊಗ್ರಫಿ ಆಫ್ ಕರ್ನಾಟಕ(೧೯೯೧)**[೯೯] ಎಂಬ ಸಂಪಾದಿತ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯು ಬಿಡಿ ಲೇಖನಗಳ ಸಂಗ್ರಹ. ಮೊದಲಿಗೆ ಕರ್ನಾಟಕ ಚರಿತ್ರೆಯ ಲೇಖನ ಶಾಸ್ತ್ರವು ಬೆಳೆದುಬಂದ ರೀತಿಯನ್ನು ಹಾಗೂ ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರವನ್ನು ಕುರಿತು ಚರ್ಚಿಸುತ್ತಾರೆ. ಸಾಹಿತ್ಯ ಕೃತಿಗಳು, ರೆಕಾರ್ಡ್ಸ್, ವಿಲ್ಕ್ಸ್, ಬೌರಿಂಗ್, ರೈಸ್, ಮೆಕೆಂಝಿಯ ಕೃತಿಗಳು, ಬಿ.ರಾಮಕೃಷ್ಣರಾವ್, ಸಿ.ಹಯವದನರಾವ್, ಜಿ.ಆರ್.ಜೋಯ್ಸನರ್, ಎಂ.ಶಾಮರಾವ್ ಅವರ ಕೃತಿಗಳು ಮುಖ್ಯ ಎಂದಿದ್ದಾರೆ. ಅದೇ ರೀತಿ ಹೈದರಾಲಿ ಮತ್ತು ಟಿಪ್ಪು ಬಗೆಗೆ ಇರುವ ಜೋಸೆಪ್ ಮಿಚೆಂಡ್(ಹಿಸ್ಟರಿ ಆಫ್ ಮೈಸೂರ್ ಅಂಡರ್ ಹೈದರಾಲಿ ಮತ್ತು ಟಿಪ್ಪು ಸುಲ್ತಾನ್ ೧೮೦೦), ಕಿರ್ಮಾನಿ ಅವರ ಹೈದರ್ ಅಂಡ್ ಟಿಪ್ಪು ಸುಲ್ತಾನ್, ನಿಷಾನ್-ಈ-ಹೈದರಿ, ಬಿ.ಷೇಕ್ ಅಲಿ ಅವರ ಬ್ರಿಟಿಷ್ ರಿಲೇಷನ್ ವಿತ್ ಹೈದರ್ ಅಲಿ) ಮೊಹಿಬುಲ್ ಹಸನ್ ಖಾನ್‌ರ ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್, ಸಿ.ಹಯವದನರಾವ್ ಅವರ ಹಿಸ್ಟರಿ ಆಫ್ ಮೈಸೂರು, ಎಂ.ಎಚ್.ಗೋಪಾಲ್ ಅವರ ಆನ್ ಎಕಾನಮಿಕ್ ಸ್ಟಡಿ, ಡಿ.ವಿ.ಗುಂಡಪ್ಪ ಅವರ ಮೈಸೂರಿನ ದಿವಾನರುಗಳು,

ವಿ.ಎಸ್.ನಾರಾಯಣರಾವ್ ಅವರ ಮಿರ್ಜಾ ಇಸ್ಮಾಯಿಲ್, ಇನ್ನೂ ಮುಂತಾದ ಕೃತಿಗಳನ್ನು ತಿಳಿಸಿದ್ದಾರೆ. ಹಾಗೆಯೇ ವಿದೇಶಿ ಬರಹಗಾರರಾದ ಜೇಮ್ಸ್ ಮೇನರ್ ಅವರ ಪೊಲಿಟಿಕಲ್ ಚೇಂಜ್ ಇನ್ ಇಂಡಿಯನ್ ಸ್ಟೇಟ್ ಮೈಸೂರು ೧೮೮೧-೧೯೪೭ ಮತ್ತು ಬಿ.ಹೆಟ್ನೆ ಅವರ ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್ ಮೈಸೂರು ೧೮೮೧-೧೯೪೭ ಎಂಬ ಕೃತಿಗಳನ್ನು ರಚಿಸಿರುವ ವಿಚಾರಗಳನ್ನು ತಿಳಿಸಿದ್ದಾರೆ. ಬೆಂಗಳೂರು ವಿಶ್ವವಿದ್ಯಾಲಯದ ಪ್ರಾಧ್ಯಾಪಕ ರಾದ ಎಸ್.ಚಂದ್ರಶೇಖರ್, ಆರ್.ರಾಮಕೃಷ್ಣನ್, ಓ.ಅನಂತರಾಮಯ್ಯ ಅವರ ಬರವಣಿಗೆ ಕೃತಿಗಳನ್ನು ತಿಳಿಸಿದ್ದಾರೆ. ಅಲ್ಲದೇ ಈ ಸಂಪಾದಕತ್ವದ ಕೃತಿಯಲ್ಲಿ ಪ್ರತ್ಯೇಕವಾಗಿ ಬಿ.ಎಲ್.ರೈಸ್, ಸಿ.ಹಯವದನರಾವ್, ಎಂ.ಶಾಮರಾವ್ ಅವರನ್ನು ಕುರಿತ ಲೇಖನಗಳು ಪ್ರಮುಖವಾದವು. ಈ ಲೇಖನಗಳು ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರಕ್ಕೆ ಸಹಾಯಕವಾಗಿವೆ.

ಚಂದ್ರಶೇಖರ್ ಎಸ್. ಅವರ **ಅಂಬೇಡ್ಕರ್ ಮತ್ತು ಗಾಂಧಿ(೧೯೯೨)**[೧೦೦] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯಲ್ಲಿ ಈ ಇಬ್ಬರು ಮುಖ್ಯ ವ್ಯಕ್ತಿಗಳ ವ್ಯಕ್ತಿತ್ವವನ್ನು ಚರ್ಚಿಸಲಾಗಿದೆ. ಅಂಬೇಡ್ಕರ್ 'ಸಮಾನತೆ' ಎಂದರು. ಗಾಂಧಿ 'ಸ್ವಾತಂತ್ರ್ಯ' ಎಂದರು. ಇವರ ಮಧ್ಯೆ ತೀವ್ರ ಭಿನ್ನಾಭಿಪ್ರಾಯಗಳುಂಟಾದವು. ಇವರಿಬ್ಬರ ನಡುವೆ ಉಂಟಾದ ಭಿನ್ನಾಭಿಪ್ರಾಯಗಳನ್ನು ಕೆಲವರು ಸಂಧಾನದ ಮೂಲಕ ಬಗೆಹರಿಸಿದ್ದು ಉಂಟು. ಆದರೆ ಅಸ್ಪೃಶ್ಯರ ಸ್ಥಿತಿಗತಿಗಳನ್ನು ಸುಧಾರಿಸಲು ಇವರಿಬ್ಬರೂ ಕ್ರಮ ಕೈಗೊಂಡರು ಎಂಬುದು ಮುಖ್ಯ. ಗಾಂಧೀ ಅವರು ತಮ್ಮ ರಚನಾತ್ಮಕ ಕಾರ್ಯಗಳಲ್ಲಿ ಅಸ್ಪೃಶ್ಯತಾ ನಿವಾರಣೆಯೂ ಒಂದಾಗಿದ್ದು ತಿಳಿಯುತ್ತದೆ. ಈ ಕೃತಿಯಲ್ಲಿ ಅಂಬೇಡ್ಕರ್ ಮತ್ತು ಗಾಂಧೀಜಿಯಲ್ಲಿರುವ ವೈರುಧ್ಯಗಳನ್ನು ಕೃತಿಕಾರರು ಚರ್ಚಿಸುತ್ತಾ ಹೋಗುತ್ತಾರೆ. ಆದರೆ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದುದು ಮೈಸೂರು ಸಂಸ್ಥಾನದ ಮೇಲೆ ಗಾಂಧೀಜಿ ಅವರ ಪ್ರಭಾವ ಹೆಚ್ಚಾಗಿ ಬೀರಿತೇ ಹೊರತು ಅಂಬೇಡ್ಕರ್ ಅವರ ಪ್ರಭಾವ ಬೀರಲಿಲ್ಲ ಏಕೆ? ಎಂಬ ಪ್ರಶ್ನೆ. ಮೈಸೂರಿನಲ್ಲಿ ನಡೆದ ಬ್ರಾಹ್ಮಣೇತರ ಚಳವಳಿಯು ಹಿಂದುಳಿದವರ ಒಂದು ಐಡೆಂಟಿಟಿಯನ್ನು ಹುಟ್ಟು ಹಾಕಿತು. ಈ ಹಿನ್ನೆಲೆಯಲ್ಲಿ ದಲಿತ ಉದ್ಧಾರಕ್ಕಾಗಿ ಸೌಲಭ್ಯಗಳ ಚರ್ಚೆ ನಡೆದ ವಿವರ ಮುಖ್ಯ. ಗಾಂಧೀಜಿ ಅವರ ಪ್ರಭಾವದಿಂದ ಮೈಸೂರು ಸಂಸ್ಥಾನದಲ್ಲಿ ಸ್ವದೇಶಿ ಚಳವಳಿಯನ್ನು ಪ್ರೋತ್ಸಾಹಿಸಿದರು. ಮಿರ್ಜಾ ಇಸ್ಮಾಯಿಲ್ ಅವರು ಗಾಂಧೀಜಿ ಅವರ ರಚನಾತ್ಮಕ ಕಾರ್ಯಕ್ರಮವನ್ನು ಬೆಂಬಲಿಸಿದರು. ಮೈಸೂರು ಸಂಸ್ಥಾನದಲ್ಲಿನ ನಾಯಕರು ಒಂದು ರೀತಿಯಲ್ಲಿ ಮೇಲ್ವರ್ಗಕ್ಕೆ ಸೇರಿದವರಾಗಿದ್ದು, ಅವರ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡರು ಎನ್ನಬಹುದು. ಹೀಗೆ ಈ ಕೃತಿಯಲ್ಲಿ ತಾತ್ವಿಕ ಚರ್ಚೆ ಮುಖ್ಯವಾಗಿದೆ.

ಬಿ.ಷೇಕ್ ಅಲಿ ಅವರ **ಟಿಪ್ಪು ಸುಲ್ತಾನ್: ಎ ಗ್ರೇಟ್ ಮಾರ್ಟಿಯರ್(೧೯೯೩)**[೧೦೧] ಎಂಬ ಕೃತಿ ಮುಖ್ಯವಾದುದು. ಈ ಕೃತಿಯಲ್ಲಿ ಟಿಪ್ಪು ಸುಲ್ತಾನನ ಎಲ್ಲಾ ಆಡಳಿತದ ವಿಚಾರಗಳನ್ನು ತಿಳಿಸುವ ಲೇಖನಗಳ ಸಂಗ್ರಹ ಮಾಡಲಾಗಿದೆ. ಮೈಸೂರು ಒಡೆಯರ ಚರಿತ್ರೆ ಯಲ್ಲಿ ಅತ್ಯಂತ ತೀವ್ರವಾಗಿ ಚರಿತ್ರೆಕಾರರನ್ನು 'ಎಂಗೇಜ್' ಮಾಡಿರುವ ಚಾರಿತ್ರಿಕ ವ್ಯಕ್ತಿಯೆಂದರೆ ಟಿಪ್ಪು ಸುಲ್ತಾನ್. ಈ ಕೃತಿಯ ಲೇಖನಗಳು ಟಿಪ್ಪು ಸುಲ್ತಾನನ ಆಡಳಿತ, ಫ್ರೆಂಚರ ನಡುವಿನ

ಪ್ರಮುಖ ಸಂಬಂಧಗಳು, ಮರಾಠ ಮತ್ತು ನಿಜಾಮರೊಂದಿಗಿನ ಯುದ್ಧಗಳು, ವಿದೇಶಿ ಮತ್ತು ದೇಶಿಯ ರಾಜ್ಯಗಳೊಡನೆ ಇರುವ ಸಂಬಂಧಗಳ ಆಯಾಮವನ್ನು ತಿಳಿಸುತ್ತವೆ. ಟಿಪ್ಪು ಸುಲ್ತಾನನ ವ್ಯಾಪಾರ, ವಾಣಿಜ್ಯೀಕರಣ, ಇವೇ ಮೊದಲಾದ ವಿಚಾರಗಳನ್ನು ತಿಳಿಸಲಾಗುತ್ತದೆ. ಸಮಕಾಲೀನ ಟಿಪ್ಪುವನ್ನು ಯಾವ ಒಂದು ನೆಲೆಯಲ್ಲಿ ನೋಡಲಾಗಿದೆ ಎಂಬುದು ಇಲ್ಲಿ ಮುಖ್ಯ. ಮೊದಲನೆಯದು ಅವನನ್ನು ನಿರಂಕುಶ, ಮತಾಂಧ ಎನ್ನುವ ನೆಲೆಯಲ್ಲಿ ಚಿತ್ರಿಸಿದ್ದಾರೆ, ಅನಂತರ ಅವನೊಬ್ಬ ದೂರದೃಷ್ಟಿಯ ನಾಯಕ, ಅನ್ವೇಷಕ, ಮತಸಹಿಷ್ಣು, ಅಪ್ರತಿಮ ನಾಯಕ ಎನ್ನುವುದನ್ನು ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ. ಟಿಪ್ಪು ತನ್ನ ರಾಜ್ಯವನ್ನು ಬ್ರಿಟಿಷರ ಕಪಿಮುಷ್ಟಿಯಿಂದ ಬಿಡಿಸಲು ಯತ್ನಿಸಿದ ಕಾರಣ, ತನ್ನ ಪ್ರಜೆಗಳ ಕ್ಷೇಮಕ್ಕಾಗಿ ಬಹುವಾಗಿ ಶ್ರಮಿಸಿದ ಸ್ಮರಣೀಯ ಎಂದಿದ್ದಾರೆ.

ಜಯಪ್ಪಗೌಡ ಡಿ.ಎಸ್. ಅವರು **ದಿವಾನ್ ಸರ್.ಎಂ.ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು (೧೯೧೨-೧೮)(೧೯೯೪, ಮರುಮುದ್ರಣ ೨೦೦೭)**[೧೦೨] ಎಂಬ ಪ್ರಕಟಿತ ಮಹಾ ಪ್ರಬಂಧವನ್ನು ಕೃತಿ ರೂಪದಲ್ಲಿ ಹೊರತಂದಿದ್ದಾರೆ. ಈ ಕೃತಿಯು ದಿವಾನ್ ಸರ್.ಎಂ.ವಿಶ್ವೇಶ್ವರಯ್ಯ ಅವರ ಕಾರ್ಯಸಾಧನೆಗಳನ್ನು ಅನಾವರಣಗೊಳಿಸುತ್ತದೆ. ದಿವಾನರ ಪಾತ್ರವನ್ನು ವೈಭವೀಕರಿಸುತ್ತಾ ಬರಹಗಾರರು ಮೈಸೂರಿನ ಅಭಿವೃದ್ಧಿ ಯೋಜನೆಗಳಿಗೆ ದಿವಾನರೇ ಅಡಿಪಾಯ ಹಾಕಿದರು ಎಂದು ಚಿತ್ರಿಸುತ್ತಾರೆ. ದಿವಾನರ ಕಾರ್ಯಗಳಿಗೆ ಹೆಚ್ಚು ಮಾನ್ಯತೆ ಸಿಗಬೇಕೆಂದು ತಿಳಿಸಿದ್ದಾರೆ. ಆದರೆ ಈ ತೀರ್ಮಾನವನ್ನು ಅಂದಿನ ಮೈಸೂರಿನ ರಾಜ್ಯವ್ಯವಸ್ಥೆಗೆ ಒರೆ ಹಚ್ಚಿ ನೋಡಿದಾಗ ಅಧೀನ ಸಂಸ್ಥಾನವಾಗಿ ಮೈಸೂರು ಬ್ರಿಟಿಷ್ ವಸಾಹತುಶಾಹಿ ವ್ಯವಸ್ಥೆಯ ಪರೋಕ್ಷ ಹಿಡಿತದಲ್ಲಿರುವುದು ಕಂಡುಬರುತ್ತದೆ. ಈ ಶಕ್ತಿಯ ಪ್ರತಿನಿಧಿಯಾಗಿ ರೆಸಿಡೆಂಟ್‌ರು ತೆರೆಮರೆಯಲ್ಲಿ ಬ್ರಿಟಿಷರ ಹಿತಾಸಕ್ತಿಗಳನ್ನು ಕಾಪಾಡುತ್ತಿದ್ದರು. ಒಡೆಯರು ತಮ್ಮ ಆಡಳಿತವನ್ನು ನಡೆಸುತ್ತಿದ್ದರು. ದಿವಾನರು ಕೂಡ ಸೂಕ್ತ ಸಲಹೆ, ಸೂಚನೆಗಳೊಂದಿಗೆ ಆಡಳಿತಕ್ಕೆ ಸಹಕರಿಸುತ್ತಿದ್ದರು ಎಂಬುದು ಮುಖ್ಯ. ಆದರೆ ಆರ್ಥಿಕ ಅಭಿವೃದ್ಧಿಗೆ ದಿವಾನರೇ ಮುಖ್ಯ ಎಂದು ತೀರ್ಮಾನಿಸಿದ್ದಾರೆ. ಆದರೆ ಎಲ್ಲರ ಪಾತ್ರವೂ ಇಲ್ಲಿ ಮುಖ್ಯ ಎಂಬುದನ್ನು ಮನಗಾಣಬೇಕು.

ಒಡೆಯರು ಬ್ರಿಟಿಷರ ರೆಸಿಡೆಂಟ್‌ರನ್ನು ಎದುರು ಹಾಕಿಕೊಳ್ಳದೆ, ದಿವಾನರಿಗೂ ಸಹಾಯಹಸ್ತ ನೀಡುತ್ತಾ ಸಂಸ್ಥಾನವನ್ನು ಅಭಿವೃದ್ಧಿಯತ್ತ ಕೊಂಡೊಯ್ದರು. ನಾಲ್ವಡಿ ಕೃಷ್ಣರಾಜ ಒಡೆಯರು ಜನಪರವಾದ ತೀರ್ಮಾನಗಳನ್ನು ಕೈಗೊಳ್ಳುತ್ತಿದ್ದ ಪೂರ್ಣ ಅಧಿಕಾರವನ್ನು ದಿವಾನರಿಗೆ ಬಿಟ್ಟು ಕೊಡದೆ ಜನರಿಗೂ ಸ್ಪಂದಿಸುವ ರೀತಿಯಲ್ಲಿ ಕಾರ್ಯಗಳನ್ನು ಕೈಗೊಂಡಿದ್ದರ ವಿವರಗಳನ್ನು ತಿಳಿಯಬಹುದು.

ಈ ಕೃತಿಯಲ್ಲಿ ಸರ್.ಎಂ.ವಿಶ್ವೇಶ್ವರಯ್ಯ ಅವರ ಕಾರ್ಯಸಾಧನೆಗಳನ್ನು ಹೊಗಳಿಕೆ ಯಲ್ಲಿಯೇ ರಚಿಸಿದ್ದಾರೆ. ಹಿಂದುಳಿದ ವರ್ಗಗಳ ಮೀಸಲಾತಿ ಕುರಿತಂತೆ ಸರ್ ಎಂ.ವಿಶ್ವೇಶ್ವರಯ್ಯ ತಳೆದ ನಿಲುವನ್ನು ಪರಿಶೀಲಿಸಿ ವ್ಯಾಖ್ಯಾನ ಮಾಡಿಲ್ಲ. ಮೀಸಲಾತಿಯ ವಿಷಯ ದಿವಾನರ ರಾಜೀನಾಮೆಗೆ ಕಾರಣವಾಯಿತು ಎಂಬುದು ಮುಖ್ಯ. ಪಿ.ಲಂಕೇಶ್ ಅವರ ಬರಹಗಳಲ್ಲಿ

ಸರ್ ಎಂ.ವಿಶ್ವೇಶ್ವರಯ್ಯ ಅವರನ್ನು ಹೊಗಳಿರುವುದನ್ನು ಗಮನಿಸಬಹುದು(ಪು.೨೬೭). ಅವರನ್ನು ಗಾಂಧೀಜಿ ಅವರಿಗೆ ಹೋಲಿಕೆ ಮಾಡಿದ್ದಾರೆ. ಒಟ್ಟಿನಲ್ಲಿ ಜಯಪ್ಪಗೌಡರು ವಿಶ್ವೇಶ್ವರಯ್ಯ ಅವರ ಜೀವನ ಸಾಧನೆಗಳನ್ನು ಸಂಪೂರ್ಣವಾಗಿ ತಿಳಿಸುತ್ತಾ ಹೋಗುತ್ತಾರೆ. ಆದರೆ ಜನಸಾಮಾನ್ಯರಿಗೆ ದಿವಾನರೇ ಪ್ರತ್ಯಕ್ಷ ಪ್ರಭುಗಳಾಗಿದ್ದರು ಎನ್ನುತ್ತಾರೆ. ಆದುದರಿಂದಲೇ ಈ ಕಾಲವನ್ನು ದಿವಾನರ ಆಡಳಿತ ಕಾಲವೆಂದು ಇತಿಹಾಸಕಾರರು ಹೇಳುತ್ತಾರೆ. ಇಲ್ಲಿ ವ್ಯಕ್ತಿಕೇಂದ್ರಿತವಾಗಿ ಚಿತ್ರಣ ವ್ಯಕ್ತವಾಗಿದೆ. ಒಂದು ವ್ಯವಸ್ಥೆಯನ್ನು ಮತ್ತು ಇತರ ಶಕ್ತಿಗಳ ಅಸ್ಮಿತೆಯನ್ನು ತೋರಿಸಲು ಲೇಖಕರು ವಿಫಲರಾಗಿದ್ದಾರೆ.

ಗೋಪಾಲರಾವ್ ಎಚ್.ಎಸ್. ಅವರ **ಕರ್ನಾಟಕ ಏಕೀಕರಣ ಇತಿಹಾಸ(೧೯೯೬)**[೧೦೩] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯಲ್ಲಿ ಮೈಸೂರು ಸಂಸ್ಥಾನ ಏಕೀಕರಣದಲ್ಲಿ ಹೇಗೆ ಭಾಗವಹಿಸಿತು ಎಂಬುದನ್ನು ವಿವರಿಸಲಾಗಿದೆ. ಮೈಸೂರು ಸಂಸ್ಥಾನದಲ್ಲೂ ಕರ್ನಾಟಕ ಏಕೀಕರಣ ಪರವಾಗಿ ಹಲವಾರು ನಿರ್ಣಯಗಳು ಸಭೆ, ಸಮ್ಮೇಳನಗಳಲ್ಲಿ ಮಂಡಿತವಾದವು ಎನ್ನುತ್ತಾರೆ. ಜವಾಬ್ದಾರಿ ಸರ್ಕಾರದ ಸ್ಥಾಪನೆಯಾಯಿತು. ಅನಂತರ ಭಾಷಾವಾರು ಪ್ರಾಂತ್ಯ ರಚನೆಗಾಗಿ ಕ್ರಮ ಕೈಗೊಂಡು ಸಮಿತಿಗಳನ್ನು ನೇಮಿಸಿತು. ಮೈಸೂರು ಕಾಂಗ್ರೆಸ್ ಸಮಿತಿಯು ಸಂಯುಕ್ತ ಕರ್ನಾಟಕ ಪ್ರಾಂತ್ಯ ರಚನೆಯ ಅವಶ್ಯಕತೆಯನ್ನು ತಿಳಿಸಿತು. ಮೈಸೂರಿನಲ್ಲಿ ಜಾತಿಯ ಒಳಸುಳಿಗಳು ಕರ್ನಾಟಕದ ಏಕೀಕರಣಕ್ಕೆ ಅಡ್ಡಗಾಲು ಹಾಕಿದವು ಎಂಬುದನ್ನು ತಿಳಿಸಿದ್ದಾರೆ. ಮೈಸೂರು ಪ್ರದೇಶ ಕಾಂಗ್ರೆಸ್ ಪಕ್ಷವು ಪಕ್ಷದ ಹೆಸರಿನಲ್ಲಿ ಯಾವ ಮನವಿಯನ್ನು ನೀಡುವುದಕ್ಕಾಗಲೀ, ಯಾವ ಹೇಳಿಕೆಯನ್ನು ನೀಡುವುದಕ್ಕಾಗಲೀ ನಿರ್ಬಂಧಿಸಿದುದ್ದರಿಂದ, ವೈಯಕ್ತಿಕವಾಗಿ ಹಲವು ಕಾಂಗ್ರೆಸ್ ನಾಯಕರು ತಮ್ಮ ಹೇಳಿಕೆಗಳನ್ನು ನೀಡಿದರು. ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷ ಎಚ್.ಕೆ.ವೀರಣ್ಣ ಗೌಡ, ಕಾರ್ಯದರ್ಶಿ ಟಿ.ಮರಿಯಪ್ಪ, ಟಿ.ಸುಬ್ರಮಣ್ಯ, ಎ.ಭೀಮಪ್ಪ ನಾಯಕ ಮೊದಲಾದ ಕಾಂಗ್ರೆಸ್ ಧುರೀಣರು ಆಯೋಗದ ಸದಸ್ಯರನ್ನು ಭೇಟಿಯಾಗಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಮೈಸೂರು ಸಂಸ್ಥಾನದ ಪ್ರಜಾ ಸಮಾಜವಾದಿ ಪಕ್ಷ, ಕಮ್ಯುನಿಸ್ಟ್ ಪಕ್ಷ, ಒಕ್ಕಲಿಗರ ಸಂಘ, ವೀರಶೈವ ಸಂಘ, ಕುರುಬರ ಸಂಘ, ವಕೀಲರ ಸಂಘ ಇತ್ಯಾದಿಗಳು ಆಯೋಗಕ್ಕೆ ವರದಿ ಸಲ್ಲಿಸಿದವು. ಹೀಗೆ ಮೈಸೂರು ಸಂಸ್ಥಾನವು ಏಕೀಕರಣಕ್ಕೆ, ಭಾಷಾವಾರು ಪ್ರಾಂತ್ಯ ರಚನೆಗೆ ಸ್ಪಂದಿಸಿತು ಎಂಬುದನ್ನು ಈ ಕೃತಿಯಲ್ಲಿ ಕೃತಿಕಾರರು ಕಟ್ಟಿಕೊಡುತ್ತಾರೆ.

ಆಧುನಿಕ ಮೈಸೂರಿನ ಚರಿತ್ರೆಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡ ಕೃತಿ ಎಂದರೆ ಆರ್.ರಾಮಕೃಷ್ಣನ್ ಅವರು ಬರೆದಿರುವ **ಪ್ರೆಸ್ ಅಂಡ್ ಪಾಲಿಟಿಕ್ಸ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು(೧೮೫೯-೧೯೪೭)(೧೯೯೭).**[೧೦೪] ಈ ಕೃತಿಯು ೧೮೫೯ ರಿಂದ ೧೯೪೭ರ ಅವಧಿಯ ಮೈಸೂರು ರಾಜ್ಯದಲ್ಲಿನ ವೃತ್ತಪತ್ರಿಕೆಗಳ ಇತಿಹಾಸವನ್ನು ಕಟ್ಟಿಕೊಡುತ್ತದೆ. ಬರಹಗಾರರು ಈ ಅವಧಿಯಲ್ಲಿ ಪ್ರತಿಕೋದ್ಯಮ ಮತ್ತು ರಾಜಕೀಯದ ನಡುವೆ ಇದ್ದ ಸಂಬಂಧಗಳನ್ನು ಮುಖ್ಯವಾಗಿ ಗುರುತಿಸುವ ಪ್ರಯತ್ನವನ್ನು ಮಾಡಿದ್ದಾರೆ. ಮೈಸೂರಿನ ಚರಿತ್ರೆಯ ಎಲ್ಲಾ ಚಳವಳಿಗಳಲ್ಲೂ ಪತ್ರಿಕೆಗಳು ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿವೆ. ವಿವಿಧ ಕಾಲಘಟ್ಟಗಳಲ್ಲಿ

ವೃತ್ತಪತ್ರಿಕೆಗಳು ಇಲ್ಲಿಯ ಚಳವಳಿಗಳನ್ನು ದಾಖಲಿಸುವುದಲ್ಲದೇ ಅವುಗಳನ್ನು ಹೇಗೆ ನಿರ್ದೇಶಿಸಿದವು ಎಂಬುದನ್ನು ವಿವರಿಸುತ್ತಾರೆ. ಮೊದಲನೆಯ ಅಧ್ಯಾಯದಲ್ಲಿ ಈ ಕಾಲಮಿತಿಯೊಳಗೆ ಬರುವ ರಾಜಕೀಯ ಅಂಶಗಳು, ಒಡೆಯರ ಆಡಳಿತ, ದಿವಾನರ ಆಡಳಿತದ ಕೆಲವು ವಿವರಗಳನ್ನು ತಿಳಿಯಬಹುದು. ಅಧ್ಯಾಯ ಎರಡರಲ್ಲಿ ಮೈಸೂರಿನ ರಾಜಕೀಯ ಸ್ಥಿತಿಗತಿಗಳು, ಪತ್ರಿಕೆಗಳಲ್ಲಿ ಹೇಗೆ ಬಿಂಬಿಸಲಾಗಿದೆ ಎಂಬುದನ್ನು ಚರ್ಚಿಸಿದ್ದಾರೆ. ಈ ಪತ್ರಿಕೆಗಳು ಮೈಸೂರು ಸಂಸ್ಥಾನದ ಸಾಮಾಜಿಕ ಸುಧಾರಣೆಗಳನ್ನು ಬಿಂಬಿಸಿವೆ. ಮೊದಲು ದಿವಾನರ ಹುದ್ದೆಗಾಗಿ ಮೈಸೂರು–ಮದ್ರಾಸಿಗರ ಸಂಘರ್ಷವನ್ನು ಕರ್ನಾಟಕ ಪ್ರಕಾಶಿಕ ಪತ್ರಿಕೆಯು ವಿವರಗಳನ್ನು ನೀಡಿತು. ರಂಗಚಾರ್ಲು ಮತ್ತು ಶೇಷಾದ್ರಿ ಅಯ್ಯರ್ ಅವರ ಆಡಳಿತದ ಬಗೆಗೆ ಕರ್ನಾಟಕ ಪ್ರಕಾಶಿಕ ಪತ್ರಿಕೆಯು ಮಾಹಿತಿಗಳನ್ನು ನೀಡಿತು. ಶಿಕ್ಷಣದ ಮೂಲಕ ಮೈಸೂರಿನ ಹಿಂದೂಗಳು ತಮ್ಮ ಸಮಾಜದಲ್ಲಿ ಸುಧಾರಣೆಯನ್ನು ತರುವ ಅವಶ್ಯಕತೆಯನ್ನು ಕಂಡುಕೊಂಡರು. ಇದಲ್ಲದೇ ಕ್ರೈಸ್ತ ಮಿಷನರಿಗಳು ಹಿಂದೂ ಸಮಾಜದ ಅನೇಕ ಕಟ್ಟಳೆಗಳನ್ನು, ಆಚರಣೆಗಳನ್ನು, ಸಂಪ್ರದಾಯಗಳನ್ನು, ತೀಕ್ಷ್ಣವಾಗಿ ಟೀಕಿಸಿದ್ದು ಮತ್ತು ಮೌಢ್ಯವನ್ನು ಎತ್ತಿ ತೋರಿಸಿದ್ದೂ ಸಹ ಇಲ್ಲಿನ ಸಾಮಾಜಿಕ ಸುಧಾರಣೆಗೆ ಪ್ರಚೋದನೆ ನೀಡಿತು ಎಂಬ ಈ ಹಾದಿಯಲ್ಲಿ ಕರ್ನಾಟಕ ಪ್ರಕಾಶಿಕೆ ಪತ್ರಿಕೆಯ ನಿಲುವುಗಳನ್ನು ವಿವರಿಸಿರುವುದನ್ನು ನೋಡಬಹುದು. ಮೈಸೂರು ಸರ್ಕಾರವು ೧೮೯೪ರಲ್ಲಿ ಬಾಲ್ಯವಿವಾಹ ನಿಷೇಧ ಶಾಸನವನ್ನು ಜಾರಿಗೊಳಿಸಿತು. ಇದು ಸರ್ಕಾರ ಹೊರತಂದ ಬಹುಮುಖ್ಯವಾದ ಸಾಮಾಜಿಕ ಸುಧಾರಣಾ ಶಾಸನ. ಇದಕ್ಕೆ ಮೈಸೂರಿನ ಪ್ರಮುಖ ಪತ್ರಿಕೆಗಳು ಬೆಂಬಲ ನೀಡಿದವು. ಈ ಶಾಸನಕ್ಕೆ ಸಾರ್ವಜನಿಕರ ವಿರೋಧ ವ್ಯಕ್ತವಾದರೂ ಇದನ್ನು ಜಾರಿಗೊಳಿಸಲಾಯಿತು. ಇದರಿಂದಾಗಿ ಮೈಸೂರಿನ ಖ್ಯಾತಿ ಎಲ್ಲಾ ಕಡೆ ಹರಡುವಂತೆ ಪತ್ರಿಕೆಗಳು ತಮ್ಮ ಪಾತ್ರವನ್ನು ವಹಿಸಿವೆ(ಪು.೩೫–೩೬).

ಹಿಂದುಳಿದ ವರ್ಗಗಳ ಚಳವಳಿಗೆ ಸಂಬಂಧಿಸಿದಂತೆ ಈ ಪತ್ರಿಕೆಗಳು ಮಹತ್ವದ ಪಾತ್ರವನ್ನು ವಹಿಸಿವೆ. 'ಮೈಸೂರ್ ಸ್ಟಾರ್' ಮತ್ತು 'ಸಾಧ್ವಿ ಪತ್ರಿಕೆ'ಗಳು ಪ್ರಾರಂಭವಾದವು. ಹಿಂದುಳಿದ ವರ್ಗಗಳು ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕವಾಗಿ ತಮ್ಮ ಪ್ರಭಾವ ಬೀರಿದವು ಎಂಬುದನ್ನು ವಿವರಿಸಿದ್ದಾರೆ(ಪು.೪೪–೪೫). ಬೆಂಗಳೂರಿನಲ್ಲಿ ನಡೆದ ಗಣಪತಿ ಗಲಾಟೆಯು ಯಾವ ರೀತಿ ಕೋಮುಭಾವನೆಯನ್ನು ಬಿತ್ತಿದವು ಎಂಬುದನ್ನು ಈ ಪತ್ರಿಕೆಗಳು ವಿವರಿಸುತ್ತಾ ಹೋಗುತ್ತವೆ(ಪು.೬೨–೬೩). ೧೯೩೮ರಲ್ಲಿ ನಡೆದ ವಿಧುರಾಶ್ವತ್ಥ ಘಟನೆ ಬಗೆಗೆ ವಿಷಯವನ್ನು ಬಿತ್ತರಿಸಿದವು. ರಾಷ್ಟ್ರೀಯ ಕಾಂಗ್ರೆಸ್ ಬಾವುಟವನ್ನು ಹಾರಿಸಲು ಸ್ಥಳ ಗೊತ್ತು ಮಾಡಿತು. ಆದರೆ ಬ್ರಿಟಿಷರು ಅಲ್ಲಿನ ಜನರ ಮೇಲೆ ಗುಂಡು ಹಾರಿಸಿದಾಗ ಅನೇಕರು ಸಾವನ್ನಪ್ಪಿದರು. ಈ ಘಟನೆಯನ್ನು 'ನವಜೀವನ' ಪತ್ರಿಕೆಯಲ್ಲಿ ಪ್ರಕಟಿಸಿತು(ಪು.೭೧–೭೨). ಈ ಘಟನೆಯಲ್ಲಿ ಜನರು ಸಾವನ್ನಪ್ಪಿದ ರೀತಿಯನ್ನು ಅಗ್ರಲೇಖನವಾಗಿ ವಿಶ್ವಕರ್ನಾಟಕ ಪತ್ರಿಕೆ ಚಿತ್ರಿಸಿತು. ಅಲ್ಲದೇ ಇದರಿಂದ ತಿ.ತಾ.ಶರ್ಮ ಅವರ ವಿಶ್ವಕರ್ನಾಟಕ ಪತ್ರಿಕೆಯು ಕೆಲವು ನಿಬಂಧನೆಗಳಿಗೆ ಒಳಗಾಯಿತು ಎಂಬುದು ಮುಖ್ಯ. ದಿವಾನರಾಗಿದ್ದ ಎನ್.ಮಾಧವರಾಯರ ಸರ್ಕಾರವನ್ನು ಕುರಿತು ಕೃಷ್ಣಶರ್ಮರು ಬರೆದ "ಮಾಡಿದ್ದುಣ್ಣೋ ಮಹಾರಾಯ!" ಎಂಬ

ಲೇಖನವನ್ನು ವಿಶ್ವಕರ್ನಾಟಕ ಪತ್ರಿಕೆಯು ಪ್ರಕಟಿಸಿತು. ಇದರಿಂದ ೧೯೪೬ರಲ್ಲಿ ಪತ್ರಿಕೆಯ ಪ್ರತಿಗಳನ್ನು ಮುಟ್ಟುಗೋಲು ಹಾಕಿಕೊಂಡಿತಲ್ಲದೇ ಎರಡು ತಿಂಗಳು ಪ್ರಕಟಿಸಬಾರದೆಂದು ಆಜ್ಞೆ ಮಾಡಿತು. ಮೈಸೂರು ಪತ್ರಿಕೆಗಳ ಇತಿಹಾಸದಲ್ಲಿ ಹೀಗೆ ಮುಟ್ಟುಗೋಲಾದ ಮೊದಲ ಪತ್ರಿಕೆ "ವಿಶ್ವಕರ್ನಾಟಕ" ಎಂಬುದನ್ನು ಇಲ್ಲಿ ತಿಳಿಯಬಹುದು(ಪು.೭೬-೭೭).

ರಾಷ್ಟ್ರೀಯ ಚಳವಳಿಯಲ್ಲಿ ಪತ್ರಿಕೆಗಳು ಗುರುತಿಸಿಕೊಂಡಿವೆ. ಕರ್ನಾಟಕ ಪ್ರಕಾಶಿಕದಲ್ಲಿ ಬ್ರಿಟಿಷರ ಆಡಳಿತದ ವಿವರ, ಸ್ವದೇಶಿ ಚಳವಳಿಯ ರೂಪುರೇಷೆಯನ್ನು ಮೈಸೂರು ಸ್ಟಾರ್ ಪತ್ರಿಕೆಯಲ್ಲಿ ಪ್ರಕಟಿಸಿದರು. ಹಾಗೆಯೇ ಅಸ್ಪೃಶ್ಯತೆಯ ಹೋರಾಟದ ವಿವಿಧ ಮಜಲುಗಳನ್ನು ಈ ಪತ್ರಿಕೆಯಲ್ಲಿ ನೋಡಬಹುದು(ಪು.೮೪). ಅಸಹಕಾರ ಚಳವಳಿಯಿಂದ ಕ್ವಿಟ್ ಇಂಡಿಯಾ ಚಳವಳಿಯವರೆಗೆ ಸಾಧ್ವಿ ಪತ್ರಿಕೆಯಲ್ಲಿ ಲೇಖನಗಳು ಪ್ರಕಟವಾದವು. ಗಾಂಧೀಜಿಯ ದಂಡಿ ಸತ್ಯಾಗ್ರಹವನ್ನು ವಿಶ್ವಕರ್ನಾಟಕ, ತಾಯಿನಾಡು ಮತ್ತು ಚಿತ್ರಗುಪ್ತ ಪತ್ರಿಕೆಗಳಲ್ಲಿ ಪ್ರಕಟಿಸಲಾಯಿತು. ದುಂಡುಮೇಜಿನ ಸಮ್ಮೇಳನದ ವಿಚಾರಗಳನ್ನು ವಿಶ್ವಕರ್ನಾಟಕ, ರಾಷ್ಟ್ರಬಂಧು, ತಾಯಿನಾಡು ಪತ್ರಿಕೆಗಳು ಪ್ರಕಟಿಸಿದವು. ಸಾರ್ವಜನಿಕರ ಹಿತಾಸಕ್ತಿಗೆ ಅನುಗುಣವಾಗಿ ಪತ್ರಿಕೆಗಳ ಲೇಖನಗಳು ಪ್ರಕಟವಾಗಬೇಕು. ಇಲ್ಲದಿದ್ದರೆ ಆ ಪತ್ರಿಕೆಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಒಂದು ಷರತ್ತನ್ನು ವಿಧಿಸಲಾಯಿತು. ಈ ಕಾಯ್ದೆಗಳು ಪತ್ರಿಕೆಗಳ ಮೇಲೆ ನಿರ್ಬಂಧದ ರೀತಿಯಲ್ಲಿ ಹೇರಲ್ಪಟ್ಟವು(ಪು.೯೩-೧೧೧). ಈ ನಿಟ್ಟಿನಲ್ಲಿ ಮೈಸೂರಿನ ವೃತ್ತಪತ್ರಿಕೆಗಳ ಚರಿತ್ರೆಯನ್ನು ಕೃತಿಯ ಮೂಲಕ ಕಟ್ಟಿಕೊಟ್ಟಿರುವುದನ್ನು ನೋಡಬಹುದು. ರಾಷ್ಟ್ರೀಯವಾದಿ ನೆಲೆಯಲ್ಲಿ ಆ ಕಾಲದ ಚರಿತ್ರೆಯನ್ನು ಗ್ರಹಿಸಿದ್ದಾರೆ. ಆದರೆ ವೃತ್ತಪತ್ರಿಕೆಗಳು ಸಾಮಾಜಿಕ ಹಿನ್ನೆಲೆಯಲ್ಲಿ ಹೇಗೆ ಬೇರೆಬೇರೆ ಬಗೆಯಲ್ಲಿಯೇ ಪ್ರತಿಕ್ರಿಯಿಸಿದವು ಎಂಬುದನ್ನು ಬರಹಗಾರರು ಹೇಳದಿರುವುದನ್ನು ಗಮನಿಸಬಹುದು. ಸರ್ಕಾರದ ಅಧಿಕಾರದಿಂದಾದ ತೀರ್ಮಾನಗಳನ್ನು ಪತ್ರಿಕೆಗಳು ತಿಳಿಸುತ್ತಾ ಹೋಗುತ್ತವೆ. ವೃತ್ತಪತ್ರಿಕೆಗಳು ಪ್ರತಿಕ್ರಿಯಿಸಿದ ವಿವರಗಳನ್ನು ನಿರೂಪಿಸುವುದೇ ಇಲ್ಲಿಯ ಮುಖ್ಯ ಆಶಯವೇ ಹೊರತು ಅದರ ವಿಶ್ಲೇಷಣೆಯಲ್ಲ. ವೃತ್ತಪತ್ರಿಕೆಗಳು ಕಟ್ಟಿಕೊಡುವ ಚರಿತ್ರೆಯು ಕೂಡ ಬಹಳ ಮುಖ್ಯವಾದುದು ಎಂದು ನಿರೂಪಿಸಿದ್ದಾರೆ. ವಿಚಾರಗಳು ತಲುಪಲು ಪತ್ರಿಕೆಗಳು ಮುಖ್ಯ ಪಾತ್ರ ವಹಿಸಿವೆ ಎಂಬುದನ್ನು ಈ ಕೃತಿಯ ಮೂಲಕ ತಿಳಿಯಬಹುದು.

ಮಾದೇಗೌಡ ಅವರ **ಮಾಡರ್ನ್ ಮೈಸೂರ್ ಸ್ಟೇಟ್ ೧೮೮೧-೧೯೦೨, ಎ ಸ್ಟಡಿ ಆಫ್ ದಿ ಎಲೀಟ್, ಪಾಲಿಟಿ ಆ್ಯಂಡ್ ಸೊಸೈಟಿ, ಮೈಸೂರು**(೧೯೯೭)[೧೦೫] ಎಂಬ ಪ್ರಕಟಿತ ಮಹಾಪ್ರಬಂಧವು ಮುಖ್ಯವಾದುದ್ದು. ಸಮಾಜದ ಪರಿವರ್ತನೆಯ ಆಯಾಮಗಳನ್ನು ನೇರವಾಗಿ ಹೇಳಿಲ್ಲವಾದರೂ ಸಮಾಜದ ಕೆಲವು ಕಟ್ಟುಪಾಡುಗಳನ್ನು ತಿಳಿಸಿದ್ದಾರೆ. ಪ್ರತಿಷ್ಠಿತ ವರ್ಗ, ರಾಜ್ಯವ್ಯವಸ್ಥೆ ಮತ್ತು ಸಮಾಜ ಇವುಗಳ ಅನಾವರಣವನ್ನು ವಿಶ್ಲೇಷಿಸಿದ್ದಾರೆ. ಪ್ರತಿಷ್ಠಿತ ವರ್ಗಗಳಲ್ಲಿ ಅಧಿಕಾರವರ್ಗ, ಅಧಿಕಾರೇತರವರ್ಗ, ರೈತವರ್ಗ, ವ್ಯಾಪಾರಿವರ್ಗ, ಶ್ರೀಮಂತವರ್ಗ, ಬ್ರಾಹ್ಮಣವರ್ಗ ಮತ್ತು ಬ್ರಾಹ್ಮಣೇತರವರ್ಗ ಎಂಬುದನ್ನು ನೋಡಬಹುದು. ಇಲ್ಲಿ ಜನಸಾಮಾನ್ಯರಾಗಿ ಗುರುತಿಸಿಕೊಂಡವರನ್ನು ಹಿಂದಕ್ಕೆ ಸರಿಸಿದ್ದಾರೆ ಎನ್ನುತ್ತಾರೆ. ಸಮಾಜದ ಪರಿವರ್ತನೆಯಲ್ಲಿ ರಾಜ್ಯವ್ಯವಸ್ಥೆ ಮತ್ತು ಪ್ರತಿಷ್ಠಿತ ವರ್ಗಗಳು ಸಮಾಜದ ಒಳಗಿನ ಭಾಗಗಳಾಗಿದ್ದು, ರಾಜ್ಯವ್ಯವಸ್ಥೆಯು

ಸಮಾಜದ ಒಳಗಡೆಯೇ ರೂಪುಗೊಳ್ಳುತ್ತದೆ. ಪ್ರತಿಷ್ಠಿತ ವರ್ಗಗಳೇ ಹೆಚ್ಚಾಗಿರುವುದರಲ್ಲಿ ಬ್ರಾಹ್ಮಣವರ್ಗವು ಹೆಚ್ಚು ಅಧಿಕಾರವನ್ನು ಹೊಂದಿದ್ದುದನ್ನು ನೋಡಬಹುದು. ಎಲ್ಲಾ ವರ್ಗಗಳ ನಡುವೆ ಅಧಿಕಾರ ತಾರತಮ್ಯ ಇದ್ದುದನ್ನು ಗಮನಿಸಬಹುದು. ಬ್ರಿಟಿಷ್ ವಸಾಹತು ಕಾಲದಲ್ಲಿ ಕೆಲವು ರಾಜಕೀಯ ಒತ್ತಡಗಳ ಫಲವಾಗಿ ಪ್ರಜಾಪ್ರಭುತ್ವದ ಅಂಶಗಳು ಜನರನ್ನು ಎಚ್ಚರಗೊಳಿಸಿದವು. ಕಮೀಷನರ್‌ಗಳ ಆಳ್ವಿಕೆಯಲ್ಲಿ ಇದ್ದಂತಹ ಆಡಳಿತ ವ್ಯವಸ್ಥೆಗಿಂತ ಭಿನ್ನವಾದ ಆಡಳಿತವನ್ನು ನೋಡಬಹುದು. ರೈತರು, ವ್ಯಾಪಾರಿವರ್ಗವು ತಮ್ಮದೇ ಆದ ವೃತ್ತಿಯಲ್ಲಿ ತೊಡಗಿಕೊಂಡಿದ್ದರು. ಗ್ರಾಮೀಣ ಪ್ರದೇಶದ ಕೃಷಿಯಲ್ಲಿ ರೈತರು ತೊಡಗಿದ್ದು, ಕಂದಾಯವನ್ನು ಶಾನುಭೋಗ ಜೋಡಿದಾರರು ವಸೂಲಿ ಮಾಡುತ್ತಿದ್ದುದು ಮುಖ್ಯ(ಪು.೧೦೮-೧೦೯). ಈ ಅವಧಿಯಲ್ಲಿ ಅಂತಹ ಸಾಮಾಜಿಕ ಕಾರ್ಯಗಳು ಹೆಚ್ಚಾಗಿ ನಡೆಯಲಿಲ್ಲ. ಆಧುನಿಕ ಮೈಸೂರಿನ ಸಮಾಜದ ಪರಿವರ್ತನೆಯ ದೃಷ್ಟಿಯಿಂದ ಮಂದಕಾಲ ಎನ್ನಬಹುದು. ಮೈಸೂರು ಸಂಸ್ಥಾನದ ಬ್ರಿಟಿಷ್ ಪ್ರಭುತ್ವದಡಿಯಲ್ಲಿ ಮಹಿಳೆ ರೇಜೆಂಟಳಾಗಿ ಆಳ್ವಿಕೆ ನಡೆಸಿದ್ದು ಸಹ ಆ ಕಾಲದ ಒಂದು ಪ್ರಮುಖ ಅಂಶವೇ ಆಗಿದೆ. ಒಟ್ಟಾರೆಯಾಗಿ ಆಧುನಿಕ ಮೈಸೂರಿನ ಚರಿತ್ರೆಯನ್ನು ಅದರಲ್ಲೂ ೧೦ನೇ ಚಾಮರಾಜ ಒಡೆಯರ ಅವರ ಕಾಲದ ಪ್ರಕ್ರಿಯೆಗಳನ್ನು ತಿಳಿಯಬಹುದು.

ಸಿದ್ಧಲಿಂಗಸ್ವಾಮಿ ಅವರು **ಅಗ್ರೇರಿಯನ್ ರಿಲೇಶನ್ಸ್ ಇನ್ ಮೈಸೂರು ೧೭೯೯-೧೮೮೧(೧೯೯೭)**[೧೦೬] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಕೃತಿ ರೂಪದಲ್ಲಿ ಹೊರ ತಂದಿದ್ದಾರೆ. ಈ ಕೃತಿಯ ಮೈಸೂರಿನ ಕೃಷಿವ್ಯವಸ್ಥೆ ಮತ್ತು ಮೈಸೂರಿನ ಭೂ ಸಂಬಂಧಗಳನ್ನು ಎಡಪಂಥೀಯ ದೃಷ್ಟಿಕೋನದಲ್ಲಿ ಚರ್ಚಿಸುತ್ತದೆ. ಮೊದಲು ಭೂ ಒಡೆತನ ಸ್ಥಳೀಯವಾಗಿ ಹೇಗಿತ್ತು ಎಂಬುದರ ಸೂಕ್ಷ್ಮನೋಟ ನೀಡುತ್ತಾರೆ. ಇಲ್ಲಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ವಿಧಿಸಿದ್ದ ಅಧಿಕ ತೆರಿಗೆಯ ವಿರುದ್ಧ ಹೋರಾಟ ನಡೆದ ಘಟನೆಯನ್ನು ಇಲ್ಲಿ ತಿಳಿಸಿದ್ದಾರೆ. ಅಧಿಕ ತೆರಿಗೆಯನ್ನು ವಿರೋಧಿಸಲು ಜಂಗಮರು ರೈತರನ್ನು ಸಂಘಟಿಸುತ್ತಿದ್ದರು. ಆದರೆ ಇದು ರಾಜದ್ರೋಹ ಎಂದು ಜಂಗಮರನ್ನು ಕೊಲ್ಲಿಸಿದ ಕ್ರೌರ್ಯವನ್ನು ವಿವರಿಸಿದ್ದಾರೆ. ಇಲ್ಲಿ ಭೂ ಒಡೆತನ ಕೆಲವರ ಪಾಲಾಗಿತ್ತು. ಟಿಪ್ಪು ಸುಲ್ತಾನನ ಕಾಲದಲ್ಲಿ ಕೆಲವು ಬದಲಾವಣೆಗಳನ್ನು ತಂದನು. ಭೂಮಿಯ ಫಲವತ್ತತೆಯ ಮೇಲೆ ತೆರಿಗೆ ವಿಧಿಸಿದನು ಎಂಬುದು ಮುಖ್ಯ. ಬ್ರಿಟಿಷರು ಟಿಪ್ಪು ನಂತರ ಅಧಿಕಾರವನ್ನು ತೆಗೆದುಕೊಂಡು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ನೀಡಿದರು. ಇವರ ಆಡಳಿತದಲ್ಲಿ ಮುಖ್ಯವಾಗಿ ೧೮೩೦ರ ನಗರದಂಗೆಯು ತೆರಿಗೆಯ ವಿರುದ್ಧ ನಡೆದುದಾಗಿದೆ. ಅನಂತರ ಕಮೀಷನರ್‌ಗಳ ಆಳ್ವಿಕೆಯಲ್ಲಿ ಕೃಷಿವ್ಯವಸ್ಥೆಯ ಚಿತ್ರಣ ನೀಡುತ್ತಾರೆ.

ದಿವಾನ್ ಪೂರ್ಣಯ್ಯ ಟಿಪ್ಪು ಸುಲ್ತಾನನ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿಯೂ ದಿವಾನರಾಗಿ ಮುಂದುವರಿದರು. ದಿವಾನ್ ಪೂರ್ಣಯ್ಯ ಮೊದಲು ಬ್ರಾಹ್ಮಣರಿಗೆ ಮತ್ತು ದೇವಾಲಯಗಳಿಗೆ ನೀಡಿದ ಇನಾಂ ಭೂಮಿಯನ್ನು ಹಿಂತೆಗೆದುಕೊಂಡ ವಿವರಗಳನ್ನು ತಿಳಿಸಿದ್ದಾರೆ. ಮುಜರಾಬಾದಿನಲ್ಲಿ ಕಂದಾಯವನ್ನು ವಾರಾಹ ಶಿಸ್ತು ಎಂದು ಕರೆಯಲಾಗುತ್ತಿದ್ದು, ಹೈದರಾಲಿ ಈ ಶಿಸ್ತನ್ನು ದ್ವಿಗುಣಗೊಳಿಸಿದರೆ, ಪೂರ್ಣಯ್ಯ ತ್ರಿಗುಣಗೊಳಿಸಿದರು(ಪು.೩೬). ಹೀಗೆ ದಿವಾನ್ ಪೂರ್ಣಯ್ಯ ಅವರ ದುರಾಡಳಿತದಿಂದ ತೆರಿಗೆ ವಿಧಿಸಿ ಜನರನ್ನು ತೊಂದರೆಗೆ

ಒಳಪಡಿಸಿದನು. ಈ ದುರಾಡಳಿತದ ಕೆಟ್ಟ ಪರಿಣಾಮ ಮಹಾರಾಜರ ಮೇಲೆ ಬಿದ್ದು ತೊಂದರೆಗೆ ಒಳಗಾದ ಜನರಿಗೆ ಪರಿಹಾರ ನೀಡಲು ರಾಜನು ಕಂದಾಯ ಮಾಫಿ ಮಾಡಬೇಕಾಯಿತು. ತೊಂದರೆಗೆ ಒಳಗಾದ ಇತರ ನಗರದ ರೈತರು ಬಂಡಾಯ ಹೂಡಲು ಕಾರಣವಾಯಿತು ಎಂದು ದಿವಾನ್ ಪೂರ್ಣಯ್ಯ ಅವರ ಆಡಳಿತವನ್ನು ಇಲ್ಲಿ ವಿವರಿಸಿದ್ದಾರೆ. ನಗರದಂಗೆಯಿಂದಾಗಿ ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರ ಕಳೆದುಕೊಂಡು, ಕಮೀಷನರ್‌ಗಳ ಆಳ್ವಿಕೆ ಪ್ರಾರಂಭವಾಯಿತು. ಮಾರ್ಕ್ ಕಬ್ಬನ್ ರೈತವಾರಿ ಪದ್ಧತಿಯಲ್ಲಿ ಹೇಗೆ ಬದಲಾವಣೆಗಳನ್ನು ಜಾರಿಗೆ ತಂದನು ಎಂಬುದನ್ನು ಇಲ್ಲಿ ಮುಖ್ಯವಾಗಿ ವಿಶ್ಲೇಷಿಸಿದ್ದಾರೆ. ಕಬ್ಬನ್ ತನ್ನ ಸರ್ಕಾರಕ್ಕೆ ಲಾಭ ತರುವ ಉದ್ದೇಶದಿಂದ ಇಲ್ಲಿನ ಸಂಪನ್ಮೂಲಗಳನ್ನು ಬಳಸಿಕೊಂಡು ಅದರ ಮೇಲೆ ಆಧಿಪತ್ಯವನ್ನು ಸ್ಥಾಪಿಸಿದ್ದನ್ನು ವಿಶ್ಲೇಷಿಸಲಾಗಿದೆ. ವಸಾಹತುಶಾಹಿ ಸರ್ಕಾರ ಮತ್ತು ಒಡೆಯರ ಆಡಳಿತದ ಒಟ್ಟು ವ್ಯವಸ್ಥೆಯಲ್ಲಿ ಶೋಷಣೆಗೆ ಒಳಗಾದ ಕೇಂದ್ರ ವ್ಯಕ್ತಿ ಎಂದರೆ ರೈತ ಎನ್ನುವುದನ್ನು ಹೇಳುತ್ತಾರೆ. ವಸಾಹತುಶಾಹಿ ಸರ್ಕಾರ ಜಾರಿಗೆ ತಂದ ಭೂಸಂಬಂಧ ಕಾನೂನುಗಳು ರೈತನನ್ನು ಒಕ್ಕಲೆಬ್ಬಿಸಿದ್ದನ್ನು ಮಾರ್ಕ್ಸಿಸ್ಟ್ ಚಿಂತನೆಯ ದೃಷ್ಟಿಕೋನದಲ್ಲಿ ವಿಶ್ಲೇಷಿಸಲಾಗಿದೆ. ಇಲ್ಲಿ ಜಮೀನ್ದಾರಿ, ರೈತವಾರಿ ಮತ್ತು ಮಲ್ಬಾರಿ ಪದ್ಧತಿಗಳನ್ನು ಜಾರಿಗೆ ತಂದರು ಎಂಬುದು ಮುಖ್ಯ. ವಾಣಿಜ್ಯೀಕರಣದ ಹಿನ್ನೆಲೆಯಲ್ಲಿ ಇಲ್ಲಿನ ಸ್ಥಳೀಯ ಸಂಪನ್ಮೂಲಗಳನ್ನು ಬಳಸಿಕೊಳ್ಳಲಾಯಿತು ಎಂಬುದನ್ನು ಚರ್ಚಿಸಿದ್ದಾರೆ. ಸ್ಥಳೀಯ ಮಟ್ಟದಲ್ಲಿ ಗ್ರಾಮಗಳ ನಾಯಕ, ಶಾನುಭೋಗ, ಪಟೇಲರು ವಸಾಹತು ಸರ್ಕಾರಕ್ಕೆ ಅಗತ್ಯವಾದ ಸೌಲಭ್ಯ ಗಳನ್ನೆಲ್ಲ ಒದಗಿಸುತ್ತಾ ಹೋದರು. ರೈತರು ಬೆಳೆದ ಬೆಳೆಗೆ ತೆರಿಗೆಯು ಅಧಿಕವಾಗಿತ್ತು. ಈ ತೆರಿಗೆಯನ್ನು ಸ್ಥಳೀಯ ಅಧಿಕಾರಿಗಳು ಜಮಾಬಂದಿಯ ಮೂಲಕ ಸಂಗ್ರಹಿಸಿ, ವಸಾಹತುಶಾಹಿ ಸರ್ಕಾರಕ್ಕೆ ಸಲ್ಲಿಸುತ್ತಿದ್ದರು. ಇಲ್ಲಿ ರೈತರು ಬೆಳೆದ ಬೆಳೆಗಿಂತ ಅಧಿಕ ತೆರಿಗೆಯನ್ನೇ ಕಟ್ಟಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ರೈತರ ಶೋಷಣೆ ನಿರಂತರವಾಗಿ ನಡೆಯಿತು. ಕ್ಷಾಮದ ಸಂದರ್ಭದಲ್ಲಿಯೂ ವಸಾಹತುಶಾಹಿ ಸರ್ಕಾರ ಹೇಗೆ ರೈತರನ್ನು ಶೋಷಣೆಗೆ ಒಳಮಾಡಿತು ಎಂಬುದು ಇಲ್ಲಿ ಮುಖ್ಯ. ಕ್ಷಾಮದ ನೀತಿಯು ಕೂಡ ಕೆಲವು ದೋಷಗಳನ್ನು ಹೊಂದಿತ್ತು. ಇದರ ಸೌಲಭ್ಯಗಳು ರೈತನನ್ನು ಮುಟ್ಟಲಿಲ್ಲ. ಸಾಲಸೌಲಭ್ಯಗಳನ್ನು ನೀಡಿದರೂ ಅಧಿಕ ತೆರಿಗೆಯಿಂದ ರೈತರು ತತ್ತರಿಸಿದರು ಎಂಬುದು ಗಮನಾರ್ಹವಾದುದು. ಒಟ್ಟಾರೆಯಾಗಿ ಈ ಕೃತಿಯು ವಸಾಹತುಶಾಹಿ ವ್ಯವಸ್ಥೆಯಲ್ಲಿ ಮೈಸೂರಿನ ಸಂಪನ್ಮೂಲಗಳನ್ನು ಬಳಸಿಕೊಂಡು ಅರ್ಥವ್ಯವಸ್ಥೆಯ ಶಕ್ತಿಯನ್ನು ಹೀರಿದ್ದು, ಅಲ್ಲದೇ ಉಳುಮೆಗಾರನ ಬದುಕಿನ ಸ್ವಾಸ್ಥ್ಯವನ್ನು ತಿಂದುಹಾಕಿತು ಎಂಬುದನ್ನು ವಿವರಿಸಿದ್ದಾರೆ. ಆಧುನಿಕ ಮೈಸೂರಿನ ಆರ್ಥಿಕ ಚರಿತ್ರೆಯ ಅಧ್ಯಯನಕ್ಕೆ ಈ ಕೃತಿಯು ಪ್ರಮುಖ ಆಧ್ಯತೆಯಾಗಿ ನಿಲ್ಲುತ್ತದೆ.

ಬಿ.ಷೇಕ್ ಅಲಿ ಅವರ ಪ್ರಧಾನ ಸಂಪಾದಕತ್ವದಲ್ಲಿ **ಕರ್ನಾಟಕ ಚರಿತ್ರೆ ಏಳು ಸಂಪುಟಗಳು** (೧೯೯೭) ಎಂಬ ಬೃಹತ್ ಗ್ರಂಥಸರಣಿಯನ್ನು ಹೊರತರಲಾಗಿದೆ. ಈ ಕೃತಿಗಳಲ್ಲಿ ಆಧುನಿಕ ಕರ್ನಾಟಕದ ೧೯ ಮತ್ತು ೨೦ನೇ ಶತಮಾನದ ಇತಿಹಾಸವನ್ನು ಕಡಿಮೆ ಪುಟಗಳಲ್ಲಿ ಮುಗಿಸಲಾಗಿದೆ. ಇತಿಹಾಸ ಲೇಖನ ವಿವಾದಾಸ್ಪದವೂ, ಮತೀಯವು ಆಗತೊಡಗಿರುವ ಈ

ಕಾಲದಲ್ಲಿ ತಮ್ಮ ಖಚಿತ ನಿಲುವುಗಳ ಮೂಲಕ ವಸ್ತುನಿಷ್ಠವಾಗಿ ಐತಿಹಾಸಿಕ ವಿದ್ಯಮಾನಗಳನ್ನು ಗ್ರಹಿಸುವ ಪ್ರಮುಖ ಇತಿಹಾಸಕಾರರಲ್ಲಿ ಎಸ್.ಚಂದ್ರಶೇಖರ್ ಮತ್ತು ಸೆಬಾಸ್ಟಿಯನ್ ಜೋಸೆಫ್ ಮುಖ್ಯರು. ಅವರು ದಕ್ಷಿಣ ಭಾರತ ಮತ್ತು ಕರ್ನಾಟಕವನ್ನು ಕುರಿತು ಬರೆದ ಅನೇಕ ಕೃತಿಗಳು, ಲೇಖನಗಳಲ್ಲಿ ಶೈಕ್ಷಣಿಕ ಶಿಸ್ತು, ಚಾರಿತ್ರಿಕ ವಿವರಗಳ ಸ್ಪಷ್ಟ ಮಂಡನೆ, ಸಂಶೋಧನೆಯ ಬದ್ಧತೆ ಹಾಗೂ ನೈತಿಕ ಜವಾಬ್ದಾರಿಗಳು ಕಾಣಿಸಿಕೊಳ್ಳುತ್ತವೆ. ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ ಅವರು ಸಂಪಾದಿಸಿದ 'ಕರ್ನಾಟಕ ಚರಿತ್ರೆ ಸಂಪುಟಗಳು ೬-೭ ಇವುಗಳಲ್ಲಿ ಕೆಳಸ್ತರದ ಹೋರಾಟಗಳನ್ನು ಮೇಲ್ವರ್ಗದವರೊಂದಿಗೆ ಮುಖಾಮುಖಿಯಾಗಿಸುತ್ತವೆ ಎಂಬುದು ಮುಖ್ಯ.

ಬಿ.ಷೇಕ್ ಅಲಿ ಅವರ ಪ್ರಧಾನ ಸಂಪಾದಕತ್ವ ಹಾಗೂ ಸಂಪುಟ ಸಂಪಾದಕರಾದ ಸೆಬಾಸ್ಟಿಯನ್ ಜೋಸೆಫ್ ಅವರ **ಕರ್ನಾಟಕ ಚರಿತ್ರೆ(ಕ್ರಿ.ಶ.೧೮೦೦-೧೯೦೦)ಸಂಪುಟ-೬**[೧೦೭] ಮುಖ್ಯವಾದುದು. ಈ ಸಂಪುಟದಲ್ಲಿ ಮೊದಲು ವಸಾಹತುಶಾಹಿಯ ಆಗಮನ ಹೇಗೆ ಆಯಿತು, ಇಲ್ಲಿ ಅವರ ವ್ಯಾಪಾರ ವಹಿವಾಟಿನ ಮೇಲಿನ ನಿಯಂತ್ರಣ ಇವೇ ಮೊದಲಾದ ವಿಚಾರಗಳನ್ನು ಚರ್ಚಿಸಿದ್ದಾರೆ. ವಸಾಹತುಶಾಹಿ ಸರ್ಕಾರಕ್ಕೆ ಸ್ಥಳೀಯ ನಾಯಕರ ವಿರೋಧ ವ್ಯಕ್ತವಾದ ರೀತಿ, ರೈತ ಬಂಡಾಯಗಳು, ಭೂಸ್ವಾಮ್ಯ, ಬ್ರಿಟಿಷ್ ಭೂಕಂದಾಯ, ಹೈದರಾಬಾದ್‌ನ ಆರ್ಥಿಕ ಸ್ಥಿತಿ, ಮುಂಬೈ ಕರ್ನಾಟಕದ ರಾಜನೀತಿ, ಸಮಾಜ, ಆರ್ಥಿಕತೆ, ಕ್ಷಾಮಗಳು, ವ್ಯಾಪಾರ, ಶಿಕ್ಷಣ, ಸಾಂಸ್ಕೃತಿಕ ದೃಶ್ಯ, ಸಾಹಿತ್ಯ ಮತ್ತು ಇತಿಹಾಸ, ವಸಾಹತುಶಾಹಿಯ ಮುಖಾಮುಖಿ ಇವೇ ಮೊದಲಾದ ವಿಚಾರಗಳನ್ನು ಅನಾವರಣ ಮಾಡಲಾಗಿದೆ. ಇವೆಲ್ಲವೂ ವಸಾಹತುಶಾಹಿಯ ವಿರುದ್ಧದ ಸ್ಥಳೀಯ ವಿರೋಧ ಎನ್ನಬಹುದು.

ಬಿ.ಷೇಕ್ ಅಲಿ ಅವರ ಪ್ರಧಾನ ಸಂಪಾದಕತ್ವ ಮತ್ತು ಸಂಪುಟ ಸಂಪಾದಕರಾದ ಎಸ್. ಚಂದ್ರಶೇಖರ್ ಅವರ **ಕರ್ನಾಟಕ ಚರಿತ್ರೆ(ಕ್ರಿ.ಶ.೧೯೦೦-೧೯೫೬) ಸಂಪುಟ-೭**[೧೦೮] ಪ್ರಮುಖವಾದುದು. ಈ ಸಂಪುಟದಲ್ಲಿ ವಸಾಹತುಶಾಹಿಯ ವಿರುದ್ಧ ಸ್ವಾತಂತ್ರ್ಯ ಹೋರಾಟ ಪ್ರಾರಂಭವಾದ ವಿಚಾರಗಳ ಗ್ರಹಿಕೆ ಮುಖ್ಯವಾದುದು ಎಂದು ತಿಳಿಯುತ್ತದೆ. ಇಲ್ಲಿ ವಸಾಹತುಶಾಹಿ ಮತ್ತು ರಾಷ್ಟ್ರೀಯ ಪರಿಕಲ್ಪನೆಗಳ ಜೊತೆಗೆ ಇಲ್ಲಿಯ ಜನ, ಇನ್ನೊಂದು ಬಲಿಷ್ಠ ಪರಿಕಲ್ಪನೆಯ ಸುಳಿಗೂ ಸಿಕ್ಕರು. ಅದೆಂದರೆ ಇಲ್ಲಿಯ ದೇಶಿ ಸಂಸ್ಥಾನಗಳು ಮತ್ತು ಅವುಗಳ ಪ್ರಭುಗಳು ಎಂದು ಎಸ್.ಚಂದ್ರಶೇಖರ್ ತಿಳಿಸುತ್ತಾರೆ. ಸ್ವಾತಂತ್ರ್ಯ ಚಳವಳಿ, ಕಾಂಗ್ರೆಸ್ ಮತ್ತು ಅವುಗಳ ಪರಿಸ್ಥಿತಿಯನ್ನು ಗಮನಿಸಿ, ವಿವಿಧ ಸಾಮಾಜಿಕ ವರ್ಗಗಳ ಆಶೋತ್ತರಗಳಿಗೆ ಸ್ಪಂದಿಸಿತು. ಈ ಆರೋಗ್ಯಕರ ಬೆಳವಣಿಗೆ ಎಲ್ಲಾ ಸಾಮಾಜಿಕ ವರ್ಗಗಳು ರಾಷ್ಟ್ರೀಯ ಆಂದೋಲನದಲ್ಲಿ ಭಾಗವಹಿಸಲು ಸಹಾಯಕವಾಯಿತು. ಅನಂತರ ಸ್ವಾತಂತ್ರ್ಯ ಚಳವಳಿ ಕವಲೊಡೆಯುವ ಅಪಾಯವೂ ಗೋಚರಿಸಿತ್ತು. ಇಲ್ಲಿಯ ಸಾಂಸ್ಕೃತಿಕ ಭಾಷಾ ಚಳವಳಿ, ಹರಿದು ಹಂಚಿ ಹೋಗಿದ್ದ ಕನ್ನಡ ಪ್ರಾಂತ್ಯಗಳನ್ನು ಏಕೀಕರಣಗೊಳಿಸಲು ನಡೆದ ಚಳವಳಿ ಮುಖ್ಯ. ದೇಶಿ ರಾಜರ ನಿರಂಕುಶ ಆಳ್ವಿಕೆಯಲ್ಲಿ ಸೊರಗುತ್ತಿದ್ದವರ ಸಮಸ್ಯೆಗಳು, ವಸಾಹತುಶಾಹಿ ನೀತಿಯೊಡ್ಡಿದ ಸಮಸ್ಯೆಗಳು ಹಲವಾರು. ಆದರೂ ಬಹುತೇಕ ಈ ಎಲ್ಲಾ ಸಮಸ್ಯೆಗಳಿಗೆ ಪರಿಹಾರ ಕಂಡು ಕೊಳ್ಳಲಾಯಿತು. ಚಳವಳಿಯ ಏಕತೆಯನ್ನು ಉಳಿಸಿಕೊಳ್ಳಲು ಪ್ರಾಂತೀಯ ಮತ್ತು ರಾಷ್ಟ್ರೀಯ

ನಾಯಕತ್ವದ ಪ್ರಯತ್ನ ಸಫಲವಾಯಿತು. ರಾಷ್ಟ್ರೀಯ ಚಳವಳಿಯಲ್ಲಿ ಗಾಂಧೀಜಿ ಆಗಮನ, ಪತ್ರಿಕೆಗಳ ಪಾತ್ರ, ರೈತರ ಪಾತ್ರ, ನಗರ ಕಾರ್ಮಿಕ ವರ್ಗದ ಪಾತ್ರ, ಮಹಿಳೆಯರ ಪಾತ್ರ, ವಿದ್ಯಾರ್ಥಿಗಳ ಪಾತ್ರ, ದಲಿತರ ಪಾತ್ರ ಇವೇ ಮೊದಲಾದ ವಿಚಾರಗಳನ್ನು ವಿಸ್ತೃತವಾಗಿ ಈ ಕೃತಿಯಲ್ಲಿ ಚರ್ಚಿಸಿ, ವಿಶ್ಲೇಷಣೆಗೆ ಒಳಪಡಿಸಿದ್ದಾರೆ. ಸಬಾಲ್ಟರ್ನ್ ವರ್ಗಗಳು ಕೂಡ ಸ್ವಾತಂತ್ರ್ಯ ಚಳವಳಿಯಲ್ಲಿ ತನ್ನ ಅಸ್ಮಿತೆಯನ್ನು ಉಳಿಸಿಕೊಂಡಿವೆ ಎನ್ನುವುದು ಸೂಕ್ತ. ಕರ್ನಾಟಕ ಏಕೀಕರಣ ಚಳವಳಿಯಲ್ಲಿ ದುಡಿದ ಸಾಹಿತಿಗಳು, ಬರಹಗಾರರು, ಬುದ್ಧಿಜೀವಿಗಳು, ಪತ್ರಿಕೋದ್ಯಮಿಗಳು ಪ್ರಮುಖರು. ಇಲ್ಲಿ ಸ್ಥಳೀಯ ನಿರೀಕ್ಷೆಯು ಚಳವಳಿಯಲ್ಲಿ ತನ್ನ ಅಸ್ಮಿತೆಯನ್ನು ಪಡೆದುಕೊಂಡಿತು ಎನ್ನುವುದನ್ನು ಈ ಸಂಪುಟದಲ್ಲಿ ಗ್ರಹಿಸಬಹುದು.

ಗಾಯಿತ್ರಿ ಎಂ.ಬಿ. ಅವರು **ಡೆವಲಪ್‌ಮೆಂಟ್ ಆಫ್ ಮೈಸೂರು ಸ್ಟೇಟ್**(೧೯೯೭)[೧೦೬] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯು ಅವರ ಪಿಎಚ್.ಡಿ ಮಹಾಪ್ರಬಂಧದ ಪ್ರಕಟಿತ ರೂಪ. ಈ ಕೃತಿಯಲ್ಲಿ ೧೯೪೦ರಿಂದ ೧೯೫೬ರವರೆಗೆ ಮೈಸೂರು ಸಂಸ್ಥಾನದಲ್ಲಾದ ಅಭಿವೃದ್ಧಿ ಕಾರ್ಯಕ್ರಮಗಳನ್ನು ಚರ್ಚಿಸಿದ್ದಾರೆ. ೧೯೪೦ರ ಅವಧಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು, ಅವರ ಮರಣ, ಜಯಚಾಮರಾಜೇಂದ್ರ ಒಡೆಯರ ಅಧಿಕಾರ ಸ್ವೀಕಾರದ ವಿಚಾರಗಳನ್ನು ವಿವರಿಸಿದ್ದಾರೆ. ಮುಖ್ಯವಾಗಿ ಒಡೆಯರು ಮತ್ತು ಮಿರ್ಜಾ ಅವರ ಜೊತೆ ಭಿನ್ನಾಭಿಪ್ರಾಯ ಉಂಟಾದ ಸಂದರ್ಭ, ದಿವಾನರಾಗಿ ನ್ಯಾಯಪತಿ ಮಾಧವರಾವ್ ಅವರ ನೇಮಕವಾದ ವಿಚಾರಗಳು ಮುಖ್ಯವಾಗಿವೆ. ರಾಜಕೀಯವಾಗಿ ಸ್ವಾತಂತ್ರ್ಯ ಚಳವಳಿ ತೀವ್ರ ಸ್ವರೂಪ ಪಡೆದುಕೊಂಡಿತು. ಕೆ.ಸಿ.ರೆಡ್ಡಿ, ಕೆ.ಟಿ.ಬಾಷ್ಯಂ, ಟಿ.ಎಸ್.ಸಿದ್ಧಲಿಂಗಯ್ಯ, ಎಸ್.ಚನ್ನಯ್ಯ ಇವರ ಹೋರಾಟದ ಅಂಶಗಳು, ಜವಾಬ್ದಾರಿ ಸರ್ಕಾರದ ರಚನೆ, ಚುನಾವಣೆಗಳು, ಮಂತ್ರಿ ಮಂಡಲದ ರಚನೆ, ಕರ್ನಾಟಕದ ಏಕೀಕರಣದ ಚಳವಳಿ, ಧರ್, ಜೆ.ವಿ.ಪಿ, ಫಜಲ್ ಅಲಿ ಕಮಿಟಿಯ ಶಿಫಾರಸ್ಸುಗಳು, ಕರ್ನಾಟಕ ರಾಜ್ಯದ ನಾಮಕರಣ ಇವೇ ಮೊದಲಾದ ವಿಚಾರಗಳನ್ನು ಸಮಗ್ರವಾಗಿ ಕಟ್ಟಿಕೊಡುತ್ತಾರೆ.

ಆರ್ಥಿಕವಾಗಿ ಕೃಷಿಯ ಅಭಿವೃದ್ಧಿ, ಕೃಷಿ, ಶಿಕ್ಷಣ, ಪಶುಸಂಗೋಪನೆ, ಭೂಸುಧಾರಣಾ ಕಾಯಿದೆಗಳು, ರೇಷ್ಮೆ ಸಂಘಗಳು, ಪಂಚವಾರ್ಷಿಕ ಯೋಜನೆ, ಕೃಷಿ, ಕೈಗಾರಿಕೆ, ನೀರಾವರಿ ಯೋಜನೆಗಳನ್ನು ವಿವರಿಸಿದ್ದಾರೆ. ಸಮಾಜ, ಸಮಾಜದಲ್ಲಿ ವಾಸಿಸುವ ಜಾತಿ ಸಮುದಾಯಗಳು, ಧರ್ಮ, ಸಂಸ್ಕೃತಿಯನ್ನು ವಿವರಿಸಿದ್ದಾರೆ. ಶಿಕ್ಷಣದ ಎಲ್ಲಾ ಹಂತದ ಬೆಳವಣಿಗೆ ಕಾಲಾಕ್ರಮದಲ್ಲಿ ಹೇಗಾಯಿತು ಎನ್ನುವುದನ್ನು ವಿವರಣೆ ನೀಡುತ್ತಾರೆ(ಪು.೯೭).

ಮುಖ್ಯವಾಗಿ ಹಿಂದುಳಿದ ವರ್ಗಗಳಿಗೆ ಶಿಕ್ಷಣದ ಸೌಲಭ್ಯಗಳು, ಸ್ತ್ರೀಯರ ಶಿಕ್ಷಣ, ಕಾರ್ಮಿಕರ ಸೌಲಭ್ಯಗಳು, ಜಾರಿಗೆ ತಂದ ಕಾನೂನುಗಳು, ಸಂಗೀತ, ನೃತ್ಯ ಹೀಗೆ ಎಲ್ಲಾ ವಿಚಾರಗಳನ್ನು ವಿವರಿಸುತ್ತಾರೆ. ಜಯಚಾಮರಾಜ ಒಡೆಯರ್ ಅವರ ಆಡಳಿತದಲ್ಲಿ ಉಂಟಾದ ರಾಜಕೀಯ ಸಂದಿಗ್ಧತೆ(ಮಹಾಯುದ್ಧದ ಆರ್ಥಿಕ ಬಿಕ್ಕಟ್ಟು), ರಾಜಪ್ರಭುತ್ವ ಕೊನೆಗೊಂಡು ಪ್ರಜಾಪ್ರಭುತ್ವದ ಜಾರಿ, ಕರ್ನಾಟಕದ ಏಕೀಕರಣ, ಪಂಚವಾರ್ಷಿಕ ಯೋಜನೆಯ ಮೊದಲ

ಪ್ರಯತ್ನ, ಗ್ರಾಮಗಳ ಪುನಾರಚನೆಯ ಯೋಜನೆಯನ್ನು ಗಾಂಧೀಜಿ ಅವರ ಗ್ರಾಮಸ್ವರಾಜ್ಯದ ಕಲ್ಪನೆಯ ಅಡಿಯಲ್ಲಿ ಜಾರಿಗೊಳಿಸಿದ ವಿಚಾರಗಳು, ಜಾತಿಯ ನಿರ್ಮೂಲನೆ, ದೇವಾಲಯಗಳಿಗೆ ಹರಿಜನರ ಪ್ರವೇಶ ಇವೇ ಮೊದಲಾದ ವಿಚಾರಗಳನ್ನು ಸಾಮಾಜಿಕ ಪುನಾರಚನೆ (Reconstruction)ಯ ಕಲ್ಪನೆ ಅಡಿಯಲ್ಲಿ ಚರ್ಚಿಸಿರುವುದು ಗಮನಾರ್ಹವಾಗಿದೆ. ಒಟ್ಟಿನಲ್ಲಿ ಮೈಸೂರು ಸಂಸ್ಥಾನದ ಎಲ್ಲಾ ಕ್ಷೇತ್ರಗಳ ಅಭಿವೃದ್ಧಿಯ ನೆಲೆಯನ್ನು ಈ ಕೃತಿಯಲ್ಲಿ ಕಟ್ಟಿಕೊಡುತ್ತಾರೆ.

ಸೂರ್ಯನಾಥ ಕಾಮತ್ ಅವರು **ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು(ದ್ವಿತೀಯ ಮುದ್ರಣ, ೧೯೯೮)**[೧೧೦] ಎಂಬ ಸಂಪುಟಗಳನ್ನು ಹೊರ ತಂದಿದ್ದಾರೆ. ಜನಸಾಮಾನ್ಯರು ಸ್ವರಾಜ್ಯಕ್ಕಾಗಿ ಅಹಿಂಸಾ ಮಾರ್ಗದಿಂದ ತಮ್ಮ ತನುಮನ ಧನಗಳನ್ನು ಅರ್ಪಿಸಿ ಹೋರಾಟ ನಡೆಸಿರುವುದು ಚರಿತ್ರಾರ್ಹ ಘಟನೆ. ಈ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದ ಕರ್ನಾಟಕದ ಸ್ವಾತಂತ್ರ್ಯ ಯೋಧರ ಬಗ್ಗೆ ವಿವರಗಳನ್ನು, ಅನುಭವಗಳನ್ನು ಸಂಗ್ರಹಿಸಿ ಈ ಸಂಪುಟಗಳಲ್ಲಿ ವಿವರಿಸಿದ್ದಾರೆ. ಈ ಮೂರು ಸಂಪುಟಗಳಿಂದ ೮೦೦ ಜನ ಸ್ವಾತಂತ್ರ್ಯ ಹೋರಾಟಗಾರರು ತಮ್ಮ ಅನುಭವಗಳನ್ನು ಹಂಚಿಕೊಂಡಿದ್ದನ್ನು ಇಲ್ಲಿ ತಿಳಿಸುತ್ತಾರೆ. ಗಾಂಧೀಜಿ ಅವರ ಅಸಹಕಾರ ಚಳವಳಿ, ಕಾನೂನು ಭಂಗ ಚಳವಳಿ, ಕ್ವಿಟ್ ಇಂಡಿಯಾ ಚಳವಳಿ, ಮೈಸೂರು ಜಿಲ್ಲಾ ಕಾಂಗ್ರೆಸ್ ಸಮಿತಿಯ ಹೋರಾಟ, ಶಿವಪುರದ ಧ್ವಜ ಸತ್ಯಾಗ್ರಹ, ವಿಧುರಾಶ್ವತ್ಥ ದುರಂತ, ಈಸೂರು ಘಟನೆ, ಮೈಸೂರು ಚಲೋ ಚಳವಳಿ ಮುಂತಾದ ಚಳವಳಿಯಲ್ಲಿ ಭಾಗವಹಿಸಿದ ಹೋರಾಟಗಾರರ ಪಾತ್ರವನ್ನು ವಿವರಿಸಿದ್ದಾರೆ. ಮೈಸೂರು ಸಂಸ್ಥಾನ ಮತ್ತು ಮೈಸೂರು ಜಿಲ್ಲೆ ಎಂದು ವಿಭಾಗಿಸಿ ಎರಡನೇ ಸಂಪುಟಗಳಲ್ಲಿ ಮೇಲೆ ತಿಳಿಸಿದ ವಿವಿಧ ಚಳವಳಿಯಲ್ಲಿ ಭಾಗವಹಿಸಿದವರ ಚಿತ್ರಣವನ್ನು ತಿಳಿಸಿದ್ದಾರೆ. ವಸಾಹತುಶಾಹಿ ಸರ್ಕಾರ ಇಲ್ಲಿನ ಜನಸಾಮಾನ್ಯರು, ನಾಯಕರು ಯಾವ ರೀತಿ ಪ್ರತಿರೋಧ ಮಾಡಿದರು ಎಂಬ ವಿವರಗಳನ್ನು ಸಮಗ್ರವಾಗಿ ಕಟ್ಟಿಕೊಡುತ್ತಾರೆ. ಅನೇಕ ಘಟನೆಗಳ ಮೂಲಕವೂ ಸಹ ಸ್ವಾತಂತ್ರ್ಯ ಚಳವಳಿಯ ಒಳನೋಟಗಳನ್ನು ಈ ಸಂಪುಟಗಳಲ್ಲಿ ಕಟ್ಟಿಕೊಡುತ್ತಾರೆ.

ಜಾನಕಿ ನಾಯರ್ ಅವರ **ಮೈನರ್ ಆ್ಯಂಡ್ ಮಿಲ್‌ಹಾಂಡ್ಸ್, ವರ್ಕ್, ಕಲ್ಚರ್ ಅಂಡ್ ಪಾಲಿಟಿಕ್ಸ್ ಇನ್ ಪ್ರಿನ್ಲಿ ಮೈಸೂರು**[೧೧೧] ಎಂಬ ಕೃತಿಯು ೧೯೯೮ರಲ್ಲಿ ಪ್ರಕಟವಾಗಿರುವ ಕೃತಿ. ಈ ಕೃತಿಯಲ್ಲಿ ಮೈಸೂರು ಸಂಸ್ಥಾನದ ಅಧೀನಕ್ಕೆ ಸೇರಿದ ಕೋಲಾರದ ಗೋಲ್ಡ್ ಫೀಲ್ಡ್‌ನ ಚಿನ್ನದ ಅದಿರಿನ ನಿಕ್ಷೇಪದ ನೆಲೆಯ ಕುರಿತ ವಿವರಗಳನ್ನು ಚರ್ಚಿಸಲಾಗಿದೆ. ಮೊದಲು ಬೆಂಗಳೂರಿನಲ್ಲಿ ಯಾವ ರೀತಿ ಕೈಗಾರಿಕೆಗಳು ಸ್ಥಾಪನೆಯಾದವು, ಅಲ್ಲಿ ನಗರೀಕರಣ ಪ್ರಕ್ರಿಯೆ ಹೇಗೆ ಪ್ರಾರಂಭವಾಯಿತು ಎಂಬುದನ್ನು ವಿವರಿಸುತ್ತಾ, ಕೆ.ಜಿ.ಎಫ್ ಕೂಡ ನಗರೀಕರಣ ಪ್ರಕ್ರಿಯೆಗೆ ಒಳಗಾಯಿತು ಎಂಬ ವಿವರಗಳನ್ನು ನೀಡುತ್ತಾರೆ. ಕೆ.ಜಿ.ಎಫ್.ನಲ್ಲಿ ಕಾರ್ಮಿಕರ ರಾಜಕೀಯ ಹೇಗಿತ್ತು ಎಂಬುದರ ವಿಚಾರಗಳು ಪ್ರಮುಖವಾದವು. ಕೆ.ಜಿ.ಎಫ್. ವಸಾಹತುಶಾಹಿ ಆಡಳಿತಕ್ಕೆ ಒಳಪಟ್ಟ ಅಂಶಗಳನ್ನು ವಿವರಿಸುತ್ತಾ ಹೋಗುತ್ತಾರೆ.

ಕಾರ್ಮಿಕರು ಯಾವ ರೀತಿ ಅಪರಾಧಗಳನ್ನು ಮಾಡುತ್ತಿದ್ದರು ಮತ್ತು ಅವರಿಗೆ ವಿಧಿಸುತ್ತಿದ್ದ ಶಿಕ್ಷೆಗಳ ವಿವರಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಕಾನೂನುಗಳು ಯಾವ ರೀತಿ ಜಾರಿಯಾಗುತ್ತಿದ್ದವು,

ಅಂದರೆ ಇಲ್ಲಿ ಬ್ರಿಟಿಷರಿಗೆ ಮತ್ತು ಮೈಸೂರು ಸರ್ಕಾರಕ್ಕೆ ಸಮೃದ್ಧಿಯ ಸಂಕೇತವಾದ ಕೆ.ಜಿ.ಎಫ್.ನಲ್ಲಿ ಅಪರಾಧಗಳು ಮತ್ತು ಅವುಗಳಿಗೆ ವಿಧಿಸುತ್ತಿದ್ದ ಶಿಕ್ಷೆಗಳು ಇವು ಹೇಗೆ ಕೆ.ಜಿ.ಎಫ್ ಎಂಬ ಪಟ್ಟಣದ ಆಡಳಿತದ ಮೇಲೆ ಪ್ರಭಾವ ಬೀರಿತು ಎಂಬುದನ್ನು ವಿವರಿಸುತ್ತಾರೆ. ಅಪರಾಧಗಳ ಸಂಖ್ಯೆ ಮತ್ತು ವಿಧಿಸುತ್ತಿದ್ದ ಶಿಕ್ಷೆಗಳ ಪ್ರಮಾಣವನ್ನು ಅಂಕಿ-ಅಂಶಗಳ ಮೂಲಕ ಕಟ್ಟಿಕೊಡುತ್ತಾರೆ. ಇದು ರಾಷ್ಟ್ರೀಯತೆಯ ಮೇಲೆ ಕಾರ್ಮಿಕರ ಮೇಲೆ ಯಾವ ರೀತಿ ಪ್ರಭಾವ ಬೀರಿತು ಎಂಬುದು ಮುಖ್ಯ. ಜಾತಿಯ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಸಂಘಗಳ ವಿವರಗಳನ್ನು ಗಮನಿಸಬಹುದು. ಕೆ.ಜಿ.ಎಫ್.ನಲ್ಲಿ ವೇಶ್ಯಾವಾಟಿಕೆಯ ವಿಚಾರಗಳನ್ನು ತಿಳಿಸಿದ್ದಾರೆ. ಕಾರ್ಮಿಕರ ಮದ್ಯಪಾನದ ವ್ಯಸನದ ಅಂಶಗಳನ್ನು ವಿವರಿಸುತ್ತಾ ಹೋಗುತ್ತಾರೆ. ದಲಿತರು ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದಲು ಪ್ರಾರಂಭಿಸಿದ ವಿಚಾರಗಳು ಮುಖ್ಯ.

ಬೆಂಗಳೂರಿನಲ್ಲಿ ಸ್ಥಾಪನೆಯಾದ ಮಿಲ್‌ಗಳಲ್ಲಿ ವಸಾಹತುಶಾಹಿ ಸರ್ಕಾರ ಹೇಗೆ, ಯಾವ ರೀತಿ ಕಾರ್ಯ ನಿರ್ವಹಿಸುತ್ತಿತ್ತು ಎಂಬುದನ್ನು ಚರ್ಚಿಸಿದ್ದಾರೆ. ಬೆಂಗಳೂರು ಮತ್ತು ಕೆ.ಜಿ.ಎಫ್.ಗಳು ಕಾರ್ಮಿಕರು ಆಕರ್ಷಣೆಗೆ ಒಳಗಾದರು ಎಂಬುದನ್ನು ವಿವರಿಸುತ್ತಾರೆ. ನಗರೀಕರಣ ಮತ್ತು ಕೈಗಾರೀಕರಣ ಪ್ರಕ್ರಿಯೆಗಳು ಈ ಎರಡು ನಗರಗಳಲ್ಲಿ ವಿಭಿನ್ನವಾಗಿದ್ದವು. ಈ ಪ್ರಕ್ರಿಯೆಗಳಲ್ಲಿ ಭಾಗಿಯಾದ ಕಾರ್ಮಿಕರ ಕೆಳಸ್ತರದ ಸಾಮಾಜಿಕ ಶ್ರೇಣಿಯ ಹಿನ್ನೆಲೆಯನ್ನು ವಿವರಿಸುತ್ತಾರೆ. ಕಾರ್ಮಿಕರಲ್ಲಿ ಬಹುತೇಕರು ಕೆಳವರ್ಗಗಳಿಂದ ಬಂದವರಾಗಿದ್ದರು. ಈ ಕಾರ್ಮಿಕರು ಹೊಸ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾದದ್ದು ಹಾಗೂ ಇವರ ಸಾಮಾಜಿಕ ಶ್ರೇಣಿಯನ್ನು ಹತ್ತುವ ಪ್ರಕ್ರಿಯೆಯ ಆಯಾಮಗಳನ್ನು ತಿಳಿಸುತ್ತಾರೆ. ಈ ವರ್ಗಗಳಲ್ಲಿನ ಸಾಮಾಜಿಕ ಸಮಾನತೆಯ ಬಯಕೆಯು ಕ್ರಮೇಣ ಇವರನ್ನು ಬೌದ್ಧಧರ್ಮವನ್ನು ಒಪ್ಪಿಕೊಳ್ಳುವಂತೆ ಮಾಡಿತು ಎಂದು ವಿಶ್ಲೇಷಿಸಿದ್ದಾರೆ.

ಸಾಕಿ ಅವರು **ಮೇಕಿಂಗ್ ಹಿಸ್ಟರಿ: ಕರ್ನಾಟಕಾಸ್ ಪೀಪಲ್ ಆ್ಯಂಡ್ ದೇರ್ ಪಾಸ್ಟ್, ವಾಲ್ಯುಮ್-೧, ಸ್ಟೋನ್ ಏಜ್ ಟು ಮರ್ಕೆಂಟಲಿಸಂ(೧೯೯೮) ಹಾಗೂ ಮೇಕಿಂಗ್ ಹಿಸ್ಟರಿ: ಕರ್ನಾಟಕಸ್ ಪೀಪಲ್ ಆ್ಯಂಡ್ ಥೇರ್ ಪಾಸ್ಟ್, ವಾಲ್ಯುಮ್ ೨, ಕಲೋನಿಯಲ್ ಶಾಕ್, ಆರ್ಮ್ಡ್‌ಸ್ಟ್ರಗಲ್(೨೦೦೪)**[೧೧೨] ಎಂಬ ಎರಡು ಸಂಪುಟಗಳನ್ನು ಹೊರತಂದಿದ್ದಾರೆ. ಸಾಕಿ ಅವರು ಮಾರ್ಕ್ಸ್‌ವಾದಿಯ ನೆಲೆಯಲ್ಲಿ ಕರ್ನಾಟಕದ ಇತಿಹಾಸವನ್ನು ರಚಿಸಿದ್ದಾರೆ. ಊಳಿಗಮಾನ್ಯ ಪದ್ಧತಿಯ ನೆಲೆಯನ್ನು ಗುರುತಿಸುತ್ತಾರೆ. ಉತ್ಪಾದನೆಯಲ್ಲಿ ಶೂದ್ರವರ್ಗವು ಊಳಿಗಮಾನ್ಯ, ಬಂಡವಾಳಶಾಹಿ, ಸಮಾಜವಾದಿ ನೆಲೆಯನ್ನು ಗುರುತಿಸಿ, ಹೇಗೆ ಶೋಷಣೆಯಲ್ಲಿ ಒಳಗಾಯಿತು ಎನ್ನುವುದು ಮುಖ್ಯ. ಮರ್ಕೆಂಟಲಿಸಂ ಹೇಗೆ ಸಾಗಿತು ಎನ್ನುವುದು ಪ್ರಮುಖ. ಭೂದಾನದ ಹುಟ್ಟು ಭಾರತದ ಸಾಮಾಜಿಕ, ಆರ್ಥಿಕ, ಧಾರ್ಮಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ನೂತನ ಘಟ್ಟವೊಂದರ ಪ್ರಾರಂಭವನ್ನು ಗುರುತಿಸಿತು. ಭೂದಾನದ ಬಗೆಗೆ ಎರಡು ರೀತಿಯಲ್ಲಿ ಗುರುತಿಸಬಹುದು. ಕಾರ್ಲ್ ಮಾರ್ಕ್ಸ್‌ನ ಐತಿಹಾಸಿಕ ವಸ್ತುವಾದದ ದೃಷ್ಟಿ ಹಾಗೂ ಮಾರ್ಕ್ಸ್‌ರ ದೃಷ್ಟಿ, ಮನುಷ್ಯನಿಗೆ ನೇಗಿಲಿನ ಪರಿಚಯ ಉಂಟಾದುದು ಕೊನೆಗೆ ಭೂಮಿ ದಾನಕ್ಕೆ ದಾರಿ ಮಾಡಿಕೊಟ್ಟಿತು ಎಂದು ತಿಳಿಸುತ್ತಾರೆ. ನೇಗಿಲನ್ನು ಪರಿಚಯಗೊಳಿಸಿದು

ದರಿಂದ ಗ್ರಾಮೀಣ ಅರ್ಥವ್ಯವಸ್ಥೆಯು ವಿಸ್ತಾರವಾಗತೊಡಗಿತು. ಗ್ರಾಮೀಣ ಅರ್ಥವ್ಯವಸ್ಥೆಯ ಹಿನ್ನೆಲೆಯಲ್ಲಿ ಹೊಸಹೊಸ ನೆಲೆಗಳನ್ನು ಸೃಷ್ಟಿಸಿ, ಬೆಳೆಸುವ ಅಗತ್ಯ ಆಡಳಿತಕ್ಕೆ ಇದ್ದಿತು. ಕೃಷಿ ಪ್ರಾಧಾನ್ಯದ ಹಂತದಲ್ಲಿ ಎರಡು ವರ್ಗಗಳು ಮುಖ್ಯ. ಒಂದು ಶೋಷಕ ವರ್ಗ, ಇನ್ನೊಂದು ಶೋಷಿತ ವರ್ಗ. ಈ ಬೆಳವಣಿಗೆಯ ಫಲವಾಗಿ ದೈಹಿಕ ಮತ್ತು ಮಾನಸಿಕ ದುಡಿಮೆಗಳ ನಡುವೆ ಖಚಿತವಾದ ಒಂದು ಬಿರುಕು ಉಂಟಾಯಿತು ಎಂಬುದನ್ನು ತಿಳಿಸುತ್ತಾರೆ. ರಾಜ್ಯಾಡಳಿತ ಯುಗವು ಪ್ರಾರಂಭವಾಯಿತು. ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರ ಹಿತಾಸಕ್ತಿಗಳನ್ನು ಈಡೇರಿಸುವ ಸಲುವಾಗಿ ಧರ್ಮವು ಉದಯವಾಯಿತು. ಇಲ್ಲಿ ಆಳುವ ವರ್ಗಕ್ಕೆ ಶೂದ್ರ ವರ್ಗ ಸೇವೆ ಸಲ್ಲಿಸುವುದಾಗಿತ್ತು. ಮಾರ್ಕ್ಸ್‌ವಾದಿ ನೆಲೆಯಲ್ಲಿ ಸಾಕಿ ಅವರು ವಸ್ತು ಮತ್ತು ಅದರ ಗ್ರಹಿಕೆಯ ಅಸ್ತಿತ್ವವನ್ನು ಮಾತ್ರ ತಿಳಿಸುತ್ತಾರೆ. ಆದರೆ ಇಲ್ಲಿ ಪ್ರೇಮ, ವಾತ್ಸಲ್ಯ, ಸಾಮರಸ್ಯ, ಸೋದರಿಕೆ ಮೊದಲಾದ ಧಾರ್ಮಿಕ ಮತ್ತು ಆಧ್ಯಾತ್ಮಿಕ ಮೌಲ್ಯಗಳ ಪಾತ್ರವನ್ನು, ಅವು ಇತಿಹಾಸದಲ್ಲಿ ಹೊಂದಿರುವ ಪಾತ್ರವನ್ನು ಅವರು ಪರಿಗಣಿಸುವುದಿಲ್ಲ. ಬ್ರಾಹ್ಮಣರು ಜಮೀನನ್ನು ದಾನದ ರೂಪವಾಗಿ(ಬ್ರಹ್ಮದೇಯ) ಪಡೆದರು. ಅಲ್ಲದೇ ಬ್ರಾಹ್ಮಣರು ಆ ಪ್ರದೇಶಗಳಲ್ಲಿ ತಮಗೆ ಇದ್ದ ಕೃಷಿ ಪರಿಜ್ಞಾನವನ್ನು ಕಾರ್ಯಗತಗೊಳಿಸಲು ಮುಂದಾಗಿದ್ದರು ಎಂಬುದನ್ನು ತಿಳಿಸುತ್ತಾರೆ. ಶೂದ್ರನ ನೆಲದ ಒಡೆತನದಲ್ಲಿ ಉಂಟಾದ ಬಿಕ್ಕಟ್ಟಿನ ಪರಿಸ್ಥಿತಿ ಹಾಗೂ ವಿಶಿಷ್ಟವಾದ ಉತ್ಪಾದನಾ ವಿಧಾನ ಇವುಗಳಿಂದ ಬ್ರಾಹ್ಮಣರು, ಜೈನರು, ಆಡಳಿತಗಾರರು, ಶ್ರೀಮಂತ ವರ್ತಕರು ಮತ್ತು ಸೇನಾಮುಖ್ಯಸ್ಥರು ಮೊದಲಾದ ಮೇಲ್ವರ್ಗಗಳಿಗೆ ನೆಲವನ್ನು ದಾನ ಮಾಡುವ ಪದ್ಧತಿ ಬಂದಿತು ಎಂಬುದಾಗಿ ಸಾಕಿ ಭಾವಿಸುತ್ತಾರೆ. ಇದು ಊಳಿಗಮಾನ್ಯ ಪದ್ಧತಿಯು ಹುಟ್ಟಲು ದಾರಿ ಮಾಡಿತು. ಇದರಿಂದ ಹೊಸದಾದ ಜಮೀನ್ದಾರಿ ವರ್ಗ ಉದಯವಾಯಿತು. ಜಮೀನ್ದಾರರ ದಬ್ಬಾಳಿಕೆ ಹೆಚ್ಚಾಗತೊಡಗಿತು. ಇಲ್ಲಿ ಶೂದ್ರರ ಒಡೆತನವು ಕಣ್ಮರೆಯಾದುದಕ್ಕೂ ಬ್ರಹ್ಮದೇಯ ಮತ್ತು ದೇವದಾಯಗಳೇ ಕಾರಣ ಎಂದು ಹೇಳುವುದಿಲ್ಲ. ಇಲ್ಲಿನ ಬ್ರಾಹ್ಮಣರು ಕೃಷಿ ಜಮೀನನ್ನು ತಮ್ಮ ಹಿಡಿತಕ್ಕೆ ತೆಗೆದುಕೊಂಡರು. ಮೇಲ್ವರ್ಗಗಳೇ ಹೆಚ್ಚಾಗಿ ಭೂ ಒಡೆತನವನ್ನು ಹೊಂದಿದ್ದು, ಡಾಮಿನೆಂಟ್ ಆದ ವರ್ಗಗಳಾಗಿ ಗುರುತಿಸಿಕೊಂಡಿರುವುದು ಇಲ್ಲಿ ಮುಖ್ಯ ಎಂಬುದನ್ನು ತಿಳಿಸುತ್ತಾರೆ.

ವಸಾಹತುಶಾಹಿ ಆಡಳಿತದಲ್ಲಿ ೧೮೦೦-೧೮೫೭ರವರೆಗೆ ಹೇಗೆ ಮೈಸೂರು ಸಂಸ್ಥಾನವು ಪ್ರತಿಕ್ರಿಯಿಸಿತು ಎಂಬುದು ಮುಖ್ಯ. ಬ್ರಿಟಿಷರ ಆಡಳಿತದ ಅಧೀನದಲ್ಲಿ ಮೈಸೂರು ಸಂಸ್ಥಾನ ಮತ್ತು ಸ್ಥಳೀಯ ನಾಯಕರು ಯಾವ ರೀತಿ ತಮ್ಮ ಕಾರ್ಯಗಳನ್ನು ನಿರ್ವಹಿಸಿದರು ಎಂಬುದು ಮುಖ್ಯ. ಊಳಿಗಮಾನ್ಯವು ಮೇಲ್ವರ್ಗದ ಅಧೀನದಲ್ಲಿದ್ದು, ತೆರಿಗೆಯು ಸ್ಥಳೀಯ ಜನ ಸಾಮಾನ್ಯರ ಮೇಲೆ ಅಧಿಕವಾಗಿತ್ತು. ಅಲ್ಲದೇ ಶೋಷಣೆಯು ನಿರಂತರವಾಗಿ ನಡೆಯುತ್ತಿತ್ತು. ಈ ಹಿನ್ನೆಲೆಯಲ್ಲಿ ದೋಂಡಿಯವಾಘ ದಂಗೆ, ಸಂಗೊಳ್ಳಿ ರಾಯಣ್ಣನ ಪ್ರತಿಭಟನೆಗಳನ್ನು ಚರ್ಚಿಸಿದ್ದಾರೆ. ಜನರ ಚರಿತ್ರೆಯ ನೆಲೆಯಲ್ಲಿ ಗುರುತಿಸಿಕೊಂಡ ಬಗೆಯನ್ನು ವಿಶ್ಲೇಷಿಸಿದ್ದಾರೆ. ಗೆರಿಲ್ಲಾ ದಾಳಿಯ ವಿಚಾರವು ಇಲ್ಲಿ ಮುಖ್ಯ. ವಸಾಹತುಶಾಹಿಯ ವಿರುದ್ಧ ಸ್ಥಳೀಯತೆ, ಸಮುದಾಯಗಳು ಹೇಗೆ ಪ್ರತಿಭಟಿಸಿ, ಪ್ರತಿಕ್ರಿಯಿಸಿದವು ಎಂಬುದು ಇಲ್ಲಿ ಚರ್ಚಿತ ವಿಷಯ.

ನಂಜರಾಜ ಅರಸು ಪಿ.ವಿ. ಮತ್ತು ಚಂದ್ರರಾಜ ಅರಸು ಎಸ್.ಆರ್. ಅವರ ಸಂಪಾದಕತ್ವದಲ್ಲಿ **ನಾಲ್ವಡಿ ಕೃಷ್ಣರಾಜ ಒಡೆಯರ್ ಒಂದು ದರ್ಶನ**(೧೯೯೯)[೧೧೩] ಎಂಬ ಕೃತಿ ಪ್ರಕಟವಾಗಿದೆ. ಈ ಕೃತಿ ಸುಮಾರು ೧೭ ಲೇಖನಗಳ ಬಿಡಿ ಸಂಗ್ರಹ. ಈ ಕೃತಿಯು ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಎಲ್ಲಾ ಕ್ಷೇತ್ರಗಳ ಅಭಿವೃದ್ಧಿಯ ಚಿತ್ರಣವನ್ನು ತಿಳಿಸುತ್ತದೆ. ಮೊದಲ ಲೇಖನಗಳು ಮೈಸೂರು ಒಡೆಯರ ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸುತ್ತವೆ. ಒಡೆಯರ ಅಧಿಕಾರ ಸ್ಥಾಪನೆ, ಆಳ್ವಿಕೆ ನಡೆಸಿದ ಎಲ್ಲಾ ಒಡೆಯರ ಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸುತ್ತವೆ. ಪ್ರಜೆಗಳ ಹಿತವೇ ತನ್ನ ಹಿತ ಎಂಬುದು ಒಡೆಯರ ಮುಖ್ಯ ಗುರಿಯಾಗಿರಬೇಕೆಂದು ವಿವರಿಸುತ್ತಾ ಒಡೆಯರ ತೀರ್ಮಾನ ಅಂತಿಮ ಎಂಬುದು ಮುಖ್ಯ ಎಂದಿದ್ದಾರೆ. ದಿವಾನರು ಒಡೆಯರ ಕಾರ್ಯಗಳಿಗೆ ಸಹಾಯಕರಾಗಿದ್ದರು. ಕಾರ್ಯಾಂಗ, ಶಾಸಕಾಂಗ, ನ್ಯಾಯಾಂಗ ಎಲ್ಲಾ ಆಡಳಿತದಲ್ಲೂ ಮಹಾರಾಜರ ತೀರ್ಮಾನ ಅಂತಿಮವಾಗಿತ್ತು ಎಂಬುದನ್ನು ವಿವರಿಸಿದ್ದಾರೆ. ಇದಕ್ಕೆ ಪರ್ಯಾಯವಾಗಿ ಸ್ಥಳೀಯ ಅಧಿಕಾರವು ಇತ್ತು. ಪ್ರಜಾಪ್ರತಿನಿಧಿ ಸಭೆಯು ಜನರ ಸಮಸ್ಯೆಗಳಿಗೆ ಸ್ಪಂದಿಸಲು ಸ್ಥಾಪನೆಯಾದರೂ ಕೊನೆಗೆ ಅದು ಪ್ರಜಾಪ್ರಭುತ್ವದ ಕಲ್ಪನೆ ಹುಟ್ಟಲು ಸಹಾಯಕವಾಯಿತು ಎಂಬುದು ಮುಖ್ಯ.

ಆರ್ಥಿಕ ಪ್ರಗತಿಗೆ ಕೃಷಿ-ಅರಣ್ಯ, ನೀರಾವರಿ ಯೋಜನೆಗಳು ಮುಖ್ಯ. ೧೯೩೦ರ ದಶಕದ ತೀವ್ರ ಆರ್ಥಿಕ ಮುಗ್ಗಟ್ಟಿನಿಂದ ಇಡೀ ವಿಶ್ವದಲ್ಲಿಯೇ ಕೈಗಾರಿಕಾಭಿವೃದ್ಧಿಯಲ್ಲಿ ಹಿಂಜರಿತ ಕಂಡುಬಂದಿದ್ದರೂ ಮೈಸೂರು ಸಂಸ್ಥಾನದಲ್ಲಿ ಕೈಗಾರಿಕೆಗಳ ಸ್ಥಾಪನೆ ಮತ್ತು ಬೆಳವಣಿಗೆ ಹಿಂದಿಗಿಂತಲೂ ಚುರುಕಾಗಿದುದ್ದನ್ನು ಅಲ್ಲಿ ಗಮನಿಸಲಾಗಿದೆ. ಇದರಿಂದ ನಾಲ್ವಡಿ ಆಳ್ವಿಕೆಯ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಿ ಕೈಗಾರಿಕಾ ಕ್ರಾಂತಿ ಉಂಟಾಯಿತೆಂದು ಹೇಳಬಹುದು. ಏಷ್ಯಾ ಖಂಡದಲ್ಲಿಯೇ ಮೊದಲ ಜಲವಿದ್ಯುತ್ ಯೋಜನೆಯನ್ನು ಪ್ರಾರಂಭಿಸಿದ ಕೀರ್ತಿ ನಾಲ್ವಡಿ ಅವರಿಗೆ ಸಲ್ಲುತ್ತದೆ. ಬಹಳ ಮುಖ್ಯವಾಗಿ ಸಮಾಜದ ಅನಿಷ್ಟ ಪದ್ಧತಿಗಳನ್ನು ಹೋಗಲಾಡಿಸಲು ಜಾರಿಗೆ ತಂದ ಕಾನೂನುಗಳು ಮುಖ್ಯ. ಬಾಲ್ಯವಿವಾಹ ನಿಷೇಧ ವೇಶ್ಯಾವೃತ್ತಿಯ ನಿಷೇಧ, ದಿ ಹಿಂದೂ ಲಾ ವುಮೆನ್ಸ್ ರೈಟ್ಸ್ ಆ್ಯಕ್ಟ್, ದಿ ಹಿಂದೂ ವಿಡೋ ರೀ ಮ್ಯಾರೇಜ್ ಆ್ಯಕ್ಟ್, ದಿ ಮೈಸೂರ್ ಮೆಟರ್ನಿಟಿ ಬೆನಿಫಿಟ್ ಆ್ಯಕ್ಟ್, ಅಗ್ರಿಕಲ್ಚರಿಸ್ಟ್ಸ್ ರಿಲೀಫ್ ಆಕ್ಟ್ ಇವೇ ಮೊದಲಾದ ಕಾನೂನುಗಳನ್ನು ಜಾರಿಗೆ ತಂದರು. ಇದರಿಂದ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಸಾಮಾಜಿಕ ಕಾನೂನುಗಳ ಹರಿಕಾರ ಎನ್ನಬಹುದು.

ಸಮಾಜದಲ್ಲಿ ಸಾಮಾಜಿಕ ಸ್ತರವಿನ್ಯಾಸವನ್ನು ನೋಡಬಹುದು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರರು ಎಂಬ ಜಾತಿಗಳಿದ್ದವು. ಬ್ರಾಹ್ಮಣರು ಪ್ರಬಲರಾಗಿ ಎಲ್ಲಾ ಸೌಲಭ್ಯಗಳನ್ನು ಹೊಂದಿದ್ದು, ಕೆಳವರ್ಗದ ಜನರು ಅವಕಾಶ ವಂಚಿತರಾಗಿದ್ದರು. ಈ ಸಂದರ್ಭದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕೆಳವರ್ಗದ ಜನರಿಗೆ ವಿವಿಧ ಕ್ಷೇತ್ರಗಳಲ್ಲಿ ಮೀಸಲಾತಿ ನೀಡಿ ಸೌಲಭ್ಯಗಳನ್ನು ಒದಗಿಸಿದ ವಿವರಗಳು ಗಮನಾರ್ಹವಾಗಿವೆ. ದಲಿತರಿಗೆ ಮೊದಲು ಶಿಕ್ಷಣಕ್ಕಾಗಿ ಶಾಲೆಗಳ ಸ್ಥಾಪನೆ, ವಿದ್ಯಾರ್ಥಿವೇತನ, ಹಾಸ್ಟೆಲ್, ಉದ್ಯೋಗ ಮೊದಲಾದ ಸೌಲಭ್ಯಗಳನ್ನು ನೀಡಿದ ವಿವರಗಳನ್ನು ಗಮನಿಸಬಹುದು. ಇವರ ಕಾಲದಲ್ಲಿ ದಲಿತರು ಈ ರೀತಿ ಗುರುತಿಸಲು

ಸಾಧ್ಯವಾಯಿತು. ಸ್ತ್ರೀಯರ ಅಭ್ಯುದಯಕ್ಕೂ ಕಾರ್ಯ ಕೈಗೊಂಡರು. ಶಿಕ್ಷಣ, ಉದ್ಯೋಗ, ಚುನಾವಣೆ ಮೊದಲಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಸಾಧಿಸಿದ ವಿಚಾರ ಸ್ವಾಗತಾರ್ಹ. ಮೊದಲ ಬಾರಿಗೆ ಪ್ರಜಾಪ್ರತಿನಿಧಿ ಸಭೆಯ ಪಾತ್ರ, ನ್ಯಾಯ ವಿಧಾಯ ಸಭೆಯ ಪಾತ್ರವನ್ನು ಇಲ್ಲಿ ತಿಳಿಸಿದ್ದಾರೆ. ನಾಲ್ವಡಿ ಅವರು ಸಾಹಿತ್ಯ, ಸಂಗೀತ, ನೃತ್ಯ, ನಾಟಕ, ನೃತ್ಯಕಲೆ, ವಾಸ್ತುಶಿಲ್ಪ, ಚಿತ್ರಕಲೆ, ಮೂರ್ತಿಶಿಲ್ಪ ಮೊದಲಾದ ಕಲೆಗಳಿಗೆ ವಿಶೇಷ ಪ್ರೋತ್ಸಾಹ ನೀಡಿದ್ದರ ವಿವರಗಳನ್ನು ಪ್ರಸ್ತಾಪಿಸಿದ್ದಾರೆ. ಐತಿಹಾಸಿಕ ಸ್ಮಾರಕಗಳ ವಾಸ್ತುಶಿಲ್ಪ, ಚಿತ್ರಕಲೆ, ಮೂರ್ತಿಕಲೆಯ ವಿಚಾರಗಳನ್ನು ಇಲ್ಲಿ ತಿಳಿಸಿದ್ದಾರೆ. ವಿಶೇಷವಾಗಿ ಪರಿಸರ ಸಂರಕ್ಷಣೆಗೆ ಕ್ರಮ ಕೈಗೊಂಡ ರೀತಿಯನ್ನು ನೋಡಬಹುದು. ಒಟ್ಟಿನಲ್ಲಿ ಈ ಕೃತಿಯ ಲೇಖನಗಳು ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ವಿಚಾರಗಳನ್ನು ಕಟ್ಟಿಕೊಡುತ್ತವೆ. ಇಲ್ಲಿ ಮುಖ್ಯವಾಗಿ ಬ್ರಾಹ್ಮಣೇತರ ಚಳವಳಿ, ಸುಲ್ತಾನ್‌ಪೇಟೆ ಗಲಾಟೆ ಇನ್ನೂ ಮುಂತಾದ ವಿಚಾರಗಳ ಚರ್ಚೆ ಮೂಡಿ ಬರಬೇಕಾಗಿತ್ತು.

ಹಾಗೆಯೇ ನಂಜರಾಜ ಅರಸು ಪಿ.ವಿ.ಅವರು ಬರೆದಿರುವ **ಮರೆಯಲಾಗದ ಮಹಾಚೇತನ ನಾಲ್ವಡಿ ಕೃಷ್ಣರಾಜ ಒಡೆಯರ್**[೧೧೪] ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಆಡಳಿತಾವಧಿಯಲ್ಲಿ ಕೈಗೊಂಡ ಕಾರ್ಯಗಳ ವಿಚಾರಗಳನ್ನು ಕೃತಿಕಾರರು ಕಟ್ಟಿಕೊಡುತ್ತಾರೆ. ಒಡೆಯರ ಪ್ರತಿಯೊಂದು ಕಾರ್ಯವನ್ನು ಹೊಗಳಿಕೆಯಲ್ಲಿಯೇ ಬಿಂಬಿಸಿದ್ದಾರೆ. ಕೃಷಿ, ಕೈಗಾರಿಕೆ, ನೀರಾವರಿ, ಸಾರಿಗೆ–ಸಂಪರ್ಕ, ಶಿಕ್ಷಣ, ವ್ಯಾಪಾರ–ವಾಣಿಜ್ಯ ಹೀಗೆ ವಿವಿಧ ಕ್ಷೇತ್ರಗಳಲ್ಲಿ ಹೆಚ್ಚಿನ ಮಟ್ಟದಲ್ಲಿ ಅಭಿವೃದ್ಧಿ ಯೋಜನೆಗಳನ್ನು ಕೈಗೊಂಡು ಮಾದರಿ ಸಂಸ್ಥಾನ ಎಂಬ ಹೆಸರು ಬರಲು ನಾಲ್ವಡಿ ಕೃಷ್ಣರಾಜ ಒಡೆಯರು ಕಾರಣ ಎಂದು ಗುರುತಿಸುತ್ತಾರೆ. ಇಲ್ಲಿ ಗಾಂಧೀಜಿ ಅವರು ನಾಲ್ವಡಿ ಕೃಷ್ಣರಾಜ ಒಡೆಯರನ್ನು 'ರಾಜರ್ಷಿ', ಅವರ ರಾಜ್ಯವನ್ನು 'ರಾಮರಾಜ್ಯ' ಎಂದು ಹೊಗಳಿದ್ದಾರೆ. ಈ ಹಿನ್ನೆಲೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕೈಗೊಂಡ ಕಾರ್ಯಕ್ರಮಗಳು ಶ್ಲಾಘನೀಯವಾಗಿವೆ ಎಂಬುದನ್ನು ವಿವರಿಸಿದ್ದಾರೆ.

ಇರ್ಫಾನ್ ಹಬೀಬ್ ಅವರ **ಕಲೋನಿಯಲಿಸಂ ರೆಸಿಸ್ಟೆನ್ಸ್ ಮತ್ತು ಮಾಡರ್ನೈಜ್ ಸೇಶನ್ ಅಂಡರ್ ಹೈದರಾಲಿ ಆ್ಯಂಡ್ ಟಿಪ್ಪು ಸುಲ್ತಾನ್(೧೯೯೯)**[೧೧೫] ಎಂಬ ಸಂಪಾದಿತ ಕೃತಿಯು ಮುಖ್ಯವಾದುದು. ಈ ಕೃತಿಯು ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಒಟ್ಟಾರೆ ಚಿತ್ರಣವನ್ನು ಬಿಂಬಿಸುತ್ತದೆ. ಮೊದಲು ಅವರ ಪರಿಚಯದೊಂದಿಗೆ ಪ್ರಾರಂಭವಾಗುವ ಕೃತಿಯು ಅವರಿಬ್ಬರ ಹೊಸ ಚಿಂತನೆಗಳ ಅಸ್ಮಿತೆಯ ಆಯಾಮವನ್ನು ನೋಡಬಹುದು. ಹೈದರಾಲಿ ಮತ್ತು ಟಿಪ್ಪು ಅವರು ಸೈದ್ಧಾಂತಿಕವಾಗಿ ಸಾಮಾಜಿಕ ಹಿನ್ನೆಲೆಯನ್ನು ಹೊಂದಿದ್ದಾರೆ ಎನ್ನುವುದು ಮುಖ್ಯ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಮರಾಠ ಮತ್ತು ನಿಜಾಮರೊಂದಿಗೆ ಯುದ್ಧಗಳು, ಮೂರನೇ ಆಂಗ್ಲೋ–ಮೈಸೂರು ಯುದ್ಧದ ಸಂದರ್ಭದಲ್ಲಿ ಫ್ರೆಂಚರ ನೆರವನ್ನು ಪಡೆಯಲು ಪ್ರಯತ್ನಿಸಿದ ವಿವರಗಳನ್ನು ಈ ಲೇಖನಗಳಲ್ಲಿ ಗಮನಿಸಬಹುದು. ವಿದೇಶಿ ಮತ್ತು ದೇಶೀಯ ರಾಜ್ಯಗಳೊಡನೆ ಇರುವ ಸಂಬಂಧಗಳ ಆಯಾಮವನ್ನು ಇಲ್ಲಿ ತಿಳಿಯಬಹುದು. ಫ್ರಾನ್ಸ್, ಟರ್ಕಿ, ಇರಾನ್ ಮತ್ತು ಅಫ್ಘಾನಿಸ್ತಾನ ಇವುಗಳ ಜೊತೆಗೆ ಇರುವ ರಾಜಕೀಯ ಸಂಬಂಧಗಳನ್ನು

ಬೆಳೆಸಲು ಪ್ರಯತ್ನಿಸಿದನು ಎಂಬುದು ಪ್ರಮುಖವಾದುದು. ಟಿಪ್ಪು ಕಾಲದಲ್ಲಿ ಅಭಿವೃದ್ಧಿಯಾದ ಕೃಷಿ, ಪಾಳು ಬಿದ್ದ ಭೂಮಿಯನ್ನು ಟೆಂಡರ್ ಮೂಲಕ ಕೃಷಿಗೆ ಒಳಪಡಿಸಿದ್ದರ ವಿವರ, ಟಿಪ್ಪು ಆಧುನೀಕರಣದ ಹೊಸ ಹೊಸ ಪ್ರಯೋಗಗಳನ್ನು ತನ್ನ ಆಡಳಿತದಲ್ಲಿ ಅಳವಡಿಸಿಕೊಂಡ ವಿಚಾರಗಳನ್ನು ಈ ಲೇಖನಗಳಲ್ಲಿ ಕಟ್ಟಿಕೊಡುತ್ತಾರೆ. ಸೈನಿಕ ವ್ಯವಸ್ಥೆಯಲ್ಲಿ ಮಾಡಿದ ಹೊಸ ಹೊಸ ಪ್ರಯೋಗಗಳನ್ನು ತಿಳಿಸಿದ್ದಾರೆ. ಶ್ರೀರಂಗಪಟ್ಟಣದಲ್ಲಿ ಯುದ್ಧದ ಸಿಡಿಮದ್ದಿನ ತಯಾರಿಕೆ ಕೈಗಾರಿಕೆ ಇತ್ತು. ಹೊಸ ಯುದ್ಧನೌಕೆಗಳನ್ನು ಬಳಸಿದ್ದರ ವಿವರಗಳು, ಹಾಗೆಯೇ ಅವನ ಕೋಟೆಗಳು ಯಾವ ರೀತಿಯ ಭದ್ರತೆಯನ್ನು ಹೊಂದಿದ್ದವು ಎಂಬುದನ್ನು ತಿಳಿಸುವ ಲೇಖನಗಳು ಮುಖ್ಯವಾಗಿವೆ.

ಚಂದ್ರಶೇಖರ್ ಎಸ್. ಅವರ **ದಕ್ಷಿಣ ಭಾರತ: ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ(೨೦೦೦)**[೧೧೬] ಎಂಬ ಕೃತಿಯನ್ನು ನಾಗಣ್ಣ ಸಿ. ಅವರು ಕನ್ನಡಕ್ಕೆ ಅನುವಾದಿಸಿದ್ದಾರೆ. ದೇಶಿಯ ಸಂಸ್ಥಾನಗಳಲ್ಲಿ ಯಾವ ರೀತಿಯ ಆಡಳಿತ ನಡೆಯುತ್ತಿತ್ತು ಎಂಬುದನ್ನು ಚರ್ಚಿಸಿದ್ದಾರೆ. ಮಧ್ಯಮವರ್ಗ ಒಂದು ಹಂತಕ್ಕೆ ಒಂದು ಪಾಶ್ಚಾತ್ಯ ಉದಾರವಾದಿ ಆಲೋಚನೆಗಳಿಂದ ಪ್ರಭಾವಗೊಳ್ಳಲು ಈ ವರ್ಗ ಸಿದ್ಧವಾಯಿತು. ಈ ಹಿನ್ನೆಲೆಯಲ್ಲಿಯೇ ರಾಷ್ಟ್ರೀಯವಾದ ಬೆಳೆಯುತ್ತಾ ಹೋಯಿತು ಎಂಬುದು ಚರ್ಚೆಯ ವಿಷಯ. ವಸಾಹತು ಆಡಳಿತದಲ್ಲಿ ಹೊಸ ಸಾಮಾಜಿಕ ವರ್ಗಗಳು ಉದಯವಾಯಿತು. ಈ ನೆಲೆಯಲ್ಲಿ ಮೇಲ್ಜಾತಿಯ ಪ್ರಭಾವ ಹೆಚ್ಚಾಗುತ್ತಾ ಹೋಯಿತು. ಅರ್ಥವ್ಯವಸ್ಥೆ, ಶಿಕ್ಷಣ ಮತ್ತು ಸಂಸ್ಕೃತಿಯ ವಿಚಾರಗಳು ಹೇಗೆ ಮಿಳಿತವಾಗಿವೆ ಎಂಬುದು ಪ್ರಮುಖವಾದುದು. ದಕ್ಷಿಣ ಭಾರತದಲ್ಲಿ ಗಾಂಧೀಜಿಯ ಪ್ರಭಾವ ಮತ್ತು ರಾಷ್ಟ್ರೀಯವಾದದ ಆಯಾಮಗಳನ್ನು ವಿಶ್ಲೇಷಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿ ಅವರ ಕಾರ್ಯ ಕ್ರಮಗಳಿಂದ ಖಾದಿ, ಸ್ವದೇಶಿ, ಅಸ್ಪೃಶ್ಯತಾ ವಿರೋಧ, ಪಾನ ವಿರೋಧ ಮೊದಲಾದವುಗಳನ್ನು ಜಾರಿಗೊಳಿಸಲಾಯಿತು. ಗಾಂಧೀಜಿ ಅವರ ಸ್ವಾತಂತ್ರ್ಯ ಹೋರಾಟವು ಇಲ್ಲಿ ಪ್ರೇರಣೆಯಾಯಿತು ಎಂಬುದನ್ನು ಗಮನಿಸಿದ್ದಾರೆ. ನಿಮ್ನವರ್ಗಗಳು ತಮ್ಮ ಸೌಲಭ್ಯಗಳಿಗಾಗಿ ಹೋರಾಟ ನಡೆಸಿದವು. ಗಾಂಧೀಜಿ ಮತ್ತು ಅಂಬೇಡ್ಕರ್ ಅವರ ನಿಲುವುಗಳಲ್ಲಿ ಭಿನ್ನತೆ ಕಂಡು ಬಂದ ವಿಚಾರವೂ ಮುಖ್ಯ. ವಸಾಹತುವಿರೋಧಿ ಹೋರಾಟವನ್ನು ದಲಿತ ವರ್ಗಗಳು ನಡೆಸಲಾರದೆ ದೂರ ಉಳಿಯುವಂತಹ ಪರಿಸ್ಥಿತಿ ನಿರ್ಮಾಣವಾಯಿತು ಎಂಬುದನ್ನು ಚರ್ಚಿಸುತ್ತಾ ಹೋಗುತ್ತಾರೆ(ಪು.೧೬೮). ರಾಷ್ಟ್ರೀಯವಾದಿಗಳು ದಲಿತರೊಡನೆ ಅಧಿಕಾರವನ್ನು ತಮ್ಮ ಹಿತಕ್ಕಾಗಿ ಹಂಚಿಕೊಂಡರು ಎಂಬುದು ಪ್ರಮುಖವಾದುದು.

ರೈತವರ್ಗವು ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡು ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದ ರೀತಿಯನ್ನು ಚರ್ಚಿಸಿದ್ದಾರೆ. ರೈತವರ್ಗಗಳು ಹೇಗೆ ಈ ಚಳವಳಿಯಲ್ಲಿ ಪಾಲ್ಗೊಂಡವು ಎಂಬುದನ್ನು ಇಲ್ಲಿ ಕಟ್ಟಿಕೊಡುತ್ತಾ ಹೋಗುತ್ತಾರೆ. ರಾಷ್ಟ್ರೀಯ ಚಳವಳಿಯಲ್ಲಿ ಮಾಪಿಳ್ಳೆ ದಂಗೆಯನ್ನು ಮುಸ್ಲಿಮರ ದಂಗೆ ಎಂದು ದಾಖಲಿಸಿದ್ದಾರೆ ಎಂದಿದ್ದಾರೆ. ಮಿರ್ಜಾ ಇಸ್ಮಾಯಿಲ್ ಅವರು ರೈತರು ಈ ಚಳವಳಿಯಲ್ಲಿ ಭಾಗವಹಿಸುವುದನ್ನು ವಿರೋಧಿಸಿದರು. ಆದರೂ ರೈತವರ್ಗ ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದರು. ಕಾರ್ಮಿಕರು ಕೂಡ

ರಾಷ್ಟ್ರೀಯ ಚಳವಳಿಯಲ್ಲಿ ಭಾಗವಹಿಸಿದರು. ಕಾರ್ಮಿಕರು ಏಕಪಂಥೀಯರೊಡನೆ ಸೇರಿ ಹೋರಾಟ ಮುಂದುವರಿಸಿದವು ಎಂಬುದನ್ನು ವಿಶ್ಲೇಷಿಸಿದ್ದಾರೆ. ಸಾಹಿತ್ಯದಲ್ಲಿಯೂ ರಾಷ್ಟ್ರೀಯ ಚಳವಳಿ ಬಿಂಬಿತವಾಗಿರುವುದನ್ನು ಚರ್ಚಿಸಿದ್ದಾರೆ. ಬಿ.ಎಂ.ಶ್ರೀಕಂಠಯ್ಯ ಅವರು ತಮ್ಮ ಕವನಗಳಲ್ಲಿ ಇಲ್ಲಿನ ರಾಷ್ಟ್ರೀಯತೆಯ ಪರಿಕಲ್ಪನೆಯನ್ನು ತಿಳಿಸಿರುವುದನ್ನು ವಿಶ್ಲೇಷಿಸಿದ್ದಾರೆ. ವಸಾಹತುಶಾಹಿ ಸೃಷ್ಟಿಸಿದ ಸಮಸ್ಯೆಗಳನ್ನು ಮೀರುವ ಉಪಾಯವನ್ನು ಕಂಡುಕೊಂಡರಲ್ಲದೆ ತಮ್ಮ ರಾಷ್ಟ್ರೀಯತೆಗೂ ತಾಯಿ ಭಾರತಾಂಬೆಗೂ ನಡುವಿನ ಸಜೀವ ಸಾಮರಸ್ಯವನ್ನು ಕಾಯ್ದುಕೊಂಡರು. ಅಸ್ಪೃಶ್ಯ, ರೈತ, ಮಹಿಳೆ ಹಾಗೂ ಕಾರ್ಮಿಕ ಜನಸ್ತೋಮದ ಬವಣೆಯನ್ನು ಬರವಣಿಗೆಯಲ್ಲಿ ತಿಳಿಸಲು ಪ್ರಯತ್ನಿಸಿದ್ದಾರೆ. ಶಿವರಾಮ ಕಾರಂತರ 'ಚೋಮನ ದುಡಿ', ಕುವೆಂಪು ಅವರ 'ಕಾನೂನು ಹೆಗ್ಗಡಿತಿ' ಈ ಕೃತಿಗಳಲ್ಲಿ ಭೂಮಾಲೀಕ–ಗೇಣಿದಾರ ಸಂಬಂಧವನ್ನು ಕೆಳವರ್ಗದವರ ಜೀತಸ್ಥಿತಿಯನ್ನು ತಿಳಿಸಿದ್ದಾರೆ. ಡಿ.ವಿ.ಗುಂಡಪ್ಪ ಹಾಗೂ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಕೃತಿಗಳು ಮುಖ್ಯ ಎಂದಿದ್ದಾರೆ. ಕೊನೆಯದಾಗಿ ಪ್ರಮುಖ ವ್ಯಕ್ತಿಗಳ ಜೀವನಚರಿತ್ರೆಯನ್ನು ಸಂಕ್ಷಿಪ್ತವಾಗಿ ತಿಳಿಸಿದ್ದಾರೆ. ಈ ನಿಟ್ಟಿನಲ್ಲಿ ಕೃತಿಯಲ್ಲಿ ಬಳಸಿಕೊಂಡಿರುವ ಆಕರಗಳು ಮುಖ್ಯವಾಗಿವೆ.

ರಾಜರತ್ನಂ ಎ. ಅವರು **ಮೈಸೂರು ಒಡೆಯರು ಮತ್ತು ಕರ್ನಾಟಕ ಸಂಗೀತ(೨೦೦೦)**[೧೧೭] ಎಂಬ ಕೃತಿಯನ್ನು ರಚಿಸಿದ್ದಾರೆ. ಈ ಕೃತಿಯಲ್ಲಿ ಮೈಸೂರು ಒಡೆಯರು ಸಂಗೀತ, ಕಲಾವಿದರಿಗೆ ಆಶ್ರಯ ಮತ್ತು ಗೌರವಗಳನ್ನು ನೀಡಿವುದು ತಮ್ಮ ಘನತೆಯ ಸಂಕೇತವೆಂದು ಭಾವಿಸಿದ್ದರು ಎಂಬುದನ್ನು ವಿವರಿಸುತ್ತಾರೆ. ರಾಜ ಒಡೆಯರು, ಚಿಕ್ಕದೇವರಾಜ ಒಡೆಯರು, ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು, ನಾಲ್ವಡಿ ಕೃಷ್ಣರಾಜ ಒಡೆಯರು, ಯುವರಾಜ ಕಂಠೀರವ ನರಸಿಂಹರಾಜ ಒಡೆಯರು ಮತ್ತು ಜಯಚಾಮರಾಜ ಒಡೆಯರ ಕಾಲದಲ್ಲಿ ಸಂಗೀತದ ಕಲೆಗಳನ್ನು ನಾನಾ ರೀತಿಯಲ್ಲಿ ಉದಾರವಾಗಿ ಪೋಷಿಸಿದರು. ಚಿಕ್ಕದೇವರಾಜ ಒಡೆಯರ ಗೀತಗೋಪಾಲ ಕೃತಿಯು ಹಾಡುಗಳಿಗೆ ರಾಗ ತಾಳಗಳನ್ನು ನಿರ್ದೇಶಿಸಲಾಗಿದೆ. ಜಯದೇವನ ಗೀತಗೋವಿಂದ ಕೂಡ ಸಂಗೀತದ ರಚನೆಗಳ ಸಮರೂಪವನ್ನು ತಿಳಿಸುತ್ತದೆ. ಮುಮ್ಮಡಿ ಕೃಷ್ಣರಾಜ ಒಡೆಯರು ಅವರ ಶ್ರೀತತ್ವನಿಧಿ ಕೃತಿಯು ಸಂಗೀತದ ವಿವರಗಳನ್ನು ತಿಳಿಸುತ್ತದೆ. ಇವರ ಆಶ್ರಯದಲ್ಲಿ ವೀಣೆ ವೆಂಕಟಸುಬ್ಬಯ್ಯ, ಕುಪ್ಪಯ್ಯ, ಸವ್ಯಸಾಚಿ ಅಯ್ಯಂಗಾರ್, ಲಾಲ್ಗುಡಿ ರಾಮಯ್ಯರ್, ಸದಾಶಿವರಾಯರು, ವೀಣೆ ಶಾಮಣ್ಣ ೧೦ನೇ ಚಾಮರಾಜ ಒಡೆಯರ ಕಾಲದ ವೀಣೆ ಶೇಷಣ್ಣ, ಬೆಂಗಳೂರು ನಾಗರತ್ನಮ್ಮ, ನಾಲ್ವಡಿ ಕೃಷ್ಣರಾಜ ಒಡೆಯರ ಸಂಗೀತ ಆಸಕ್ತಿ, ಪಿಟೀಲು ಚೌಡಯ್ಯ ಇನ್ನೂ ಮುಂತಾದವರ ವಿವರಗಳನ್ನು ನೋಡಬಹುದು. ಜಯಚಾಮರಾಜ ಒಡೆಯರು ಸಂಗೀತದ ಬಗೆಗೆ ಅನೇಕ ಕೃತಿಗಳನ್ನು ತಿಳಿಸಿದ್ದಾರೆ. ಸುಮಾರು ೯೪ ಕೃತಿಗಳನ್ನು ರಚಿಸಿದ್ದಾರೆ. ರಾಗ, ಅಠಾಣ, ಆದಿತಾಳ, ಭಾನುಚಂದ್ರಿಕೆ, ತಾಳ; ರೂಪಕ ಹೀಗೆ ಅನೇಕ ಕೃತಿಗಳನ್ನು ತಿಳಿಸಿದ್ದಾರೆ. ಒಟ್ಟಾರೆ ಮೈಸೂರು ಒಡೆಯರು ಸಂಗೀತಕ್ಕೆ ನೀಡಿದ ಪ್ರೋತ್ಸಾಹವನ್ನು ಈ ಕೃತಿಯು ವಿವರಿಸುತ್ತದೆ.

ಪ್ರಸನ್ನ ಕುಮಾರ್ ಎಂ.(ಅನುವಾದಕರು ಆರ್.ಎಲ್.ಅನಂತರಾಮಯ್ಯ) ಅವರು **ಮೈಸೂರಿನ ಇತಿಹಾಸದಲ್ಲಿ ದಾನ(ಕ್ರಿ.ಶ.೧೬೦೦–೧೮೮೧)(೨೦೦೧)**[೧೧೮] ಎಂಬ ಕೃತಿಯನ್ನು ಹೊರ

ತಂದಿದ್ದಾರೆ. ಈ ಕೃತಿಯು ಅವರ ಪಿಎಚ್.ಡಿ. ಸಂಶೋಧನೆಯ ರೂಪ. ಕರ್ನಾಟಕ ಚರಿತ್ರೆಯಲ್ಲಿ ದಾನವು ರಾಜ್ಯಾಡಳಿತ ನೀತಿಯಾಗಿ ಗುರುತಿಸಿಕೊಂಡಿದೆ. ಅನೇಕ ದಾನಶಾಸನಗಳಲ್ಲಿ ಬಹುಪಾಲು ಬ್ರಹ್ಮದೇಯಗಳೂ ಮತ್ತು ದೇವದಾಯಗಳೇ ಆಗಿವೆ. ಇಲ್ಲಿ ಕೃತಿಕಾರರು ಕ್ರಿ.ಶ.೧೬೦೦ ರಿಂದ ೧೮೮೧ರವರೆಗಿನ ಮೈಸೂರಿನ ಇತಿಹಾಸದಲ್ಲಿ ರಾಜ್ಯಾಡಳಿತದ ಒಂದು ಸಾಧನವನ್ನಾಗಿ ಬ್ರಹ್ಮದೇಯಗಳು ಮತ್ತು ದೇವದಾಯಗಳನ್ನು ತಮ್ಮ ವಿಶ್ಲೇಷಣೆಗಾಗಿ ಆಯ್ದುಕೊಂಡಿದ್ದಾರೆ. ರಾಜನೀತಿಯನ್ನು ಜಾರಿಗೆ ತರುವ ಸಲುವಾಗಿ ಮೈಸೂರಿನ ಒಡೆಯರು ಸಂಪ್ರದಾಯಾನುಸಾರವಾಗಿ ಬ್ರಹ್ಮದೇಯ ಮತ್ತು ದೇವದಾಯಗಳನ್ನು ಬಳಸಿಕೊಂಡರು. ಹೀಗೆ ರಾಜ್ಯಾಡಳಿತದೊಂದು ಸಾಧನೆಗಾಗಿ ದಾನವು ರಾಜನಿಗೆ ಜನಸಾಮಾನ್ಯರ ನಿಷ್ಠೆಯನ್ನು ದೊರಕಿಸಿಕೊಟ್ಟಿತು. ಅಲ್ಲದೇ ಒಡೆಯರ್ ಹೈದರ್, ಟಿಪ್ಪು ಹಾಗೂ ಬ್ರಿಟಿಷರು ಕೂಡ ದಾನವನ್ನು ರಾಜ್ಯಾಡಳಿತ ನೀತಿಯ ಸಾಧನವಾಗಿ ಬಳಸಿಕೊಂಡರು ಎಂಬುದನ್ನು ತೋರಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಮೊದಲು ಪ್ರಾರಂಭವಾದ ಕಳಲೆ ಅಗ್ರಹಾರವನ್ನು ನೋಡಬಹುದು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಕೂಡ ಬ್ರಹ್ಮದೇಯ ಮತ್ತು ದೇವದಾಯಗಳ ದಾನವನ್ನು ಗೌರವಿಸಿದರ ವಿವರಗಳು ಇವೆ. ಮುಮ್ಮಡಿ ಕೃಷ್ಣರಾಜ ಒಡೆಯರು ನೀಡಿದ ದಾನವನ್ನು ವಿವರಿಸಿದ್ದಾರೆ(ಪು.೯೪). ಕಂಠೀರವ ನರಸರಾಜ ಒಡೆಯರ ಆಳ್ವಿಕೆಯ ಅವಧಿಯ ದೇವದಾಯ ಗಳು ಮೈಸೂರು, ಮಂಡ್ಯ ಮತ್ತು ಹಾಸನ ಜಿಲ್ಲೆಗಳಲ್ಲಿ ಕೇಂದ್ರೀಕೃತವಾಗಿವೆ. ದಳವಾಯಿಗಳ ಕೊಡುಗೆಯನ್ನೂ ನೋಡಬಹುದು. ಬೆಂಗಳೂರು, ಕೋಲಾರ, ಚಿಕ್ಕಬಳ್ಳಾಪುರ ಮುಂತಾದ ಕಡೆಗಳಲ್ಲಿ ದಾನ ನೀಡಿದ್ದ ವಿವರಗಳನ್ನು ನೋಡಬಹುದು. ದೇವದಾಯಗಳು ಆರ್ಥಿಕ ಮೂಲವಾಗಿ ಗುರುತಿಸಿ ಕೊಂಡಿವೆ. ವಿವಿಧ ಸಾಮಾಜಿಕ ಮತ್ತು ಸಾಂಸ್ಕೃತಿಯ ಆಯಾಮ ಗಳಲ್ಲಿಯೂ ಈ ಬ್ರಹ್ಮದೇಯ ಹಾಗು ದೇವದಾಯಗಳು ಗುರುತಿಸಿಕೊಂಡಿರುವುದನ್ನು ಚರ್ಚಿಸಿ ದ್ದಾರೆ. ಒಟ್ಟಾರೆಯಾಗಿ ದಾನವು ಒಂದು ಮಹತ್ವದ ಪಾತ್ರ ವಹಿಸಿದೆ ಎನ್ನಬಹುದು. ಆಕರಗಳನ್ನು ಕೂಲಂಕುಷವಾಗಿ ಬಳಸಿ ಕೊಂಡಿದ್ದಾರೆ.

ಮುದ್ದಾಚಾರಿ ಬಿ. ಅವರು **ಮರಾಠರ ಅತಿಕ್ರಮಣ ಮೈಸೂರಿನ ಪ್ರತಿಭಟನೆ(೨೦೦೧)**[೧೧೯] ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯು ಅವರ ಇಂಗ್ಲಿಷ್ ಕೃತಿಯ ಅನುವಾದವಾಗಿದೆ. ಸಣ್ಣ ಪುಟ್ಟ ಸಾಮಂತರು ಸ್ವತಂತ್ರರಾಗುತ್ತಿದ್ದ ಕಾಲದಲ್ಲಿ ಆಡಳಿತ ಯಾವ ರೀತಿ ಮುಂದುವರಿಯಿತು, ಮರಾಠರು ಹೇಗೆ ಪ್ರಾಬಲ್ಯಕ್ಕೆ ಬಂದರು ಎಂಬುದು ಮುಖ್ಯ. ಈ ಕಡೆ ಮೈಸೂರು ಸಂಸ್ಥಾನದಲ್ಲಿ ದಳವಾಯಿ ಸಹೋದರರು ಚಿಕ್ಕದೇವರಾಜ ಒಡೆಯರ ಅನಂತರ ರಾಜರಿಂದ ಅಧಿಕಾರವನ್ನು ಕಬಳಿಸಿದ್ದರು. ಮರಾಠರು ದಕ್ಷಿಣ ಭಾರತದ ಮೇಲೆ ಆಗಿಂದಾಗ್ಗೆ ಆಕ್ರಮಣ ಮಾಡುತ್ತಿದ್ದರು. ಕರ್ನಾಟಕ ಯುದ್ಧದಲ್ಲಿ ಮೈಸೂರು-ಮರಾಠರ ಸಂಬಂಧ, ಹೈದರಾಲಿಯ ತಿರುಚನಾಪಳ್ಳಿಯ ಯುದ್ಧ, ಹೈದರಾಬಾದಿನ ನಿಜಾಮನ ಯುದ್ಧಗಳು, ದಳವಾಯಿ ನಂಜರಾಜಯ್ಯ ಮರಾಠರನ್ನು ಓಡಿಸಲು ಮಾಡಿದ ಪ್ರಯತ್ನಗಳು, ಮೈಸೂರಿನ ರಾಜ್ಯವನ್ನು ವಿಸ್ತರಿಸಲು ಹೈದರಾಲಿಯ ಹೋರಾಟ, ಬ್ರಿಟಿಷರ ಯುದ್ಧಗಳು, ಈ ನಡುವೆ ಮರಾಠರು ತಮ್ಮ ಆಡಳಿತವನ್ನು ಮರಾಠರಿಗೆ ಸ್ಥಾಪಿಸುವುದು ಕಷ್ಟದ ಕೆಲಸವಾಗಿತ್ತು. ಈ ಹಿನ್ನೆಲೆಯಲ್ಲಿ ೧೭೨೬ರಿಂದ

೧೭೬೧ರವರೆಗಿನ ಅವಧಿಯಲ್ಲಿ ಮೈಸೂರಿನವರು ಮರಾಠರ ವಿಸ್ತಾರಣಾ ನೀತಿಗೆ ಸತತವಾಗಿ ಪ್ರತಿಭಟಿಸಿದ್ದರಿಂದ ಮೈಸೂರು-ಮರಾಠ ಬಾಂಧವ್ಯ ಸೌಹಾರ್ದವಾಗಿರಲಿಲ್ಲ ಎಂಬುದನ್ನು ಈ ಕೃತಿಯಲ್ಲಿ ವಿವರಿಸಿದ್ದಾರೆ.

ಚಂದ್ರಶೇಖರ್ ಎಸ್. ಅವರ **ಆಧುನಿಕ ಕರ್ನಾಟಕದ ಆಂದೋಲನಗಳು(೨೦೦೨)**[೧೨೦] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯಲ್ಲಿನ ಬರಹಗಳು ಬಿಡಿಬಿಡಿಯಾಗಿ ಬರೆದವುಗಳಾಗಿವೆ. ಕೆಲವೊಂದು ವಿಚಾರಗಳು ಈ ಬರಹಗಳಲ್ಲಿ ಪುನರಾವರ್ತನೆಯಾಗಿವೆ. ಮೊದಲು ಕರ್ನಾಟಕದ ಚರಿತ್ರೆಯ ಬರವಣಿಗೆ ಯಾವ ಕಡೆ ಸಾಗುತ್ತಿದೆ, ಚರಿತ್ರೆಯನ್ನು ಪುನಾರಚನೆ ಮಾಡಬಹುದೇ, ಬಳಕೆಯಾಗುವ ಆಕರಗಳು ಯಾವ ಬಗೆ ಎಂಬುದರ ಕುರಿತು ಜವಾಬ್ದಾರಿಯುತ ಚರಿತ್ರೆಕಾರನೊಬ್ಬ ತೀವ್ರ ಎಚ್ಚರ ವಹಿಸಬೇಕಾಗಿದೆ. ಸಹಜವಾಗಿ ಆಕರಗಳು ಮೇಲ್ಜಾತಿಯವರನ್ನು ಮತ್ತು ಅವರ ಸಂಸ್ಕೃತಿಯನ್ನು ಪ್ರತಿಬಿಂಬಿಸಿರುತ್ತವೆ ಎಂದಿದ್ದಾರೆ. ಇತ್ತೀಚೆಗೆ ಹೊರಬರುತ್ತಿರುವ ಕೃತಿಗಳಲ್ಲಿ ವಿಷಯವಾರು ವಿಂಗಡನೆಯು ಏರುಪೇರಾಗುತ್ತದೆ. ಕರ್ನಾಟಕ ಸರ್ಕಾರವೇ ಬರೆಯಿಸಿ, ಪ್ರಕಟ ಮಾಡಿದ 'ಕರ್ನಾಟಕ ಥ್ರೂ ದಿ ಏಜಸ್' ಬೃಹತ್ ಸಂಪುಟದಲ್ಲಿ ಎಲ್ಲ ಮುಸ್ಲಿಂ ಅರಸರ ಆಳ್ವಿಕೆಯ ಕಾಲವನ್ನು ೨೩ ಪುಟಗಳಲ್ಲಿ ಮೀಸಲಾಗಿರಿಸಿದೆ. ಹಾಗೆಯೇ ಕನ್ನಡ ವಿಶ್ವವಿದ್ಯಾಲಯದ ವತಿಯಿಂದ ಏಳು ಸಂಪುಟಗಳಲ್ಲಿ ಪ್ರಕಟವಾದ 'ಸಮಗ್ರ ಕರ್ನಾಟಕ ಚರಿತ್ರೆ'ಯಲ್ಲಿ ಎರಡು ಸಂಪುಟಗಳು ಪೂರ್ಣವಾಗಿ ಮುಸ್ಲಿಂ ಅರಸರ ಕಾಲಕ್ಕೆ ಮೀಸಲಾಗಿವೆ. ೩೭ ವರ್ಷ ರಾಜ್ಯಭಾರ ಮಾಡಿದ ಹೈದರ್ ಅಲಿ, ಟಿಪ್ಪು ಸುಲ್ತಾನ್ ಇಬ್ಬರ ಕಾಲಕ್ಕೆ ೬೦೪ ಪುಟಗಳು ಮೀಸಲಾಗಿವೆ ಎಂಬುದರ ಚರ್ಚೆಯನ್ನು ಗಮನಿಸಬಹುದು.

ಚರಿತ್ರೆಯ ಪುಟಗಳಲ್ಲಿ ಕೋಮುಚಿತ್ರಣಗಳು ಹೇಗೆ ಮೂಡಿಬಂದಿವೆ ಎನ್ನುವುದರ ವಿವರಗಳನ್ನು ಚರ್ಚಿಸಿದ್ದಾರೆ. ಹೈದರಾಲಿ ಮತ್ತು ಟಿಪ್ಪು ಬಗೆಗಿನ ಹೇಳಿಕೆಗಳನ್ನು ಇಲ್ಲಿ ಗಮನಿಸಲಾಗುತ್ತದೆ. ಆಧುನಿಕ ಚರಿತ್ರೆಗೆ ಬಂದರೆ ವಿವಿಧ ವರ್ಗಗಳು ಹೋರಾಟದಲ್ಲಿ ಭಾಗವಹಿಸಿದ ರೀತಿಯನ್ನು ಚರ್ಚಿಸಲು ಸಾಹಿತ್ಯ ಆಕರಗಳನ್ನು ಬಳಸಿಕೊಳ್ಳಬೇಕು ಎಂದಿದ್ದಾರೆ. ಇತ್ತೀಚೆಗೆ ಸಾಮಾಜಿಕ ಸಮಾನತೆಗಾಗಿ ಹೋರಾಟ, ಸ್ತ್ರೀ ವಿಮೋಚನಾ ಚಳವಳಿಗಳು, ಪರಿಸರ ಚಳವಳಿಗಳು, ಹಿಂದುಳಿದವರ, ದಲಿತರ ಹೋರಾಟಗಳು ಗಮನ ಸೆಳೆದಿದ್ದು, ಸಂಶೋಧನೆಗೆ ಒಳಗಾಗಿವೆ ಎಂದು ಚರ್ಚಿಸಿದ್ದಾರೆ.

ವಸಾಹತುಪೂರ್ವ ಬೆಂಗಳೂರು ಲೇಖನದಲ್ಲಿ ಬೆಂಗಳೂರು ವಿವಿಧ ರಾಜವಂಶಗಳ ಆಳ್ವಿಕೆಯಲ್ಲಿ ಬೆಳೆಯಿತು ಎಂಬುದರ ಚರ್ಚೆ ಆಗಿದೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಶಸ್ತ್ರಾಸ್ತ್ರ ತಯಾರಿಕಾ ಘಟಕ ಅಲ್ಲಿ ನೆಲಗೊಂಡಿದ್ದವು. ಹೈದರ್ ಮತ್ತು ಟಿಪ್ಪು ಅವರ ಕಾಲದಲ್ಲಿ ಬೆಂಗಳೂರು ತೀವ್ರವಾಗಿ ಬೆಳೆಯಿತು. ಟಿಪ್ಪುವಿನ ವಾಣಿಜ್ಯನೀತಿ ಮುಖ್ಯ ಕಾರಣ. ವ್ಯಾಪಾರ-ವಾಣಿಜ್ಯದಿಂದಾಗಿ ಬೆಂಗಳೂರು ಬಹುಬೇಗ ಬೆಳೆಯಿತು. ಆದರೆ ಇಲ್ಲಿ ದೇಶೀಯ ಕೈಗಾರಿಕೆಗಳು ನಾಶವಾದವು. ಮುಂದೆ ವಸಾಹತುಶಾಹಿ ಆಡಳಿತ ತನ್ನ ಅನುಕೂಲಕ್ಕೆ ತಕ್ಕಂತೆ ಬಳಸಿಕೊಂಡಿತು. ಅನಂತರದ ಲೇಖನವು ಮೈಸೂರು ಸಂಸ್ಥಾನದಲ್ಲಿ ರಾಷ್ಟ್ರೀಯತೆಯ ಉಗಮ

ಮತ್ತು ಬೆಳವಣಿಗೆ ಹೇಗೆ ಸಾಗಿತು ಎಂಬುದರ ವಿಶ್ಲೇಷಣೆಯಲ್ಲಿ ಸಾಗಿದೆ. ಜನರು ತಮಗೆ ಬೇಕಾಗುವ ಸೌಲಭ್ಯಗಳನ್ನು ಪಡೆದುಕೊಳ್ಳಲು ಹೋರಾಟ ನಡೆಸಿದ್ದರ ವಿವರಗಳನ್ನು ತಿಳಿಸುತ್ತಾ, ಜನರಲ್ಲಿ ಜಾಗೃತಿ ಮೂಡಿತ್ತು ಎಂಬುದನ್ನು ಚರ್ಚಿಸಿದ್ದಾರೆ.

ಮೈಸೂರು ಸಂಸ್ಥಾನದಲ್ಲಿ ಮಹಿಳೆಯರಿಗೆ ಸಂಬಂಧಿಸಿದ ಸುಧಾರಣೆಯ ಲೇಖನದಲ್ಲಿ ಮಹಿಳೆಯ ಶಿಕ್ಷಣ, ವಿವಾಹ ಇವೇ ಮೊದಲಾದ ವಿಚಾರಗಳ ಚರ್ಚೆಯನ್ನು ನೋಡಬಹುದು. ಸಂಪ್ರದಾಯವಾದಿಗಳು ಮಹಿಳೆಯರಿಗೆ ಯಾವುದೇ ಸೌಲಭ್ಯಗಳನ್ನು ನೀಡಿರಲಿಲ್ಲ. ಮೊದಲು ಮೇಲ್ವರ್ಗದ ಹೆಣ್ಣು ಮಕ್ಕಳಿಗೆ ಶಿಕ್ಷಣವನ್ನು ನೀಡಿದರು. ಅನಂತರ ಹಂತಹಂತವಾಗಿ ಶಿಕ್ಷಣ ಎಲ್ಲರಿಗೂ ದೊರೆಯುವಂತಾಯಿತು ಎನ್ನುವುದನ್ನು ವಿಶ್ಲೇಷಿಸಿದ್ದಾರೆ. ಮಹಿಳೆಯರಿಗೆ ಸಂಬಂಧಿಸಿದಂತೆ ಅಸೆಂಬ್ಲಿಯಲ್ಲಿ ಕೆಲವು ಮಸೂದೆಗಳನ್ನು ಜಾರಿಗೊಳಿಸಿದರು. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡ ಮಹಿಳೆಯರಿಗೆ ಮೈಸೂರು ಸಂಸ್ಥಾನ ಅಭಿವೃದ್ಧಿಗೆ ಶ್ರಮಿಸಿದ್ದರ ವಿವರಗಳನ್ನು ವಿಶ್ಲೇಷಿಸಿರುವುದು ಗಮನಾರ್ಹವಾದುದು.

ಮುಂದಿನ ಲೇಖನವು ಹಿಂದುಳಿದ ವರ್ಗಗಳ ಚಳವಳಿಯ ಚಿಂತಕ ಸಿ.ಆರ್.ರೆಡ್ಡಿ ಮತ್ತು ಮೈಸೂರಿನ ಬ್ರಾಹ್ಮಣೇತರ ರಾಜಕೀಯದ ಬಗೆಗೆ ತಿಳಿಸುತ್ತದೆ. ಈ ಲೇಖನದಲ್ಲಿ ಮೈಸೂರಿನ ಬ್ರಾಹ್ಮಣೇತರರ ಜಾತಿ ರಾಜಕೀಯ ಮತ್ತು ಪರಿಣಾಮಗಳನ್ನು ಕುರಿತು ಕೆಲವು ತಾತ್ವಿಕ ಪ್ರಶ್ನೆಗಳನ್ನು ಎತ್ತಲಾಗಿದೆ ಎಂದು ತಿಳಿಸಿದ್ದಾರೆ.

ಮಿರ್ಜಾ ಇಸ್ಮಾಯಿಲ್ ಅವರ ಬಗೆಗಿನ ಲೇಖನವು ಅವರ ಆಡಳಿತ ಹಾಗೂ ರಾಜಕಾರಣವನ್ನು ತಿಳಿಸುತ್ತ, ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ವಿರೋಧವನ್ನು ಒಟ್ಟಿಗೆ ಕಟ್ಟಿಕೊಳ್ಳುವಂತೆ ಮಾಡಿತು. ರಾಜಕೀಯ ಗೊಂದಲಗಳ ನಡುವೆ ಅವರು ಮುಸಲ್ಮಾನರ ಪರ ಎಂಬ ಟೀಕೆಯನ್ನು ಎದುರಿಸಬೇಕಾಯಿತು. ಸುದೀರ್ಘವಾಗಿ ಸುಮಾರು ಹದಿನೈದು ವರ್ಷಗಳ ಕಾಲ ದಿವಾನರಾಗಿ ಆಡಳಿತ ನಡೆಸಿದ ಅವಧಿಯಲ್ಲಿ ಕೃಷಿ, ಕೈಗಾರಿಕೆ, ಶಿಕ್ಷಣ, ನೀರಾವರಿ ಮೊದಲಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಸ್ವದೇಶಿ, ಧೋರಣೆಯಲ್ಲಿಯೇ ಮುಂದುವರಿಸಿದರು ಎಂಬುದು ಮುಖ್ಯ ಎಂದಿದ್ದಾರೆ. ಇದಲ್ಲದೇ ಬೆಂಗಳೂರಿನ ಸುಲ್ತಾನಪೇಟೆಯ ಗಣಪತಿ ಗಲಾಟೆಯಿಂದ ಮಿರ್ಜಾರನ್ನು ಕೋಮುವಾದಿಗಳೆಂಬತೆ ನೋಡಲಾರಂಭಿಸಿದರು. ಆದರೂ ಮಿರ್ಜಾರನ್ನು ಒಡೆಯರ ಶ್ರೀರಕ್ಷೆಯು ರಕ್ಷಿಸಿತು ಎಂಬುದೂ ಮುಖ್ಯ. ಹೀಗೆ ಮಿರ್ಜಾ ಇಸ್ಮಾಯಿಲ್ ಅವರು ಮೈಸೂರು ಒಡೆಯರ ಚರಿತ್ರೆಯಲ್ಲಿ ಗುರುತಿಸಿಕೊಂಡಿರುವ ರೀತಿಯನ್ನು ವಿವರಿಸಿದ್ದಾರೆ.

ಮುಂದಿನ ಲೇಖನವು ಮೈಸೂರು ಸಂಸ್ಥಾನ: ಉಭಯ ದಾಸ್ಯದಿಂದ ಬಿಡುಗಡೆ ಎಂಬುದು ಟಿಪ್ಪು ಸುಲ್ತಾನನ ಪತನದ ನಂತರ ಮೈಸೂರನ್ನು ಹಂಚಿ, ಉಳಿದ ಅಧಿಕಾರವನ್ನು ಒಡೆಯರಿಗೆ ಬ್ರಿಟಿಷರ ಹಿಡಿತದೊಂದಿಗೆ ನೀಡಲಾಯಿತು ಎಂಬುದು ಪ್ರಮುಖವಾದುದು. ಈ ಲೇಖನದಲ್ಲಿ ಬ್ರಿಟಿಷರ ಹಿಡಿತ ಎಷ್ಟಿತ್ತು ಒಡೆಯರ ಆಡಳಿತವು ಹೇಗೆ ಸಾಗಿತು ಎಂಬುದರ ವಿವರಗಳನ್ನು ಗಮನಿಸಲಾಗಿದೆ. ಬ್ರಾಹ್ಮಣ ಮತ್ತು ಬ್ರಾಹ್ಮಣೇತರ ಚಳವಳಿಯ ಅನಾವರಣ,

ರಾಷ್ಟ್ರೀಯ ಕಾಂಗ್ರೆಸ್‌ನ ಹೋರಾಟ, ಬ್ರಿಟಿಷರ ನೀತಿಗಳು, ಜನಜಾಗೃತಿ, ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ ಹೋರಾಟ ಇವೇ ಮೊದಲಾಧ ವಿಚಾರಗಳನ್ನು ಚರ್ಚಿಸಲಾಗಿದೆ. ಅನಂತರ ಮೈಸೂರು ಮತ್ತು ಏಕೀಕೃತ ಕರ್ನಾಟಕದ ರಚನೆ ಹೇಗೆ ಆಯಿತು ಎನ್ನುವುದರ ವಿವರಗಳನ್ನು ತಿಳಿಸಿದ್ದಾರೆ. ದಲಿತ ವರ್ಗಗಳು ಕೂಡ ಸ್ವಾತಂತ್ರ್ಯ ಚಳವಳಿಯಲ್ಲಿ ಗುರುತಿಸಿಕೊಂಡ ಬಗೆಯನ್ನು ಚರ್ಚಿಸಿದ್ದಾರೆ.

ಮುಖ್ಯವಾಗಿ ಆಧುನಿಕ ಮೈಸೂರು ಇತಿಹಾಸ: ಕೆಲವು ಟಿಪ್ಪಣಿಗಳು ಎಂಬ ಲೇಖನವು ಮುಖ್ಯವಾದುದ್ದು. ಮೈಸೂರು ಸಂಸ್ಥಾನದ 'ಮಾದರಿ ರಾಜ್ಯ' ಎಂಬ ಪರಿಕಲ್ಪನೆಯ ಪ್ರಶ್ನೆಯನ್ನು ಜೇಮ್ಸ್ ಮೇನರ್ ಎತ್ತಿಕೊಂಡು ಅದೊಂದು ಹುಸಿಪ್ರತಿಮೆ ಎಂಬ ತೀರ್ಮಾನಕ್ಕೆ ಬರುತ್ತಾರೆ ಎಂಬುದನ್ನು ಇಲ್ಲಿ ವಿವರಿಸುತ್ತಾರೆ. ಬ್ರಾಹ್ಮಣೇತರ ರಾಜಕೀಯದ ವಿಚಾರಗಳು ಪ್ರಮುಖವಾಗಿದ್ದು, ದಲಿತರ ಮತ್ತಿತರ ಬಡವರ ಜನತಾಂತ್ರಿಕ ಆಶಯಗಳನ್ನು ತನ್ನದಾಗಿಸಿಕೊಂಡಿತು. ಶಾಲಾ-ಕಾಲೇಜುಗಳಿಗೆ ಅಸ್ಪೃಶ್ಯರ ಪ್ರವೇಶಕ್ಕೆ ಅನುಮತಿ ಕೊಡಲು ಪ್ರಯತ್ನಿಸಿದ ಸರ್ಕಾರದ ಕ್ರಮವನ್ನು ಅನೇಕ ಬ್ರಾಹ್ಮಣೇತರ ರಾಜಕಾರಣಿಗಳೂ ವಿರೋಧಿಸಿದರು ಎಂಬುದನ್ನು ಹೇಳುತ್ತಾರೆ. ವಿಶ್ವೇಶ್ವರಯ್ಯ ಅವರ ಕಾರ್ಯ, ರಾಜೀನಾಮೆ, ಮಿರ್ಜಾ ಇಸ್ಮಾಯಿಲ್ ವಿಚಾರಗಳನ್ನು ಅಲ್ಲಲ್ಲಿ ಚರ್ಚಿಸಿರುವ ವಿಷಯವನ್ನು ತಿಳಿಸಿದ್ದಾರೆ. ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳ ಅನುಷ್ಠಾನ, ಅವರು ಮೈಸೂರನ್ನು ಹೊಗಳಿರುವುದನ್ನು ಗಮನಿಸಬಹುದು. ಈ ಕಾಲಘಟ್ಟದಲ್ಲಿ ದಲಿತರು, ಮಹಿಳೆಯರು ಮತ್ತು ಅಲ್ಪಸಂಖ್ಯಾತರು ಇವುಗಳ ಅಧ್ಯಯನ ನಡೆಯಬೇಕಾಗಿದೆ ಎಂಬುದನ್ನು ಚರ್ಚಿಸಿದ್ದಾರೆ.

ಬಹುಮುಖ್ಯವಾಗಿ ಕರ್ನಾಟಕ ಇತಿಹಾಸ ಸಂಶೋಧನೆ: ೧೯೮೦ರವರೆಗೆ ಎಂಬ ಲೇಖನವು ಕಳೆದ ಇಪ್ಪತ್ತೈದು ವರ್ಷಗಳಲ್ಲಿ ನಡೆದಿರುವ ಸಂಶೋಧನೆಯ ವಿಮರ್ಶಾ ಚಿತ್ರಣವನ್ನು ನೀಡಿದ್ದಾರೆ. ಮೊದಲು ಎಂ.ಚಿದಾನಂದಮೂರ್ತಿ ಅವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ: ೪೫೦-೧೧೫೦ ಎ.ಡಿ.ಎಂಬ ಕೃತಿಯ ವಿಶ್ಲೇಷಣೆಯನ್ನು ನೋಡಬಹುದು. ವಿಷಯದ ಕ್ರೋಡೀಕರಣದ ದೃಷ್ಟಿಯಿಂದ ಉತ್ತಮವಾದ ಕೃತಿ ಎನ್ನುವುದನ್ನು ವಿವರಿಸುತ್ತಾರೆ. ಆಧುನಿಕ ಮೈಸೂರು ಇತಿಹಾಸಕ್ಕೆ ಸಂಬಂಧಪಟ್ಟಂತೆ ಜೇಮ್ಸ್ ಮೇನರ್ ಅವರ ಕೃತಿ ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ೧೯೧೭-೧೯೫೫ ಎನ್ನುವ ಕೃತಿಯ ವಿಶ್ಲೇಷಣೆಯನ್ನು ಮಾಡಿದ್ದಾರೆ. ಈ ಅವಧಿಯಲ್ಲಿ ಮೈಸೂರು ಸಂಸ್ಥಾನದಲ್ಲಾದ ರಾಜಕೀಯ ಬದಲಾವಣೆಯ ಪ್ರಕ್ರಿಯೆಯನ್ನು ಎಳೆ ಎಳೆಯಾಗಿ ಚಿತ್ರಿಸಿದ್ದಾರೆ. ಹೆಟ್ನೆ ಅವರ 'ದಿ ಪೊಲಿಟಿಕಲ್ ಎಕಾನಮಿ ಆಫ್ ಇನ್‌ಡೈರೆಕ್ಟ್ ರೂಲ್-ಮೈಸೂರ್ ೧೮೮೧-೧೯೪೭' ಎಂಬ ಕೃತಿಯಲ್ಲಿ ಮೈಸೂರು ಸಂಸ್ಥಾನ ಹೇಗೆ ರಾಜಕೀಯ ಮತ್ತು ಆರ್ಥಿಕ ಸ್ವಾಯತ್ತತೆಯನ್ನು ಪಡೆಯಲು ಹೋರಾಟ ನಡೆಸಿತು ಎಂಬುದನ್ನು ವಿಶ್ಲೇಷಿಸಿದ್ದಾರೆ.

ಒಟ್ಟಾರೆಯಾಗಿ ಈ ಕೃತಿಯು ವಿವಿಧ ಲೇಖನಗಳನ್ನು ಒಳಗೊಂಡಿದ್ದು ಹೊಸ ಹೊಸ ವಿಚಾರಧಾರೆಯನ್ನು ಎದುರುಗೊಳ್ಳುವಲ್ಲಿ ಸಫಲವಾಗಿದೆ. ಸಂಶೋಧನೆಯು ಸಾಂದರ್ಭಿಕವಾಗಿ ಸಾಗುತ್ತಿರುವ ವಿಷಯವನ್ನು ಚರ್ಚಿಸುತ್ತಾರೆ.

ಷಡಕ್ಷರಯ್ಯ ಅವರು ಬರೆದಿರುವ **ಮೈಸೂರ್ ಸ್ಟೇಟ್ ರೈಲ್ವೇಸ್ ಅಂಡ್ ದಿ ಬ್ರಿಟಿಷ್ (೧೮೬೪-೧೯೪೭)**(೨೦೦೩)[೧೨೧] ಕೃತಿ ಪ್ರಮುಖವಾದುದು. ಈ ಕೃತಿಯು ಪಿಎಚ್.ಡಿ ಪದವಿಗಾಗಿ ಮಾಡಿದ ಸಂಶೋಧನೆ. ವಸಾಹತುಶಾಹಿ ಆಡಳಿತವು ತನ್ನ ವ್ಯಾಪಾರದ ಅಭಿವೃದ್ಧಿಗಾಗಿ ಮೈಸೂರಿನಲ್ಲಿ ಜಾರಿಗೊಳಿಸಿದ ರೈಲ್ವೆ ಯೋಜನೆಗಳ ಚಾರಿತ್ರಿಕ ಹಿನ್ನೆಲೆಯನ್ನು ವಿವರಿಸಲಾಗಿದೆ. ಬ್ರಿಟಿಷರಿಂದ ಭಾರತದಲ್ಲಿ ೧೮೫೩ರಲ್ಲಿ ರೈಲು ಸಾರಿಗೆ ದೇಶದ ವಿವಿಧ ಭಾಗಗಳೊಂದಿಗೆ ನೇರ ಸಂಪರ್ಕ ಕಲ್ಪಿಸುವುದರ ಜೊತೆಗೆ, ವ್ಯಾಪಾರದ ಉದ್ದೇಶಗಳಿಗೆ ಬಳಸಿಕೊಳ್ಳಲಾಯಿತು. ದಕ್ಷಿಣದ ವಿವಿಧ ಕೇಂದ್ರಗಳ ಮೇಲೆ ರಾಜಕೀಯ ಹಿಡಿತ, ಸರಕು ಸಾಗಾಣಿಕೆಯನ್ನು ಸುಧಾರಿಸುವುದರ ಮೂಲಕ ಆರ್ಥಿಕ ಗಳಿಕೆ ಹಾಗೂ ಸಾಮಾಜಿಕ ನಿಯಂತ್ರಣವನ್ನು ಸಾಧಿಸಲು ರೈಲ್ವೆ ಸಾರಿಗೆಯನ್ನು ಪರಿಣಾಮಕಾರಿಯಾಗಿ ಬಳಸಿಕೊಂಡ ವಿಚಾರವನ್ನು ವಿಶ್ಲೇಷಿಸಿದ್ದಾರೆ. ಮೊದಲ ಬಾರಿಗೆ ರೈಲು ಮಾರ್ಗಗಳನ್ನು ರಚಿಸುವ ಯೋಜನೆಯನ್ನು ಕೈಗೊಂಡಿತು. ಅದೇ ವರ್ಷದಲ್ಲಿ ಬರ ಪರಿಹಾರ ಕಾರ್ಯಕ್ರಮದ ಅಂಗವಾಗಿ ಬೆಂಗಳೂರು ಚನ್ನಪಟ್ಟಣ ಮಧ್ಯದಲ್ಲಿ ರೈಲ್ವೆ ಮಾರ್ಗಕ್ಕೆ ಮಣ್ಣಿನ ಕಾಮಗಾರಿ ಪ್ರಾರಂಭಿಸಲಾಯಿತು. ಈ ನಿಟ್ಟಿನಲ್ಲಿ ಕೃತಿಯು ಮೈಸೂರಿನಲ್ಲಿ ನಡೆದ ರೈಲ್ವೆ-ಯೋಜನೆಗಳನ್ನು ಅಂಕಿ-ಸಂಖ್ಯೆಗಳೊಂದಿಗೆ ವಿವರಿಸಿ ವರದಿಯ ರೂಪದಲ್ಲಿ ಕಟ್ಟಿಕೊಡುತ್ತಾರೆ. ಇಲ್ಲಿ ವಸಾಹತುಶಾಹಿಯು ತನ್ನ ಬಂಡವಾಳವನ್ನು ಈ ಯೋಜನೆಯ ಮೇಲೆಯೇ ಹೂಡಲಾಗಿತ್ತು. ಏಕೆಂದರೆ ಭಾರತ ಬಂಡವಾಳ ಹೂಡಲು ಪ್ರಶಸ್ತವಾದ ಸ್ಥಳವಾದಂತೇ ಅದರ ಭಾಗವಾದ ಮೈಸೂರು ಆಗಿತ್ತು ಎಂಬುದನ್ನು ವಿವರಿಸುತ್ತಾರೆ. ಭಾರತದಲ್ಲಿ ಚರಿತ್ರೆಯ ಗತಿಯನ್ನೇ ಬದಲಿಸಿದ ದೊಡ್ಡ ಸಾಂದ್ರಶಕ್ತಿಯನ್ನು ಪಡೆದಿದ್ದುದು ರೈಲ್ವೆವ್ಯವಸ್ಥೆಯ ಆವಿಷ್ಕಾರ. ಆದರೆ ರೈಲ್ವೆವ್ಯವಸ್ಥೆಯು ಜಾರಿಯಾಗುತ್ತಿದ್ದಂತೆ ಅದು ತಂದ ಸಾಮಾಜಿಕ ಮತ್ತು ರಾಜಕೀಯ ಸ್ಥಿತ್ಯಂತರಗಳನ್ನು ಚರ್ಚಿಸುವುದಿಲ್ಲ. ಯಾವ ರೀತಿಯಲ್ಲಿ ಆರ್ಥಿಕ ತಲ್ಲಣಗಳು ಉಂಟಾದವು ಎಂಬುದನ್ನು ವಿವರಿಸಬೇಕಾಗಿತ್ತು. ಹಾಗೆಯೇ ಸ್ವಾತಂತ್ರ್ಯ ಚಳವಳಿಗೆ ಒಂದು 'ಮಾಸ್' ಲಕ್ಷಣವನ್ನು ಹೇಗೆ ತಂದುಕೊಟ್ಟಿತು ಎಂಬುದನ್ನು ತಿಳಿಸಿದ್ದರೆ ಈ ಕೃತಿಯ ಮೌಲ್ಯ ಮತ್ತಷ್ಟು ಹೆಚ್ಚುತ್ತಿತ್ತು ಎನ್ನಬಹುದು. ಇಲ್ಲಿಯ ಜನರ ಸ್ಪಂದನೆಯು ಮುಖ್ಯ.

ಬಾರ್ಕೂರು ಉದಯ ಅವರು ಬರೆದಿರುವ **ಹೈದರಾಲಿ-ಟಿಪ್ಪು: ಇತಿಹಾಸ ಕಥನ** (೨೦೦೩)[೧೨೨] ಎಂಬ ಕೃತಿ ಇಲ್ಲಿ ಚರ್ಚೆ ಮಾಡಲಾಗಿದೆ. ಮೈಸೂರಿನ ಒಡೆಯರ ಚರಿತ್ರೆಯಲ್ಲಿ ಪ್ರಮುಖವಾಗಿ ಹೈದರಾಲಿ-ಟಿಪ್ಪು ಇವರಿಬ್ಬರು ಗುರುತಿಸಿಕೊಂಡವರಾಗಿದ್ದಾರೆ. ಈ ಕೃತಿಯಲ್ಲಿ ಇವರಿಬ್ಬರ ವಿಚಾರಗಳನ್ನು ಸಮಕಾಲೀನವಾಗಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮೊದಲನೆಯದಾಗಿ ಈ ಕೃತಿಯ ಬರಹಗಾರರು ಇತಿಹಾಸದ ಪರಿಕಲ್ಪನೆಯಲ್ಲಿ ಘಟನೆಗಳ ಸತ್ಯಾಸತ್ಯತೆ ಇತಿಹಾಸಕಾರನ ವೈಯಕ್ತಿಕ ದೃಷ್ಟಿಕೋನವನ್ನು ಅವಲಂಬಿಸಿರುತ್ತದೆ ಎಂಬುದನ್ನು ಕ್ರಿಸ್ಟಾಫರ್ ಹೀಬಟ್ ದಿ ಸಿಪಾಯಿ ಮ್ಯೂಟಿನಿ ಪುಸ್ತಕದಲ್ಲಿ ವಿವರಿಸಿರುವ ವಿವರಗಳನ್ನು ಚರ್ಚಿಸಿದ್ದಾರೆ. ಇತಿಹಾಸವನ್ನು ನಾವು ವ್ಯಾಖ್ಯಾನಿಸುವಾಗ ಇಡೀ ಸಮಾಜವನ್ನು ವಿಷಯನಿಷ್ಠವನ್ನಾಗಿಟ್ಟುಕೊಂಡು ಆ ಸಮಾಜವು ಒಂದು ಕಾಲಘಟ್ಟದಿಂದ ಇನ್ನೊಂದು ಕಾಲಘಟ್ಟದವರೆಗೆ ಬೆಳವಣಿಗೆಯ ಯಾವ ಹಂತದಲ್ಲಿತ್ತು? ಆ ಸಮಾಜದ ರಾಜಕೀಯ, ಆರ್ಥಿಕ, ಸಾಮಾಜಿಕ, ಬೌದ್ಧಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆ

ಗಳಲ್ಲಿ ಮತ್ತು ಸಂಸ್ಥೆಗಳಲ್ಲಿ ಯಾವ ಬದಲಾವಣೆಗಳಾದವೋ ಅವುಗಳ ಫಲವಾಗಿ ಸಾಮಾಜಿಕ ಸಂಘಟನೆ ಹೇಗೆ ಬದಲಾಯಿತು ಎಂಬುದನ್ನು ತಿಳಿಯಬೇಕು. ಕೋಮುವಾದದ ಭಾವನೆಗಳನ್ನು ಆಧರಿಸಿದ ಚಾರಿತ್ರಿಕ ಬರವಣಿಗೆಯು ಹೆಚ್ಚು ಹಾನಿಕಾರವಾದುದು. ಇವುಗಳನ್ನು ಪ್ರಶ್ನಿಸುವುದಿಲ್ಲ. ಅವುಗಳನ್ನು ವಸ್ತುನಿಷ್ಠವಾಗಿ ವಿಶ್ಲೇಷಿಸಲು ಹೋಗುವುದಿಲ್ಲ. ಚರಿತ್ರೆಯನ್ನು ಬೋಧಿಸುತ್ತಿರುವ ಬಹುಮಂದಿ ಈ ಭಾವನೆಗಳನ್ನು ಚಾರಿತ್ರಿಕ ಸತ್ಯಗಳೆಂದೇ ಒಪ್ಪಿಕೊಳ್ಳುತ್ತಾರೆ ಎನ್ನುವುದನ್ನು ತಿಳಿಸುತ್ತಾರೆ.

ಲೇಖಕರು ೧೮ನೇ ಶತಮಾನದಲ್ಲಿ ಮೈಸೂರನ್ನು ಆಳಿದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಟೀಕಿಸುವ ನೆಪದಲ್ಲಿ ಅವರಿಗೆ ಧರ್ಮಾಂಧರೆಂಬ ಹಣೆಪಟ್ಟಿ ಕಟ್ಟಿ, ಅವರು ಹಿಂದೂಗಳ ಬಗೆಗೆ ಯಾವುದೇ ಸಹನೆಯ ಭಾವನೆ ಹೊಂದಿಲ್ಲದವರನ್ನಾಗಿ ಚಿತ್ರಿಸಿದ್ದಾರೆ. ರಾಜಕೀಯವಾಗಿ ಅವರಿಬ್ಬರೂ, ಪ್ರಮುಖರಾಗಿದ್ದ ಕೆಲವು ಹಿಂದೂ ವ್ಯಕ್ತಿಗಳನ್ನು ಅಥವಾ ಅವರ ಕುಟುಂಬಗಳನ್ನು ಮುಸ್ಲಿಂ ಧರ್ಮಕ್ಕೆ ಮತಾಂತರಗೊಳಿಸಲು ಯತ್ನಿಸಿದರೆಂಬುದು ನಿಜ. ಆದರೆ, ಇದನ್ನೇ ಸಾಮಾಜಿಕ ಮಟ್ಟದಲ್ಲಿ ಅಥವಾ ಸಾಮಾಜಿಕ ಪ್ರಮಾಣದಲ್ಲಿ ಹಿಂದೂಗಳನ್ನು ಮುಸ್ಲಿಮರನ್ನಾಗಿ ಮತಾಂತರಗೊಳಿಸಲು ನಡೆಸಿದ ಪಿತೂರಿಯೆಂದು ಚರಿತ್ರೆ ಕಾರರು ಬಣ್ಣಿಸುತ್ತಾರೆ ಎಂಬುದನ್ನು ಕುರಿತು ಚರ್ಚಿಸುತ್ತಾ ಹೋಗುತ್ತಾರೆ(ಪು.೬). ಹೈದರಾಲಿ–ಟಿಪ್ಪು ಸುಲ್ತಾನರು ಹಿಂದೂ ದೇವಾಲಯಗಳನ್ನು ನಾಶಗೊಳಿಸಿದ ವಿಷಯವನ್ನು ತೆಗೆದುಕೊಂಡಾಗ, ಹಿಂದೂ ಇತಿಹಾಸಕಾರರಿಗಿಂತ ಮುಸ್ಲಿಂ ಇತಿಹಾಸಕಾರರೇ ವೈಭವಯುತವಾಗಿ ವರ್ಣಿಸಿದ್ದಾರೆ. ನಿಜವಾಗಿ ಹಿಂದೂಗಳನ್ನು ಮುಸ್ಲಿಂ ಧರ್ಮಕ್ಕೆ ಮತಾಂತರಗೊಳಿಸುವುದು ಅವರ ಮುಖ್ಯ ಉದ್ದೇಶವಾಗಿದ್ದೇ ಆಗಿದ್ದರೆ, ಅವರು ಹಿಂದೂ ದೇವಾಲಯಗಳನ್ನು ನಾಶಪಡಿಸುತ್ತಿರಲಿಲ್ಲ. ಟಿಪ್ಪುಸುಲ್ತಾನ ಧರ್ಮಾಂಧನೆಂಬ ಆರೋಪವನ್ನು ಮಾಡಲಾಗಿದೆ. ಟಿಪ್ಪುವಿನ ಆಡಳಿತ ಕಾಲದಲ್ಲಿ ಹಿಂದೂಗಳ ಮತಾಂತರವಾಯಿತು ಎಂಬ ಆರೋಪವನ್ನು ತಳ್ಳಿ ಹಾಕುವಂತಿಲ್ಲ. ಆದರೆ ಅದು ಹೆಚ್ಚಾಗಿ ಜನಸಾಮಾನ್ಯರ ಮಟ್ಟದಲ್ಲಿ ಸ್ವಯಂ ಇಚ್ಛೆಯಿಂದಲೇ ಆದದ್ದು. ಆದರೆ ಮುಸ್ಲಿಂ ಇತಿಹಾಸಕಾರರ ವಾಸ್ತವ ಅಂಶಗಳನ್ನು ವರ್ಣಿಸುತ್ತಿದ್ದರು ಎಂಬ ಹೇಳಿಕೆಗಳನ್ನು ನೀಡಿ ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು ಎಂದು ಚರ್ಚಿಸಿದ್ದಾರೆ.

ಹೈದರಾಲಿ–ಟಿಪ್ಪು ಅವರ ಬಗ್ಗೆ ಅನೇಕ ಇತಿಹಾಸಕಾರರು ಭಿನ್ನವಾಗಿ ನೋಡಿ ತಮ್ಮ ಹೇಳಿಕೆಗಳನ್ನು ನೀಡಿದ್ದಾರೆ ಎಂಬುದನ್ನು ಚರ್ಚಿಸಿದ್ದಾರೆ. ಜವಹರಲಾಲ್ ನೆಹರು, **ಡಿಸ್ಕವರಿ ಆಫ್ ಇಂಡಿಯಾ** ಕೃತಿಯಲ್ಲಿ ಹೈದರ್–ಟಿಪ್ಪು ವಸಾಹತುಶಾಹಿ ವಿರುದ್ಧ ಹೋರಾಡಿದವರು ಎಂದಿದ್ದಾರೆ. ತಾರಾಚಂದ್ ಅವರು **ಹಿಸ್ಟರಿ ಆಫ್ ದಿ ಫ್ರೀಡಮ್ ಮೂವ್‌ಮೆಂಟ್ ಆಫ್ ಇಂಡಿಯಾ** ಕೃತಿಯಲ್ಲಿ ಮೈಸೂರಿನ ಸುಲ್ತಾನರಾದ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಕನ್ನಡ ನಾಡಿನ ಉಳಿವಿಗಾಗಿ ಹೋರಾಡಿ ತಮ್ಮ ಶಕ್ತಿಯನ್ನು ಪ್ರದರ್ಶಿಸಿದರು ಎಂದಿದ್ದಾರೆ. ನೆಹರು ಮತ್ತು ತಾರಾಚಂದ್ ಅವರ ಅಭಿಪ್ರಾಯಗಳನ್ನು ಸೂಕ್ಷ್ಮವಾಗಿ ಗಮನಿಸುವಾಗ, ಹೈದರ್ ಮತ್ತು ಟಿಪ್ಪು ಭಾರತದ ರಾಷ್ಟ್ರೀಯ ಇತಿಹಾಸ ಕಥನಶಾಸ್ತ್ರದಲ್ಲಿ ಒಂದು ಗೌರವದ ಸ್ಥಾನವನ್ನು ಅಲಂಕರಿಸಿದ್ದಾರೆ ಎಂಬುದು ಸ್ಪಷ್ಟವಾಗುತ್ತದೆ. ೧೯೫೦ರಲ್ಲಿ ಟಿಪ್ಪು ಸುಲ್ತಾನನನ್ನು

ಕೇಂದ್ರವಸ್ತುವನ್ನಾಗಿಟ್ಟುಕೊಂಡು ಪ್ರಸಾರ ಮಾಡಿದ **ದಿ ಸ್ವೋರ್ಡ್ ಆಫ್ ಟಿಪ್ಪು ಸುಲ್ತಾನ್** ಎಂಬ ಹಿಂದಿ ಧಾರಾವಾಹಿಯನ್ನು ತಡೆಹಿಡಿಯಲಾಯಿತು. ೧೯೭೦ರಲ್ಲಿ ಭಗವಾನ್ ಎಸ್.ಗಿದ್ವಾನಿ ಅವರ ಕಾದಂಬರಿ ಆಧಾರಿತ ಧಾರಾವಾಹಿಯ ಮೇಲೆ ಆರೋಪ ಹೊರಿಸಿ ತಡೆಹಿಡಿಯಲಾಯಿತು. ಇತಿಹಾಸ ಪುಟ ಸೇರಿದ ಟಿಪ್ಪು ಸಮಕಾಲೀನ ಚಿಂತನೆಗೆ ಮತ್ತು ಚರ್ಚೆಗೆ ವಸ್ತುವಾಗಿ ಪರಿವರ್ತನೆಗೊಂಡನು. ಘಟನೆಗಳು ಹೇಗೆ ಸಮಕಾಲೀನದಲ್ಲಿ ಜರುಗುತ್ತವೆ ಎಂಬುದನ್ನು ತಿಳಿಸಿದ್ದಾರೆ.

ಬ್ರಿಟಿಷ್ ಇತಿಹಾಸಕಾರರು ಹೈದರಾಲಿ-ಟಿಪ್ಪು ಅವರ ವ್ಯಕ್ತಿತ್ವದ ಬಗೆಗೆ ನೀಡಿರುವ ನಿರೂಪಣೆಯನ್ನು ಈ ಕೃತಿಯಲ್ಲಿ ಕ್ರೋಡೀಕರಿಸಿ ಚರ್ಚಿಸಿದ್ದಾರೆ. ಮಾರ್ಕ್‌ವಿಲ್ಕ್ಸ್ ಮೈಸೂರು ರಾಜ್ಯದ ಬಗ್ಗೆ ಬರೆದಿರುವ ಬ್ರಿಟಿಷ್ ಧೋರಣೆಯನ್ನು ವಿಶ್ಲೇಷಿಸುತ್ತಾ, ಮೈಸೂರಿನಲ್ಲಿ ೧೭೬೧ರಲ್ಲಿ ಹೈದರಾಲಿ ಆಕ್ರಮಣ ಮಾಡುವ ಮೊದಲು ಇದ್ದ ಪ್ರಾಚೀನ ಹಿಂದೂಸಂಸ್ಕೃತಿ ಮತ್ತು ಸಂಪ್ರದಾಯವನ್ನು ಪುನರ್ ನಿರ್ಮಿಸುವುದು ಬ್ರಿಟಿಷರ ಪ್ರಾಮಾಣಿಕ ಪ್ರಯತ್ನವೆಂದು ವಾದಿಸಿದನು. ಟಿಪ್ಪು ಧರ್ಮಾಂಧ ಎಂದಿದ್ದಾರೆ. ಡಾವ್ವೆಲ್ ಟಿಪ್ಪು ಕ್ರೂರ, ಭಾವೋದ್ರೇಕಗಳ ಹಾಗೂ ಗಗನಗಾಮಿ ಮಹತ್ವಾಕಾಂಕ್ಷೆಗಳ ವ್ಯಕ್ತಿಯಾಗಿದ್ದ, ಜನರನ್ನು ಕ್ರೂರವಾಗಿ ಹಿಂಸಿಸುತ್ತಿದ್ದ ಎಂದಿದ್ದಾರೆ. ಲೆವಿನ್ ಬಿ.ಬೌರಿಂಗ್ ಧಾರ್ಮಿಕ ಅಂಧಾಭಿಮಾನ, ಅಂತರಾಳ ಕ್ರೌರ್ಯ ಮತ್ತು ನಿರಂಕುಶ ಪ್ರಭುತ್ವ ಇವುಗಳ ಒತ್ತಡಕ್ಕೊಳಗಾಗಿ ಸಾವಿರಾರು ಜೀವಗಳನ್ನು ಬಲಿಕೊಡುವ ಬಗೆಗೆ ಯೋಚಿಸದೇ ಹೋದ ಎಂದಿದ್ದಾರೆ(ಪು.೧೬).

ಟಿಪ್ಪುವಿನ ಸಮಕಾಲೀನ ಹುಸೇನ್ ಆಲಿ ಖಾನ್ ಕಿರ್ಮಾನಿ ಟಿಪ್ಪುವಿನ ಬಗೆಗೆ ಪ್ರಶಂಸೆಯ ಮಾತುಗಳನ್ನೇ ಹೇಳುತ್ತಾನೆ. ಅವನ ಮಾತುಕತೆ ಮತ್ತು ರೀತಿ ನೀತಿಗಳು ಸಂತೋಷಕರವಾಗಿದ್ದವು. ಮುಸಲ್ಮಾನ ಸಮುದಾಯಕ್ಕೆ, ಸುನ್ನಿ ಸಂಪ್ರದಾಯಕ್ಕೆ ಪ್ರೋತ್ಸಾಹ ಮತ್ತು ರಕ್ಷಣೆಯನ್ನು ನೀಡಿದ ಎಂದು ಹೊಗಳಿದ್ದಾನೆ.

ಹೈದರಾಲಿಯು ಹಿಂದೂ ದೇವರನ್ನು ಮತ್ತು ಬ್ರಾಹ್ಮಣರನ್ನು ದ್ವೇಷಿಸುತ್ತಿರಲಿಲ್ಲ(ಪು.೪೪). ಹಿಂದೂ ದೇವಾಲಯ ಮತ್ತು ಬ್ರಾಹ್ಮಣರಿಗೆ ದಾನ ಮಾಡಿದ್ದಾನೆ. 'ಕೃಷ್ಣರಾಜ ಸಮುದ್ರ ಅಗ್ರಹಾರವನ್ನು' ಕೃಷ್ಣರಾಜ ನಗರ ತಾಲ್ಲೂಕಿನ ಬರಗೂರಿನಲ್ಲಿ ಸ್ಥಾಪಿಸಿದನು. ೧೭೬೧ರಲ್ಲಿ ಯಡತೊರೆಯಲ್ಲಿ 'ದೇವಾಂಗ ಸಮುದ್ರ ಅಗ್ರಹಾರವನ್ನು ಸ್ಥಾಪಿಸಿದನು. ಯಡತೊರೆಯ ಮೋಡೂರಿನಲ್ಲಿ ವೆಂಕಟಾಚಾರಿ ಎಂಬ ಬ್ರಾಹ್ಮಣನಿಗೆ ಮನೆ ನಿವೇಶನ ದಾನ ಮಾಡಿದ್ದಾನೆ. ಹೀಗೆ ಇನ್ನೂ ಹಲವಾರು ದಾನಗಳನ್ನು ನೀಡಿರುವುದನ್ನು ಈ ಕೃತಿಯಲ್ಲಿ ನೋಡಬಹುದು. ಅವನ ವೈರಿ ಬ್ರಿಟಿಷರೊಂದಿಗೆ ಕೈ ಜೋಡಿಸಿದ ಕ್ರೈಸ್ತರನ್ನು ದ್ವೇಷಿಸಲೇಬೇಕಾಯಿತು.

ಟಿಪ್ಪು ಕಾಲದಲ್ಲಿ ಅನೇಕ ದೇವಾಲಯಗಳನ್ನು ಧ್ವಂಸ ಮಾಡಲಾಗಿದೆ ಎನ್ನುತ್ತಾರೆ. ಆದರೆ ಶ್ರೀರಂಗಪಟ್ಟಣದ ರಂಗನಾಥ ದೇವಾಲಯಕ್ಕೆ ೭ ಬೆಳ್ಳಿ ಲೋಟ, ನರಸಿಂಹ ದೇವಾಲಯಕ್ಕೆ ನಗಾರಿ, ನಂಜನಗೂಡು ಶ್ರೀಕಂಠೇಶ್ವರ ದೇವಾಲಯಕ್ಕೆ ಚಿನ್ನ ಮಿಶ್ರಿತ ಬೆಳ್ಳಿ ಲೋಟಗಳನ್ನು ದಾನ ಕೊಟ್ಟನು. ಹಿಂದೂ ಧಾರ್ಮಿಕ ಕ್ಷೇತ್ರಗಳಾದ ಶೃಂಗೇರಿ ಮಠಕ್ಕೆ ದಾನ-ದತ್ತಿಗಳನ್ನು ನೀಡಿದ್ದಾನೆ ಎಂಬುದು ಅಲ್ಲಿನ ಪತ್ರಗಳಿಂದ ತಿಳಿಯುತ್ತದೆ.

ರೈತರಿಗೆ ತಕಾವಿ ಸಾಲ, ನೀರಾವರಿ ವ್ಯವಸ್ಥೆ, ವ್ಯಾಪಾರದ ವಹಿವಾಟನ್ನು ಅಭಿವೃದ್ಧಿಗೊಳಿಸಿದನು. ಉತ್ಪಾದನೆ ಆಧಾರಿತ ತೆರಿಗೆಪದ್ಧತಿ ಜಾರಿಗೆ ತಂದನು. ಊಳಿಗಮಾನ್ಯ ಪದ್ಧತಿಯನ್ನು ನಿರ್ಮೂಲನೆ ಮಾಡಿ ಬಂಡವಾಳಶಾಹಿ ಕ್ರಾಂತಿ ಮಾಡಲು ಉಗಿಯಂತ್ರದ ತಂತ್ರಜ್ಞಾನವನ್ನು ಆಮದು ಮಾಡಿಕೊಂಡನು. ಮಾದರಿ ರಾಜ್ಯವನ್ನು ಸೃಷ್ಟಿಸುವ ಉದ್ದೇಶವನ್ನು ಹೊಂದಿದ್ದನು. ಟಿಪ್ಪು ಒಬ್ಬ ಪ್ರಬುದ್ಧ ಆಡಳಿತಗಾರ ಎಂಬುದು ಸತ್ಯ ಸಂಗತಿ. ಈ ಕೃತಿಯಲ್ಲಿ ಹೈದರಾಲಿ-ಟಿಪ್ಪುವಿನ ಬಗೆಗಿನ ಧೋರಣೆಗಳನ್ನು ವಸ್ತುನಿಷ್ಠವಾಗಿ ನೋಡುವಂತಾಗಿದೆ.

ಅಣ್ಣಾಸ್ವಾಮಿ ಟಿ.ವಿ. ಅವರು **ಬೆಂಗಳೂರು ಟು ಬೆಂಗಲೂರ್(೨೦೦೩)**[೧೨೩] ಎಂಬ ಕೃತಿಯನ್ನು ಹೊರತಂದಿದ್ದಾರೆ. ಬೆಂಗಳೂರು ಮೊದಲಿನಿಂದಲೂ ತನ್ನದೇ ಆದ ಪ್ರಾಚೀನತೆ ಹೊಂದಿ, ಕಾಲನಂತರ ಹೇಗೆ ರೂಪುಗೊಂಡಿತು ಎಂಬುದನ್ನು ಈ ಕೃತಿಯು ಚರ್ಚಿಸುತ್ತದೆ. ವಿವಿಧ ರಾಜಕೀಯ ಶಕ್ತಿಗಳ ಅಧಿಕಾರದ ಕಾಲದಲ್ಲಿ ಅದು ರೂಪಗೊಂಡ ಬಗೆಯನ್ನು ವಿವರಿಸುತ್ತಾರೆ. ೧೮ನೇ ಶತಮಾನದ ಕೊನೆಯವರೆಗೆ ಬೆಂಗಳೂರು ನಡೆದುಬಂದ ಹಾದಿಯನ್ನು ಅನಾವರಣಗೊಳಿಸುತ್ತದೆ. ಪ್ರಮುಖವಾಗಿ ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ೩ ಲಕ್ಷ ರೂಪಾಯಿಗಳಿಗೆ ಖಾಸಿಂ ಖಾನ್‌ನಿಂದ ಕೊಂಡುಕೊಂಡರು ಎಂಬುದು ಚಾರಿತ್ರಿಕ ದಾಖಲೆಯಾಗಿದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದಲ್ಲಿ ಬೆಂಗಳೂರು ಹೇಗೆ ಬೆಳವಣಿಗೆ ಆಯಿತು ಎಂಬುದನ್ನು ಚರ್ಚಿಸಿದ್ದಾರೆ. ಅನಂತರದ ಒಡೆಯರು ಬೆಂಗಳೂರನ್ನು ಹೇಗೆ ಅಭಿವೃದ್ಧಿಗೊಳಿಸಿದರು ಎಂಬುದು ಮುಖ್ಯ. ನಗರ ಚರಿತ್ರೆಯ ಅಧ್ಯಯನಕ್ಕೆ ಇದು ಉಪಯುಕ್ತ ಗ್ರಂಥ.

ಚಿನ್ನಸ್ವಾಮಿ ಸೋಸಲೆ ಎನ್., ಅವರ **ಸಾಮ್ರಾಜ್ಯ ಮತ್ತು ಸಂಸ್ಥಾನ(೨೦೦೪)**[೧೨೪] ಎಂಬ ಕೃತಿಯು ಪ್ರಮುಖವಾದುದು. ಪ್ರಸ್ತುತ ಕೃತಿಯು ಕರ್ನಾಟಕದ ಮೂರು ಪ್ರಸಿದ್ಧ ರಾಜವಂಶಗಳ ಕಾಲದ ಸಂಸ್ಕೃತಿಯ ಚರಿತ್ರೆಯನ್ನು ಚರ್ಚಿಸುತ್ತದೆ. ಇಲ್ಲಿ ಮುಖ್ಯವಾಗಿ ಮೈಸೂರು ಒಡೆಯರ ಕಾಲದ ಸಂಸ್ಕೃತಿಯನ್ನು ಚರ್ಚಿಸುವುದನ್ನು ಗಮನಿಸಬಹುದು. ಇವರ ಕಾಲವನ್ನು ಸಾಂಸ್ಕೃತಿಕ ಅಧ್ಯಯನದ ದೃಷ್ಟಿಯಿಂದ ವಿಜಯನಗರದ ಕಾಲಕ್ಕಿಂತ ಭಿನ್ನವಾದಂತೆ ಕಂಡುಬರುವುದಿಲ್ಲವೆನ್ನಬಹುದು. ಮೈಸೂರು ಒಡೆಯರು ತಮ್ಮ ಸಾಂಸ್ಕೃತಿಕ ಪರಂಪರೆಯನ್ನು ಮುಂದುವರಿಸುತ್ತಾರೆ ಎನ್ನುವುದು ಮುಖ್ಯ. ಈ ಕೃತಿಯಲ್ಲಿ ಮೈಸೂರು ಒಡೆಯರು ವಿಜಯನಗರದ ಅರಸರ ಸಮಕಾಲೀನರಾಗಿ, ಸಾಮಂತರಾಗಿ ಅವರ ನೆರಳಿನಲ್ಲಿಯೇ ಬೆಳೆದವರು. ವಿಜಯನಗರದ ಅವನತಿಯ ನಂತರ ಅಂದಿನ ಎಲ್ಲಾ ರೀತಿಯ ಸಂಸ್ಕೃತಿಯನ್ನು ಚಾಚೂ ತಪ್ಪದೆ ಪಾಲಿಸಿಕೊಂಡ ಸಂಸ್ಥಾನವೇ ಮೈಸೂರು. ಆಡಳಿತ ಪದ್ಧತಿ, ಆರ್ಥಿಕ ಪದ್ಧತಿ, ವಾಣಿಜ್ಯ, ಹಬ್ಬ ಹರಿದಿನಗಳ ಆಚರಣೆ, ದಸರಾ ಹಬ್ಬದ ವೈಭವದ ದಿನಗಳನ್ನು ಮೈಸೂರು ಒಡೆಯರು ವಿಜಯನಗರದ ಅರಸರಿಂದ ಪ್ರಭಾವಿತರಾಗಿ ಬೆಳೆಸಿ ಉಳಿಸಿಕೊಂಡು ಬಂದರು. ಈ ದೃಷ್ಟಿಯಿಂದಾಗಿ ಇಡೀ ಭರತ ಖಂಡದಲ್ಲಿಯೇ ಅಲ್ಲದೇ ವಿಶ್ವದಲ್ಲಿಯೇ ಮೈಸೂರು ಒಂದು ಸಾಂಸ್ಕೃತಿಕ ಸ್ಥಳವಾಗಿ ಕಂಗೊಳಿಸುತ್ತದೆ. ಇಂದಿಗೂ ನಡೆಯುತ್ತಿರುವ ವಿಶ್ವವಿಖ್ಯಾತ ದಸರಾ ಉತ್ಸವ ಈ ಹಂತದಲ್ಲಿ ಪ್ರಮುಖವಾಗಿದೆ. ಕರ್ನಾಟಕದ ಚರಿತ್ರೆಯಲ್ಲಿ ಮೈಸೂರು ಸಂಸ್ಥಾನದ ಸಾಂಸ್ಕೃತಿಕ ಜೀವನದ

ಇತಿಹಾಸವು ಮಹತ್ವಪೂರ್ಣವಾಗಿ ಕಂಡುಬರುತ್ತದೆ ಎನ್ನುವುದು ಮುಖ್ಯ ಎಂದು ಕೃತಿಕಾರರು ತಿಳಿಸುತ್ತಾರೆ. ಒಡೆಯರ ಸಂಸ್ಥಾನ ಸ್ಥಾಪನೆ, ೨೫ ಒಡೆಯರ ಆಳ್ವಿಕೆಯ ವಿವರ, ಭರತ ಖಂಡದಲ್ಲಿಯೇ 'ಮಾದರಿ ಸಂಸ್ಥಾನ' ಎಂಬ ಬಿರುದಿಗೆ ಪಾತ್ರ, ಆಡಳಿತಾತ್ಮಕ ಪ್ರಗತಿ ಕಾರ್ಯಗಳು, ಧಾರ್ಮಿಕ ಪದ್ಧತಿಯ ವಿಚಾರ ಮುಖ್ಯ. ಸಾಮಾಜಿಕವಾಗಿ ಇದ್ದ ಶ್ರೇಣಿಪದ್ಧತಿ, ಮಹಿಳೆಯರ ಸ್ಥಾನಮಾನ, ಸಾಹಿತ್ಯ, ಶಿಲ್ಪ, ಮೂರ್ತಿಶಿಲ್ಪ, ಚಿತ್ರಕಲೆ ಮತ್ತು ನಾಟಕ, ಸಂಗೀತ ಹೀಗೆ ಈ ಎಲ್ಲಾ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯ ವಿಚಾರಗಳನ್ನು ವಿವರಿಸಿದ್ದಾರೆ. ಒಂದು ಕಡೆ ಸಾಮ್ರಾಜ್ಯಶಾಹಿ ವ್ಯವಸ್ಥೆಯು ಸೃಷ್ಟಿಸಿದ ತಲ್ಲಣಗಳು ಮತ್ತು ಒಡೆಯರು, ದಿವಾನರು ಕೈಗೊಂಡ ಕಾರ್ಯಗಳು ಜನಸಾಮಾನ್ಯರ ಮೇಲೆ ಯಾವ ರೀತಿ ಪ್ರಭಾವ ಬೀರಿದವು ಎಂಬುದು ಮುಖ್ಯ. ಈ ನಿಟ್ಟಿನಲ್ಲಿ ಜನಸಾಮಾನ್ಯರ ಸ್ಥಿತಿಗತಿಗಳನ್ನು ತಿಳಿಸುವ ಪ್ರಯತ್ನವನ್ನು ಕಾಣಬಹುದು. ಇಲ್ಲಿ ತಳಸಮುದಾಯಗಳ ಒಂದು ಐಡೆಂಟಿಟಿಯ ಚಿತ್ರಣವನ್ನು ತಿಳಿಯಬಹುದು.

ಸದಾಶಿವ ಕೆ. ಅವರು **ಹಿಸ್ಟರಿ ಆಫ್ ಸೋಷಿಯಲ್ ಲೆಜಿಸ್ಲೇಷನ್ ಇನ್ ಮೈಸೂರ್ ಸ್ಟೇಟ್**(೧೮೮೧-೧೯೪೮)[೧೨೫] ಎಂಬ ಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧವು ಮುಖ್ಯವಾದುದು. ಇದರಲ್ಲಿ ಮೈಸೂರು ಸರ್ಕಾರ ಜಾರಿಗೊಳಿಸಿದ ಪ್ರಮುಖ ಸಾಮಾಜಿಕ ಶಾಸನಗಳ ಇತಿಹಾಸವನ್ನೊಳಗೊಂಡ ಅಧ್ಯಾಯಗಳನ್ನು ತಿಳಿಯಬಹುದು. ಪಾಶ್ಚಿಮಾತ್ಯರ ಪ್ರಭಾವವು ಮೈಸೂರಿನ ವಿವಿಧ ಕ್ಷೇತ್ರಗಳಲ್ಲಿನ ಬೇಡಿಕೆಗೆ ಅನುಗುಣವಾಗಿ ರೂಪಿತವಾದವು ಎಂಬುದನ್ನು ವಿವರಿಸುತ್ತಾರೆ. ಕೃಷಿ ಭೂಮಿ ಮತ್ತು ಸಂಬಂಧಗಳ ಸಣ್ಣ ಚರ್ಚೆ ಕೂಡ ಅಗತ್ಯ. ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹ, ದಲಿತರ ಕಾಳಜಿ, ಸಾರ್ವಜನಿಕ ಆರೋಗ್ಯ, ನೀರಾವರಿ ಯೋಜನೆಗಳು, ನೈರ್ಮಲ್ಯೀಕರಣ, ಕೈಗಾರಿಕೆಗಳ ಅಭಿವೃದ್ಧಿ ಯೋಜನೆ ಇವೇ ಮೊದಲಾದ ಕಾರ್ಯಗಳ ವಿವರಗಳನ್ನು ತಿಳಿಸಿದ್ದಾರೆ. ಹಾಗೆಯೇ ಸಾಮಾಜಿಕ ಅನಿಷ್ಟ ಪದ್ಧತಿಗಳಿಂದ ದೇವದಾಸಿ, ವೇಶ್ಯಾವೃತ್ತಿ, ಅಸ್ಪೃಶ್ಯತೆ, ಭಿಕ್ಷಾಟನೆಗಳಿಗೆ ಸಂಬಂಧಿಸಿದಂತೆ ಮೈಸೂರು ಸರ್ಕಾರವು ೧೮೮೧ರಿಂದ ೧೯೪೮ರವರೆಗೆ ಜಾರಿಗೊಳಿಸಿದ ಸಾಮಾಜಿಕ ಶಾಸನಗಳ ವಿವರಣೆ ಹೆಚ್ಚಾಗಿದ್ದು, ಈ ಸಾಮಾಜಿಕ ಶಾಸನಗಳನ್ನು ಜಾರಿಗೊಳಿಸಿದ ನಾಲ್ವಡಿ ಕೃಷ್ಣರಾಜ ಒಡೆಯರ ಪಾತ್ರವನ್ನು ವಿವರಿಸಿಲ್ಲ. ಹಾಗೆಯೇ ಈ ಸಾಮಾಜಿಕ ಶಾಸನಗಳ ಜಾರಿಯಿಂದ ಸಮಾಜದ ವಿವಿಧ ವರ್ಗಗಳ ಮೇಲಾದ ಪ್ರಭಾವದ ವಿಶ್ಲೇಷಣೆಯನ್ನಾಗಲೀ ಮಾಡಿಲ್ಲ. ಅಂದಿನ ಸಾಮಾಜಿಕ ಒತ್ತಡಗಳ ಬಗೆಗಿನ ವಿವರಣೆಯನ್ನಾಗಲೀ ಅಷ್ಟಾಗಿ ಮಾಡಿಲ್ಲ. ಪಂಚಮರ ಹಲವು ಸಾಮಾಜಿಕ ಕಾನೂನುಗಳನ್ನು ಜಾರಿಗೆ ತಂದು, ಅನುಷ್ಠಾನ ಗೊಳಿಸಿದ್ದರ ವಿವರಗಳನ್ನು ಗಮನಿಸಬೇಕಾಗಿತ್ತು.

ಗೋಪಾಲ್ ಆರ್ ಮತ್ತು ನರೇಂದ್ರ ಪ್ರಸಾದ್ ಎಸ್. ಅವರು **ಮುಮ್ಮಡಿ ಕೃಷ್ಣರಾಜ ಒಡೆಯರು ಒಂದು ಚಾರಿತ್ರಿಕ ಅಧ್ಯಯನ(ಕ್ರಿ.ಶ.೧೭೯೯ ರಿಂದ ೧೮೬೮ ರವರೆಗೆ)(೨೦೦೪)**[೧೨೬] ಎಂಬ ಕೃತಿಯನ್ನು ಹೊರತಂದಿದ್ದಾರೆ. ಟಿಪ್ಪು ಸುಲ್ತಾನರ ನಂತರ ಮೈಸೂರಿನ ಅಧಿಕಾರ ಬ್ರಿಟಿಷ್ ರೆಸಿಡೆಂಟ್‌ನ ಅಧೀನದಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಅಧಿಕಾರ ಹಸ್ತಾಂತರವಾಯಿತು ಎಂಬುದು ಚಾರಿತ್ರಿಕ ದಾಖಲೆ. ಪೂರ್ಣಯ್ಯ ದಿವಾನರಾಗಿ ಕಾರ್ಯ ನಿರತರಾದರು. ಮುಮ್ಮಡಿ ಕೃಷ್ಣರಾಜ ಒಡೆಯರು ನೇರವಾಗಿ ಅಧಿಕಾರ ವಹಿಸಿಕೊಂಡ

ವಿವರ, ಅಭಿವೃದ್ಧಿ ಕಾರ್ಯಗಳ ವಿವರಗಳನ್ನು ಗಮನಿಸಬಹುದು. ಬಹಳ ಮುಖ್ಯವಾಗಿ ೧೮೩೧ರ 'ನಗರದಂಗೆ' ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆದಿರುವ ಘಟನೆಯ ಆಧುನಿಕ ಮೈಸೂರಿನ ಇತಿಹಾಸದಲ್ಲಿ ವಿಶೇಷ ಸ್ಥಾನ ಪಡೆದಿದ್ದು, ಇದರ ವಿಶೇಷವಾದ ಕಾರಣಗಳನ್ನು ಗುರುತಿಸಿದ್ದಾರೆ. ಕಂದಾಯಪದ್ಧತಿ ಇದಕ್ಕೆ ಮುಖ್ಯ ಕಾರಣ ಎಂದೇ ತಿಳಿದಿರುವುದನ್ನು ನೋಡಬಹುದು. ಆದರೆ ಇಲ್ಲಿ ದಿವಾನ್ ಪೂರ್ಣಯ್ಯ ಅವರ ಮೊದಲ ಆಡಳಿತ, ಅದರಲ್ಲೂ ಮುಖ್ಯವಾಗಿ ಆತ ಜಾರಿಗೊಳಿಸಿದ್ದ ವಿಶಿಷ್ಟ ಕಂದಾಯಪದ್ಧತಿ, ಪೂರ್ಣಯ್ಯ ಮತ್ತು ಅವರ ನಂತರ ರಾಜ್ಯ ವ್ಯವಸ್ಥೆಯ ಮೇಲೆ ತಮ್ಮ ಹತೋಟಿಯನ್ನು ಹೊಂದಿದ್ದ ಬಹುತೇಕ ಬ್ರಾಹ್ಮಣರಿಂದ ತುಂಬಿದ್ದ ಅಧಿಕಾರಶಾಹಿ ವ್ಯವಸ್ಥೆ ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರ ಬಗ್ಗೆ ಭವಿಷ್ಯದಲ್ಲಿ ಇಂಗ್ಲಿಷ್ ಈಸ್ಟ್ ಇಂಡಿಯಾ ಕಂಪನಿಯು ಹೊಂದಿರಬಹುದಾದ ರಾಜಕೀಯ ಬಿಗಿ ನಿಲುವುಗಳು ಕಾರಣವೆಂದು ಗುರುತಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರು ನಗರದಂಗೆಯಿಂದ ಅಧಿಕಾರ ಕಳೆದುಕೊಂಡರೂ ಕೂಡ ಬ್ರಿಟಿಷರೊಂದಿಗಿನ ಸಂಬಂಧದಿಂದ ಪುನಃ ಅಧಿಕಾರವನ್ನು ಪಡೆಯು ವಲ್ಲಿ ಸಫಲರಾದರು ಎಂಬುದನ್ನು ವಿವರಿಸುತ್ತಾರೆ. ಹಾಗೆಯೇ ಇವರ ಕಾಲದಲ್ಲಿನ ಆಡಳಿತ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪದ ವಿಚಾರಗಳನ್ನು ಕಟ್ಟಿಕೊಡುತ್ತಾರೆ. ಒಡೆಯರ ಕೇಂದ್ರಿತವಾಗಿ ವಿಚಾರಗಳನ್ನು ವಿವರಿಸಿರುವುದು ಪ್ರಮುಖವಾಗಿದೆ.

ಜಾನಕಿ ನಾಯರ್ ಅವರ **ದಿ ಪ್ರಾಮಿಸ್ ಆಫ್ ದಿ ಮೆಟ್ರೋಪಾಲಿಸ್ ಬೆಂಗಳೂರ್ ಟ್ವೆಂಟಿಯತ್ ಸೆಂಚುರಿ**[೧೨೬] ಎಂಬ ಕೃತಿಯು ೨೦೦೫ರಲ್ಲಿ ಪ್ರಕಟವಾಯಿತು. ಈ ಕೃತಿಯಲ್ಲಿ ಬೆಂಗಳೂರು ನಗರವು ಒಂದು 'ಮೆಟ್ರೋಪಾಲಿಟನ್' ಕೇಂದ್ರವಾಗಿ ಹೇಗೆ ರೂಪುಗೊಂಡಿತು ಎಂಬುದನ್ನು ವಿಶ್ಲೇಷಿಸಿದ್ದಾರೆ. ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಬೆಂಗಳೂರು ಹೇಗೆ ವಿಶ್ವದ ಪ್ರಮುಖ ನಗರಗಳಲ್ಲಿ ಒಂದಾಗಿ ಬೆಳೆಯಿತು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಚಾರಿತ್ರಿಕ ಪರಿಪ್ರೇಕ್ಷ್ಯದಲ್ಲಿ ಕಟ್ಟಿದ ಕೃತಿ ಇದಾಗಿದೆ. ಈ ನಗರದ ಚರಿತ್ರೆ, ಸಮಸ್ಯೆ, ಸವಾಲುಗಳು, ಆಕರ್ಷಣೆ, ಸೆಳೆತ ಮತ್ತು ಅವುಗಳ ಹಿಂದೆ ಕೆಲಸ ಮಾಡಿರುವ ಆಲೋಚನಾಕ್ರಮಗಳನ್ನು ವಿಸ್ತರಿಸಿ ಬರೆಯುತ್ತಾರೆ. ಇಲ್ಲಿ ನಡೆಯುವ ಕರಗದ ಉತ್ಸವದ ಸಾಂಸ್ಕೃತಿಕ ಚಲನೆ, ಈ ಉತ್ಸವದಲ್ಲಿ ಭಾಗವಹಿಸುವ ವಿವಿಧ ವರ್ಗಗಳ ಅಸ್ಮಿತೆಗಳನ್ನು ಗಮನಿಸಬಹುದು. ಸಮಕಾಲೀನ ಸಂದರ್ಭದಲ್ಲಿ ಈ ನಗರದಲ್ಲಿ ನಡೆದಿರುವ ಭಾಷಾ ಚಳವಳಿ, ರಾಜಕೀಯ ಚಳವಳಿಗಳು, ಸ್ತ್ರೀವಾದಿ ಚಳವಳಿ ಮುಂತಾದವುಗಳ ಬಗೆಗೂ ಬರೆಯುತ್ತಾರೆ. ಈ ಚಳವಳಿಗಳು ನಗರದ ಲಕ್ಷಣಗಳನ್ನು ಕಟ್ಟುತ್ತಾ ಹೋದವು ಎಂಬುದನ್ನು ಕೂಡ ವಿಶ್ಲೇಷಿಸಿದ್ದಾರೆ. ಈ ಕೃತಿಯು ಸಮಕಾಲೀನ ನಗರ ಚರಿತ್ರೆಯನ್ನು ಅಧ್ಯಯನ ಮಾಡುವವರಿಗೆ ಒಳನೋಟಗಳನ್ನು ನೀಡುವ ಕೃತಿ. ಸಮಕಾಲೀನವಾಗಿ ನಗರಗಳ ಚರಿತ್ರೆಯ ನೆಲೆಯನ್ನು ಅರ್ಥ ಮಾಡಿಕೊಳ್ಳಲು ಸಿದ್ಧಗೊಂಡ ಕೃತಿ ಎನ್ನಬಹುದು.

ಕರ್ನಾಟಕದ ದಲಿತ ಚರಿತ್ರೆಯಲ್ಲಿ ತನ್ನದೇ ಆದ ಛಾಪು ಮೂಡಿಸಿರುವ ಎನ್. ಚಿನ್ನಸ್ವಾಮಿ ಸೋಸಲೆ ಅವರು ಭಾರತೀಯ ಸಮಾಜದಲ್ಲಿ ದಲಿತರ ಬದುಕಿನ ವಿವಿಧ ಮಜಲುಗಳನ್ನು ಹೊರ ಚೆಲ್ಲುವ ಹಲವು ಸಂಶೋಧನಾತ್ಮಕ ಕೃತಿಗಳನ್ನು ಹೊರತರುವ

ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಜೊತೆಗೆ ಬಹುಮುಖ್ಯವಾಗಿ ಆಧುನಿಕ ಮೈಸೂರು ಚರಿತ್ರೆಯನ್ನು ದಲಿತ ದೃಷ್ಟಿಕೋನದಿಂದ ತಲಸ್ಪರ್ಶೀಯ ಅಧ್ಯಯನ ಮಾಡಲು ಮುಂದಾಗಿದ್ದಾರೆ. ಇವರ ಬರವಣಿಗೆಯಲ್ಲಿ ಸಬಾಲ್ಟರ್ನ್ ನೆಲೆಯಲ್ಲಿ ದಲಿತರ ಬದುಕಿನ ತಳಮಳಗಳನ್ನು ಚಿತ್ರಿಸಿರುವುದನ್ನು ಕಾಣಬಹುದು. ಈ ಹಂತದಲ್ಲಿ **ನಾಲ್ವಡಿ ಕೃಷ್ಣನ ಮೈಸೂರು(ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯ ಅಧ್ಯಯನ)(೨೦೦೫)**[೧೨೮] ಎನ್ನುವ ಕೃತಿಯನ್ನು ಚರ್ಚಿಸಿದಾಗ ತಳಸಮುದಾಯಗಳ ಚಾರಿತ್ರಿಕ ಚಿತ್ರಣವನ್ನು ಕಟ್ಟಿಕೊಟ್ಟಿರುವುದನ್ನು ನಾವು ಗಮನಿಸಬಹುದು.

ನಾಲ್ವಡಿ ಕೃಷ್ಣರಾಜ ಒಡೆಯರು ತಳಸಮುದಾಯಗಳಾದ ದಲಿತರು, ಶೋಷಿತರು (ಕೆಳವರ್ಗದವರು) ಕಾರ್ಮಿಕರು, ಮಹಿಳೆಯರು ಮತ್ತು ಬುಡಕಟ್ಟು ಸಮುದಾಯಗಳ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯಲ್ಲಿ ಕೈಗೊಂಡ ಕಾರ್ಯಗಳನ್ನು ಸಬಾಲ್ಟರ್ನ್ ಪಂಥಕ್ಕೆ ಅನುಗುಣವಾಗಿ ಚರ್ಚಿಸಿದ್ದಾರೆ. ನಾಲ್ವಡಿ ಅವರ ಕಾಲದಲ್ಲಿ ಆದಂತಹ ಸಾಮಾಜಿಕ ಪರಿವರ್ತನೆಯು ಒಂದು ಸಾಮಾಜಿಕ ಆಂದೋಲನವಾಗಿಯೇ ರೂಪವನ್ನು ತಾಳಿತು ಎಂಬುದು ಈ ಕೃತಿಯ ಪ್ರಮುಖ ಸಂಗತಿ ಆಗಿದೆ. ಅಂದರೆ ನಾಲ್ವಡಿ ಕೃಷ್ಣರಾಜ ಒಡೆಯರ ಆಳ್ವಿಕೆ ಅವಧಿಯಲ್ಲಿ ಕೈಗೊಂಡ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ಕಾರ್ಯಗಳಿಂದಾಗಿ ಮೈಸೂರು ಸಂಸ್ಥಾನ ಒಂದು ಹೊಸ ರೂಪ ಪಡೆಯಿತು ಎಂಬುದನ್ನು ತಿಳಿಸುವುದು ಈ ಕೃತಿಯ ಮುಖ್ಯ ಆಶಯ.

ಮೈಸೂರು ಸಂಸ್ಥಾನದಲ್ಲಿನ ಅರಮನೆ ಸಂಸ್ಕೃತಿ ಮತ್ತು ಅರಸು ವೈಭವಗಳಿಗಿಂತ ಭಿನ್ನವಾದ ವಿಶಿಷ್ಟ ಒಳನೋಟಗಳನ್ನು ಈ ಕೃತಿಯಲ್ಲಿ ನೋಡಬಹುದು. ಅಂದರೆ ಮೈಸೂರು ಸಂಸ್ಥಾನದಲ್ಲಿ ದಲಿತರಿಗೆ ಒಂದು ಸಾಮಾಜಿಕ ಚಲನಶೀಲತೆಯ ಹೊಸ ಐಡೆಂಟಿಟಿಯನ್ನು ಕೊಟ್ಟವವರೆಂದರೆ ನಾಲ್ವಡಿ ಕೃಷ್ಣರಾಜ ಒಡೆಯರು ಎನ್ನಬಹುದು ಎಂದು ಕೃತಿ ರಚನಾಕಾರರು ಈ ಕೃತಿಯಲ್ಲಿ ಚರ್ಚಿಸುತ್ತಾರೆ. ಜಾತಿ, ಧರ್ಮದ ಹೆಸರಿನಲ್ಲಿ ಹೀಗೆ ಚರಿತ್ರೆಯು ವಾಸ್ತವಿಕತೆಯಿಂದ ಮರೆಯಾಗುತ್ತದೆ ಎಂದು ಕೃತಿಕಾರರು ಹೇಳಿರುವ ಮಾತು ಸ್ವಾಗತಾರ್ಹವಾದುದು.

ಪ್ರಸ್ತಾವನೆಯಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕೈಗೊಂಡ ಅಭಿವೃದ್ಧಿ ಕಾರ್ಯಗಳಿಗೆ ಪ್ರೇರಣೆಯಾದ ಕೆಲವು ಅಂಶಗಳನ್ನು ತಿಳಿಸಿದ್ದಾರೆ. ಅಂಬೇಡ್ಕರ್ ಅವರ ಸಮಾಜ ಸುಧಾರಣಾ ಕಾರ್ಯಗಳು ರಾಷ್ಟ್ರದಾದ್ಯಂತ ಪ್ರಜ್ಞಾಪೂರ್ವಕವಾಗಿ ಮುನ್ನಡೆಯುತ್ತಿದ್ದ ಸಂದರ್ಭದಲ್ಲಿ ನಾಲ್ವಡಿ ಅವರು ಸಮಕಾಲೀನರಾಗಿ ಮೈಸೂರು ಸಂಸ್ಥಾನದಲ್ಲಿ ಆಳ್ವಿಕೆ ನಡೆಸುತ್ತಿದ್ದರು. ಶಾಹು ಮಹಾರಾಜರು ಅಂಬೇಡ್ಕರ್ ಅವರಿಗೆ ಪ್ರೋತ್ಸಾಹವನ್ನು ನೀಡಿದರು. ಇವರಿಬ್ಬರ ನಿಕಟ ಸಂಪರ್ಕದಿಂದಾಗಿ ಅಭಿವೃದ್ಧಿ ಕಾರ್ಯಗಳನ್ನು ತಮ್ಮ ಸಂಸ್ಥಾನದಲ್ಲಿ ಹೆಚ್ಚಿನ ಮಟ್ಟದಲ್ಲಿ ಅಳವಡಿಸಿದರು ಎಂಬುದು ಮುಖ್ಯವಾದ ವಿಷಯ. ನಾಲ್ವಡಿ ಅವರು ಬರೋಡ ಸಂಸ್ಥಾನದ ಸಾಮಾಜಿಕ ಪ್ರಗತಿಯನ್ನು ಅಳವಡಿಸಿಕೊಂಡು ಕೊನೆಗೆ ಬರೋಡ ಸಂಸ್ಥಾನವೇ ತನ್ನತ್ತ ನೋಡುವಂತೆ ಮಾಡಿದರು ಎಂಬುದನ್ನು ಕೃತಿಕಾರರು ಚರ್ಚಿಸಿದ್ದಾರೆ. ಡಾಮಿನೆಂಟ್

ಗುಂಪುಗಳಾದ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರು ತಮ್ಮ ಅನುಕೂಲಕ್ಕಾಗಿ ದಲಿತರನ್ನು ಹೇಗೆ ಬಳಸಿಕೊಂಡರು ಎಂಬುದು ಪ್ರಮುಖವಾದುದು. ಹಾಗೆಯೇ ದಲಿತರಿಗೆ ನೀಡಿದ ಸೌಲಭ್ಯಗಳನ್ನು ಯಾವ ರೀತಿ ಕಸಿದುಕೊಳ್ಳಲು ಪ್ರಯತ್ನಿಸಿದರು ಎಂಬುದು ಮುಖ್ಯವಾದದ್ದೇ.

ಅಸ್ಪೃಶ್ಯತೆಯ ಭಿನ್ನ ರೂಪ ಮತ್ತು ದೌರ್ಜನ್ಯವನ್ನು ತಿಳಿಸುತ್ತಾ ಗ್ರಾಮಗಳಲ್ಲಿ ಅಸ್ಪೃಶ್ಯರು ಚರಿತ್ರೆ ಹಾಗೂ ಪುರಾಣದಲ್ಲಿ ಹೇಗಿದ್ದಾರೋ ಅದೇ ರೀತಿ ಇರಬೇಕೆಂದು ಬಯಸುತ್ತಾರೆ. ಬಿಳಿಯ ಬಟ್ಟೆ ತೊಟ್ಟು ಉತ್ತಮ ಮನೆ, ಇತರೆ ಆಧುನಿಕ ಸೌಕರ್ಯಗಳಿಂದ ಜೀವನ ನಡೆಸಿದರೆ ಇದು ಸವರ್ಣೀಯರಿಗೆ ಸಹಿಸಲಾಗದ ಸ್ಥಿತಿಯಾಗುತ್ತದೆ. ಇದರ ಫಲವೇ ದಲಿತರ ಮೇಲೆ ನಡೆಯುವ ದೌರ್ಜನ್ಯವಾಗುತ್ತವೆ ಎಂಬುದನ್ನು ಚರ್ಚಿಸಿದ್ದಾರೆ(ಪು.೯). ಪ್ರಸ್ತುತ ಅಸ್ಪೃಶ್ಯರು ಯಾವುದೇ ಉನ್ನತ ಹುದ್ದೆಗಳನ್ನು ಪಡೆದರೂ ಮೇಲ್ವರ್ಗದವರಿಂದ ಶೋಷಣೆ ಆಗುತ್ತಿರುತ್ತದೆ ಎಂಬುದನ್ನು ವಿವರಿಸುತ್ತಾರೆ.

ಏಕೆಂದರೆ ಭರತಖಂಡದಲ್ಲಿದ್ದಂತಹ ನೂರಾರು ಸಂಸ್ಥಾನಗಳಲ್ಲಿ ಮೈಸೂರು ಸಂಸ್ಥಾನವೇ ದಲಿತರಲ್ಲಿ ಅರುಣೋದಯ ಮೂಡಿಸಲು ಶ್ರಮಿಸಿದ್ದು(ಅದು ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಹಾಗೂ ಕೃಷಿಕ್ಷೇತ್ರಗಳಿಗೆ ಸಂಬಂಧಿಸಿದಂತೆ). ಇದರಿಂದಾಗಿ ನಾಲ್ವಡಿ ಅವರು ದಲಿತರಿಗೆ ಸಾಮಾಜಿಕ ನ್ಯಾಯ ದೊರಕಿಸಲು ಶ್ರಮಿಸಿದ ಕೆಲವೇ ಕೆಲವು ರಾಜರಲ್ಲಿ ಮೊದಲ ಸಾಲಿನಲ್ಲಿ ನಿಲ್ಲುತ್ತಾರೆ ಎಂದು ಹೇಳಿರುವ ಲೇಖಕರ ಮಾತುಗಳು ನಿಜಕ್ಕೂ ಸ್ವಾಗತಾರ್ಹವಾಗಿವೆ. ಮೊಟ್ಟ ಮೊದಲಿಗೆ ದಲಿತರಿಗೆ ಸಾಮಾಜಿಕ ಸ್ಥಾನಮಾನ ದೊರಕಿಸಿದವರೆಂದರೆ ನಾಲ್ವಡಿ ಕೃಷ್ಣರಾಜ ಒಡೆಯರು ಎಂಬುದು ಸಾಬೀತಾಗುತ್ತದೆ.

ಇವರ ಕಾರ್ಯಗಳಿಗೆ ದಿವಾನರಾಗಿ ಪಿ.ಎನ್.ಕೃಷ್ಣಮೂರ್ತಿ, ಪಿ.ವಿ.ಮಾಧವರಾವ್, ಟಿ.ಆನಂದರಾವ್, ಎಂ.ವಿಶ್ವೇಶ್ವರಯ್ಯ, ಎಂ.ಕಾಂತರಾಜೇ ಅರಸ್, ಎ.ಆರ್.ಬ್ಯಾನರ್ಜಿ ಮತ್ತು ಮಿರ್ಜಾ ಇಸ್ಮಾಯಿಲ್ ಆಡಳಿತಕ್ಕೆ ಸಹಾಯ ಮಾಡಿದರು. ಆದರೂ ಒಡೆಯರ ತೀರ್ಮಾನವೇ ಅಂತಿಮವಾಗಿತ್ತು ಎಂಬುದು ಮುಖ್ಯ. ಪ್ರಜಾಪ್ರತಿನಿಧಿ ಸ್ಥಾಪನೆ, ಅದರ ಕಾರ್ಯಗಳು, ಹಿಂದುಳಿದ ವರ್ಗಗಳು ತಮ್ಮ ಹಕ್ಕುಗಳಿಗಾಗಿ ಹೋರಾಟ, ಹಕ್ಕು-ಬಾಧ್ಯತೆಗಳಿಗಾಗಿ ಮಿಲ್ಲರ್ ಕಮಿಟಿ ನೇಮಕ, ಚುನಾವಣೆಯಲ್ಲಿ ಸ್ಥಾನ ಮೀಸಲಾತಿ ಹೀಗೆ ವಿವಿಧ ಸುಧಾರಣೆಗಳನ್ನು ಚರ್ಚಿಸುತ್ತಾರೆ. ಈ ಸುಧಾರಣೆಗಳು ಜಾರಿಯಾಗಲು ನಾಲ್ವಡಿ ಕೃಷ್ಣರಾಜ ಒಡೆಯರ ಪಾಶ್ಚಿಮಾತ್ಯ ಮತ್ತು ಪೌರಾತ್ಯ ಚಿಂತನೆಗಳೇ ಕಾರಣ ಎಂಬುದನ್ನು ಚರ್ಚಿಸುತ್ತಾರೆ(ಪು.೧೫-೨೨).

ಜಾತಿಯ ವಿವಿಧ ಆಯಾಮಗಳನ್ನು ತಿಳಿಸುತ್ತಾ ಅಸ್ಪೃಶ್ಯತೆಯು ಭಯಾನಕ, ತೀವ್ರ ಸ್ವರೂಪದ್ದು ಎಂಬುದನ್ನು ವಿವರಿಸುತ್ತಾರೆ. ಚರಿತ್ರೆ ಮತ್ತು ಮೌಲ್ಯೀಕರಣದಲ್ಲಿ 'ಸಾಮ್ರಾಜ್ಯದಿಂದ ಸಂಸ್ಥಾನ ನೋಡು' ಎನ್ನುವ ಹಾಗೆ ವಿವರಿಸಿರುವುದು ಸಮಂಜಸವಾಗಿದೆ. ಕಾಲಕಾಲಕ್ಕೆ ಅನುಗುಣವಾಗಿ ಸಮಾಜದ ಆಶೋತ್ತರಗಳಿಗೆ ಸ್ಪಂದಿಸುತ್ತಾ ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕ ಸುಧಾರಣೆಗಳನ್ನು ಕೈಗೊಳ್ಳಲಾಗಿದೆ ಎಂಬುದನ್ನು ವಿವರಿಸಿದ್ದಾರೆ. ಸಾಮಾಜಿಕ ಸ್ತರವಿನ್ಯಾಸದಲ್ಲಿ ಕೆಳಮಟ್ಟದ ಜಾತಿಯಾದ ಪಂಚಮರಿಗೆ ಮೊದಲ ಬಾರಿಗೆ ಪ್ರತ್ಯೇಕ ಶಾಲೆಗಳನ್ನು ತೆರೆಯಲಾಯಿತು.

ಪ್ರಪ್ರಥಮ ಬಾರಿಗೆ ಅರಮನೆಯನ್ನು ಪ್ರವೇಶಿಸಲು ಅವಕಾಶ ಮಾಡಿಕೊಟ್ಟಿರುವುದನ್ನು ಬರಹಗಾರರು ವಿವರಿಸುತ್ತಾ ಹೋಗುತ್ತಾರೆ(ಪು.೨೫-೩೦). ಹಾಗೆಯೇ ಮಹಿಳೆಯರ ಸ್ಥಿತಿಯೂ ದಲಿತರಷ್ಟೇ ಹೀನಾಯ ಸ್ಥಿತಿಯಲ್ಲಿತ್ತು. ಇವರ ಏಳಿಗೆಗಾಗಿ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿರುವುದನ್ನು ತಿಳಿಸುತ್ತಾ ಹೋಗುತ್ತಾರೆ. ಸ್ಕಾಲರ್‌ಶಿಪ್, ಹಾಸ್ಟೆಲ್ ಸೌಲಭ್ಯ ಮೊದಲಾದ ಸೌಲಭ್ಯಗಳನ್ನು ಒದಗಿಸಿದ್ದಾರೆ. ಬುಡಕಟ್ಟು ಸಮುದಾಯಗಳಿಗೆ ಶಿಕ್ಷಣದ ಸೌಲಭ್ಯಗಳನ್ನು ನೀಡಿರುವುದನ್ನು ಇಲ್ಲಿ ನೋಡಬಹುದು. ಮಹಿಳೆಯರಿಗೆ ಸಂಬಂಧಿಸಿದಂತೆ ಅನಿಷ್ಟ ಪದ್ಧತಿಗಳ ನಿವಾರಣೆಗೆ ಕಾನೂನುಗಳನ್ನು ಜಾರಿಗೆ ತಂದಿರುವುದನ್ನು ತಿಳಿಸುತ್ತಾರೆ. ಇಂತಹ ಕಾನೂನುಗಳಿಂದ ಅನೇಕ ಅನಿಷ್ಟ ಪದ್ಧತಿಗಳು ನಿವಾರಣೆಯಾದವು. ಮಹಿಳೆಯರಿಗೆ ವಿಧವೆಯರ ಪುನರ್ವಿವಾಹ, ಆಸ್ತಿಯ ಹಕ್ಕು ಮೊದಲಾದ ಕಾನೂನುಗಳನ್ನು ಚರ್ಚಿಸಿದ್ದಾರೆ(ಪು.೩೪-೪೪). ಇಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕೈಗೊಂಡ ಅನೇಕ ಸುಧಾರಣೆಗಳನ್ನು ವಿಭಿನ್ನ ದೃಷ್ಟಿಕೋನದಲ್ಲಿ ನೋಡಿ ಚರ್ಚಿಸಿರುವುದನ್ನು ತಿಳಿಯಬಹುದು.

ಕೃಷಿಕ್ಷೇತ್ರದಲ್ಲಿ ಇರುವ ದಲಿತರ ಅಭಿವೃದ್ಧಿಗಾಗಿ ಅನೇಕ ಕಾರ್ಯಗಳನ್ನು ಕೈಗೊಳ್ಳಲಾಯಿತು. ಕೃಷಿ ಅಭಿವೃದ್ಧಿಗಾಗಿ ದಲಿತರಿಗೆ ಕಡಿಮೆ ಬಡ್ಡಿ ದರದಲ್ಲಿ ಕೃಷಿ ಸಾಲ ನೀಡುವ ಬ್ಯಾಂಕ್‌ಗಳನ್ನು ಸ್ಥಾಪಿಸಿದರು. ದಲಿತರಿಗೆ ಸಂಬಂಧಿಸಿದಂತೆ ಶಿಕ್ಷಣ, ಸರ್ಕಾರಿ ಹುದ್ದೆಗಳಲ್ಲಿ ಮೀಸಲಾತಿ, ಸಾರ್ವಜನಿಕ ಸ್ಥಳಗಳಿಗೆ ಮುಕ್ತ ಅವಕಾಶ ಎಂದು ಅಪ್ಪಣೆ ನೀಡಿದರು. ದಲಿತ ಶಿಕ್ಷಣ ಮಿಷನ್ ಸ್ಥಾಪನೆ ಆಗಿ ಅವರ ಶಿಕ್ಷಣ ಗುಣಮಟ್ಟವನ್ನು ಸುಧಾರಿಸಲಾಯಿತು. ಆಧುನಿಕ ಕಾಲದಲ್ಲಿಯೂ ಜಾತಿಯ ಭೂತ ಅನಾವರಣಗೊಂಡಿದೆ ಎಂಬುದು ಮುಖ್ಯ ಬಣ್ಣದ ಮೂಲಕವೂ ದಲಿತರ ಐಡೆಂಟಿಟಿಯನ್ನು ಸವರ್ಣೀಯರು ಗುರುತಿಸಿ ತಾರತಮ್ಯ ಮಾಡುತ್ತಾರೆ ಎಂಬುದನ್ನು ಅರ್ಥಗರ್ಭಿತವಾಗಿ ಚರ್ಚಿಸಿದ್ದಾರೆ. ಅಸ್ಪೃಶ್ಯತಾ ವಿರೋಧಿ ಒಕ್ಕೂಟ ರಚನೆ ಆಯಿತು. ಆದರೂ ಅಸ್ಪೃಶ್ಯತೆಯು ಹಾಗೆಯೇ ಮುಂದುವರೆಯಿತು ಎಂಬುದನ್ನು ಚರ್ಚಿಸುತ್ತಾರೆ(ಪು.೪೬-೫೪).

ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಆದಂತಹ ಸಾಮಾಜಿಕ ಶೈಕ್ಷಣಿಕ ಹಾಗೂ ಅಭಿವೃದ್ಧಿ ನೆಲೆಯ ಎಲ್ಲಾ ಮಜಲುಗಳನ್ನು ಚರ್ಚಿಸಿದ್ದಾರೆ. ಬ್ರಾಹ್ಮಣೇತರರು, ದಲಿತರ ಅಭಿವೃದ್ಧಿ, ಮಹಿಳೆಯರ ಅಭಿವೃದ್ಧಿ, ಅನಿಷ್ಟ ಪದ್ಧತಿಗಳ ನಿವಾರಣೆಗಾಗಿ ಸಾಮಾಜಿಕ ಕಾನೂನುಗಳ ಅನುಷ್ಠಾನ, ಕೃಷಿ, ಗೃಹ ಮತ್ತು ಬೃಹತ್ ಕೈಗಾರಿಕೆಗಳು, ಜಲ ವಿದ್ಯುತ್, ಸಾರಿಗೆ-ಸಂಪರ್ಕ ಹೀಗೆ ನಾಲ್ವಡಿ ಕೃಷ್ಣರಾಜ ಒಡೆಯರು ಎಲ್ಲಾ ಕ್ಷೇತ್ರಗಳಲ್ಲೂ ಅಭಿವೃದ್ಧಿ ಕೈಗೊಂಡು ಮೈಸೂರು ಸಂಸ್ಥಾನ ಮಾದರಿ ಸಂಸ್ಥಾನ ಎಂಬ ಬಿರುದನ್ನು ಪಡೆಯಲು ಕಾರಣವಾಯಿತು ಎಂಬುದನ್ನು ಈ ಕೃತಿಯ ಮೂಲಕ ತಿಳಿಯಬಹುದು. ಇಲ್ಲಿ ಪ್ರಮುಖವಾಗಿ ತಳಸಮುದಾಯಗಳ ಅಭಿವೃದ್ಧಿಯ ಚಿತ್ರಣ ಬಿಂಬಿತವಾಗಿದೆ.

ತೀ.ತಾ.ಶರ್ಮ ಅವರು **ಮೈಸೂರು ಇತಿಹಾಸದ ಹಳೆಯ ಪುಟಗಳು**(೨೦೦೬)[೧೨೯] ಎಂಬ ಕೃತಿಯಲ್ಲಿ ಪತ್ರಗಳು ದಾಖಲೆಗಳ ಮೂಲಕ ರಾಜಕೀಯ ವ್ಯವಹಾರಗಳು ಹೇಗೆ

ನಡೆಯುತ್ತಿದ್ದವು ಮತ್ತು ಅಧಿಕಾರದಲ್ಲಿರುವವರಿಗೆ ಅವರ ಆಡಳಿತ ಸಂಬಂಧಗಳು ಗಟ್ಟಿಯಾಗಿ ನಿಲ್ಲಲು ಯಾವ ರೀತಿ ಸಹಾಯಕವಾದವು ಎಂಬುದನ್ನು ವಿಶ್ಲೇಷಿಸಿದ್ದಾರೆ.

ಈ ಕೃತಿಯನ್ನು ಬರೆಯಲು ಶರ್ಮ ಅವರು ಶೃಂಗೇರಿ ಮಠದ ಕಡತಗಳು, ಸುರೇಂದ್ರನಾಥ ಸೇನ್ ಅವರ Studies in Indian History, ಮೈಸೂರು ಅರಮನೆ ದಾಖಲೆಗಳನ್ನು ಬಳಸಿ ಕೊಂಡಿದ್ದಾರೆ. ಒಟ್ಟು ಇಪ್ಪತ್ತನಾಲ್ಕು ದಾಖಲೆಗಳ ವಿವರಗಳನ್ನು ಇದರಲ್ಲಿ ನೋಡಬಹುದು. ಈ ಕೃತಿಯಲ್ಲಿ ಬರಹಗಾರರು ಹೈದರ್, ಟಿಪ್ಪು ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರು ಈ ಮೂವರು ಕರ್ನಾಟಕದ ರಾಜರ ಬಗೆಗೆ ತಮ್ಮ ಸಂಶೋಧನೆಯನ್ನು ಕೈಗೊಂಡು ಹೊಸ ಮಾಹಿತಿಯನ್ನು ಸಂಗ್ರಹಿಸಿ ನಮ್ಮ ಮುಂದಿಟ್ಟಿದ್ದಾರೆ. ಬ್ರಿಟಿಷ್ ಇತಿಹಾಸಕಾರರು ಈ ಮೂವರ ಬಗ್ಗೆ ಇದ್ದ ಅಭಿಪ್ರಾಯವನ್ನು ತಪ್ಪಾಗಿ ಅರ್ಥೈಸಿಕೊಂಡು ವಿವರಿಸಿದ್ದರು. ಆದರೆ ಶರ್ಮ ಅವರು ಈ ದಾಖಲೆಗಳಿಂದ ಹೈದರ್ ಮತ್ತು ಟಿಪ್ಪು ಅವರು ಬ್ರಿಟಿಷರು ಇಲ್ಲಿ ನೆಲೆಯೂರುವುದನ್ನು ಪ್ರಬಲವಾಗಿ ವಿರೋಧಿಸಿದರು ಎಂಬುದನ್ನು ದೃಢಪಡಿಸುತ್ತಾರೆ.

ಆಂಗ್ಲರ ಹೆಸರನ್ನು ಕರ್ನಾಟಕದಲ್ಲಿ ಒರೆಸಿ ಹಾಕಿಬಿಡುತ್ತೇನೆ ಎಂಬ ದಾಖಲೆಯು ಪ್ರಮುಖವಾದುದಾಗಿದೆ. ಮೈಸೂರಿನ ಆಡಳಿತದಲ್ಲಿ ಹೈದರಾಲಿ ಹಂತಹಂತವಾಗಿ ಗುರುತಿಸಿಕೊಂಡು ಸರ್ವಾಧಿಕಾರಿಯಾದನು. ಬ್ರಿಟಿಷರಿಗೆ ಮತ್ತು ಹೈದರಾಲಿಗೆ ಮೊದಲೇ ಒಪ್ಪಂದವಾಗಿ ಯುದ್ಧದಲ್ಲಿ ಸಹಾಯ ಮಾಡುವುದನ್ನು ಕೈಬಿಟ್ಟರು. ಆಂಗ್ಲರು ಪರಸ್ಪರ ಸಹಾಯದಿಂದ ಒಪ್ಪಂದಕ್ಕೆ ಅನುಗುಣವಾಗಿ ನಡೆದುಕೊಳ್ಳದೇ ಮಿತ್ರದ್ರೋಹ ಮಾಡಿದಾಗ ಹೈದರಾಲಿ ಈ ಮಾತನ್ನು ಬಿರುಸಾಗಿ ಹೇಳಿ, ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂಬುದು ಅವನ ಗುರಿಯಾಯಿತು. ಹೈದರ್‌ನ ನೌಕಾಬಲ ಸಮರ್ಥವಾಗಿತ್ತು ಎಂಬುದನ್ನು ಸಮಕಾಲೀನ ಯೂರೋಪಿಯನ್ ಬರಹಗಾರರು ಒಪ್ಪಿಕೊಂಡಿದ್ದಾರೆ. 'ಲೋ' ಎನ್ನುವ ಇಂಗ್ಲಿಷ್ ಯೋಧನು ಇದನ್ನು ಸಮರ್ಥಿಸಿ ಹೀಗೆ ಬರೆದಿದ್ದಾನೆ. 'ಹೈದರ್‌ನನ್ನು ಎದುರಿಸಿ ನಾವು ಬದುಕು-ಸಾವಿನ ಸಂಗ್ರಾಮ ನಡೆಸುತ್ತಿದ್ದೇವೆ. ಅವನ ನೌಕಾಬಲವೇರುತ್ತಿದೆ'(ಪು.೧೯). ಇದನ್ನು ನೋಡಿದರೆ ಹೈದರ್ ಆಂಗ್ಲರಿಗೆ ಬದುಕು ಸಾವಿನ ಸಂಗ್ರಾಮ ನಡೆಸಹಚ್ಚಿದ ಎನ್ನಲಾಗಿದೆ. ಅಂಗ್ಲರು ಮಂಗಳೂರನ್ನು ಆಕ್ರಮಿಸಿಕೊಂಡಾಗ ಭಾರತದ ಬಂಧವಿಮೋಚನೆ ಮಾಡಲು ಹೈದರಾಲಿ ಒಬ್ಬನೇ ಹೋರಾಡಿದನು ಎಂಬುದನ್ನು ವಿವರಿಸುತ್ತಾರೆ.

ಬ್ರಿಟಿಷ್ ಇತಿಹಾಸಕಾರರು ಟಿಪ್ಪುವನ್ನು ಮತಾಂಧ ಎಂದು ಹೀಯಾಳಿಸುತ್ತಿದ್ದರು. ಶ್ರದ್ಧಾಳು ಹಿಂದೂಗಳು ಶೃಂಗೇರಿ ಮಠ ಲೂಟಿ ಮಾಡಿದರು! ಮತಾಂಧ ಮುಸ್ಲಿಮರು ಆ ಮಠವನ್ನು ಉದ್ಧಾರ ಮಾಡಿದರು ಎಂಬ ದಾಖಲೆಗಳಿಂದ ಟಿಪ್ಪು ಮತಾಂಧನಾಗಿರಲಿಲ್ಲ ಎಂಬುದು ತಿಳಿಯುತ್ತದೆ. ಹಿಂದೂಧರ್ಮ ಸಾಮ್ರಾಜ್ಯ ಸಂಸ್ಕೃತಿಗಳ ಮಹಾರಕ್ಷಕರೆಂದು ಹಾಡಿ ಹೊಗಳುವ ಮರಾಠ ಪೇಶ್ವೆಗಳ ಸರದಾರ ಪರಶುರಾಮ ಬಾಹುವು ಶೃಂಗೇರಿ ಮಠ, ದೇವಸ್ಥಾನಗಳಲ್ಲಿ ಹಣವನ್ನು ಲೂಟಿ ಮಾಡಿದರು. ಆಗ ಟಿಪ್ಪು ಆ ಮಠ, ದೇವಸ್ಥಾನಗಳಿಗೆ ಕಳೆದುಕೊಂಡಷ್ಟು ಹಣವನ್ನು ತನ್ನ ಬೊಕ್ಕಸದಿಂದ ಕೊಡಿಸಿದನು. ಇದಕ್ಕೆ ಸಂಬಂಧಿಸಿದ

ದಾಖಲೆಗಳು ಶೃಂಗೇರಿ ಮಠದಲ್ಲಿ ಇವೆ. ಹೈದರ್ ಆಗಲೀ, ಟಿಪ್ಪು ಆಗಲೀ ಮತಾಂಧರರಾಗಿರಲಿಲ್ಲ. ಇವರಿಬ್ಬರೂ ಮಠಾಧೀಶರಿಗೆ ಕನ್ನಡದಲ್ಲಿಯೇ ಪತ್ರ ಬರೆದಿರುವ ದಾಖಲೆಗಳಿವೆ(ಪು.೨೯). ಈ ದಾಖಲೆಗಳನ್ನು ಲೇಖಕರು ಇಲ್ಲಿ ಬಳಸಿಕೊಂಡಿದ್ದಾರೆ.

ಟಿಪ್ಪುವು ಬ್ರಿಟಿಷರನ್ನು ಹೊಡೆದೋಡಿಸಲು ಪತ್ರ ವ್ಯವಹಾರದ ಮೂಲಕ ನೆಪೋಲಿಯನ್‌ನ ಸಹಾಯವನ್ನು ಕೋರಿದ್ದನು(ಪು.೩೮). ಇವನ ಸೇನೆ ಸೂಯೆಜ್ ಕಾಲುವೆಯ ಹತ್ತಿರ ಬರುವ ಹೊತ್ತಿಗೆ ಯುದ್ಧ ಬಿರುಸಾಗಿ ನಡೆದು ಟಿಪ್ಪು ಮರಣ ಹೊಂದಿದ್ದನು. ಇವರಿಬ್ಬರೇನಾದರೂ ಭೇಟಿ ಆಗಿದ್ದರೆ ಬ್ರಿಟಿಷರ ಹೆಸರೇ ಭಾರತದಲ್ಲಿ ಉಳಿಯುತ್ತಿರಲಿಲ್ಲ. ಆದರೂ ಟಿಪ್ಪು ಒಬ್ಬನೇ ಪರಕೀಯರಾದ ಬ್ರಿಟಿಷರನ್ನು ಓಡಿಸಲು ತೀವ್ರವಾಗಿ ಹೋರಾಡಿ ಮರಣ ಹೊಂದಿದನು. ಹೀಗೆ ಟಿಪ್ಪು ಮೈಸೂರಿಗೆ ಅಂತಾರಾಷ್ಟ್ರೀಯ ಸ್ಥಾನ ಗಳಿಸಿಕೊಟ್ಟನು ಎಂಬುದನ್ನು ಶರ್ಮ ಅವರು ಈ ದಾಖಲೆಯ ಮೂಲಕ ಇಲ್ಲಿ ವಿವರಿಸಿದ್ದಾರೆ.

ಟಿಪ್ಪುವನ್ನು ಸೋಲಿಸಲು ಪರದೇಶಿಗಳು ಸ್ನೇಹಪರರಲ್ಲದ ದೇಶೀಯರ, ಸ್ವಾಮಿದ್ರೋಹಿ ಗಳಿನಿಸಿದ ಮಹಾರಾಣಿ ಲಕ್ಷ್ಮಮ್ಮಣ್ಣಿ ಅವರ ಪ್ರತಿನಿಧಿಗಳಾಗಿ ತಿರುಮಲರಾವ್, ನಾರಾಯಣರಾವ್ ಅವರು ಪತ್ರದಲ್ಲಿ ಮುಸ್ಲಿಮರನ್ನು ಮಟ್ಟ ಹಾಕುವಂತೆ ಕೇಳಿಕೊಂಡರು.

ಶರ್ಮ ಅವರು ಮುಮ್ಮಡಿ ಒಡೆಯರ ಬಗೆಗೆ ಅವರು ಅನೇಕ ಶೋಧಗಳನ್ನು ಮಾಡಿದ್ದಾರೆ. ಪೂರ್ಣಯ್ಯ ಅವರು ಒಡೆಯರನ್ನು ಹೀನಾಯವಾಗಿ ಕಂಡರೂ ಮಹಾರಾಜರು ಔದಾರ್ಯದಿಂದ ನಡೆದುಕೊಂಡು ಅವರಿಗೆ ಐದು ಸಾವಿರ ವರ್ಷಾಶನ ಕೊಟ್ಟು ಗೌರವಿಸಿ ಪ್ರಜಾವರ್ಗದ ಪ್ರೀತಿಗೆ ಪಾತ್ರರಾದರು(ಪು.೮೮) ಎಂದಿದ್ದಾರೆ. ಅನಂತರದ ದಿನಗಳಲ್ಲಿ ಒಡೆಯರ ಸ್ನೇಹಿತರು ರಾಜ್ಯಕ್ಕೆ ಸರಿಯಾದ ಆಡಳಿತವನ್ನು ಕೊಡುವಲ್ಲಿ ವಿಫಲರಾದರು. ಎಲ್ಲಾ ಕಡೆಗೂ ದಂಗೆಗಳಾದವು. ಅದರಲ್ಲಿ ಬೂದಿಬಸಪ್ಪನ ದಂಗೆಯು ರಾಜ್ಯದ ತಳಹದಿಯನ್ನೇ ಅಲುಗಾಡಿಸಿತು. ಆದರೂ ಆಡಳಿತ ನಡೆಸಲು ಯೋಗ್ಯರಲ್ಲ ಎಂದು ತೀರ್ಮಾನಿಸಿ ಬ್ರಿಟಿಷರು, ಕಮೀಷನರುಗಳಿಗೆ ಆಡಳಿತವನ್ನು ವಹಿಸಿಕೊಡಲಾಯಿತು.

ಕಮೀಷನರುಗಳಾದ ಮಾರ್ಕ್ ಕಬ್ಬನ್ ಮತ್ತು ಬೌರಿಂಗ್ ಇವರಿಬ್ಬರೂ ಮೈಸೂರನ್ನು ಒಡೆಯರಿಗೆ ಹಿಂದಿರುಗಿಸದೇ ಕಬಳಿಸಬೇಕೆಂದು ಆಲೋಚಿಸಿದರು. ಆದ್ದರಿಂದ ಕಮೀಷನರ್ ಕಬ್ಬನ್‌ನು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಚಿತ್ರಹಿಂಸೆ ಕೊಡಲಾರಂಭಿಸಿದರು. ದೇಶಭ್ರಷ್ಟರನ್ನಾಗಿ ಮಾಡುವ ಬೆದರಿಕೆ ಹಾಕಲು ಹಿಂದೆಮುಂದೆ ನೋಡಲಿಲ್ಲ(ಪು.೧೧೦). ಕಾರಣ ಕಮೀಷನರುಗಳು ಮೈಸೂರಿನ ಸಮಶೀತೋಷ್ಣ ವಾತಾವರಣಕ್ಕೆ ಹೊಂದಿಕೊಂಡಿದ್ದರು. ಹಾಗೆಯೇ ಕೊಡಗು ಮತ್ತು ಹಾಸನ ಜಿಲ್ಲೆಗಳಲ್ಲಿ ಕಾಫಿ ತೋಟಗಳನ್ನು ಅವರು ಬೆಳೆಸಿದರು. ಆದ್ದರಿಂದ ರಾಜ್ಯ ಸಿಗದ ಹಾಗೆ, ಅಲ್ಲದೇ ಒಂದು ಜಹಗೀರನ್ನು ಕೊಟ್ಟು ಉಳಿದದ್ದನ್ನು ಉಳಿಸಿಕೊಳ್ಳಲು ಪ್ರಯತ್ನಿಸಿದರು.

ಒಡೆಯರ ಅವಿರತ ಹೋರಾಟದಿಂದ ದತ್ತು ಪುತ್ರನಿಗೆ ಅಧಿಕಾರ ವಹಿಸಬೇಕೆಂದು ನಿರ್ಣಯವಾಯಿತು(ಪು.೧೪೫). ಕೊನೆಗೂ ಮುಮ್ಮಡಿ ಕೃಷ್ಣರಾಜ ಒಡೆಯರು ರಾಜ್ಯವನ್ನು

ಆಳದೇ ನಿರಾಶರಾಗಿ ಸ್ವರ್ಗಸ್ಥರಾದರು. ಆದರೆ ಒಡೆಯರು ಹೋರಾಡದಿದ್ದರೆ, ಮೈಸೂರು ರಾಜ್ಯದ ಅಧಿಕಾರ ಮರಳಿ ಪಡೆಯಲು ಸಾಧ್ಯವಾಗುತ್ತಿರಲಿಲ್ಲ.

ಹೀಗೆ ಈ ಕೃತಿಯಲ್ಲಿ ಹೈದರ್, ಟಿಪ್ಪು ಮತ್ತು ಮುಮ್ಮಡಿ ಕೃಷ್ಣರಾಜ ಒಡೆಯರು ಬ್ರಿಟಿಷರ ವಿರುದ್ಧ ಕೈಗೊಂಡ ಹೋರಾಟ ಬೇರೆಬೇರೆ ತರಹದ್ದಾಗಿದ್ದರೂ ಮೈಸೂರು ಒಡೆಯರ ಆಡಳಿತದ ವಿವಿಧ ಮಜಲುಗಳನ್ನು ತಿಳಿಯಲು ಈ ಕೃತಿ ಆಸಕ್ತಿಯುತವಾಗಿದೆ.

ಚಂದ್ರಶೇಖರ್ ಎಸ್. ಅವರ **ವಸಾಹತುಕಾಲೀನ ಕರ್ನಾಟಕ(೨೦೦೬)**[೧೩೦] ಕೃತಿಯು ಹಲವು ಲೇಖನಗಳ ಸಂಗ್ರಹ. ಈ ಕೃತಿಯ ಕೆಲವು ಲೇಖನಗಳು 'ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಕೆಲವು ಒಳನೋಟಗಳು(೧೮೮೧-೧೯೪೦)' ಮತ್ತು 'ಆಧುನಿಕ ಕರ್ನಾಟಕದ ಆಂದೋಲನಗಳು' ಎಂಬ ಕೃತಿಯಲ್ಲಿ ಪ್ರಕಟವಾಗಿದ್ದು, ಈ ಲೇಖನಗಳನ್ನು ಈ ಎರಡು ಕೃತಿಗಳಲ್ಲಿ ಮೊದಲೇ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಕೃತಿಯಲ್ಲಿ ಉಳಿದ ಲೇಖನಗಳನ್ನು ಮಾತ್ರ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಮೊದಲು ಕರ್ನಾಟಕ ಚರಿತ್ರೆ ಬರವಣಿಗೆ ಎತ್ತ ಸಾಗುತ್ತಿದೆ ಎಂಬುದನ್ನು ಚರ್ಚಿಸಿದ್ದಾರೆ. ಚರಿತ್ರೆ ಬರವಣಿಗೆ ಪುನಾರಚನೆಗೆ ಒಳಗಾಗಬೇಕು ಎಂದಿದ್ದಾರೆ. ನಂತರ ಕರ್ನಾಟಕ ಚರಿತ್ರೆಯ ಬರವಣಿಗೆ: ಸಿವೆಲ್ ಮಾದರಿ ಎಂಬ ಲೇಖನವನ್ನು ಚರ್ಚಿಸಿದ್ದಾರೆ. ಇಲ್ಲಿ ಹಂಪಿಯ ಕನ್ನಡ ವಿಶ್ವವಿದ್ಯಾಲಯ ರಾಬರ್ಟ್ ಸಿವೆಲ್ಲರ 'ದಿ ಫರ್ಗಾಟನ್ ಎಂಪೈರ್ ವಿಜಯನಗರ ಎಂಬ ಮೂಲ ಇಂಗ್ಲಿಷ್ ಕೃತಿಯ ಕನ್ನಡ ಅನುವಾದವನ್ನು 'ಮರೆತು ಹೋಗಿರುವ ಸಾಮ್ರಾಜ್ಯ: ವಿಜಯನಗರ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದ ಕೃತಿಯನ್ನು ವಿಶ್ಲೇಷಣೆ ಮಾಡಿದ್ದಾರೆ. ವಸಾಹತುಶಾಹಿ ಚರಿತ್ರೆಕಾರರ ಗುಂಪಿಗೆ ಸೇರಿ ಭಾರತದ ಇತಿಹಾಸದಲ್ಲಿ 'ಸುವರ್ಣ ಯುಗ'ಗಳನ್ನು ಸೃಷ್ಟಿಸಿ ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆ ಎಚ್ಚೆತ್ತುಕೊಳ್ಳಲು ಪರೋಕ್ಷವಾಗಿಯಾದರೂ ಕಾರಣವಾದ ಇತಿಹಾಸಕಾರರು ಮತೀಯ ಭಾವನೆಯನ್ನು ಬಿತ್ತಿದರು ಎನ್ನುತ್ತಾರೆ. ಇಲ್ಲಿ ವಿಜಯನಗರ ಸಾಮ್ರಾಜ್ಯ ಒಂದು ಹಿಂದೂ ಸಾಮ್ರಾಜ್ಯವೆಂಬಂತೆ, ಮಹಮ್ಮದೀಯ ರಾಜರ ಮತ್ತು ಅವರ ಸಂಸ್ಕೃತಿಯ ವಿರುದ್ಧ ಸೆಣಸಿ, ಹಿಂದೂಸಂಸ್ಕೃತಿಯನ್ನು ರಕ್ಷಿಸಲು ಹುಟ್ಟಿಕೊಂಡ ಸಾಮ್ರಾಜ್ಯವೆಂಬಂತೆ ಈ ಕೃತಿಯಲ್ಲಿ ಚಿತ್ರಿಸಿದ್ದಾರೆ ಎಂಬುದನ್ನು ತಿಳಿಸುತ್ತಾರೆ.

ಬಹುಮುಖ್ಯವಾಗಿ 'ಒಡೆಯರ ಚರಿತ್ರೆಗಳು-ಒಂದು ಅವಲೋಕನ' ಎಂಬ ಲೇಖನವು ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದ ದೇಶಿ ಮತ್ತು ವಿದೇಶಿ ಇತಿಹಾಸಕಾರರ ಕೃತಿಗಳ ವಿಶ್ಲೇಷಣೆಯನ್ನು ಮಾಡಿದ್ದಾರೆ. ನಾಲ್ಕು ಬರಹಗಾರರಲ್ಲಿ ಮಾರ್ಕ್ ವಿಲ್ಕ್ಸ್ ಮತ್ತು ಬಿ.ಎಲ್.ರೈಸ್ ಬ್ರಿಟಿಷ್ ಆಡಳಿತಗಾರರು-ಚರಿತ್ರೆಕಾರರಾದರೆ, ಇನ್ನುಳಿದ ಇಬ್ಬರು, ಎಂ.ಶಾಮರಾವ್ ಮತ್ತು ಸಿ.ಹಯವದನರಾವ್ ಭಾರತೀಯರು, ಮೈಸೂರು ಒಡೆಯರ ಸರ್ಕಾರದ ಅಧಿಕಾರಿಗಳು ಮತ್ತು ಚರಿತ್ರೆಕಾರರಾಗಿ ಗುರುತಿಸಿಕೊಂಡಿದ್ದಾರೆ ಎಂಬುದನ್ನು ತಿಳಿಸುತ್ತಾರೆ. ವಸಾಹತುಶಾಹಿಯ ಭಾಗವಾದ ವಿಲ್ಕ್ಸ್ ಮತ್ತು ರೈಸರು ಬ್ರಿಟಿಷ್ ಸಾಮ್ರಾಜ್ಯವಾದಿಗಳು ಮಾಡಿದ ಪ್ರತಿಯೊಂದನ್ನು ಸಮರ್ಥಿಸಿ ಎತ್ತಿ ಹಿಡಿದಿರುವುದು ಅವರ ಕೃತಿಗಳಲ್ಲಿ ಸ್ಪಷ್ಟವಾಗಿದೆ. ಹೈದರಾಲಿ ಮತ್ತು ಟಿಪ್ಪು

ಸುಲ್ತಾನರನ್ನಂತೂ ಮಹಾವಂಚಕರು, ಆಕ್ರಮಣಕಾರಿಗಳೆಂದು ಜರಿಯುತ್ತಾರೆ. ತಮ್ಮ ಸರ್ಕಾರದ ಒಡೆದು ಆಳುವ ನೀತಿಗೆ ಅನುಸಾರವಾಗಿ ಹೈದರ್, ಟಿಪ್ಪುರನ್ನು ಮತಾಂಧರು, ಗುಡಿ, ಗೋಪುರಗಳ ವಿಧ್ವಂಸಕರು, ವೈದಿಕರನ್ನು ಹಿಂಸಿಸಿದ ಕ್ರೂರಿಗಳೆಂದು ಜರಿಯುತ್ತಾರೆ. ಅದರಂತೆ ಶಾಮರಾವ್ ಮತ್ತು ಹಯವದನರಾವ್ ಅವರು ಕೂಡ ಈ ಒಕ್ಕಣೆಯನ್ನು ಒಪ್ಪುತ್ತಾರೆ ಎಂಬುದನ್ನು ವಿವರಿಸುತ್ತಾ ಒಡೆದು ಆಳುವ ನೀತಿಯ ಕಡೆಗೆ ಗಮನ ಹರಿಸಿದ್ದಾರೆ. ಆದರೆ ಒಡೆಯರ ಅರಮನೆಯ ಒಳಗೆ ನಡೆದ ಷಡ್ಯಂತ್ರ, ರಕ್ತಪಾತಗಳ ಬಗೆಗೆ ದೇಶಿ ಚರಿತ್ರೆಕಾರರು ಸೊಲ್ಲು ಎತ್ತುವುದಿಲ್ಲ ಎಂದು ಇಲ್ಲಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತೆರಿಗೆಯ ವಿಷಯದಲ್ಲಿ ಜಂಗಮರನ್ನು ಕೊಲ್ಲಿಸಿದ ಕ್ರೌರ್ಯದ ವಿವರ ತಿಳಿಸಿದ್ದಾರೆ. ಹೀಗೆ ತಮ್ಮ ಪ್ರಭುತ್ವಕೇಂದ್ರಿತವಾಗಿ ಕೃತಿಗಳಲ್ಲಿ ವಿಚಾರಗಳನ್ನು ತಿಳಿಸಿರುವುದನ್ನು ಲೇಖಕರು ಚರ್ಚಿಸಿದ್ದಾರೆ.

ಟಿಪ್ಪುಸುಲ್ತಾನ್: ಇತಿಹಾಸಕಾರರ ಧೋರಣೆಗಳು ಎಂಬ ಲೇಖನದಲ್ಲಿ ಟಿಪ್ಪುವಿನ ಬಗೆಗೆ ಇತಿಹಾಸಕಾರರು ಯಾವ ರೀತಿ ಚಿತ್ರಿಸಿದ್ದಾರೆ ಎಂಬುದನ್ನು ವಿಶ್ಲೇಷಿಸಿದ್ದಾರೆ. ಮೊದಲು ವಿಲ್ಕ್ಸ್ ಟಿಪ್ಪುವಿನ ಬಗೆಗೆ ಟೀಕೆ ಮಾಡಿದ್ದಾನೆ. ತನ್ನ ಕೃತಿಯಾದ 'ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ ಇನ್ ಆನ್ ಆಟೆಮ್ಪ್ಟ್ ಟು ಟ್ರೆಸ್ ದಿ ಹಿಸ್ಟರಿ ಆಫ್ ಮೈಸೂರು' ಎಂಬ ಮೂರು ಸಂಪುಟಗಳಲ್ಲಿ ಟಿಪ್ಪುವನ್ನು ಕಟುವಾಗಿ ಟೀಕಿಸಿದ್ದು ಮುಂದಿನ ಇತಿಹಾಸಕಾರರಿಗೆ ಮಾದರಿಯಾದವು. ಬೀಟ್ಸನ್, ಬುಕಾನನ್, ಬೌರಿಂಗ್, ಪುಲ್ಲರ್‌ಟನ್, ಮೆಕೆಂಜಿ, ಸಿ.ರೋಸ್, ಸ್ಟಿವರ್ಡ್, ಕ್ಯಾಂಪ್‌ಬೆಲ್, ಡಾಡ್‌ವೆಲ್, ಎಚ್.ಜಿ.ವೆಲ್ಸ್, ಮಾರ್ಟಿನ್ಯೂ, ಗ್ಲೀಗ್, ರೈಸ್, ಹೆಂಡರ್‌ಸನ್, ಮೆನ್ರೋ, ಸಿ.ಎ.ಎಚ್.ಫಿಲಿಪ್ಸ್, ರಾಬ್ಬನ್ ಇತರ ಇಂಗ್ಲಿಷ್ ಬರಹಗಾರರು ಟಿಪ್ಪುವನ್ನು ಮತಾಂಧ, ಮೂಲಭೂತವಾದಿ ಮತ್ತು ಕ್ರೂರಿಯೆಂದು ಬಣ್ಣಿಸಿದ್ದಾರೆ. ಹಾಗೆಯೇ ಡಿರೋಮ್, ಜಾನ್ ಮಾಲ್ಕಮ್, ಮೂರ್, ಗೂಡಾಲ್ ಮತ್ತು ಕಿರ್ಕ್‌ಪ್ಯಾಟ್ರಿಕ್ ಇತರರು ಸಾಮಾನ್ಯವಾಗಿ ಟಿಪ್ಪು ಮತ್ತು ಭಾರತದ ವಿರೋಧಿ ಧೋರಣೆ ತಳೆದರೂ, ಅವನನ್ನು ಒಳ್ಳೆಯ, ಸಮರ್ಥ ಆಡಳಿತಗಾರ ನೆಂಬ ನಿಲುವು ವ್ಯಕ್ತಪಡಿಸಿದ್ದಾರೆ ಎಂಬುದನ್ನು ತಿಳಿಸಿದ್ದಾರೆ.

ಹಯವದನರಾವ್, ಜಿ.ಆರ್.ಜೋಯ್ಸರ್ ಮುಂತಾದ ದಕ್ಷಿಣ ಭಾರತದ ಇತಿಹಾಸಕಾರರು ಟಿಪ್ಪುವನ್ನು ಮತಾಂಧ ಎಂದಿದ್ದಾರೆ ಎಂಬುದನ್ನು ವಿವರಿಸಿದ್ದಾರೆ(ಪು.೨೪). ಮತಾಂಧ ಎಂಬುದಕ್ಕೆ ಪ್ರತ್ಯುತ್ತರವಾಗಿ ತನ್ನ ಅಧಿಕಾರದ ವಿರುದ್ಧ ಸಂಚನ್ನು ಮಾಡಿದವರನ್ನು, ತನ್ನ ಶತ್ರುಗಳೊಂದಿಗೆ ಕೈಗೂಡಿಸಿದ ಪಿತೂರಿಕಾರರನ್ನು ಆತ ನಿರ್ದಯವಾಗಿ ಶಿಕ್ಷಿಸಿದ. ಇದರಲ್ಲಿ ಮತಾಂತರವೂ ಸೇರಿತ್ತು. ಇಲ್ಲಿ ಇರುವ ರಾಜಕೀಯ ತುರ್ತುಗಳನ್ನು ಗಮನಿಸಬೇಕಾಗಿರುವುದು ಅವಶ್ಯಕ. ಟಿಪ್ಪು ಬಗೆಗೆ ಹೇಳುತ್ತಾ ಜಾತ್ಯತೀತತೆ, ರಾಷ್ಟ್ರೀಯತೆಯ ಪರಿಕಲ್ಪನೆಯೇ ಅಂದಿನ ಸಂದರ್ಭದಲ್ಲಿರಲಿಲ್ಲ ಎನ್ನುತ್ತಾರೆ. ಹೀಗೆ ಟಿಪ್ಪು ಬಗೆಗೆ ಇರುವ ಇತಿಹಾಸಕಾರರ ಧೋರಣೆಯನ್ನು ವಿವರಿಸಿದ್ದಾರೆ.

ರಾಷ್ಟ್ರೀಯತೆಯ ಭಾವನೆಗಳು ಸಾಹಿತ್ಯ ಕೃತಿಗಳಲ್ಲಿ ಹೇಗೆ ಮೂಡಿವೆ ಎಂಬುದನ್ನು ಚರ್ಚಿಸಿರುತ್ತಾರೆ. ಕರ್ನಾಟಕದ ಏಕೀಕರಣದಲ್ಲಿ ಕನ್ನಡ ನವೋದಯ ಮತ್ತು ಬಿ.ಎಂ.ಶ್ರೀ.

ಎಂಬ ಲೇಖನದಲ್ಲಿ ಕವನಗಳು ಯಾವ ರೀತಿ ಕರ್ನಾಟಕದ ಏಕೀಕರಣವನ್ನು ಬಿಂಬಿಸಿವೆ ಎಂಬುದನ್ನು ಚರ್ಚಿಸುತ್ತಾರೆ. ಋಣವಿಲ್ಲವೆ ಭರತ ಮಾತೆಯೆ ಎಂಬುದು ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕುರಿತದ್ದು. ಮುಮ್ಮಡಿ ಕೃಷ್ಣರಾಜರು ಬ್ರಿಟಿಷರಿಗೆ ಅತೀವ ನಿಷ್ಠೆಯಿಂದಿದ್ದವರು. ರಾಜ್ಯವನ್ನು ಕಸಿದುಕೊಂಡರೂ ಗೊಣಗದೇ ನಮ್ರವಾಗಿಯೇ ವಿಧೇಯರಾಗಿ ಅದನ್ನು ವಾಪಸ್ಸು ಪಡೆಯಲು ಪ್ರಯತ್ನಿಸಿದವರು. ಮುಂದೆ ಅದೇ ದಾರಿದೀಪವಾಯಿತು ಎಂದಿದ್ದಾರೆ.

ಕುವೆಂಪು ಕಾದಂಬರಿಗಳಲ್ಲಿ ಸಮಾಜ ಎಂಬ ಲೇಖನದಲ್ಲಿ ಸಮಾಜದಲ್ಲಿನ ವಿವಿಧ ವರ್ಗಗಳ ಚಿತ್ರಣವನ್ನು ತಿಳಿಸಿದ್ದಾರೆ. ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡಿತಿಯ ಕೃತಿಗಳಲ್ಲಿ ಮೂಡಿಬಂದಿರುವ ಸಮಾಜದ ಚಿತ್ರಣವನ್ನು ಇಲ್ಲಿ ವಿಶ್ಲೇಷಿಸಿದ್ದಾರೆ. ಕೆಳಜಾತಿಗಳ ಸ್ತ್ರೀಯರ ಮತ್ತು ಅಸ್ಪೃಶ್ಯರ ಬದುಕಿನ ಸಂಕೀರ್ಣತೆ ಮತ್ತು ತಣ್ಣನೆಯ ಪ್ರತಿಭಟನೆಗಳು, ಒಂದು ಹೊಸಲೋಕವನ್ನೇ ತೆರೆದುಬಿಡುತ್ತವೆ. ೨೦ನೇ ಶತಮಾನದಲ್ಲಿ ದಲಿತ ಮತ್ತು ಮಹಿಳಾ ಸಂಘಟನೆಗಳು ತೀವ್ರಗೊಂಡವು. ಈ ಕೃತಿಗಳು ಸಂಪ್ರದಾಯ ಮತ್ತು ಆಧುನಿಕತೆಗಳನ್ನು ಮುಖಾಮುಖಿಯಾಗಿಸುತ್ತವೆ. ಪಾಶ್ಚಿಮಾತ್ಯ ಪ್ರಭಾವ, ಮಲೆನಾಡಿನ ಸಮಾಜ, ಅದು ಒಳಗಾದ ಸ್ಥಿತ್ಯಂತರಗಳು, ಮಹಿಳೆಯರು ಮತ್ತು ದಲಿತರ ಬವಣೆಗಳು ಹಾಗೂ ಆಧುನಿಕತೆ ಹೇರಿದ ಒತ್ತಡ ಇವುಗಳನ್ನು ಚರ್ಚೆಗೆ ತೆಗೆದುಕೊಂಡಿರುವುದು ಗಮನಾರ್ಹ. ಈ ಕೃತಿಗಳಲ್ಲಿ ಸ್ತ್ರೀಯರು ಕೇಂದ್ರಬಿಂದುಗಳು. ಸ್ತ್ರೀ ಜಾತಿಯ ದಮನದ ವಿರುದ್ಧ ಪ್ರತಿಭಟಿಸಿ ಎದ್ದುನಿಂತ ಕ್ರಾಂತಿಕಾರಿಗಳು ಅನಿಷ್ಟ ಸಂಪ್ರದಾಯಗಳನ್ನು ಧಿಕ್ಕರಿಸಿ ತಮ್ಮದೇ ರೀತಿಯಲ್ಲಿ ಹೊರಬಂದು ಚರಿತ್ರೆಯನ್ನು ಸೃಷ್ಟಿಸುವ ಪಾತ್ರಗಳಂತೆ ಅವರು ಕಾಣುತ್ತಾರೆ. ಹಿರಿಯರನ್ನು ತಮಗೊಲ್ಲದ ಮದುವೆ ಏರ್ಪಾಡು ಗಳನ್ನು ತಿರಸ್ಕರಿಸಿ ನಡುರಾತ್ರಿಯಲ್ಲಿ ತಾವು ಒಲಿದವರನ್ನು ಸೇರಲು ಹೊರಡುವ ನಾರಿಯರು, ಆಧುನಿಕ ಭಾರತದ ಸ್ತ್ರೀತತ್ವಕ್ಕೆ ಸಂಕೇತವೆನ್ನುತ್ತಾರೆ ಎಂಬುದನ್ನು ತಿಳಿಸಿದ್ದಾರೆ.

ಕುವೆಂಪು ಕಾದಂಬರಿಗಳಲ್ಲಿ ಆಧುನೀಕರಣದ ಪ್ರಕ್ರಿಯೆ ಎಂಬ ಲೇಖನವು ವಸಾಹತು ಶಾಹಿಯ ಮೂಲಕ ಬೆಳೆಯುತ್ತಿರುವ ಬಂಡವಾಳಶಾಹಿಯ ವಿಚಾರಗಳನ್ನು ತಿಳಿಸುತ್ತಾ ಹೋಗುತ್ತದೆ. ಶೂದ್ರರ ಜೀವನಚಿತ್ರಣವನ್ನು ಚಿತ್ರಿಸಿದ್ದಾರೆ. ಅಸ್ಪೃಶ್ಯರ ಮೇಲಿನ ದಬ್ಬಾಳಿಕೆ ಬಗ್ಗೆ ಅರಿವನ್ನು ಮೂಡಿಸಿದ ರೀತಿಯನ್ನು ತರ್ಕಿಸಿದ್ದಾರೆ. ಗೊರೂರರ ಕೃತಿಗಳಲ್ಲಿ ಸ್ವಾತಂತ್ರ್ಯ ಚಳವಳಿಯ ಜಾಡು ಮೂಡಿಬಂದಿದೆ ಎಂಬುದು ಮುಖ್ಯ ಗೊರೂರರ ಕೃತಿಗಳಲ್ಲಿ ಕಾಣುವ ಹರಿಜನೋದ್ಧಾರದ ಪರಿಕಲ್ಪನೆಗಳತ್ತ ಗಮನ ಹರಿಸಿದರೆ 'ಹೇಮಾವತಿ' ಕೃತಿಯಲ್ಲಿ ದುರಾಸೆಯ ಬ್ರಾಹ್ಮಣ ಜಮೀನುದಾರರೂ ಅವರಲ್ಲಿ ಬುಡಿಯುವ ಕಾಳನಂಥ ದಲಿತ ಜೀತದಾಳುಗಳೂ ಕಾಣುತ್ತಾರೆ. ಆದರೆ ಬ್ರಾಹ್ಮಣರೇ ಮೇಲು ಎನ್ನುತ್ತಾರೆ. ಹಾಗೆಯೇ ಅಂತರ್‌ಜಾತಿ ವಿವಾಹ, ವರ್ಣ ಸಂಕರಗಳ ಪ್ರಸ್ತಾಪವೂ ಇಲ್ಲಿದೆ ಎನ್ನುವುದನ್ನು ಚರ್ಚಿಸಿದ್ದಾರೆ. ಬ್ರಾಹ್ಮಣ-ಬ್ರಾಹ್ಮಣೇತರ ಸಮಸ್ಯೆ ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ರಾಜಕೀಯವಾಗಿ ಗಂಭೀರ ಪರಿಣಾಮವನ್ನು ಬೀರಿತು ಎಂಬುದನ್ನು ಗಮನಿಸಬೇಕು. ಮೈಸೂರಿನಲ್ಲಿ ನಡೆದ ವಿಧುರಾಶ್ವತ್ಥ, ಈಸೂರು ಚಳವಳಿ ಇವೇ ಮೊದಲಾದವುಗಳ ಒಳಸುಳಿಗಳು ವ್ಯಕ್ತವಾಗುತ್ತವೆ.

ಒಟ್ಟಾರೆಯಾಗಿ ಈ ಕೃತಿಯು ವಸಾಹತುಕಾಲೀನ ಕರ್ನಾಟಕದ ಚಾರಿತ್ರಿಕ ಒಳನೋಟವನ್ನು ನೀಡುತ್ತದೆ ಎಂಬುದರ ಅಂಶಗಳ ವಿಶ್ಲೇಷಣೆಯನ್ನು ಗಮನಿಸಲಾಗಿದೆ.

ಷೇಕ್ ಅಲಿ ಬಿ. ಅವರ ಮತ್ತೊಂದು ಕೃತಿ **ಟಿಪ್ಪು ಸುಲ್ತಾನ್ ಎ ಸ್ಟಡಿ ಇನ್ ಡಿಪ್ಲೋಮಸಿ ಅಂಡ್ ಕಾನ್‌ಪಾರ್‌ನೆಟೇಷನ್**(೨೦೦೬)[೧೩೧] ಮುಖ್ಯವಾದುದು. ಈ ಕೃತಿಯಲ್ಲಿ ಮೊದಲು ಟಿಪ್ಪು ಸುಲ್ತಾನ್ ಮತ್ತು ಬ್ರಿಟಿಷರ ನಡುವಿನ ಒಪ್ಪಂದದ ವಿಚಾರಗಳನ್ನು ತಿಳಿಸಿದ್ದಾರೆ. ಅನಂತರ ಮರಾಠ ಮತ್ತು ನಿಜಾಮರೊಂದಿಗಿನ ಒಪ್ಪಂದಗಳು, ಫ್ರಾನ್ಸ್, ಟರ್ಕಿ, ಇರಾನ್ ಮತ್ತು ಆಫ್ಘಾನಿಸ್ಥಾನಗಳ ಜೊತೆಗೆ ರಾಜಕೀಯ ಸಂಬಂಧವನ್ನು ಬೆಳೆಸಲು ಪ್ರಯತ್ನಿಸಿದನು ಎಂಬುದು ಪ್ರಮುಖವಾದುದು. ವ್ಯಾಪಾರ ಸಂಪರ್ಕಗಳ ಮೂಲಕವು ರಾಜಕೀಯ ಸಂಬಂಧವನ್ನು ಬೆಳೆಸಲು ಪ್ರಯತ್ನಿಸಿದನು ಎಂಬುದು ಮುಖ್ಯ. ಬ್ರಿಟಿಷರನ್ನು ಭಾರತದಿಂದ ಓಡಿಸಬೇಕೆಂಬ ನಿಲುವನ್ನು ಹೊಂದಿ, ಸಾಮ್ರಾಜ್ಯಶಾಹಿ ಶಕ್ತಿಯನ್ನು ವಿರೋಧಿಸುವ ನೆಲೆಗಳನ್ನು ಕಟ್ಟಿದವನು ಎಂದು ಚಿತ್ರಿಸುತ್ತಾ ಅಪ್ರತಿಮ ನಾಯಕ ಎಂದಿದ್ದಾರೆ.

ಗೌರಿ ಸುಂದರ್ ಅವರ ಸಂಪಾದಕತ್ವದಲ್ಲಿ **ಟಿಪ್ಪು ಸುಲ್ತಾನ್ ಕನ್ನಡ ದ್ರೋಹಿಯೇ? (ವಿಚಾರಾತ್ಮಕ ಲೇಖನಗಳ ಸಂಪುಟ)(೨೦೦೬)**[೧೩೨] ಎಂಬ ಕೃತಿಯು ಹೊರಬಂದಿದೆ. ಈ ಕೃತಿಯಲ್ಲಿ ಲೇಖನಗಳು ಟಿಪ್ಪುವನ್ನು ಕನ್ನಡದ್ರೋಹಿ ಎಂದು ಹೇಳಿಕೆ ನೀಡುವ ಮೂಲಕ ಶಿಕ್ಷಣ ಸಚಿವ ಡಿ.ಎಚ್.ಶಂಕರಮೂರ್ತಿ ವಿವಾದ ಎಬ್ಬಿಸಿದ್ದಕ್ಕೆ ಉತ್ತರವಾಗಿವೆ. ಲೇಖಕರು ತಮ್ಮ ತಮ್ಮ ಅಭಿಪ್ರಾಯವನ್ನು ಈ ಲೇಖನಗಳಲ್ಲಿ ಕ್ರೋಡೀಕರಿಸಿದ್ದಾರೆ. ಮೊದಲ ಕೃತಿಗಳಲ್ಲಿ ಟಿಪ್ಪು ಮತಾಂಧ, ಕ್ರೂರಿ, ಹಿಂದೂದ್ರೋಹಿ ಎಂಬುದರ ವಿಚಾರಗಳು ಮಿಳಿತವಾಗಿದ್ದು, ಇದಕ್ಕೆ ಬದಲಾಗಿ ಕನ್ನಡ ದ್ರೋಹಿ ಎಂದು ಹೇಳಿರುವುದನ್ನು ಸಂಪಾದಕರು ವಿವರಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಈ ಲೇಖನಗಳೆಲ್ಲವೂ ಲೇಖಕರ ಅಭಿಪ್ರಾಯದಂತೆ ವ್ಯಕ್ತವಾಗಿದ್ದು, ಆಡಳಿತದ ಅನುಕೂಲಕ್ಕಾಗಿ ಭಾಷೆಗಳನ್ನು ಬಳಸಲಾಗಿರುತ್ತದೆಯೇ ಹೊರತು ಟಿಪ್ಪು ಕನ್ನಡದ್ರೋಹಿ ಅಲ್ಲ ಎಂದು ವಿವರಿಸಿದ್ದಾರೆ. ಮೊದಲು ಮೈಸೂರು ಒಡೆಯರ ಚರಿತ್ರೆಯ ಕೃತಿಗಳನ್ನು ರಚಿಸಿದ ಸಿ.ಹಯವದನರಾವ್, ಎಂ.ಶಾಮರಾವ್ ಅವರು ಟಿಪ್ಪುವನ್ನು ಮತಾಂಧ, ಕ್ರೂರಿ, ಹಿಂದೂ ದ್ರೋಹಿ ಎಂಬ ಹೇಳಿಕೆ ನೀಡಿದ್ದು, ಈ ಹೇಳಿಕೆಗಳು ಇಂದಿಗೂ ಒಂದಲ್ಲ ಒಂದು ರೀತಿಯಲ್ಲಿ ವಿವಾದಕ್ಕೆ ಎಡೆ ಮಾಡಿಕೊಟ್ಟಿವೆ ಎಂಬುದು ಈ ಕೃತಿಯ ಮೂಲಕ ತಿಳಿಯಬಹುದು. ಅಲ್ಲಿನ ರಾಜಕೀಯ ತುರ್ತುಗಳನ್ನು ಗಮನಿಸದೇ ಈ ರೀತಿ ಹೇಳಿಕೆಗಳು ವಿವಾದಕ್ಕೆ ಎಡೆ ಮಾಡಿಕೊಟ್ಟಿವೆ ಎಂಬುದು ಮುಖ್ಯ.

ಪಿ.ವಿ.ನಂಜರಾಜ ಅರಸು ಅವರು ಬರೆದಿರುವ **ಮೈಸೂರು: ನೂರನ್ನೂರು ವರ್ಷಗಳ ಹಿಂದೆ(೨೦೦೭)**[೧೩೩] ಎನ್ನುವ ಕೃತಿಯನ್ನು ಇಲ್ಲಿ ಪ್ರಮುಖವಾಗಿ ಚರ್ಚಿಸಲಾಗಿದೆ. ಈ ಕೃತಿಯ ಶೀರ್ಷಿಕೆಯನ್ನು ನೋಡಿದಾಗ ೧೮೦೦ ರಿಂದ ಹಿಡಿದು ಕೊನೆಯ ಒಡೆಯರಾದ ಜಯಚಾಮ ರಾಜೇಂದ್ರ ಒಡೆಯರವರೆಗೆ ಮೈಸೂರು ನಗರದ ಚರಿತ್ರೆಯನ್ನು ನಿರೂಪಿಸುತ್ತದೆ. ವಸಾಹತುಸಾಹಿ ಕಾಲಘಟ್ಟದಿಂದ ಪ್ರಾರಂಭವಾಗಿ ಅಭಿವೃದ್ಧಿ ನೆಲೆಯಲ್ಲಿ ಮುಂದುವರಿದು ಆಧುನಿಕ ಮೈಸೂರು

ಆಗಿ ಗುರುತಿಸಿಕೊಂಡು, ಪ್ರಜಾಪ್ರಭುತ್ವದಲ್ಲಿ ಲೀನವಾಗುವವರೆಗೂ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಮೊದಲನೆಯದಾಗಿ ಬರಹಗಾರರು ಮೈಸೂರನ್ನು ಯಾವ ಯಾವ ರಾಜವಂಶ ಯಾವ ಕಾಲಾವಧಿಯಲ್ಲಿ ತನ್ನ ಹಿಡಿತದಲ್ಲಿಟ್ಟುಕೊಂಡು, ಕಾಲಾವಧಿಗೆ ಅನುಗುಣವಾಗಿ ಬೇರೆಬೇರೆ ಪ್ರಭುತ್ವವನ್ನು ಸ್ಥಾಪಿಸುತ್ತಾ ರಾಜ, ರಾಜವಂಶವು ಬದಲಾಗುತ್ತಿತ್ತು ಎಂಬುದರ ಬಗ್ಗೆ ಎಪಿಗ್ರಾಫಿಯಾ ಕರ್ನಾಟಿಕದಲ್ಲಿ ಇರುವ ಉಲ್ಲೇಖವನ್ನು ವಿವರಿಸುತ್ತಾರೆ. ಹೀಗೆ ಮೈಸೂರು ಒಡೆಯರ ಒಂದು ಸಂಕ್ಷಿಪ್ತವಾದ ವಿವರಗಳನ್ನು ನೀಡಿದ್ದಾರೆ.

ಮೈಸೂರು ಅರಮನೆಯ ಒಳಭಾಗದಲ್ಲಿರುವ ದಿವಾನಖಾನೆಗಳು ಬೇರೆಬೇರೆ ಇಪ್ಪತ್ತನಾಲ್ಕು ತೊಟ್ಟಿಗಳ ಹೆಸರುಗಳು, ವಿವರಗಳು, ರತ್ನಖಚಿತವಾದ ಸಿಂಹಾಸನ, ರಾಜಮುದ್ರೆ ಉಂಗುರ, ಅರಮನೆಯ ಸೊಬಗನ್ನು ಹೆಚ್ಚಿಸುವ ವಸ್ತುಗಳ ತಯಾರಿಕೆಯಲ್ಲಿ ಬೆಂಗಳೂರು ಮತ್ತು ಮೈಸೂರು ಬಂದೀಖಾನೆಗಳ ಖೈದಿಗಳನ್ನು ಬಳಸಿಕೊಂಡಿರುವುದನ್ನು ತಿಳಿಸಿದ್ದಾರೆ. ಶಸ್ತ್ರಾಗಾರದಲ್ಲಿ ಆಯುಧಗಳು, ಸಂಗೀತ ಕೊಠಡಿಯಲ್ಲಿನ ಸಂಗೀತ ವೈಖರಿ, ಚಿತ್ರಣದ ಮಾಹಿತಿಗಳನ್ನು ತಿಳಿಸುತ್ತಾರೆ(ಪು.೬೫). ಮೈಸೂರು ನಗರ ಮತ್ತು ಹೊರವಲಯದ ಅರಮನೆಗಳು, ಚಾಮುಂಡಿ ಬೆಟ್ಟದ ದೇವಾಲಯಗಳು, ಬೆಟ್ಟದ ಶಾಸನೋಕ್ತ ಹೆಸರು ಮಹಾಬಲಾಚಲ. ಬೆಟ್ಟದ ಮೇಲಿನ ನಂದಿ, ಅರಮನೆ, ಮೆಟ್ಟಿಲುಗಳು, ಚಾಮುಂಡೇಶ್ವರಿ ದೇವಾಲಯದ ಪೂಜಾವಿವರಗಳು ಎಲ್ಲವೂ ಇಲ್ಲಿ ದಾಖಲಾಗಿವೆ.

ಸ್ಥಳದ ವಿವರಣೆ ಕೊಡುವಾಗ ಯಾರು, ಯಾರ ಹೆಸರಿನಲ್ಲಿ ಕಟ್ಟಡವನ್ನು ಕಟ್ಟಲಾಗಿದೆ. ಅವರ ಸಾಧನೆಗಳು ಏನು ಎಂಬುದರ ವಿವರಣೆ ಕೊಡುತ್ತಾರೆ. ರಾಜಕೀಯದ ದಾಹಕ್ಕೆ ರಕ್ತಸಂಬಂಧಿಗಳು, ದಳವಾಯಿಗಳು, ಹೈದರಾಲಿ, ಟಿಪ್ಪು ಕೆಂಗಣ್ಣು ಇವರ ಮೇಲೆಯೇ ಇತ್ತು. ಆದರೆ ರಾಜಮಾತೆ ಧೃತಿಗೆಡದೆ ಬ್ರಿಟಿಷರೊಂದಿಗೆ ಸಂಧಾನ ನಡೆಸಿ, ಟಿಪ್ಪು ಮರಣದ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಪಟ್ಟಾಭಿಷೇಕ ಮಾಡುವ ಮೂಲಕ ಮೈಸೂರು ಒಡೆಯರ ಮನೆತನಕ್ಕೆ ಅಧಿಕಾರ ಹಸ್ತಾಂತರದ ಸಂಧಿಪತ್ರಕ್ಕೆ ಸಹಿ ಹಾಕಿದರು(ಪು.೧೭೩). ಹೀಗೆ ಈ ಕೃತಿಯ ಲೇಖಕರು ಅವರ ಹೆಸರಿನಲ್ಲಿರುವ ಬೃಂದಾವನವನ್ನು ಪರಿಚಯ ಮಾಡಿಕೊಡುವಾಗ ಅವರ ಸಾಧನೆಗಳನ್ನು ವಿವರಿಸುತ್ತಾ ಹೋಗುತ್ತಾರೆ.

ಪೂಜಾಮಂದಿರಗಳು, ಧರ್ಮದ ವಿಚಾರಗಳು, ಶಿಕ್ಷಣಸಂಸ್ಥೆಗಳು, ಆಸ್ಪತ್ರೆಗಳು, ರಸ್ತೆಗಳು, ಸುತ್ತಮುತ್ತಲಿನ ಅಣೆಕಟ್ಟುಗಳು, ವಿದ್ಯುಚ್ಛಕ್ತಿ, ಕೈಗಾರಿಕೆಗಳು, ದರ್ಗಗಳು, ಚರ್ಚ್‌ಗಳು ಹಬ್ಬ ಹರಿದಿನಗಳು, ನವರಾತ್ರಿ ಉತ್ಸವದ ಆಚರಣೆಗಳು, ನವರಾತ್ರಿ ಉತ್ಸವದ ಪರಂಪರೆ ಬೆಳೆದು ಬಂದಿರುವ ರೀತಿ ಈ ಎಲ್ಲದರ ಸೂಕ್ಷ್ಮ ವಿವರಗಳನ್ನು ಹಿಂದಿನ ಕೃತಿ ದಾಖಲೆಗಳಿಂದ ಸಂಗ್ರಹಿಸಿದ್ದಾರೆ. ಹೀಗೆ ಹತ್ತು ಹಲವು ವಿಚಾರಗಳತ್ತ ಗಮನ ಹರಿಸಿದ್ದಾರೆ. ಇಲ್ಲಿ ಲೇಖಕರು ಈ ಕೃತಿಯ ವಿವರಗಳನ್ನು ಸ್ವತಃ ತಾವೇ ಪರಿಶೀಲಿಸಿ ಹಲವರನ್ನು ಪ್ರಶ್ನಿಸಿ ಕ್ರೋಡೀಕರಿಸಿದ್ದಾರೆ. ಅವರು ಸ್ವತಃ ಅರಸುವರ್ಗಕ್ಕೆ ಸೇರಿದವರಾಗಿದ್ದರಿಂದ ಅರಮನೆಗೆ ಸಹಜವಾಗಿಯೇ ಮುಕ್ತ ಅವಕಾಶವಿರುವುದನ್ನು ಸಮರ್ಥವಾಗಿ ಬಳಸಿಕೊಂಡಿದ್ದಾರೆ ಮತ್ತು ಅರಮನೆಯ ತೀರ ಹತ್ತಿರದಿಂದ

ಬಲ್ಲ ಹಿರಿಯರಿಂದ ಮಾಹಿತಿ ಸಂಗ್ರಹಿಸಿದ್ದಾರೆ. ಯಾವುದೇ ಹೊಸ ವಿಚಾರಗಳತ್ತ ಮುಖ ಮಾಡದೇ ಇರುವ ವಿಚಾರಗಳನ್ನೇ ತಿಳಿಸಿದ್ದಾರೆ. ಒಟ್ಟಿನಲ್ಲಿ ಮೈಸೂರು ನಗರ ಪ್ರದೇಶದ ಕ್ಷೇತ್ರಕಾರ್ಯಕ್ಕೆ ಈ ಕೃತಿಯು ಒಂದು ಮಾದರಿಯಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ವಸಾಹತು ಕಾಲಘಟ್ಟದ ಕೊನೆಯ ಅವಧಿ ಸ್ವಾತಂತ್ರ್ಯ ಚಳವಳಿ ಆಗಿದೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಅನೇಕ ಕೃತಿಗಳು ಹೊರಬಂದಿವೆ. ಅಶ್ವತ್ಥನಾರಾಯಣ(ಮೈಸೂರು ವಿಶ್ವವಿದ್ಯಾನಿಲಯ) ಅವರು ಬರೆದಿರುವ **ಮೈಸೂರು ಸಂಸ್ಥಾನದಲ್ಲಿನ ರಾಷ್ಟ್ರೀಯ ಚಳುವಳಿಯ ಒಳನೋಟಗಳು ೧೮೭೦-೧೯೪೦(೨೦೦೮)**[೧೩೪] ಎಂಬ ಕೃತಿಯು ಇಲ್ಲಿ ಪ್ರಮುಖವಾದುದು. ಮೈಸೂರು ಒಡೆಯರ ಚರಿತ್ರೆಯನ್ನು ಗುರುತಿಸುವ ಹೋರಾಟಗಳ ಹಿನ್ನೆಲೆಯಲ್ಲಿ ಈ ಕೃತಿ ಮೂಡಿಬಂದಿದೆ. ಮೈಸೂರು ಒಡೆಯರ ಚರಿತ್ರೆಯನ್ನು ಪ್ರಾಂತೀಯ-ಮತೀಯ-ಪಂಥೀಯ-ಭಾಷೆಗಳ ನೆಲೆಗಳಿಂದ ನಿರೂಪಿಸುವ ಪ್ರಯತ್ನದಲ್ಲಿ ಸ್ಪಷ್ಟತೆ ಹೇಗೆ ಕಾಣುತ್ತದೆ ಎಂಬುದು ಈ ಕೃತಿಯಲ್ಲಿ ಗುರುತಿಸಬಹುದು. ಪ್ರಸ್ತುತ ಈ ಕೃತಿಯ ಅಧ್ಯಯನವು ಮೈಸೂರು ಸಂಸ್ಥಾನದ ರಾಷ್ಟ್ರೀಯ ಹೋರಾಟದ ಹಿನ್ನೆಲೆಯಲ್ಲಿ ಇರುವ ಪ್ರದೇಶ ಮತ್ತು ರಾಷ್ಟ್ರೀಯತೆಯ ಐಡೆಂಟಿಟಿಗಳ ವಿಷಯಗಳನ್ನು ಹೊಂದಿದೆ. ಅಲ್ಲದೇ 'ಪ್ರಾದೇಶಿಕತೆ, ಜಾತಿ ಮತ್ತು ಭಾಷೆ' ನೆಲೆಗಳ ಅಸ್ಮಿತೆಯನ್ನು ಮತ್ತು ಅದರ ಬಹುಮುಖಿ ಆಯಾಮಗಳನ್ನು ಶೋಧಿಸಿದ್ದಾರೆ. ಈ ಐಡೆಂಟಿಟಿಗಳ ವ್ಯಾಪ್ತಿಯನ್ನು ೧೮೭೦ ರಿಂದ ಪ್ರಾರಂಭಿಸಿ, ೧೮೪೦ರವರೆಗೆ ಮುಕ್ತಾಯಗೊಳಿಸಿದ್ದಾರೆ. ಒಡೆಯರು ಮರಳಿ ಅಧಿಕಾರವನ್ನು ಪಡೆಯಲು ಪ್ರಯತ್ನಿಸಿದರು. ಇದಕ್ಕೆ ಬೆಂಬಲವಾಗಿ ಬ್ರಾಹ್ಮಣ ಸಮುದಾಯಗಳು ಒಡೆಯರ ನೆರವಿಗೆ ನಿಂತರು. ಏಕೆಂದರೆ ಹಿಂದೆ ತಾವು ಕಳೆದುಕೊಂಡ ಯಜಮಾನಿಕೆಯನ್ನು ಪುನಃ ಆಡಳಿತ ವ್ಯವಸ್ಥೆಯ ಮೇಲೆ ಸ್ಥಾಪಿಸಿಕೊಳ್ಳುವ ನಿರೀಕ್ಷೆಯಿತ್ತು. ಇಲ್ಲಿಂದ ಈ ಕೃತಿಯನ್ನು ಆರಂಭಿಸಿದ್ದಾರೆ. ಅಲ್ಪಸಂಖ್ಯಾತವಾಗಿದ್ದರೂ ಬಲಾಢ್ಯವಾಗಿದ್ದ ಬ್ರಾಹ್ಮಣ ಸಮುದಾಯಗಳು ಮನಗೊಂಡು ರಾಷ್ಟ್ರೀಯ ಐಡೆಂಟಿಟಿಯತ್ತ ಸರಿದವು. ಈ ಅರಿವಿನತ್ತ ಸಂಸ್ಥಾನದಲ್ಲಿ ಬಹುಸಂಖ್ಯಾತವಾಗಿದ್ದರೂ ಸಾಮಾಜಿಕ ಅಧೀನವಾಗಿದ್ದ ಬ್ರಾಹ್ಮಣೇತರರು ತಮ್ಮ ಜಾತಿಗೆ ಐಡೆಂಟಿಟಿಯನ್ನು ತೊರೆದು ರಾಷ್ಟ್ರೀಯ ಐಡೆಂಟಿಟಿಯನ್ನು ಮತ್ತು ರಾಷ್ಟ್ರೀಯ ಆಂದೋಲನದ ನಾಯಕತ್ವವನ್ನು ಹೊತ್ತಿದ್ದ ಕಾಂಗ್ರೆಸ್ ಪಕ್ಷವನ್ನು ಒಪ್ಪಿಕೊಂಡಿದ್ದು, ಜವಾಬ್ದಾರಿ ಸರ್ಕಾರ ಸ್ಥಾಪನೆಗಾಗಿ ಬಲವಾದ ರಾಷ್ಟ್ರೀಯ ಆಂದೋಲನವನ್ನು ಕಟ್ಟಿದ್ದು ೧೯೪೦ರ ವೇಳೆಗೆ. ಆದ್ದರಿಂದ ಈ ಕೃತಿಯ ಮಿತಿಯನ್ನು ೧೯೪೦ರವರೆಗೆ ಸೀಮಿತಗೊಳಿಸಲಾಗಿದೆ.

ಮೊದಲು ಪ್ರಾದೇಶಿಕ ಐಡೆಂಟಿಟಿಯಲ್ಲಿ ಮೆಟ್ರೋಪಾಲಿಟನ್ ನೆಲೆಯ ಬ್ರಾಹ್ಮಣ(ಮದ್ರಾಸ್ ಬ್ರಾಹ್ಮಣರು) ಸಮುದಾಯಗಳು ಮತ್ತು ಸ್ಥಳೀಯ ಬ್ರಾಹ್ಮಣರ(ಮೈಸೂರು ಬ್ರಾಹ್ಮಣರು) ನಡುವಿನ ಹೋರಾಟವನ್ನು ವಿವರಿಸಿದ್ದಾರೆ. ಮೊದಲು ಮೈಸೂರು ದಿವಾನರ ಪದವಿ ಮದ್ರಾಸ್ ಬ್ರಾಹ್ಮಣರ ಪಾಲಾಗಿತ್ತು. ಇದನ್ನು ಮೈಸೂರಿನ ಬ್ರಾಹ್ಮಣರು ಪ್ರಶ್ನಿಸಿದರು. ಮೈಸೂರಿನ ಬ್ರಾಹ್ಮಣರು ಶೈಕ್ಷಣಿಕವಾಗಿ ಅರ್ಹತೆ ಹೊಂದಿದ್ದರೂ ಪರಿಗಣಿಸುತ್ತಿರಲಿಲ್ಲ. ಸ್ಥಳೀಯರಿಗೆ ಅಧಿಕಾರ ಕೊಡಲು, ಸ್ಥಳೀಯರಾರು ಎಂಬುದನ್ನು ಪತ್ತೆ ಹಚ್ಚಲು ಕನ್ನಡ ಭಾಷೆ ಮತ್ತು ಸಂಸ್ಥಾನದ ಇತಿಹಾಸವನ್ನು

ಮಾನದಂಡವನ್ನಾಗಿಸಿದರು(ಪು.೫೨). ಈ ಪರೀಕ್ಷೆ ಯಶಸ್ವಿಯಾಗಿ ಮುಂದೆ ಮೈಸೂರಿನವರಿಗಾಗಿಯೇ ಮೀಸಲಾಯಿತು. ಹೀಗೆ ಪ್ರಾದೇಶಿಕ ಐಡೆಂಟಿಟಿ ಮತ್ತು ಭಾಷೆಯ ಐಡೆಂಟಿಟಿಯನ್ನು ಹಿಡಿದು ಹೋರಾಟಕ್ಕೆ ತೊಡಗಿದ ಸ್ಥಳೀಯ ಗುಂಪು ಮದ್ರಾಸ್ ಗುಂಪಿನ ಮುಂದೆ ಮಂಕಾಗಿ ಕಂಡರೂ ಅದು ಸಂಸ್ಥಾನದಲ್ಲಿ ಹುಟ್ಟು ಹಾಕಿದ ಸಾಮಾಜಿಕ ರಾಜಕೀಯ ಸಂಘರ್ಷದ ಪರಿಣಾಮಗಳು ಹಾಗೆಯೇ ಮತ್ತೊಂದು ಐಡೆಂಟಿಟಿಗೆ ಕಾರಣವಾಯಿತು ಎಂಬುದನ್ನು ವಿಶ್ಲೇಷಿಸಿದ್ದಾರೆ.

ಅಧೀನ ಸಾಮಾಜಿಕ ಗುಂಪುಗಳು ಜಾತಿಯ ಒಂದು ಐಡೆಂಟಿಟಿಯನ್ನಾಗಿ ಬಳಸಿಕೊಂಡಿತು. ಇದಕ್ಕೆ ಪೂರಕವಾಗಿ ಬ್ರಾಹ್ಮಣೇತರ ಚಳವಳಿ ನಡೆಯಿತು. ಈ ಹಿಂದುಳಿದ ವರ್ಗಗಳು ಮೀಸಲಾತಿಯನ್ನು ಕೇಳಿದರು. ಇದಕ್ಕೆ ಸಹಾಯಕವಾಗಿ ಮಿಲ್ಲರ್ ಕಮಿಟಿ ಶಿಫಾರಸ್ಸುಗಳನ್ನು ಜಾರಿಗೆ ತಂದಿತು. ಇಲ್ಲಿ ಸಾಮಾಜಿಕವಾಗಿ ಸ್ಥಾನಮಾನಗಳನ್ನು ಪಡೆಯಲು ಅಧೀನ ಪಂಗಡದವರು ಹೋರಾಡಿದರು ಎಂಬುದನ್ನು ಚರ್ಚಿಸಿದ್ದಾರೆ. ಅಲ್ಪಸಂಖ್ಯಾತ ಬಲಾಢ್ಯರು ತಮ್ಮ ಸ್ಥಾನಮಾನಗಳನ್ನು ಉಳಿಸಿಕೊಳ್ಳಲು ಹೆಣಗಾಡತೊಡಗಿದರು. ಬ್ರಾಹ್ಮಣೇತರ ಚಳವಳಿಯ ಭಾಗವಾಗಲಾರದೇ ಇರುವ ಅಸ್ಪೃಶ್ಯರು, ಅಲೆಮಾರಿ ಮುಂತಾದ ಸಮುದಾಯಗಳು ದಮನಕ್ಕೆ ಒಳಗಾದ ಗಂಪುಗಳಾದವು ಎಂಬುದನ್ನು ವಿವರಿಸಲಾಗಿದೆ. ಆದರೆ ೧೯೩೦ರ ನಂತರ ಈ ಎಲ್ಲಾ ಗುಂಪುಗಳು ರಾಷ್ಟ್ರೀಯ ಹೋರಾಟದಲ್ಲಿ ಗುರುತಿಸಿಕೊಂಡಿದ್ದು ಚರಿತ್ರೆಯ ವಿಶೇಷ. ಈ ರೀತಿಯಲ್ಲಿ ಅಸ್ಮಿತೆಯ ಪ್ರಶ್ನೆಗಳನ್ನು ವಿಶ್ಲೇಷಿಸಿದ್ದಾರೆ.

೧೯೩೨ರಿಂದ ೧೯೩೭ರವರೆಗೆ ಬೇರೆ ರೀತಿಯ ಆಯಾಮಗಳನ್ನು ಚರ್ಚಿಸಿರುವುದನ್ನು ನೋಡಬಹುದು. ಹಿಂದುಳಿದ ವರ್ಗಗಳಲ್ಲಿಯೇ ತಮ್ಮ ತಮ್ಮ ವರ್ಗಗಳಲ್ಲಿ ಬಿರುಕುಗಳು ಮೂಡಿ, ಇಡೀ ಹೋರಾಟವನ್ನು ಒಡೆಯುವಂತಾದವು. ಈ ಕಾಲಾವಧಿಯಲ್ಲಿ ಮಿರ್ಜಾ ಇಸ್ಮಾಯಿಲ್ ಅವರ ಮೇಲೆ ಬ್ರಾಹ್ಮಣೇತರ ವರ್ಗಗಳು ತಮಗೆ ಅನುಕೂಲ ಕಾರ್ಯಗಳನ್ನು ಕೈಗೊಳ್ಳುತ್ತಾರೆ ಎಂಬ ನಂಬಿಕೆಯನ್ನು ಇಟ್ಟಿದ್ದರು. ಆದರೆ ಇವರು ಮಿಲ್ಲರ್ ಕಮಿಟಿಯ ವರದಿಯನ್ನು ಪರಿಷ್ಕರಿಸಿದರು. ಇತರ ಜಾತಿಗಳಿಗೆ ಹೆಚ್ಚಿನ ಮೀಸಲಾತಿಯನ್ನು ನೀಡಿದರು. ಈ ಕೃತಿಯಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಸ್ಲಿಂ ಸಮುದಾಯಗಳು ಎದುರಿಸಿದ ಅಸ್ಮಿತೆಯ ಪ್ರಶ್ನೆಗಳು. ಈ ಮುಸ್ಲಿಂ ವರ್ಗಗಳೇ ಹೆಚ್ಚಿನ ಸೌಲಭ್ಯ ಪಡೆದವು ಎಂಬ ನಂಬಿಕೆ ಜನರಲ್ಲಿ ಮೂಡಿತು. ಇದಕ್ಕೆ ವ್ಯತಿರಿಕ್ತವಾಗಿ ಗಣಪತಿ ಗಲಾಟೆಯು ನಡೆಯಿತು. ವರ್ಗ ಸಂಘರ್ಷಗಳು ಹೆಚ್ಚಾಗುತ್ತಿದ್ದರ ಹಿನ್ನೆಲೆಯಲ್ಲಿ ಹೋರಾಟಗಳು ತೀವ್ರ ಸ್ವರೂಪ ಪಡೆಯುವುದನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. ರಾಷ್ಟ್ರೀಯತೆಯ ಇನ್ನೊಂದು ಮುಖವೇ ಪ್ರಜಾಸತ್ತಾತ್ಮಕ ಗುಣ. ಈ ಅವಧಿಯಲ್ಲಿ ಜವಾಬ್ದಾರಿ ಸರ್ಕಾರದ ರಚನೆಗಾಗಿ ಹೋರಾಟ ನಡೆಯಿತು. ಮೈಸೂರು ಕಾಂಗ್ರೆಸ್ ಧ್ವಜ ಸತ್ಯಾಗ್ರಹವಾದ ಶಿವಪುರ ಮತ್ತು ವಿಧುರಾಶ್ವತ್ಥ ಹೋರಾಟಗಳು ನಡೆದವು. ಇದರಲ್ಲಿ ಸರ್ಕಾರದ ದಮನಕಾರಿ ನೀತಿಯನ್ನು ಗಾಂಧೀಜಿ ಅವರು ವಿರೋಧಿಸಿದರು. ಆಗ ಮಿರ್ಜಾ ಮತ್ತು ಗಾಂಧೀಜಿ ಅವರಲ್ಲಿ ಭಿನ್ನಾಭಿಪ್ರಾಯ ಉಂಟಾಯಿತು. ಹೀಗೆ ರಾಷ್ಟ್ರೀಯ ಹೋರಾಟ ತೀವ್ರತೆಯನ್ನು ಪಡೆದುಕೊಂಡಿದ್ದರ ಹಿನ್ನೆಲೆಯಲ್ಲಿ ಮಿರ್ಜಾ ಅವರು ಎದುರಿಸಿದ

ಆಡಳಿತಾತ್ಮಕ ಆತಂಕಗಳನ್ನು ವಿಶ್ಲೇಷಿಸಿದ್ದಾರೆ. ೧೯೪೧ರ ವೇಳೆಗೆ ಮಿರ್ಜಾ ಅವರು ರಾಜೀನಾಮೆ ನೀಡಿದರು. ಪ್ರಜಾಸತ್ತಾತ್ಮಕತೆಗೆ ಪ್ರೋತ್ಸಾಹ ನೀಡುವ ಜಯಚಾಮರಾಜ ಒಡೆಯರು ಅಧಿಕಾರಕ್ಕೆ ಬಂದರು. ಈ ಅವಧಿಯಲ್ಲಿ ಎಲ್ಲ ವರ್ಗಗಳು ರಾಷ್ಟ್ರೀಯ ಐಡೆಂಟಿಟಿಯಲ್ಲಿ ಕ್ವಿಟ್ ಇಂಡಿಯಾ ಚಳವಳಿ ಆರಂಭವಾಗುವ ಮುನ್ನ ಕ್ರೋಡೀಕರಣಗೊಂಡವು ಎಂಬುದನ್ನು ವಿಶ್ಲೇಷಿಸಿದ್ದಾರೆ.

ಈ ಎಲ್ಲಾ ಚಳವಳಿಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ಹುಟ್ಟಿರುವುದನ್ನು ನೋಡಬಹುದು. ಭಾರತೀಯ ವಿವಿಧ ಸಮುದಾಯಗಳು ಮತ್ತು ವರ್ಗಗಳು ವಸಾಹತುಶಾಹಿಯ ನಿಜವಾದ ಬಣ್ಣವನ್ನು ಅರಿತುಕೊಳ್ಳುವವರೆಗೆ ಆಂತರಿಕ ಕಾದಾಟಗಳು ನಡೆದವು. ಒಮ್ಮೆ ಈ ಕಾದಾಟಗಳು ನಿರರ್ಥಕವೆಂದು ಅನಿಸಿದೊಡನೆ ತಮ್ಮ ಕಾದಾಟಗಳನ್ನು ನಿಲ್ಲಿಸಿ ಎಲ್ಲಾ ಸಮುದಾಯಗಳು, ವರ್ಗಗಳು ರಾಷ್ಟ್ರೀಯ ಆಂದೋಲನಕ್ಕೆ ದುಮುಕಿದವು ಎನ್ನುವುದನ್ನು ವಿಶ್ಲೇಷಿಸಿದ್ದಾರೆ. ಆದರೆ ಮಿರ್ಜಾ ಆಡಳಿತದ ಅವಧಿಯಲ್ಲಿ ಮುಸ್ಲಿಂ ಸಮುದಾಯದಲ್ಲಾದ ಅಸ್ಮಿತೆಯ ಆಲೋಚನೆಗಳು ಇಲ್ಲಿ ಮುಖ್ಯ ಭಾಗವಾಗಬೇಕಾಗಿತ್ತು. ಈ ಕಾಲಾವಧಿಯಲ್ಲಿ ಕ್ರೈಸ್ತ ಸಮುದಾಯವು ಹೇಗೆ ಸಂಸ್ಥಾನದಲ್ಲಿ ಸ್ಪಂದಿಸಿತು ಎನ್ನುವುದೂ ಮುಖ್ಯವಾಗಬೇಕಾಗಿತ್ತು. ಹಾಗೆಯೇ ಈ ಕೃತಿಯ ವ್ಯಾಪ್ತಿಯನ್ನು ಸಂಸ್ಥಾನದಲ್ಲಿ ಪ್ರಜಾಪ್ರಭುತ್ವ ಬರುವವರೆಗೆ ವಿಸ್ತರಿಸಬಹುದಿತ್ತು. ಆದರೆ ೧೯೪೧ರ ಕಾಲಕ್ಕೆ ಸೀಮಿತಗೊಳಿಸಲಾಗಿದೆ. ಒಟ್ಟಿನಲ್ಲಿ ಮೈಸೂರಿನಲ್ಲಾದ ಸ್ವಾತಂತ್ರ್ಯ ಚಳವಳಿಯ ಬಗೆಗೆ ಅನೇಕ ಕೃತಿಗಳು ಬಂದಿವೆ. ಆದರೆ 'ಅಸ್ಮಿತೆ'ಯ ಆಯಾಮಗಳನ್ನು ವಿಶೇಷವಾಗಿ ಅಧ್ಯಯನ ನಡೆಸಿರುವ ಲೇಖಕರು ಒಟ್ಟು ರಾಷ್ಟ್ರೀಯ ಚಳವಳಿಯನ್ನು ಅರ್ಥೈಸಿಕೊಳ್ಳಲು ಮತ್ತು ೧೮೭೦-೧೯೪೧ರ ನಡುವೆ ಮೈಸೂರಿನ ಚರಿತ್ರೆಯ ಸಾಮಾಜಿಕ ಮತ್ತು ರಾಜಕೀಯ ಅಸ್ಮಿತೆಯ ಒಳಸುಳಿಗಳ ಬಗೆಗೆ ಅಧ್ಯಯನ ಕೈಗೊಳ್ಳಲು ಮೌಲಿಕ ಕೃತಿಯಾಗಿದೆ.

ವಿಕ್ರಮ್ ಸಂಪತ್ ಅವರ **ಸ್ಪ್ಲೆಂಡರ್ಸ್ ಆಫ್ ರಾಯಲ್ ಮೈಸೂರ್ ದಿ ಅನ್‌ಟೋಲ್ಡ್ ಸ್ಟೋರಿ ಆಫ್ ದಿ ಒಡೆಯರ್ಸ್**(೨೦೦೮)[೧೩೫] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿಕೊಡುತ್ತದೆ. ಒಡೆಯರು ಸಂಸ್ಥಾನದಲ್ಲಿ ಹೇಗೆ ಅಭಿವೃದ್ಧಿ ಕಾರ್ಯ ಕೈಗೊಂಡು ಮಾದರಿ ಸಂಸ್ಥಾನವನ್ನಾಗಿ ಮಾರ್ಪಡಿಸಿದರು ಎಂಬ ವಿಚಾರಗಳನ್ನು ಸವಿವರವಾಗಿ ವಿವರಿಸಿದ್ದಾರೆ. ಯದುರಾಯನಿಂದ ಮೈಸೂರು ಒಡೆಯರ ಸ್ಥಾಪನೆ, ರಾಜ ಒಡೆಯರಿಂದ ಮೈಸೂರು ಸಂಸ್ಥಾನವು ಸ್ವತಂತ್ರವಾದ ಆಧಿಪತ್ಯವನ್ನು ಪಡೆದುಕೊಂಡಿತು. ಮುಖ್ಯವಾಗಿ ಇಲ್ಲಿ ಅಲಮೇಲಮ್ಮನ ಶಾಪದ ವಿವರಗಳನ್ನು ತಿಳಿಸಿದ್ದಾರೆ. ವಿಗಡ ವಿಕ್ರಮರಾಯನ ಕುತಂತ್ರದ ಅಂಶಗಳು ಮುಖ್ಯ. ಚಿಕ್ಕದೇವರಾಜ ಒಡೆಯರ ಕಾಲವು ಸಂಸ್ಥಾನ ವಿಸ್ತರಣ ಕಾಲವಾಗಿ ಗುರುತಿಸಿಕೊಂಡಿದೆ. ಈ ವಿಚಾರಗಳ ಮಧ್ಯೆದಲ್ಲಿಯೇ ವಸಾಹತುಶಾಹಿ ಆಡಳಿತವು ವ್ಯಾಪಾರದ ಉದ್ದೇಶಗಳಿಗಾಗಿ ನೆಲೆಯೂರಿತು ಎಂಬುದನ್ನು ಚರ್ಚಿಸಿದ್ದಾರೆ(ಪು.೯೧). ಈಸ್ಟ್ ಇಂಡಿಯಾ ಕಂಪನಿ ಮೂಲಕ ಬ್ರಿಟಿಷರ ಆದಿಪತ್ಯ ಪ್ರಾರಂಭದ ರೀತಿಯನ್ನು ನೀಡುತ್ತಾರೆ. ಚಿಕ್ಕದೇವರಾಜ ಒಡೆಯರ ನಂತರ ಸಮರ್ಥ ಒಡೆಯರು ಆಡಳಿತದಲ್ಲಿ ಸುಭದ್ರತೆ ಕಾಪಾಡಿಕೊಳ್ಳದೇ ಇರುವುದರಿಂದ ದಳವಾಯಿಗಳ ಕೈಯಲ್ಲಿ ಅಧಿಕಾರಕೇಂದ್ರಿತವಾದುದು. ಈ ಹಿನ್ನೆಲೆಯಲ್ಲಿ

ಹೈದರಾಲಿಯ ಆಗಮನವಾಯಿತು. ಹೈದರಾಲಿಯು ಹಂತಹಂತವಾಗಿ ಒಡೆಯರ ಅಧಿಕಾರವನ್ನು ತನ್ನಲ್ಲಿ ಕೇಂದ್ರೀಕರಿಸಿಕೊಂಡನು. ಟಿಪ್ಪು ಅನುಭವಿಸಿದ ನಷ್ಟದ ವಿವರಗಳು, ಇವನ ಆಡಳಿತ, ಕಂದಾಯ, ಕೃಷಿ, ನೀರಾವರಿ, ವ್ಯಾಪಾರ-ವಾಣಿಜ್ಯದ, ವಿದೇಶಿ ರಾಷ್ಟ್ರಗಳೊಂದಿಗೆ ವ್ಯಾಪಾರ ಇವೇ ಮೊದಲಾದ ವಿವರಗಳನ್ನು ಸಮಗ್ರವಾಗಿ ಕಟ್ಟಿಕೊಡುತ್ತಾರೆ.

ಮೈಸೂರು ಒಡೆಯರಿಗೆ ಮರಳಿ ಅಧಿಕಾರ ನೀಡಲಾಯಿತು. ದಿವಾನ್ ಪೂರ್ಣಯ್ಯ ಅವರ ಆಡಳಿತದ ವಿಚಾರಗಳನ್ನು ತಿಳಿಸಿದ್ದಾರೆ. ಮುಖ್ಯವಾಗಿ ಬ್ರಿಟಿಷರ ಆಡಳಿತ ಸಾಮಾಜಿಕ, ಆರ್ಥಿಕವಾಗಿ ಯಾವ ರೀತಿ ಬದಲಾವಣೆಗೆ ಒಳಪಡಿಸಿದರು ಎಂಬುದು ಮುಖ್ಯ. ಟಿಪ್ಪು ನಂತರ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಉಂಟಾದ ನಗರದಂಗೆ ಯಾವ ರೀತಿ ಪರಿಣಾಮ ಬೀರಿತು, ಇದರಿಂದ ಒಡೆಯರು ಅಧಿಕಾರ ಕಳೆದುಕೊಂಡು ಕಮೀಷನರ್‌ಗಳ ಆಡಳಿತ ಆರಂಭವಾಯಿತು. ಸಾಮಾಜಿಕ, ಆರ್ಥಿಕವಾಗಿ ಅಭಿವೃದ್ಧಿ ಯೋಜನೆಗಳ ವಿವರಗಳನ್ನು ತಿಳಿಸುತ್ತಾರೆ. ಈ ಕಡೆ ಸ್ವಾತಂತ್ರ್ಯ ಚಳವಳಿ ಬಿರುಸುಗೊಂಡಿತು. ಜಯಚಾಮರಾಜ ಒಡೆಯರ ಕಾಲದಲ್ಲಿ ಜವಾಬ್ದಾರಿ ಸರ್ಕಾರದ ರಚನೆಗಾಗಿ ಮೈಸೂರು ಚಲೋ ಚಳವಳಿ ಆರಂಭವಾಯಿತು. ಕೊನೆಗೆ ಸಂಸ್ಥಾನ ಪ್ರಜಾಪ್ರಭುತ್ವ ಅಡಿಯಲ್ಲಿ ವಿಲೀನವಾಯಿತು ಎನ್ನುವುದನ್ನು ವಿವರಿಸುತ್ತಾರೆ. ಶಿಕ್ಷಣ, ಸಾಮಾಜಿಕ ಕಾರ್ಯಗಳು ಜನರ ಜೀವನಕ್ರಮವನ್ನು ಉತ್ತಮಪಡಿಸಿದವು ಎಂಬುದನ್ನು ಚರ್ಚಿಸಿದ್ದಾರೆ. ಆದರೆ ದಿವಾನರುಗಳ ವಿಚಾರಗಳು ಗೌಣ. ಹಾಗೆಯೇ ಬ್ರಾಹ್ಮಣೇತರ ಚಳವಳಿಯ ಬಗೆಗೆ ಯಾವ ವಿವರಗಳು ಇಲ್ಲ. ಇಲ್ಲಿ ಒಡೆಯರುಗಳ ಆಡಳಿತದ ವಿವರಗಳನ್ನು ಈ ಕೃತಿಯು ಕಟ್ಟಿಕೊಡುತ್ತದೆ.

ಸುಧಾಮಣಿ ಬಿ.ವಿ. ಅವರು **ದಳವಾಯಿ ನಂಜರಾಜಯ್ಯನ ಕಾಲದ ಮೈಸೂರು(೨೦೦೯)**[೧೩೭] ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯು ಅವರ ಪಿಎಚ್.ಡಿ.ಸಂಶೋಧನೆಯ ಫಲ, ಮೈಸೂರು ಸಂಸ್ಥಾನದ ಚರಿತ್ರೆಯಲ್ಲಿ ದಳವಾಯಿಗಳ ಕಾಲಘಟ್ಟವು ಮುಖ್ಯವಾದುದು. ಹೈದರಾಲಿಯ ಆಡಳಿತಕ್ಕಿಂತ ಮುಂಚೆ ಮೈಸೂರನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದನು. ಇಲ್ಲಿ ಮುಖ್ಯವಾಗಿ ಕಳಲೆ ಮನೆತನದ ವ್ಯಕ್ತಿಗಳು ಮೈಸೂರು ಸಂಸ್ಥಾನದ ರಾಜಕೀಯ ಹಾಗೂ ಆಡಳಿತದ ಸೂತ್ರಗಳನ್ನು ಹಿಡಿದು ತಮ್ಮ ಛಾಪು ಮೂಡಿಸಿದರು. ಈ ಮನೆತನದಲ್ಲಿ ದಳವಾಯಿ ದೇವರಾಜಯ್ಯ ಮತ್ತು ಅವನ ಸಹೋದರ ದಳವಾಯಿ ಕಳಚೂರಿ ನಂಜರಾಜಯ್ಯ ಹದಿನೆಂಟನೇ ಶತಮಾನದ ದಕ್ಷಿಣ ಭಾರತದ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸಿದ. ಹೀಗೆ ದಳವಾಯಿಗಳ ಸಂಕ್ಷಿಪ್ತ ವಿವರಗಳನ್ನು ಮೊದಲು ತಿಳಿಸುತ್ತಾರೆ. ನಂಜರಾಜಯ್ಯನ ರಾಜಕೀಯ ಸಾಧನೆಗಳು ಅವನ ಸಾಂಸ್ಕೃತಿಕ ಪ್ರಗತಿಗೆ ತಳಹದಿಯಾಗಿದೆ ಎಂಬುದನ್ನು ವಿವರಿಸಿದ್ದಾರೆ.

ಅಂದು ಆಸ್ಥಾನದಲ್ಲಿದ್ದ ಆರ್ಥಿಕ ಒತ್ತಡಗಳು ಹಾಗೂ ಅವುಗಳನ್ನು ಎದುರಿಸಲು ದಳವಾಯಿ ನಂಜರಾಜಯ್ಯ ಕೈಗೊಂಡ ಕಾರ್ಯಗಳನ್ನು ವಿವರಿಸಲಾಗಿದೆ. ಇದರ ಕಾಲದ ಸಾಮಾಜಿಕ ಪರಿಸ್ಥಿತಿಯಲ್ಲಿ ಸಮಾಜದಲ್ಲಿ ಅಸ್ತಿತ್ವದಲ್ಲಿದ್ದ ಜಾತಿಪದ್ಧತಿ, ಕೌಟುಂಬಿಕ ವ್ಯವಸ್ಥೆ,

ಸ್ತ್ರೀಯರ ಸ್ಥಾನಮಾನ, ಸತಿಸಹಗಮನ ಪದ್ಧತಿ, ವೈವಾಹಿಕ ವ್ಯವಸ್ಥೆ, ಗಣಿಕೆಯರು-ದೇವದಾಸಿಯರು-ವೇಶ್ಯೆಯರು, ಶಿಕ್ಷಣವ್ಯವಸ್ಥೆ, ಆಹಾರಪದ್ಧತಿ, ಉಡುಪು ಮತ್ತು ಆಭರಣಗಳು, ಹಬ್ಬ-ಹರಿದಿನಗಳು, ಜಾತ್ರೆ-ಉತ್ಸವಗಳು, ನಂಬಿಕೆ-ಮನೋರಂಜನೆ, ಕ್ರೀಡೆಗಳು, ಸಾಮಾಜಿಕ ಸಾಂಘಿಕ ಜೀವನ ಈ ಎಲ್ಲಾ ಅಂಶಗಳನ್ನು ಶಿಷ್ಟವರ್ಗದವರು ಮತ್ತು ಜನಪದರ ಜೀವನಕ್ಕೆ ಸಂಬಂಧಿಸಿದಂತೆ ಚರ್ಚಿಸಲಾಗಿದೆ. ಈ ನಿಟ್ಟಿನಲ್ಲಿ ಕೃತಿಯು ದಳವಾಯಿ ನಂಜರಾಜಯ್ಯ ಅವರ ರಾಜಕೀಯ ವಿಪ್ಲವದಲ್ಲಿ ಸಾಧಿಸಿದ ಕಾರ್ಯಗಳನ್ನು ವಿವರಿಸಲಾಗಿದೆ.

ಸ್ವಾಮಿರಾವ್ ಎಲ್. ಅವರ **ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಚರಿತ್ರೆ(೨೦೦೯)**[೧೩೭] ಎಂಬ ಕೃತಿಯು ಮುಖ್ಯವಾದುದು. ಈ ಕೃತಿಯು ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಜೀವನದ ವಿವಿಧ ಅಭಿವೃದ್ಧಿ ಘಟ್ಟಗಳನ್ನು ತಿಳಿಸುತ್ತದೆ. ಒಡೆಯರ ಬಾಲ್ಯ, ವಿದ್ಯಾಭ್ಯಾಸ, ಪಟ್ಟಾಭಿಷೇಕ, ರಾಜ್ಯಭಾರ, ಈ ವಿಚಾರಗಳನ್ನು ವಿವರಿಸಿದ್ದಾರೆ. ಒಡೆಯರು ರಾಜ್ಯಭಾರದಲ್ಲಿ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿಚಾರಗಳನ್ನು ವಿವರಿಸಿದ್ದಾರೆ. ಇವರ ಆಡಳಿತದ ಕಾಲದಲ್ಲಿ ದಿವಾನರ ಸಹಾಯವನ್ನು ಇಲ್ಲಿ ತಿಳಿಸಿದ್ದಾರೆ. ದಿವಾನರು ಒಡೆಯರ ಅನುಮತಿ ಮೇರೆಗೆ ಕೈಗೊಂಡ ಕೃಷಿ, ಕೈಗಾರಿಕೆ, ನೀರಾವರಿ, ರೈಲ್ವೆ ಶಿಕ್ಷಣ ಇತರ ಅಭಿವೃದ್ಧಿ ಕಾರ್ಯಗಳನ್ನು ವಿವರಿಸಿದ್ದಾರೆ. ಈ ನಿಟ್ಟಿನಲ್ಲಿ ಕೃತಿಯು ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಆಡಳಿತದ ವಿಚಾರ ತಿಳಿಸಲಾಗಿದೆ. ಆದರೆ ಕೆಳವರ್ಗಗಳ ಅಭಿವೃದ್ಧಿ ಕಾರ್ಯಗಳ ವಿವರಗಳಿಲ್ಲ. ಇಲ್ಲಿ ದಲಿತರ ಶಿಕ್ಷಣ, ವಿದ್ಯಾರ್ಥಿವೇತನ ಹಾಗೂ ಹಾಸ್ಟೆಲ್‌ಗಳ ಸ್ಥಾಪನೆ, ಅರಮನೆಯ ಪ್ರವೇಶ, ದಲಿತರ ಶಿಕ್ಷಣಕ್ಕಾಗಿ ಶ್ರಮಿಸಿದ ಆರ್.ಗೋಪಾಲಸ್ವಾಮಿ ಅವರ ಕಾರ್ಯದಕ್ಷತೆಯನ್ನು ಚಿತ್ರಿಸಬಹುದಿತ್ತು.

ವಿಜಯ್ ಪೂಣಚ್ಚ ತಂಬಂಡ ಅವರ ಪ್ರಧಾನ ಸಂಪಾದಕತ್ವ ಮತ್ತು ಚಿನ್ನಸ್ವಾಮಿ ಸೋಸಲೆ ಎನ್., ಮೋಹನ್‌ಕೃಷ್ಣ ರೈ ಕೆ., ವಿರೂಪಾಕ್ಷಿ ಪೂಜಾರಹಳ್ಳಿ ಇವರ ಸಂಪುಟ ಸಂಪಾದಕತ್ವದಲ್ಲಿ **ಕನ್ನಡ ವಿಶ್ವವಿದ್ಯಾಲಯ ಎಂಟು ಚರಿತ್ರೆ ಸಂಪುಟಗಳು**(೨೦೧೦) ಹೊರಬಂದಿವೆ. ಚರಿತ್ರೆಲೇಖನ ಮತ್ತು ವಿಧಾನ, ಭಾರತ ಉಪಖಂಡ ಆಧುನಿಕಪೂರ್ವ ಚರಿತ್ರೆ, ಭಾರತ ಉಪಖಂಡ ಆಧುನಿಕ ಚರಿತ್ರೆ, ಏಷ್ಯಾ: ಚರಿತ್ರೆಯ ವಿವಿಧ ಆಯಾಮಗಳು, ಯುರೋಪ್: ಚರಿತ್ರೆಯ ವಿವಿಧ ಆಯಾಮಗಳು, ಸಮಕಾಲೀನ ಕರ್ನಾಟಕ: ಚರಿತ್ರೆಯ ವಿವಿಧ ಆಯಾಮಗಳು, ಆಫ್ರಿಕಾ: ಚರಿತ್ರೆಯ ವಿವಿಧ ಆಯಾಮಗಳು ಎಂಬ ಸಂಪುಟಗಳು ಪ್ರಮುಖವಾದವು. ಚರಿತ್ರೆ ಲೇಖನಶಾಸ್ತ್ರಕ್ಕೆ ಸಂಬಂಧಿಸಿದಂತೆ ಪೂರ್ವ ಪೀಠಿಕೆಯಾಗಿ **ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ-ಸಂಪುಟ-೧**[೧೩೮] ರ ಲೇಖನಗಳು ಸಹಕಾರಿಯಾಗಿವೆ ಎಂಬುದು ಮುಖ್ಯ. ಈ ಸಂಪುಟವು ಚರಿತ್ರೆ ನಿರಂತರ ಪ್ರಕ್ರಿಯೆ ಆಗಿದ್ದು, ಹೊಸಹೊಸ ಜಿಜ್ಞಾಸೆಗಳು, ಸೈದ್ಧಾಂತಿಕತೆಗಳು ಮತ್ತು ತತ್ವಶಾಸ್ತ್ರೀಯ ಪ್ರಶ್ನೆಗಳನ್ನು ಹುಟ್ಟು ಹಾಕಲು ಸಹಾಯಕವಾಗಿದೆ. ವಿವಿಧ ಕಾಲಘಟ್ಟಗಳಿಗನು ಗುಣವಾಗಿ ಚರಿತ್ರೆಯನ್ನು ವಿಮರ್ಶೆ ಮಾಡಿದ ವಿವರ, ಬೇರೆ ಕಡೆ ಇದ್ದ ವಿವರ, ತಾತ್ವಿಕ ಪ್ರಶ್ನೆಗಳ ವಿವರಗಳನ್ನು ಈ ಸಂಪುಟವು ಕಟ್ಟಿಕೊಡುತ್ತವೆ. ಮೊದಲಿನ ರಾಜಕೀಯ, ಧಾರ್ಮಿಕ, ರಾಷ್ಟ್ರೀಯ ಪ್ರಶ್ನೆಗಳಿಂದ ಹಿಡಿದು ಇಪ್ಪತ್ತನೆಯ ಶತಮಾನದ ಪ್ರಬಲ

ಸೈದ್ಧಾಂತಿಕ ಕ್ರಮವಾದ ಮಾರ್ಕ್ಸ್‌ವಾದ, ಸಬಾಲ್ಟರ್ನ್ ನೆಲೆಯ ತೀವ್ರತೆಗಳನ್ನು ಜಗತ್ತಿನ ಬೇರೆ ಬೇರೆ ಕಾಲಘಟ್ಟದ ಐತಿಹಾಸಿಕ ಸನ್ನಿವೇಶಗಳನ್ನು ಗಮನದಲ್ಲಿಟ್ಟುಕೊಂಡು ಜಾಡಿ ಹಿಡಿದ ಆಧುನಿಕೋತ್ತರ ಚಿಂತನೆ ಹಾಗೂ ಅದಕ್ಕೆ ಸಂಬಂಧಿಸಿದ ವಿವಿಧ ಜ್ಞಾನಶಾಖೆಗಳ ಪರಿಚಯವನ್ನು ಈ ಸಂಪುಟದಲ್ಲಿ ತಿಳಿಸಲಾಗಿದೆ. ಚರಿತ್ರೆಯ ಸಂವೇದನೆಗಳ ವಿವಿಧ ಆಯಾಮಗಳನ್ನು, ಆ ಮೂಲಕ ಚರಿತ್ರೆಯ ಇನ್ನೊಂದು ಮುಖವನ್ನು ವರ್ತಮಾನದ ಆಶಯಗಳಾಗಿ ಈ ಸಂಪುಟದಲ್ಲಿ ಚರ್ಚಿಸಲಾಗಿದೆ. ಚರಿತ್ರೆ ಲೇಖನ ಪರಂಪರೆ ಬೆಳೆದು ಬಂದ ಬಗೆ, ಇತಿಹಾಸದ ಸಂವೇದನೆಗಳು, ಚರಿತ್ರೆಯ ನಿರ್ಮಾಣದಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳು, ಚರಿತ್ರೆ ಬರವಣಿಗೆ ಮತ್ತು ವಿಧಾನಕ್ರಮಗಳ ನಡುವೆ ಇವೇ ಮೊದಲಾದ ಲೇಖನಗಳು ಚರಿತ್ರೆಲೇಖನಶಾಸ್ತ್ರಕ್ಕೆ ಮುಖಾಮುಖಿಯಾಗಿವೆ.

ವಿಜಯ್ ಪೂಣಚ್ಚ ತಂಬಂಡ ಅವರ ಪ್ರಧಾನ ಸಂಪಾದಕತ್ವ ಹಾಗೂ ಚಿನ್ನಸ್ವಾಮಿ ಸೋಸಲೆ ಎನ್. ಅವರ ಸಂಪುಟ ಸಂಪಾದಕತ್ವದಲ್ಲಿ **ಸಮಕಾಲೀನ ಕರ್ನಾಟಕ ಚರಿತ್ರೆಯ ವಿವಿಧ ಆಯಾಮಗಳು**[೧೩೯] ಎಂಬ ಕನ್ನಡ ವಿಶ್ವವಿದ್ಯಾಲಯ, ಚರಿತ್ರ ಸಂಪುಟ–೬ ಪ್ರಮುಖವಾದುದಾಗಿದೆ. ಈ ಕೃತಿಯು ಸಮಕಾಲೀನ ಕರ್ನಾಟಕದ ಸ್ವಾತಂತ್ರ್ಯ ಹೋರಾಟ, ಏಕೀಕರಣ ಚಳವಳಿ, ಕನ್ನಡ ಚಳವಳಿ, ಸಾಹಿತ್ಯ ಚಳವಳಿ, ದಲಿತ ಚಳವಳಿ, ಕಾರ್ಮಿಕ, ರೈತ, ಗಡಿ, ಜಲ ಹಾಗೂ ಭೂಮಿಗೆ ಸಂಬಂಧಿಸಿದ ಹೋರಾಟದ ಐತಿಹಾಸಿಕ ಹಾಗೂ ಚಾರಿತ್ರಿಕ ಅಂಶಗಳನ್ನು ಹೊರಚೆಲ್ಲುವ ಲೇಖನಗಳನ್ನು ಒಳಗೊಂಡಿದೆ. ವಿವಿಧ ಮತಧರ್ಮ ಹಾಗೂ ಭಾಷೆಗಳ ಬಹುಜನ ಸಮುದಾಯಗಳನ್ನು ಒಳಗೊಂಡದ್ದಾಗಿದೆ. ಈ ಕೃತಿಯಲ್ಲಿ ಸ್ವಾತಂತ್ರ್ಯ ಹೋರಾಟದ ನಂತರ ಕರ್ನಾಟಕದ ಜನತೆ ಹೇಗೆ ಬದುಕಿದ್ದಾರೆ, ಸಮಸ್ಯೆಗಳಿಗೆ ಹೇಗೆ ಸ್ಪಂದಿಸಿದ್ದಾರೆ, ಪರಿಹಾರಗಳನ್ನು ಕಂಡುಕೊಂಡಿದ್ದಾರೆ ಎಂಬುದಕ್ಕೆ ಇಲ್ಲಿ ಸ್ಥೂಲವಾದ ನಿರೂಪಣೆ ವ್ಯಕ್ತವಾಗಿದೆ. ರಾಜಕೀಯಕ್ಕಿಂತ ಮುಖ್ಯವಾಗಿ 'ಜನರ ಜೀವನ, ಧಾರ್ಮಿಕ ಶ್ರದ್ಧೆಗಳು, ಅವರ ತಾತ್ವಿಕ ನೆಲೆಗಟ್ಟು, ನೈತಿಕ ನಿಯಮಗಳು, ಆರ್ಥಿಕ ಮತ್ತು ಸಾಮಾಜಿಕ ಪರಿಸ್ಥಿತಿಗಳು, ಅವರ ಸಂಸ್ಕೃತಿ ಮತ್ತು ಕಲೆಗಳು ಬಹು ಮುಖ್ಯವಾದ ವಿಷಯಗಳಾಗಿವೆ. ಏಕೀಕರಣದಲ್ಲಿ ಮೈಸೂರಿನ ಪಾತ್ರ, ಹಿಂದುಳಿದ ವರ್ಗಗಳ ಪಾತ್ರ ಇವೇ ಮೊದಲಾದ ವಿಚಾರಗಳ ಚರ್ಚೆಯನ್ನು ಈ ಕೃತಿಯಿಂದ ತಿಳಿಯಬಹುದಾಗಿದೆ.

ಚಿನ್ನಸ್ವಾಮಿ ಸೋಸಲೆ ಎನ್. ಅವರು **ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ** (೨೦೧೦)[೧೪೦] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ವಸಾಹತುಶಾಹಿಯ ಕಾಲಘಟ್ಟದಲ್ಲಿ ಮೈಸೂರು ಸಂಸ್ಥಾನ ಯಾವ ರೀತಿ ಸ್ಥಿತ್ಯಂತರಕ್ಕೆ ಒಳಗಾಯಿತು ಎಂಬುದರ ಚರ್ಚೆ ಆಗಿದೆ. ಅಂದರೆ ಈ ಕೃತಿಯಲ್ಲಿ ೧೭೯೯ರಿಂದ ೧೯೪೭ರವರೆಗಿನ ಮೈಸೂರು ಸಂಸ್ಥಾನದ ವಿವಿಧ ಹಂತದ ವಸಾಹತುಶಾಹಿಗಳ ಆಳ್ವಿಕೆಯ ಮಜಲುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. 'ವಸಾಹತುಶಾಹಿಗಳ ಕೂಸು' ಎಂದೆನ್ನಿಸಿಕೊಂಡಿರುವ ಮೈಸೂರು ಸಂಸ್ಥಾನ ೧೮೮೧ರ ನಂತರದ ಪ್ರಗತಿಯ ಕುರಿತು ದೊರಕುವ ದಾಖಲೆಗಳನ್ನು ಚರ್ಚೆಗೆ ಎಡೆ ಮಾಡಲಾಗಿದೆ. ಹೈದರಾಲಿ, ಟಿಪ್ಪು, ಬ್ರಿಟಿಷರ ಯುದ್ಧಗಳ ವಿವರಗಳನ್ನು ಚರ್ಚಿಸುತ್ತಾರೆ.

ಮೈಸೂರಿನೊಂದಿಗೆ ವಸಾಹತುಶಾಹಿಗಳ ಸಂಬಂಧ ವಿಚಾರಗಳು, ಟಿಪ್ಪು ನಂತರ ಅಧಿಕಾರದ ಹತೋಟಿ, ಒಡೆಯರಿಗೆ ಅಧಿಕಾರ ಹಸ್ತಾಂತರ, ನಗರದಂಗೆಯಿಂದಾಗಿ ಕಮೀಷನರ್‌ಗಳ ಆಳ್ವಿಕೆಗೆ ಪುನಃ ಒಡೆಯರ ಅಧಿಕಾರ ಇವೇ ಮೊದಲಾದ ವಿಷಯಗಳ ಹರಿವು ಇಲ್ಲಿ ಮೂಡಿಬಂದಿದೆ. ಮುಖ್ಯವಾಗಿ ಕಮೀಷನರ್‌ಗಳ ಆಳ್ವಿಕೆಯಲ್ಲಿ ಮೈಸೂರು ಮಾದರಿ ಸಂಸ್ಥಾನವಾಗಲು ಸಹಕಾರಿಯಾದ ವಿಚಾರಗಳನ್ನು ಚರ್ಚಿಸಿದ್ದಾರೆ. ದಿವಾನರ ಅಭಿವೃದ್ಧಿ ಕಾರ್ಯಗಳು ಕೂಡ ಮೈಸೂರು ಮಾದರಿ ಸಂಸ್ಥಾನವಾಗಲು ಸಾಧ್ಯವಾಯಿತು ಎಂಬುದು ಮುಖ್ಯ. ೧೦ನೇ ಚಾಮರಾಜ ಒಡೆಯರ ಕಾಲದಲ್ಲಿನ ವಿವೇಕಾನಂದರ ಭೇಟಿ ದಲಿತರ ಪಾಲಿಗೆ ವರವಾಯಿತು. ದಲಿತರ ಅಭಿವೃದ್ಧಿ ಕಾರ್ಯಗಳು ಪ್ರಾರಂಭವಾದವು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಲಿತರ ಅಭಿವೃದ್ಧಿ ಕಾರ್ಯಗಳು ಇನ್ನಷ್ಟು ಚುರುಕಾದವು. ಕೃಷಿ, ಕೈಗಾರಿಕೆ, ನೀರಾವರಿ, ರೈಲ್ವೆ, ಶಿಕ್ಷಣ, ಆರೋಗ್ಯ, ದೀನ-ದಲಿತರ ಪ್ರಗತಿ ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳಿಂದಾಗಿ ನಾಲ್ವಡಿ ಕೃಷ್ಣರಾಜರನ್ನು ರಾಜರ್ಷಿ ಎಂತಲೂ, ಅವರ ರಾಜ್ಯ ರಾಮರಾಜ್ಯ, ಮಾದರಿ ಸಂಸ್ಥಾನ ಎಂಬ ಬಿರುದನ್ನು ಪಡೆದ ವಿವರಗಳನ್ನು ತಿಳಿಸಿರುವುದು ಗಮನಾರ್ಹವಾಗಿದೆ. ಸಾಮಾಜಿಕವಾಗಿ ಇರುವ ಅನಿಷ್ಟ ಪದ್ಧತಿಗಳಾದ ದೇವದಾಸಿ ಪದ್ಧತಿ, ವೇಶ್ಯಾವೃತ್ತಿಯ ನಿಷೇಧ ಕಾನೂನುಗಳನ್ನು ಜಾರಿಗೆ ತಂದ ವಿವರಗಳನ್ನು ಗಮನಿಸಬಹುದು.

ಸ್ತ್ರೀಯರ ಅಭಿವೃದ್ಧಿಗೆ ಶಿಕ್ಷಣ, ಕೆಲವು ಕಾನೂನಾತ್ಮಕ ಸೌಲಭ್ಯಗಳಾದ ಹಿಂದೂ ವಿಡೋ ರೀ ಮ್ಯಾರೇಜ್, ದಿ ಹಿಂದೂ ಲಾ ವುಮೆನ್ಸ್ ರೈಟ್ಸ್ ಆ್ಯಕ್ಟ್, ದಿ ಮೈಸೂರ್ ಮೆಟರ್ನಿಟಿ ಬೆನಿಫಿಟ್ ಆಕ್ಟ್‌ಗಳನ್ನು ಜಾರಿಗೆ ತಂದ ವಿವರಗಳನ್ನು ತಿಳಿಸಿದ್ದಾರೆ. ದಲಿತರಿಗಾಗಿ ಕೈಗೊಂಡ ಕಾರ್ಯಗಳು ಮುಖ್ಯ. ಶಿಕ್ಷಣ, ವಿದ್ಯಾರ್ಥಿವೇತನ, ಹಾಸ್ಟೆಲ್‌ಗಳು ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲಾಯಿತು ಎಂಬುದನ್ನು ಚರ್ಚಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಬೆಳೆದ ಪತ್ರಿಕೋದ್ಯಮ, ಸಾಹಿತ್ಯದ ವಿಚಾರಗಳು ಮಿಳಿತವಾಗಿವೆ. ಹೀಗೆ ಮೈಸೂರು ಸಂಸ್ಥಾನ ವಸಾಹತುಶಾಹಿ ಕಾಲಘಟ್ಟದಲ್ಲಿ ಯಾವ ರೀತಿ ಅಭಿವೃದ್ಧಿಗೊಂಡಿತು ಎಂಬುದನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ.

ತಿಮ್ಮನಹಳ್ಳಿ ವೇಣುಗೋಪಾಲ್ ಅವರು **ರೈತರು: ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳವಳಿ ೧೮೮೧-೧೯೪೭**(೨೦೧೦)[೧೪೧] ಎಂಬ ಕೃತಿಯನ್ನು ಹೊರತಂದಿದ್ದಾರೆ. ವಸಾಹತು ಭಾರತದಲ್ಲಿ ಮೈಸೂರಿಗೆ ವಿಭಿನ್ನ ಸ್ಥಾನವಿದೆ. ಅದರಲ್ಲೂ ಸಬಾಲ್ಟರ್ನ್ ನೆಲೆಯಲ್ಲಿ ರೈತರನ್ನು ಹಿನ್ನೆಲೆಯಾಗಿಸಿಕೊಂಡು ಬಂದ ಕೆಲವು ಅಧ್ಯಯನಗಳಲ್ಲಿ ಈ ಕೃತಿಯು ಒಂದಾಗಿದೆ. ಈ ಕೃತಿಯು ಅವರ ಪಿಎಚ್.ಡಿ.ಸಂಶೋಧನೆಯ ಫಲ. ರೈತರ ನೆಲೆಯಲ್ಲಿ ನಿಂತು ಸಂಸ್ಥಾನದ ಆಡಳಿತ ವಿಸ್ತರಣೆ ಹಾಗೂ ಬ್ರಿಟಿಷ್ ವಸಾಹತು ಆಡಳಿತವನ್ನು ಒಂದು ಕಡೆ ಪ್ರಶ್ನಿಸಿದರೆ, ರಾಷ್ಟ್ರೀಯ ಕಾಂಗ್ರೆಸ್ ಹಾಗೂ ಮೈಸೂರು ಕಾಂಗ್ರೆಸ್ ರೈತರನ್ನು ಕಂಡ ಬಗೆಯನ್ನು ಬಹು ಸೂಕ್ಷ್ಮವಾಗಿ ಹೊರ ತರುತ್ತಾರೆ ಎಂದು ಎಂ.ವಿ.ವಸು ಅವರು ಮುನ್ನುಡಿಯಲ್ಲಿ ವಿವರಿಸಿದ್ದಾರೆ.

ಪ್ರಸ್ತಾವನೆಯ ಭಾಗದಲ್ಲಿ ಸಂಶೋಧನೆಯ ವಿಧಾನವನ್ನು ಕುರಿತು ತಿಳಿಸುತ್ತಾ ರೈತ ಎಂದರೆ ಯಾರು? ರೈತ ರಾಷ್ಟ್ರೀಯತೆ ಇದೆಯೇ? ಎನ್ನುವುದರ ಬಗೆಗೆ ವಿವರಣೆ ನೀಡುತ್ತಾರೆ.

ಹೋರಾಟದ ಸಂದರ್ಭದಲ್ಲಿ ರೈತ ಬಂದಾಗ, ಮೈಸೂರು ಕಾಂಗ್ರೆಸ್ ಜಾತಿಯ ನೆಲೆಯ ವರ್ಗವನ್ನು ಪತ್ತೆ ಹಚ್ಚುತ್ತಾರೆ. ರಾಷ್ಟ್ರೀಯತೆಯ ಹಿನ್ನೆಲೆಯಲ್ಲಿ ರೈತ ಹೋರಾಟವೇ ಆದರೂ, ರಾಷ್ಟ್ರೀಯ ಚಳವಳಿ ರೈತರನ್ನು ದುಡಿಸಿಕೊಂಡ ರೀತಿ, ತನ್ನ ಸಮಸ್ಯೆಗೆ ಪರಿಹಾರ ಸಿಕ್ಕುವ ನಿರೀಕ್ಷೆಯಲ್ಲಿ ಚರ್ಚಿಸುತ್ತಾ ಹೋಗುತ್ತಾರೆ. ಮೊದಲ ಅಧ್ಯಾಯದಲ್ಲಿ ಭೂಕಂದಾಯದ ಸ್ವರೂಪವನ್ನು ತಿಳಿಸುತ್ತಾ ಹೋಗಿದ್ದಾರೆ. ಮುಂದಿನ ರೈತ ಹೋರಾಟಗಳಿಗೆ ಭೂಮಿಕೆಯಾಗಿ ಇದನ್ನು ಬಳಸಿಕೊಂಡಿದ್ದಾರೆ. ಸ್ಥಳೀಯ ಮಟ್ಟದಲ್ಲಿ ಶಾನುಭೋಗ ಹಾಗೂ ಪಟೇಲರ ಪಾತ್ರಗಳನ್ನು ಸೂಕ್ಷ್ಮವಾಗಿ ಗಮನಿಸುವುದು ಕಾಣಬರುತ್ತದೆ. ಇವರು ಕೆಲವು ಬಾರಿ ಅಧಿಕಾರಿಗಳ ಪರವಾಗಿ, ಮತ್ತೆ ಕೆಲವು ಬಾರಿ ಚಳವಳಿಯ ಪರವಾಗಿ ಕಾಣಬರುವುದು ಒಟ್ಟು ಪರಿಸ್ಥಿತಿಯ ಗೊಂದಲವನ್ನು ಸೂಚಿಸುತ್ತದೆ. ಇಲ್ಲಿ ಸ್ಥಳೀಯವಾಗಿ ರೈತರ ಹಿಡಿತ ಯಾರ ಕೈಯಲ್ಲಿತ್ತು ಎಂಬುದನ್ನು ಚರ್ಚಿಸಿದ್ದಾರೆ(ಪು.೯೦-೯೧).

ಮೈಸೂರು ಕಾಂಗ್ರೆಸ್ ಪೂರ್ವದಲ್ಲಿ ರೈತ ಪ್ರತಿಭಟನೆಗಳು ಹೇಗೆ ನಡೆದವು ಮತ್ತು ಅವುಗಳ ಸ್ವರೂಪವನ್ನು ತಿಳಿಸುತ್ತಾರೆ. ವಾಣಿವಿಲಾಸ ಸಾಗರ ಅಚ್ಚುಕಟ್ಟು ಪ್ರದೇಶಗಳಲ್ಲಿ ರೈತರು ಕೆಲವು ಕೃಷಿನೀತಿಗೆ ಸಂಬಂಧಿಸಿದಂತೆ ಹೋರಾಟ ಆರಂಭವಾಯಿತು. ಶಿಕಾರಿಪುರ ಕರನಿರಾಕರಣೆ ಚಳವಳಿ, ಇರ್ವಿನ್ ನಾಲಾ ಚಳವಳಿ ಆರಂಭವಾಯಿತು(ಪು.೧೩೩). ಇದರಿಂದ ಉಂಟಾದ ಪರಿಣಾಮದಿಂದ ಸ್ವಲ್ಪಮಟ್ಟಿನ ರಾಷ್ಟ್ರೀಯವಾದಿ ಧೋರಣೆ ಬೆಳೆಯಿತು. ಆದರೆ ನಿರೀಕ್ಷೆಯ ಮಟ್ಟದಲ್ಲಿ ಬಳಸಿಕೊಳ್ಳಲು ಆಗಲಿಲ್ಲ ಎನ್ನುವುದನ್ನು ಗಮನಿಸಬಹುದು. ಮಹಾ ಆರ್ಥಿಕ ಮುಗ್ಗಟ್ಟು ಕೃಷಿಯ ಮೇಲಿನ ಪರಿಣಾಮಗಳ ಅಂಶಗಳನ್ನು ವಿವರಿಸಿದ್ದಾರೆ(ಪು.೧೭೬-೧೭೭). ಮೈಸೂರು ಕಾಂಗ್ರೆಸ್, ರಾಷ್ಟ್ರೀಯ ಚಳವಳಿ ಮತ್ತು ರೈತರು ಎನ್ನುವ ಭಾಗ ಸಂಶೋಧನೆಯ ಅಂತಿಮ ಅಧ್ಯಾಯವಾಗಿದ್ದು, ಇದು ನಿರ್ಣಯಾತ್ಮಕವಾದುದಾಗಿದೆ. ಬ್ರಾಹ್ಮಣೇತರ ಚಳವಳಿಯಿಂದ ಈ ವರ್ಗಗಳು ತನ್ನ ಐಡೆಂಟಿಟಿಯನ್ನು ಗುರುತಿಸಿಕೊಳ್ಳುವಂತೆ ಮಾಡಲಾಯಿತು. ಮಿಲ್ಲರ್ ಸಮಿತಿಯು ಕೆಲವು ಶಿಫಾರಸ್ಸುಗಳನ್ನು ನೀಡಿತು. ಅನಂತರ ಸರ್ಕಾರ ಮತ್ತು ಹಿಂದುಳಿದ ವರ್ಗಗಳ ನಡುವೆ ವಿರಸ ಹುಟ್ಟಿದಾಗ ೧೯೨೮ರ ಬೆಂಗಳೂರಿನ ಗಣಪತಿ ಗಲಭೆಗೆ ಕಾರಣವಾಯಿತು. ಹೀಗೆ ಹಲವು ಘಟನೆಗಳ ಸೂಕ್ಷ್ಮವನ್ನು ತಿಳಿಯಬಹುದು. ಸುಧಾರಣಾವಾದಿ ರಾಷ್ಟ್ರೀಯ ನಾಯಕರಿಗೆ ತುರ್ತು ಅಗತ್ಯತೆಯನ್ನು ತಿಳಿಸಿದ್ದಾರೆ. ಇಲ್ಲಿ ಬ್ರಾಹ್ಮಣೇತರರು ಮಾತ್ರವೇ ಈ ಮಿತಿಯಿಂದ ಕಾಂಗಸ್ಸನ್ನು ಹೊರತರಲು ಸಹಾಯಕವಾಯಿತು. ಇಲ್ಲಿ ರೈತ ಹೈಲೈಟ್ ಆಗಿರುವುದರಿಂದ, ಮೈಸೂರಿನ ಪ್ರಗತಿ, ಮಾದರಿ ರಾಜ್ಯದ ಕಲ್ಪನೆ, ಮಿರ್ಜಾ ಇಸ್ಮಾಯಿಲ್, ವಿಶ್ವೇಶ್ವರಯ್ಯ ಎಲ್ಲವೂ ರೈತ ನೆಲೆಯಲ್ಲಿ ಆದರ್ಶಯುತವಾಗಿ ಕಾಣಲಾರವೆಂಬುದು ಗಮನಾರ್ಹ. ಮಿರ್ಜಾ ಇಸ್ಮಾಯಿಲ್ ಅವರನ್ನು ನಿರಂಕುಶಾಧಿಕಾರಿಯೆಂದು ಸಾಂಪ್ರದಾಯಿಕ ಹಿನ್ನೆಲೆಯ ನಿಲುವುಗಳಿಗಿಂತ ವಿಭಿನ್ನ ಒಳನೋಟಕ್ಕೆ ಸಾಧ್ಯತೆ ಇರುವುದರ ಕಡೆ ಸಂಶೋಧಕರು ಗಮನ ಹರಿಸಬಹುದಾಗಿತ್ತು. ಕೆನೆಪದರ ಈಗ ಸಮಕಾಲೀನವಾಗಿ ಬಂದರೂ ಸಹ ಸಬಾಲ್ಟರ್ನ್ ಎನ್ನುವುದು ಈ ಸಂದರ್ಭಕ್ಕೆ ಬರದಿದ್ದರೂ ಸಂಶೋಧಕರ ನೆಲೆ ಸಬಾಲ್ಟರ್ನ್ ಆಗಿದೆ. ಇಲ್ಲಿ ಈಸೂರು, ವಿಧುರಾಶ್ವತ್ಥ, ಮೈಸೂರು ಚಲೋ ಚಳವಳಿ ಆದರೂ

ಇದರ ಒಟ್ಟು ಸ್ವರೂಪ ರೈತ. ಮೈಸೂರು ಸಂಸ್ಥಾನದ ಆಡಳಿತಶಾಹಿ, ಮೈಸೂರು ಕಾಂಗ್ರೆಸ್, ರಾಷ್ಟ್ರೀಯ ಕಾಂಗ್ರೆಸ್ ಇವೆಲ್ಲದರ ಬಿಕ್ಕಟ್ಟು ಏನೆಂಬುದನ್ನು ಬಿಚ್ಚಿಡುವ ಪ್ರಯತ್ನ ಇದಾಗಿದೆ ಎನ್ನಬಹುದು. ರಾಷ್ಟ್ರೀಯ ವಾದಿಯ ಚಿಂತನೆಯ ಅನಾವರಣವನ್ನು ಇಲ್ಲಿ ತಿಳಿಸಲಾಗಿದೆ (ಪು.೨೬೧). ಇಲ್ಲಿ ಬಳಸಿಕೊಂಡ ಆಕರಗಳು ಮುಖ್ಯವಾಗಿವೆ.

ಲೀಲಾ ಬಿ. ಮುಂಬೈ ಅವರ **ಮೈಸೂರು ಸಾಂಸ್ಕೃತಿಕ ಸಂಕಥನ**(೨೦೧೦)[೧೪೨] ಎಂಬ ಕೃತಿಯನ್ನು ಹೊರ ತಂದಿದ್ದಾರೆ. ಈ ಕೃತಿಯು ಅವರ ಪಿಎಚ್.ಡಿ ಸಂಶೋಧನೆಯ ಪ್ರಕಟಿತ ರೂಪ. ಈ ಕೃತಿಯಲ್ಲಿ ಕಲೆ, ಸಾಮಾಜಿಕ ಸುಧಾರಣೆ, ಆರೋಗ್ಯ, ವ್ಯಕ್ತಿಚಿತ್ರಗಳು, ಮತ್ತಿತರ ಲೇಖನಗಳು ಇವೇ ಮೊದಲಾದ ವಿಚಾರಗಳ ಚರ್ಚೆಯನ್ನು ಕಾಣಬಹುದು. ಬೆಂಗಳೂರು ನಾಗರತ್ನಮ್ಮ ಅವರು ಕಲೆ ಮತ್ತು ಸಾಮಾಜಿಕ ಅಸ್ತಿತ್ವದ ಛಾಯೆಯ ಸಂಕೇತವಾಗಿ ಅಸ್ಮಿತೆಯನ್ನು ಉಳಿಸಿಕೊಂಡಿದ್ದಾರೆ. ಸಂಗೀತ ಕಾರ್ಯಕ್ರಮಗಳ ವಿವರ, ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ಜನರಿಗೆ ಆಕರ್ಷಿಸಲು ಸ್ಫೂರ್ತಿ ತುಂಬಲು ಹಾಡುಗಳನ್ನು ಹಾಡುತ್ತಿದ್ದ ವಿವರಗಳನ್ನು ತಿಳಿಸಿರುತ್ತಾರೆ. ಈ ರೀತಿಯ ಸಂಗೀತ ಕ್ಷೇತ್ರದಲ್ಲಿ ಸಾಧನೆ ಮಾಡಿದ ವಿವರಗಳನ್ನು ಗಮನಿಸಬಹುದು. ಸಾಮಾಜಿಕ ಸುಧಾರಣೆ ಮುಖ್ಯವಾದುದು. ಸಾಮಾಜಿಕ ಸುಧಾರಣೆಯಲ್ಲಿ ನೃತ್ಯದ ಪಾತ್ರವನ್ನು ತಿಳಿಸಿದ್ದಾರೆ. ದೇವದಾಸಿ ಪದ್ಧತಿ ರದ್ಧತಿ, ಹಾಗೆಯೇ ಗೆಜ್ಜೆ ಪೂಜೆಯನ್ನು ನಾಲ್ವಡಿ ಕೃಷ್ಣರಾಜ ಒಡೆಯರು ರಾಜಾಜ್ಞೆ ಹೊರಡಿಸಿ ರದ್ದು ಮಾಡಿ ಅವರಿಗೆ ಬೇರೆ ಉದ್ಯೋಗ ಕಲ್ಪಿಸಲು ಅನುವು ಮಾಡಿಕೊಟ್ಟ ವಿವರಗಳನ್ನು ಶ್ಲಾಘಿಸುತ್ತಾರೆ. ಸಾಮಾಜಿಕ ಸುಧಾರಣೆಯಲ್ಲಿ ರಾಮಕೃಷ್ಣ-ವಿವೇಕಾನಂದ ಸಂಸ್ಥೆಯ ಪಾತ್ರವು ಮುಖ್ಯ(ಪು.೭೪). ವಿವೇಕಾನಂದರು ೧೦ನೇ ಚಾಮರಾಜ ಒಡೆಯರ ಆಹ್ವಾನದ ಮೇರೆಗೆ ಮೈಸೂರಿಗೆ ಬಂದರು. ಇಲ್ಲಿ ದಲಿತಪರ ಕಾರ್ಯಗಳಿಗೆ ಚಾಲನೆ ನೀಡಿದ್ದು ಚಾರಿತ್ರಿಕ ದಾಖಲೆಯಾಗಿದೆ.

೧೯ ಮತ್ತು ೨೦ನೇ ಶತಮಾನದಲ್ಲಿ ಮಹಿಳೆಯರ ಜಾಗೃತಿ, ಬಾಲ್ಯವಿವಾಹ ನಿಷೇಧ, ವಿಧವೆಯರ ಸ್ಥಾನಮಾನ ಮತ್ತು ಸುಧಾರಣೆಗಳ ಚರ್ಚೆ ನಡೆದಿದೆ. ಮಹಿಳಾ ಕಾರ್ಮಿಕರ ಸೌಲಭ್ಯಗಳ ಮಾಹಿತಿಗಳಿವೆ. ಸ್ವಾತಂತ್ರ್ಯ ಹೋರಾಟದಲ್ಲಿ ಮಹಿಳೆಯರ ಪಾತ್ರವನ್ನು ಬಿಂಬಿಸಿದ್ದಾರೆ. ಮುಂಬೈನ ಸಾಂಸ್ಕೃತಿಕ ಬೆಳವಣಿಗೆಯಲ್ಲಿ ಕನ್ನಡಿಗರು: ಮೈಸೂರು ಅಸೋಸಿಯೇಷನ್ನಿನ ಪಾತ್ರದಲ್ಲಿ ವ್ಯಾಪಾರ ಸಂಬಂಧದಿಂದಾಗಿ ಬೆಳೆದ ಸಂಪರ್ಕ ಮುಂದೆ ವಿವಿಧ ಕ್ಷೇತ್ರಗಳಲ್ಲಿ ಗುರುತಿಸಿಕೊಳ್ಳುವಂತೆ ಮಾಡಲಾಗಿದೆ ಎನ್ನುತ್ತಾರೆ.

ಗೌರಿ ಸುಂದರ್ ಅವರ ಸಂಪಾದಕತ್ವದಲ್ಲಿ **ಮೈಸೂರ ದಸರಾ**(೨೦೧೦)[೧೪೩] ಎಂಬ ಕೃತಿ ಪ್ರಕಟವಾಗಿದೆ. ವಿಶ್ವವಿಖ್ಯಾತವಾದ ನಾಡಹಬ್ಬ ದಸರಾ ಉತ್ಸವದ ಬಗೆಗೆ ಈ ಕೃತಿಯ ಲೇಖನಗಳು ತಿಳಿಸುತ್ತವೆ. ಪುರಾಣದೊಂದಿಗೆ ಬೆಸೆದ ದಸರಾ ಉತ್ಸವದ ವಿಶೇಷತೆಯನ್ನು ಶ್ಲಾಘಿಸಿದ್ದಾರೆ. ನವರಾತ್ರಿಯ ಉತ್ಸವದಲ್ಲಿ ಯಾವ ಯಾವ ದೇವತೆಗಳಿಗೆ ಪೂಜೆ ಎಂಬುದು ಮುಖ್ಯ. ವಿಜಯದಶಮಿ ಮಹತ್ವ, ನವರಾತ್ರಿಯ ಸಾಂಸ್ಕೃತಿಕ ಮಹತ್ವವನ್ನು ವಿವರಿಸುತ್ತಾರೆ. ನವರಾತ್ರಿಯಲ್ಲಿ ಒಂದೊಂದು ಶಕ್ತಿದೇವತೆಗಳನ್ನು ಪೂಜಿಸುವುದು ವಿಶೇಷ. ಆಯುಧಪೂಜೆಯ

ವಿಶೇಷವನ್ನು ಗಮನಿಸಲಾಗಿದೆ. ದಸರಾದಲ್ಲಿ ನಡೆಯುವ ವಸ್ತು ಪ್ರದರ್ಶನವು ಆಕರ್ಷಕವಾಗಿರುತ್ತದೆ. ವಿವಿಧ ಕಡೆಗಳಲ್ಲಿ ನಡೆಯುವ ದಸರಾದ ವಿವರಗಳನ್ನು ತಿಳಿಸಿದ್ದಾರೆ.

ಶ್ರೀಧರ ಸಿ.ಎ. ಅವರು **ಮೈಸೂರು ಒಡೆಯರು ಮತ್ತು ಕರ್ನಾಟಕ ಸಂಸ್ಕೃತಿ(೨೦೧೦)**[೧೪೪] ಎಂಬ ಕೃತಿಯನ್ನು ತಮ್ಮ ಸಂಪಾದಕತ್ವದಲ್ಲಿ ಹೊರತಂದಿದ್ದಾರೆ. ಮೈಸೂರು ಒಡೆಯರು ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿ ನೀಡಿದ ಕೊಡುಗೆಗಳನ್ನು ಈ ಕೃತಿಯ ಲೇಖನಗಳು ವಿವರಿಸಿವೆ. ಸಾಹಿತ್ಯ ಕ್ಷೇತ್ರದಲ್ಲಿ ಒಡೆಯರ ಕೊಡುಗೆಗಳು ಅಪಾರವಾಗಿದೆ. ಇವರ ಕಾಲದ ಸಾಹಿತ್ಯ ಕೃತಿಗಳು ಒಡೆಯರ ಚರಿತ್ರೆಯನ್ನು ಕಟ್ಟುತ್ತವೆ. ಸಂಗೀತ, ನೃತ್ಯ, ನಾಟಕ, ಕಲೆ, ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಸಾಧಿಸಿದ ಪ್ರಗತಿಯ ವಿವರಗಳನ್ನು ಕಟ್ಟಿಕೊಡುತ್ತಾರೆ. ಒಡೆಯರ ಕಾಲದಲ್ಲಿನ ಆಡಳಿತ, ಶಿಕ್ಷಣ ಮತ್ತು ಸಾಮಾಜಿಕ ನ್ಯಾಯ, ಕಾನೂನುಗಳ ವಿಚಾರಗಳನ್ನು ನಿರೂಪಿಸಿದ್ದಾರೆ. ಸ್ತ್ರೀಯರ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹ, ದಲಿತರ ಶಿಕ್ಷಣ, ದಲಿತ ಶಿಕ್ಷಣಕ್ಕೆ ಶ್ರಮಿಸಿದ ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ವಿಚಾರಗಳನ್ನು ವಿವರಿಸಿದ್ದಾರೆ. ಬಹಳ ಮುಖ್ಯವಾಗಿ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ಆದಂತಹ ರಾಜಕೀಯ ಸುಧಾರಣೆ, ಕೈಗಾರಿಕೆ, ಶೈಕ್ಷಣಿಕ ಕಾರ್ಯ, ಸ್ತ್ರೀಪರ ಕಾಳಜಿ, ಸಾಮಾಜಿಕ ಕ್ಷೇತ್ರದ ವಿಚಾರಗಳು, ಒಡೆಯರ ಬಗೆಗೆ ಇರುವ ಮೌಖಿಕ ಇತಿಹಾಸದ ವಿಚಾರ ಇವೇ ಮೊದಲಾದ ವಿಚಾರಗಳ ಕುರಿತ ಲೇಖನಗಳನ್ನು ಈ ಕೃತಿಯಲ್ಲಿ ನೋಡಬಹುದು. ಈ ಎಲ್ಲಾ ಲೇಖನದ ವಿಚಾರಗಳು ಕರ್ನಾಟಕ ಸಂಸ್ಕೃತಿಯನ್ನು ಬಿಂಬಿಸುತ್ತವೆ.

ಪ್ರಮೀಳಾದೇವಿ ಬಿ.ಕೆ. ಅವರ **ಮೈಸೂರು ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳ ಚಳುವಳಿ ಹಾಗೂ ರಾಜಕೀಯ ಜಾಗೃತಿ –ಒಂದು ಒಳನೋಟ ೧೮೮೧–೧೯೩೮(೨೦೧೦)**[೧೪೫] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಹಿಂದುಳಿದ ವರ್ಗಗಳ ಚಳವಳಿಗೆ ಪ್ರೇರಣೆಯಾದ ಅಂಶಗಳನ್ನು ಚರ್ಚಿಸುತ್ತಾರೆ. ಮಹಾರಾಜರು, ದಿವಾನರು ಕೈಗೊಂಡ ಕ್ರಮಗಳು, ಜಾರಿಗೊಳಿಸಿದ ಶಾಸನಗಳು ಸಮುದಾಯಗಳಲ್ಲಿ ಸಂಚಲನವನ್ನು ಉಂಟುಮಾಡಿತು. ಅರಿವು ಮೂಡಿಸಿ ಶಿಕ್ಷಣದ ಮಹತ್ವವನ್ನು ಮನವರಿಕೆ ಮಾಡಿಸಿ ಉದ್ಯೋಗದ ಮುಖಾಂತರ ಪರಿವರ್ತನೆಗೆ ಅವಕಾಶ ಒದಗಿಸಿದರು ಎಂಬುದು ಪ್ರಮುಖ್ಯ. ಇಲ್ಲಿ ಮುಖ್ಯವಾಗಿ ದಿವಾನ ಹುದ್ದೆಗಾಗಿ ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ನಡುವಿನ ಕಿತ್ತಾಟ ಜಾಗೃತಿಯ ಅಲೆಯನ್ನು ಎಬ್ಬಿಸಿತು. ಈ ಹಿನ್ನೆಲೆಯಲ್ಲಿ ಮೈಸೂರು ಬ್ರಾಹ್ಮಣರಾದ ಸರ್ ಎಂ.ವಿಶ್ವೇಶ್ವರಯ್ಯ ದಿವಾನರಾದರು. ಅನಂತರ ಜಾತಿಸಂಘಟನೆಗಳು, ಶಿಕ್ಷಣದ ಅಭಿವೃದ್ಧಿ ಕಾರ್ಯಗಳು ಪ್ರಮುಖವಾಗಿದ್ದು, ಇತರ ಹಿಂದುಳಿದ ವರ್ಗಗಳು ತಮ್ಮ ಸೌಲಭ್ಯಗಳಿಗಾಗಿ ಹೋರಾಟ ನಡೆಸಲು ಅನುಕೂಲವಾಯಿತು ಎಂಬುದನ್ನು ತಿಳಿಸಿದ್ದಾರೆ. ಹಿಂದುಳಿದ ವರ್ಗಗಳ ಚಳವಳಿ ಬ್ರಾಹ್ಮಣೇತರ ಚಳವಳಿ ಭಾಗ ವಾಯಿತು. ಎಂಬುದರ ವಿಚಾರವು ಅನಾವರಣಗೊಂಡಿದೆ. ಬ್ರಾಹ್ಮಣರನ್ನು ಹೊರತುಪಡಿಸಿ ಉಳಿದೆಲ್ಲಾ ವರ್ಗಗಳು ಹಿಂದುಳಿದಿವೆಯೆಂದು, ಈ ವರ್ಗಗಳು ಮುಂದುವರಿದ ಬ್ರಾಹ್ಮಣರೊಂದಿಗೆ ಸ್ಪರ್ಧಿಸಬೇಕಾದರೆ ಅವರಿಗೆ ಕೆಲವು ರಿಯಾಯಿತಿಗಳನ್ನು, ಉದ್ಯೋಗದಲ್ಲಿ ಮೀಸಲಾತಿಯನ್ನು ನೀಡಬೇಕಾದುದು ಅಗತ್ಯತೆಯನ್ನು ಒತ್ತಿ ಹೇಳಿತು. ಕೆಲವು ತಿದ್ದುಪಡಿಯೊಂದಿಗೆ ಸೌಲಭ್ಯಗಳನ್ನು

ಒದಗಿಸಿದ್ದು, ಇದರ ಪರಿಣಾಮವಾಗಿ ಮುಂದೆ ಮತೀಯ ಗಲಭೆಯಲ್ಲಿ ಗಣಪತಿ ಗಲಾಟೆಯನ್ನು ಬಿಂಬಿಸಿದ ವಿಚಾರದಲ್ಲಿ ಮೇಲ್ವರ್ಗದವರ ಚಿತಾವಣೆಯೇ ಕಾರಣವೆನ್ನಬಹುದು. ಮುಂದೆ ತಮ್ಮ ಸೌಲಭ್ಯಗಳಿಗಾಗಿ ಈ ವರ್ಗಗಳು ಕ್ರಿಯಾಶೀಲವಾದವು. ಪಂಚಮರಿಗೆ ಶಾಲೆಗಳು ಪ್ರಾರಂಭವಾದವು. ಹಾಸ್ಟೆಲ್, ವಿದ್ಯಾರ್ಥಿವೇತನದ ಸೌಲಭ್ಯಗಳನ್ನು ಒದಗಿಸಿದ ವಿವರಗಳನ್ನು ವಿಸ್ತೃತವಾಗಿ ತಿಳಿಸಿದ್ದಾರೆ. ೧೯೩೦ರ ನಂತರ ಈ ವರ್ಗಗಳು ಸ್ವಾತಂತ್ರ್ಯ ಚಳವಳಿಯತ್ತ ಮುಖ ಮಾಡಿದವು ಎಂಬುದು ಪ್ರಮುಖವಾದುದು. ಪ್ರಜಾಪಕ್ಷ, ಪ್ರಜಾಸಂಯುಕ್ತ ಪಕ್ಷಗಳು ಒಟ್ಟಾಗಿ ಹೋರಾಟ ನಡೆಸಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗೆ ಮುಂದಾದವು ಎಂಬುದನ್ನು ಚರ್ಚಿಸುತ್ತಾರೆ. ಈ ಹಿನ್ನೆಲೆಯಲ್ಲಿ ರಾಜಶಾಹಿ ಮತ್ತು ವಸಾಹತುಶಾಹಿ ವ್ಯವಸ್ಥೆಗಳಡಿಯಲ್ಲಿ ಬ್ರಾಹ್ಮಣ ಸಮುದಾಯ ಅವುಗಳ ಗರಿಷ್ಠ ಲಾಭವನ್ನು ಪಡೆಯುವ ಹಿನ್ನೆಲೆಯಲ್ಲಿ ತಮ್ಮ ಜಾತಿ ನೆಲೆಯಿಂದ ಅಸ್ಮಿತೆಯನ್ನು ರೂಪಿಸಿಕೊಳ್ಳುವಲ್ಲಿ ಕ್ರಿಯಾಶೀಲರಾದರು. ಬ್ರಾಹ್ಮಣೇತರ ಚಳವಳಿಯು ತಂದುಕೊಟ್ಟ ಹೊಸ 'ಅಸ್ಮಿತೆ'ಯನ್ನು ಈ ವರ್ಗಗಳು ತಮ್ಮ ಹಕ್ಕುಗಳ ಪ್ರತಿಪಾದನೆಗಾಗಿ ಹೇಗೆ ಬಳಸಿಕೊಂಡರು ಎಂಬ ವಿಶ್ಲೇಷಣೆಯನ್ನು ನೋಡಬಹುದು. ಬ್ರಾಹ್ಮಣೇತರ ಚಳುವಳಿಯ ಭಾಗವಾಗಲಾರದೆ ಅಸ್ಪೃಶ್ಯರು, ಅಲೆಮಾರಿ ಮುಂತಾದ ಸಮುದಾಯಗಳು ದಮನಕ್ಕೆ ಒಳಗಾದ ಗುಂಪುಗಳಾದವು ಎಂಬುದನ್ನು ತಿಳಿಸಿದ್ದಾರೆ. ಬ್ರಾಹ್ಮಣೇತರ ಚಳವಳಿಯು ಈ ಸಮುದಾಯಗಳ ಶೋಷಣೆಯ ಮಾರ್ಗವಾಗಿತ್ತು ಎನ್ನುವುದು ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಆದರೆ ೧೯೩೦ರ ನಂತರ ಈ ಎಲ್ಲಾ ವರ್ಗಗಳು ರಾಷ್ಟ್ರೀಯ ಹೋರಾಟದತ್ತ ಮುಖ ಮಾಡಿದವು ಎಂಬುದು ಮುಖ್ಯ ಈ ಹಿನ್ನೆಲೆಯಲ್ಲಿ ಹಿಂದುಳಿದ ವರ್ಗಗಳು ರಾಜಕೀಯವಾಗಿ ಜಾಗೃತವಾದವು.

ಶ್ರೀನಿವಾಸ ಮೂರ್ತಿ ಎಸ್.ಎಲ್. ಅವರ **ಪುರಾತತ್ವ ಪಿತಾಮಹ ಬಿ.ಎಲ್.ರೈಸ್ ಜೀವನ-ಸಾಧನೆ(೨೦೧೧)**[೧೯೬] ಎಂಬ ಕೃತಿಯು ಪ್ರಮುಖವಾದುದು. ಈ ಕೃತಿಯಲ್ಲಿ ಮೈಸೂರಿನ ಚರಿತ್ರೆಲೇಖನ ಪರಂಪರೆಯ ದೃಷ್ಟಿಯಿಂದ ಬಿ.ಎಲ್.ರೈಸ್, ಪಾತ್ರ ಅನನ್ಯವಾದುದು ಎಂಬುದನ್ನು ತಿಳಿಯಲು ಪ್ರಯತ್ನ ಮಾಡಲಾಗಿದೆ. ಬೆಂಗಳೂರಿನಲ್ಲಿಯೇ ಹುಟ್ಟಿದ ಇವರು ಇಲ್ಲಿನ ಪರಂಪರೆ ಯನ್ನು ಚೆನ್ನಾಗಿ ಅರಿತಿದ್ದರು. ಮೊದಲು ಅವರ ಜೀವನದ ಘಟ್ಟಗಳ ವಿವರಗಳನ್ನು ತಿಳಿಸುತ್ತಾರೆ. ಇಲ್ಲಿ ಮುಖ್ಯವಾಗಿ ರೈಸ್‌ರು ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಶೋಧನೆ ಕಾರ್ಯ ಕೈಗೊಂಡರು ಎಂಬುದಾಗಿದೆ. ಶಾಸನತಜ್ಞರಾಗಿ ೧೨ ಸಂಪುಟಗಳ ಎಪಿಗ್ರಾಫಿಯಾ ಕರ್ನಾಟಿಕ ಎಂಬ ಶಾಸನಗಳ ಸಂಪಾದನೆಯನ್ನು ಪ್ರಕಟಿಸಿದರು. ಮೈಸೂರು ಸಂಸ್ಥಾನಕ್ಕೆ ಸೇರಿದ ಸಂಪುಟ ಮೂರು ಭಾಗ ೧-೨ ಇವುಗಳ ವಿವರಗಳನ್ನು ತಿಳಿಸುತ್ತಾರೆ. ಮೈಸೂರು ಒಡೆಯರ ಆಡಳಿತ, ಕಂದಾಯ, ನೀರಾವರಿ, ಸೈನ್ಯ, ಧಾರ್ಮಿಕತೆ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪದ ವಿಚಾರಗಳು ಮಿಳಿತವಾಗಿವೆ. ಬಹಳ ಮುಖ್ಯವಾಗಿ ಮೈಸೂರು ಗ್ಯಾಸೆಟಿಯರ್‌ಗಳ ಪ್ರವರ್ತಕರಾಗಿ ಗುರುತಿಸಿಕೊಂಡಿರುವುದನ್ನು ನೋಡಬಹುದು. ಗ್ಯಾಸೆಟಿಯರ್ ಸಂಪುಟಗಳು ಭೌಗೋಳಿಕತೆ, ಸಸ್ಯಸಂಪತ್ತು, ಪ್ರಾಣಿಸಂಪತ್ತು, ಜನಾಂಗೀಯ ವಿವರಗಳು, ಚರಿತ್ರೆ, ಧರ್ಮ, ಭಾಷೆ-ಸಾಹಿತ್ಯ, ಕಲೆ ಮತ್ತು ಉದ್ಯಮ, ಆಡಳಿತದ ವಿಚಾರಗಳನ್ನು ತಿಳಿಸಿದ್ದಾರೆ. ಎರಡನೇ ಸಂಪುಟದಲ್ಲಿ ಬೆಂಗಳೂರು, ಕೋಲಾರ, ತುಮಕೂರು, ಮೈಸೂರು, ಹಾಸನ, ಕಡೂರು,

ಶಿವಮೊಗ್ಗ ಮತ್ತು ಚಿತ್ರದುರ್ಗ ಈ ಎಂಟು ಜಿಲ್ಲೆಗಳ ಜಿಲ್ಲಾವಾರು ಮಾಹಿತಿಯಿದೆ. ಈ ಜಿಲ್ಲೆಗಳ ಇತಿಹಾಸ, ಜನಸಂಖ್ಯೆ, ಧರ್ಮ, ಭಾಷೆ–ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ, ಐತಿಹಾಸಿಕ ಸ್ಥಳಗಳ ವಿವರಗಳನ್ನು ವಿವರಿಸಿದ್ದಾರೆ. ಈ ಕೃತಿಯು ರೈಸ್ ಅವರ ಜೀವನ ಸಾಧನೆಗಳನ್ನು ತಿಳಿಸುತ್ತದೆ. ಮೈಸೂರಿನ ಜನಗಣತಿ ಜವಾಬ್ದಾರಿಯು ಅವರ ಮೇಲೆ ಬಿದ್ದಿದ್ದರಿಂದ ಮೈಸೂರು ಚರಿತ್ರೆಯನ್ನು ಕ್ಷೇತ್ರಕಾರ್ಯದ ಮುಖೇನ ಗ್ರಹಿಸಲು ಸಾಧ್ಯವಾಯಿತು. ಒಟ್ಟಿನಲ್ಲಿ ಮೈಸೂರಿನ ಆರಂಭಿಕ ಚರಿತ್ರೆಯಿಂದ ೧೯ನೇ ಶತಮಾನದ ಕೊನೆಯವರೆಗಿನ ಚರಿತ್ರೆಯನ್ನು ಒಂದು 'ಸರ್ವೆ' ಮಾದರಿಯಲ್ಲಿ ಕಟ್ಟಿಕೊಡುತ್ತಾರೆ.

ರಾಕೇಶ್ ಹೆಚ್.ಎಸ್., ಅವರು **ಮೈಸೂರು ಚಲೋ ಚಳವಳಿ(೨೦೧೧)**[೧೪೭] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯು ಅವರ ಎಂ.ಫಿಲ್. ಪದವಿಗಾಗಿ ಮಾಡಿದ ಸಂಶೋಧನೆಯಾಗಿದೆ. ಬ್ರಿಟಿಷರು ಭಾರತವನ್ನು ಸ್ವತಂತ್ರಗೊಳಿಸಿ ಹೋದರಾದರೂ ಒಂದು ಸಮಸ್ಯೆಯನ್ನು ಬಿಟ್ಟು ಹೋದರು. ಅದೇನೆಂದರೆ ಆಶ್ರಿತ ಸಂಸ್ಥಾನಗಳು ಭಾರತದ ಒಕ್ಕೂಟದಲ್ಲಿ ಸೇರ್ಪಡೆಯಾಗಬಹುದು, ಇಲ್ಲವೇ ಹಾಗೆಯೇ ಉಳಿದುಕೊಳ್ಳಬಹುದಿತ್ತು. ಈ ಹಿನ್ನೆಲೆಯಲ್ಲಿ ಮೈಸೂರು ಸರ್ಕಾರ ಯಾವುದೇ ಪ್ರತಿಕ್ರಿಯೆ ತೋರಲಿಲ್ಲ. ಮೈಸೂರು ಕಾಂಗ್ರೆಸ್ ಮಹಾರಾಜರನ್ನು ಭಾರತದ ಒಕ್ಕೂಟಕ್ಕೆ ಸೇರುವಂತೆ ಸೂಚಿಸಿತು. ಆದರೂ ಸೇರದೇ ರಾಜತ್ವವನ್ನು ಉಳಿಸಿಕೊಳ್ಳಲು ಹುನ್ನಾರ ಹುಡುಕಿದರು. ಇದರಿಂದ ಮೈಸೂರು ಕಾಂಗ್ರೆಸ್‌ಗೆ, ಮಹಾರಾಜರ ಮೇಲೆ ಒತ್ತಡ ತಂದು ಅವರನ್ನು ಭಾರತದ ಒಕ್ಕೂಟಕ್ಕೆ ಸೇರಿಕೊಳ್ಳುವಂತೆ ಮಾಡಲು ಒಂದು ಜನತಾ ಚಳವಳಿಯನ್ನು ಘೋಷಿಸುವುದು ಅನಿವಾರ್ಯವಾಯಿತು. ಈ ಚಳವಳಿಯನ್ನು 'ಮೈಸೂರು ಚಲೋ' ಚಳವಳಿಯೆಂದು ಘೋಷಿಸಲಾಯಿತು. ಸ್ವತಂತ್ರ ಮೈಸೂರು ಕಾಂಗ್ರೆಸ್ ಆಗಿ ಜವಾಬ್ದಾರಿ ಸರ್ಕಾರದ ಹೊಣೆಯನ್ನು ಹೊತ್ತುಕೊಂಡು, ಎಲ್ಲಾ ಸಮುದಾಯದ ಜನರನ್ನು ಚಳವಳಿಗೆ ಉತ್ತೇಜಿಸಿತು. ಪತ್ರಿಕಾ ಶಾಸನ ನಿಷೇಧಾಜ್ಞೆ ಇದ್ದರೂ ಸಹ ಅನೇಕ ಪತ್ರಿಕೆಗಳು ವಿಷಯವನ್ನು ಜನರಿಗೆ ಮುಟ್ಟಿಸಲು ಸಹಕಾರಿಯಾದವು. ರೈತರು, ಕಾರ್ಮಿಕರು, ಮಹಿಳೆಯರು ಹೋರಾಟ ನಡೆಸಿದ ವಿವರಗಳನ್ನು ತಿಳಿಸಿದ್ದಾರೆ. ಕೆ.ಸಿ.ರೆಡ್ಡಿ ಅವರು ಹೋರಾಟವನ್ನು ಮುಂದುವರಿಸಿದರು. ಸರ್ಕಾರ ಸ್ಥಾಪನೆಯಲ್ಲಿ ಅನೇಕ ಸವಾಲು ಎದುರಿಸಬೇಕಾಯಿತು. ವರ್ಗ ಪ್ರಾತಿನಿಧ್ಯ, 'ರಾಜ್ಯಾಂಗ ಸಭೆ ರಚನೆ, ಭಾಷಾವಾರು ಪ್ರಾಂತ್ಯ ರಚನೆ ಮುಂತಾದ ವಿಚಾರಗಳನ್ನು ಚರ್ಚಿಸುವ ಪ್ರಯತ್ನವನ್ನು ಈ ಕೃತಿಯಲ್ಲಿ ಕಾಣಬಹುದು.

ಜಾನಕಿ ನಾಯರ್ ಅವರು **ಮೈಸೂರು ಮಾರ್ಡನ್ ರಿ–ಥಿಕಿಂಗ್ ದಿ ರೀಜನ್ ಅಂಡರ್ ಪ್ರಿನ್ಸ್ಲಿ ರೂಲ್(೨೦೧೨)**[೧೪೮] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯಲ್ಲಿ ಬ್ರಿಟಿಷ್ ವಸಾಹತುಶಾಹಿ ವಿರುದ್ಧ ಹೋರಾಟ, ಇಲ್ಲಿ ಸಮುದಾಯ, ಭಾಷೆಗಳ ಐಡೆಂಟಿಟಿ ವಿಚಾರಗಳು ಮುಖ್ಯವಾಗುತ್ತವೆ. ಆಧುನಿಕ ಎನ್ನುವುದು ಹೇಗೆ ಮೈಸೂರಿಗೆ ಪ್ರಾಪ್ತವಾಯಿತು, ಇದನ್ನು ಯಾವ ನೆಲೆಯಲ್ಲಿ ಗುರುತಿಸಬಹುದು ಎಂಬುದನ್ನು ಚರ್ಚಿಸಿದ್ದಾರೆ. ಕೈಗಾರಿಕಾಭಿವೃದ್ಧಿಯಿಂದ ಬಂಡವಾಳಶಾಹಿ ಹೇಗೆ ಅಸ್ತಿತ್ವಕ್ಕೆ ಬಂದಿತು. ರಾಜತ್ವವು ಯಾವ ರೀತಿ ವಂಶಪಾರಂಪರ್ಯವಾಗಿ ಸಾಗುತ್ತಾ ಬಂದಿದೆ ಎಂಬುದರ ವಿವರ ಅಡಗಿದೆ. ಟಿಪ್ಪು ಸುಲ್ತಾನ್‌ನು ಯುದ್ಧದಲ್ಲಿ ಮಾಡಿದ

ಹೊಸಹೊಸ ಪ್ರಯೋಗಗಳು ಯಾವ ರೀತಿ ಪ್ರಭಾವ ಬೀರಿದವು, ೧೭೯೮ರಿಂದ ೧೮೩೧ ರವರೆಗೆ ಆದ ಬದಲಾವಣೆಗಳು, ೧೮೩೧-೧೮೮೧ರವರೆಗೆ ಆದ ಬದಲಾವಣೆಗಳು ಮೈಸೂರನ್ನು ಆಧುನಿಕ ಎಂದು ಕರೆಯಲು ಕಾರಣವಾದವು ಎಂಬುದು ಪ್ರಮುಖ. ಕಲೆ ಮತ್ತು ವಾಸ್ತುಶಿಲ್ಪದಲ್ಲಿ ಹೇಗೆ ಆಧುನಿಕತೆಯನ್ನು ಅಳವಡಿಸಬಹುದು ಎಂಬುದನ್ನು ವಿವರಿಸಿದ್ದಾರೆ.

ಸಾಮಾಜಿಕ ಸುಧಾರಣೆಯ ವಿಚಾರಗಳನ್ನು ತಿಳಿಸುತ್ತಾ ದೇವದಾಸಿ ಪದ್ಧತಿಯ ರದ್ದು, ಬಾಲ್ಯವಿವಾಹ ಪದ್ಧತಿಯ ರದ್ದತಿಯ ಕಾಯ್ದೆಗಳನ್ನು ಜಾರಿಗೆ ತರಲಾಯಿತು. ಸಮಾಜದ ಅನಿಷ್ಟ ಪದ್ಧತಿಗಳ ನಿವಾರಣೆ ಆಯಿತು ಎನ್ನಬಹುದು. ಈ ಕಡೆ ರಾಷ್ಟ್ರೀಯ ಚಳವಳಿ ಚುರುಕುಗೊಂಡಿತು. ಭಾಷಾವಾರು ಪ್ರಾಂತ್ಯಗಳ ರಚನೆಗಾಗಿ ಹೋರಾಟ ಪ್ರಾರಂಭವಾಯಿತು. ಮಿರ್ಜಾ ಇಸ್ಮಾಯಿಲ್ ಅವರು ರಾಷ್ಟ್ರೀಯ ಚಳವಳಿಯಲ್ಲಿ ಮೈಸೂರಿನ ಸ್ಥಳಗಳಲ್ಲಿ ನಾಯಕರು ಭಾಗವಹಿಸುವುದನ್ನು ವಿರೋಧಿಸಿದ್ದನ್ನು ವಿವರಿಸಿದ್ದಾರೆ. ಡಿವಿಜಿ ಅವರು ಈ ಭಾಷಾವಾರು ಪ್ರಾಂತ್ಯಗಳ ರಚನೆಗೆ ಸಹಾಯಕರಾದರು. ಹೀಗೆ ಈ ಕೃತಿಯು ಮೈಸೂರಿನ ಆಧುನಿಕತೆಯ ವಿಚಾರಗಳನ್ನು ಕಟ್ಟಿಕೊಡುತ್ತದೆ.

ಅನಿತಾ ಎಂ.ಎಸ್. ಅವರ **ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್(ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ ಒಂದು ಸಮಗ್ರ ಅಧ್ಯಯನ ೧೮೮೪-೧೯೪೦)**(೨೦೧೨)[೧೮೯] ಎಂಬ ಪ್ರಕಟಿತ ಮಹಾಪ್ರಬಂಧವು ಪ್ರಮುಖವಾದುದು. ಈ ಕೃತಿಯಲ್ಲಿ ಮೈಸೂರು ಸಂಸ್ಥಾನವು ಮಾದರಿ ಮೈಸೂರು, ಆಧುನಿಕ ಮೈಸೂರಾಗಿ ರೂಪುಗೊಳ್ಳುವ ಪ್ರಕ್ರಿಯೆಯಲ್ಲಿ ಪಾಶ್ಚಿಮಾತ್ಯ ಸಾಂಸ್ಕೃತಿಕ ಪ್ರಭಾವದ ಪಾತ್ರವೇನು, ಈ ಪ್ರಕ್ರಿಯೆಯ ಕಾಲಾವಧಿಯಲ್ಲಿ ಮೈಸೂರು ಸಂಸ್ಥಾನದ ಆಡಳಿತದ ಚುಕ್ಕಾಣಿ ಹಿಡಿದ ನಾಲ್ವಡಿ ಕೃಷ್ಣರಾಜ ಒಡೆಯರ ಪಾತ್ರವೇನು ಎಂಬುದನ್ನು ಮೌಲ್ಯೀಕರಿಸುವುದು ಅವಶ್ಯಕವಾಗಿ ಕಂಡುಬಂದಿತು. ೨೦ನೇ ಶತಮಾನದ ಪ್ರಾರಂಭದಿಂದಲೂ ಮೈಸೂರು ಸಂಸ್ಥಾನದ ಸಂಶೋಧನೆಯ ಬರವಣಿಗೆಯಲ್ಲಿ ತಮ್ಮ ಸಮುದಾಯದ ಅಕ್ಷರ ಬಲ್ಲ ಬುದ್ಧಿಜೀವಿಗಳು ದಿವಾನರನ್ನು ವಿಜೃಂಭಿಸಿ ನಾಲ್ವಡಿ ಕೃಷ್ಣರಾಜ ಒಡೆಯರನ್ನು ಕಡೆಗಣಿಸಿದ್ದರಿಂದ ಈ ವಿಷಯವನ್ನು ಸಂಶೋಧನೆಗೆ ತೆಗೆದುಕೊಂಡು ಅಧ್ಯಯನ ಮಾಡಿರುವುದನ್ನು ತಿಳಿಸಿದ್ದಾರೆ. ಅಲ್ಲದೇ ೨೦ನೇ ಶತಮಾನದ ೭೦ ಮತ್ತು ೮೦ರ ದಶಕಗಳಲ್ಲಿ ಮೈಸೂರು ಸಂಸ್ಥಾನದ ಸಂಶೋಧನ ಕ್ಷೇತ್ರವನ್ನು ಪ್ರವೇಶಿಸಿದ ಐರೋಪ್ಯ ವಿದ್ವಾಂಸರು ಕೂಡ ತಮ್ಮ ತಮ್ಮ ಸಿದ್ಧ ಸೈದ್ಧಾಂತಿಕ ಮಾದರಿಗಳನ್ನು ಪರಿಶೀಲಿಸುವ ನಿಟ್ಟಿನಲ್ಲಿ ಕೈಗೊಂಡ ಸಂಶೋಧನೆಗಳೂ ಸಹ ಸ್ಥಳೀಯ ಬೌದ್ಧಿಕ ವಾರಸುದಾರಿಕೆ ಹೊಂದಿದ ಗುಂಪು ಮಾಡಿದ ತಪ್ಪನ್ನೇ ಇವರು ಕೂಡ ಮಾಡಿದರು ಎನ್ನುತ್ತಾರೆ. ಇತಿಹಾಸದ ಪುಟಗಳಲ್ಲಿ ಸ್ಥಾನ ದೊರಕಿಸಿ ಕೊಡಲು ಪ್ರಯತ್ನ ಮಾಡಿರುವುದನ್ನು ಈ ಕೃತಿಯಲ್ಲಿ ನೋಡಬಹುದು.

ಇಪ್ಪತ್ತನೇ ಶತಮಾನದ ಅಂತ್ಯ ಮತ್ತು ಇಪ್ಪತ್ತೊಂದನೆಯ ಶತಮಾನದಲ್ಲಿ ನಡೆಯುತ್ತಿರುವ ಸಮಾಜೋ-ರಾಜಕೀಯ ಚಳವಳಿಗಳು ನಾಲ್ವಡಿ ಕೃಷ್ಣರಾಜ ಒಡೆಯರನ್ನು ಸಾಮಾಜಿಕ

ನ್ಯಾಯ ಹಾಗೂ ವಿಮೋಚನೆಯ ಹರಿಕಾರ ಎಂಬ ಐಡೆಂಟಿಟಿಯ ಮುಖ್ಯ ಪ್ರವೇಶವನ್ನು ನೀಡಿದವು. ಈ ನಿಟ್ಟಿನಲ್ಲಿ ಮೈಸೂರು ಪ್ರದೇಶದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ವಲಯಗಳಲ್ಲಿ ಎಲೆ ಮರೆಕಾಯಿಯ ರೂಪದಲ್ಲಿ ಚಾಲಕಶಕ್ತಿಯಾಗಿ ಪ್ರಭಾವ ಬೀರುತ್ತಿರುವುದು ಮುಖ್ಯ. ಬ್ರಾಹ್ಮಣ-ಬ್ರಾಹ್ಮಣೇತರ ಎಂಬ ಸೈದ್ಧಾಂತಿಕತೆಯನ್ನಾಧರಿಸಿದ ಚಳವಳಿಗಳು ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದಲ್ಲೂ ಪ್ರಭಾವ ಬೀರಿದವು.

ಮೊದಲು ಮೈಸೂರು ಸಮಾಜದ ರೂಪುರೇಷೆಗಳನ್ನು ತಿಳಿಸಿದ್ದಾರೆ. ಅನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಜೀವನ ಮತ್ತು ವ್ಯಕ್ತಿತ್ವದ ವಿಕಾಸದ ಹಿನ್ನೆಲೆಯಲ್ಲಿ ಕಾರ್ಯ ನಿರ್ವಹಿಸಿದ ಶಕ್ತಿ ಅಥವಾ ಸಿದ್ಧಾಂತ, ಆಲೋಚನೆ, ಶಿಕ್ಷಣ, ಪ್ರವಾಸ ಮತ್ತು ಪ್ರಭಾವಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಮೈಸೂರು ಸಂಸ್ಥಾನದಲ್ಲಿ ಮೊದಲು ಸಂಪ್ರದಾಯ ಶಿಕ್ಷಣ ನೀಡುತ್ತಿದ್ದರು. ನಾಲ್ವಡಿ ಅವರ ಪ್ರವಾಸದಿಂದ ಅವರಲ್ಲಿ ಹೊಸ ಚಿಂತನೆಗಳು ಬೆಳೆಯಲು ಅನುಕೂಲವಾಯಿತು. ಸ್ಥಳೀಯ, ಪೌರ್ವಾತ್ಯ, ಪಾಶ್ಚಿಮಾತ್ಯ ಗೌರವಾನ್ವಿತ ಅಧಿಕಾರಿಗಳ, ಮಠಮಾನ್ಯಗಳ, ಧರ್ಮಾಧಿಕಾರಿಗಳ, ಖಾಸಗಿ ವ್ಯಕ್ತಿಗಳ, ವಸಾಹತು ಪ್ರತಿನಿಧಿಗಳ ಪ್ರಭಾವವೂ ಕೂಡ ನಾಲ್ವಡಿ ಅವರ ವ್ಯಕ್ತಿತ್ವ ವಿಕಾಸನದ ಮೇಲೆ ಪ್ರಭಾವ ಬೀರಿದವು ಎಂಬ ವಿಚಾರಗಳನ್ನು ಚರ್ಚಿಸಲಾಗಿದೆ(ಪು.೧೦೦-೧೦೮).

ನಾಲ್ವಡಿ ಕೃಷ್ಣರಾಜ ಒಡೆಯರು ಆರ್ಥಿಕತೆಯಲ್ಲಿಯೂ ಆಧುನಿಕತೆಯನ್ನು ಅಳವಡಿಸಿದರು. ವ್ಯವಸಾಯ, ಕೈಗಾರಿಕೆ, ವ್ಯಾಪಾರಗಳಲ್ಲಿ ಹೊಸಹೊಸ ಅಂಶಗಳನ್ನು ಸೇರಿಸಿದರು ಎಂಬುದು ಮುಖ್ಯ. ಆರ್ಥಿಕ ಪರಿಷತ್ತಿನ ಮೂಲಕ ಹೊಸ ಯೋಜನೆಗಳನ್ನು ಅನುಷ್ಠಾನಗೊಳಿಸಿದರು. ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಲಾಯಿತು. ಎಲ್ಲಾ ವರ್ಗದ ಜನತೆಗೆ ಶಿಕ್ಷಣ ತಲುಪುವಂತೆ ಮಾಡುವುದು ಅವಶ್ಯಕವಾಗಿತ್ತು. ಮುಖ್ಯವಾಗಿ ಪಂಚಮರಿಗೆ ಶಿಕ್ಷಣದ ಸೌಲಭ್ಯಗಳನ್ನು ಒದಗಿಸಿದ ರೀತಿ ಪ್ರಮುಖವಾದುದು(ಪು.೨೮೨-೨೮೩). ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ನೇತೃತ್ವದಲ್ಲಿ ಪಂಚಮರ ಶಿಕ್ಷಣ ಮತ್ತು ಅವರ ಸಂಘಟನೆಗೆ ಹಲವಾರು ಕಾರ್ಯಕ್ರಮಗಳು ರೂಪಿತವಾದವು ಎಂಬುದನ್ನು ವಿಶ್ಲೇಷಿಸಿದ್ದಾರೆ(ಪು.೨೮೭).

ಸಾಮಾಜಿಕ ಅನಿಷ್ಟ ಪದ್ಧತಿಗಳಿಗಾಗಿ ಕಾನೂನುಗಳನ್ನು ಜಾರಿಗೆ ತಂದರು. ಬಾಲ್ಯವಿವಾಹ ಪದ್ಧತಿ ನಿಷೇಧ, ದೇವದಾಸಿ ಪದ್ಧತಿಯ ನಿಷೇಧ, ಸ್ತ್ರೀಯರಿಗೆ ಹಕ್ಕುಗಳ ಪ್ರಧಾನ, ಅಸ್ಪೃಶ್ಯತಾ ನಿವಾರಣೆ ಇನ್ನೂ ಮುಂತಾದವುಗಳ ಬಗೆಗೆ ಕಾನೂನು ಜಾರಿಗೊಳಿಸಿದ ರೀತಿಯನ್ನು ಅನಾವರಣಗೊಳಿಸಿದ್ದಾರೆ.

ಮೈಸೂರು ಸಂಸ್ಥಾನದಲ್ಲಿನ ಭಾಷೆ, ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪದ ವಿಚಾರಗಳನ್ನು ತಿಳಿಸಿದ್ದಾರೆ. ಕನ್ನಡ ಮೈಸೂರು ಪ್ರದೇಶದ ಆಡುಭಾಷೆಯಾಗಿದ್ದು, ಸಂಪರ್ಕಭಾಷೆಯಾಗಿ ಇಂಗ್ಲಿಷ್ ಭಾಷೆ ಇತ್ತು. ಕನ್ನಡ ಭಾಷೆಯಲ್ಲಿಯೇ ಹೆಚ್ಚಿನ ಸಾಹಿತ್ಯ ಸೃಷ್ಟಿ ಆಯಿತು. ಅನಂತರ ಪಾಶ್ಚಿಮಾತ್ಯದ ಪ್ರಭಾವ ಉಂಟಾಯಿತು. ಬಿ.ಎಂ.ಶ್ರೀಕಂಠಯ್ಯ ಅವರ ಇಂಗ್ಲಿಷ್ ಗೀತೆಗಳು ಕೃತಿ ಹೊರಬಂದು ಬದಲಾವಣೆಯ ಗಾಳಿ ಬೀಸಿತು. ಹೀಗೆ ನಾಟಕ, ಸಂಗೀತದ ಮೇಲೂ

ಪಾಶ್ಚಿಮಾತ್ಯ ಪ್ರಭಾವ ಬೀರಿತು ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಒಟ್ಟಿನಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಜಾರಿಗೆ ತಂದ ಪಾಶಿಮಾತ್ಯ ಆಡಳಿತಾತ್ಮಕ ಪ್ರಯೋಗಗಳು ಮಾದರಿ ಸಂಸ್ಥಾನವಾಗಲು ಕಾರಣವಾಯಿತು ಎನ್ನುವುದು ಪ್ರಮುಖ. ಗಾಂಧೀಜಿ ಅವರು ಒಡೆಯರನ್ನು ಕುರಿತು ರಾಜರ್ಷಿ' ಅವರ ರಾಜ್ಯ 'ರಾಮರಾಜ್ಯ' ಎಂಬ ಹೊಗಳಿಕೆಯ ಮಾತುಗಳನ್ನು ಆಡಿದ್ದಾರೆ. ಒಟ್ಟಾರೆಯಾಗಿ ೨೧ನೇ ಶತಮಾನದಲ್ಲಿ ನಡೆಯುತ್ತಿರುವ ಸಾಮಾಜಿಕ ಹಾಗೂ ರಾಜಕೀಯ ಚಳವಳಿಗಳು ನಾಲ್ವಡಿ ಕೃಷ್ಣರಾಜ ಒಡೆಯರನ್ನು ಸಾಮಾಜಿಕ ಬದಲಾವಣೆಯ ಹರಿಕಾರ ಎಂಬುದು ಮುಖ್ಯ ಎಂಬುದನ್ನು ವಿಶ್ಲೇಷಿಸಿದ್ದಾರೆ. ಇವರು ಆಕರಗಳನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಮೌಖಿಕ ಆಕರವಾಗಿ ನಾಲ್ವಡಿ ಕೃಷ್ಣರಾಜ ಒಡೆಯರ ಸಂಬಂಧಿಕರು, ಸಮಕಾಲೀನ ವ್ಯಕ್ತಿಗಳನ್ನು ಸಂದರ್ಶನ ಮಾಡಿ ಬಳಸಿಕೊಳ್ಳಬಹುದಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಹೊಸಹೊಸ ಪ್ರಯೋಗಗಳನ್ನು ವಿಶ್ಲೇಷಿಸಿರುವ ಈ ಕೃತಿ ಮೌಲಿಕವಾಗಿದೆ.

ಚಿನ್ನಸ್ವಾಮಿ ಸೋಸಲೆ ಎನ್. ಅವರ ಸಂಪಾದಕತ್ವದಲ್ಲಿ **ದಿವಾನ್ ಸರ್ ಮಿರ್ಜಾ ಎಂ ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ**(೨೦೧೨)[೧೫೦]ಎಂಬ ಕೃತಿ ಪ್ರಕಟವಾಗಿದೆ. ಈ ಪ್ರಬಂಧಗಳ ಜೊತೆಗೆ ಮಿರ್ಜಾ ಇಸ್ಮಾಯಿಲ್ ಅವರಿಗೆ ಸಂಬಂಧಿಸಿದಂತೆ ಬೇರೆ ಬೇರೆ ಕೃತಿಗಳಲ್ಲಿ ಪ್ರಕಟಗೊಂಡಿರುವ ಲೇಖನಗಳನ್ನು ಮಾಹಿತಿಪ್ರಧಾನ ಅಧ್ಯಯನ ಎಂಬ ಸಂಪುಟದ ವಿಭಾಗದಲ್ಲಿ ಸೇರಿಸಿಕೊಳ್ಳಲಾಗಿದೆ. ದಿವಾನ್ ಸರ್ ಮಿರ್ಜಾ ಇಸ್ಮಾಯಿಲ್ ಅವರ ಆಳ್ವಿಕೆಯ ಕಾಲದ ದಿನದಲ್ಲಾದ ರಾಜಕೀಯ ಏಳುಬೀಳುಗಳು ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಕಂಡುಬಂದಂತಹ ಅಭಿವೃದ್ಧಿಪರ ಕಾರ್ಯಗಳ ಬಗೆಗೆ ಇರುವ ದಾಖಲೆಗಳನ್ನು ವಿಶ್ಲೇಷಿಸಿ, ವಿಮರ್ಶಿಸಿ ಅಧ್ಯಯನಕ್ಕೆ ಒಳಪಡಿಸುವುದೇ ಈ ಕೃತಿಯ ಬಹುಮುಖ್ಯ ವಾದ ಆಶಯ. ಕೃತಿಯಲ್ಲಿ ಸಂಗ್ರಹವಾಗಿರುವ ಲೇಖನಗಳು ಒಡೆಯರು ಮತ್ತು ದಿವಾನರು, ಪಾಳೆಯಗಾರರು, ಜಮೀನ್ದಾರರು, ಬಂಡವಾಳಶಾಹಿಗಳು, ಕೃಷಿಕರು, ಕಾರ್ಮಿಕರು, ದಲಿತರು ಹಾಗೂ ಸಮಾಜದ ವಿವಿಧ ವರ್ಗದ ಸ್ಥಿತ್ಯಂತರಗಳ ಕುರಿತು ಸಬಾಲ್ಟರ್ನ್ ನೆಲೆಯ ಸಮಗ್ರ ಅಧ್ಯಯನ ಮೂಡಿ ಬಂದಿದೆ. ಪ್ರಮುಖವಾಗಿ ಈ ಕೃತಿಯು ಸುದೀರ್ಘವಾಗಿ ಹದಿನೈದು ವರ್ಷಗಳ ಕಾಲ ಮೈಸೂರು ಸಂಸ್ಥಾನದ ದಿವಾನರಾಗಿ ಆಳ್ವಿಕೆ ಮಾಡಿದ ಮಿರ್ಜಾ ಇಸ್ಮಾಯಿಲ್ ಅವರನ್ನು ಕೇಂದ್ರೀಕರಿಸಿಕೊಂಡಿದ್ದರೂ ೧೯೨೬ರಿಂದ ೧೯೪೧ರವರೆಗಿನ ಮೈಸೂರು ಸಂಸ್ಥಾನದ ವಿವಿಧ ಹಂತದಲ್ಲಿ ದೇಶೀಯ ಮತ್ತು ವಸಾಹತುಶಾಹಿಗಳ ಪ್ರಭಾವದ ವಿವಿಧ ಮಜಲುಗಳನ್ನು ಅಧ್ಯಯನಕ್ಕೆ ಎಡೆ ಮಾಡಿಕೊಡುವುದು. 'ವಸಾಹತುಶಾಹಿಗಳ ಕೂಸು' ಎಂದೆನಿಸಿಕೊಂಡಿದ್ದ ಮೈಸೂರು ಸಂಸ್ಥಾನವು ದಿವಾನ್ ಮಿರ್ಜಾ ಇಸ್ಮಾಯಿಲ್ ಅವರ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಾದ ಸಾಂಸ್ಕೃತಿಕ ಪ್ರಗತಿಯ ಕುರಿತು ದೊರಕುವ ದಾಖಲೆಗಳನ್ನು ಸಮಗ್ರವಾಗಿ ಸಂಗ್ರಹಿಸಿ ನಿರೂಪಿಸುವುದರ ಜೊತೆಗೆ ಚರ್ಚೆಗೆ ಎಡೆ ಮಾಡಿಕೊಡುವಲ್ಲಿ ಪ್ರತಿಯೊಂದು ಲೇಖನವೂ ಸಹ ಮುಂದಾಗಿರುವುದನ್ನು ಗಮನಿಸಬಹುದು. ಮೈಸೂರು ಒಡೆಯರ ಚರಿತ್ರೆಯಲ್ಲಿ ಸರ್ ಎಂ.ವಿಶ್ವೇಶ್ವರಯ್ಯ ಅವರ ಚರಿತ್ರೆ ಯಥೇಚ್ಛವಾಗಿ 'ವೈಭವದ' ಚರಿತ್ರೆ ನಮ್ಮ ಮುಂದೆ ಇದೆ. ಆದರೆ ಇದುವರೆಗೂ ಎಲ್ಲೂ ಈ ಕೃತಿಯಲ್ಲಿರುವ ಹಾಗೆ ದಿವಾನ್ ಸರ್ ಮಿರ್ಜಾ

ಇಸ್ಮಾಯಿಲ್ ಅವರ ಜೀವನ–ಸಾಧನೆ–ವೈರುಧ್ಯಗಳ ಕುರಿತು ಸಮಗ್ರವಾಗಿ ಕೃತಿ ಎಲ್ಲೂ ಪ್ರಕಟಗೊಂಡಿರುವುದು ಕಂಡುಬರುವುದಿಲ್ಲ. ಇಂದು ಚರಿತ್ರೆಯಲ್ಲಿ ಪುನಾರಚನೆಗೆ ಒಳಗಾಗುತ್ತಿರುವ ವಿಷಯಗಳು ಮುಖ್ಯ ಭಾರತ ಅಥವಾ ಕರ್ನಾಟಕದ ಸಮಕಾಲೀನ ಸಂದರ್ಭದಲ್ಲಿ ಹೈದರಾಲಿ, ಟಿಪ್ಪು, ಮಿರ್ಜಾ ಇಸ್ಮಾಯಿಲ್ ಅವರ ಕುರಿತ ಕೃತಿ ರಚಿಸುವುದು, ಪ್ರಕಟಿಸುವುದು ಒಂದು ಸವಾಲಿನ ಕೆಲಸವಾಗಿಯೇ ಉಳಿದಿದೆ. ದಿನೇ ದಿನೇ ಇಂದಿನ ಸಮಾಜದಲ್ಲಿ ಉಂಟಾಗುತ್ತಿರುವ ಜಾತಿ, ಧರ್ಮ ಹಾಗೂ ಕೋಮುಭಾವನೆಯಿಂದಾಗಿ ಇದು ಇಂದು ಹೆಚ್ಚಾಗಿ ಹೊರಹೊಮ್ಮುತ್ತಿದೆ ಎಂದು ಸಂಪಾದಕರು ವಿಷಯವನ್ನು ಚರ್ಚಿಸಿದ್ದಾರೆ. ಈ ನಿಟ್ಟಿನಲ್ಲಿ ಸುಮಾರು ಹದಿನೈದು ವರ್ಷಗಳು ಮೈಸೂರಿನ ದಿವಾನರಾಗಿ, ನಾಲ್ಕು ವರ್ಷ ಜೈಪುರದ ಸಂಸ್ಥಾನ ದಿವಾನರಾಗಿ, ಒಂದು ವರ್ಷ ಹೈದ್ರಾಬಾದ್ ಸಂಸ್ಥಾನದ ದಿವಾನರಾಗಿ ಆಳ್ವಿಕೆ ನಡೆಸಿ, ಭಾರತ ರಾಷ್ಟ್ರೀಯ ಹೋರಾಟ, ಕಾಂಗ್ರೆಸ್ ನಾಯಕರು ಹಾಗೂ ಸಂಸ್ಥಾನದ ಪ್ರಗತಿಗಳೊಂದಿಗೆ ಕೆಲಸ ಮಾಡಿದ ಮಿರ್ಜಾ ಅವರ ಚರಿತ್ರೆ ಎಲ್ಲೂ ದಾಖಲಾಗದೆ ಉಳಿಯಿತು ಅಥವಾ ದಾಖಲಾಗದೆ ಉಳಿಯುವಂತೆ ಮಾಡಲಾಯಿತು. ಈ ನಿಟ್ಟಿನಲ್ಲಿ ಈ ಕೃತಿಯು ಇವರ ಎಲ್ಲಾ ವಿಚಾರಗಳನ್ನು ತಿಳಿಸುತ್ತದೆ.

ಕೃತಿಯ ಭಾಗ–೧ರಲ್ಲಿ ದಿವಾನ್ ಮಿರ್ಜಾ ಅವರ ಸಮಕಾಲೀನರಾಗಿ ಅವರನ್ನು ಕಂಡು ಆಳ್ವಿಕೆಯಲ್ಲಿ ಭಾಗಿಯಾಗಿ ಬರೆದವುಗಳಾಗಿರುವುದರಿಂದ ಲೇಖನಗಳು ಮಾಹಿತಿ ಪ್ರಧಾನವಾಗಿವೆ. ಭಾಗ–೨ರಲ್ಲಿನ ಲೇಖನಗಳು ಮುಖ್ಯವಾಗಿ ಮಾಹಿತಿಯ ಜೊತೆಗೆ ವಿಶ್ಲೇಷಣೆಗೆ ಹೆಚ್ಚಿನ ಅಧ್ಯಯನವನ್ನು ನೀಡಿರುತ್ತವೆ. ಆಧುನಿಕ ಮೈಸೂರಿನ ಚರಿತ್ರೆಯ ರಾಜಕೀಯ ಏಳು–ಬೀಳುಗಳು, ಶೈಕ್ಷಣಿಕ, ಆರ್ಥಿಕ, ಅಭಿವೃದ್ಧಿಪರ ಕಾರ್ಯಗಳು, ಕೃಷಿ, ಹೈನುಗಾರಿಕೆ ಹಾಗೂ ವ್ಯವಸ್ಥೆಯಲ್ಲಿನ ಪ್ರಗತಿ ಹಾಗೂ ದೇಶದಲ್ಲಿಯೇ ಹಲವು ಪ್ರಥಮಗಳನ್ನು ಸಾಧಿಸಲು ಮುಂದಾದ ಬಗೆಗೆ ಇರುವ ಈ ಕಾಲದ ದಾಖಲೆಗಳನ್ನು ವಿಶ್ಲೇಷಿಸಿ ವಿಮರ್ಶಿಸುವ ಪ್ರಯತ್ನವನ್ನು ಕೃತಿಯಲ್ಲಿ ಕಾಣಬಹುದು.

ನಂಜರಾಜ ಅರಸು ಪಿ.ವಿ. ಅವರು **ಅಲಮೇಲಮ್ಮನ ಶಾಪ ಒಂದು ಶವಪರೀಕ್ಷೆ (೨೦೧೨)**[೧೫೧] ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಮೈಸೂರು ಒಡೆಯರ ಚರಿತ್ರೆಗೆ ದಾಖಲಾಗಿರುವ ಶಾಪದ ವಿಚಾರವ್ನು ಚರ್ಚಿಸಿದ್ದಾರೆ. ಇದು ಮಿಥ್ ಅಥವಾ ವಾಸ್ತವವವೇ ಎಂಬುದನ್ನು ತಿಳಿಸುವ ಪ್ರಯತ್ನ ಈ ಕೃತಿಯಲ್ಲಿ ಗಮನಾರ್ಹ. ಮೊದಲಿನ ಕೃತಿಗಳಲ್ಲಿ ಚರಿತ್ರೆ ಹೇಗೆ ಮೂಡಿಬಂದಿದೆ ಎಂಬುದನ್ನು ವಿವರಿಸಿದ್ದಾರೆ. ಕೃತಿಕಾರರು ಅಲಮೇಲಮ್ಮನ ಶಾಪ ಒಂದು ಮಿಥ್ ಆಗಿದೆ ಎಂಬುದನ್ನು ಮೂಲ ಆಕರಗಳ ಅಧ್ಯಯನದ ಮೂಲಕ ತಿಳಿಸುತ್ತಾರೆ. ತಲಕಾಡು ಏಕೆ ಮರಳಾಗಿದೆ, ಮಾಲಂಗಿ ಮಡುವಾಗಿದೆ ಎಂಬುದರ ವಿಚಾರ ಇಲ್ಲಿ ಮುಖ್ಯ. ಮೈಸೂರು ದೊರೆಗಳಿಗೆ ಮಕ್ಕಳು ಆಗದಿರಲು ಕಾರಣ, ಯಾವ ರೀತಿ ಮುಂದುವರಿದಿದೆ ಎಂಬುದನ್ನು ದಾಖಲಿಸಿದ್ದಾರೆ. ಈ ರೀತಿಯ ಮಿಥ್ ಅವರವರ ಅಭಿಪ್ರಾಯಕ್ಕೆ ಬಿಟ್ಟಿದಾಗಿದೆ.

ರಾಕೇಶ್ ಹೆಚ್.ಎಸ್. ಅವರು **ಮೈಸೂರು ಒಡೆಯರು ಮತ್ತು ಶೃಂಗೇರಿ ಮಠ(೨೦೧೨)**[೧೫೨] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿಯು ಅವರ ಪಿಎಚ್.ಡಿ.ಮಹಾಪ್ರಬಂಧದ ಸಂಶೋಧನೆ ಆಗಿದೆ. ಈ ಕೃತಿಯಲ್ಲಿ ಮೈಸೂರು ಒಡೆಯರು ಮತ್ತು ಶೃಂಗೇರಿ ಮಠದ ಸಂಬಂಧಗಳ ವಿವರಗಳನ್ನು ಚರ್ಚಿಸುತ್ತಾರೆ. ಮೈಸೂರು ಒಡೆಯರು ಶೃಂಗೇರಿ ಮಠವನ್ನು ದಾನ-ದತ್ತಿಗಳ ಮೂಲಕ ಉನ್ನತೀಕರಿಸಿ, ಆಧ್ಯಾತ್ಮಿಕ ಹಿನ್ನೆಲೆ, ಗುರು ಪರಂಪರೆಯನ್ನು ಉಳಿಸಿಕೊಂಡರು. ಇಲ್ಲಿ ಮುಖ್ಯವಾಗಿ ಸಾಮಾಜಿಕ ಹಿನ್ನೆಲೆಯು ಮುಖ್ಯ ವಾದುದು. ಭೂ ಹಿಡುವಳಿ ಸಂಬಂಧಗಳು ಉತ್ತಮವಾಗಿದ್ದು, ಆರ್ಥಿಕ ಪರಿಸ್ಥಿತಿಯು ಸುಧಾರಿಸಿದರ ವಿವರಗಳನ್ನು ತಿಳಿಸಿದ್ದಾರೆ. ಕೆಳದಿ ಅರಸರು, ಮರಾಠರು, ಕೆಲವು ಸಣ್ಣ ಪುಟ್ಟ ಪಾಳೆಯಗಾರರು, ಬಿಜಾಪುರದ ಸುಲ್ತಾನರು, ಹೈದರಾಬಾದಿನ ನಿಜಾಮ ಇವರೇ ಮೊದಲಾದವರು ಈ ಮಠಕ್ಕೆ ದಾನ-ದತ್ತಿಗಳನ್ನು ನೀಡಿರುವುದನ್ನು ವಿವರಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಕೂಡ ಈ ಮಠಕ್ಕೆ ದಾನ-ದತ್ತಿಗಳನ್ನು ನೀಡಿರುವುದನ್ನು ಮಠದ ದಾಖಲೆಗಳ ಮೂಲಕ ತಿಳಿಸಿದ್ದಾರೆ. ಇದು ಒಂದು ಜಾತ್ಯಾತೀತ ತತ್ವಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ಈಗಲು ದಸರಾ ಉತ್ಸವದ ಸಂದರ್ಭದಲ್ಲಿ ಒಡೆಯರಿಗೆ ಶೃಂಗೇರಿ ಮಠದ ಪ್ರಸಾದ ವಿನಿಯೋಗವಾಗುತ್ತದೆ ಎಂಬುದು ಮುಖ್ಯ ಸಾಮಾಜಿಕವಾಗಿ ಹೆಣ್ಣಿನ ಸ್ಥಾನಮಾನ ಏನು ಎಂಬುದನ್ನು ವಿವರಿಸಿದ್ದಾರೆ. ಮೇಲ್ವರ್ಗ ಮತ್ತು ಕೆಳವರ್ಗಗಳ ಸಾಮಾಜಿಕ ವ್ಯವಸ್ಥೆಯ ವ್ಯತ್ಯಾಸವನ್ನು ಗುರುತಿಸಿದ್ದಾರೆ. ಮಠದ ಉತ್ತರಾಧಿಕಾರಿಗಳು ಮೈಸೂರು ಒಡೆಯರ ಜೊತೆ ನಿಕಟ ಸಂಪರ್ಕದಲ್ಲಿದ್ದು, ವ್ಯವಹಾರಗಳೂ ಸಮರ್ಪಕವಾಗಿ ನಡೆಯುತ್ತಿದ್ದವು ಎನ್ನುವುದು ಗಮನಾರ್ಹ. ಒಟ್ಟಾರೆಯಾಗಿ ಈ ಕೃತಿಯು ಮೈಸೂರು ಒಡೆಯರು ಶೃಂಗೇರಿ ಮಠದ ಜೊತೆ ನಿಕಟ ಸಂಬಂಧ ಹೊಂದಿದೆ ಎಂಬುದನ್ನು ವಿಸ್ತೃತವಾಗಿ ವಿವರಿಸಿದ್ದಾರೆ.

ಚಿನ್ನಸ್ವಾಮಿ ಸೋಸಲೆ ಎನ್. ಅವರ **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು(೨೦೧೩)**[೧೫೩] ಎಂಬ ಕೃತಿಯು ಆಧುನಿಕ ಸಂಸ್ಥಾನದಲ್ಲಿ ದಲಿತರ ಅಭಿವೃದ್ಧಿಗೆ ಪ್ರೇರಣೆ, ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರ ಚಳವಳಿ ಮತ್ತು ದಲಿತ ಪ್ರಜ್ಞೆಯ ಪ್ರಶ್ನೆಗಳು, ಪ್ರಭುತ್ವ ಮತ್ತು ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್, ಅವರ ದಲಿತೋದ್ಧಾರ ಕಾರ್ಯಗಳು, ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರು, ಆಧುನಿಕ ಮೈಸೂರು ಸಂಸ್ಥಾನದಲ್ಲಿ ಸಾಮಾಜಿಕ ಸುಧಾರಣಾ ಕಾನೂನುಗಳು ಎಂಬ ಅಧ್ಯಾಯಗಳನ್ನೊಳಗೊಂಡಿದೆ. ಇವು ಸಾಮಾನ್ಯವಾಗಿ ಕಂಡುಬರುವ ಅಧ್ಯಾಯಗಳಾದರೂ ಸಬಾಲ್ಟರ್ನ್ ನೆಲೆಯಲ್ಲಿ ಇವು ದಲಿತರ ಧ್ವನಿಗಳಾಗಿವೆ.

ಇಲ್ಲಿ ಪ್ರಾಥಮಿಕ ಆಕರ, ಆನುಷಂಗಿಕ ಆಕರಗಳೊಂದಿಗೆ ಜೀವಿತ ವ್ಯಕ್ತಿಗಳ ಸಂದರ್ಶನದ ಮೂಲಕ ತಲಸ್ಪರ್ಶಿ ಅಧ್ಯಯನವನ್ನು ಕೈಗೊಂಡಿರುವುದು ಗಮನಾರ್ಹವಾದುದು. ಜಾತಿಯ ವಿವಿಧ ಆಯಾಮಗಳನ್ನು ತಿಳಿಸುತ್ತಾ ಅಸ್ಪೃಶ್ಯತೆಯು ಭಯಾನಕ ಹಾಗೂ ತೀವ್ರ ಸ್ವರೂಪದ್ದು ಎಂಬುದನ್ನು ಕೆಲವು ಕೃತಿಗಳನ್ನು ಉದಾಹರಿಸುತ್ತಾ ಚರ್ಚಿಸಿರುವುದನ್ನು ಇಲ್ಲಿ ಕಾಣಬಹುದು. 'ಸಾಮ್ರಾಜ್ಯಗಳನ್ನು ಸಂಸ್ಥಾನಗಳ ಮೂಲಕ ನೋಡು' ಹಾಗೆಯೇ 'ರಾಜರ ವೈಭವದ ಚರಿತ್ರೆಯನ್ನು

ಸಾಮಾನ್ಯ ಜನರ ಜೀವನಾಧಾರದಿಂದ ನೋಡು' ಎಂದು ಹೇಳಿರುವ ಕೃತಿಕಾರರ ಮಾತುಗಳು ನಿಜಕ್ಕೂ ಸ್ವಾಗತಾರ್ಹವಾದುದ್ದೇ ಆಗಿದೆ. ಜನಮುಖಿ ಅಧ್ಯಯನ ಹೆಚ್ಚು ಪ್ರಸ್ತುತವಾಗಿರುವ ಇಂದಿನ ಸಂದರ್ಭದಲ್ಲಿ ಈ ಕೃತಿ ಮುಖ್ಯವಾದುದು.

ಆಧುನಿಕ ಮೈಸೂರು ಸಂಸ್ಥಾನದಲ್ಲಿ ದಲಿತರ ಅಭಿವೃದ್ಧಿಗೆ ಹೊರಧ್ವನಿಯ ಪ್ರಭಾವದ ಪ್ರೇರಣೆಯಲ್ಲಿ ಚರ್ಚಿಸಿರುವುದು ಇಲ್ಲಿ ಮುಖ್ಯವಾಗಿದೆ. ಸ್ವಾಮಿ ವಿವೇಕಾನಂದರ ಮೈಸೂರಿನ ಆಹ್ವಾನಕ್ಕಾಗಿ ೧೦ನೇ ಚಾಮರಾಜ ಒಡೆಯರು ಪತ್ರ ಬರೆದಿದ್ದರು. ಅದಕ್ಕೆ ಉತ್ತರವಾಗಿ ಸ್ವಾಮಿ ವಿವೇಕಾನಂದರು ಅಸ್ಪೃಶ್ಯರ ಉದ್ಧಾರಕ್ಕೆ ಏನಾದರೂ ಕಾರ್ಯಕ್ರಮಗಳನ್ನು ಹಾಕಿಕೊಂಡಿದ್ದರೆ ನಾನು ಅದನ್ನು ನೋಡಲು ಬಯಸುತ್ತೇನೆ. ಆಗ ಮಾತ್ರ ನಿಮ್ಮ ಆಹ್ವಾನವನ್ನು ಒಪ್ಪಿ ಆನಂದ ಪಡುವೆ ಎಂದು ಪತ್ರ ಬರೆದಾಗ ಇಲ್ಲಿಂದ ಅಸ್ಪೃಶ್ಯರ ಅಭಿವೃದ್ಧಿಗೆ ಹೆಚ್ಚಿನ ಮಟ್ಟದಲ್ಲಿ ಕಾರ್ಯಕ್ರಮಗಳು ರೂಪಿತವಾದವು ಎಂಬುದನ್ನು ಉದಾಹರಣೆ ಹಾಗೂ ದಾಖಲೆಗಳ ಸಹಿತ ಚರ್ಚಿಸಿರುವುದನ್ನು ಇಲ್ಲಿ ಕಾಣಬಹುದು.

ಇಲ್ಲಿ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ಮೇಲ್ವರ್ಗದಲ್ಲಿ ಹುಟ್ಟಿ ದಲಿತರ ಏಳಿಗೆಗಾಗಿ ಕೈಗೊಂಡ ಕಾರ್ಯಗಳು ಹೇಗೆ ಸಮಾಜಮುಖಿ ಆಗಿದ್ದವು ಎಂಬುದು ಮುಖ್ಯ. ಮಹಾತ್ಮ ಗಾಂಧೀಜಿ ಅವರ ಪ್ರಭಾವ ಮೈಸೂರು ಸಂಸ್ಥಾನದಲ್ಲಿ ಬಿ.ಆರ್.ಅಂಬೇಡ್ಕರ್ ಪ್ರಭಾವಕ್ಕಿಂತ ಹೆಚ್ಚಾಗಿ ಪರಿಣಾಮವನ್ನು ಬೀರಿದೆ. ಗಾಂಧೀಜಿ ಅವರು ಕೈಗೊಂಡ ಹರಿಜನೋದ್ಧಾರ ಕಾರ್ಯಗಳಲ್ಲಿ ಮೈಸೂರಿನ ತಗಡೂರು ರಾಮಚಂದ್ರರಾವ್, ಎಂ.ಎನ್.ಜೋಯಿಸ್, ಪ್ರಾಣೇಶ್ ರಾವ್, ಸಾಹುಕಾರ ಚೆನ್ನಯ್ಯ, ಎಚ್.ಸಿ.ದಾಸಪ್ಪ, ಯಶೋಧರ ದಾಸಪ್ಪ, ಕೆ.ಟಿ.ಭಾಷ್ಯಂ, ಪಂಚಮರ ಅರ್.ಗೋಪಾಲಸ್ವಾಮಿ ಅಯ್ಯರ್, ತಲಕಾಡು ರಂಗೇಗೌಡ, ವರದರಾಜ್ ಅಯ್ಯಂಗಾರ್, ಕೃಷ್ಣಶಾಸ್ತ್ರಿ ಮುಂತಾದವರು ಗುರುತಿಸಿಕೊಂಡಿದ್ದಾರೆ. ಆದರೆ ಡಾ.ಬಿ.ಆರ್. ಅಂಬೇಡ್ಕರ್ ಅವರ ಅನುಯಾಯಿಗಳು ಅವರ ಸಾಹಿತ್ಯವನ್ನು ಇಲ್ಲಿ ಜಾರಿಗೆ ತಂದು ಜಾಗೃತಿ ಮೂಡಿಸಿದರು ಎಂಬುದನ್ನು ವಿವರಿಸುತ್ತಾ, ಅವರನ್ನು ಮೈಸೂರು ಸಂಸ್ಥಾನಕ್ಕೆ ಕರೆತಂದು ಅನೇಕ ಸ್ಥಳಗಳಲ್ಲಿ ಉಪನ್ಯಾಸ ನೀಡಿಸಿದ ದಲಿತ ಮುಖಂಡರನ್ನೂ ತಿಳಿಸಿದ್ದಾರೆ. ಮುಖಂಡರಾದ ವೈ.ಸಿ.ಹೊಂಬಾಳಯ್ಯ, ರಾಮಸಿಂಗಯ್ಯ, ಎಚ್.ಎಂ.ಗಂಗಾಧರಯ್ಯ, ಸೋಸಲೆ ಎಸ್.ಎಂ. ಸಿದ್ಧಯ್ಯ, ಎನ್.ರಾಚಯ್ಯ, ಬಿ.ರಾಚಯ್ಯ, ಮಳವಳ್ಳಿ ಮೇಷ್ಟ್ರು ಮಾದಯ್ಯ, ಎಂ.ಶಂಕರಯ್ಯ ಅವರ ದಲಿತಾಭಿವೃದ್ಧಿ ಕಾರ್ಯಗಳ ಕುರಿತು ವಿವರಿಸಿದ್ದಾರೆ. ಅಂಬೇಡ್ಕರ್ ಅವರ ರಿಪಬ್ಲಿಕನ್ ಪಕ್ಷವನ್ನು ಸಂಘಟಿಸುವಲ್ಲಿ ಇವರ ಪಾತ್ರ ಬಹಳ ಮುಖ್ಯವಾದುದು ಎಂಬುದನ್ನು ದಾಖಲೆಸಹಿತ ವಿವರಿಸಿರುವುದು ಮಹತ್ವವಾಗಿದೆ. ಈ ಹಿನ್ನೆಲೆಯಲ್ಲಿ ಮೈಸೂರು ಸಂಸ್ಥಾನದಲ್ಲಿ ಅಂಬೇಡ್ಕರ್ ಅವರ ನಿಕಟ ಸಂಪರ್ಕದಿಂದಾಗಿ ಅಸ್ಪೃಶ್ಯತೆ ನಿವಾರಣೆಯ ಕುರಿತು ಕೆಲವು ಅಭಿವೃದ್ಧಿ ಕಾರ್ಯಗಳು ಜರುಗಿದವು ಎನ್ನಬಹುದು.

ಮೈಸೂರು ಸಂಸ್ಥಾನದಲ್ಲಿ ಕ್ರೈಸ್ತ ಮಿಷನರಿಗಳು ದಲಿತರಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದರ ಮೂಲಕ ದಲಿತ ಸಮಾಜದಲ್ಲಿ ಸುಧಾರಣೆಗಳನ್ನು ಯಾವ ರೀತಿ ಕೈಗೊಂಡರು

ಎಂಬುದು ಪ್ರಮುಖವಾದುದು. ಅದರಲ್ಲಿ ದಲಿತರಿಗೆ ಯಾವುದೇ ಜಾತಿತಾರತಮ್ಯ ಮಾಡದೇ ಊಟ, ವಸತಿ, ಶಿಕ್ಷಣ, ವೈದ್ಯಕೀಯ ಸೌಲಭ್ಯ, ಅನಾಥಾಲಯಗಳನ್ನು ಸ್ಥಾಪನೆ ಮಾಡಿ ಅದರ ಮೂಲಕ ಸೌಲಭ್ಯಗಳನ್ನು ಒದಗಿಸಿದರು. ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಅಧಿಕಾರ ಮತ್ತು ಇತರ ಸೌಲಭ್ಯಗಳಿಗಾಗಿ ಬ್ರಾಹ್ಮಣರ ವಿರುದ್ಧ ಬ್ರಾಹ್ಮಣೇತರರಲ್ಲಿ ಚಳವಳಿ ಆರಂಭವಾಗಿದ್ದು, ಈ ಚಳವಳಿಯಲ್ಲಿ ದಲಿತರ ಐಡೆಂಟಿಟಿಯನ್ನು ನೋಡಿದಾಗ ಯಾವುದೇ ರೀತಿಯ ಸೌಲಭ್ಯಗಳು ಇವರಿಗೆ ಇರಲಿಲ್ಲ. ಇದು ಒಂದು ರಾಜಕೀಯವಾಗಿ ಸಮಾಜದ ಕೆಳವರ್ಗದ ಜನರ ಸ್ಥಿತಿ ಹೀನಾಯವಾಗಿದ್ದು, ಹಸಿವನ್ನು ತೀರಿಸಿಕೊಳ್ಳಲಾಗದ ಸ್ಥಿತಿಯನ್ನು ನೋಡಬಹುದು. ೧೯೩೦ರಲ್ಲಿ ಶಿವರಾಮ ಕಾರಂತರು ಬರೆದ 'ಚೋಮನ ದುಡಿ' ಕೃತಿಯನ್ನು ನೋಡಿದಾಗ ದಲಿತರ ಬದುಕಿನ ಚಿತ್ರಣದೊಂದಿಗೆ, ದಲಿತರು ಕ್ರೈಸ್ತಧರ್ಮಕ್ಕೆ ಮತಾಂತರಗೊಂಡ ಬಗೆಯನ್ನು ನೋಡಬಹುದು. ಭೂಮಿಯ ಒಕ್ಕಲುತನಕ್ಕಾಗಿ ದಲಿತನೊಬ್ಬ ಮತಾಂತರಗೊಂಡ ಬಗೆಯನ್ನು ಗಮನಿಸಿದಾಗ ದಲಿತರ ಹಸಿವಿನ ಪ್ರಜ್ಞೆ ಮೂಡುತ್ತದೆ. ಕ್ರೈಸ್ತ ಮಿಷನರಿಗಳಲ್ಲಿ ಯಾವುದೇ ಸಾಮಾಜಿಕ ಸಂಕೋಲೆಗಳಿರದೇ ಶಾಲೆ, ದೇವಾಲಯಗಳಿಗೆ(ಚರ್ಚ್) ಮುಕ್ತ ಅವಕಾಶ ಇತ್ತು. ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳಲು ಯಾವುದೇ ಅಡೆತಡೆಗಳಿರಲಿಲ್ಲ. ಈ ನಿಟ್ಟಿನಲ್ಲಿ ಕ್ರೈಸ್ತ ಮಿಷನರಿಗಳೂ ದಲಿತರಿಗೆ ಮೂಲಭೂತ ಸೌಲಭ್ಯಗಳನ್ನು ನೀಡಿ ಮೈಸೂರು ಸಂಸ್ಥಾನದಲ್ಲಿ ಮತಾಂತರಗೊಳಿಸಿದ ಬಗೆಯನ್ನು ಅಧ್ಯಯನಕಾರರು ಬಹು ಸೂಕ್ಷ್ಮವಾಗಿ ಗಮನಿಸಿರುವುದನ್ನು ಈ ಕೃತಿಯಲ್ಲಿ ಗುರುತಿಸಬಹುದು. ಈ ರೀತಿಯಾಗಿ ಸಂಸ್ಥಾನದ ಹೊರಗಿನವರು ದಲಿತರ ಧ್ವನಿಗಳಾಗಿ ಕಾರ್ಯ ನಿರ್ವಹಿಸಿರುವುದನ್ನು ಗಮನಿಸಬಹುದು.

ಇಲ್ಲಿ ವ್ಯಕ್ತಿ ಮತ್ತು ಪ್ರಭುತ್ವದ ಹಿನ್ನೆಲೆಯಲ್ಲಿ ದಲಿತೋದ್ಧಾರ ಕಾರ್ಯಗಳ ಚರ್ಚೆಗಳನ್ನು ಕಾಣಬಹುದು. ಈ ಹಂತದಲ್ಲಿ ಪ್ರಮುಖವಾಗಿ ಪ್ರಭುತ್ವದ ಹಿನ್ನೆಲೆಯಲ್ಲಿ ದಲಿತರ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡು ಪಂಚಮರ ಉದ್ಧಾರಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟ ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ಕೈಗೊಂಡ ಕಾರ್ಯಗಳನ್ನು ಚರ್ಚಿಸುವುದು ಕೃತಿಯ ಮಹತ್ವವನ್ನು ಹೆಚ್ಚಿಸಿದೆ. ಪ್ರಜಾಪ್ರತಿನಿಧಿ ಸಭೆಯಲ್ಲಿ ದಲಿತರ ಶಿಕ್ಷಣಕ್ಕೆ ಅನುದಾನದ ರೂಪದಲ್ಲಿ ಹಣ ಸಂಗ್ರಹಣೆ, ಅರಮನೆ ಪ್ರವೇಶಕ್ಕೆ ಅನುಮತಿ, ಭಿಕ್ಷಾಟನಾ ನಿರ್ಮೂಲನೆಗಾಗಿ ಭಿಕ್ಷುಕರ ಪ್ರತಿಬಂಧಕ ಕಾಯಿದೆ ಜಾರಿ, ದಲಿತರು ಮತಾಂತರ ಆಗದಂತೆ ಮನವರಿಕೆ, ದೇವಾಲಯಗಳಿಗೆ ದಲಿತರ ಪ್ರವೇಶ, ಅನೇಕ ಹಾಸ್ಟೆಲ್‌ಗಳ ಸ್ಥಾಪನೆ, ಕೆರೆ, ಬಾವಿ, ಕಾಲುವೆಗಳಲ್ಲಿ ಮುಕ್ತವಾಗಿ ನೀರನ್ನು ಬಳಸುವ ಕಾನೂನಾತ್ಮಕ ಒಪ್ಪಿಗೆ ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಅಯ್ಯರ್ ಅವರು ಪ್ರಭುತ್ವದ ಜೊತೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಜಾರಿಗೆ ತರಲು ಶ್ರಮಿಸಿದರು. ಶಿಕ್ಷಣವನ್ನು ದಲಿತರಿಗೆ ಕೊಡಿಸಲು ಅಯ್ಯರ್ ಅವರ ಪರಿಶ್ರಮ ಶ್ಲಾಘನೀಯವಾದುದು ಎಂಬುದನ್ನು ಕೃತಿಕಾರರು ಸಮಗ್ರವಾಗಿ ಚರ್ಚಿಸಿದ್ದಾರೆ. ಈ ಹಂತದಲ್ಲಿ ಈ ಅಧ್ಯಯನ ಕೈಗೊಂಡಿರುವುದು ಮೊದಲ ಪ್ರಯತ್ನವೆನ್ನಬಹುದು. ದಲಿತರಿಗೆ ಅಯ್ಯರ್ ಅವರು ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಲು ಸ್ಕೌಟ್ ಅಂಡ್ ಗೈಡನ್ನು ಸ್ಥಾಪಿಸಿದರು. ಇದರ ಮೂಲಕ ದಲಿತರಿಗೆ ಕ್ರೀಡಾ ಮನೋಭಾವನೆಯನ್ನು ಬೆಳೆಸಿದರು. ಮಹಾತ್ಮ ಗಾಂಧೀಜಿ

ಅವರನ್ನೊಳಗೊಂಡಂತೆ ರಾಷ್ಟ್ರದ ಗಣ್ಯವ್ಯಕ್ತಿಗಳನ್ನು ಹಾಸ್ಟೆಲ್‌ಗೆ ಕರೆತಂದು ಪರಿಚಯಿಸುತ್ತಿದ್ದರು. ಇದರ ಪರಿಣಾಮವಾಗಿಯೇ ಇಂದಿಗೂ ಕೂಡ ನರಸಿಂಹರಾಜ ಒಡೆಯರ್ ಮತ್ತು ಬಾಪೂಜಿ ವಿದ್ಯಾರ್ಥಿ ನಿಲಯಗಳು ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವುದನ್ನು ನೋಡಬಹುದು. ದಲಿತರಿಗೆ ಸವರ್ಣೀಯರಿಗಿದ್ದ ಹಾಗೆ ಹೊಟೇಲ್‌ಗಳಿಗೆ ಪ್ರವೇಶವಿರಲಿಲ್ಲ. ನೀರನ್ನು ಮುಟ್ಟಬಾರದು ಎಂಬ ಷರತ್ತುಗಳಲ್ಲಿ ರಾವಣಿ ಘಟನೆ, ಸೋಮನಹಳ್ಳಿ ಘಟನೆ, ಹೆಮ್ಮನಹಳ್ಳಿ ಘಟನೆ, ಹುಲಿಯೂರು ದುರ್ಗ, ಮಳವಳ್ಳಿಯ ಕುನ್ನಿರುಕಟ್ಟೆ, ಕೊಮ್ಮರಹಳ್ಳಿ ಘಟನೆಗಳು ನಡೆದು ದಲಿತರ ಶೋಷಣೆಯಲ್ಲಿ ಗುರುತಿಸಿಕೊಂಡಿವೆ. ಇಂದಿಗೂ ದಲಿತರ ಶೋಷಣೆಯಲ್ಲಿ ಇಂತಹ ಘಟನೆಗಳು ನಡೆಯುತ್ತಲೇ ಇವೆ. ಇವುಗಳ ವಿಸ್ತೃತ ವಿಶ್ಲೇಷಣಾ ರೂಪವಾಗಿ ಕೃತಿ ಸಮಗ್ರವಾಗಿ ಚರ್ಚಿಸುತ್ತದೆ.

ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ದಲಿತರಿಗೆ ಶಿಕ್ಷಣ, ಉದ್ಯೋಗ ಹೀಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸಿ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಎಂದೇ ಗುರುತಿಸಿಕೊಂಡರು. ಮೈಸೂರು ಸಂಸ್ಥಾನದಲ್ಲಿ ನಾಲ್ವಡಿ ಅವರ ಸರ್ಕಾರವು ನೀಡಿದ ಸಹಕಾರದಿಂದ ಅಯ್ಯರ್ ಅವರ ಸೇವಾಕಾರ್ಯವನ್ನು ಪರಿಗಣಿಸಿ ಅವರ ಸ್ಮರಣಾರ್ಥ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿದ್ದ ಉಕ್ಕುಡಪಾಳ್ಯಕ್ಕೆ ಗೋಪಾಲಪುರ(ಇಂದಿನ ಶ್ರೀರಾಮಪುರದಲ್ಲಿ ಒಂದು ಭಾಗ) ಎಂದು ಹೆಸರಿಟ್ಟಿರುವುದು ಅವರ ಸೇವಾ ಕಾರ್ಯತತ್ಪರತೆಗೆ ಸಾಕ್ಷಿಯಾಗಿದೆ. ಇಲ್ಲಿ ಸೂಕ್ಷ್ಮವಾದ ವಿಷಯದ ಕಡೆಗೆ ಗಮನ ಹರಿಸಿದಾಗ ಇಷ್ಟೆಲ್ಲಾ ಸಾಧನೆ ಮಾಡಿದ ಇವರಿಗೆ ಸವರ್ಣೀಯರು ಹೇಗೆ ಪ್ರತಿಕ್ರಿಯಿಸಿದರು ಎಂಬುದು ಚರ್ಚಿತವೇ ಸರಿ. ಇವರು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರಾಗಿದ್ದರಿಂದ ಯಾವುದೇ ಸಮಾಜದ ಕೇರಿಗಾಗಲೀ, ಅರಮನೆಗಾಗಲೀ, ಹೋಗಬೇಕಾದರೂ ಅಡೆ-ತಡೆಗಳಿರಲಿಲ್ಲ. ಆದರೆ ದಲಿತರ ಶಿಕ್ಷಣಕ್ಕಾಗಿ ಶಾಲೆಗಳಿಗೆ ಸೇರಿಸಲು ಬಂದಾಗ ಮೇಲ್ವರ್ಗದ ಜನತೆ ವಿರೋಧಿಸಿದ್ದುಂಟು. ಆದರೆ ಎಲ್ಲೋ ಒಂದು ಕಡೆ ಬ್ರಾಹ್ಮಣ್ಯ ಎಂಬ ಐಡೆಂಟಿಟಿ ಕೆಲಸ ಮಾಡುತ್ತಿರುವುದರಿಂದ ಹೆಚ್ಚಿನ ಮಟ್ಟಿಗೆ ಪ್ರತಿರೋಧ ಉಂಟಾಗಲಿಲ್ಲ. ಹಾಗೆಯೇ ಅಂದಿನ ದಲಿತ ವರ್ಗದಲ್ಲಿಯೇ ಜನಿಸಿ ಅವರ ಏಳಿಗಾಗಿಯೇ ಅನೇಕ ಸಂಘ-ಸಂಸ್ಥೆಗಳನ್ನು ಕಟ್ಟಿದ ತಮಿಳುನಾಡಿನ ಅಯೋತಿದಾಸ್, ಭಾರತರತ್ನ ಡಾ.ಬಿ.ಆರ್.ಅಂಬೇಡ್ಕರ್ ಅವರು ಯಾಕೆ ಆರ್. ಗೋಪಾಲಸ್ವಾಮಿ ಅಯ್ಯರ್ ಅವರ ತರಹ ಗುರುತಿಸಿಕೊಳ್ಳಲಿಕ್ಕೆ ಆಗಲಿಲ್ಲ ಎಂಬ ಪ್ರಶ್ನೆ ಸಾಮಾನ್ಯವಾಗಿ ಉದ್ಭವಿಸುತ್ತದೆ. ಇದಕ್ಕೆ ಉತ್ತರವೂ ಸಹ ಬಹು ಸುಲಭವಾದದ್ದೆ ಆಗಿದೆ. ಅಂದರೆ ಜಾತಿ ಎಂಬುದು ಸಮಾಜ ವ್ಯವಸ್ಥೆಯಲ್ಲಿ ಹೇಗೆ ಕೆಲಸ ಮಾಡುತ್ತದೆ ಎಂಬುದು ಇದಕ್ಕೆ ಮುಖ್ಯ ಕಾರಣ.

ದಲಿತರು ಉನ್ನತ ಶಿಕ್ಷಣ ಮತ್ತು ಹುದ್ದೆಯನ್ನು ಪಡೆದಿದ್ದರೂ ಜಾತಿ ಎಂಬುದು ಹೇಗೆ ಕೆಲಸ ಮಾಡುತ್ತದೆ ಎನ್ನುವುದು ಮುಖ್ಯ. ಈ ಹಿನ್ನೆಲೆಯಲ್ಲಿ ದಲಿತ ಜಾತಿಯವರು ತಹಶೀಲ್ದಾರ್ ಆದರೆ ಜಮಾಬಂದಿ ತೆರಿಗೆ ಸಂಗ್ರಹಕ್ಕಾಗಿ ದೇವಾಲಯದಲ್ಲಿ ಒಳಗೆ ಕೂರುವಂತಿರಲಿಲ್ಲ. ಕಚೇರಿಗಳಲ್ಲಿ ದಲಿತ ವರ್ಗದ ಉದ್ಯೋಗಿಗಳನ್ನು ಸಭೆ ಸಮಾರಂಭ ಗಳಿಗೆ ವಿಶೇಷ ಆಹ್ವಾನವಿರಲಿಲ್ಲ. ಈ ನಿಟ್ಟಿನಲ್ಲಿ ದಲಿತರಿಗೆ ಜಾತಿ ಎಂಬುದು ನೀರಿನಲ್ಲಿರುವ ಪಾಚಿ(ಕೊಳಕು)

ಯಂತೆ ಅಂಟಿಕೊಂಡು ಇಂದಿಗೂ ಸಾಮಾಜಿಕವಾಗಿ ಮುಂದೆ ಬರಲು ಸಾಧ್ಯವಾಗುತ್ತಿಲ್ಲ ಎಂಬ ಅಂಶಗಳನ್ನು ಈ ಕೃತಿಯಿಂದ ತಿಳಿಯಬಹುದು. ದಲಿತರ ಮೇಲೆ ಇಂದಿಗೂ ದೌರ್ಜನ್ಯಗಳು ನಡೆಯುತ್ತಲೇ ಇವೆ ಎಂಬುದಕ್ಕೆ ಇದು ಉದಾಹರಣೆ.

ಅಯ್ಯರ್ ಅವರ ಪ್ರಭಾವಕ್ಕೆ ಒಳಗಾಗಿ ಶಿಕ್ಷಣ ಪಡೆದು ಉನ್ನತ ಹುದ್ದೆಗಳನ್ನು ಅಲಂಕರಿಸಿ ಸಾಧನೆಗಳನ್ನು ಮಾಡಿರುವ ವ್ಯಕ್ತಿಗಳ ಪಟ್ಟಿಯನ್ನು ಗಮನಿಸಿದಾಗ ಕರ್ನಾಟಕದಲ್ಲಿನ ದಲಿತ ಅಧಿಕಾರಿಗಳು ಹೆಚ್ಚಾಗಿ ಮೈಸೂರು ಸಂಸ್ಥಾನದಲ್ಲಿಯೇ ಗುರುತಿಸಿಕೊಂಡಿದ್ದಾರೆ. ಅದೇ ರೀತಿ ಕರ್ನಾಟಕದ ಇತರೆಡೆಗಳಲ್ಲಿ ಅಂದರೆ ಹೈದರಾಬಾದ್ ಕರ್ನಾಟಕದಲ್ಲಾಗಲೀ, ಕರಾವಳಿ ಕರ್ನಾಟಕದಲ್ಲಾಗಲೀ ದಲಿತರ ಪ್ರಗತಿಯಲ್ಲಿ ಈ ರೀತಿಯ ಕಾರ್ಯಗಳು ನಡೆದಿವೆಯೇ ಎಂಬುದರ ಬಗೆಗೂ ಸಂಶೋಧನೆ ನಡೆದು ಕೃತಿಗಳು ಬರಬೇಕಾಗಿದೆ. ಈ ದಿಕ್ಕಿನೆಡೆಗೆ ಅಧ್ಯಯನ ಸಾಗಬೇಕಾಗಿದೆ.

ಮಹಿಳೆಯರು, ಪ್ರಭುತ್ವ ಮತ್ತು ಸಮಾಜದ ದೃಷ್ಟಿಯಲ್ಲಿ ದಲಿತರ ಸ್ಥಾನಮಾನದಂತೆ ಕೆಳಮಟ್ಟದಲ್ಲಿದ್ದು, ಹೆಚ್ಚು ವ್ಯತ್ಯಾಸ ಹೊಂದಿರಲಿಲ್ಲ ಎಂಬುದು ತಿಳಿಯುತ್ತದೆ. ಇಲ್ಲಿ ಚರ್ಚಿಸಿರುವ ನಿಷೇಧಾಜ್ಞೆ ಮತ್ತು ಸಾಮಾಜಿಕ ಕಾನೂನುಗಳು, ಸವರ್ಣೀಯರ ಮತ್ತು ದಲಿತ ಮಹಿಳೆಯರ ದುಃಸ್ಥಿತಿಗಳನ್ನು ಸೂಚಿಸುತ್ತವೆ. ಜನರ ಉನ್ನತಿಗಾಗಿಯೇ ಈ ಕಾನೂನುಗಳನ್ನು ಜಾರಿಗೊಳಿಸಿದರು ಎಂಬುದು ಮುಖ್ಯ. ಕೃಷಿ, ಶಿಕ್ಷಣ ಮತ್ತು ಸಾಮಾಜಿಕ ಸ್ಥಿತಿಯಲ್ಲಿ ಮೈಸೂರು ಸಂಸ್ಥಾನ ಭಿನ್ನ ರೂಪದಲ್ಲಿ ಗೋಚರಿಸುತ್ತದೆ. ಸಾಮಾನ್ಯವಾಗಿ ಬಹುಪಾಲು ದಲಿತರ ಮುಖ್ಯ ಕಸುಬು ಕೃಷಿ ಕೆಲಸ ಮಾಡುವುದಾಗಿದೆ. ಆದರೆ ಇವರ ವೇತನದಲ್ಲಿ ತಾರತಮ್ಯವನ್ನು ನೋಡಬಹುದು. ಬೇರೊಬ್ಬರ ಮೂಲಕ ತಮ್ಮ ಹಕ್ಕುಗಳನ್ನು ಪಡೆಯುವಂತಹ ಸ್ಥಿತಿಯಿಂದ ಸ್ವತಂತ್ರವಾಗಿ ಚಿಂತಿಸುವ, ಹಕ್ಕುಗಳಿಗಾಗಿ ಹೋರಾಡುವ ಧೈರ್ಯವನ್ನು ಶಿಕ್ಷಣ ಮೂಡಿಸಿತು.

ಮೈಸೂರು ಸಂಸ್ಥಾನದಲ್ಲಿದ್ದ ಅರಮನೆ ಸಂಸ್ಕೃತಿ ಮತ್ತು ಅರಸು ವೈಭವಗಳಿಗಿಂತ ಭಿನ್ನವಾದ, ವಿಶಿಷ್ಟ ಒಳನೋಟಗಳನ್ನು ಈ ಕೃತಿಯಲ್ಲಿ ನೋಡಬಹುದು. ಮೈಸೂರು ಚರಿತ್ರೆಯನ್ನು ಭಿನ್ನ ನೆಲೆಯಲ್ಲಿ ನೋಡುವ ಅಧ್ಯಯನಕಾರರಿಗೆ ಹಾಗೂ ಸಂಶೋಧಕರಿಗೆ ಈ ಕೃತಿ ಒಂದು ಆಕರವಾಗಿ ನಿಲ್ಲುತ್ತದೆ.

ಈ ಕೃತಿಗಳಲ್ಲಿ ಮೂಡಿ ಬಂದಿರುವ ಐಡಿಯಾಲಜಿಯನ್ನು ನೋಡಿದರೆ ಪ್ರೊ.ಎಸ್. ಚಂದ್ರಶೇಖರ್ ಅವರು ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ನೆಲೆಯಲ್ಲಿ ತಮ್ಮ **ಡೈಮೆನ್ಷನ್ ಆಫ್ ಸೋಶಿಯೋ ಪೊಲಿಟಿಕಲ್ ಚೇಂಜ್ ಇನ್ ಮೈಸೂರು ೧೯೧೮-೧೯೪೦** ಕೃತಿಯನ್ನು ಬರೆದಿದ್ದಾರೆ. ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರು ಸಬಾಲ್ಟರ್ನ್ ನೆಲೆಯಲ್ಲಿ **ನಾಲ್ವಡಿ ಕೃಷ್ಣನ ಮೈಸೂರು(ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯ ಅಧ್ಯಯನ)** ಹಾಗೂ **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು** ಎಂಬ ಕೃತಿಗಳನ್ನು ಬರೆದಿದ್ದಾರೆ. ಈ ಕೃತಿಗಳ Idealogical Diffirence ಮತ್ತು Central Argument ಏನು ಎಂಬುದನ್ನು ಗಮನಿಸಿದಾಗ ಪ್ರೊ.ಎಸ್.ಚಂದ್ರಶೇಖರ್ ಅವರು ತುಳಿತಕ್ಕೊಳಪಟ್ಟ, ಐಡೆಂಟಿಟಿಯೇ ಇಲ್ಲದ

ವರ್ಗಗಳ ಸಾಮಾಜಿಕ-ಆರ್ಥಿಕ ಸ್ಥಾನಮಾನಗಳನ್ನು ತಿಳಿಸುತ್ತಾ, ರಾಜಕೀಯ ವ್ಯವಸ್ಥೆಯ ಅನಾವರಣದ ಅಂಶಗಳನ್ನು ವಿಶ್ಲೇಷಿಸುತ್ತಾರೆ. ಹಾಗೆಯೇ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರೂ ಕೂಡ ತುಳಿತಕ್ಕೊಳಪಟ್ಟ, ಐಡೆಂಟಿಟಿಯೇ ಇಲ್ಲದ ಈ ತಳಸಮುದಾಯಗಳ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿ ನೆಲೆಯ ಅಧ್ಯಯನವನ್ನು ವಿವರಿಸುತ್ತಾರೆ. ಆದರೆ ಅಷ್ಟಾಗಿ ರಾಜಕೀಯ ವಿಷಯಗಳತ್ತ ಗಮನ ಹರಿಸುವುದಿಲ್ಲ. ಈ ಕೃತಿಗಳು ರಚನೆಯಾದ ಕಾಲವನ್ನು ನೋಡಿದರೆ ಪ್ರೊ.ಎಸ್.ಚಂದ್ರಶೇಖರ್ ಅವರ ಕೃತಿಯ ಕಾಲ ೧೯೮೩. ಅಂದರೆ ಮುಖ್ಯವಾಗಿ ೧೯೭೦-೮೦ರ ದಶಕದ ಚಳವಳಿಯ ಕಾಲವಾಗಿದೆ. ರೈತ ಚಳುವಳಿ, ಸಮಾಜವಾದಿ ಚಳವಳಿ, ಜೆ.ಪಿ.ಚಳವಳಿಯ ಸಂಪೂರ್ಣ ಕ್ರಾಂತಿ, ಭೂಸುಧಾರಣೆಗಳು, ಜಾತಿವಿನಾಶ ಸಮಾವೇಶಗಳು ಚರಿತ್ರೆಯ ಸಂವಾದಕ್ಕೆ ರೂಪಿಸಿಕೊಂಡ ಕಾಲ. ಹೀಗಾಗಿ ಈ ಕಾಲದಲ್ಲಿ ಪ್ರಕಟವಾದ ಈ ಕೃತಿ ಸಾಮಾಜಿಕ ಚರಿತ್ರೆಗೆ ಮುಖಾಮುಖಿಯಾಗಿ ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿ ಸಫಲವಾಗಿದೆ. ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರ **ನಾಲ್ವಡಿ ಕೃಷ್ಣನ ಮೈಸೂರು(ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯ ಅಧ್ಯಯನ)** ಕೃತಿಯ ಕಾಲ ೨೦೦೫. ಈ ಕಾಲದಲ್ಲಿ ಮೇಲೆ ವಿವರಿಸಿದ ಚಳವಳಿಗಳಂತೆ ದಲಿತರ ಚಳವಳಿ, ಬಂಡಾಯ ಚಳವಳಿ ಅನಾವರಣಗೊಂಡಿವೆ. ಈ ನಿಟ್ಟಿನಲ್ಲಿ ಸಾಮಾಜಿಕ ಚರಿತ್ರೆಯಲ್ಲಿ ತಳಸಮುದಾಯಗಳು ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ವ್ಯಕ್ತಿಯು ಮಾಡಿದ ಅಭಿವೃದ್ಧಿ ಕಾರ್ಯಗಳ ಮೂಲಕ ಕಟ್ಟಿಕೊಡಲು ಈ ಕೃತಿಯ ಮೂಲಕ ಪ್ರಯತ್ನಿಸಿ ಸಫಲವಾಗಿದ್ದಾರೆ. ಹಾಗೆಯೇ 'ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು' ಎಂಬ ಕೃತಿಯ ಕಾಲಾವಧಿ ೨೦೧೩ ಆಗಿದ್ದು, ಚಾರಿತ್ರಿಕವಾಗಿ ಅನೇಕ ಬದಲಾವಣೆಗಳನ್ನು ಕಾಣಬಹುದು. ದಲಿತ ಎಂಬ ಪರಿಕಲ್ಪನೆಯು ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿದೆ. ಇವರ ೨೦೦೫ರ ಮೊದಲ ಕೃತಿಯಲ್ಲಿ ತಳಸಮುದಾಯಗಳಾದ ದಲಿತರು, ಶೋಷಿತರು(ಕೆಳವರ್ಗದವರು), ಕಾರ್ಮಿಕರು ಮಹಿಳೆಯರು ಮತ್ತು ಬುಡಕಟ್ಟು ಜನರ ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯಲ್ಲಿ ಕೈಗೊಂಡ ಕಾರ್ಯಗಳನ್ನು ಚರ್ಚಿಸಿದ್ದಾರೆ. ಈ ಕೃತಿಯು ಒಂದು ಮುಂದುವರಿಕೆ ಆದರೂ 'ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು' ಎಂಬ ಕೃತಿಯಲ್ಲಿ ಪ್ರತ್ಯೇಕವಾಗಿ ದಲಿತರು ಎಂಬ ಒಂದು ತಳಸಮುದಾಯದ ಐಡೆಂಟಿಟಿಯನ್ನು ಬಿಡಿಬಿಡಿಯಾಗಿ ಚರ್ಚೆ ಮಾಡಿರುವುದನ್ನು ನೋಡಬಹುದು. ಚಿಂತನೆ ಮತ್ತು ಚರಿತ್ರೆಯು ಜನಮುಖಿಯಾಗಿ ಈ ಕೃತಿಯಲ್ಲಿ ಮೂಡಿಬಂದಿದೆ. ಈ ಕೃತಿಯ ದಾಖಲೆಗಳು ಜನರೊಂದಿಗೆ ನೇರವಾಗಿ ಮಾತನಾಡುವ ರೀತಿಯಲ್ಲಿ ಸಮಗ್ರವಾಗಿ ರೂಪಿತವಾಗಿದೆ.

ಚಿದಾನಂದಮೂರ್ತಿ ಎಂ. ಅವರು **ಮೂಲ ದಾಖಲೆಗಳಲ್ಲಿ ಹುದುಗಿದ್ದ ಟಿಪ್ಪು'** (೨೦೧೩)[೧೫] ಎಂಬ ಕೃತಿಯನ್ನು ಹೊರತಂದಿದ್ದಾರೆ. ಈ ಕೃತಿ ಪ್ರಮುಖವಾಗಿ ಹೊರ ಬರಲು ಟಿಪ್ಪು ಹೆಸರಿನ ವಿಶ್ವವಿದ್ಯಾಲಯ ಸ್ಥಾಪಿಸಲು ಘೋಷಿಸಿದ ನಂತರ ವಿವಾದದ ಸಂಗತಿಯಲ್ಲಿ ಹೊರಬಂದಿದೆ. ಈ ಕೃತಿಯಲ್ಲಿ ಮೊದಲು ಒಡೆಯರ ಆಡಳಿತ, ಅನಂತರ

ಹೈದರಾಲಿ ಮತ್ತು ಟಿಪ್ಪುವಿನ ಏಳಿಗೆಯ ವಿಚಾರಗಳನ್ನು ವಿವರಿಸಿದ್ದಾರೆ. ಟಿಪ್ಪುವಿನ ಪರ–ವಿರೋಧದ ಬರಹಗಳನ್ನು ತಿಳಿಸಿದ್ದಾರೆ. ಟಿಪ್ಪು ಬಗ್ಗೆ ಇರುವ ಮೌಖಿಕ ಮಾಹಿತಿಯನ್ನು ವಿವರಿಸಿದ್ದಾರೆ. ಟಿಪ್ಪು ದಿವಾನ್ ಪೂರ್ಣಯ್ಯನನ್ನು ನಡೆಸಿಕೊಂಡ ಬಗೆಗೆ ಮೌಖಿಕ ಆಕರಗಳನ್ನು ಇಲ್ಲಿ ತಿಳಿಸಿದ್ದಾರೆ. ಪತ್ರಗಳಲ್ಲಿ ನೀಡಿರುವ ಟಿಪ್ಪುವಿನ ನಿಜಸ್ವರೂಪದ ಬಗೆಗೆ ಮಾಹಿತಿ ನೀಡಿದ್ದಾರೆ. ಶೃಂಗೇರಿ ಹಿಂದೂ ಧಾರ್ಮಿಕ ಸಂಸ್ಥೆಗಳಿಗೆ ಸಹಾಯ ಮಾಡಿದ ವಿವರಗಳಿವೆ. ಕೆ.ಎಂ.ಫಣಿಕ್ಕರ್ ಅವರು ಟಿಪ್ಪು ಸುಲ್ತಾನ ಬರೆದ ಕೆಲವು ಪತ್ರಗಳು ಎನ್ನುವ ಲೇಖನದಲ್ಲಿ ಅನ್ಯರು ಟಿಪ್ಪು ಸುಲ್ತಾನನ ಬಗ್ಗೆ ಬರೆದಾಗ, ಅವನಿಂದ ಉಪಕೃತರಾಗಿದ್ದರೆ ಹೊಗಳುತ್ತಾರೆ, ಅಪಕೃತರಾಗಿದ್ದರೆ ತೆಗಳುತ್ತಾರೆ ಎಂದಿದ್ದಾರೆ. ಟಿಪ್ಪು ಶೃಂಗೇರಿ ಮಠಗಳಿಗೆ ನೀಡಿರುವ ದಾನ ದತ್ತಿಗಳು ಅವನ ಸರ್ವಧರ್ಮ ಪ್ರೇಮ ದ್ಯೋತಕ ಎಂದು ಹಲವರು ವಾದಿಸಿದ್ದಾರೆ. ಆ ದಾಖಲೆಗಳನ್ನು ಎಚ್ಚರಿಕೆಯಿಂದ ಗಮನಿಸಿದರೆ ಒಂದು ಸಂಗತಿ ಸೂಚಿತವಾಗುತ್ತದೆ. ಟಿಪ್ಪು ತಾನೇ ಸ್ವ ಇಚ್ಛೆಯಿಂದ ದಾನ ಕೊಟ್ಟಿಲ್ಲ. ಮಠದಿಂದ ಮರಾಠರು ಸಂಪತ್ತನ್ನು ದೋಚಿದಾಗ ಹಣದ ಕೊರತೆಯಿಂದ ಬಳಲುತ್ತಿದ್ದ ಶೃಂಗೇರಿ ಮಠದ ಸಚ್ಚಿದಾನಂದ ಸ್ವಾಮಿಗಳು ಟಿಪ್ಪುವಿಗೆ ಪತ್ರ ಬರೆದು ಕೇಳಿಕೊಂಡ ಫಲವಾಗಿ ಅದಕ್ಕೆ ಟಿಪ್ಪು ಸ್ಪಂದಿಸಿದನೆಂದು ಕಾಣುತ್ತದೆ ಎಂದು ಶಾಸ್ತ್ರಿ ಅವರ ಕೃತಿಯನ್ನು ಉದಾಹರಿಸುತ್ತಾರೆ.

ವಿವಿಧ ಕೃತಿಗಳಲ್ಲಿ ಟಿಪ್ಪುವನ್ನು ಬಿಂಬಿಸಿದ ಚಿತ್ರಣವನ್ನು ನೀಡುತ್ತಾರೆ. 'ಪಟ್ಟೋಲೆ ಪಳಮೆ' ಎಂಬ ಐತಿಹಾಸಿಕ ದಾಖಲೆಯಲ್ಲಿ ಹಿಂದೂಗಳ ಮತಾಂತರ, ಕೊಡಗನ್ನು ಮುಸ್ಲಿಮಗೆ ಜಹಗೀರಾಗಿ ಕೊಟ್ಟು, ತಪ್ಪಿಸಿಕೊಂಡ ಹಿಂದೂಗಳನ್ನು ಕೊಲ್ಲಲು, ಹೆಂಗಸರು ಮತ್ತು ಮಕ್ಕಳನ್ನು ಗುಲಾಮರನ್ನಾಗಿಟ್ಟುಕೊಳ್ಳಲು ಅಪ್ಪಣೆ ಕೊಟ್ಟ ಎಂದು ವಿವರಿಸುತ್ತಾರೆ. ಐ.ಮಾ.ಮುತ್ತಣ್ಣ ಅವರು ಟಿಪ್ಪು ಕಾಲದಲ್ಲಿನ ಕೊಡುಗೆ ಮೇಲೆ ನಡೆದ ಘೋರ ಆಕ್ರಮಣವನ್ನು ಜನರು ಮರೆತಿಲ್ಲ. ಆದರೆ ರಕ್ಷಣೆ ಮಾಡಿದ ಬ್ರಿಟಿಷರನ್ನು ಮೆಚ್ಚುತ್ತಾರೆ ಎಂದಿದ್ದಾರೆ. ಷೇಕ್ ಅಲಿ ಅವರು ಟಿಪ್ಪು ತನ್ನ ರಾಜ್ಯವನ್ನು ಬ್ರಿಟಿಷರ ಕಪಿಮುಷ್ಟಿಯಿಂದ ಬಿಡಿಸಲು ಯತ್ನಿಸಿದ ಕಾರಣ, ತನ್ನ ಪ್ರಜೆಗಳ ಕ್ಷೇಮಕ್ಕಾಗಿ ಬಹುವಾಗಿ ಶ್ರಮಿಸಿದ ಟಿಪ್ಪುವು ಸ್ಮರಣೀಯ ಎಂದಿದ್ದಾರೆ. ಆದರೆ ಅವರ ಮೂಲ ದಾಖಲೆಗಳನ್ನು ಪರಿಶೀಲಿಸಿದರೆ ಅವನೊಬ್ಬ ಕ್ರೂರಿ, ಮತಾಂಧ, ಸ್ವಾರ್ಥಿ, ಕರ್ನಾಟಕದ ಚರಿತ್ರೆಗೆ ಕಳಂಕ ತಂದಿರುವವನು ಎಂಬುದು ಸ್ಪಷ್ಟವಾಗುತ್ತದೆ ಎನ್ನುತ್ತಾರೆ. ಅನೇಕ ಪ್ರಮುಖ ದಾಖಲೆಗಳನ್ನು ಅವಲಂಬಿಸಿರುವ ಈ ಕೃತಿ ಟಿಪ್ಪುವಿನ ನಿಜಚರಿತ್ರೆಯನ್ನು ಬಿಚ್ಚಿಡುತ್ತದೆ. ಭಾರತದ ಇಂದಿನ ಮುಂದಿನ ಸ್ಥಿತಿ ಬಗ್ಗೆ ಗಂಭೀರ ಚಿಂತನೆಗೆ ತೊಡಗಿಸುತ್ತವೆ ಎಂಬುದನ್ನು ಚರ್ಚಿಸಿದ್ದಾರೆ.

ತಲಕಾಡು ಚಿಕ್ಕರಂಗೇಗೌಡ ಅವರು **ಟಿಪ್ಪು ಸುಲ್ತಾನ್ ಕಾಲದ ಪ್ರಸಂಗಗಳು**(೨೦೧೩)[೧೫೫] ಎಂಬ ಕೃತಿಯನ್ನು ಹೊರ ತಂದಿದ್ದಾರೆ. ಟಿಪ್ಪು ಸುಲ್ತಾನನ ಬಗೆಗೆ ಸಾಮ್ರಾಜ್ಯಶಾಹಿ ಬ್ರಿಟಿಷರು ತಮ್ಮದೇ ಕಾರಣಗಳಿಗಾಗಿ ಇವನನ್ನು ಮತಾಂಧ, ಕ್ರೂರಿ, ನಿರಂಕುಶ ಎಂದು ಚಿತ್ರಿಸಿದರು.ಆದರೆ ಈ ಕೃತಿಯು ವಿದ್ವಾಂಸರಲ್ಲಿ ಟಿಪ್ಪು ಸುಲ್ತಾನರ ಬಗೆಗೆ ಇರುವ ತಪ್ಪು ತಿಳುವಳಿಕೆ, ಅಪಪ್ರಚಾರ ಗಳನ್ನು ನಿವಾರಿಸುತ್ತದೆ ಎನ್ನಬಹುದು. ಸತ್ಯ ಮತ್ತು ವಾಸ್ತವ ನೆಲೆಯಲ್ಲಿ ತರಲು ಈ ಕೃತಿಯು

ಶ್ರಮಿಸುತ್ತದೆ. ಈ ಕೃತಿಯಲ್ಲಿ ಸೂಕ್ಷ್ಮ ಇತಿಹಾಸ ಮೂಡಿ ಬಂದಿದ್ದು, ಇದರಲ್ಲಿ ಮನುಷ್ಯನ ಮನೋವೈಜ್ಞಾನಿಕ ಹಾಗೂ ಸಾಮಾಜಿಕ ವರ್ತನೆಗಳ ಅತಿ ಸೂಕ್ಷ್ಮ ವಿಷಯಗಳು ಚರ್ಚಿತವಾಗಿವೆ. ಇಲ್ಲಿ ಮುಖ್ಯವಾಗಿ ೧೭೬೦ರಿಂದ ೧೭೯೯ರವರೆಗೆ ಪ್ರಮುಖ ವ್ಯಕ್ತಿಗಳು, ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ಈ ಕೃತಿಯಲ್ಲಿ ತಿಳಿಸಿ, ಪಾತ್ರಧಾರಿಗಳಾಗಿ ಮಾಡಿ, ಮಾನಸಿಕ ಮತ್ತು ಮನೋವೈಜ್ಞಾನಿಕ ಸ್ಥಿತಿಯನ್ನು ತೋರಿಸಲಾಗಿದೆ. ಈ ಕೃತಿಯು ಅವನ ಯುದ್ಧಗಳು, ರಾಜರು, ಆಸ್ಥಾನಗಳ ಬಗೆಗೆ ಹೇಳದೇ ಸಾಮಾನ್ಯ ಜನರ ಸಂಗತಿ, ಮನಸ್ಸು ಮತ್ತು ವರ್ತನೆಗಳ ಬಗ್ಗೆ ಹೇಳಿದೆ. ಮನುಷ್ಯ ಮನೋವೃತ್ತಿ ಮತ್ತು ಮೌಲ್ಯಗಳು ವಿಭಿನ್ನವಾಗಿರಬಹುದು. ಉದಾಹರಣೆಗೆ ಹೈದರಾಲಿಯು ಒಬ್ಬ ಉತ್ತಮ ರಾಜನೀತಿಜ್ಞ ಮತ್ತು ವಾಸ್ತವವಾದಿ. ಆದರೆ ಟಿಪ್ಪುಸುಲ್ತಾನ್ ಒಬ್ಬ ಕ್ರಾಂತಿಕಾರಿ ಮತ್ತು ಆದರ್ಶವ್ಯಕ್ತಿ. ಹೈದರಾಲಿ ಸಂಧಾನ ಮಾಡಿಕೊಳ್ಳುತ್ತಿದ್ದ. ಆದರೆ ಟಿಪ್ಪು ಆ ರೀತಿ ಮಾಡಲಿಲ್ಲ. ನೂರು ದಿನ ಇಲಿಯಂತೆ ಬಾಳುವುದಕ್ಕಿಂತ ಒಂದು ದಿನ ಹುಲಿಯಂತೆ ಬಾಳುವುದು ಮೇಲು ಎಂದು ಭಾವಿಸಿದ್ದು, ಸ್ವಾತಂತ್ರ್ಯ ಹೋದ ಮೇಲೆ ಜೀವನವೂ ಹೋದಂತೆ ಎನ್ನುವುದು ಮುಖ್ಯ ಎಂದಿದ್ದಾರೆ.

ಟಿಪ್ಪು ಆಡಳಿತ ಕಾಲದಲ್ಲಿ ನಡೆದ ಪ್ರಸಂಗಗಳ ವಿವರಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಆ ಕಾಲದಲ್ಲಿ ಸೆರೆಸಿಕ್ಕ ಯುದ್ಧ ಕೈದಿಗಳ ಮೂಗು ಕತ್ತರಿಸುವಂತಹ ಸಂಪ್ರದಾಯಗಳು ಇದ್ದುವೆಂಬುದನ್ನು ಈ ಕೃತಿಯು ಬೆಳಕಿಗೆ ತಂದಿದೆ. ಟಿಪ್ಪು ಇದನ್ನು ವಿರೋಧಿಸಿದಾಗ ಹೈದರಾಲಿಯ ನಡುವೆ ಜಗಳ ಉಂಟಾಗಿ, ಟಿಪ್ಪು ಮನೆ ಬಿಟ್ಟು ಹೋದಾಗ ಹೈದರಾಲಿಯು ದರ್ಗಾವೊಂದರಲ್ಲಿ ಪ್ರಾರ್ಥನೆಗೆ ಹೋದನು. ಟಿಪ್ಪು ಅಲ್ಲಿಗೆ ಬಂದ. ಈ ಘಟನೆಗಳು ಆಕಸ್ಮಿಕ ವಾದರೂ ಭಿನ್ನ ಆಲೋಚನೆ ಮುಖ್ಯ

ಟಿಪ್ಪು ಸುಲ್ತಾನ್ ಶೃಂಗೇರಿ ಮಠದ ಪತ್ರ ವ್ಯವಹಾರಗಳು, ಶ್ರೀರಂಗಪಟ್ಟಣ, ನಂಜನಗೂಡು, ಮೇಲುಕೋಟೆ, ಯಡಿಯೂರು ಮುಂತಾದ ದೇವಾಲಯಗಳಿಗೆ ಬರೆದ ಪತ್ರಗಳೆಲ್ಲ ಕನ್ನಡ ಭಾಷೆಯಲ್ಲಿದ್ದು, ಟಿಪ್ಪುವಿನ ಕನ್ನಡಪ್ರೇಮವನ್ನು ತಿಳಿಸಿದ್ದಾರೆ. ಕಾಮುಕ ಪೂಜಾರಿಗಳಿಗೆ ದಂಡಿಸಿದ್ದು, ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿದ ವಿವರ ಇವೇ ಮೊದಲಾದ ವಿಚಾರಗಳನ್ನು ತಿಳಿಸಿದ್ದಾರೆ. ಹೀಗೆ ಈ ಕೃತಿಯಲ್ಲಿ ಗಮನ ಸೆಳೆಯುವ ಹತ್ತು ಹಲವು ಘಟನೆಗಳು ಇವೆ. ಈ ಕೃತಿಯಲ್ಲಿ ೩೩ ಅಧ್ಯಾಯಗಳು ಒಂದೊಂದು ಕುತೂಹಲದ ವಿಚಾರವನ್ನು ತಿಳಿಸಿವೆ.

ರವಿ ಎಂ.ಆರ್. ಅವರು **ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ**(೧೮೮೧-೧೯೪೭)(೨೦೧೪)[೧೫೭] ಎಂಬ ಕೃತಿಯನ್ನು ಹೊರ ತಂದಿದ್ದಾರೆ. ಈ ಕೃತಿಯು ಅವರ ಪಿಎಚ್.ಡಿ. ಪದವಿಗಾಗಿ ಮಾಡಿದ ಸಂಶೋಧನೆ. ಕೃತಿಕಾರರು ನಿಮ್ನವರ್ಗ(ಅಸ್ಪೃಶ್ಯರು) ಮತ್ತು ಮಹಿಳೆಯರ ಶಿಕ್ಷಣದ ಬಗ್ಗೆ ಈ ಕೃತಿಯಲ್ಲಿ ಗಮನ ಹರಿಸಿದ್ದಾರೆ. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡ ಈ ವರ್ಗಗಳು ಯಾವ ರೀತಿಯ ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆಗೆ ಒಳಗಾದರು ಎಂಬುದನ್ನು ಇಲ್ಲಿ ಚರ್ಚಿಸುವುದು ಸೂಕ್ತವಾಗಿದೆ. ಮೊದಲು ಶಿಕ್ಷಣಕ್ಕಾಗಿ ಶಾಲೆಗಳ ಪ್ರಾರಂಭ, ಅನಂತರ ಇಂಗ್ಲಿಷ್ ಶಿಕ್ಷಣದ ಪ್ರಭಾವ, ಕ್ರೈಸ್ತ ಮಿಷನರಿಗಳ

ಪಾತ್ರನ್ನು ಮೊದಲು ಚರ್ಚಿಸುತ್ತಾರೆ. ನಿಮ್ನವರ್ಗಗಳು ಯಾವ ರೀತಿಯ ಶಿಕ್ಷಣದ ಪ್ರಾರಂಭದ ಹಂತಕ್ಕೆ ಬಂದರು, ಸರ್ಕಾರದ ಅನುದಾನ ಯಾವ ರೀತಿ ದೊರೆಯಿತು ಎಂಬುದನ್ನು ತಿಳಿಸಿದ್ದಾರೆ. ೧೦ನೇ ಚಾಮರಾಜ ಒಡೆಯರ ಕಾಲದಲ್ಲಿ ಸ್ವಾಮಿ ವಿವೇಕಾನಂದರ ಮೈಸೂರಿನ ಭೇಟಿ, ಅಸ್ಪೃಶ್ಯರ ಉದ್ಧಾರಕ್ಕಾಗಿ ಶಿಕ್ಷಣದ ಸೌಲಭ್ಯಗಳ ವಿವರ, ಶಿಕ್ಷಣಕ್ಕಾಗಿ ವಿದ್ಯಾರ್ಥಿ ವೇತನ, ಹಾಸ್ಟೆಲ್‌ಗಳ ಸ್ಥಾಪನೆ, ವ್ಯಕ್ತಿಗಳು, ಸಂಘ–ಸಂಸ್ಥೆಗಳ ಪಾತ್ರವನ್ನು ಇಲ್ಲಿ ತಿಳಿಸಿದ್ದಾರೆ. ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ಪಂಚಮರ ಏಳಿಗೆಗಾಗಿ ಕೈಗೊಂಡ ಕಾರ್ಯಗಳು, ಬ್ರಾಹ್ಮಣೇತರ ಚಳವಳಿಯಿಂದ ಹಿಂದುಳಿದ ವರ್ಗಗಳಿಗೆ ದೊರಕಿದ ಸೌಲಭ್ಯಗಳನ್ನು ವಿವರಿಸಿದ್ದಾರೆ. ಇತರ ಸಂಘ–ಸಂಸ್ಥೆಗಳಾದ ಆದಿ ದ್ರಾವಿಡ ಸಂಘ, ಸಿವಿಕ್ ಆ್ಯಂಡ್ ಸೋಷಿಯಲ್ ಪ್ರೋಗ್ರೆಸ್ ಅಸೋಸಿಯೇಷನ್(ಪೌರ ಮತ್ತು ಸಾಮಾಜಿಕ ಪ್ರಗತಿ ಸಂಘ), ಕೆಂಗೇರಿಯ ಗುರುಕುಲ ಆಶ್ರಮ, ಬೆಂಗಳೂರಿನ ಮಲ್ಲೇಶ್ವರದಲ್ಲಿ ಸ್ಥಾಪಿತವಾದ ದೀನಾ ಸೇವಾಸಂಘವು ಪಂಚಮರ ಕಲ್ಯಾಣ ಕಾರ್ಯಗಳಲ್ಲಿ ತೊಡಗಿದ್ದ ವಿಚಾರಗಳನ್ನು ತಿಳಿಸಿದ್ದಾರೆ(ಪು.೮೦).

ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿರುವ ಮಹಿಳೆಯರು ಯಾವ ರೀತಿ ಆಧುನಿಕ ಶಿಕ್ಷಣವನ್ನು ಪಡೆದರು ಎಂಬುದನ್ನು ಚರ್ಚಿಸುತ್ತಾರೆ. ಮೊದಲು ಸ್ತ್ರೀಯರಿಗೆ ಶಿಕ್ಷಣವನ್ನು ಕೊಡುವುದು ಅಪರಾಧ ಎಂದು ವಿರೋಧಿಸಿದ್ದರ ನಡುವೆಯೂ ಶಾಲೆಗಳು ಪ್ರಾರಂಭವಾದ ಸಂಗತಿಗಳನ್ನು ವಿವರಿಸುತ್ತಾರೆ. ಕಲ್ಯಾಣಮ್ಮ ಮತ್ತು ರುಕ್ಮಿಣಿಯಮ್ಮ ಮೊದಲ ಬಾರಿಗೆ ಪದವಿ ಪಡೆದವರಾಗಿದ್ದರು. ಇವರು ಅನೇಕ ಸಂಘ–ಸಂಸ್ಥೆಗಳ ಮೂಲಕ ಸ್ತ್ರೀಯರ ಕಲ್ಯಾಣಕ್ಕಾಗಿ ಕಾರ್ಯಗಳನ್ನು ಕೈಗೊಂಡ ವಿಚಾರಗಳನ್ನು ವಿವರಿಸಿದ್ದಾರೆ. ಈ ನಿಟ್ಟಿನಲ್ಲಿ ಶಾರದ ಸ್ತ್ರೀ ಸಮಾಜವು ಇಂದಿಗೂ ಮಹಿಳೆಯರ ಅಭಿವೃದ್ಧಿ ಕಾರ್ಯ ಕೈಗೊಂಡಿರುವುದನ್ನು ತಿಳಿಯಬಹುದು. ಮಹಿಳೆಯರಿಗೆ ಬಾಲ್ಯವಿವಾಹ ನಿಷೇಧ, ಹಿಂದೂ ಪುನರ್ವಿವಾಹ ಕಾಯಿದೆ, ಹಿಂದೂ ಉತ್ತಾರಾಧಿಕಾರತ್ವದ ಮಸೂದೆಗಳನ್ನು ಜಾರಿಗೆ ತಂದರು. ಪಂಚಮರನ್ನು ಶಾಲೆಗೆ ಸೇರಿಸಿಕೊಳ್ಳಲು ಅವಕಾಶವನ್ನು ನೀಡಿದ್ದರ ವಿವರ ಇವೇ ಮೊದಲಾದ ವಿಚಾರಗಳನ್ನು ವಿಶ್ಲೇಷಿಸಿದ್ದಾರೆ. ಈ ನಿಟ್ಟಿನಲ್ಲಿ ಆಧುನಿಕ ಶಿಕ್ಷಣವು ಮೈಸೂರಿನ ಸಾಮಾಜಿಕ ಬದಲಾವಣೆಯಲ್ಲಿ ಮಹತ್ತರ ಪಾತ್ರ ವಹಿಸಿದೆ ಎಂಬುದನ್ನು ಕೃತಿಯಲ್ಲಿ ಚರ್ಚಿಸಿದ್ದಾರೆ.

ಚಿನ್ನಸ್ವಾಮಿ ಸೋಸಲೆ ಎನ್. ಅವರ ಸಂಪಾದಕತ್ವದಲ್ಲಿ **ಜಯಚಾಮರಾಜೇಂದ್ರ ಒಡೆಯರ ಕಾಲದ ಮೈಸೂರು ಸಂಸ್ಥಾನ'**(೨೦೧೫)[೧೫೩] ಎಂಬ ಕೃತಿ ಕರ್ನಾಟಕದ ಚರಿತ್ರೆಯಲ್ಲಿ ಮಾತ್ರವಲ್ಲ ಭಾರತದ ಚರಿತ್ರೆಯಲ್ಲಿಯೇ ಮೈಸೂರು ಸಂಸ್ಥಾನಕ್ಕೆ ವಿಶಿಷ್ಟ ಸ್ಥಾನವಿದೆ. ಆಧುನಿಕ ಮೈಸೂರಿನ ಚರಿತ್ರೆಯು ದೇಶ–ವಿದೇಶದ ಚರಿತ್ರೆಕಾರರು ಮತ್ತು ಸಾಂಸ್ಕೃತಿಕ ಚರಿತ್ರೆಯ ಚಿಂತಕರನ್ನು ಮುಖಾಮುಖಿಯಾಗಿಸಿದೆ. ಇಂಥ ಸಂದರ್ಭದ ಕೊನೆಯ ಒಡೆಯರಾದ ಜಯಚಾಮರಾಜೇಂದ್ರ ಒಡೆಯರ್ ಆಳ್ವಿಕೆಯಲ್ಲಾದ ರಾಜಕೀಯ ಪಲ್ಲಟಗಳು, ಶೈಕಣಿಕ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿ ಕಾರ್ಯಗಳನ್ನು ವಿಶ್ಲೇಷಿಸುವ ನಿಟ್ಟಿನಲ್ಲಿ ಈ ಕೃತಿಯನ್ನು ರೂಪಿಸಿದ್ದಾರೆ. ಈ ಕೃತಿಯು ಮೈಸೂರು ಸಂಸ್ಥಾನದ ಕೊನೆಯ ಒಡೆಯರಾದ ಜಯ ಚಾಮರಾಜೇಂದ್ರ ಒಡೆಯರನ್ನು ಕೇಂದ್ರೀಕರಿಸಿಕೊಂಡಿದ್ದರೂ ೧೯೪೦ರಿಂದ ೧೯೫೭ ರವರೆಗಿನ

ಮೈಸೂರು ಸಂಸ್ಥಾನದ ವಿವಿಧ ಹಂತದ ದೇಶಿಯ ಹಾಗೂ ವಸಾಹತುಶಾಹಿಗಳ ಪ್ರಭಾವದ ವಿವಿಧ ಮಜಲುಗಳನ್ನು ಅಧ್ಯಯನಕ್ಕೆ ಎಡೆ ಮಾಡಿಕೊಡುತ್ತದೆ. ಈ ಕೃತಿಯ ಲೇಖನಗಳು ಸಂಸ್ಥಾನದ ಪ್ರಗತಿಗೆ ಕಾರಣಕರ್ತರಾದ ಪಾಳೆಯಗಾರರು, ಜಮೀನುದಾರರು, ಬಂಡವಾಳಶಾಹಿಗಳು, ಕೃಷಿಕರು, ಕಾರ್ಮಿಕರು, ದಲಿತರು, ಮಹಿಳೆಯರು ಹಾಗೂ ಸಮಾಜದ ವಿವಿಧ ವರ್ಗದ ಜನರ ಸ್ಥಿತ್ಯಂತರಗಳ ಕುರಿತು ಸಬಾಲ್ಟರ್ನ್ ನೆಲೆಯಲ್ಲಿ ಅಧ್ಯಯನಕ್ಕೆ ದಾರಿ ಮಾಡಿಕೊಡುತ್ತದೆ. ಈ ಕೃತಿಯಲ್ಲಿ ಜಯಚಾಮರಾಜೇಂದ್ರ ಒಡೆಯರ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಾದ ಸಾಂಸ್ಕೃತಿಕ ಪ್ರಗತಿಯ ಕುರಿತು ದೊರಕುವ ದಾಖಲೆಗಳನ್ನು ಸಮಗ್ರವಾಗಿ ಸಂಗ್ರಹಿಸಿ ನಿರೂಪಿಸುವುದರ ಜೊತೆಗೆ ಚರ್ಚೆಗೆ ಎಡೆ ಮಾಡಿಕೊಡಲು ಈ ಲೇಖನಗಳು ಸಹಕಾರಿಯಾಗಿವೆ.

೨೦ನೇ ಶತಮಾನದ ಮೊದಲರ್ಧ ಭಾಗದಲ್ಲಿ ಮೈಸೂರು ಸಂಸ್ಥಾನದ ಆಡಳಿತದ ಚುಕ್ಕಾಣಿ ಹಿಡಿದ ಜಯಚಾಮರಾಜೇಂದ್ರ ಒಡೆಯರ ಕಾಲದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಶೈಕ್ಷಣಿಕ ಕಾಲಘಟ್ಟಗಳ ಮಹದ್ದರ್ಶನವನ್ನು ಕಟ್ಟಿಕೊಡುತ್ತದೆ. ಕೃಷಿ, ನೀರಾವರಿ, ಹೈನುಗಾರಿಕೆ, ಬೃಹತ್ ಕೈಗಾರಿಕೆ ಹಾಗೂ ಅಸ್ಪೃಶ್ಯರ ಏಳ್ಗೆಗೆ ಕೈಗೊಂಡ ಕ್ರಮಗಳು, ನಗರ ಮತ್ತು ಹಳ್ಳಿಗಳ ಅಭಿವೃದ್ಧಿಗೆ ಕೈಗೊಂಡ ಕ್ರಮಗಳು, ವ್ಯಾಪಾರ-ವಾಣಿಜ್ಯ, ಹಣಕಾಸು ನಿರ್ವಹಣೆ, ರೈಲ್ವೆ ವ್ಯವಸ್ಥೆ, ಬ್ಯಾಂಕಿಂಗ್ ವ್ಯವಸ್ಥೆ, ಭಾರತ ರಾಷ್ಟ್ರೀಯ ಚಳವಳಿ, ಗಾಂಧೀಜಿ ಹಾಗೂ ನೆಹರೂ ಅವರ ಪ್ರಭಾವ, ಸ್ಥಳೀಯ ಅಭಿವೃದ್ಧಿ, ಮೈಸೂರು ಚಲೋ ಚಳವಳಿ, ಜಯಚಾಮರಾಜೇಂದ್ರರು ರಾಜಪ್ರಮುಖ, ರಾಜ್ಯಪಾಲರಾಗಿದ್ದ ಸಂದರ್ಭ ಮುಂತಾದ ಮಹತ್ವದ ವಿಷಯಗಳ ಕುರಿತು ಐತಿಹಾಸಿಕ ಹಾಗೂ ಚಾರಿತ್ರಿಕ ಅಂಶಗಳನ್ನು ಹೊರಚೆಲ್ಲುವ ಲೇಖನಗಳು ಓದುಗರ ಹಾಗೂ ಸಂಶೋಧಕರ ಕುತೂಹಲ ಹಾಗೂ ಸಮಾಜವನ್ನು ಪರಿಭಾವಿಸುವ ನಿಟ್ಟಿನಲ್ಲಿ ಸಹಾಯಕವಾಗಿವೆ. ಇಂದು ಜನಮುಖಿ ಆಗುತ್ತಿರುವ ಚರಿತ್ರೆಯಲ್ಲಿ ಜನರ ಸ್ಪಂದನೆ ಮುಖ್ಯವಾಗಿದೆ. ಈ ಹಿನ್ನೆಲೆಯಲ್ಲಿ ಈ ಕೃತಿಯಲ್ಲಿನ ಲೇಖನಗಳ ಮಾಹಿತಿ ಸಂಗ್ರಹಿಸಿ, ಕ್ರೋಡೀಕರಿಸಿ, ವಿಶ್ಲೇಷಣೆ, ವಿಮರ್ಶೆಗೆ ಒಳಪಡಿಸಿ, ಜನಮುಖಿ ಚರಿತ್ರೆಯ ಅಸ್ಮಿತೆಯನ್ನು ಪಡೆದುಕೊಂಡಿವೆ. ಪ್ರಭುತ್ವಕೇಂದ್ರಿತವಾಗಿ ಮೈಸೂರು ಒಡೆಯರ ಚರಿತ್ರೆ ಯಥೇಚ್ಛವಾಗಿ ಮೂಡಿ ಬಂದಿದೆ. ಮೈಸೂರು ಸಂಸ್ಥಾನದ ಕೊನೆಯ ಒಡೆಯರಾದ ಜಯಚಾಮರಾಜೇಂದ್ರ ಒಡೆಯರ ಚರಿತ್ರೆಯನ್ನು ಸಮಗ್ರವಾಗಿ ತಿಳಿಸುವ ಕೃತಿ ಪ್ರಕಟವಾಗಿರಲಿಲ್ಲ. ಆದರೆ ಈ ಕೃತಿಯ ಅವರ ಆಡಳಿತದ ಎಲ್ಲಾ ವೈರುಧ್ಯಗಳನ್ನು ಬಿಂಬಿಸುತ್ತದೆ. ಚರಿತ್ರೆಯಲ್ಲಿ ಪುನರ್ ಸೃಷ್ಟಿಕೊಳ್ಳುವ ಚಲನೆ ಉಂಟಾಗುತ್ತದೆ ಎಂಬುದು ಮುಖ್ಯ. ವಸಾಹತುಶಾಹಿ ವಿರುದ್ಧ ಬಿರುಸಿನ ಚಳವಳಿ ನಡೆಯುತ್ತಿದ್ದ ಕಾಲ, ಜವಾಬ್ದಾರಿ ಸರ್ಕಾರ ರಚನೆಗೆ ಒತ್ತಾಯ, ಇಂತಹ ಸನ್ನಿವೇಶದಲ್ಲಿ ಮೈಸೂರು ಸಂಸ್ಥಾನವನ್ನು ಪ್ರಗತಿಯತ್ತ ಹೇಗೆ ದಾಪುಗಾಲು ಹಾಕಲು ಕ್ರಮಗಳನ್ನು ಕೈಗೊಂಡರು ಎಂಬುದನ್ನು ಈ ಕೃತಿಯ ಲೇಖನಗಳು ವಿಶ್ಲೇಷಿಸುತ್ತವೆ ಎಂದಿದ್ದಾರೆ. ಇಲ್ಲಿ ಜಯಚಾಮರಾಜೇಂದ್ರ ಒಡೆಯರ್ ಅವರ ಬಗೆಗೆ ಚಾರಿತ್ರಿಕವಾಗಿ ಒಂದು ಕೃತಿಯೂ ಪ್ರಕಟವಾಗದೇ ಇರುವಾಗ

ಹೊಸ ನಿರೂಪಣೆಯಲ್ಲಿ ಈ ಕೃತಿಯನ್ನು ಸಂಪಾದಿಸಿದ ಎನ್.ಚಿನ್ನಸ್ವಾಮಿ ಸೋಸಲೆ ಅವರು ಅಭಿನಂದನಾರ್ಹರು.

ಆಧುನಿಕ ಕಾಲಘಟ್ಟದ ಕೃತಿಗಳಲ್ಲಿ ಕೂಡ ವಿವರಣಾತ್ಮಕ ಮಾದರಿಯಲ್ಲಿಯೇ ರಚನೆ ಯಾಗಿರುವುದನ್ನು ಗಮನಿಸಬಹುದು. ಕೆಲವು ಕೃತಿಗಳನ್ನು ರಾಷ್ಟ್ರೀಯವಾದಿ ಧೋರಣೆಯಲ್ಲಿಯೇ ಕಟ್ಟಿದ್ದಾರೆ. ಪ್ರಭುತ್ವ ಪೂರ್ವಕವಾಗಿಯೂ ಕೃತಿಗಳು ರಚನೆಯಾಗಿವೆ. ೧೯೭೦ ಮತ್ತು ೧೯೮೦ರ ದಶಕದಲ್ಲಿ ರಚನೆಯಾದ ಕೃತಿಗಳು ಸಾಮಾಜಿಕ ಚರಿತ್ರೆಗೆ ವಿಶೇಷವಾಗಿ ಮುಖಾಮುಖಿಯಾಗಿವೆ. ಚಿಂತನೆ ಮತ್ತು ಚರಿತ್ರೆ ಹೇಗೆ ಮೂಡಿ ಬಂದಿದೆ ಎಂಬುದು ಮುಖ್ಯ. ಇಲ್ಲಿ ಒಡೆಯರ ಕೇಂದ್ರಿತ ಕೃತಿಗಳು ಮೊದಲು ವಿವರಣಾತ್ಮಕವಾಗಿ ಗುರುತಿಸಿಕೊಂಡಿವೆ. ಅನಂತರ ವಿಶ್ಲೇಷಣಾತ್ಮಕ ರೀತಿಯಲ್ಲಿ ಕಟ್ಟಿರುವುದನ್ನು ಗಮನಿಸಲಾಗಿದೆ. ಪ್ರಭುತ್ವಕ್ಕೆ ಪೂರಕವಾಗಿ ಬಂದಂತಹ ಕೃತಿಗಳು ರಾಜಕೀಯ ಹಿನ್ನೆಲೆಯನ್ನು ಹೊಂದಿವೆ. ಜನಮುಖಿ ಅಧ್ಯಯನದಲ್ಲಿ ಕೃತಿಗಳು ಇತ್ತೀಚೆಗೆ ಗುರುತಿಸಿಕೊಂಡಿದ್ದು, ಹಾಗೆಯೇ ಸಬಾಲ್ಟರ್ನ್ ನೆಲೆಯಲ್ಲಿ ಪ್ರಸ್ತುತವಾಗಿ ಕೃತಿಗಳು ಹೊರಬರುತ್ತಿವೆ. ಸಮುದಾಯಗಳ ಅಸ್ಮಿತೆಯ ಕೃತಿಗಳು ರಚನೆಯಾಗಿವೆ. ಇವತ್ತಿನ ಸಂದರ್ಭದಲ್ಲಿ ಬಿಡಿಬಿಡಿಯಾಗಿ ವಿಷಯ ಕುರಿತು ಕೃತಿಗಳು ರಚನೆ ಆಗುತ್ತಿವೆ. ಒಡೆಯರ ಅಭಿವೃದ್ಧಿ ಕಾರ್ಯಗಳಿಗೆ ಕುರಿತಂತೆ ರಚನೆಯಾದ ಕೃತಿಗಳು ದಿವಾನರ ಕಾರ್ಯಗಳನ್ನು ವಿವರಿಸಿರುವುದಿಲ್ಲ. ದಿವಾನರನ್ನು ಕುರಿತ ಕೃತಿಗಳು ಒಡೆಯರ ಕಾರ್ಯಗಳನ್ನು ವಿವರಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಕೃತಿಗಳು ಸಮಕಾಲೀನ ಅಪೇಕ್ಷೆ ಮತ್ತು ಸಾಮಾಜಿಕ ಒತ್ತಡಗಳಿಂದ ರಚನೆಯಾಗುತ್ತಿವೆ.

**ಅಡಿಟಿಪ್ಪಣಿಗಳು**

೧. ಮೋಹನ್‌ಕೃಷ್ಣ ರೈ ಕೆ., ೨೦೦೪, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨.

೨. ಶೆಲ್ಲಿ ವಾಲಿಯಾ(ಮೂಲ), ರಾಮಲಿಂಗಪ್ಪ ಟಿ.ಬೇಗೂರು(ಕನ್ನಡಕ್ಕೆ), ೨೦೦೯, ಎಡ್ವರ್ಡ್ ಡಬ್ಲ್ಯು ಸೈದ್, ಎಡ್ವರ್ಡ್ ಸೈದ್ ಮತ್ತು ಆತನ ಇತಿಹಾಸ ಬರವಣಿಗೆ, ಚಂದ್ರಗಿರಿ ಪ್ರತಿಷ್ಠಾನ, ಬೆಂಗಳೂರು, ಪು.೩೭.

೩. ವಿಜಯ್ ಪೂಣಚ್ಚ ತಂಬಂಡ(ಪ್ರಸಂ.), ರಾಜಾರಾಮ ಹೆಗಡೆ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ-೧, (ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೪೮.

೪. ಮಜುಂದಾರ್ ಆರ್.ಸಿ., ೧೯೭೦, ಹಿಸ್ಟಾರಿಯೋಗ್ರಫಿ ಇನ್ ಮಾಡರ್ನ್ ಇಂಡಿಯಾ, ಏಶಿಯಾ ಪಬ್ಲಿಷಿಂಗ್ ಹೌಸ್, ಬಾಂಬೆ, ಪು.೪೧-೪೩.

೫. ವಿಜಯ್ ಪೂಣಚ್ಚ ತಂಬಂಡ(ಪ್ರಸಂ.), ರಾಜಾರಾಮ ಹೆಗಡೆ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ-೧, (ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೫೩-೪೫೪.

೬. ವೆಂಕಟರತ್ನಂ ಎಂ.ವಿ., ಪದ್ಮ ಎಂ.ಬಿ., ೧೯೮೫(ಮರುಮುದ್ರಣ ೨೦೦೩), ಇತಿಹಾಸ ಸಂಶೋಧನಾ ಮಾರ್ಗ, ಬೆಂಗಳೂರು ಪ್ರೆಸ್, ಬೆಂಗಳೂರು, ಪು.೪೯೧–೫೦೫.

೭. ವಿಜಯ್ ಪೂಣಚ್ಚ ತಂಬಂಡ(ಪ್ರಸಂ.), ರಾಜಾರಾಮ ಹೆಗಡೆ(ಲೇ), ೨೦೧೦, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಚರಿತ್ರೆ ಸಂಪುಟ–೧, (ಆಧುನಿಕ ಭಾರತದ ಚರಿತ್ರೆ ಲೇಖನ ಮತ್ತು ಸಿದ್ಧಾಂತಗಳು), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೫೮–೪೬೪.

೮. ವಿಜಯ್ ಪೂಣಚ್ಚ ತಂಬಂಡ, ೨೦೦೯, ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೦–೬೨.

೯. ಗೋವಿಂದರಾಜು ಸಿ.ಆರ್., ೨೦೦೯, ನವಚಾರಿತ್ರಿಕವಾದ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೦.

೧೦. ಕೀತ್ ಜೆಂಕಿನ್ಸ್, ೧೯೯೧(ಮರುಮುದ್ರಣ ೨೦೦೩), ರಿ–ಥಿಂಕಿಂಗ್ ಹಿಸ್ಟರಿ, ರೂಟ್ಲೆಡ್ಜ್, ಪು.೧೫.

೧೧. ರಾಜಾರಾಮ ಹೆಗಡೆ, ೨೦೦೮, ಇತಿಹಾಸ ರಚನಾ ವಿಧಾನ ಮತ್ತು ಇತಿಹಾಸ ಲೇಖನ, ಕುವೆಂಪು ವಿಶ್ವವಿದ್ಯಾಲಯ, ಶಿವಮೊಗ್ಗ, ಪು.೫೭–೫೮.

೧೨. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ(ಎರಡನೇ ಆವೃತ್ತಿ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೭೦.

೧೩. ವಸು ಎಂ.ವಿ.(ಸಂ), ಅಶ್ವತ್ಥನಾರಾಯಣ(ಲೇ), ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ (ಸಂಶೋಧನಾ ನೆಲೆಗಳಲ್ಲಿ ಮೈಸೂರು ಚರಿತ್ರೆ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು, ಪು.೧೮೨–೧೮೩.

೧೪. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ(ಎರಡನೇ ಆವೃತ್ತಿ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೧೮೯–೧೯೧.

೧೫. ಶ್ರೀನಿವಾಸ ಹಾವನೂರು, ೧೯೭೪, ಹೊಸಗನ್ನಡದ ಅರುಣೋದಯ(ಮೊದಲನೇ ಆವೃತ್ತಿ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೨೦–೨೮.

೧೬ ಚೆನ್ನಸ್ವಾಮಿ ಸೋಸಲೆ ಎನ್., ೨೦೧೦–೧೧, ಚರಿತ್ರೆ ಅಧ್ಯಯನ, ಸಂಪುಟ ೬, ಸಂಚಿಕೆ ೧ ಮತ್ತು ೨(ಸಂಯುಕ್ತ ಸಂಚಿಕೆ), ಮೈಸೂರು ಸಂಸ್ಥಾನದಲ್ಲಿ ಕ್ರೈಸ್ತ ಮಿಷನರಿಗಳ ಪ್ರವೇಶ ಮತ್ತು ದಲಿತರ ಮತಾಂತರ: ಒಂದು ಚರ್ಚೆ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೫.

೧೭. ಶ್ರೀನಿವಾಸ ಹಾವನೂರು, ೧೯೭೪, ಹೊಸಗನ್ನಡದ ಅರುಣೋದಯ(ಮೊದಲನೇ ಆವೃತ್ತಿ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೧೨೬.

೧೮. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ(ಎರಡನೇ ಆವೃತ್ತಿ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೧೪೩

೧೯. ಮೆಕೆಂಝಿ ಕಲೆಕ್ಷನ್ ಜನರಲ್, ಮೆಮೋರೀಸ್ ಇಲಸ್ಟ್ರೇಟಿವ್ ಆಫ್ ದಿ ಜಿಯಾಗ್ರಫಿ ಆಫ್ ಸೌತ್ ಇಂಡಿಯಾ.

೨೦. ಶ್ರೀನಿವಾಸ ಹಾವನೂರು, ೨೦೦೦, ಹೊಸಗನ್ನಡದ ಅರುಣೋದಯ(ಎರಡನೇ ಆವೃತ್ತಿ), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೧೪೬–೧೪೭.

೨೧. ಬ್ಯಾರಿ ಲೂಯಿಸ್, ೨೦೦೧, ದಿ ಮೈಸೂರ್ ಕಿಂಗ್‌ಡಮ್ ಆಟ್ ೧೮೦೦ ಆರ್ಕಿಯಾಲಜಿಕಲ್ ಅಪ್ಲಿಕೇಷನ್ಸ್ ಆಫ್ ದಿ ಮೈಸೂರ್ ಸರ್ವೆ ಆಫ್ ಕಾಲಿನ್ ಮೆಕೆಂಝಿ, ಸೌತ್ ಏಷಿಯನ್ ಆರ್ಕಿಯಾಲಜಿ ವಾಲ್ಯೂಮ್–೨, ಪ್ಯಾರೀಸ್, ಪು.೫೫೭–೫೬೯.

೨೨. ಶ್ರೀನಿವಾಸ ಎಂ.ವಿ., ಏಪ್ರಿಲ್–ಜೂನ್ ೨೦೦೭, ದಿ ಕ್ವಾರ್ಟ್ ಜನರಲ್ ಆಫ್ ದಿ ಮಿಥಿಕ್ ಸೊಸೈಟಿ, ವಾಲ್ಯೂಮ್ XCVIII ನಂ.೨, ಬೆಂಗಳೂರು, ಪು.೬

೨೩. ಬುಕಾನನ್, ೧೮೦೭, ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್, ಮೂರು ಸಂಪುಟಗಳು, ಲಂಡನ್, ಮರುಮುದ್ರಣ ೨೦೧೦, ಕರ್ನಾಟಕ ಗ್ಯಾಸೆಟಿಯರ್ ಡಿಪಾರ್ಟ್‌ಮೆಂಟ್, ಬೆಂಗಳೂರು.

೨೪. ಚಂದ್ರಶೇಖರ್ ಎಸ್., ೨೦೦೬, ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೨೨–೨೩.

೨೫. ಮೆಕೆಂಝಿ, ೧೭೯೩, ಸ್ಕೇಚಸ್ ಆಫ್ ದಿ ವಾರ್ ವಿತ್ ಟಿಪ್ಪು ಸುಲ್ತಾನ್, ಕಲ್ಕತ್ತ.

೨೬. ಶರ್ಮಾ ಎಚ್.ಡಿ.(ಇಂಗ್ಲಿಷ್ ಮೂಲ), ಪ್ರಧಾನ್ ಗುರುದತ್ತ(ಕನ್ನಡಕ್ಕೆ), ೨೦೦೩, ಟಿಪ್ಪು–ನಿಜಸ್ವರೂಪ, ಸಾಹಿತ್ಯ ಸಿಂಧು ಪ್ರಕಾಶನ, ಬೆಂಗಳೂರು, ಪು.೧೪೦.

೨೭. ಶ್ರೀನಿವಾಸ ಹಾವನೂರು, ೧೯೭೪, ಹೊಸಗನ್ನಡದ ಅರುಣೋದಯ(ಮೊದಲನೇ ಆವೃತ್ತಿ), ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪೂರ್ವಾರ್ಧ, ಪು.೧೫೦.

೨೮. ಮಾರ್ಕ್ ವಿಲ್ಕ್ಸ್, ೧೮೧೦–೧೮೧೭(ಪರಿಷ್ಕೃತ ೧೯೩೦), ಹಿಸ್ಟರಿ ಆಫ್ ಮೈಸೂರು, ಹಿಸ್ಟಾರಿಕಲ್ ಸ್ಕೇಚಸ್ ಆಫ್ ಸೌತ್ ಇಂಡಿಯಾ, ಮೂರು ಸಂಪುಟಗಳು, ನವದೆಹಲಿ.

೨೯. ಚಂದ್ರಶೇಖರ್ ಎಸ್., ೨೦೦೬, ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಪು.೧೫.

೩೦. ವೆಂಕಟ ರಗೌತಮ್, ಜುಲೈ–ಡಿಸೆಂಬರ್ ೨೦೦೯, ಇಂಟರ್‌ನ್ಯಾಷನಲ್ ಜನರಲ್ ಆಫ್ ಸೌತ್ ಏಷಿಯನ್ ಸ್ಟಡೀಸ್, ವಾಲ್ಯೂಮ್–೨, ನಂ.೨(ಸೋಲ್ಜರ್, ಡಿಪ್ಲೊಮ್ಯಾಟ್, ಹಿಸ್ಟೋರಿಯನ್: ಮಾರ್ಕ್ ವಿಲ್ಕ್ಸ್ ಅಂಡ್ ದಿ ರಿಪ್ರೆಸೆಂಟೇಷನ್ಸ್ ಆಫ್ ಎಂಪೈರ್ ಇನ್ ದಿ ಆರ್ಲಿ ನೈಂಟೀನ್ತ್ ಸೆಂಚುರಿ), ಪಾಂಡಿಚೆರಿ ಯೂನಿವರ್ಸಿಟಿ, ಪಾಂಡಿಚೆರಿ.

೩೧. ವಿಲಿಯಮ್ ಕಿರ್ಕ್‌ಪ್ಯಾಟ್ರಿಕ್, ೧೮೧೧, ಸೆಲೆಕ್ಟೆಡ್ ಲೇಟರ್ಸ್ ಆಫ್ ಟಿಪ್ಪು ಸುಲ್ತಾನ್.

೩೨. ಕಬೀರ್ ಕೌಸರ್, ಸೀಕ್ರೆಟ್ ಕರೆಸ್‌ಪಾಂಡೆನ್ಸ್ ಆಫ್ ಟಿಪ್ಪು ಸುಲ್ತಾನ್.

೩೩. ಕಿರ್ಮಾನಿ, ೧೮೨೪, ದಿ ಹಿಸ್ಟರಿ ಆಫ್ ಹೈದರ್ ನಾಯಕ್, ಓರಿಯಂಟಲ್ ಟ್ರಾನ್ಸ್‌ಲೇಷನ್ ಫೌಂಡ್, ಲಂಡನ್.

೩೪. ವಸು ಎಂ.ವಿ.(ಸಂ), ಅಶ್ವತ್ಥನಾರಾಯಣ(ಲೇ), ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ (ಸಂಶೋಧನಾ ನೆಲೆಗಳಲ್ಲಿ ಮೈಸೂರು ಚರಿತ್ರೆ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು, ಪು.೨೦೧.

೩೫. ಕಿರ್ಮಾನಿ, ೧೮೨೮(ಮರುಮುದ್ರಣ ೧೮೬೪, ೧೯೮೦), ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್, ಓರಿಯಂಟಲ್ ಟ್ರಾನ್ಸ್‌ಲೇಷಲ್ ಫೌಂಡ್, ಲಂಡನ್, ಮರುಮುದ್ರಣ ೧೯೯೭, ಏಷಿಯನ್ ಎಜುಕೇಷನಲ್ ಸರ್ವಿಸ್, ನವದೆಹಲಿ.

೩೬. ಕೃಷ್ಣರಾವ್ ಪಿ., ೧೮೬೮, ಹಿಸ್ಟರಿ ಆಫ್ ಮೈಸೂರು ಫ್ರಮ್ ದಿ ಆರಿಜನ್ ಹೌಸ್ ಆಫ್ ಮೈಸೂರು ಪ್ರಿನ್ಸ್ ಅಪ್ ಟು ದಿ ಡೆತ್ ಆಫ್ ಟಿಪ್ಪು ಸುಲ್ತಾನ್, ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೩೭. ಕೃಷ್ಣಮೂರ್ತಿ ಎಂ.ಎ., ನರಸಿಂಹಮೂರ್ತಿ ಎಂ.ಎಲ್., ೧೮೮೭, ಶ್ರೀಮನ್ ಮಹಾರಾಜ ಚಾಮರಾಜೇಂದ್ರ ಒಡೆಯರ್ ಅವರ ವಂಶ ರತ್ನಾಕರ, ಬೆಂಗಳೂರು ಪ್ರೆಸ್, ಬೆಂಗಳೂರು.

೩೮. ಲಿವಿನ್ ಬಿ. ಬೌರಿಂಗ್, ೧೮೯೩, ಹೈದರಾಲಿ ಅಂಡ್ ಟಿಪ್ಪು ಸುಲ್ತಾನ್, ಆಕ್ಸ್‌ಫರ್ಡ್ ಕ್ಲಾರಿಡನ್ ಪ್ರೆಸ್, ಲಂಡನ್.

೩೯. ಶಾಮರಾವ್ ಎಂ., ೧೮೯೧, ಟೆನ್ ಇಯರ್ಸ್ ಆಫ್ ನೇಟೀವ್ ರೂಲ್ ಇನ್ ಮೈಸೂರ್, ಗೌರ್ನಮೆಂಟ್ ಪ್ರೆಸ್, ಬೆಂಗಳೂರು

೪೦. ಶಾಮರಾವ್ ಎಂ., ೧೮೯೩, ಮಹಿಸೂರು ಸಂಸ್ಥಾನದ ಚರಿತ್ರೆ, ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೪೧. ನಾರಾಯಣ ಅಯ್ಯಂಗಾರ್ ಎಂ.ಎ., ಶ್ರೀನಿವಾಸಾಚಾರ್ ಎಂ.ಎ., ೧೯೦೨(ಮರು ಮುದ್ರಣ ೧೯೮೧), ದಿ ಮೈಸೂರು ಪ್ರಧಾನ್ಸ್, ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೪೨. ಶಿಂಗ್ರಯ್ಯ ಎಂ., ೧೯೦೫, ಮೈಸೂರು ಮಹಾರಾಜಾಧಿರಾಜ ಶ್ರೀಚಾಮರಾಜೇಂದ್ರ ಒಡೆಯರವರ ಚರಿತ್ರೆ, ಗ್ರಾಸಿಯಸ್ ಪ್ರೀಮಿಸನ್ ಆಫ್ ಹಿಸ್ ಹಿಗ್ಗಿಸ್ ಶ್ರೀ ಕೃಷ್ಣರಾಜ ಒಡೆಯರ್ ಬಹುದೂರ್, ಮೈಸೂರು.

೪೩. ರಾಮಕೃಷ್ಣರಾವ್ ಬಿ., ೧೯೧೬–೧೯೨೨, ಮೈಸೂರು ಸಂಸ್ಥಾನದ ಪ್ರಭುಗಳು ಶ್ರೀಮನ್ಮಹಾರಾಜ ರವರ ವಂಶಾವಳಿ, ಮೈಸೂರು ಸರ್ಕಾರ ಪ್ರೆಸ್, ಮೈಸೂರು.

೪೪. ಶಾಮರಾವ್ ಎಂ., ೧೯೨೧, ಮೈಸೂರು ಸಂಸ್ಥಾನದ ಚರಿತ್ರೆಸಾರ, ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೪೫. ದಿ ಪೊಲಿಟಿಕಲ್ ಹಿಸ್ಟರಿ ಆಫ್ ಮೈಸೂರು, ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೪೬. ಸುಬ್ಬರಾವ್ ಎನ್., ೧೯೩೨, ಮೈಸೂರು ವಡೆಯರ ಎರಡು ಶತಮಾನಗಳ ಆಳಿಕೆ(೧೫೬೫–೧೭೬೧), ಶ್ರೀಮತ್ಕನ್ಯಕಾಪರಮೇಶ್ವರಿ ಪ್ರೆಸ್, ಮೈಸೂರು.

೪೭. ವೆಂಕಟಸುಬ್ಬಾಶಾಸ್ತ್ರಿ ಕೆ.ಎನ್., ೧೯೩೨, ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರು ಅಂಡರ್ ಸರ್ ಮಾರ್ಕ್ ಕಬ್ಬನ್ ೧೮೩೪–೧೮೬೧, ಲಂಡನ್.

೪೮. ಸುಬ್ಬರಾವ್ ಎನ್.ಎಸ್., ೧೯೩೭, ಮೈಸೂರು ಕೈಪಿಡಿ, ಮೈಸೂರು ಪ್ರೆಸ್, ಮೈಸೂರು.

೪೯. ಶಾಮರಾವ್ ಎಂ., ೧೯೩೬, ಮಾಡರ್ನ್ ಮೈಸೂರು–ಎರಡು ಸಂಪುಟಗಳು, ಹಿಗ್ಗಿನ್ಸ್ ಬಾಥಮ್ಸ್, ಬೆಂಗಳೂರು.

೫೦. ವಸು ಎಂ.ವಿ.(ಸಂ), ಅಶ್ವತ್ಥನಾರಾಯಣ(ಲೇ), ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ, (ಸಂಶೋಧನಾ ನೆಲೆಗಳಲ್ಲಿ ಮೈಸೂರು ಚರಿತ್ರೆ), ಚಿಂತನ ಪುಸ್ತಕ ಪ್ರಕಾಶನ, ಬೆಂಗಳೂರು, ಪು.೧೮೭.

೫೧. ಜಯಸಿಂಹರಾವ್ ಸಿ.ಕೆ., ೧೯೪೦, ನಾಲ್ವಡಿ ಕೃಷ್ಣನ ಮೈಸೂರು, ಎಲೆಕ್ಟ್ರಿಕ್ ಪ್ರೆಸ್, ತುಮಕೂರು.

೫೨. ಜಯಸಿಂಹರಾವ್ ಸಿ.ಕೆ., ೧೯೪೦, ಪ್ರಗತಿಪರ ಮೈಸೂರು, ಎಲೆಕ್ಟ್ರಿಕ್ ಪ್ರೆಸ್, ತುಮಕೂರು.

೫೩. ವೆಂಕಟೇಶ ಭೀಮರಾವ ಆಲೂರು, ೧೯೪೦, ಕರ್ನಾಟಕ ವೀರರತ್ನಗಳು, ಕರ್ನಾಟಕ ಸಾಹಿತ್ಯ ಮಂದಿರ, ಧಾರವಾಡ, ಪು.೧೨೩–೧೩೦.

೫೪. ತಿ.ತಾ.ಶರ್ಮ, ೧೯೪೦, ಮೈಸೂರು ರಾಜಕೀಯ ಸುಧಾರಣೆಗಳ ತಿರುಳು, ವಿಶ್ವಕರ್ನಾಟಕ, ಬೆಂಗಳೂರು.

೫೫. ಶಿಂಗ್ರಯ್ಯ ಎಂ., ೧೯೪೧, ಮೈಸೂರಿನ ಆಳಿದ ಮಹಾಸ್ವಾಮಿಯವರಾದ ನಾಲ್ವಡಿ ಕೃಷ್ಣರಾಜ ಒಡೆಯರವರು, ಗೌರ್ನಮೆಂಟ್ ಪ್ರೆಸ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.

೫೬. ವೆಂಕಟರಾಮಯ್ಯ ಸಿ.ಕೆ., ೧೯೪೧(ಮರುಮುದ್ರಣ ೨೦೧೧), ಆಳಿದ ಮಹಾಸ್ವಾಮಿಯವರು (ದಿವಂಗತರಾದ ಶ್ರೀಮನ್ಮಹಾರಾಜ ಶ್ರೀಮನ್ನಾಲ್ವಡಿ ಶ್ರೀಕೃಷ್ಣ ರಾಜೇಂದ್ರ ಒಡೆಯರವರ ಜೀವನ ಚರಿತ್ರೆ), ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೫೭. ಲಿಂಗಯ್ಯ ಓ.ಎಂ., ೧೯೪೧, ಮುಮ್ಮಡಿ ಶ್ರೀಕೃಷ್ಣರಾಜ ಒಡೆಯರು, ದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು.

೫೮. ರಾಜಾರಾವ್ ವಿ.ಎಂ., ೧೯೪೬, ಆಧುನಿಕ ಮೈಸೂರು ನಿರ್ಮಾಪಕರು, ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಬೆಂಗಳೂರು.

೫೯. ಹಯವದನರಾವ್ ಸಿ., ೧೯೪೩–೧೯೪೬, ಹಿಸ್ಟರಿ ಆಫ್ ಮೈಸೂರು–ಮೂರು ಸಂಪುಟಗಳು, ಮೈಸೂರು ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೬೦. ಜೊಸನರ್ ಜಯಾರ್, ೧೯೫೧, ಹಿಸ್ಟರಿ ಆಫ್ ಮೈಸೂರ್ ಆ್ಯಂಡ್ ದಿ ಯಾದವ ಡೈನಾಸ್ಟಿ, ಮೈಸೂರು ಸರ್ಕಾರದ ಮುದ್ರಣಾಲಯ, ಬೆಂಗಳೂರು.

೬೧. ಮೊಹಿಬುಲ್ ಹಸನ್ ಖಾನ್, ೧೯೫೧, ಹಿಸ್ಟರಿ ಆಫ್ ಟಿಪ್ಪು ಸುಲ್ತಾನ್, ಬಿಬ್ಲೋಪಿಲೆ ಲಿಮಿಟೆಡ್, ಕಲ್ಕತ್ತ.

೬೨. ನಾರಾಯಣ ರಾವ್ ವಿ.ಎನ್., ೧೯೫೨(ಮರುಮುದ್ರಣ, ೧೯೭೮), ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ, ಗೀತಾ ಬುಕ್ ಹೌಸ್, ಮೈಸೂರು.

೬೩. ತಿರುಮಲೆ ತಾತಾಚಾರ್ಯ ಶರ್ಮ, ೧೯೫೬, ಮೈಸೂರು ಸಂಸ್ಥಾನದ ಸಂಗ್ರಾಮೇತಿಹಾಸ ಸಂಗ್ರಹ, ಮೈಸೂರು ಸರ್ಕಾರದ ಮುದ್ರಣಾಲಯ, ಬೆಂಗಳೂರು.

೬೪. ತಿರುಮಲ ತಾತಾಚಾರ್ಯ ಶರ್ಮ, ೧೯೬೦, ಭಾರತರತ್ನ ಎಂ.ವಿಶ್ವೇಶ್ವರಯ್ಯ, ಲೋಕ ಶಿಕ್ಷಣ ಟ್ರಸ್ಟ್ ಪ್ರಕಾಶನ, ಬೆಂಗಳೂರು.

೬೫. ಮಾಸ್ತಿ ವೆಂಕಟೇಶ ಅಯ್ಯಂಗಾರ್, ೧೯೬೦, ಸರ್.ಎಂ.ವಿಶ್ವೇಶ್ವರಯ್ಯ, ಜೀವನ ಕಾರ್ಯಾಲಯ, ಬೆಂಗಳೂರು.

೬೬. ದಿವಾಕರ್ ಆರ್.ಆರ್., ೧೯೬೮, ಕರ್ನಾಟಕ ಥ್ರೂ ದಿ ಏಜಸ್, ದಿ ಗೌರ್ನಮೆಂಟ್ ಆಫ್ ಮೈಸೂರು, ಬೆಂಗಳೂರು.

೬೭. ಪ್ರಾಕ್ಸಿ ಫೆರ್ನಂಡಸ್, ೧೯೬೯(ಮರುಮುದ್ರಣ, ೧೯೯೧), ದಿ ಟೈಗರ್ಸ್ ಆಫ್ ಮೈಸೂರು– ಎ ಬಯಾಗ್ರಫಿ ಆಫ್ ಹೈದರ್ ಅಲಿ ಆ್ಯಂಡ್ ಟಿಪ್ಪು ಸುಲ್ತಾನ, ವೈಕಿಂಗ್ ಪಬ್ಲಿಕೇಷನ್, ನ್ಯೂ ಡೆಲ್ಲಿ.

೬೮. ಕೃಷ್ಣರಾವ್ ಎಂ.ವಿ., ಕೇಶವಭಟ್ಟ ಎಂ., ೧೯೭೦, ಇತಿಹಾಸ ದರ್ಶನ, ಬೆಂಗಳೂರು.

೬೯. ದೇಸಾಯಿ ಪಿ.ಬಿ., ಎಚ್.ಎಚ್.ರಿತ್ತಿ, ಬಿ.ಆರ್.ಗೋಪಾಲ್, ೧೯೭೦, ಎ ಹಿಸ್ಟರಿ ಆಫ್ ಕರ್ನಾಟಕ, ಕನ್ನಡ ರಿಸರ್ಚ್ ಇನ್ಸ್ಟಿಟ್ಯೂಟ್, ಕರ್ನಾಟಕ ಯೂನಿರ್ವಸಿಟಿ ಧಾರವಾಡ.

೭೦. ಫಜಲ್ ಹಸನ್ ಎಂ., ೧೯೭೦, ಬೆಂಗಳೂರು ಥ್ರೂ ದ ಸೆಂಚುರೀಸ್, ಹಿಸ್ಟಾರಿಕಲ್ ಪಬ್ಲಿಕೇಷನ್ಸ್, ಬೆಂಗಳೂರು.

೭೧. ಡೆನ್ನಿ ಫಾರ್ರೆಸ್ಟ್, ೧೯೭೦, ಟೈಗರ್ ಆಫ್ ಮೈಸೂರ್, ನ್ಯೂ ಡೆಲ್ಲಿ.

೭೨. ಮಾನಪ್ಪ ನಾಯಕ ಎಚ್., ೧೯೭೦, ಮುಮ್ಮಡಿ ಕೃಷ್ಣರಾಜ ಒಡೆಯರು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭೩. ಗುಂಡಪ್ಪ ಡಿ.ವಿ., ೧೯೭೧, ಮೈಸೂರಿನ ದಿವಾನರುಗಳು, ಜ್ಞಾಪಕ ಚಿತ್ರಶಾಲೆ, ಸಂಪುಟ– ೪, ಕಾವ್ಯಾಲಯ ಪ್ರಕಾಶನ, ಮೈಸೂರು.

೭೪. ಶ್ರೀನಿವಾಸ ಅಯ್ಯಂಗಾರ್ ಸಿ.ಆರ್., ೧೯೭೧, ಮೈಸೂರು ರಾಜ್ಯದ ಮಹಾಶಿಲ್ಪಿ ಶ್ರೀಕೃಷ್ಣರಾಜ ಒಡೆಯರು, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೭೫. ಶ್ರೀಧರಮೂರ್ತಿ ಮ., ೧೯೭೨, ಒಡೆಯರು ಮತ್ತು ಮೈಸೂರು, ಕರ್ನಾಟಕ ಸಹಕಾರಿ ಪ್ರಕಾಶನ, ಬೆಂಗಳೂರು.

೭೬. ಇನಾಂದಾರ್ ವಿ.ಎಂ.(ಸಂ), ನರಸಿಂಹಮೂರ್ತಿ ಎನ್.ಕೆ., ೧೯೭೩, ದಿವಾನ್ ಪೂರ್ಣಯ್ಯ, ಐ.ಬಿ.ಎಚ್. ಪ್ರಕಾಶನ, ಬೆಂಗಳೂರು.

೭೭. ತಿ.ತಾ.ಶರ್ಮ, ೧೯೭೩, ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ, ಸಾಹಿತ್ಯ ಸಂಘ, ಧಾರಾವಾಡ.

೭೮. ಶ್ರೀನಿವಾಸ ಹಾವನೂರ, ೨೦೦೦, ಹೊಸಗನ್ನಡ ಅರುಣೋದಯ(ಎರಡನೆಯ ಆವೃತ್ತಿ ೨೦೦೦), ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೭೯. ನಾರಾಯಣರಾವ್ ವಿ.ಎಸ್. ೧೯೭೫(ಮರುಮುದ್ರಣ ೨೦೦೯), ಮಿರ್ಜಾ ಇಸ್ಮಾಯಿಲ್ ಅವರ ಜೀವನ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೮೦. ವೀರತಪ್ಪ ಕೆ., ೧೯೭೭, ಮೈಸೂರು ಸಂಸ್ಥಾನದ ಸ್ವಾತಂತ್ರ್ಯ ಚಳವಳಿ, ವಿಜಯರವಿ ಪ್ರಕಾಶನ, ಬೆಂಗಳೂರು.

೮೧. ವಸು ಎಂ.ವಿ.(ಸಂ), ಅಶ್ವತ್ಥನಾರಾಯಣ(ಲೇ), ೨೦೦೯, ಕನ್ನಡದೊಳ್ ಭಾವಿಸಿದ ಜನಪದಂ(ಸಂಶೋಧನಾ ನೆಲೆಗಳಲ್ಲಿ ಮೈಸೂರು ಚರಿತ್ರೆ), ಚಿಂತನ ಪ್ರಕಾಶನ, ಬೆಂಗಳೂರು, ಪು.೧೯೦.

೮೨. ಜೇಮ್ಸ್ ಮೇನರ್, ೧೯೭೮, ಪೊಲಿಟಿಕಲ್ ಚೇಂಜ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು ೧೯೧೭-೧೯೫೫, ಸೌತ್ ಏಷಿಯಾ ಬುಕ್ಸ್, ನ್ಯೂಡೆಲ್ಲಿ.

೮೩. ಬಿ.ಹೆಟ್ನೆ, ೧೯೭೮, ದಿ ಪೊಲಿಟಿಕಲ್ ಎಕಾನಮಿ ಆಫ್ ಇಂಡೈರೆಕ್ಟ್ ರೂಲ್ ಇನ್ ಮೈಸೂರ್ ೧೮೮೧-೧೯೪೭, ಅಂಬಿಕಾ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೮೪. ಷೇಕ್ ಅಲಿ ಬಿ., ೧೯೭೯(ಮರುಮುದ್ರಣ ೨೦೧೦), ಟಿಪ್ಪು ಸುಲ್ತಾನ್, ನ್ಯಾಷನಲ್ ಬುಕ್ ಟ್ರಸ್ಟ್ ಇಂಡಿಯಾ, ನ್ಯೂಡೆಲ್ಲಿ.

೮೫. ಸೂರ್ಯನಾಥ ಯು ಕಾಮತ್, ೧೯೮೦, ಎ ಕನ್ಸೈಸ್ ಹಿಸ್ಟರಿ ಆಫ್ ಕರ್ನಾಟಕ, ಜೂಪಿಟರ್ ಬುಕ್ಸ್, ಎಂಸಿಸಿ ಪಬ್ಲಿಕೇಷನ್ಸ್, ಬೆಂಗಳೂರು.

೮೬. ಮುತ್ತಣ್ಣ ಐ.ಎಂ., ೧೯೮೦, ಟಿಪ್ಪು ಎಕ್ಸ್‌ರೇಯ್ಡ್

೮೭. ಸುಂದರರಾವ್ ಬ.ನ., ವೆಂಕಟೇಶ ಶಾಸ್ತ್ರಿ ಬಿ. ೧೯೮೨, ಸರ್.ಎಂ.ವಿಶ್ವೇಶ್ವರಯ್ಯ ಜೀವನ ಮತ್ತು ಸಾಧನೆ

೮೮. ಮುದ್ದಾಚಾರಿ ಬಿ., ೧೯೮೩, ಯುವರಾಜ ಕಂಠೀರವ ನರಸಿಂಹರಾಜ ಒಡೆಯರು(೧೮೮೮-೧೯೪೦), ಉದಯ ಪ್ರಕಾಶನ, ಮೈಸೂರು.

೮೯. ನಾಗಲಿಂಗಸ್ವಾಮಿ ನ., ೧೯೮೩, ರಾಜಋಷಿ ಜಯಚಾಮರಾಜೇಂದ್ರ ಒಡೆಯರ್, ಕನ್ನಡ ಪುತ್ರ ಪತ್ರಿಕಾಲಯ, ಮೈಸೂರು.

೯೦. ಚಂದ್ರಶೇಖರ್ ಎಸ್., ೧೯೮೩, ಸಾಮಾಜಿಕ ಹಿನ್ನೆಲೆಯಲ್ಲಿ ಮೈಸೂರು ರಾಜಕೀಯ ಒಳನೋಟಗಳು ೧೮೮೧-೧೯೪೦, ಅಂಕಣ ಪ್ರಕಾಶನ, ಬೆಂಗಳೂರು.

೯೧. ಚಂದ್ರಶೇಖರ್ ಎಸ್., ೧೯೮೫, ಡೈಮೆನ್ಷನ್ ಆಫ್ ಸೋಶಿಯೋ ಪೊಲಿಟಿಕಲ್ ಚೇಂಜ್ ಇನ್ ಮೈಸೂರು ೧೯೧೮-೧೯೪೦, ಆಶೀಸ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ.

೯೨. ದೇವೇಗೌಡ ಎ.ಸಿ., ಪರಮೇಶ್ವರನ್ ಟಿ.ಆರ್., ೧೯೮೫, ಹಿಸ್ಟರಿ ಆಫ್ ಎಜುಕೇಶನ್ ಇನ್ ಮೈಸೂರು, ಡಿಪಾರ್ಟ್‌ಮೆಂಟ್ ಆಫ್ ಎಜುಕೇಷನ್ ಆ್ಯಂಡ್ ಯೂತ್ ಸರ್ವಿಸಸ್, ಗೌರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು.

೯೩. ಸುಂದರರಾವ್ ಬ.ನ., ೧೯೮೫(ಮರುಮುದ್ರಣ ೨೦೧೧), ಬೆಂಗಳೂರಿನ ಇತಿಹಾಸ, ಅಂಕಿತ ಪ್ರಕಾಶನ, ಬೆಂಗಳೂರು.

೯೪. ವೀರತಪ್ಪ ಕೆ., ೧೯೮೫, ರೀಡಿಂಗ್ ಇನ್ ಮಾಡರ್ನ್ ಹಿಸ್ಟರಿ ಆಫ್ ಮೈಸೂರ್.

೯೫. ವೀರತಪ್ಪ ಕೆ., ೧೯೮೬, ಸ್ಟಡೀಸ್ ಇನ್ ಕರ್ನಾಟಕ ಹಿಸ್ಟರಿ ಅಂಡ್ ಕಲ್ಚರ್, ಮಹಾಲಕ್ಷ್ಮಿ ಎಂಟರ್ ಪ್ರೈಸಸ್, ಬೆಂಗಳೂರು.

೯೬. ಸೂರ್ಯನಾಥ ಕಾಮತ್, ೧೯೮೮, ಸ್ವಾತಂತ್ರ್ಯ ಹೋರಾಟದ ಹಲವು ಮುಖಗಳು, ಬುರ್ಲಿ ಬಿಂದುಮಾಧವ ಸ್ಮಾರಕ ಪ್ರತಿಷ್ಠಾನ, ಹುಬ್ಬಳ್ಳಿ.

೯೭. ಭಗವಾನ್ ಎಸ್.ಗಿದ್ವಾನಿ, ೧೯೯೦, ದಿ ಸ್ವೋರ್ಡ್ ಆಫ್ ಟಿಪ್ಪು ಸುಲ್ತಾನ್.

೯೮. ಶೇಷಗಿರಿ ರಾವ್ ಎಲ್.ಎಸ್., ೧೯೯೧(ಮರುಮದ್ರಣ, ೨೦೧೦), ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯೯. ಸೂರ್ಯನಾಥ ಯು ಕಾಮತ್, ೧೯೯೧, ಹಿಸ್ಟೋರಿಯೋಗ್ರಫಿ ಆಫ್ ಕರ್ನಾಟಕ, ಮಿಥಿಕ್ ಸೊಸೈಟಿ, ಬೆಂಗಳೂರು.

೧೦೦. ಚಂದ್ರಶೇಖರ್ ಎಸ್., ೧೯೯೨, ಅಂಬೇಡ್ಕರ್ ಮತ್ತು ಗಾಂಧಿ, ಅಕ್ಷರ ಪ್ರಕಾಶನ, ಹೆಗ್ಗೋಡು(ಸಾಗರ).

೧೦೧. ಷೇಕ್ ಅಲಿ ಬಿ., ೧೯೯೩, 'ಟಿಪ್ಪು ಸುಲ್ತಾನ್: ಎ ಗ್ರೇಟ್ ಮಾರ್ಟಿಯರ್' ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೦೨. ಜಯಪ್ಪಗೌಡ ಡಿ.ಎಸ್., ೧೯೯೪(ಮರುಮುದ್ರಣ-೨೦೦೭), ದಿವಾನ್ ಸರ್.ಎಂ. ವಿಶ್ವೇಶ್ವರಯ್ಯನವರ ಕಾರ್ಯ ಸಾಧನೆಗಳು, ಶುಭೋದಯ ಪ್ರಕಾಶನ, ಮೈಸೂರು.

೧೦೩. ಗೋಪಾಲರಾವ್ ಎಚ್.ಎಸ್., ೧೯೯೬(ಮರುಮುದ್ರಣ, ೨೦೦೫, ೨೦೦೮), ಕರ್ನಾಟಕ ಏಕೀಕರಣ ಇತಿಹಾಸ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦೪. ರಾಮಕೃಷ್ಣನ್ ಆರ್., ೧೯೯೭, ಪ್ರೆಸ್ ಅಂಡ್ ಪಾಲಿಟಿಕ್ಸ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು ೧೮೫೯-೧೯೪೭, ಸ್ವಾಭಿಮಾನ ಪ್ರಕಾಶನ, ಚನ್ನಪಟ್ಟಣ, ಹಾಸನ.

೧೦೫. ಮಾದೇಗೌಡ, ೧೯೯೭, ಮಾಡರ್ನ್ ಮೈಸೂರ್ ಸ್ಟೇಟ್ ೧೮೮೧-೧೯೦೨, ಎ ಸ್ಟಡಿ ಆಫ್ ದಿ ಎಲೀಟ್, ಪಾಲಿಟಿ ಅಂಡ್ ಸೊಸೈಟಿ, ಪ್ರಸಾರಾಂಗ, ಯೂನಿರ್ವಸಿಟಿ ಆಫ್ ಮೈಸೂರು. ಮೈಸೂರು.

೧೦೬. ಸಿದ್ಧಲಿಂಗಸ್ವಾಮಿ, ೧೯೯೭, ಅಗ್ರೇರಿಯನ್ ರಿಲೇಶನ್ಸ್ ಇನ್ ಮೈಸೂರು ೧೭೯೯-೧೮೮೧, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೦೭. ಷೇಕ್ ಅಲಿ ಬಿ., (ಪ್ರ.ಸಂ)ಸೆಬಾಸ್ಟಿಯನ್ ಜೋಸೆಫ್, ೧೯೯೭, ಚರಿತ್ರೆ ಸಂಪುಟ-೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೮. ಷೇಕ್ ಅಲಿ ಬಿ.,(ಪ್ರ.ಸಂ) ಚಂದ್ರಶೇಖರ್ ಎಸ್., ೧೯೯೭, ಚರಿತ್ರೆ ಸಂಪುಟ-೭, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೦೯. ಗಾಯಿತ್ರಿ ಎಂ.ಬಿ., ೧೯೯೭, ಡೆವಲಂಪ್‌ಮೆಂಟ್ ಆಫ್ ಮೈಸೂರು ಸ್ಟೇಟ್, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೧೦. ಸೂರ್ಯನಾಥ್ ಯು ಕಾಮತ್, ೧೯೯೮(ದ್ವಿತೀಯ ಮುದ್ರಣ), ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು.

೧೧೧. ಜಾನಕಿ ನಾಯರ್, ೧೯೯೮, ಮಿನರ್ಸ್ ಅಂಡ್ ಮಿಲ್‌ಹಾಂಡ್ಸ್ ವರ್ಕ್, ಕಲ್ಚರ್ ಅಂಡ್ ಪಾಲಿಟಿಕ್ಸ್ ಇನ್ ಪಿನ್ಸ್ಲಿ ಮೈಸೂರು, ಸೇಜ್ ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೧೧೨. ಸಾಕಿ, ೧೯೯೮, 'ಮೇಕಿಂಗ್ ಹಿಸ್ಟರಿ: ಕರ್ನಾಟಕಾ' ಸ್ ಪೀಪಲ್ ಆ್ಯಂಡ್ ದೇರ್ ಪಾಸ್ಟ್, ವಾಲ್ಯೂಮ್-೧, ಸ್ಟೋನ್ ಏಜ್ ಟು ಮರ್ಕಂಟಲಿಸಂ, ಮೇಕಿಂಗ್ ಹಿಸ್ಟರಿ: ಕರ್ನಾಟಕ' ಕಲೋನಿಯಲ್ ಶಾಕ್, ಆರ್ಮ್ಡ್ ಸ್ಟ್ರಗಲ್(೨೦೦೪), ವಿಮಕ್ತಿ ಪ್ರಕಾಶನ, ಬೆಂಗಳೂರು.

೧೧೩. ನಂಜರಾಜ ಅರಸು ಪಿ.ವಿ., ಚಂದ್ರರಾಜ ಅರಸು ಎಸ್.ಆರ್.(ಸಂ)., ೧೯೯೯, ನಾಲ್ವಡಿ ಕೃಷ್ಣರಾಜ ಒಡೆಯರ್ ಒಂದು ದರ್ಶನ, ಅಖಿಲ ಕರ್ನಾಟಕ ಅರಸು ಪರಿಷತ್(ರಿ), ಮೈಸೂರು.

೧೧೪. ನಂಜರಾಜ ಅರಸು ಪಿ.ವಿ., ಮರೆಯಲಾಗದ ಮಹಾಚೇತನ ನಾಲ್ವಡಿ ಕೃಷ್ಣರಾಜ ಒಡೆಯರ್, ಅಖಿಲ ಕರ್ನಾಟಕ ಅರಸು ಪರಿಷತ್(ರಿ), ಮೈಸೂರು.

೧೧೫. ಇರ್ಫಾನ್ ಹಬೀಬ್, ೧೯೯೯, ಕಲೋನಿಯಲಿಸಂ ರೆಸಿಸ್ಟನ್ಸ್ ಆ್ಯಂಡ್ ಮಾಡರ್ನೈಸೇಶನ್ ಅಂಡರ್ ಹೈದರಾಲಿ ಆ್ಯಂಡ್ ಟಿಪ್ಪು ಸುಲ್ತಾನ್, ತುಲಿಕ ಪಬ್ಲಿಷರ್, ನ್ಯೂಡೆಲ್ಲಿ.

೧೧೬. ಚಂದ್ರಶೇಖರ್ ಎಸ್., ಕನ್ನಡಕ್ಕೆ: ಸಿ.ನಾಗಣ್ಣ, ೨೦೦೦, ದಕ್ಷಿಣ ಭಾರತ: ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೧೭. ರಾಜರತ್ನಂ ಎ., ೨೦೦೦, ಮೈಸೂರು ಒಡೆಯರು ಮತ್ತು ಕರ್ನಾಟಕ ಸಂಗೀತ, ಕನ್ನಡ ಮಸ್ತಕ ಪ್ರಾಧಿಕಾರ, ಬೆಂಗಳೂರು.

೧೧೮. ಪ್ರಸನ್ನಕುಮಾರ್ ಎಂ.(ಅನು:ಆರ್.ಎಲ್.ಅನಂತರಾಮಯ್ಯ), ೨೦೦೧, ಮೈಸೂರಿನ ಇತಿಹಾಸದಲ್ಲಿ ದಾನ(ಕ್ರಿ.ಶ.೧೬೦೦-೧೮೮೧), ಸಮನ್ವಯ ಪ್ರಕಾಶನ, ಮಂಗಳೂರು.

೧೧೯. ಮುದ್ದಾಚಾರಿ ಬಿ., ೨೦೦೧, ಮರಾಠರ ಅತಿಕ್ರಮಣ ಮೈಸೂರಿನ ಪ್ರತಿಭಟನೆ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು.

೧೨೦. ಚಂದ್ರಶೇಖರ್ ಎಸ್., ೨೦೦೨, ಆಧುನಿಕ ಕರ್ನಾಟಕದ ಆಂದೋಲನಗಳು, ನಮ್ಮ ಪ್ರಕಾಶನ, ಬಿಳಿಗೆರೆ, ತಿಪಟೂರು.

೧೨೧. ಷಡಕ್ಷರಯ್ಯ, ೨೦೦೩, ಮೈಸೂರು ಸ್ಟೇಟ್ ರೈಲ್ವೇಸ್ ಆ್ಯಂಡ್ ದಿ ಬ್ರಿಟಿಷ್ (೧೮೬೪–೧೯೪೭).

೧೨೨. ಬಾರ್ಕೂರು ಉದಯ, ೨೦೦೩, ಹೈದರಾಲಿ–ಟಿಪ್ಪು: ಇತಿಹಾಸ ಕಥನ, ಮಾನವತಾ ವೇದಿಕೆ, ಮಂಗಳೂರು.

೧೨೩. ಅಣ್ಣಾಸ್ವಾಮಿ, ೨೦೦೩, ಬೆಂಗಳೂರು ಟು ಬೆಂಗಲೂರ್, ವೆಂಗಡಮ್ ಪಬ್ಲಿಕೇಷನ್ಸ್, ಬೆಂಗಳೂರು.

೧೨೪. ಚಿನ್ನಸ್ವಾಮಿ ಸೋಸಲೆ ಎನ್., ೨೦೪, ಸಾಮ್ರಾಜ್ಯ ಮತ್ತು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೫. ಸದಾಶಿವ ಕೆ., ಹಿಸ್ಟರಿ ಆಫ್ ಸೋಷಿಯಲ್ ಲೆಜಿಸ್ಲೇಷನ್ ಇನ್ ಮೈಸೂರ್ ಸ್ಟೇಟ್ (೧೮೮೧–೧೯೪೮).

೧೨೬. ಗೋಪಾಲ್ ಆರ್ ಮತ್ತು ನರೇಂದ್ರ ಪ್ರಸಾದ್ ಎಸ್., ೨೦೦೪, ಮುಮ್ಮಡಿ ಕೃಷ್ಣರಾಜ ಒಡೆಯರು ಒಂದು ಚಾರಿತ್ರಿಕ ಅಧ್ಯಯನ(ಕ್ರಿ.ಶ.೧೭೯೯ರಿಂದ ೧೮೬೮ರವರೆಗೆ), ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ.

೧೨೭. ಜಾನಕಿ ನಾಯರ್, ೨೦೦೫, ದಿ ಪ್ರಾಮಿಸ್ ಆಫ್ ದಿ ಮೆಟ್ರೋಪಾಲಿಸ್ ಬೆಂಗಳೂರ್ ಟ್ವೆಂಟಿಯತ್ ಸೆಂಚುರಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ.

೧೨೮. ಚಿನ್ನಸ್ವಾಮಿ ಸೋಸಲೆ ಎನ್., ೨೦೦೫, ನಾಲ್ವಡಿ ಕೃಷ್ಣನ ಮೈಸೂರು(ಸಾಮಾಜಿಕ, ಶೈಕ್ಷಣಿಕ ಹಾಗೂ ಅಭಿವೃದ್ಧಿಯ ನೆಲೆಯ ಅಧ್ಯಯನ), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೨೯. ತಿ.ತಾ.ಶರ್ಮ, ೨೦೦೬, ಇತಿಹಾಸದ ಹಳೆಯ ಪುಟಗಳು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೩೦. ಚಂದ್ರಶೇಖರ್ ಎಸ್., ೨೦೦೬, ವಸಾಹತುಕಾಲೀನ ಕರ್ನಾಟಕ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೧೩೧. ಷೇಕ್ ಅಲಿ ಬಿ., ೨೦೦೬, ಟಿಪ್ಪು ಸುಲ್ತಾನ್ ಎ ಸ್ಟಡಿ ಇನ್ ಡಿಪ್ಲೋಮಸಿ ಆ್ಯಂಡ್ ಕಾನ್ಸ್‌ಪಾರ್‌ನೆಟೇಷನ್, ಕನ್ನಡ ಅಂಡ್ ಕಲ್ಚರ್ ಡಿಪಾರ್ಟ್‌ಮೆಂಟ್, ಬೆಂಗಳೂರು.

೧೩೨. ಗೌರಿ ಸುಂದರ್(ಸಂ), ೨೦೦೬, ಟಿಪ್ಪು ಸುಲ್ತಾನ್ ಕನ್ನಡ ದ್ರೋಹಿಯೇ?(ವಿಚಾರಾತ್ಮಕ ಲೇಖನಗಳ ಸಂಪುಟ), ಸುಂದರ ಪ್ರಕಾಶನ, ಬೆಂಗಳೂರು.

೧೩೩. ನಂಜರಾಜ ಅರಸು ಪಿ.ವಿ., ೨೦೦೭, ಮೈಸೂರು: ನೂರಿನ್ನೂರು ವರ್ಷಗಳ ಹಿಂದೆ, ಅಭಿರುಚಿ ಪ್ರಕಾಶನ, ಮೈಸೂರು.

೧೩೪. ಅಶ್ವತ್ಥನಾರಾಯಣ(ಮೈಸೂರು ವಿಶ್ವವಿದ್ಯಾನಿಲಯ), ೨೦೦೮, ಮೈಸೂರು ಸಂಸ್ಥಾನದಲ್ಲಿನ ರಾಷ್ಟ್ರೀಯ ಚಳವಳಿಯ ಒಳನೋಟಗಳು, ೧೮೭೦–೧೯೪೦, ಮಾದರದೂಳಯ್ಯ ಪ್ರಕಾಶನ, ಮೈಸೂರು.

೧೩೫. ವಿಕ್ರಮ್ ಸಂಪತ್, ೨೦೦೮, ಸ್ಪ್ಲೆಂಡರ್ಸ್ ಆಫ್ ರಾಯಲ್ ಮೈಸೂರ್ ದಿ ಆನ್‌ಟೋಲ್ಡ್ ಸ್ಟೋರಿ ಆಫ್ ದಿ ಒಡೆಯರ್ಸ್, ರೂಪ ಕೊ. ಪಬ್ಲಿಕೇಷನ್ಸ್, ನ್ಯೂಡೆಲ್ಲಿ.

೧೩೬. ಸುಧಾಮಣಿ ಬಿ.ವಿ., ೨೦೦೯, ದಳವಾಯಿ ನಂಜರಾಜಯ್ಯನ ಕಾಲದ ಮೈಸೂರು, ಅನನ್ಯ ಪ್ರಕಾಶನ, ಮೈಸೂರು.

೧೩೭. ಸ್ವಾಮಿರಾವ್ ಎಲ್., ೨೦೦೯, ಶ್ರೀಮನ್ನಾಲ್ವಡಿ ಕೃಷ್ಣರಾಜ ಒಡೆಯರವರ ಚರಿತ್ರೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೩೮. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ವಿಜಯ್ ಪೂಣಚ್ಚ ತಂಬಂಡ, ವಿರೂಪಾಕ್ಷಿ ಪೂಜಾರಹಳ್ಳಿ(ಸಂ.ಸಂ), ೨೦೧೦, ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ–೧, ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩೯. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ಚಿನ್ನಸ್ವಾಮಿ ಸೋಸಲೆ ಎನ್., ೨೦೧೦, ಕನ್ನಡ ವಿಶ್ವವಿದ್ಯಾಲಯ ಚರಿತ್ರೆ ಸಂಪುಟ–೬, ಸಮಕಾಲೀನ ಕರ್ನಾಟಕ ಚರಿತ್ರೆಯ ವಿವಿಧ ಆಯಾಮಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪೦. ಚಿನ್ನಸ್ವಾಮಿ ಸೋಸಲೆ ಎನ್., ೨೦೧೦, ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೪೧. ತಿಮ್ಮನಹಳ್ಳಿ ವೇಣುಗೋಪಾಲ್, ೨೦೧೦, ರೈತರು: ಮೈಸೂರು ಅಧಿಕಾರಶಾಹಿ ಮತ್ತು ರಾಷ್ಟ್ರೀಯ ಚಳವಳಿ ೧೮೮೧–೧೯೪೭, ಧಾತ್ರಿ ಪುಸ್ತಕ, ಬೆಂಗಳೂರು.

೧೪೨. ಲೀಲಾ ಬಿ. ಮುಂಬೈ, ೨೦೧೦, ಮೈಸೂರು ಸಾಂಸ್ಕೃತಿಕ ಸಂಕಥನ, ಕನ್ನಡ ಅಧ್ಯಯನ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ, ಮುಂಬಯಿ.

೧೪೩. ಗೌರಿ ಸುಂದರ್, ೨೦೧೦, ಮೈಸೂರು ದಸರಾ, ಸುಂದರ ಪ್ರಕಾಶನ, ಬೆಂಗಳೂರು.

೧೪೪. ಶ್ರೀಧರ ಸಿ.ಎ.(ಸಂ), ೨೦೧೦, ಮೈಸೂರು ಒಡೆಯರು ಮತ್ತು ಕರ್ನಾಟಕ ಸಂಸ್ಕೃತಿ, ಸಂಸ್ಕೃತಿ ಬುಕ್ ಪ್ಯಾರಡೈಸ್, ಮೈಸೂರು.

೧೪೫. ಪ್ರಮೀಳಾದೇವಿ ಬಿ.ಕೆ., ೨೦೧೦, ಮೈಸೂರು ಸಂಸ್ಥಾನದಲ್ಲಿ ಹಿಂದುಳಿದ ವರ್ಗಗಳ ಚಳವಳಿ ಹಾಗೂ ರಾಜಕೀಯ ಜಾಗೃತಿ–ಒಂದು ಒಳನೋಟ ೧೮೮೧–೧೯೩೮, ರೂಪ ಪ್ರಕಾಶನ, ಮೈಸೂರು.

೧೪೬. ಶ್ರೀನಿವಾಸ ಮೂರ್ತಿ ಎಸ್.ಎಲ್., ೨೦೧೧, ಪುರಾತತ್ತ್ವ ಪಿತಾಮಹ ಬಿ.ಎಲ್.ರೈಸ್ ಜೀವನ–ಸಾಧನೆ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೪೭. ರಾಕೇಶ್ ಹೆಚ್.ಎಸ್., ೨೦೧೧, ಮೈಸೂರು ಚಲೋ ಚಳವಳಿ, ರೂಪ ಪ್ರಕಾಶನ, ಮೈಸೂರು.

೧೪೮. ಜಾನಕಿ ನಾಯರ್, ೨೦೧೨, ಮೈಸೂರು ಮಾಡರ್ನ್ ರಿ–ಥಿಕಿಂಗ್ ದಿ ರೀಜನ್ ಆ್ಯಂಡ್ ಪ್ರಿನ್ಸ್ಲಿ ರೂಲ್, ಓರಿಯಂಟ್ ಬ್ಲಾಕ್‌ಸ್ವಾನ್, ನ್ಯೂಡೆಲ್ಲಿ.

೧೪೯. ಅನಿತಾ ಎಂ.ಎಸ್., ೨೦೧೨, ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್(ಪರಿವರ್ತನಾಶೀಲ ಸಂಪ್ರದಾಯಬದ್ಧ ಸಮಾಜದ ಮೇಲೆ ಪಾಶ್ಚಿಮಾತ್ಯ ಪ್ರಭಾವ ಸಮಗ್ರ ಅಧ್ಯಯನ ೧೮೮೪–೧೯೪೦), ಪ್ರಿಯದರ್ಶಿನಿ ಪ್ರಕಾಶನ, ಮೈಸೂರು.

೧೫೦. ಚಿನ್ನಸ್ವಾಮಿ ಸೋಸಲೆ ಎನ್.(ಸಂ), ೨೦೧೨, ದಿವಾನ್ ಸರ್ ಮಿರ್ಜಾ ಎಂ. ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫೧. ನಂಜರಾಜ ಅರಸು ಪಿ.ವಿ., ೨೦೧೨, ಅಲಮೇಲಮ್ಮನ ಶಾಪ: ಒಂದು ಶವ ಪರೀಕ್ಷೆ, ಅಭಿರುಚಿ ಪ್ರಕಾಶನ, ಮೈಸೂರು.

೧೫೨. ರಾಕೇಶ್ ಹೆಚ್.ಎಸ್., ೨೦೧೨, ಮೈಸೂರು ಒಡೆಯರು ಮತ್ತು ಶೃಂಗೇರಿ ಮಠ, ಕಿಟಕಿ ಪ್ರಕಾಶನ, ಮೈಸೂರು.

೧೫೩. ಚಿನ್ನಸ್ವಾಮಿ ಸೋಸಲೆ ಎನ್., ೨೦೧೩, ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೫೪. ಚಿದಾನಂದಮೂರ್ತಿ ಎಂ., ೨೦೧೩, ಮೂಲ ದಾಖಲೆಗಳಲ್ಲಿ ಹುದುಗಿದ್ದ ಟಿಪ್ಪು, ಭಾರತ ವಿಕಾಸ ಪರಿಷತ್ತು, ಬೆಂಗಳೂರು.

೧೫೫. ತಲಕಾಡು ಚಿಕ್ಕರಂಗೇಗೌಡ, ೨೦೧೩, ಟಿಪ್ಪು ಸುಲ್ತಾನ್ ಕಾಲದ ಪ್ರಸಂಗಗಳು, ಚಂದ್ರಗಿರಿ ಪ್ರಕಾಶನ, ಬೆಂಗಳೂರು.

೧೫೬. ರವಿ ಎಂ.ಆರ್., ೨೦೧೪, ಆಧುನಿಕ ಶಿಕ್ಷಣ ಮತ್ತು ಸಾಮಾಜಿಕ ಬದಲಾವಣೆ ೧೮೮೧–೧೯೪೭, ಸಂವಹನ ಪ್ರಕಾಶನ ಮೈಸೂರ.

೧೫೭. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, ಜಯಚಾಮರಾಜೇಂದ್ರ ಒಡೆಯರ್ ಕಾಲದ ಮೈಸೂರು ಸಂಸ್ಥಾನ, ಸಂಸ್ಕೃತಿ ಪ್ರಕಾಶನ, ಮೈಸೂರು.

# ಅಧ್ಯಾಯ ಆರು

# ಸಂಶೋಧನಾತ್ಮಕ ಮಹಾಪ್ರಬಂಧಗಳ ವಿಶ್ಲೇಷಣೆ

ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರದಲ್ಲಿ ಕೃತಿಗಳ ಮೂಲಕ ಮೈಸೂರು ಒಡೆಯರ ಚರಿತ್ರೆ ಕಟ್ಟುವಿಕೆಯಂತೆ ಸಂಶೋಧನಾತ್ಮಕ ಮಹಾಪ್ರಬಂಧಗಳ ಮೂಲಕವೂ ಈ ಚರಿತ್ರೆ ಕಟ್ಟುವಿಕೆಯನ್ನು ನೋಡಬಹುದು. ಇಲ್ಲಿ ಮುಖ್ಯವಾಗಿ ಎಂ.ಫಿಲ್. ಮತ್ತು ಪಿಎಚ್.ಡಿ. ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಲವಾರು ಮಹಾಪ್ರಬಂಧಗಳು ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಬಂದಿದ್ದರೂ ಇಲ್ಲಿ ಯಾವ ಹಿನ್ನೆಲೆಯಲ್ಲಿ ನೋಡಲಾಗಿದೆ ಎಂಬುದು ಪ್ರಮುಖವಾದುದು. ಈ ಸಂಶೋಧನಾತ್ಮಕ ಮಹಾಪ್ರಬಂಧಗಳು ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಬಂದಿವೆಯೇ? ಹಾಗೆಯೇ ಪ್ರಭುತ್ವ, ಧರ್ಮ, ಜನಮುಖಿ ಕೇಂದ್ರಿತವಾಗಿ ಬಂದಿವೆಯೇ? ಎಂಬುದನ್ನು ಗುರುತಿಸಲಾಗಿದೆ. ಈ ಎಲ್ಲಾ ಹಂತಗಳ ಮೂಲಕ ಅಧ್ಯಯನ ಕೈಗೊಳ್ಳಲಾಗಿದೆ.

ಪ್ರಮುಖವಾಗಿ ಈ ಮಹಾಪ್ರಬಂಧಗಳನ್ನು ರಚಿಸಿದ ದೇಶಿ ಸಂಶೋಧಕರು ಯಾರು ವಿದೇಶಿ ಸಂಶೋಧಕರು ಯಾರು ಎಂಬುದನ್ನು ಗುರುತಿಸುವುದಾಗಿದೆ. ಈ ಸಂಶೋಧಕರ ಗ್ರಹಿಕೆ, ದೃಷ್ಟಿಕೋನ, ತಾತ್ವಿಕತೆ(ಐಡಿಯಾಲಜಿ) ಇವೇ ಮೊದಲಾದ ಸೈದ್ಧಾಂತಿಕ ಚೌಕಟ್ಟಿನೊಳಗೆ ವಿಮರ್ಶೆ ಮತ್ತು ವಿಶ್ಲೇಷಣೆಗೆ ಈ ಮಹಾಪ್ರಬಂಧಗಳನ್ನು ಒಳಪಡಿಸಲಾಗಿದೆ. ಈ ಮಹಾಪ್ರಬಂಧಗಳು ವಿವರಣಾತ್ಮಕ ಮಾದರಿಯನ್ನು ಹೊಂದಿವೆಯೇ ಅಥವಾ ವಿಶ್ಲೇಷಣಾತ್ಮಕ ಮಾದರಿಯನ್ನು ಹೊಂದಿವೆಯೇ ಎಂಬುದನ್ನು ಚರ್ಚಿಸಲಾಗಿದೆ. ಈ ಸಂಶೋಧನಾತ್ಮಕ ಮಹಾಪ್ರಬಂಧಗಳಲ್ಲಿ ಬಳಸಿರುವ ಆಕರಗಳು ಯಾವ ಪಂಥಗಳ(ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ, ಸಬಾಲ್ಟರ್ನ್) ನೆಲೆಯಲ್ಲಿ ಸಂಶೋಧನೆ ಕೈಗೊಂಡಿವೆ. ಕಾಲಘಟ್ಟ ಯಾವುದು ಸೆಂಟ್ರಲ್ ಆರ್ಗ್ಯುಮೆಂಟ್(ಕೇಂದ್ರೀಯ ವಿಷಯ) ಏನು ಐಡಿಯಾಲಜಿಕಲ್ ಡಿಫ್ರೆನ್ಸ್ ಏನು, ಎಂಬ ಸೈದ್ಧಾಂತಿಕ ನೆಲೆಯಲ್ಲಿ ಯಾವ ರೀತಿಯ ಚಾರಿತ್ರಿಕ ಪರಿಪ್ರೇಕ್ಷ್ಯವನ್ನು ಈ ಸಂಶೋಧನಾತ್ಮಕ ಮಹಾಪ್ರಬಂಧಗಳು ಕಟ್ಟುತ್ತಿವೆ ಎಂಬುದನ್ನು ಗುರುತಿಸಬಹುದಾಗಿದೆ.

ಈ ಮಹಾಪ್ರಬಂಧಗಳಲ್ಲಿ ಕಡಗಣಿಸಲ್ಪಟ್ಟಿರುವ ವಿಚಾರಗಳತ್ತ ಗಮನ ಹರಿಸಬೇಕಾಗಿರುವುದು ಮುಖ್ಯ. ಸಂಶೋಧಿಸಿರುವ ವಿಷಯ ಕಾಲಕಾಲಕ್ಕೆ ತಕ್ಕಂತೆ ಪುನಾರಚನೆ(Re-construct)

ಯಾಗಬೇಕು. ಇದರಲ್ಲಿ ಹೊಸ ದೃಷ್ಟಿಕೋನ, ಹೊಸ ಆಲೋಚನೆ ಮುಖ್ಯ. ಅದೇ ರೀತಿ ನಿರಚನೆ(De-construct)ಯಾಗಬೇಕು. ಯಾವ ರೀತಿಯ ದೋಷಗಳಿವೆ ಎಂಬುದನ್ನು ಪತ್ತೆ ಹಚ್ಚಬೇಕು. ಈ ನೆಲೆಯಲ್ಲಿ ಅಧ್ಯಯನ ಸಾಗಿದೆ.

ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಹೆಚ್ಚಾಗಿ ಸಂಶೋಧನಾತ್ಮಕ ಮಹಾಪ್ರಬಂಧಗಳು ಹಾಗೂ ಮಂಗಳೂರು ವಿಶ್ವವಿದ್ಯಾಲಯದಲ್ಲಿ ಕೆಲವೊಂದು ಮಹಾಪ್ರಬಂಧಗಳು ಹೊರಬಂದಿವೆ. ಹಾಗೆಯೇ ಇತರ ಸಮಾಜವಿಜ್ಞಾನ ನಿಕಾಯಗಳಲ್ಲಿ ಸಂಶೋಧನೆ ಆದಂತಹ ಮಹಾಪ್ರಬಂಧಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಕೆಲವು ಸಂಶೋಧನಾತ್ಮಕ ಮಹಾಪ್ರಬಂಧಗಳು ಕೃತಿಗಳ ರೂಪದಲ್ಲಿ ಪ್ರಕಟಗೊಂಡಿವೆ. ಪ್ರಕಟವಾಗದೇ ಇರುವ ಸಂಶೋಧನಾತ್ಮಕ ಮಹಾಪ್ರಬಂಧಗಳನ್ನು ಇಲ್ಲಿ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರದಲ್ಲಿ ಕೆಲವು ಎಂ.ಫಿಲ್. ಮತ್ತು ಪಿಎಚ್.ಡಿ.ಮಹಾಪ್ರಬಂಧಗಳನ್ನು ಚರ್ಚೆ ಮಾಡದೇ ಇರಬಹುದು. ಕಾರಣ ಕೆಲವು ಮಹಾಪ್ರಬಂಧಗಳು ಗ್ರಂಥಾಲಯ, ವಿಭಾಗ, ಮಾರ್ಗದರ್ಶಕರು ಮತ್ತು ಸಂಶೋಧಕರ ಬಳಿಯೂ ಇರುವುದಿಲ್ಲ. ಇಂತಹ ಅನಿವಾರ್ಯ ಸಂದರ್ಭದಲ್ಲಿ ಅವುಗಳನ್ನು ಕೈಬಿಡುವ ಸಾಧ್ಯತೆ ಉಂಟಾಗಿದೆ.

### ೬.೧. ಎಂ.ಫಿಲ್.ನಿಬಂಧಗಳ ವಿಶ್ಲೇಷಣೆ

ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರದಲ್ಲಿ ಕೃತಿಗಳು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವಂತೆ ಸಂಶೋಧನಾತ್ಮಕ ಎಂ.ಫಿಲ್. ನಿಬಂಧಗಳು ಕೂಡ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವ ಕಾರ್ಯ ಮಾಡುತ್ತವೆ. ಈ ನಿಬಂಧಗಳಲ್ಲಿ ಆಯ್ಕೆಯಾಗಿರುವ ವಿಷಯ, ಅದರ ವಿಸ್ತಾರ, ಬಳಸಿಕೊಂಡಿರುವ ಆಕರಗಳು ಕಡಿಮೆ ಪ್ರಮಾಣದಲ್ಲಿ ಇವೆ. ಸೀಮಿತ ಅವಧಿಯಲ್ಲಿ ಸಂಶೋಧನೆ ಕೈಗೊಂಡು ನಿಬಂಧಗಳನ್ನು ರಚಿಸಲಾಗಿರುತ್ತದೆ. ಇಲ್ಲಿ ವಿಶ್ಲೇಷಿಸಿ, ಚರ್ಚಿಸಿರುವ ವಿಷಯದ ಹರಹು, ವ್ಯಾಪ್ತಿ ಸೀಮಿತವಾಗಿರುವುದನ್ನು ಗಮನಿಸಬಹುದು. ಈ ನಿಬಂಧಗಳು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಬಂದಿವೆಯೇ, ಅಥವಾ ಪ್ರಭುತ್ವ, ಧರ್ಮ, ಜನಮುಖಿ ಕೇಂದ್ರಿತವಾಗಿ ಬಂದಿವೆಯೇ ಎಂಬುದನ್ನು ಗುರುತಿಸಲಾಗುತ್ತದೆ.

ದೇಶಿ ಮತ್ತು ವಿದೇಶಿ ಸಂಶೋಧಕರ ಗ್ರಹಿಕೆ, ದೃಷ್ಟಿಕೋನ, ತಾತ್ವಿಕತೆ ಈ ಸೈದ್ಧಾಂತಿಕ ಚೌಕಟ್ಟಿನೊಳಗೆ ವಿಮರ್ಶೆ ಮತ್ತು ವಿಶ್ಲೇಷಣೆಗೆ ಒಳಪಡಿಸುವುದಾಗಿದೆ. ಈ ನಿಬಂಧಗಳಲ್ಲಿ ಬಳಸಿರುವ ಆಕರಗಳು, ಸಂಶೋಧನಾ ವಿಧಾನ, ಕಾಲಘಟ್ಟ ಇವೇ ಮೊದಲಾದ ಅಂಶಗಳನ್ನು ಪತ್ತೆ ಹಚ್ಚುವುದಾಗಿದೆ. ಈ ನಿಬಂಧಗಳಲ್ಲಿ ಕಡೆಗಣಿಸಲಾಗಿರುವ ವಿಚಾರಗಳತ್ತ ಗಮನ ಹರಿಸ ಬೇಕಾಗಿರುವುದು ಮುಖ್ಯ. ಸಂಶೋಧಿಸಿರುವ ವಿಷಯ, ಅದು ಕಾಲಕಾಲಕ್ಕೆ ತಕ್ಕಂತೆ ಮನಾರಚನೆ (Re-construct)ಯಾಗಬೇಕು. ಹೊಸ ದೃಷ್ಟಿಕೋನ, ಹೊಸ ಆಲೋಚನೆ ಮುಖ್ಯ. ಅದೇ ರೀತಿ ನಿರಚನೆ(De-construct)ಯಾಗಬೇಕು. ಯಾವ ರೀತಿ ದೋಷಗಳಿವೆ ಎಂಬುದನ್ನು ಪತ್ತೆ ಹಚ್ಚಬೇಕು. ಈ ಹಿನ್ನೆಲೆಯಲ್ಲಿ ಅಧ್ಯಯನ ಸಾಗುತ್ತದೆ.

ಅನಂತರಾಮಯ್ಯ ಓ. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಸ್ಪ್ರಡ್ ಆಫ್ ಎಜುಕೇಷನ್ ಆ್ಯಂಡ್ ಸೋಷಿಯಲ್ ವೆಲ್‌ಫೇರ್ ಮೇಜರ್ಸ್ ಇನ್ ಪ್ರಿನ್ಸ್ಲೀ ಮೈಸೂರು ೧೯೦೦-೧೯೩೮(೧೯೮೧)**[೧] ಎಂಬ ಎಂ.ಫಿಲ್.ನಿಬಂಧವನ್ನು ಸಲ್ಲಿಸಿದ್ದಾರೆ. ಈ ನಿಬಂಧದಿಂದ ಮೊದಲು ಹೇಗೆ ಕ್ರೈಸ್ತ ಮಿಷನರಿಗಳು ಶಾಲೆಗಳನ್ನು ಮೈಸೂರು ಸಂಸ್ಥಾನದಲ್ಲಿ ಪ್ರಾರಂಭಿಸಿದವು ಎಂಬುದನ್ನು ತಿಳಿಯಬಹುದು. ಅನಂತರ ಸರ್ಕಾರವು ಕೆಲವು ಶಾಲೆಗಳನ್ನು ಪ್ರಾರಂಭಿಸಿದ್ದರ ವಿವರಗಳನ್ನು ಗಮನಿಸಬಹುದು. ಆದರೆ ೧೯೦೦ರ ನಂತರ ಹೋಬಳಿ ಶಾಲೆಗಳ ಯೋಜನೆ ಪ್ರಾರಂಭವಾಯಿತು. ಅನಂತರ ಮತ್ತಷ್ಟು ಶಾಲೆಗಳ ಸಂಖ್ಯೆ ಹೆಚ್ಚಾಗುತ್ತಾ ಹೋಯಿತು. ಕಡ್ಡಾಯ ಶಿಕ್ಷಣಕ್ಕೆ ಚಾಲನೆ ದೊರಕಿತು. ಹಿಂದುಳಿದ ವರ್ಗಗಳಿಗೆ ಶಾಲೆಗಳನ್ನು ಸ್ಥಾಪಿಸುವುದು ಪ್ರಮುಖವಾಗಿದೆ. ಆಧುನಿಕ ಶಿಕ್ಷಣವನ್ನು ಜನತೆಗೆ ನೀಡುವುದು ಅವರ ಎಲ್ಲಾ ಸಮಸ್ಯೆಗೆ ಪರಿಹಾರ ಎಂಬುದನ್ನು ಮನಗಂಡು ಕಾರ್ಯಕ್ರಮಗಳನ್ನು ರೂಪಿಸಿದರು ಎಂಬುದನ್ನು ಇಲ್ಲಿ ಚರ್ಚಿಸಿದ್ದಾರೆ. ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ತರಬೇತಿ ನೀಡುವ ನಾರ್ಮಲ್ ಶಾಲೆಗಳು ಪ್ರಾರಂಭವಾದವು. ಪ್ರಾಥಮಿಕ ಶಿಕ್ಷಣವನ್ನು ಉಚಿತವಾಗಿ ನೀಡಬೇಕೆಂದು ಶಿಫಾರಸ್ಸು ಮಾಡಲಾಯಿತು ಎಂಬುದು ಮುಖ್ಯ

ಮೆಟ್ರಿಕ್ಯುಲೇಷನ್ ಪರೀಕ್ಷೆಗೆ ತತ್ಸಮವಾದ ಎಸ್.ಎಸ್.ಎಲ್.ಸಿ.ಪರೀಕ್ಷಾ ಯೋಜನೆಯನ್ನು ಜಾರಿಗೆ ತಂದರು. ಉನ್ನತ ಶಿಕ್ಷಣಕ್ಕೆ ಹೆಚ್ಚಿನ ಸೌಲಭ್ಯಗಳು ದೊರೆತವು. ಮೈಸೂರಿನ ಮಹಾರಾಜ ಕಾಲೇಜು, ಬೆಂಗಳೂರಿನ ಸೆಂಟ್ರಲ್ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ ಸ್ಥಾಪನೆ ಆಗಿ ಉನ್ನತ ಶಿಕ್ಷಣಕ್ಕೆ ಅಡಿಪಾಯ ಹಾಕಿದವು. ಶಿಕ್ಷಣದ ಮೂಲಕ ಜನರ ಸಾಮಾಜಿಕ ಸ್ಥಾನಮಾನವನ್ನು ಉತ್ತಮಪಡಿಸಬಹುದು ಎಂದು ಚರ್ಚಿಸುತ್ತಾ ಹೋಗುತ್ತಾರೆ. ಹಿಂದುಳಿದ ಮತ್ತು ನಿಮ್ನ ವರ್ಗಗಳಿಗೆ ಶಾಲೆಗಳಲ್ಲಿ ಮೀಸಲಾತಿ ನೀಡಿದ್ದರ ವಿವರಗಳು, ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ದಲಿತಪರ ಕಾರ್ಯಗಳು, ಮಿರ್ಜಾ ಇಸ್ಮಾಯಿಲ್ ಅವರ ಶಿಕ್ಷಣ ಪ್ರಗತಿ ಕಾರ್ಯಗಳನ್ನು ವಿವರಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಜನರಿಗೆ ಯಾವ ರೀತಿಯ ಶಿಕ್ಷಣದ ಸೌಲಭ್ಯಗಳನ್ನು ಒದಗಿಸಿದರು ಎಂಬುದರ ವಿವರಗಳನ್ನು ಚರ್ಚಿಸಿದ್ದಾರೆ. ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಸಮರ್ಥವಾಗಿ ಬಳಸಿಕೊಂಡಿರುವುದನ್ನು ಗಮನಿಸಬಹುದು.

ಸ್ವಾಮಿ ಕೆ.ಎಸ್. ಅವರು ಕನ್ನಡ ವಿಶ್ವವಿದ್ಯಾಲಯಕ್ಕೆ **ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್: ಒಂದು ಅಧ್ಯಯನ(೨೦೦೮)**[೨] ಎಂಬ ಎಂ.ಫಿಲ್.ನಿಬಂಧವನ್ನು ಸಲ್ಲಿಸಿದ್ದಾರೆ. ಈ ನಿಬಂಧದಲ್ಲಿ ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ಬ್ರಾಹ್ಮಣ ಎಂಬ ಮೇಲ್ವರ್ಗದಲ್ಲಿ ಹುಟ್ಟಿ ಪಂಚಮರ ಏಳಿಗೆಗಾಗಿ ಕೈಗೊಂಡ ಅಭಿವೃದ್ಧಿ ಕಾರ್ಯಗಳ ಅನಾವರಣ ಮಾಡಿದ್ದಾರೆ. ಸ್ವಾತಂತ್ರ್ಯಪೂರ್ವದಲ್ಲಿಯೇ ದೀನದಲಿತರ ಸೇವೆಯಲ್ಲಿ ಕಾರ್ಯಪ್ರವೃತ್ತರಾದ ಆರ್.ಗೋಪಾಲ ಸ್ವಾಮಿ ಅಯ್ಯರ್ ಅವರು ಕೆಲವೇ ಮಂದಿ ದಲಿತ ಸುಧಾಕರಲ್ಲಿ ಒಬ್ಬರಾಗಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಮೂರು ದಶಕಗಳ ಕಾಲ ಪಂಚಮರ ಏಳಿಗೆಗಾಗಿ ತಮ್ಮ ಇಡೀ ವೈಯಕ್ತಿಕ ಬದುಕನ್ನು ಯಾವುದೇ ಪ್ರಚಾರಕ್ಕಾಗಿ ಮತ್ತು ಸೇವಾ ಪ್ರತಿಫಲಾಕ್ಷೆಯಿಲ್ಲದೆ ಸಮರ್ಪಿಸಿಕೊಂಡಿದ್ದು, ಪಂಚಮರ ಸರ್ವಾಂಗೀಣ ಅಭಿವೃದ್ಧಿಗಾಗಿ ಅಯ್ಯರ್ ಕೈಗೊಂಡ ಸಾಮಾಜಿಕ, ಶೈಕ್ಷಣಿಕ

ಸುಧಾರಣೆಗಳು ಇಂದಿಗೂ ನಮ್ಮನ್ನು ಚಿಂತನೆಗೆ ತೊಡಗಿಸುತ್ತದೆ ಎನ್ನುವುದು ಮುಖ್ಯ. ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ಜೀವನ ಸಾಧನೆಗಳತ್ತ ಗಮನ ಹರಿಸಿ ನಿರಂತರ ಪರಿವರ್ತನಶೀಲ ಸಮಾಜದ ಅಭ್ಯುದಯಕ್ಕೆ ಅವರು ನೀಡಿದ ಕೊಡುಗೆಯನ್ನು ಸಬಾಲ್ಟರ್ನ್ ಚರಿತ್ರೆಯಡಿಯಲ್ಲಿ ಅಧ್ಯಯನ ಮಾಡುತ್ತಾ ಸಮಕಾಲೀನ ಜನರ ಗಮನ ಸೆಳೆದು ಚಿಂತನೆಗೆ ಒಳಪಡಿಸುವುದು ಈ ಅಧ್ಯಯನದ ಉದ್ದೇಶವಾಗಿದೆ ಎಂಬುದು ಗಮನಾರ್ಹವಾದುದು.

ನಾಲ್ವಡಿ ಅವರ ಕಾರ್ಯಕ್ರಮಗಳಿಗೆ ಅಯ್ಯರ್ ಸಹಕರಿಸಿದ್ದರ ಪರಿಣಾಮ ಇಂದು ಮೈಸೂರು ಪ್ರಾಂತ್ಯದಲ್ಲಿ ಪಂಚಮರ ಸಾಮಾಜಿಕ, ಶೈಕ್ಷಣಿಕ ಬೆಳವಣಿಗೆಯನ್ನು ಕಂಡುಕೊಳ್ಳಲು ಸಾಧ್ಯವಾಗಿದೆ ಎಂದಿದ್ದಾರೆ. ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ಅಧ್ಯಯನವು ಸಮಾಜದ ಪುನಾರಚನೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. ಗೋಪಾಲಸ್ವಾಮಿ ಅಯ್ಯರ್ ಅವರ ದಲಿತೋದ್ಧಾರ ಕಾರ್ಯಗಳು, ನಾಲ್ವಡಿ ಅವರ ಸರ್ಕಾರ ಮತ್ತು ಅಯ್ಯರ್, ದಲಿತರ ಶಿಕ್ಷಣ, ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಪ್ರಥಮ ದಲಿತ ಮಹನೀಯರು ಎಂಬ ಅಧ್ಯಾಯಗಳನ್ನೊಳಗೊಂಡಿದೆ. ಇವು ಸಾಮಾನ್ಯವಾಗಿ ಕಂಡುಬರುವ ಅಧ್ಯಾಯಗಳಾದರೂ ಸಬಾಲ್ಟರ್ನ್ ನೆಲೆಯಲ್ಲಿ ಇವು ದಲಿತರ ಧ್ವನಿಗಳಾಗಿವೆ.

ಬ್ರಾಹ್ಮಣ ಕುಲದಲ್ಲಿ ಹುಟ್ಟಿ ಪಂಚಮರ ಏಳಿಗೆಗಾಗಿ ಕೈಗೊಂಡ ಅಭಿವೃದ್ಧಿ ಕಾರ್ಯಗಳಿಂದ 'ಪಂಚಮರ' ಆರ್.ಗೋಪಾಲಸ್ವಾಮಿ ಅಯ್ಯರ್ ಎಂದೇ ಹೆಸರಾದರು ಎಂಬುದನ್ನು ಮೊದಲು ಸಂಶೋಧಕರು ವಿವರಿಸಿದ್ದಾರೆ. ಅವರು ಹಳ್ಳಿಹಳ್ಳಿಗೂ ಹೋಗಿ ದಲಿತ ಹುಡುಗರನ್ನು ಗುರುತಿಸಿ ಅವರನ್ನು ಕರೆತಂದು ಹಾಸ್ಟೆಲ್‌ಗಳಿಗೆ ಸೇರಿಸಿ ಶಿಕ್ಷಣವನ್ನು ಕೊಡಿಸುತ್ತಿದ್ದರು. ಆದರೆ ಪಂಚಮರಿಗೆ ಪಾಠ ಹೇಳಲು ಯಾರು ಮುಂದೆ ಬರದಿದ್ದನ್ನು ಇಲ್ಲಿ ತಿಳಿಸುತ್ತಾ ಕೊನೆಗೆ ತಲಕಾಡು ರಂಗೇಗೌಡರು ಮತ್ತು ವರದರಾಜ್ ಅಯ್ಯಂಗಾರ್ ಒಪ್ಪಿದ ವಿಷಯ ತಿಳಿಸಿದ್ದಾರೆ. ಈ ನಿಟ್ಟಿನಲ್ಲಿ ಶಿಕ್ಷಣವನ್ನು ದಲಿತರಿಗೆ ಕೊಡಿಸಲು ಅಯ್ಯರ್ ಅವರ ಪರಿಶ್ರಮ ಶ್ಲಾಘನೀಯವಾದುದು ಎಂಬುದನ್ನು ಸಂಶೋಧಕರು ಚರ್ಚಿಸಿದ್ದಾರೆ.

ದಲಿತರಿಗೆ ಸವರ್ಣೀಯರಿಗಿದ್ದ ಹಾಗೆ ಹೋಟೆಲ್‌ಗಳಿಗೆ ಪ್ರವೇಶವಿರಲಿಲ್ಲ. ನೀರನ್ನು ಮುಟ್ಟಬಾರದು ಎಂಬ ಷರತ್ತುಗಳಲ್ಲಿ ರಾವಣಿ ಘಟನೆ, ಸೋಮನಹಳ್ಳಿ ಘಟನೆ, ಹೆಮ್ಮನಹಳ್ಳಿಯ ಘಟನೆ, ಹುಲಿಯೂರು ದುರ್ಗ ಘಟನೆ, ಮಳವಳ್ಳಿಯ ಕುನ್ನಿರುಕುಟ್ಟಿ ಘಟನೆ, ಕೊಮ್ಮರಹಳ್ಳಿ ಘಟನೆಗಳು ನಡೆದಿವೆ. ಈ ಘಟನೆಗಳು ಹೇಗೆ ದಲಿತರ ಶೋಷಣೆಯಲ್ಲಿ ಗುರುತಿಸಿಕೊಂಡಿವೆ ಎಂಬುದು ಮುಖ್ಯ. ಹಾಗೆಯೇ ಇಂದಿಗೂ ದಲಿತರ ಮೇಲೆ ನಡೆಯುವ ದೌರ್ಜನ್ಯದ ಇಂತಹ ಘಟನೆಗಳು ನಡೆಯುತ್ತಲೇ ಇವೆ. ಸಂಶೋಧಕರು ಈ ದಲಿತರ ಶೋಷಣೆಯಲ್ಲಿ ಗುರುತಿಸಿಕೊಂಡ ಘಟನೆಗಳನ್ನು ವಿಶ್ಲೇಷಣಾ ರೂಪದಲ್ಲಿ ತಿಳಿಸಿದ್ದಾರೆ.

ನಾಲ್ವಡಿ ಅವರ ಸರ್ಕಾರ ಮತ್ತು ಅಯ್ಯರ್ ಅವರ ನಿಕಟ ಸಂಬಂಧದಿಂದ ದಲಿತರ ಕಲ್ಯಾಣ ಕಾರ್ಯಗಳನ್ನು ಜಾರಿಗೊಳಿಸಿದ್ದನ್ನು ನೋಡಬಹುದು. ಪ್ರಜಾಪ್ರತಿನಿಧಿ ಸಭೆಯಲ್ಲಿ ದಲಿತರ ಶಿಕ್ಷಣಕ್ಕೆ ಅನುದಾನದ ರೂಪದಲ್ಲಿ ಹಣ ಸಂಗ್ರಹಣೆ, ಅರಮನೆ ಪ್ರವೇಶಕ್ಕೆ ಅನುಮತಿ,

ಭಿಕ್ಷಾಟನಾ ನಿರ್ಮೂಲನೆಗಾಗಿ ಭಿಕ್ಷುಕರ ಪ್ರತಿಬಂಧಕ ಕಾಯ್ದೆ ಜಾರಿ, ಹಳ್ಳಿಗಳ ಉದ್ಧಾರ, ಪಂಚಮರ ಸಮ್ಮೇಳನ, ಆರ್ಥಿಕ ಸಮ್ಮೇಳನ, ದೇವಾಲಯಗಳಿಗೆ ಪ್ರವೇಶ, ಅನೇಕ ಹಾಸ್ಟೆಲ್‌ಗಳ ಸ್ಥಾಪನೆ, ಕೆರೆ, ಬಾವಿ, ಕಾಲುವೆಗಳಲ್ಲಿ ಮುಕ್ತವಾಗಿ ನೀರನ್ನು ಬಳಸುವ ಕಾನೂನಾತ್ಮಕ ಒಪ್ಪಿಗೆ ಇವೇ ಮೊದಲಾದ ಅಭಿವೃದ್ಧಿ ಕಾರ್ಯಗಳನ್ನು ಅಯ್ಯರ್ ಅವರು ಪ್ರಭುತ್ವದ ಜೊತೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಜಾರಿಗೆ ತರಲು ಶ್ರಮಿಸಿದರು ಎಂಬುದು ಇಲ್ಲಿ ಚರ್ಚಿತವಾಗಿರುವ ವಿಷಯ(ಪು.೬೮-೬೯). ದಲಿತರಿಗೆ ಅಯ್ಯರ್ ಅವರು ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸಲು ಸ್ಕೌಟ್ ಆ್ಯಂಡ್ ಗೈಡನ್ನು ಸ್ಥಾಪಿಸಿದರು. ಇದರ ಮೂಲಕ ದಲಿತರಿಗೆ ರಾಜ್ಯ ಮತ್ತು ರಾಷ್ಟ್ರಮಟ್ಟದ ಸ್ಕೌಟ್ ರ‍್ಯಾಲಿಯನ್ನು ಆರಂಭಿಸಿ ದಲಿತ ವಿದ್ಯಾರ್ಥಿಗಳು ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿದರು. ಮಹಾತ್ಮ ಗಾಂಧೀಜಿ ಅವರನ್ನೊಳಗೊಂಡಂತೆ ರಾಷ್ಟ್ರದ ಗಣ್ಯವ್ಯಕ್ತಿಗಳನ್ನು ಹಾಸ್ಟೆಲಿಗೆ ಕರೆತಂದು ಪರಿಚಯಿಸುತ್ತಿದ್ದರು. ಇದರ ಪರಿಣಾಮವಾಗಿಯೇ ಇಂದಿಗೂ ಕೂಡ ನರಸಿಂಹರಾಜ ಒಡೆಯರ್ ಮತ್ತು ಬಾಪೂಜಿ ವಿದ್ಯಾರ್ಥಿನಿಲಯಗಳು ಬೆಂಗಳೂರಿನಲ್ಲಿ ಕಾರ್ಯ ನಿರ್ವಹಿಸುತ್ತಿರುವುದನ್ನು ನೋಡಬಹುದು.

ವಸಾಹತುಶಾಹಿ ಕಾಲಘಟ್ಟದಲ್ಲಿ ಮೈಸೂರು ಸಂಸ್ಥಾನದ ದಲಿತರ ಶಿಕ್ಷಣ ಹೇಗೆ ಪ್ರಸಾರವಾಯಿತು ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರು ವಿವಿಧ ಕ್ಷೇತ್ರಗಳಲ್ಲಿ ಕಂಡುಕೊಂಡ ಸಾಧನೆಗಳನ್ನು ಚರ್ಚಿಸಿದ್ದಾರೆ. ಇವರು ಪಂಚಮಶಾಲೆಯಿಂದ ಶಿಕ್ಷಣ ಪಡೆದು, ವಿವಿಧ ಹುದ್ದೆಗಳನ್ನು ಅಲಂಕರಿಸಿದರು. ಇವರು ದಲಿತ ಶಿಕ್ಷಣಕ್ಕಾಗಿ ಶಿಕ್ಷಣ ಸಂಸ್ಥೆಗಳ ಸ್ಥಾಪನೆ, ವಿದ್ಯಾರ್ಥಿನಿಲಯಗಳ ಸ್ಥಾಪನೆ, ವೈದ್ಯಕೀಯ ಸೇವೆಗಾಗಿ ಆಸ್ಪತ್ರೆಗಳ ಸ್ಥಾಪನೆ, ಸಂಘ-ಸಂಸ್ಥೆಗಳ ಸ್ಥಾಪನೆ, ನ್ಯಾಯಾಲಯಗಳ ಸ್ಥಾಪನೆ ಮೊದಲಾದ ಸಾಮಾಜಿಕ ಪ್ರಗತಿಪರ ಕಾರ್ಯಗಳಲ್ಲಿ ತೊಡಗಿಕೊಂಡವರ ಜೀವನ ಸಾಧನೆಗಳನ್ನು ಎಳೆ ಎಳೆಯಾಗಿ ಚರ್ಚಿಸಿರುವುದನ್ನು ನೋಡಬಹುದು(ಪು.೧೦೧-೧೩೦). ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ದಲಿತರಿಗೆ ಶಿಕ್ಷಣ, ಉದ್ಯೋಗ ಹೀಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸಿ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಎಂದೇ ಗುರುತಿಸಿಕೊಂಡರು. ಮೈಸೂರು ಸಂಸ್ಥಾನದಲ್ಲಿ ನಾಲ್ವಡಿ ಅವರ ಸರ್ಕಾರವು ನೀಡಿದ ಸಹಕಾರದಿಂದ ಅಯ್ಯರ್ ಅವರ ಸೇವಾಕಾರ್ಯವನ್ನು ಪರಿಗಣಿಸಿ ಅವರ ಸ್ಮರಣಾರ್ಥ ಬೆಂಗಳೂರಿನ ಮಾಗಡಿ ರಸ್ತೆಯಲ್ಲಿದ್ದ ಉಕ್ಕಡಪಾಳ್ಯಕ್ಕೆ ಗೋಪಾಲಪುರ(ಇಂದಿನ ಶ್ರೀರಾಮಪುರದ ಒಂದು ಭಾಗ) ಎಂದು ಹೆಸರಿಟ್ಟಿರುವುದು ಅವರ ಸೇವಾ ಕಾರ್ಯತತ್ಪರತೆಗೆ ಸಾಕ್ಷಿಯಾಗಿದೆ. ಇಲ್ಲಿ ಸೂಕ್ಷ್ಮವಾದ ವಿಷಯದ ಕಡೆಗೆ ಗಮನ ಹರಿಸಿದಾಗ ಇಷ್ಟೆಲ್ಲಾ ಸಾಧನೆ ಮಾಡಿದ ಇವರಿಗೆ ಸವರ್ಣೀಯರು ಹೇಗೆ ಪ್ರತಿಕ್ರಿಯಿಸಿದರು ಎಂಬುದು ಚರ್ಚಾರ್ಹ ಸಂಗತಿ. ಇವರು ಬ್ರಾಹ್ಮಣ ಜಾತಿಯಲ್ಲಿ ಹುಟ್ಟಿದವರಾಗಿದ್ದರಿಂದ ಯಾವುದೇ ಸಮಾಜದ ಕೇರಿಗಾಗಲೀ, ಅರಮನೆಗಾಗಲೀ ಹೋಗಬೇಕಾದರೂ ಅಡೆತಡೆಗಳಿರಲಿಲ್ಲ. ಆದರೆ ದಲಿತರ ಶಿಕ್ಷಣಕ್ಕಾಗಿ ಶಾಲೆಗಳಿಗೆ ಸೇರಿಸಲು ಬಂದಾಗ ಮೇಲ್ವರ್ಗದ ಜನತೆ ವಿರೋಧಿಸಿದ್ದುಂಟು. ಆದರೆ ಎಲ್ಲೋ ಒಂದು ಕಡೆ ಬ್ರಾಹ್ಮಣ್ಯ ಎಂಬ ಐಡೆಂಟಿಟಿ ಕೆಲಸ ಮಾಡುತ್ತಿರುವುದರಿಂದ ಹೆಚ್ಚಿನ ಮಟ್ಟಿಗೆ

ಪ್ರತಿರೋಧ ಉಂಟಾಗಲಿಲ್ಲ. ಅಂದರೆ ಜಾತಿ ಎಂಬುದು ಸಮಾಜವ್ಯವಸ್ಥೆಯಲ್ಲಿ ಹೇಗೆ ಕೆಲಸ ಮಾಡುತ್ತದೆ ಎಂಬುದು ಇದಕ್ಕೆ ಮುಖ್ಯ ಕಾರಣ. ಒಟ್ಟಿನಲ್ಲಿ ದಲಿತರ ಏಳಿಗೆಗಾಗಿಯೇ ತಮ್ಮ ಜೀವನದುದ್ದಕ್ಕೂ ಶ್ರಮಿಸಿದರು ಎಂಬುದನ್ನು ಮುಖ್ಯವಾಗಿ ಇಲ್ಲಿ ಮನಗಾಣಬಹುದು. ಚರಿತ್ರೆಯಲ್ಲಿ ಮರೆಯಾದ ಎಷ್ಟೋ ವಿಚಾರಗಳು ಈ ನಿಬಂಧದಿಂದ ಸಂಶೋಧಕರು ಹೊರಚೆಲ್ಲಿದ್ದಾರೆ.

ಸವಿತ ಕೆ.ಎಸ್. ಅವರು **ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ ೧೮೮೧–೧೯೫೬(೨೦೦೯)**[೩] ಎಂಬ ಎಂ.ಫಿಲ್.ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಉಪಕೇಂದ್ರವಾದ ವಿದ್ಯಾವರ್ಧಕ ಸಂಘ(ಮಂಡ್ಯ)ಕ್ಕೆ ಸಲ್ಲಿಸಿದ್ದಾರೆ. ಈ ನಿಬಂಧವು ಮೈಸೂರು ಸಂಸ್ಥಾನದಲ್ಲಿ ಮಹಿಳಾಕಲ್ಯಾಣಕ್ಕೆ ಯಾವ ಕಾರ್ಯಕ್ರಮಗಳು ರೂಪಿತವಾದವು ಎಂಬುದನ್ನು ಚರ್ಚಿಸುತ್ತದೆ. ಫ್ರೆಂಚ್ ಚಿಂತಕ ಮಿಶೆಲ್ ಫುಕೋ ಹೇಳುವಂತೆ ಕ್ಷೀಣವಾಗಿ ಮಿನುಗುತ್ತಿರುವ ಕನಿಷ್ಠ ಮಟ್ಟಿಗಿನ 'ಸತ್ಯ'ವೂ ಸಹ ವಿಶಾಲಾರ್ಥದಲ್ಲಿ ರಾಜಕೀಯ ಶಕ್ತಿಗಳಿಂದ ರೂಪಿತವಾಗಿರುವಂತಹದ್ದು. ಆದ್ದರಿಂದ ಕೆಳಸ್ತರದ ಇತಿಹಾಸ ಅಥವಾ ಸ್ತ್ರೀ ನೆಲೆಯಲ್ಲಿ ಇತಿಹಾಸ ಎನ್ನುವುದು ನಿರಂತರ ಬದುಕಿನ ಪ್ರಕ್ರಿಯೆಯಲ್ಲಿ ಆಗುವಂಥದ್ದು. ಆದ್ದರಿಂದಲೇ ಈ ಪ್ರಕ್ರಿಯೆಯಲ್ಲಿ ಬದುಕೆಂಬುದು ಬರೆಸಿಕೊಳ್ಳಲು, ಪ್ರಕಟಪಡಿಸಿಕೊಳ್ಳಲು ಕಾಯುತ್ತಿರುವುದಿಲ್ಲ. ಬರೆಯಬಲ್ಲಂತಹ ಬದುಕು ಎಲ್ಲರಿಗೂ ಇರುವುದಿಲ್ಲ. ಯಾರ ಬದುಕು ಬರೆಯಲು ಯೋಗ್ಯ ಎಂದು ನಿರ್ಧರಿಸುವುದೂ ಸಹ ಸಾಮಾಜಿಕ ಮತ್ತು ಸಾಂಸ್ಕೃತಿಕ ಶಕ್ತಿಗಳೇ ಎಂದಿದ್ದಾರೆ. ಈ ನಿಟ್ಟಿನಲ್ಲಿ ಮಹಿಳೆಯು ಗುರುತಿಸಿಕೊಂಡಿದ್ದಾಳೆ ಎಂಬುದು ಮುಖ್ಯ.

ಹಳೇ ಮೈಸೂರು ಸಂಸ್ಥಾನ ಆಧುನಿಕ ಮೈಸೂರು ಎಂದು ಪಲ್ಲಟಗೊಳ್ಳುವಾಗ ಆದ ಸಾಮಾಜಿಕ ಬದಲಾವಣೆಗಳನ್ನು ಮಹಿಳಾ ದೃಷ್ಟಿಯಿಂದ ನೋಡಿದಾಗ ಈ ಬದಲಾವಣೆಗಳು ಬ್ರಿಟಿಷರ ಸಾಮಾಜಿಕ ನೀತಿಯ ಒತ್ತಡಗಳಿಂದಾಗಿ ೧೯ನೇ ಶತಮಾನದಲ್ಲಿ ಕಂಡುಬಂದವು ಎಂಬುದನ್ನು ವಿವರಿಸುತ್ತಾರೆ. ಶಿಕ್ಷಣಪದ್ಧತಿ, ಆರ್ಥಿಕತೆ ಹಾಗೂ ಆಡಳಿತದಲ್ಲಿ ಉಂಟಾದ ಬದಲಾವಣೆಗಳ ಫಲವಾಗಿ ಹೊಸ ಸಾಮಾಜಿಕ ವರ್ಗಗಳು ಹುಟ್ಟಿದವು ಎಂಬುದು ಮುಖ್ಯ.

ಸನಾತನ ಧರ್ಮ ಮತ್ತು ಜಾತೀಯತೆಯ ಸಂಬಂಧದ ಕಟ್ಟುಪಾಡುಗಳು, ಅಂದಿನ ಸಾಮಾಜಿಕ ವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ಪಾಶ್ಚಿಮಾತ್ಯರ ಸಂಸ್ಕೃತಿ ಮತ್ತು ಶಿಕ್ಷಣದ ಪ್ರಭಾವ ಮೊದಲಾದ ಚರ್ಚೆಯನ್ನು ನೋಡಬಹುದು. ಸನಾತನಿಗಳನ್ನು ಲೆಕ್ಕಿಸದೇ ಜ್ಯೋತಿರಾವ್ ಫುಲೆ ಅವರು ಶೂದ್ರರ ಅವನತಿಗೆ ಅವರ ಅನಕ್ಷರತೆಯೇ ಕಾರಣವೆಂದು ತಿಳಿದು ಸ್ವತಃ ಶಾಲೆಗಳನ್ನು ಪ್ರಾರಂಭಿಸಿದರು. ತಮ್ಮ ಹೆಂಡತಿಯಾದ ಸಾವಿತ್ರಿಬಾಯಿಯವರನ್ನು ವಿದ್ಯೆ ಕಲಿಸಲು ತರಬೇತಿ ನೀಡಿದರು. ಅನಂತರ ಶೂದ್ರ ಹೆಣ್ಣುಮಕ್ಕಳಿಗೆ ಪಾಠ ಹೇಳಿಕೊಡಲು ಮುಂದಾದರು. ಹೀಗೆ ವಸಾಹತುಶಾಹಿ ಕಾಲದಲ್ಲಿಯೇ ಸ್ತ್ರೀಯರಿಗೆ ಶಿಕ್ಷಣ ನೀಡಿರುವುದನ್ನು ಚರ್ಚಿಸಿದ್ದಾರೆ. ಪ್ರತ್ಯೇಕವಾಗಿ ನಿಮ್ನ ವರ್ಗಗಳಿಗೆ ಶಾಲೆಗಳು ಪ್ರಾರಂಭವಾದವು. ಮಹಿಳಾ ಅಭಿವೃದ್ಧಿಗಾಗಿ ಅನೇಕ ಸಂಘ–ಸಂಸ್ಥೆಗಳು ಕಾರ್ಯ ನಿರ್ವಹಿಸಿವೆ. ಭಗಿನಿ ಸೇವಾ ಸಮಾಜ, ವಾಣಿವಿಲಾಸ ಮಹಿಳಾ ಕ್ಲಬ್, ಶಾರದ ಸ್ತ್ರೀ ಸಮಾಜ ಟ್ರಸ್ಟ್, ಅಖಿಲ ಕರ್ನಾಟಕ ಮಕ್ಕಳ ಕೂಟ ಇನ್ನೂ

ಮುಂತಾದವರು ಮಹಿಳೆಯರ ಶಿಕ್ಷಣ, ಸ್ಕಾಲರ್‌ಶಿಪ್, ಹಾಸ್ಟೆಲ್, ಉದ್ಯೋಗ ಮೊದಲಾದ ಸೌಲಭ್ಯಗಳನ್ನು ಒದಗಿಸಿದ್ದರ ವಿವರಗಳನ್ನು ತಿಳಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಸ್ತ್ರೀಯರ ಸ್ಥಾನಮಾನವನ್ನು ಉನ್ನತೀಕರಿಸುವ ಸಲುವಾಗಿ ಅನೇಕ ಕಾಯ್ದೆಗಳನ್ನು ಜಾರಿಗೊಳಿಸಿದರು. ಹಿಂದೂ ವಿಧವಾವಿವಾಹ ಕಾಯ್ದೆ, ಬಾಲ್ಯವಿವಾಹ ನಿಷೇಧ ಕಾಯ್ದೆ, ಹಿಂದೂ ಉತ್ತಾರಾಧಿಕಾರ ಕಾನೂನುಗಳನ್ನು ಜಾರಿಗೆ ತಂದರು. ಹಾಗೆಯೇ ಸ್ವಾತಂತ್ರ್ಯಾನಂತರ ಸಂವಿಧಾನಾತ್ಮಕವಾಗಿ ಕಾನೂನುಗಳನ್ನು ಜಾರಿಗೆ ತಂದ ವಿಚಾರಗಳನ್ನು ವಿವರಿಸಿದ್ದಾರೆ(ಪು.೧೧೧). ಇಂದಿಗೂ ಈ ಕಾನೂನುಗಳು ಚಾಲ್ತಿಯಲ್ಲಿದ್ದು ಸ್ತ್ರೀಯರ ಸ್ಥಾನಮಾನವನ್ನು ಉನ್ನತೀಕರಿಸಿವೆ ಎಂಬುದು ಮುಖ್ಯ ಹೀಗೆ ಸಬಾಲ್ಟರ್ನ್ ನೆಲೆಯಲ್ಲಿ ಮೂಡಿಬಂದ ಈ ನಿಬಂಧವನ್ನು ಸ್ತ್ರೀಯರ ಸ್ಥಾನಮಾನದ ಬಗೆಗೆ ಸವಿವರವಾಗಿ ಕಟ್ಟಿದ್ದಾರೆ. ಇಲ್ಲಿ ಬಳಸಿಕೊಂಡ ಆಕರಗಳು ಪ್ರಮುಖ ವಾದವುಗಳಾಗಿವೆ.

ಪ್ರಶಾಂತ್ ಕೆ.ಸಿ. ಅವರು ಮಂಗಳೂರು ವಿಶ್ವವಿದ್ಯಾಲಯಕ್ಕೆ **ಹಿಸ್ಟೋರೀಜಿಂಗ್ ಎ ರೀಜನ್: ಮೈಸೂರ್ ೧೫೬೫-೧೯೪೯ ಇನ್ ದಿ ರೈಟಿಂಗ್ಸ್ ಆಫ್ ಸಿ.ಹಯವದನ ರಾವ್ ಆ್ಯಂಡ್ ಎಂ. ಶಾಮರಾವ್(೧೯೯೯)**[೪] ಎಂಬ ಎಂ.ಫಿಲ್.ನಿಬಂಧವನ್ನು ಸಲ್ಲಿಸಿದ್ದಾರೆ. ಈ ನಿಬಂಧದಲ್ಲಿ ಸಂಶೋಧಕರು ೧೯ ಮತ್ತು ೨೦ನೇ ಶತಮಾನದ ದಶಕದಲ್ಲಿ ಕ್ರಿ.ಶ.೧೬೬೫ ರಿಂದ ೧೯೪೯ರವರೆಗಿನ ಕಾಲದ ಮೈಸೂರು ಒಡೆಯರ ಚರಿತ್ರೆಯನ್ನು ಸಿ.ಹಯವದನ ರಾವ್ ಮತ್ತು ಎಂ.ಶಾಮರಾವ್ ಅವರು ತಮ್ಮ ಬರಹದ ಕೃತಿಗಳ ಮೂಲಕ ಹೇಗೆ ಕಟ್ಟಿದ್ದಾರೆ ಎಂಬುದನ್ನು ಸಮೀಕ್ಷೆ ಮತ್ತು ಮೌಲ್ಯಮಾಪನ ಮಾಡಿದ್ದಾರೆ.

ಸಿ.ಹಯವದನರಾವ್ ಅವರು 'ಮೈಸೂರ್ ಗ್ಯಾಸೆಟಿಯರ್' ಐದು ಸಂಪುಟಗಳು(೧೯೨೭-೧೯೩೦) ಮತ್ತು 'ಹಿಸ್ಟರಿ ಆಫ್ ಮೈಸೂರ್' ಮೂರು ಸಂಪುಟಗಳು(೧೯೪೩-೧೯೪೬) ಮತ್ತು ಎಂ.ಶಾಮರಾವ್ ಅವರು 'ಮಾರ್ಡನ್ ಮೈಸೂರು' ಎರಡು ಸಂಪುಟ(೧೯೩೬)ಗಳನ್ನು ಹೊರತಂದಿದ್ದಾರೆ. ಈ ಕೃತಿಗಳ ಮೂಲಕ ಕ್ರಿ.ಶ.೧೬೬೫ರಿಂದ ೧೯೪೯ರವರೆಗಿನ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವಿಕೆಯ ಕೆಲಸ ಮಾಡಿದ್ದಾರೆ ಎಂಬುದು ಇಲ್ಲಿ ಮುಖ್ಯ. ಹಾಗೆಯೇ ಎಂ.ಶಾಮರಾವ್ ಅವರು 'ಮೈಸೂರು ಸಂಸ್ಥಾನದ ಚರಿತ್ರೆ' ಮತ್ತು 'ಮೈಸೂರು ಸಂಸ್ಥಾನದ ಚರಿತ್ರಾಸಾರ'(೧೯೦೬), ಟೆನ್ ಇಯರ್ಸ್ ಆಫ್ ನೇಟಿವ್ ರೂಲ್ ಇನ್ ಮೈಸೂರು(೧೮೯೧)ಎಂಬ ಕೃತಿಗಳನ್ನು ಹೊರತಂದಿದ್ದಾರೆ. ಈ ನಿಟ್ಟಿನಲ್ಲಿ ಸಿ.ಹಯವದನ ರಾವ್ ಮತ್ತು ಎಂ.ಶಾಮರಾವ್ ಅವರ ಕೃತಿಗಳ ವಿವರಗಳನ್ನು ಮೊದಲನೆಯದಾಗಿ ಇಲ್ಲಿ ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಚಕ್ರಾಧಿಪತ್ಯದ ಉತ್ತಾರಾಧಿಕಾರಿಗಳಾಗಿ ಒಡೆಯರು ಹೇಗೆ ಅಧಿಕಾರವನ್ನು ಪಡೆದುಕೊಂಡರು ಎಂಬುದನ್ನು ಚರ್ಚಿಸಿ ಈ ಕೃತಿಗಳ ಮೂಲಕ ವಿವರಿಸಿದ್ದಾರೆ. ಮೈಸೂರು ಆಡಳಿತವನ್ನು ವಿಜಯನಗರ ಆಡಳಿತದ ಪರಂಪರೆಯಲ್ಲಿ ಕಾಣಲು ಸಿ.ಹಯವದನ ರಾವ್ ಮತ್ತು ಎಂ.ಶಾಮರಾವ್ ಇಬ್ಬರೂ ಪ್ರಯತ್ನಿಸಿರುವುದನ್ನು ಕಾಣಬಹುದು. ವಿಜಯನಗರ ಮತ್ತು ಮೈಸೂರು ಒಡೆಯರ ಅರಸರು ತಮ್ಮ ಎಲ್ಲಾ ಆಡಳಿತದ ಸಾರ್ವಜನಿಕ ಪ್ರಕಟಣೆಗಳಲ್ಲಿ

ವರಾಹ ಮುದ್ರೆಯನ್ನು ಬಳಸುತ್ತಿದ್ದರು. ಶ್ರೀರಂಗಪಟ್ಟಣದ ಪ್ರತಿನಿಧಿತ್ವವನ್ನು ವಿಜಯನಗರದ ಅರಸರಿಂದ ರಾಜ ಒಡೆಯರು ಪಡೆದುಕೊಂಡಿದ್ದರಿಂದ, ಈ ರಾಜಕೀಯ ಪ್ರಭಾವ ಮೈಸೂರಿನ ವಿಕಾಸದ ಮೇಲೆ ಆಯಿತು ಎಂದು ಹಯವದನರಾವ್ ಅವರು ಹಿಸ್ಟರಿ ಆಫ್ ಮೈಸೂರು ಸಂಪುಟ-೧ರಲ್ಲಿ ವಿವರಿಸಿರುವುದನ್ನು ಚರ್ಚಿಸಿದ್ದಾರೆ. ಶಾಮರಾವ್ ಅವರು ರಾಜ ಒಡೆಯರಿಂದ ಮೈಸೂರಿನ ಸ್ವಯಂ ಆಡಳಿತ ೧೬೧೦ರಲ್ಲಿ ಪ್ರಾರಂಭವಾಗಿ ಹಾಗೆಯೇ ಮುಂದುವರಿಯಿತು. ಅದರೊಂದಿಗೆ ಊಳಿಗಮಾನ್ಯ ಪದ್ಧತಿಯು ಮೈಸೂರು ಸಾಮ್ರಾಜ್ಯಶಾಹಿ ಶಕ್ತಿಯಾಗಿ ಬೆಳೆಯಲು ಆರಂಭಿಸಿತು. ೧೬೭೭ರಲ್ಲಿ ಶಿವಾಜಿ ದಂಡಯಾತ್ರೆ ಪ್ರಾರಂಭವಾದದ್ದು, ಇಡೀ ದಕ್ಷಿಣ ಭಾರತದ ರಾಜಕೀಯ ಸಮತೋಲನವನ್ನು ನಡುಗಿಸಿತು(ಪು.೫೩). ಅಂದರೆ ಮೈಸೂರಿನ ಒಡೆಯರು ಮತ್ತು ಮರಾಠರ ಸಂಬಂಧಗಳನ್ನು ಹಯವದನರಾವ್ ಅವರು ಹಿಸ್ಟರಿ ಆಫ್ ಮೈಸೂರು ಸಂಪುಟ-೧ರಲ್ಲಿ ವಿವರಿಸಿರುವ ಅಂಶಗಳನ್ನು ತಿಳಿಸಿದ್ದಾರೆ. ಅನಂತರ ಚಿಕ್ಕದೇವರಾಜ ಒಡೆಯರ ಸತತ ಪ್ರಯತ್ನಗಳಿಂದ ಮೈಸೂರು ಹಾಗೆಯೇ ಮುನ್ನಡೆಯಿತು ಎಂಬುದನ್ನು ಶಾಮರಾವ್ ಅವರು ತಮ್ಮ ಕೃತಿಗಳಲ್ಲಿ ತಿಳಿಸಿದ ವಿವರಗಳನ್ನು ಚರ್ಚಿಸಿದ್ದಾರೆ(ಪು.೬೬).

ಮೂರನೇ ಅಧ್ಯಾಯದಲ್ಲಿ ದಳವಾಯಿಗಳ ಅಧಿಕಾರವನ್ನು ವಿವರಿಸಿದ್ದಾರೆ. ನಂಜರಾಜಯ್ಯನು ಮರಾಠರು ಮತ್ತು ನಿಜಾಮರ ಆಕ್ರಮಣಗಳ ವಿರುದ್ಧ ಮೈಸೂರನ್ನು ರಕ್ಷಿಸುವುದಲ್ಲದೇ ವಿಸ್ತರಣೆಗೆ ಅವಕಾಶ ಸಿಕ್ಕಿದಾಗಲೆಲ್ಲ ಬಳಸಿಕೊಳ್ಳುತ್ತಾ ಶತ್ರುಗಳನ್ನು ಹಿಮ್ಮೆಟ್ಟಿಸಲು ಒಂದು ಒಕ್ಕೂಟವನ್ನು ಸಹ ಮಾಡಿಕೊಳ್ಳಲಾಗಿತ್ತು ಎಂಬುದನ್ನು ಹಯವದನರಾವ್ ತಿಳಿಸಿರುವ ವಿಷಯಗಳನ್ನು ಈ ನಿಬಂಧದಲ್ಲಿ ವಿವರಿಸಿದ್ದಾರೆ. ತಿರುಚನಾಪಳ್ಳಿಯ ಆಕ್ರಮಣದಿಂದಾಗಿ ಮೈಸೂರಿನ ಬೊಕ್ಕಸ ಬರಿದು ಮಾಡಿ, ೧೭೫೯ರಲ್ಲಿ ದಳವಾಯಿಗಳ ಆಳ್ವಿಕೆ ಕೊನೆಗೊಂಡಿತು. ಸೈನಿಕನಾಗಿದ್ದ ಹೈದರಾಲಿ ಅಧಿಕಾರಕ್ಕೆ ಬರಲು ಸಹಾಯಕವಾಯಿತು ಎಂಬ ವಿವರಗಳನ್ನು ಶಾಮರಾವ್ ಅವರ ಕೃತಿಗಳಲ್ಲಿ ತಿಳಿಸಿರುವುದನ್ನು ಈ ನಿಬಂಧದಲ್ಲಿ ನೋಡಬಹುದು(ಪು.೯೭-೧೦೮).

ನಾಲ್ಕನೇ ಅಧ್ಯಾಯದಲ್ಲಿ ಹೈದರಾಲಿಯ ಏಳಿಗೆ, ಮೈಸೂರಿನ ವಿಸ್ತರಣೆಯನ್ನು ಕುರಿತ ಅಂಶಗಳನ್ನು ಚರ್ಚಿಸಿದ್ದಾರೆ. 'ಬೃಹತ್ ಮೈಸೂರು' ಅಥವಾ 'ಮೈಸೂರಿನ ದಕ್ಷಿಣ ಸಾಮ್ರಾಜ್ಯ'ವನ್ನು ಗಳಿಸುವುದು ಹೈದರ್‌ನ ಗುರಿಯಾಗಿತ್ತು. ಈ ಗುರಿ ಸಾಧನೆಗೆ ಅವನು 'ಒಳಗೆ ಶಾಂತಿ, ಹೊರಗೆ ಶಕ್ತಿ' ಎಂಬ ನೀತಿಯನ್ನು ಪಾಲಿಸಬೇಕಾಗಿತ್ತು. ಹೈದರ್‌ನ ಬಗೆಗೆ ಬರೆಯುತ್ತಾ ಹಯವದನರಾವ್ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. "ಯುದ್ಧ ಒಂದರ ಮೇಲೆ ಮಾತ್ರ ಸಂಪೂರ್ಣವಾಗಿ ಅವಲಂಬಿಸಿದ್ದು, ತನ್ನ ಅಕ್ಕಪಕ್ಕದವರೊಡನೆ ಲಾಭದಾಯಕವಾಗಿ ಸಂಬಂಧ ಬೆಳೆಸಬೇಕಾಗಿತ್ತು. ರಾಜನೀತಿಯನ್ನು ಬಿಟ್ಟು ಯುದ್ಧ ಒಂದನ್ನೇ ಅವಲಂಬಿಸಿದ್ದರಿಂದ ಹೈದರ್ ತನ್ನ ಉದ್ದೇಶ(ಮೈಸೂರು ಸಾಮ್ರಾಜ್ಯವನ್ನು ವಿಸ್ತರಿಸುವ ಉದ್ದೇಶ) ಸಾಧಿಸದೇ ಹೋದ ಎಂದಿದ್ದಾರೆ(ಪು.೧೭೪). ಹಯವದನರಾವ್ ಅವರೇ ಬರೆಯುವಂತೆ "ಮರಾಠರು ಮತ್ತು ನಿಜಾಮರೊಡನೆ ಒಂದು ಒಕ್ಕೂಟವನ್ನು ಮಾಡಿಕೊಳ್ಳದೇ, ವಾರನ್ ಹೇಸ್ಟಿಂಗ್ಸ್‌ನು ತನ್ನ ವಿರುದ್ಧ ಒಕ್ಕೂಟ ಮಾಡಿಕೊಳ್ಳಲು ಸಾಧ್ಯವಾಗುವಂತೆ ಹೈದರ್ ಮಾಡಿದ. ಅದರ

ಫಲಿತಾಂಶವಾಗಿ ಬ್ರಿಟಿಷ್ ಮರಾಠ-ನಿಜಾಮ ಒಕ್ಕೂಟ ದಕ್ಷಿಣ ಭಾರತವನ್ನು ಪುನಃ ಹಂಚಲು ನಿಂತಾಗ, ಹೈದರ್‌ನಾಗಲೀ, ಅವನ ಮಗ ಟಿಪ್ಪುವಿಗಾಗಲೀ ಅದನ್ನು ಸೋಲಿಸಲು ಸಾಧ್ಯವಾಗಲಿಲ್ಲ" ಎಂಬುದನ್ನು ತಿಳಿಸಿದ್ದಾರೆ. ಶಾಮರಾವ್ ಅವರು ಹೇಳಿರುವಂತೆ 'ಹೈದರನ ಸಾವು ಭಾರತದ ಚರಿತ್ರೆಯಲ್ಲಿ ಒಂದು ಘಟನೆ ಮಾತ್ರವಲ್ಲದೇ, ಭಾರತದಲ್ಲಿ ಬ್ರಿಟಿಷರು ಶಕ್ತಿಯನ್ನು ಆ ಸಮಯದಲ್ಲೇ ಸ್ಥಾಪಿಸಲು ಸಾಧ್ಯಗೊಳಿಸಿದ್ದು ಮುಖ್ಯವಾದ ಸಂಗತಿಯಾಗಿದೆ ಎಂದರೆ ಉತ್ಪ್ರೇಕ್ಷೆಯಿಲ್ಲ.

ಅಧ್ಯಾಯ ಐದರಲ್ಲಿ ಟಿಪ್ಪುವಿಗೆ ದೊರಕಿದ ಸ್ಥಾನ, ಶಿಕ್ಷೆಯ ವಿವರಗಳನ್ನು ನೋಡಬಹುದು. ಟಿಪ್ಪುವಿನ ಅರಿವಿಗೆ ಬಂದದ್ದು ದೇಶದಲ್ಲಿ ರಾಜಕೀಯ ಬೆಳವಣಿಗೆಗಳಿಂದಾಗಿ ಹಿಂದೆ ಇದ್ದ ಶಕ್ತಿಯ ಸಮತೋಲನ ಈಗ ಇಲ್ಲವಾಗಿರುವುದು. ಈ ಸಮತೋಲನವನ್ನು ಪುನಃ ಸ್ಥಾಪಿಸದೇ ಹೋದರೆ ನಮ್ಮ ರಾಷ್ಟ್ರದ ಅಸ್ತಿತ್ವವೇ ಇಲ್ಲವಾಗುವುದು ಎಂದು ಅವನು ಯೋಚಿಸಿದ. ಅದರಂತೆ ಅವನ ಎಲ್ಲಾ ಕಾರ್ಯಗಳನ್ನು ಈ ಗುರಿ ಸಾಧನೆಗೆ ಮುಡುಪಾಗಿಟ್ಟನು. ಪ್ರಧಾನ ಸ್ಥಾನವನ್ನು ಗಳಿಸಿಕೊಳ್ಳಲು ತನ್ನ ತಂದೆ ಆರಂಭಿಸಿದ ಯುದ್ಧವನ್ನು ಮುಂದುವರಿಸಲು ನಿರ್ಧರಿಸಿದನು. ಟಿಪ್ಪುವಿಗೆ ಶ್ರೀರಂಗಪಟ್ಟಣದ ಒಪ್ಪಂದದಿಂದಾಗಿ ಸಾಕಷ್ಟು ಅವಮಾನವಾಗಿತ್ತು, ಹಯವದನರಾವ್ ಹೇಳಿರುವಂತೆ ವೆಲೆಸ್ಲಿಗೆ, ಟಿಪ್ಪು ಮತ್ತು ಫ್ರೆಂಚರ ಸ್ನೇಹ ಭಾರತದಲ್ಲಿನ ಬ್ರಿಟಿಷ್ ಅಸ್ತಿತ್ವಕ್ಕೆ ಅಪಾಯ ಉಂಟುಮಾಡಬಲ್ಲದು. ಆದ್ದರಿಂದ ಟಿಪ್ಪುವಿಗೆ ಸ್ನೇಹಹಸ್ತ ಚಾಚಿ ಮೇಜರ್ ಡೊವಟೆನ್‌ನನ್ನು ಕಳುಹಿಸಲು ನಿರ್ಧರಿಸಿದನು. ಆದರೆ ಟಿಪ್ಪು ಬರಮಾಡಿಕೊಳ್ಳಲಿಲ್ಲ. ಆದರೆ ಜನರಲ್ ಹ್ಯಾರಿಸ್ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದ. ಇದೇ ನಾಲ್ಕನೇ ಮೈಸೂರು ಯುದ್ಧ. ಇದರೊಂದಿಗೆ ಟಿಪ್ಪು ಕನಸುಗಳು ಕೊನೆಗೊಂಡವು ಎಂದಿದ್ದಾರೆ(ಪು.೨೧೧). ಶಾಮರಾವ್ ಹೇಳಿರುವಂತೆ 'ಟಿಪ್ಪುವಿನ ನಾಶಕ್ಕೆ ಮುಖ್ಯ ಕಾರಣ ಫ್ರಾನ್ಸ್ ಮತ್ತು ಇಂಗ್ಲೆಂಡ್‌ನ ನಡುವಿನ ಸ್ಪರ್ಧೆ', ಆದರೆ ಈ ಯುದ್ಧವನ್ನು ಟಿಪ್ಪು ನಡೆಸಿದ ರೀತಿ ಟೀಕೆಗೆ ಒಳಗಾಗಿದೆ. ಶತ್ರುವಿನ ಆಗಮನ ತಿಳಿದ ಕೂಡಲೇ ಕೋಟೆಯೊಳಗೆ ಬಾಗಿಲು ಮುಚ್ಚಿ ಟಿಪ್ಪು ಕುಳಿತುಕೊಂಡನಂತೆ. ತನ್ನ ಜೀವನದ ಅತ್ಯಂತ ಗಂಭೀರ ಕ್ಷಣಗಳಲ್ಲಿ ತನ್ನ ಹಣೆಬರಹದ ಬಗ್ಗೆ ಚಿಂತಿಸುತ್ತಾ ಕುಳಿತನೆಂದು ಹಯವದನರಾವ್ ಬರೆಯುತ್ತಾರೆ. ಮೈಸೂರಿನ ಆಡಳಿತದ ಸಂದರ್ಭದಲ್ಲಿ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ಮೈಸೂರನ್ನು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ವಿಜಯನಗರದ ವಾರಸುದಾರರ ರಾಜ್ಯವಾಗಿ ಪರಿಗಣಿಸುತ್ತಾರೆ. ಅದರಂತೆ ತಮ್ಮ ಕೃತಿಗಳ ಮೂಲಕ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿದರು ಎಂಬುದನ್ನು ಈ ನಿಬಂಧದಲ್ಲಿ ಚರ್ಚಿಸಿದ್ದಾರೆ.

ಮುಖ್ಯವಾಗಿ ಸಿ.ಹಯವದನರಾವ್ ಅವರು ಅರಮನೆಯಲ್ಲಿ ನಡೆದ ಒಳಸಂಚು, ಷಡ್ಯಂತ್ರಗಳ ವಿವರಗಳನ್ನು ತಿಳಿಸಿರುವುದಿಲ್ಲ ಈ ವಿಚಾರಗಳನ್ನು ತಿಳಿಸಬಹುದಾಗಿತ್ತು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ನಡೆದ ಬರ್ಬರ ಕೃತ್ಯದ ಬಗೆಗೆ ಗಮನ ಹರಿಸಿಲ್ಲ ಎಂಬುದು ಮುಖ್ಯ. ಕ್ರೂರ ತೆರಿಗೆಯ ವಿರುದ್ಧ ನಡೆದ ಹೋರಾಟದಲ್ಲಿ ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕೊಲ್ಲಿಸಿದ ಕ್ರೌರ್ಯದ ಬಗೆಗೆ ವಿವರಗಳಿಲ್ಲ. ಇದು ಒಂದು ರಾಷ್ಟ್ರೀಯ

ಧೋರಣೆಯಾಗಿಯೇ ಗುರುತಿಸಿಕೊಂಡಿರುವುದು ಚರ್ಚಾರ್ಹ ಸಂಗತಿ. ಇಲ್ಲಿ ತೆರಿಗೆಗಳನ್ನು ಕಡಿಮೆ ಮಾಡುವವರೆಗೆ, ಭೂಮಿಯನ್ನು ಉಳುವುದೇ ಬೇಡವೆಂದು ಜಂಗಮರು ರೈತರನ್ನು ಸಂಘಟಿಸುತ್ತಿದ್ದರು. ಒಂದು ರೀತಿಯಲ್ಲಿ ಆ ಕಾಲಕ್ಕೆ ಇದು ಅದ್ಭುತವಾದ ಸಂಘಟನೆ, ಪ್ರತಿಭಟನೆ. ಆದರೆ ರಾಜನಿಗೆ, ಈ ಕ್ರಮ 'ರಾಜದ್ರೋಹ'. ಆದ್ದರಿಂದ 'ಮರಣದಂಡನೆ' ಎಂಬ ವಿಚಾರಗಳನ್ನು ಗಮನಿಸಬೇಕಾಗಿತ್ತು(ಎಸ್.ಚಂದ್ರಶೇಖರ್, ವಸಾಹತುಕಾಲೀನ ಕರ್ನಾಟಕ, ಪು.೧೫). ಟಿಪ್ಪು ಕೊಡಗಿನಲ್ಲಿ ಜನರನ್ನು ಇಸ್ಲಾಂಧರ್ಮಕ್ಕೆ ಮತಾಂತರ ಮಾಡಿದ ಎಂದಾದರೆ ಅಲ್ಲಿ ರಾಜಕೀಯ ತುರ್ತುಗಳೇ ಕಾರಣ ಎನ್ನಬಹುದು. ತನ್ನ ಶತ್ರುಗಳಾದ ಬ್ರಿಟಿಷರಿಗೆ ಸಹಾಯ ಮಾಡಿದ ವಿಚಾರವು ಕಾರಣವಿರಬಹುದು ಎಂಬುದನ್ನು ಗಮನಿಸಬೇಕಾಗಿದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಧರ್ಮಾಂಧರು ಎಂದು ಸಿ.ಹಯವದನರಾವ್ ಅವರು ಖಂಡಿಸುತ್ತಾರೆ. ಅವರು ೧೭೯೯ರ ಹೊತ್ತಿಗೆ ಮೈಸೂರು ಪ್ರಾಂತ್ಯದಲ್ಲಿ ಎರಡು ದೇವಾಲಯಗಳು ಮಾತ್ರ ತೆರೆದಿದ್ದವು. ಅಲ್ಲಿನ ಸಂಪತ್ತನ್ನು ದೋಚಿಕೊಂಡು ಹೋದನು ಎನ್ನುತ್ತಾರೆ. ಅದರೆ ತಮ್ಮ ಗ್ರಂಥದಲ್ಲಿ ಹೈದರ್‌ನ ಸೇನೆ ತಿರುಚನಾಪಳ್ಳಿಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಶ್ರೀರಂಗ ದೇವಾಲಯದಲ್ಲಿ ಸ್ವತಃ ಹೈದರ್‌ನೇ ಅರ್ಚಕರು ಬರುವವರೆಗೆ ಕಾಯ್ದಿದ್ದ ವಿವರಗಳನ್ನು ನೀಡುತ್ತಾರೆ(ಸಂ.೩, ಪು.೪೧೨). ಇವರ ವಿವರಗಳು ಮುಂದಿನ ಪುಟಗಳಲ್ಲಿ ಹಾಗೆಯೇ ಉಳಿಯದೇ ಇವರನ್ನು ಮತಾಂಧ, ಕ್ರೂರಿ ಎನ್ನುತ್ತಾರೆ ಎಂಬುವುದನ್ನು ತಿಳಿಯುವುದು ಮುಖ್ಯ ಹಿಂದೂಧರ್ಮ, ಸಂಸ್ಕೃತಿಗಳ ರಕ್ಷಕ ಎಂದು ಹೊಗಳುವ ಮರಾಠರ ಪೇಶ್ವೆ ಸರದಾರ ಪರಶುರಾಮ ಬಾಹು ಶೃಂಗೇರಿ ಮಠ, ದೇವಸ್ಥಾನಗಳನ್ನು ದೋಚಿಕೊಂಡು ಹೋದಾಗ ದೇವಸ್ಥಾನಗಳಿಗೆ ಕಳೆದುಕೊಂಡಷ್ಟು ಹಣವನ್ನು ತನ್ನ ಬೊಕ್ಕಸದಿಂದ ಕೊಡಿಸಿದ್ದಕ್ಕೆ ಶೃಂಗೇರಿ ಮಠದ ದಾಖಲೆಗಳ ವಿವರಗಳನ್ನು ತಿಳಿಸಬಹುದಿತ್ತು. ಒಟ್ಟಾರೆಯಾಗಿ ಸಂಶೋಧಕರು ಈ ನಿಬಂಧದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ರಾಜಕೀಯ ನೀತಿಯ ಕೆಲವು ವಿಚಾರಗಳತ್ತ ಗಮನ ಹರಿಸಿರುವುದು ಸೂಕ್ತವಾಗಿದೆ. ಆಕರಗಳನ್ನು ಸಮರ್ಥವಾಗಿ ದುಡಿಸಿ ಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಎಂ.ಫಿಲ್. ನಿಬಂಧಗಳು ತಮ್ಮ ಸಿಮೀತ ವ್ಯಾಪ್ತಿಯಲ್ಲಿ ವಿಚಾರಗಳನ್ನು ಚರ್ಚಿಸುತ್ತವೆ ಎಂಬುದು ಮುಖ್ಯ

**೬.೨. ಪಿಎಚ್.ಡಿ. ಪ್ರಬಂಧಗಳ ವಿಶ್ಲೇಷಣೆ**

ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರದಲ್ಲಿ ಕೃತಿಗಳು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವಂತೆ ಸಂಶೋಧನಾತ್ಮಕ ಪಿಎಚ್.ಡಿ.ಮಹಾಪ್ರಬಂಧಗಳು ಕೂಡ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವ ಕಾರ್ಯ ಮಾಡುತ್ತವೆ. ಈ ಮಹಾಪ್ರಬಂಧದಲ್ಲಿ ಆಯ್ಕೆಯಾಗಿರುವ ವಿಷಯ, ಅದರ ವ್ಯಾಪ್ತಿಯ ಅಡಿಯಲ್ಲಿ ಸಂಶೋಧನೆ ಸಾಗಿರುತ್ತದೆ. ಇಲ್ಲಿ ಚರ್ಚಿಸಿರುವ ವಿಷಯ ವಿಮರ್ಶೆ, ವಿಶ್ಲೇಷಣೆಗೆ ಒಳಪಟ್ಟಿದೆಯೇ ಎಂಬುದನ್ನು ಗುರುತಿಸಬೇಕು. ಈ ಮಹಾಪ್ರಬಂಧಗಳು ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಹಿನ್ನೆಲೆಯಲ್ಲಿ ಬಂದಿದೆಯೇ, ಹಾಗೆಯೇ ಪ್ರಭುತ್ವ, ಧರ್ಮ, ಜನಮುಖಿ ಕೇಂದ್ರಿತವಾಗಿ ಬಂದಿವೆಯೇ ಎಂಬುದನ್ನು ಗುರುತಿಸಲಾಗುತ್ತದೆ.

ದೇಶಿ ಮತ್ತು ವಿದೇಶಿ ಸಂಶೋಧಕರ ಗ್ರಹಿಕೆ, ದೃಷ್ಟಿಕೋನ, ತಾತ್ವಿಕತೆ ಈ ಸೈದ್ಧಾಂತಿಕತೆ ಚೌಕಟ್ಟಿನೊಳಗೆ ವಿಮರ್ಶೆ ಮತ್ತು ವಿಶ್ಲೇಷಣೆಗೆ ಒಳಪಡಿಸುವುದಾಗಿದೆ. ಈ ಮಹಾಪ್ರಬಂಧಗಳಲ್ಲಿ ಬಳಸಿರುವ ಆಕರಗಳು, ಸಂಶೋಧನ ವಿಧಾನ, ಕಾಲಘಟ್ಟ ಇವೇ ಮೊದಲಾದ ಅಂಶಗಳನ್ನು ಪತ್ತೆ ಹಚ್ಚುವುದಾಗಿದೆ. ಈ ಮಹಾಪ್ರಬಂಧಗಳಲ್ಲಿ ಕಡೆಗಣಿಸಲ್ಪಟ್ಟಿರುವ ವಿಚಾರಗಳತ್ತ ಗಮನ ಹರಿಸಬೇಕಾಗಿರುವುದು ಮುಖ್ಯ. ಸಂಶೋಧಿಸಿರುವ ವಿಷಯ, ಅದು ಕಾಲ ಕಾಲಕ್ಕೆ ತಕ್ಕಂತೆ ಪುನಾರಚನೆ(Re-construct)ಯಾಗಬೇಕು. ಹೊಸ ದೃಷ್ಟಿಕೋನ, ಹೊಸ ಆಲೋಚನೆ ಮುಖ್ಯ. ಅದೇ ರೀತಿ ನಿರಚನೆ(De-construc)ಯಾಗಬೇಕು. ಯಾವ ರೀತಿ ದೋಷಗಳು ಇವೆ ಎಂಬುದನ್ನು ಪತ್ತೆ ಹಚ್ಚಬೇಕು.

ವೇದವಲ್ಲಿ ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **ಅಡ್ಮಿನಿಸ್ಟ್ರೇಟಿವ್ ಹಿಸ್ಟರಿ ಆಫ್ ಮೈಸೂರು(೧೯೩೬)**[೫] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಮೈಸೂರು ಸಂಸ್ಥಾನದ ಆಡಳಿತಾತ್ಮಕ ವಿಚಾರಗಳನ್ನು ವಿವರಿಸಿದ್ದಾರೆ. ಕೇಂದ್ರೀಯವಾಗಿ ಆಡಳಿತವು ಒಡೆಯರ ಅಧೀನದಲ್ಲಿದ್ದರೂ ಅನಂತರ ಬ್ರಿಟಿಷರ ಅಧೀನಕ್ಕೆ ಒಳಗಾಯಿತು ಎಂಬುದನ್ನು ತಿಳಿಸುತ್ತಾ ಹೋಗುತ್ತಾರೆ. ಪ್ರಾರಂಭದ ಒಡೆಯರಿಂದ ಹಿಡಿದು ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದವರೆಗೆ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಯದುರಾಯರಿಂದ ಸ್ಥಾಪಿತವಾದ ಈ ಮೈಸೂರು ಸಂಸ್ಥಾನ ರಾಜ ಒಡೆಯರಿಂದ ಒಂದು ಭದ್ರವಾದ ನೆಲೆಯನ್ನು ಕಂಡುಕೊಂಡಿತು. ಅನಂತರ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಒಂದು ಸುಭದ್ರ ನೆಲೆಯನ್ನು ಕಂಡುಕೊಂಡಿತು. ಮುಖ್ಯವಾಗಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಹೆಚ್ಚಿನ ತೆರಿಗೆಗಳನ್ನು ವಿಧಿಸಿದರು. ಇದರಿಂದ ಬೇಸತ್ತ ಜನರು ದಂಗೆ ಎದ್ದರು ಎಂಬ ಅಂಶಗಳನ್ನು ವಿವರಿಸಿದ್ದಾರೆ. ಆದರೆ ತೆರಿಗೆಯ ವಿರುದ್ಧ ಹೋರಾಡಲು ರೈತರನ್ನು ಸಂಘಟಿಸುತ್ತಿದ್ದ ಜಂಗಮರನ್ನು ಕೊಲ್ಲಿಸಿದ್ದರ ವಿವರಗಳನ್ನು ತಿಳಿಸಿರುವುದಿಲ್ಲ. ತೆರಿಗೆ ಕಡಿಮೆ ಮಾಡುವವರೆಗೆ ಭೂಮಿಯನ್ನು ಉಳುವುದೇ ಬೇಡ ಎಂದು ರೈತರನ್ನು ಜಂಗಮರು ಸಂಘಟಿಸುತ್ತಿದ್ದರು. ಆದರೆ 'ರಾಜದ್ರೋಹ' ಎಂದು ಜಂಗಮರಿಗೆ ಮರಣದಂಡನೆ ವಿಧಿಸಿದ ವಿಚಾರವನ್ನು ತಿಳಿಸಿರುವುದಿಲ್ಲ(ಎಸ್.ಚಂದ್ರಶೇಖರ್, ವಸಾಹತುಕಾಲೀನ ಕರ್ನಾಟಕ, ಪು.೧೫೫)ಅನಂತರ ದಳವಾಯಿಗಳಾದ ನಂಜರಾಜಯ್ಯರ ಏಳಿಗೆಯನ್ನು ವಿವರಿಸುತ್ತಾ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಏಳಿಗೆಗೆ ಬಂದರು. ಹೈದರಾಲಿ, ಟಿಪ್ಪು ಸುಲ್ತಾನ್ ಮತ್ತು ಬ್ರಿಟಿಷರ ನಡುವಿನ ಯುದ್ಧಗಳ ವಿವರಗಳನ್ನು ಇಲ್ಲಿ ಗಮನಿಸಬಹುದು. ಆದರೆ ಒಡೆಯರ ಕಾಲದಲ್ಲಿ 'ಒಡೆದು ಆಳುವ ನೀತಿ' ಹೇಗೆ ಜಾರಿಯಾಯಿತು ಎಂಬುದು ಮುಖ್ಯ

ನಂತರ ಅಧಿಕಾರವು ಒಡೆಯರ ಅಧೀನಕ್ಕೆ ಬಂದರೂ ಬ್ರಿಟಿಷರ ಹಿಡಿತ ಉಂಟಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ತೆರಿಗೆಯ ಹಿನ್ನೆಲೆಯಲ್ಲಿ ನಡೆದ ನಗರದಂಗೆಯು ಪ್ರಮುಖವಾದುದು. ನಂತರ ಮೈಸೂರು ಕಮೀಷನರ್‌ಗಳ ಆಳ್ವಿಕೆಗೆ ಒಳಪಟ್ಟಿತು. ಮಾರ್ಕ್ ಕಬ್ಬನ್ ಮತ್ತು ಬೌರಿಂಗ್ ಅವರು ಮೈಸೂರಿನ ಕೃಷಿ; ಕೈಗಾರಿಕೆ, ವ್ಯಾಪಾರ-ವಾಣಿಜ್ಯ, ರಸ್ತೆ, ಸಾರಿಗೆ ಮುಂತಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಸಾಧಿಸಿದರು. ಅನಂತರ ಹತ್ತನೆಯ ಚಾಮರಾಜ

ಒಡೆಯರು ಅಧಿಕಾರ ಪಡೆದುಕೊಂಡರು. ದಿವಾನ ರಂಗಚಾರ್ಲು ಅವರು ಪ್ರಜಾಪ್ರತಿನಿಧಿ ಸಭೆಯನ್ನು ಸ್ಥಾಪಿಸಿ ಜನಾಭಿಪ್ರಾಯವನ್ನು ಸಂಗ್ರಹಿಸುವುದು ಮತ್ತು ಅವರ ಸಂಕಷ್ಟಗಳನ್ನು ಪರಿಹರಿಸುವುದು ಈ ಸಭೆಯ ಉದ್ದೇಶವಾಗಿತ್ತು. ಈ ಹಿನ್ನೆಲೆಯಲ್ಲಿ ಆಡಳಿತವು ಸಾಗುತ್ತಾ ಹೋಗುತ್ತದೆ ಎನ್ನುವುದು ಮುಖ್ಯ. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಿವಾನರಾದ ಸರ್.ಎಂ.ವಿಶ್ವೇಶ್ವರಯ್ಯ ಮತ್ತು ಮಿರ್ಜಾ ಇಸ್ಮಾಯಿಲ್ ಅವರ ಆಡಳಿತದ ಸಾಧನೆಗಳನ್ನು ತಿಳಿಸಿದ್ದಾರೆ. ಇಲ್ಲಿ ದಿವಾನ ಹುದ್ದೆಗಾಗಿ ನಡೆದ ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ನಡುವಿನ ಹೋರಾಟಗಳು ಮುಖ್ಯ ಆದರೆ ವಿಶ್ವೇಶ್ವರಯ್ಯ ಅವರು ರಾಜೀನಾಮೆ ಕೊಡಬೇಕಾದ ಸಂದರ್ಭಗಳನ್ನು ಸೃಷ್ಟಿಸಿದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಯಾವ ವಿಚಾರವನ್ನು ತಿಳಿಸಿರುವುದಿಲ್ಲ. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಲಿತ ವರ್ಗಗಳು ಒಂದು ಐಡೆಂಟಿಟಿಯನ್ನು ಗುರುತಿಸಿಕೊಳ್ಳಲು ಅವಕಾಶವನ್ನು ಕಲ್ಪಿಸಿಕೊಟ್ಟ ವಿವರಗಳು ಮುಖ್ಯ. ಇಲ್ಲಿ ಪ್ರತಿಯೊಂದು ವಿಚಾರದಲ್ಲಿ ಒಡೆಯರ ಆಡಳಿತವನ್ನು ಹೊಗಳಿಕೆಯ ರೀತಿಯಲ್ಲಿ ಬಿಂಬಿಸುತ್ತಾರೆ. ರಾಷ್ಟ್ರೀಯವಾದಿ ಧೋರಣೆಯಲ್ಲಿಯೇ ಮುಂದುವರಿಸುತ್ತಾರೆ. ಇವರು ಆಕರಗಳನ್ನು ಇನ್ನಷ್ಟು ದುಡಿಸಿಕೊಳ್ಳಬೇಕಿತ್ತು.

ಅಚ್ಯುತರಾವ್ ಡಿ.ಎಸ್. ಅವರು **ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಂಡಿಸಿರುವ 'ಅಡ್ಮಿನಿಸ್ಟ್ರೇಟಿವ್ ಆ್ಯಂಡ್ ಸೋಷಿಯಲ್ ಹಿಸ್ಟರಿ ಆಫ್ ಮೈಸೂರು(೧೬೦೦-೧೮೦೦)(೧೯೬೪)**[೬] ಎಂಬ ಪಿಎಚ್.ಡಿ.ಮಹಾಪ್ರಬಂಧವು ಮುಖ್ಯವಾದುದಾಗಿದೆ. ಮೈಸೂರು ಒಡೆಯರ ಆಡಳಿತದಲ್ಲಿ ಸಾಮಾಜಿಕ ಹಿನ್ನೆಲೆಯು ಹೇಗೆ ಮೂಡಿಬಂದಿದೆ ಎಂಬುದು ಈ ಸಂಪ್ರಬಂಧದ ಮುಖ್ಯ ತಿರುಳು. ಪ್ರಾರಂಭದ ಒಡೆಯರಿಂದ ಹಿಡಿದು ಟಿಪ್ಪು ಸುಲ್ತಾನನ ಮರಣ, ಒಡೆಯರಿಗೆ ಮರಳಿ ಅಧಿಕಾರ ಹಸ್ತಾಂತರವಾಗುವವರೆಗಿನ ವಿವರಗಳನ್ನು ತಿಳಿಸಿದ್ದಾರೆ. ಯದುರಾಯನಿಂದ ಸ್ಥಾಪಿತವಾದ ಈ ಮೈಸೂರು ಸಂಸ್ಥಾನ ರಾಜ ಒಡೆಯರಿಂದ ಒಂದು ಭದ್ರವಾದ ನೆಲೆಯನ್ನು ಕಂಡುಕೊಂಡಿತು. ಮೈಸೂರು ಸಂಸ್ಥಾನ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಪ್ರವರ್ಧಮಾನಕ್ಕೆ ಬಂದಿತು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಹೆಚ್ಚಿನ ತೆರಿಗೆಗಳನ್ನು ವಿಧಿಸಿದರು. ಇದರಿಂದ ಬೇಸತ್ತ ಜನರು ದಂಗೆ ಎದ್ದರು ಎಂಬ ಅಂಶಗಳನ್ನು ವಿವರಿಸಿದ್ದಾರೆ. ಆದರೆ ತೆರಿಗೆ ವಿರುದ್ಧ ಹೋರಾಡಲು ರೈತರನ್ನು ಸಂಘಟಿಸುತ್ತಿದ್ದ ಜಂಗಮರನ್ನು ಕೊಲ್ಲಿಸಿದ್ದರ ವಿವರಗಳನ್ನು ತಿಳಿಸಿರುವುದಿಲ್ಲ. ಅನಂತರದಲ್ಲಿ ಆಡಳಿತ ವಹಿಸಿಕೊಂಡ ಒಡೆಯರು, ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಡಳಿತದ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ.

ಸಾಮಾಜಿಕವಾಗಿ ಬ್ರಿಟಿಷರು ಮತ್ತು ಒಡೆಯರು ಜಾರಿಗೆ ತಂದ ಬದಲಾವಣೆಯ ಅಂಶಗಳನ್ನು ಇಲ್ಲಿ ಗಮನಿಸಬಹುದು. ಸಮಾಜದಲ್ಲಿ ಮಹಿಳೆಯ ಸ್ಥಾನ ಏನು ಎಂಬುದನ್ನು ವಿವರಿಸಿದ್ದಾರೆ. ಮೇಲ್ವರ್ಗದ ಸ್ತ್ರೀಯರ ಸ್ಥಾನಮಾನ ಮತ್ತು ಸಾಮಾನ್ಯ ಮಹಿಳೆಯರ ಸ್ಥಾನಮಾನ ಗಳನ್ನು ಚಿತ್ರಿಸಿದ್ದಾರೆ(ಪು.೧೯೧). ಮಹಿಳೆಯರ ವೇಷ-ಭೂಷಣಗಳು, ಬಾಲ್ಯವಿವಾಹದ ಅಂಶಗಳು, ಸತಿಪದ್ಧತಿಯ ವಿವರಗಳನ್ನು ಗಮನಿಸಬಹುದು. ಜಾತಿಗಳಿಗೆ ಅನುಗುಣವಾಗಿ ಬೀದಿಗಳನ್ನು ಗುರುತಿಸಿರುವುದು ವಿಶೇಷವಾಗಿದೆ. ಬ್ರಾಹ್ಮಣರ ಬೀದಿ, ಒಕ್ಕಲಿಗರ ಕೇರಿ, ವೈಶ್ಯರ ಕೇರಿ,

ಕವಿಗಳ ಬೀದಿ, ಶಿವಭಕ್ತರ ಕೇರಿ ಎಂದು ವಿಭಾಗ ಮಾಡಿರುವ ವಿವರಗಳನ್ನು ತಿಳಿಸಿದ್ದಾರೆ(ಪು.೨೨೧). ಅಗ್ರಹಾರಗಳು ಬ್ರಾಹ್ಮಣರ ವಾಸಸ್ಥಾನಗಳಾಗಿದ್ದವು. ಒಡೆಯರ ಕಾಲದಲ್ಲಿ ಹಿಂದೂ, ಕ್ರೈಸ್ತ, ಮುಸ್ಲಿಂ, ಜೈನ, ಬೌದ್ಧ ಹೀಗೆ ಎಲ್ಲಾ ಧರ್ಮಗಳ ವಿವರಗಳನ್ನು ನೋಡಬಹುದು.

ವಿಜಯನಗರ ಅರಸರ ಕಾಲದಿಂದಲೂ ನಡೆದುಬರುತ್ತಿದ್ದ ದಸರಾ ಉತ್ಸವದ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ. ಒಡೆಯರ ಕಾಲದಲ್ಲಿನ ಸಾಹಿತ್ಯ, ಕಲೆ ಮತ್ತು ವಾಸ್ತುಶಿಲ್ಪ ಇವೇ ಮೊದಲಾದ ಅಂಶಗಳನ್ನು ವಿವರಿಸಿದ್ದಾರೆ. ಇವು ಈ ಮಹಾಪ್ರಬಂಧದಲ್ಲಿ ಒಳಗೆ ಚರ್ಚಿತವಾಗಿರುವ ವಿಷಯಗಳಿಗೆ ವ್ಯತಿರಿಕ್ತವಾಗಿವೆ. ಆಡಳಿತದಲ್ಲಿ ಮೈಸೂರು ಒಡೆಯರ ಸಾಮಾಜಿಕ ಚಿತ್ರಣವು ಪೂರ್ತಿಯಾಗಿ ಕಾಣುವುದಿಲ್ಲ. ಸ್ತ್ರೀಯರ ಸ್ಥಾನಮಾನದ ಬಗೆಗೆ ಕೆಲವೊಂದು ವಿವರಗಳನ್ನು ಮಾತ್ರ ನೋಡಬಹುದು. ಆದರೆ ಒಡೆಯರ ಕಾಲದಲ್ಲಿನ ಕವಯಿತ್ರಿಯರ ವಿವರಗಳನ್ನು ಗಮನಿಸಬಹುದು. ಮೈಸೂರು ಒಡೆಯರ ಆಡಳಿತಾತ್ಮಕ ವಿವರಗಳನ್ನು ಕ್ರೋಢೀಕರಿಸಿದ್ದಾರೆಯೇ ಹೊರತು ಸಾಮಾಜಿಕ ಸಂಘರ್ಷಗಳನ್ನು ತಿಳಿಸಿಲ್ಲ. ವಿವಿಧ ಜಾತಿಯ ವಿವರಗಳು ಗೌಣ. ಹಾಗೆಯೇ ಎಡಗೈ ಮತ್ತು ಬಲಗೈ ಜಾತಿಗಳ ನಡುವಿನ ತಿಕ್ಕಾಟ ಇವುಗಳ ಬಗೆಗೆ ವಿವರಗಳಿಲ್ಲ. ಸಾಮ್ರಾಜ್ಯಶಾಹಿಗಳು ಈ ಕಾಲಾವಧಿಯಲ್ಲಿ ಒಡೆಯರ ಆಡಳಿತಕ್ಕೆ ಯಾವ ರೀತಿ ಸ್ಪಂದಿಸಿದರು ಎಂಬುದರ ಚರ್ಚೆಯಿಲ್ಲ. ಹೈದರಾಲಿಯ ಆಡಳಿತದ ಕಾಲಾವಧಿಯಲ್ಲಿ ಮರಾಠರು, ಹೈದರಾಬಾದಿನ ನಿಜಾಮರ ಯುದ್ಧಗಳ ವಿವರ, ಹೈದರಾಲಿ, ಟಿಪ್ಪುಸುಲ್ತಾನ್ ಮತ್ತು ಬ್ರಿಟಿಷರ ನಡುವಿನ ಯುದ್ಧಗಳ ವಿವರಗಳನ್ನು ಇಲ್ಲಿ ಗಮನಿಸಬಹುದು. ಒಡೆಯರ ಕಾಲದಲ್ಲಿ ಮತೀಯ ಸಾಮರಸ್ಯ, ಬೌದ್ಧಿಕ ಪ್ರಗತಿ ಹಾಗೂ ಸಾಂಸ್ಕೃತಿಕ ವಿಕಾಸಕ್ಕೆ ನೆರವಾಗಿದ್ದರ ಅಂಶಗಳನ್ನು ಚರ್ಚಿಸಬೇಕಾಗಿತ್ತು. ವಿಶ್ಲೇಷಣಾತ್ಮಕ ಅಧ್ಯಯನ ಇಲ್ಲಿ ಕೊರತೆಯಾಗಿ ಕಂಡುಬರುತ್ತದೆ. ಆಕರಗಳನ್ನು ಇನ್ನಷ್ಟು ಬಳಸಿ ಬಳಸಿಕೊಳ್ಳಬೇಕಾಗಿತ್ತು. ಮಾಹಿತಿಪ್ರಧಾನವಾದ ಅಂಶಗಳನ್ನು ಇಲ್ಲಿ ಹೆಚ್ಚಾಗಿ ಗಮನಿಸಬಹುದು.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ದೇಶಿ ಸಂಶೋಧಕರು ಸಂಶೋಧನೆ ಕೈಗೊಂಡಂತೆ ವಿದೇಶಿ ಸಂಶೋಧಕರು ಕೂಡ ಸಂಶೋಧನೆ ಕೈಗೊಂಡಿದ್ದಾರೆ. ವಸ್ತುವಿಷಯಕ್ಕೆ ಸಂಬಂಧಿಸಿದಂತೆ ಸಂಶೋಧನಾತ್ಮಕ ಪಿಎಚ್.ಡಿ. ಮಹಾಪ್ರಬಂಧಗಳನ್ನು ವಿದೇಶಿ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಮುಖ್ಯವಾಗಿ **ಗಸ್ಟೇವ್‌ಸನ್ ಡಿ.ಆರ್.** ಅವರು **ಅಮೆರಿಕದ ವಿಸ್‌ಕಾನ್‌ಸಿನ್ ವಿಶ್ವವಿದ್ಯಾಲಯಕ್ಕೆ 'ಮೈಸೂರು ೧೮೮೧-೧೯೦೨: ದ ಮೇಕಿಂಗ್ ಆಫ್ ಎ ಮಾಡೆಲ್ ಸ್ಟೇಟ್' (೧೯೬೮)**[೭] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಆಧುನಿಕ ಮೈಸೂರಿನ ಹೊಸಹೊಸ ವಿಚಾರಗಳತ್ತ ಮುಖ ಮಾಡಿ, ಹೊಸ ವಿಧಾನಗಳನ್ನು ಅನುಸರಿಸಿ, ಹೊಸ ದೃಷ್ಟಿಕೋನದಿಂದ ಸಂಶೋಧನೆ ಮಾಡಲಾಗಿದೆ. ಈ ಮಹಾಪ್ರಬಂಧವು ೧೯ನೇ ಶತಮಾನದ ಮೈಸೂರು ರಾಜಕೀಯ ಚರಿತ್ರೆಗೆ ಮುಖಾಮುಖಿಯಾಗಿದೆ. ರಾಜಕೀಯ ಹಿನ್ನೆಲೆಯ ಆಯಾಮವನ್ನು ಅನಾವರಣಗೊಳಿಸುತ್ತದೆ. ಕಮೀಷನರ್‌ಗಳ ಆಡಳಿತವು ಹೇಗೆ ಮೈಸೂರಿನ ಮಾದರಿ ಸಂಸ್ಥಾನಕ್ಕೆ ಮೊದಲು ಅಡಿಪಾಯ ಹಾಕಿತು ಎಂಬುದು ಮುಖ್ಯ. ಸಾಮ್ರಾಜ್ಯಶಾಹಿ ಆಡಳಿತವು ತನ್ನ ಅನುಕೂಲಕ್ಕೆ ತಕ್ಕಂತೆ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿರುವುದಾಗಿದ್ದು,

ವಿಶ್ಲೇಷಿಸುವುದು ಅಗತ್ಯವಾಗಿದೆ. ಈ ಹಿನ್ನೆಲೆಯಲ್ಲಿಯೇ ಮೈಸೂರು 'ಮಾದರಿ ಸಂಸ್ಥಾನ' ಎಂಬ ಹೆಸರನ್ನು ಪಡೆಯಿತು ಎಂಬುದನ್ನು ವಿವರಿಸುತ್ತಾರೆ. ವಸಾಹತುಶಾಹಿ ಆಡಳಿತವು ತನ್ನ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಹಿನ್ನೆಲೆಯಲ್ಲಿ ದೇಶಿ ಸಂಸ್ಥಾನಗಳನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುವ ಹುನ್ನಾರ ಎಂದೇ ಹೇಳಬಹುದು. ಕಮೀಷನರ್‌ಗಳ ಆಳ್ವಿಕೆಯ ನಂತರ ಸಂಸ್ಥಾನದ ಪುನರ್ ಕೊಡುಗೆ ಯಾವ ರೀತಿ ಸ್ಪಂದಿಸಿತು ಎಂಬುದು ಮುಖ್ಯ. ಈ ಅವಧಿಯಲ್ಲಿ ಆಡಳಿತವು ಯಾವ ರೀತಿ ಸ್ಥಿತ್ಯಂತರಗಳಿಗೆ ಒಳಗಾಯಿತು ಎಂಬುದನ್ನು ಇಲ್ಲಿ ಗಮನಿಸಬಹುದು. ವಸಾಹತುಶಾಹಿ ಸೃಷ್ಟಿಸಿದ 'ಮಾಡೆಲ್ ಸ್ಟೇಟ್' ಪರಿಕಲ್ಪನೆ ಅದರ ಒಂದು ರಾಜಕೀಯ ಉಪಾಯವಾಗಿತ್ತು. ಈ ಕೃತಿಯಲ್ಲಿ ಮೈಸೂರು ಮತ್ತು ಬ್ರಿಟಿಷರ ನಡುವಿನ ಸಂಬಂಧದಲ್ಲಿ ದಿವಾನರುಗಳ ಆಡಳಿತ, ಸಮಾಜ ಸುಧಾರಣೆ, ಪ್ರಜಾಪ್ರತಿನಿಧಿ ಸಭೆ ಮುಂತಾದ ವಿಷಯಗಳನ್ನು ಚರ್ಚಿಸುವ ಮೂಲಕ ಮೈಸೂರು ಹೇಗೆ 'ಮಾಡೆಲ್ ಸ್ಟೇಟ್' ಆಗಿತ್ತು ಮತ್ತು ಅದರ ಅರ್ಥವ್ಯಾಪ್ತಿಗಳೇನು ಎನ್ನುವುದನ್ನು ಚರ್ಚಿಸಲಾಗಿದೆ(ಎಂ.ವಿ.ವಸು, ಕನ್ನಡದೊಳ್ ಭಾವಿಸಿದ ಜನಪದಂ, ಪು.೯೭). ಬ್ರಿಟಿಷರು ತಮ್ಮ ಸಾಮ್ರಾಜ್ಯಶಾಹಿ ತನ್ನ ನೆಲೆಯನ್ನು ಭದ್ರಪಡಿಸಿ ಕೊಳ್ಳುವ ಸಲುವಾಗಿ ಇತರ ದೇಶಿ ಸಂಸ್ಥಾನಗಳನ್ನು ತಮ್ಮ ಕಕ್ಷೆಯೊಳಗೆ ತಂದುಕೊಳ್ಳುವ ಉಪಾಯವೇ ಈ 'ಮಾಡೆಲ್ ಸ್ಟೇಟ್'ನ ಪರಿಕಲ್ಪನೆಯ ಹಿಂದಿನ ಉದ್ದೇಶ ಎಂಬ ಆಯಾಮಗಳನ್ನು ಈ ಮಹಾಪ್ರಬಂಧದಲ್ಲಿ ಸಂಶೋಧಕರು ವಿಶ್ಲೇಷಿಸಿದ್ದಾರೆ. ಇಲ್ಲಿ ಬ್ರಿಟಿಷರು ಆಡಳಿತವನ್ನು ದಿನದಿಂದ ದಿನಕ್ಕೆ ಭದ್ರಪಡಿಸಿಕೊಂಡು ಮಹಾರಾಜರ ಅಧಿಕಾರವನ್ನು ಸಂಪೂರ್ಣ ವಾಗಿ ಕಸಿದುಕೊಂಡು ಹಿಡಿತವನ್ನು ಸಾಧಿಸಿ ಸಂಪೂರ್ಣವಾಗಿ ಅಭಿವೃದ್ಧಿಪಡಿಸಿದೆವು ಎನ್ನುವುದು ಮುಖ್ಯ ಎಂದು ವಿವರಿಸಿದ್ದಾರೆ(ಪು.೨೭-೨೮)ಇವರು ಬಳಸಿಕೊಂಡಿರುವ ಆಕರಗಳು ಮುಖ್ಯವಾದವು. ಮಹಾಪ್ರಬಂಧವನ್ನು ದೇಶಿ ಸಂಶೋಧಕರು ಸಂಶೋಧನೆ ಕೈಗೊಂಡ ರೀತಿಗೂ, ವಿದೇಶಿ ಸಂಶೋಧಕರು ಕೈಗೊಂಡ ಸಂಶೋಧನೆಗೂ ವ್ಯತ್ಯಾಸವಿದೆ. 'ಮಾಡೆಲ್ ಸ್ಟೇಟ್' ಪರಿಕಲ್ಪನೆಯ ಬಗೆಗೆ ದೇಶಿ ಸಂಶೋಧಕರು ಅಷ್ಟಾಗಿ ಸಂಶೋಧನೆ ಕೈಗೊಂಡಿರಲಿಲ್ಲ. ಆದರೆ ವಿದೇಶಿ ಸಂಶೋಧಕರು ಈ ವಿಚಾರವನ್ನು ಸಂಶೋಧಿಸಿದ್ದಾರೆ. ಪುನರ್‌ಕೊಡುಗೆಯನ್ನು ಮೈಸೂರಿನ ರಾಜಶಾಹಿ, ದಿವಾನರಾಗಿ ಮೈಸೂರೇತರರು ತುಂಬಿದ್ದ ಆಡಳಿತಶಾಹಿ ಹಾಗೂ ಮೈಸೂರನ್ನು ನಿಯಂತ್ರಿಸಿರುವ ಬ್ರಿಟಿಷ್ ಸರ್ಕಾರಗಳು ಹೇಗೆ ಸ್ವೀಕರಿಸಿದವು ಎಂಬುದನ್ನು ಚರ್ಚಿಸಲಾಗಿದೆ. 'ಮಾಡೆಲ್ ಸ್ಟೇಟ್' ಎಂಬ ಬಿರುದು ಮೈಸೂರು ಸಂಸ್ಥಾನಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ಟ್ರಾವಂಕೂರ್ ಮತ್ತು ಬರೋಡಾ ಕೊಲ್ಹಾಪುರ ರಾಜ್ಯಗಳನ್ನು ಹಾಗೇ ಕರೆಯಲಾಗುತ್ತಿತ್ತು ಎಂಬುದನ್ನು ತಿಳಿಯಬಹುದು. ದೇಶಿ ಸಂಸ್ಥಾನಗಳನ್ನು ಬ್ರಿಟಿಷ್ ಆಡಳಿತ ವೈಖರಿಯನ್ನು ಅನುಸರಿಸಿದ ರಾಜ್ಯಗಳೇ 'ಮಾಡೆಲ್ ಸ್ಟೇಟ್' ಎನ್ನುವ ತೀರ್ಮಾನಕ್ಕೆ ಬರುತ್ತಾರೆ. ವಸಾಹತುಶಾಹಿ ಸರ್ಕಾರವನ್ನು ಜನರು ಒಪ್ಪಿಕೊಳ್ಳುವ ಅನಿವಾರ್ಯತೆಯನ್ನು ಸೃಷ್ಟಿ ಮಾಡುತ್ತಾರೆ ಎಂದು ತಿಳಿಸಿದ್ದಾರೆ.

ದಿವಾನರಾದ ಸಿ.ರಂಗಾಚಾರ್ಲು ಅವರ ಆಡಳಿತದ ವೈಖರಿಯನ್ನು ಚರ್ಚಿಸಿದ್ದಾರೆ. ಪ್ರಮುಖವಾಗಿ ಪ್ರಜಾಪ್ರತಿನಿಧಿ ಸಭೆಯ ಸ್ಥಾಪನೆ, ಮೊದಲ ಬಾರಿಗೆ ಆಡಳಿತವನ್ನು ಪ್ರಜೆಗಳೊಂದಿಗೆ

ಹಂಚಿಕೊಂಡಿದ್ದು, ಅನಂತರ ಕೆ.ಶೇಷಾದ್ರಿ ಅಯ್ಯರ್ ಅವರು ದಿವಾನರಾಗಿ ನೇಮಕಗೊಂಡದ್ದು, ಇವರ ಆಳ್ವಿಕೆಯಲ್ಲಿ ಪ್ರಗತಿಪರ ಕಾರ್ಯಗಳು ಹೆಚ್ಚಾಗಿ ಜಾರಿಯಾದದ್ದು, ಆಡಳಿತ ಶಿಕ್ಷಣ, ನೀರಾವರಿ, ಸಾರಿಗೆ, ರೈಲ್ವೆ, ವೈದ್ಯಕೀಯ ಇವೇ ಮೊದಲಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಯೋಜನೆಗಳು ಜಾರಿಯಾದ ಹಿನ್ನೆಲೆಯಲ್ಲಿ ಮೈಸೂರು 'ಮಾಡೆಲ್ ಸ್ಟೇಟ್' ಎಂಬ ಬಿರುದನ್ನು ಪಡೆಯಿತು ಎಂಬುದನ್ನು ವಿವರಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಬಾಲ್ಯವಿವಾಹ ನಿಷೇಧ ಕಾಯ್ದೆಯನ್ನು ಜಾರಿ ಮಾಡಿದರೂ ಬಾಲ್ಯ ವಿವಾಹವು ಹೇಗೆ ಅಸ್ತಿತ್ವದಲ್ಲಿ ಮುಂದುವರಿಯಿತು ಎಂಬುದನ್ನು ಚರ್ಚಿಸಿದ್ದಾರೆ(ಪು.೨೧೯-೨೨೦). ದಿವಾನರ ಕಾಲದ ಆಡಳಿತ ಅಷ್ಟೇ ಉನ್ನತ ಪ್ರಗತಿ ಸಾಧಿಸಿತು ಎನ್ನುತ್ತಾರೆ. ಅನಂತರ ಇವರು ಕೈಗೊಂಡ ಯೋಜನೆಗಳು ದೂರದೃಷ್ಟಿ ನೆಲೆಯಲ್ಲಿ ಇರಲಿಲ್ಲ. ತತ್‌ಕ್ಷಣದ ಸಮಸ್ಯೆಗಳ ನಿವಾರಣೆಗೆ ಮಾತ್ರ ಕೆಲವು ಯೋಜನೆಗಳು ಜಾರಿಯಾದವು ಎಂಬುದನ್ನು ವಿವರಿಸುತ್ತಾರೆ.

ವಿದೇಶಿ ಸಂಶೋಧಕರಾದ ಲೇಲಾ ಡಶ್ಕಿನ್ ಅವರು **'ನಾನ್ ಬ್ರಾಹ್ಮೀನ್ ಮೂವ್‌ಮೆಂಟ್ ಇನ್ ಪ್ರಿನ್ಸ್ಲೀ ಮೈಸೂರ್**(೧೯೭೪)ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಮೈಸೂರಿನ ರಾಜಕೀಯ ಮತ್ತು ಬ್ರಾಹ್ಮಣೇತರ ಚಳವಳಿಗಳ ಬಗ್ಗೆ ವಿಶ್ಲೇಷಿಸಿದ್ದಾರೆ. ದೇಶಿ ಸಂಶೋಧಕರು (ಸಿ.ಹಯವದನರಾವ್ ಮತ್ತು ಎಂ.ಶಾಮರಾಯ) ಮರೆಮಾಚಿದ ಈ ಚಳವಳಿಯ ಬಗ್ಗೆ ಬೆಳಕುಚೆಲ್ಲುತ್ತಾ ಒಳನೋಟಗಳನ್ನು ಇಲ್ಲಿ ಗುರುತಿಸಿದ್ದಾರೆ. ಈ ಮಹಾಪ್ರಬಂಧವು ಸಾಮಾಜಿಕ ಆಯಾಮಗಳಿಂದ ಸೃಷ್ಟಿಯಾದ ಮೈಸೂರಿನ ರಾಜಕೀಯ ಬೆಳವಣಿಗೆಗಳನ್ನು ಕುರಿತು ವಿಶ್ಲೇಷಿಸುತ್ತದೆ. ಲೇಲಾ ಡಶ್ಕಿನ್ ಅವರು ಮೈಸೂರಿನ ಭೌಗೋಳಿಕತೆ ವಿವರಿಸುತ್ತಾ ಜನಸಂಖ್ಯೆ, ಜನಸಂಖ್ಯೆಯಲ್ಲಿ ಬ್ರಾಹ್ಮಣರು ಕಡಿಮೆ ಇದ್ದರೂ ಅವರ ಪ್ರಾಬಲ್ಯ, ಬ್ರಾಹ್ಮಣೇತರ ಪ್ರಮುಖ ಜಾತಿಗಳು, ಅಂದರೆ ವೀರಶೈವರು, ಕುರುಬರು, ದಲಿತರು ಇತರರ ಬಗೆಗೆ ಚರ್ಚಿಸುತ್ತಾರೆ. ವಸಾಹತುಶಾಹಿ ಕಾಲದ ಪ್ರಯೋಜನಗಳನ್ನು ಪಡೆಯುವ ಹಿನ್ನೆಲೆಯಲ್ಲಿ ಜಾತಿಸಂಘಟನೆಗಳು ಹುಟ್ಟಿಕೊಂಡಿದ್ದನ್ನು ವಿಶ್ಲೇಷಿಸಲಾಗಿದೆ. ಬ್ರಾಹ್ಮಣೇತರ ಚಳವಳಿ ಕೇವಲ ರಾಜಕೀಯ ಪ್ರತಿಭಟನೆ ಯಾಗಿರಲಿಲ್ಲ. ಅದು ಸಾಂಸ್ಕೃತಿಕ ಪ್ರತಿರೋಧವೂ ಆಗಿತ್ತು ಎನ್ನುವುದನ್ನು ಈ ಮಹಾಪ್ರಬಂಧವು ವಿಶ್ಲೇಷಿಸಿದೆ. ವಿವಿಧ ಜಾತಿಗಳು 'ಬ್ರಾಹ್ಮಣೇತರ' ಎನ್ನುವ ನೆಲೆಯಲ್ಲಿ ಒಂದಾಗಲು ಇದ್ದ ಕಾರಣಗಳು ಮುಖ್ಯ ಮೈಸೂರು-ಮದ್ರಾಸಿಗರ ನಡುವಿನ ಸಂಘರ್ಷ ಶಿಕ್ಷಣ, ಉದ್ಯೋಗ ಕ್ಷೇತ್ರಗಳಲ್ಲಿ ಸೌಲಭ್ಯ ಪಡೆದವರ ಜಾತಿವಾರು ಹಂಚಿಕೆ, ಮಿಲ್ಲರ್ ಸಮಿತಿ ರಚನೆ ಶಿಫಾರಸ್ಸುಗಳು, ಜಾರಿಗೊಳಿಸುವಿಕೆ, ಸಂವಿಧಾನಾತ್ಮಕ ಸುಧಾರಣೆಗಳು ಇಂಗ್ಲಿಷ್ ಶಿಕ್ಷಣದ ವಿಸ್ತರಣೆ, ಬ್ರಾಹ್ಮಣೇತರ ಚಳವಳಿಯ ಭಾಗವಾಗಿ ಬೆಳೆದ ರಾಜಕೀಯ ಪ್ರಜ್ಞೆ ಹಾಗೂ ಇದೇ ಸಂದರ್ಭದಲ್ಲಿ ಬೆಳೆದ ಸ್ವಾತಂತ್ರ್ಯ ಚಳವಳಿ ಹಾಗೂ ಅದು ತಂದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರ ನಡುವಿನ ತಾತ್ಕಾಲಿಕ ಬೆಸುಗೆ ಹೀಗೆ ಅನೇಕ ಅಂಶಗಳನ್ನು ಚರ್ಚಿಸುತ್ತಾ ಈ ಚಳವಳಿಯು ಮೈಸೂರು ರಾಜ್ಯದ ರಾಜಕೀಯ ಮತ್ತು ಸಾಮಾಜಿಕವಾದ ಹೊಸ ಸಾಂಸ್ಕೃತಿಕ ನಕ್ಷೆಯನ್ನು ಸೃಷ್ಟಿಸಿತು ಎನ್ನುವುದನ್ನು ಚರ್ಚಿಸಿದ್ದಾರೆ. ಇಲ್ಲಿ ಇಂಗ್ಲಿಷ್ ಮತ್ತು ಕನ್ನಡ ಆಕರಗಳನ್ನು ಬಳಸಿದ್ದಾರೆ.

ಇಲ್ಲಿ ಪ್ರಮುಖವಾಗಿ ಮದ್ರಾಸು ಪ್ರಾಂತ್ಯಕ್ಕೆ ವಿದ್ಯಾಭ್ಯಾಸಕ್ಕೆಂದು ಹೋಗುವವರಲ್ಲಿ ನಲವತ್ತಕ್ಕಿಂತ ಹೆಚ್ಚು ಬ್ರಾಹ್ಮಣರೇ ಇದ್ದು, ಅವರ ಬೇಡಿಕೆಗಳು ಕೂಡ ಹೆಚ್ಚಾಗಿದ್ದು, ಈ ಚಳುವಳಿಗೆ ಕಾರಣ ವಾಗಿದೆ(ಪು.೫೮). ಸ್ವಾತಂತ್ರ್ಯನಂತರ ಕರ್ನಾಟಕದಲ್ಲಿ ರೂಪುಗೊಂಡ ಸಾಂಸ್ಕೃತಿಕ ಆಯಾಮಗಳ ರಾಜಕೀಯದ ಬೇರುಗಳು ೨೦ನೇ ಶತಮಾನದ ಆರಂಭದಲ್ಲಿ ಮೈಸೂರು ರಾಜ್ಯದಲ್ಲಿ ಬಿತ್ತನೆಯಾದವು ಎಂಬುದನ್ನು ಕಾಣಬಹುದು. ಮುಖ್ಯವಾಗಿ ಬ್ರಾಹ್ಮಣೇತರ ಆದರೆ ದಲಿತೇತರವೂ ಆಗಿದ್ದ ಈ ಚಳವಳಿ ದಕ್ಷಿಣ ಭಾರತದ ರಾಜಕೀಯ ವ್ಯವಸ್ಥೆಯಲ್ಲಿ ಹೊಸ ತಲ್ಲಣವನ್ನು ತಂದಿತು. ವಿಶೇಷವಾಗಿ ಉದ್ಯೋಗದ ಕ್ಷೇತ್ರದಲ್ಲಿದ್ದ ಬ್ರಾಹ್ಮಣ ಸಮುದಾಯದ ಯಜಮಾನಿಕೆಯನ್ನು ಈ ಚಳವಳಿ ತೀವ್ರವಾಗಿ ವಿರೋಧಿಸಿತು. ರಾಜಕೀಯ ಧೃವೀಕರಣಗಳು ಇದರಿಂದ ಸೃಷ್ಟಿಯಾದವು. ಈ ಚಳವಳಿಯು ಹುಟ್ಟುಹಾಕಿದ ಹೊಸ ಅಸ್ಮಿತೆಗಳು ಮೊದಲು ರಾಜಕೀಯ ಧ್ರುವೀಕರಣದಲ್ಲಿ ಪ್ರಕಟಗೊಂಡವು. ಕೇವಲ ರಾಜಕೀಯ ನೆಲೆಯಲ್ಲಿ ಮಾತ್ರವಲ್ಲದೆ ಒಟ್ಟು ಸಾಂಸ್ಕೃತಿಕ ಬದುಕಿನಲ್ಲಾದ ಪಲ್ಲಟಗಳನ್ನು ಈ ಕೃತಿಯು ಕಟ್ಟಿಕೊಡುವ ಪ್ರಯತ್ನ ಮಾಡುತ್ತದೆ(ಎಂ.ವಿ.ವಸು(ಸಂ), ಕನ್ನಡದೊಳ್ ಭಾವಿಸಿದ ಜನಪದಂ, ಪು.೯೫೩). ಈ ಮಹಾಪ್ರಬಂಧವು ಮೈಸೂರಿನಲ್ಲಿ ಆದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಅಧ್ಯಯನ ಕೈಗೊಳ್ಳಲು ಮೊದಲ ಆದ್ಯತೆಯಾಗಿ ನಿಲ್ಲುತ್ತದೆ. ದೇಶಿ ಸಂಶೋಧಕರು ಬ್ರಾಹ್ಮಣೇತರ ಚಳವಳಿಯ ಬಗೆಗೆ ಎಲ್ಲೂ ವಿಷಯ ಪ್ರಸ್ತಾಪಿಸುವುದಿಲ್ಲ. ಆದರೆ ವಿದೇಶಿ ಸಂಶೋಧಕರು ಮೈಸೂರು ಒಡೆಯರ ಚರಿತ್ರೆಯಲ್ಲಿ ಪ್ರಮುಖವಾಗಿ ಗುರುತಿಸಿಕೊಂಡಿರುವ ಈ ಬ್ರಾಹ್ಮಣೇತರ ಚಳವಳಿಯ ಬಗೆಗೆ ಸಂಶೋಧನೆ ಕೈಗೊಂಡಿರುವುದು ಗಮನಾರ್ಹವಾಗಿದೆ. ಎಂ.ಶಾಮರಾವ್ ಅವರ 'ಮಾರ್ಡನ್ ಮೈಸೂರು' ಎಂಬ ಎರಡು ಸಂಪುಟಗಳಲ್ಲಿ ಈ ಚಳವಳಿಯ ಪ್ರಸ್ತಾಪವೇ ಇಲ್ಲ. ಅಲ್ಲದೇ ಈ ಸಂಶೋಧನೆ ಕೈಗೊಂಡಾಗ ಚಳವಳಿಗಳಾದ ರೈತ ಚಳವಳಿ, ಸಮಾಜವಾದಿ ಚಳವಳಿ, ಜೆ.ಪಿ.ಚಳವಳಿ, ಭೂಸುಧಾರಣೆ, ಜಾತಿವಿನಾಶ ಚಳವಳಿ ನಡೆಯುತ್ತಿದ್ದ ಕಾಲ. ಇದಕ್ಕೆ ಸಂವಾದಿಯಾಗಿ ರೂಪುಗೊಂಡು ಬಂದಿದೆ.

ಸುಗೀತ ಸುವರ್ಣ ಅವರು **ದಿವಾನ್‌ಶಿಪ್ ಆಫ್ ಸರ್.ಮಿರ್ಜಾ ಇಸ್ಮಾಯಿಲ್ ಇನ್ ಮೈಸೂರು ಸ್ಟೇಟ್(೧೯೨೬-೧೯೪೧)**'(೧೯೮೨)' ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಂಡಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲ್ ಅವರು ಮೈಸೂರು ಸಂಸ್ಥಾನದ ಆಡಳಿತದಲ್ಲಿ ವಹಿಸಿದ ಪಾತ್ರವನ್ನು ಚರ್ಚಿಸುತ್ತಾರೆ. ಮಿರ್ಜಾ ಇಸ್ಮಾಯಿಲ್ ಅವರು ಮೈಸೂರಿನ ದಿವಾನರಾಗಿ ಹದಿನೈದು ವರ್ಷಗಳ ದೀರ್ಘಕಾಲ ಆಡಳಿತ ನಡೆಸಿದರು. ಅಲ್ಲದೇ ಮೈಸೂರು ಸಂಸ್ಥಾನದ 'ಸಾಮಾಜಿಕ ಪರಿವರ್ತನೆಯ ರೂವಾರಿ' ಎಂದು ಗುರ್ತಿಸಿಕೊಂಡ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತಾವಧಿಯಲ್ಲಿ ಬ್ರಾಹ್ಮಣೇತರ ಮೂರನೇ ದಿವಾನರಾಗಿ ಸೇವೆ ಸಲ್ಲಿಸಿದವರು. ರಾಜ್ಯದ ಆಡಳಿತ, ರಾಜಕೀಯ ಮತ್ತು ಅರಮನೆಯಲ್ಲಿ ನಡೆಯುತ್ತಿದ್ದ ತಂತ್ರಗಾರಿಕೆ, ಕುತಂತ್ರಗಳಿಂದ ಬೇಸತ್ತಿದ್ದ ಮಹಾರಾಜರು ಮಿರ್ಜಾ ಇಸ್ಮಾಯಿಲ್ ಅವರನ್ನು ದಿವಾನರಾಗಿ ನೇಮಿಸಿದರು. ಆಡಳಿತಾವಧಿಯಲ್ಲಿ ರಾಜ್ಯದಲ್ಲಿದ್ದ ರಾಜಕೀಯ ಇನ್ನಿತರ ಸಮಸ್ಯೆಗಳ ನಿವಾರಣೆಗೆ ಕ್ರಮಗಳನ್ನು

ಕೈಗೊಂಡರು ಎಂಬುದು ಮುಖ್ಯ. ಕೃಷಿ, ಕೈಗಾರಿಕೆ, ನೀರಾವರಿ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿನ ಅಭಿವೃದ್ಧಿ ಕಾರ್ಯಗಳನ್ನು ವಿವರಣಾತ್ಮಕ ಮಾದರಿಯಲ್ಲಿ ಬರೆಯುತ್ತಾರೆ. ಮಾಡೆಲ್ ವಿಲೇಜನ್ನು ಅಭಿವೃದ್ಧಿಗೊಳಿಸಿದರು. ಇಲ್ಲಿ ಸ್ಕೂಲ್, ಆಸ್ಪತ್ರೆ, ರಸ್ತೆ, ಸಾರಿಗೆ ಸೌಲಭ್ಯಗಳು ಮತ್ತು ಸಣ್ಣ ಪಾರ್ಕ್‌ಗಳನ್ನು ನಿರ್ಮಿಸಲಾಯಿತು. ಹೀಗೆ ಅನೇಕ ಜನಪರ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ತಿಳಿಸಿದ್ದಾರೆ.

ರಾಜಕೀಯವಾಗಿ ಮಿರ್ಜಾ ಇಸ್ಮಾಯಿಲ್ ಅವರು ಅನೇಕ ನಾಯಕರ ಜೊತೆ ನಿಕಟ ಸಂಪರ್ಕವನ್ನು ಹೊಂದಿದ್ದರು. ಜವಹಾರಲಾಲ್ ನೆಹರು, ಸರ್ದಾರ್ ವಲ್ಲಭಬಾಯಿ ಪಟೇಲ್, ಆಚಾರ್ಯ ಕೃಪಲಾನಿ ಮೊದಲಾದವರು ಮೈಸೂರಿಗೆ ಭೇಟಿ ಕೊಟ್ಟಾಗ ಅನೇಕ ಕಾರ್ಯಗಳನ್ನು ಜಾರಿ ಮಾಡಿದರು. ಕೋಲಾರದ ನಂದಿಬೆಟ್ಟದಲ್ಲಿ ಗಾಂಧೀಜಿ ಅವರು ತಂಗಿದ್ದಾಗ ಮಿರ್ಜಾ ಅವರು ಭೇಟಿ ಮಾಡಿ ಅವರ ಕೆಲವು ತತ್ವಗಳನ್ನು ಮೈಸೂರು ಸಂಸ್ಥಾನದಲ್ಲಿ ಅಳವಡಿಸಿದರು. ಹರಿಜನರಿಗೆ ಶಿಕ್ಷಣ, ಹಾಸ್ಟೆಲ್, ವಿದ್ಯಾರ್ಥಿವೇತನ ಮೊದಲಾದ ಸೌಲಭ್ಯಗಳನ್ನು ಒದಗಿಸಿದರು ಎಂಬುದು ಮುಖ್ಯ ವಿಚಾರ.

ಪ್ರಜಾಪ್ರತಿನಿಧಿ ಸಭೆಯು ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಹೆಚ್ಚಿನ ಪ್ರಾತಿನಿಧ್ಯವನ್ನು ಪಡೆದು ಕೊಂಡಿತು. ಕೆ.ಸಿ.ರೆಡ್ಡಿ, ಕೆ.ಟಿ.ಭಾಷ್ಯಂ ಅವರ ಹೋರಾಟಗಳನ್ನು ಇಲ್ಲಿ ಗಮನಿಸಬಹುದು. ಈ ಕಮಿಟಿಯಲ್ಲಿ ಆರ್.ಚನ್ನಿಗರಾಮಯ್ಯ, ಮಹಮ್ಮದ್ ಇನಾಮ್, ಎಂ.ಜಿ.ಜೆ.ರಾಮಚಂದ್ರ ಮತ್ತು ಎಂ.ಕೆ.ವರದರಾಜನ್ ಮೊದಲಾದವರು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿದರು ಎಂಬ ವಿಚಾರಗಳು ಮಿಳಿತವಾಗಿವೆ.

ಮಿರ್ಜಾ ಇಸ್ಮಾಯಿಲ್ ಅವರ ಆಡಳಿತಾವಧಿಯಲ್ಲಿ ಕಾರ್ಮಿಕರ ಚಳವಳಿಗಳು ಉಂಟಾದವು. ಇದಕ್ಕಾಗಿ ಕಾರ್ಮಿಕ ಫೆಡರೇಷನ್ ಮತ್ತು ಲೇಬರ್ ಬಿಲ್ ಜಾರಿಗೆ ತರಲಾಯಿತು ಎಂಬುದು ಪ್ರಮುಖವಾದುದು. ರಾಷ್ಟ್ರೀಯ ಚಳವಳಿಯಲ್ಲಿ ಮೈಸೂರಿನ ಪಾತ್ರವನ್ನು ಕುರಿತು ಚರ್ಚಿಸಿದ್ದಾರೆ. ಗಾಂಧಿ ಅವರ ಖಾದಿ ಪ್ರಚಾರದಿಂದ ಖಾದಿ ಕೇಂದ್ರ ಸ್ಥಾಪನೆ, ಸ್ವದೇಶಿ ಚಳವಳಿಯ ಅಂಶಗಳು ಹರಿಜನರ ಉದ್ಧಾರಕ್ಕಾಗಿ ಕೈಗೊಂಡ ಕ್ರಮಗಳನ್ನು ತಿಳಿಸಿದ್ದಾರೆ. ಮಿರ್ಜಾ ಇಸ್ಮಾಯಿಲ್ ಅವರು ೧೯೩೦-೩೨ರ ಅವಧಿಯಲ್ಲಿ ಲಂಡನ್ ನಗರದಲ್ಲಿ ನಡೆದ ದುಂಡುಮೇಜಿನ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ದೇಶೀಯ ರಾಜ್ಯಗಳು ಹಾಗೂ ಬ್ರಿಟಿಷ್ ಪ್ರಾಂತ್ಯಗಳ ಸಂಯುಕ್ತ ವ್ಯವಸ್ಥೆಯನ್ನು ಬೆಂಬಲಿಸಿದರು ಎಂಬುದನ್ನು ತಿಳಿಸಿದ್ದಾರೆ. ಆದರೆ ಕಾಂಗ್ರೆಸ್‌ನ ಹೋರಾಟ, ಪ್ರಜಾಸತಾತ್ಮಕ ಸರ್ಕಾರವನ್ನು ದ್ವೇಷಿಸುತ್ತಿದ್ದರು ಎಂಬ ವಿಚಾರಗಳನ್ನು ಚರ್ಚಿಸಿದ್ದಾರೆ. ಗಾಂಧೀಜಿ ಅವರ ವಿಚಾರಗಳನ್ನು ಪ್ರಶಂಸಿಸಿದರು ಎಂಬುದು ಮುಖ್ಯವಾದ ವಿಷಯ.

ಒಟ್ಟಿನಲ್ಲಿ ಮಿರ್ಜಾ ಇಸ್ಮಾಯಿಲ್ ಅವರು ಮೈಸೂರಿನ ಆರ್ಥಿಕಾಭಿವೃದ್ಧಿಗೆ ಶ್ರಮಿಸಿದ ವಿಚಾರಗಳನ್ನು ಕೊನೆಯ ಅಧ್ಯಾಯದಲ್ಲಿ ಚರ್ಚಿಸಿದ್ದಾರೆ. ರೈಲ್ವೆ, ರಸ್ತೆ, ಕಾಫಿ ಉದ್ಯಮ, ಹತ್ತಿ ಮತ್ತು ರೇಷ್ಮೆ ಉದ್ಯಮಗಳಿಗೆ ಪ್ರೋತ್ಸಾಹ ನೀಡಿದ್ದು. ನೀರಾವರಿಗೆ ಅಣೆಕಟ್ಟು ನಿರ್ಮಾಣದ

ಕಾರ್ಯ, ಕೈಗಾರಿಕೆಗಳ ಸ್ಥಾಪನೆ ಇವೇ ಮೊದಲಾದ ವಿಚಾರಗಳ ಬಗೆಗೆ ಸವಿವರವಾಗಿ ಮಾಹಿತಿ ನೀಡಿದ್ದಾರೆ. ಈ ಉದ್ಯಮಗಳಿಂದ ಎಷ್ಟರಮಟ್ಟಿಗೆ ಲಾಭ ದೊರೆಯಿತು ಎಂಬುದನ್ನು ಚರ್ಚಿಸಿದ್ದಾರೆ. ಆಶ್ಚರ್ಯವೆಂದರೆ ಇಲ್ಲಿ ಸಂಶೋಧಕರು ಕೋಮುಗಲಭೆ ಸೃಷ್ಟಿಸಿದ ಬೆಳವಣಿಗೆ ಬೆಂಗಳೂರಿನ ಗಣಪತಿ ಗಲಾಟೆಯ ಬಗೆಗೆ ಎಲ್ಲಿಯೂ ಪ್ರಸ್ತಾಪಿಸಿಲ್ಲ. ಬಿನ್ನಿ ಮಿಲ್‌ನ ಗಲಾಟೆಯ ಬಗೆಗೆ ಎಲ್ಲೂ ವಿವರ ನೀಡದಿರುವುದು ಸಂಶೋಧಕರ ಮಿತಿ ಎನ್ನಬಹುದೇ? ಸಂಘರ್ಷಗಳ ಕಡೆಗೆ ಸೂಕ್ಷ್ಮವಾಗಿ ಗಮನಿಸಬೇಕಾಗಿತ್ತು. ಮಿರ್ಜಾ ಅವರ ರಾಜಕೀಯ ವಿಚಾರಗಳಿಗಿಂತ ಜನರಲ್ಲಿನ ಕಾರ್ಯ, ಅವರ ಪ್ರತಿಸ್ಪಂದನೆ ಹೇಗಿತ್ತು ಎಂಬುದನ್ನು ಚರ್ಚಿಸುವುದು ಅಗತ್ಯವಾಗಿತ್ತು. ದಲಿತ ವರ್ಗಗಳ ಏಳಿಗೆಯಲ್ಲಿ ಅವರ ಶಿಕ್ಷಣ, ಸ್ಕಾಲರ್‌ಶಿಪ್, ಹಾಸ್ಟೆಲ್ ಸ್ಥಾಪನೆ, ಸಾರ್ವಜನಿಕ ಸ್ಥಳಗಳಿಗೆ ಮುಕ್ತ ಅವಕಾಶ, ಮಹಿಳೆಯರ ಪ್ರಗತಿ ಕಾರ್ಯಗಳನ್ನು ಚರ್ಚಿಸಬೇಕಾಗಿತ್ತು. ಸಂಶೋಧಕರು ಬಳಸಿಕೊಂಡಿರುವ ಆಕರಗಳನ್ನು ಇನ್ನಷ್ಟು ದುಡಿಸಿಕೊಳ್ಳ ಬೇಕಾಗಿತ್ತು. ಸಂಶೋಧಕರ ಸಂಶೋಧನೆ ಅವಧಿಯಲ್ಲಿ ದೊರೆತ ಆಕರಗಳಿಂದ ಈ ಮಹಾಪ್ರಬಂಧವನ್ನು ಕಟ್ಟಿದ್ದಾರೆ. ಈ ಮಹಾಪ್ರಬಂಧದ ಮಿತಿಯನ್ನು ಎನ್.ಚಿನ್ನಸ್ವಾಮಿ ಸೋಸಲೆ ಅವರ ಸಂಪಾದಕತ್ವದಲ್ಲಿ ಹೊರಬಂದಿರುವ 'ದಿವಾನ್ ಸರ್ ಮಿರ್ಜಾ ಎಂ.ಇಸ್ಮಾಯಿಲ್ ಕಾಲದ ಮೈಸೂರು ಸಂಸ್ಥಾನ' ಎಂಬ ಕೃತಿಯು ತುಂಬುತ್ತದೆ.

ಮೀರಾ ಸೆಬಾಸ್ಟಿಯನ್ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಬ್ರಿಟಿಷ್ ಕಲೋನಿಯಲ್ ಪಾಲಿಸೀಸ್ ಇನ್ ಪ್ರಿನ್ಲಿ ಮೈಸೂರ್(೧೯೮೨)**[೧೧] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಬ್ರಿಟಿಷರು ವಸಾಹತುಶಾಹಿ ನೆಲೆಯ ನೀತಿಗಳನ್ನು ಮೈಸೂರು ಸಂಸ್ಥಾನದಲ್ಲಿ ಜಾರಿಗೆ ತಂದು ತಮ್ಮ ಲಾಭವನ್ನು ಪಡೆದುಕೊಂಡರು ಎಂಬುದು ಈ ಮಹಾಪ್ರಬಂಧದ ಕೇಂದ್ರೀಯ ವಿಷಯ. ಮೈಸೂರು ಕೃಷಿ ಜಮೀನುಗಳಿಂದ ಸುತ್ತುವರಿದ ರಾಜ್ಯವಾಗಿದ್ದು ರೈತರಿಗೆ ಹೇರಿದ ಕಂದಾಯನೀತಿಯು ವಿಚಿತ್ರವಾಗಿತ್ತು. ರೈತನಿಂದ ರೈತನಿಗೆ, ಸ್ಥಳದಿಂದ ಸ್ಥಳಕ್ಕೆ ಬದಲಾಗುತ್ತಿದ್ದವು. ಅಲ್ಲದೇ ಖಾಯಂ ಕಂದಾಯ ವ್ಯವಸ್ಥೆಯಿಂದ ಶ್ರೀಮಂತ ಹಿಡುವಳಿದಾರರು ಬ್ರಿಟಿಷ್ ಆಧಿಪತ್ಯವೇ ಮುಂದುವರಿಯಬೇಕು, ಜನರ ಮೇಲೆ ಹತೋಟಿಯನ್ನು ಇರಿಸಿಕೊಳ್ಳಬೇಕು ಎನ್ನುವುದರಲ್ಲಿಯೇ ಆಸಕ್ತಿ ತೋರಿದರು. ಈ ರೀತಿಯಾಗಿ ಬ್ರಿಟಿಷರ ತೆರಿಗೆ ನೀತಿಯು ಮುಂದುವರಿಯುತ್ತಾ ಹೋಯಿತು ಎಂಬುದನ್ನು ಚರ್ಚಿಸಿದ್ದಾರೆ. ನ್ಯಾಯಾಂಗ ನೀತಿಯಲ್ಲಿ ಅನೇಕ ಬದಲಾವಣೆಗಳು ಆದವು. ಅಮಿಲ್, ತಾಲ್ಲೂಕ್, ಟೌನ್ ಮುನ್ಸೀಫ್ ಕೋರ್ಟುಗಳು ನ್ಯಾಯ ವಿತರಣೆಗೆ ಯುರೋಪಿನ ಮಾದರಿಯಲ್ಲಿ ಸ್ಥಾಪನೆ ಆಗಿವೆ ಎಂಬುದನ್ನು ನೋಡಬಹುದು. ಇದೇ ಸಮಯದಲ್ಲಿ ಕ್ಷಾಮ ತಲೆದೋರಿತು. ಕ್ಷಾಮದ ನಿರ್ಮೂಲನೆಗಾಗಿ ಕ್ರಮ ಕೈಗೊಂಡ ವಿವರಗಳು, ಶಿಕ್ಷಣದ ಅಭಿವೃದ್ಧಿಯ ಕಾರ್ಯಗಳನ್ನು ಜಾರಿಗೆ ತರುವಂತೆ ಕ್ರಮವನ್ನು ಕೈಗೊಳ್ಳಲಾಯಿತು. ಹೀಗೆ ಪ್ರತಿಯೊಂದು ಕ್ಷೇತ್ರದಲ್ಲಿ ಬ್ರಿಟಿಷರು ಜಾರಿಗೆ ತಂದ ನೀತಿಗಳು ಎಷ್ಟರಮಟ್ಟಿಗೆ ಜನರಿಗೆ ಅನುಕೂಲವಾದವು ಎಂಬುದನ್ನು ಚರ್ಚಿಸಿದ್ದಾರೆ. ವ್ಯಾಪಾರ–ವಹಿವಾಟಿನ ಬಗೆಗೆ ವಾಣಿಜ್ಯನೀತಿಯನ್ನು ಜಾರಿಗೆ ತಂದರು. ವ್ಯಾಪಾರಕ್ಕಾಗಿ ಕೆಲವೊಂದು ಪರವಾನಿಗೆಗಳನ್ನು ಪಡೆಯುವುದು ಮುಖ್ಯ. ಒಟ್ಟಾರೆಯಾಗಿ ಬ್ರಿಟಿಷರು ವಸಾಹತುಶಾಹಿಯ

ನೀತಿಯನ್ನು ಮೈಸೂರು ಸಂಸ್ಥಾನದಲ್ಲಿ ಜಾರಿಗೊಳಿಸಿ ತಮಗೆ ಬೇಕಾದ ಲಾಭ ಪಡೆದುಕೊಂಡರು ಎಂಬುದು ಇಲ್ಲಿ ಮುಖ್ಯ. ಇಲ್ಲಿ ಆಕರಗಳನ್ನು ಸಾಕಷ್ಟು ದುಡಿಸಿಕೊಂಡಿದ್ದಾರೆ.

ತಿಮ್ಮಯ್ಯ ನಾಯ್ಡು ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಮಂಡಿಸಿರುವ ಪಿಎಚ್.ಡಿ ಮಹಾಪ್ರಬಂಧ **ದಿ ಏಜ್ ಆಫ್ ಚಿಕ್ಕದೇವರಾಜ ಒಡೆಯರ್ ಆಫ್ ಮೈಸೂರು(೧೯೮೪)**[೧೧] ಪ್ರಮುಖವಾದುದು. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಮೈಸೂರಿನ ಪ್ರಾರಂಭದ ಒಡೆಯರಲ್ಲಿ ಪ್ರಮುಖರಾದ ಚಿಕ್ಕದೇವರಾಜ ಒಡೆಯರ ಪ್ರಮುಖ ಸಾಧನೆಗಳನ್ನು ತೆರೆದಿಡುತ್ತಾರೆ. ಪ್ರಾರಂಭದ ಒಡೆಯರು ಅಧಿಕಾರಕ್ಕೆ ಬಂದು ಭದ್ರಬುನಾದಿಯನ್ನು ಹಾಕಿಕೊಟ್ಟ ಒಡೆಯರಲ್ಲಿ ಚಿಕ್ಕದೇವರಾಜ ಒಡೆಯರು ಪ್ರಮುಖರು. ಈ ಮಹಾಪ್ರಬಂಧವು ಪ್ರಭುತ್ವಕೇಂದ್ರಿತವಾಗಿ ರಚಿಸಲ್ಪಟ್ಟಿದೆ. ಏಕೆಂದರೆ ರಾಜಕೀಯ ಹಿನ್ನೆಲೆಯಲ್ಲಿ ಚಿಕ್ಕದೇವರಾಜ ಒಡೆಯರ ಆಡಳಿತವನ್ನು ಕೇಂದ್ರೀಕರಿಸಿ ಈ ಮಹಾಪ್ರಬಂಧವನ್ನು ರಚಿಸಿದ್ದಾರೆ. ಸಾಮಾಜಿಕವಾಗಿ ಜನರ ಚರಿತ್ರೆಯನ್ನು ಗುರುತಿಸಬೇಕಾಗಿತ್ತು.

ಚಿಕ್ಕದೇವರಾಜ ಒಡೆಯರು ಅಧಿಕಾರಕ್ಕೆ ಬರುವ ವೇಳೆಗೆ ರಾಜಕೀಯ ಬಿಕ್ಕಟ್ಟುಗಳು ತಲೆದೋರಿದ್ದವು. ಇವರು ಮರಾಠರ ಯುದ್ಧಗಳನ್ನು ಎದುರಿಸಬೇಕಾಯಿತು. ಇದಕ್ಕಾಗಿ ಮೊಘಲರ ಔರಂಗಜೇಬನ ಜೊತೆ ಸಂಧಾನ ಮಾಡಿಕೊಂಡು ಮರಾಠರ ಯುದ್ಧಗಳನ್ನು ತಡೆಗಟ್ಟಿದನು ಎಂಬ ವಿವರಗಳು ಮಿಳಿತವಾಗಿವೆ. ಒಟ್ಟಿನಲ್ಲಿ ಚಿಕ್ಕದೇವರಾಜ ಒಡೆಯರ ಕಾಲದ ಆಡಳಿತವನ್ನು ಇಡಿಯಾಗಿ ಕಟ್ಟಿಕೊಡುವ ಪ್ರಯತ್ನವನ್ನು ಇಲ್ಲಿ ಮಾಡಿದ್ದಾರೆ. ಆಡಳಿತದ ವಿಕೇಂದ್ರೀಕರಣ, ಗ್ರಾಮಗಳ ಕ್ಷೇಮಾಭ್ಯುದಯ, ಭೂಕಂದಾಯ ಇವೇ ಮೊದಲಾದ ವಿಚಾರಗಳಲ್ಲಿ ಕಟ್ಟುನಿಟ್ಟಿನ ಕ್ರಮಗಳನ್ನು ಕೈಗೊಂಡ ವಿವರಗಳಿವೆ. ತೆರಿಗೆ ಹೆಚ್ಚಿಸಿದ್ದರ ಸಲುವಾಗಿ ನಂಜನಗೂಡು ಪ್ರದೇಶದ ರೈತರು ಅಧಿಕ ತೆರಿಗೆ ವಿರುದ್ಧ ಸಮಸ್ಯೆಯನ್ನು ಬಗೆಹರಿಸಿಕೊಂಡರು ಎಂಬುದನ್ನು ವಿವರಿಸಿದ್ದಾರೆ. ಆದರೆ ಮಾರ್ಕ್ ವಿಲ್ಕ್ಸ್ ಮತ್ತು ಬಿ.ಎಲ್.ರೈಸ್ ಅವರು ಚಿಕ್ಕದೇವರಾಜ ಒಡೆಯರ ಅಮಾನವೀಯ ತೆರಿಗೆಗಳು ಮತ್ತು ಶಿಕ್ಷೆಗಳ ಬಗ್ಗೆ ಹೇರಳವಾಗಿ ವಿವರಿಸಿದ್ದಾರೆ. ಈ ಕ್ರೂರ ತೆರಿಗೆಗಳನ್ನು ವಿರೋಧಿಸಿ, ಒಡೆಯರ ವಿರುದ್ಧ ಪ್ರತಿಭಟಿಸಲು ರೈತರನ್ನು ಸಂಘಟಿಸುತ್ತಿದ್ದ ನೂರಾರು ಜಂಗಮರನ್ನು ಕುತಂತ್ರದಿಂದ ಕೊಲ್ಲಿಸಿದರು. ಅಂದರೆ ತೆರಿಗೆಗಳನ್ನು ಕಡಿಮೆ ಮಾಡುವವರೆಗೆ ಭೂಮಿಯನ್ನು ಉಳುವುದೇ ಬೇಡ ಎಂದು ಜಂಗಮರು ರೈತರನ್ನು ಸಂಘಟಿಸುತ್ತಿದ್ದು ಅದು ಆ ಕಾಲಕ್ಕೆ ಅದ್ಭುತವಾದ ಸಂಘಟನೆ, ಪ್ರತಿಭಟನೆ. ಆದರೆ ಒಡೆಯರಿಗೆ ದ್ರೋಹ ಎಂದು ಮರಣದಂಡೆ ವಿಧಿಸಿದರು(ಎಸ್.ಚಂದ್ರಶೇಖರ್, ವಸಾಹತುಕಾಲೀನ ಕರ್ನಾಟಕ, ಪು.೧೫). ಆದರೆ ಸಂಶೋಧಕರು ಈ ಅಂಶಗಳ ಕಡೆಗೆ ಗಮನ ಹರಿಸಿಲ್ಲ.

ಆರ್ಥಿಕತೆಯಲ್ಲಿ ಕೃಷಿ, ಕೈಗಾರಿಕೆ, ವ್ಯಾಪಾರ–ವಾಣಿಜ್ಯ, ನೀರಾವರಿ ಯೋಜನೆಯ ಬಗೆಗೆ ವಿವರವಾಗಿ ಬರೆಯುತ್ತಾರೆ. ಸಾಹಿತ್ಯ ಮತ್ತು ಸಂಸ್ಕೃತಿಯ ಪ್ರಗತಿಯು ಮುಖ್ಯ. ಸ್ವತಃ ವಿದ್ವಾಂಸರಾಗಿದ್ದ ಚಿಕ್ಕದೇವರಾಜ ಒಡೆಯರು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಚಿಕ್ಕದೇವರಾಜ ಭಿನ್ನಪ, ಗೀತಗೋಪಾಲ, ಭಾಗವತ, ಶೇಷಧರ್ಮ ಮುಂತಾದ ಕೃತಿಗಳನ್ನು ರಚನೆ ಮಾಡಿದ್ದಾರೆ.

ತಿರುಮಲಾರ್ಯ, ಸಿಂಗರಾರ್ಯ, ಚಿಕ್ಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ವೇಣುಗೋಪಾಲ, ಮಲ್ಲರಸರು, ಶೃಂಗಾರಮ್ಮ ಮತ್ತು ಸಂಚಿ ಹೊನ್ನಮ್ಮ ಮುಂತಾದವರು ಒಡೆಯರ ಆಸ್ಥಾನದಲ್ಲಿದ್ದುಕೊಂಡು ಒಡೆಯರ ಚರಿತ್ರೆಯನ್ನು ಕಟ್ಟುವ ಕೃತಿಗಳನ್ನು ರಚಿಸಿರುವ ವಿವರಗಳನ್ನು ನೋಡಬಹುದು. ಒಟ್ಟಿನಲ್ಲಿ ಚಿಕ್ಕದೇವರಾಜ ಒಡೆಯರ ಕೇಂದ್ರಿತವಾಗಿ ರಾಜಕೀಯ ಹಿನ್ನೆಲೆಯಲ್ಲಿಯೇ ಇರುವ ವಿಚಾರಗಳನ್ನು ಗಮನಿಸಬಹುದು. ಜನಸಾಮಾನ್ಯರ ಜೀವನ ವಿಚಾರಗಳ ಸತ್ಯಾಸತ್ಯತೆಗಳನ್ನು ಒರೆಗಲ್ಲಿಗೆ ಹಚ್ಚಬಹುದಿತ್ತು.

ಆನಂತರಾಮಯ್ಯ ಓ. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮಂಡಿಸಿರುವ **ಸೋಷಿಯೋ-ಎಕಾನಮಿಕ್ ಚೇಂಜ್ ಡಿಪ್ರೆಸ್ಡ್ ಕ್ಲಾಸಸ್ ಇನ್ ಮೈಸೂರು ಸ್ಟೇಟ್ ೧೯೦೨-೧೯೫೨(೧೯೬೬)**[೧೨] ಎಂಬ ಪಿಎಚ್.ಡಿ.ಮಹಾಪ್ರಬಂಧವು ಪ್ರಮುಖವಾದುದು. ಸಂಶೋಧಕರು ಮೊದಲು ಡಿಪ್ರೆಸ್ಡ್ ಕ್ಲಾಸಸ್ ಅಂದರೆ ಯಾವ ಯಾವ ಜಾತಿಗಳು ಬರುತ್ತವೆ ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಸಮಾಜದಲ್ಲಿರುವ ಮೇಲ್ವರ್ಗ ಮತ್ತು ಕೆಳವರ್ಗಗಳು ಗುರುತಿಸಿಕೊಂಡಿರುವ ಬಗೆಯನ್ನು ತಿಳಿಸಿದ್ದಾರೆ. ಹೊಲೆಯರು, ಅವರ ಕುಲ, ವಿವಾಹ, ಅವರ ವೃತ್ತಿ ಇವೇ ಮೊದಲಾದ ವಿಚಾರಗಳನ್ನು ವಿವರಿಸಿದ್ದಾರೆ. ಮೊದಲಿನಿಂದಲೂ ನಡೆದುಬಂದ ಈ ಕಟ್ಟುನಿಟ್ಟಿನ ವಿಚಾರಗಳಲ್ಲಿ ಇವತ್ತಿನ ಸಂದರ್ಭದಲ್ಲಿ ಸಡಿಲಗೊಳ್ಳುತ್ತಿವೆ. ಮಾದಿಗ ಜನಾಂಗ ದವರು ನಿಮ್ನ ವರ್ಗಗಳ ಜಾತಿಯಲ್ಲಿಯೇ ಕೆಳಮಟ್ಟದಲ್ಲಿದ್ದರು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಇವರು ಮೇಲ್ವರ್ಗದವರಿಗೆ ಗುಲಾಮರಾಗಿ ಕೆಲಸಗಳನ್ನು ಮಾಡುತ್ತಿದ್ದರು ಎಂಬುದು ಮುಖ್ಯವಾದ ಸಂಗತಿ. ಹೀಗೆ ಇನ್ನಿತರ ವರ್ಗಗಳ ಕುಲಗಳು, ವೈವಾಹಿಕ ಸಂಬಂಧಗಳು, ಸಂಸ್ಕೃತಿ ಇವೇ ಮೊದಲಾದ ಅಂಶಗಳನ್ನು ವಿವರಿಸಿದ್ದಾರೆ.

ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಆದಂತಹ ಸಮ್ಮೇಳನಗಳಲ್ಲಿ ಈ ನಿಮ್ನವರ್ಗಗಳಿಗೆ ಸಿಗುವ ಸೌಲಭ್ಯಗಳ ಮಾಹಿತಿ ನೀಡಿದ್ದಾರೆ. ರೂರಲ್ ರಿ-ಕನ್ಸ್‌ಟ್ರಕ್ಷನ್ ಕಾರ್ಯಕ್ರಮದಲ್ಲಿ ಕೃಷಿ, ಶಿಕ್ಷಣ, ಸಹಕಾರ ಸಂಘ, ಬ್ಯಾಂಕುಗಳ ಅಭಿವೃದ್ಧಿಯನ್ನು ಕೈಗೊಳ್ಳಲಾಯಿತು. ಇದರ ಸೌಲಭ್ಯವನ್ನು ನಿಮ್ನವರ್ಗಗಳು ಪಡೆದುಕೊಳ್ಳಲು ಅವಕಾಶವನ್ನು ನೀಡಲಾಯಿತು. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಕೂಡ ನಿಮ್ನವರ್ಗಗಳಿಗೆ ಪ್ರತ್ಯೇಕವಾದ ಕೃಷಿ ಕಾಲೋನಿಗಳನ್ನು ಸ್ಥಾಪಿಸಿದರು. ಹೀಗೆ ನಿಮ್ನವರ್ಗಗಳ ಅಭಿವೃದ್ಧಿಗೆ ಕೈಗೊಂಡ ಕಾರ್ಯಕ್ರಮಗಳ ಚಿತ್ರಣ ನೀಡಿದ್ದಾರೆ(ಪು.೧೨೩). ನಿಮ್ನವರ್ಗಗಳು ಸರ್ಕಾರದ ಕೆಲವು ಸೌಲಭ್ಯಗಳನ್ನು ಪಡೆದರು ಎಂಬುದು ಇಲ್ಲಿ ಮುಖ್ಯ.

ಅಸ್ಪೃಶ್ಯತೆ ನಿಷೇಧ ಕಾಯ್ದೆಯನ್ನು ಜಾರಿಗೆ ತರಲು ಸಾರ್ವಜನಿಕ ಅಭಿಪ್ರಾಯವನ್ನು ಸಂಗ್ರಹಿಸಲಾಯಿತು. ಇದಕ್ಕಾಗಿ ಕಮಿಟಿಯನ್ನು ರಚಿಸಲಾಯಿತು. ಈ ಕಮಿಟಿಯಲ್ಲಿ ಬ್ರಾಹ್ಮಣರಾದ ಗೋಪಾಲಸ್ವಾಮಿ ಅಯ್ಯರ್ ಕೂಡ ಇದ್ದರು. ಪಂಚಮರ ಏಳಿಗೆಗಾಗಿ ದುಡಿದ ಇವರು ಪಂಚಮರ ಗೋಪಾಲಸ್ವಾಮಿ ಅಯ್ಯರ್ ಎಂದೇ ಹೆಸರಾದರು. ಪಂಚಮರಿಗೆ ಶಿಕ್ಷಣ, ವಿದ್ಯಾರ್ಥಿವೇತನ, ಉದ್ಯೋಗ ಹೀಗೆ ಈ ಎಲ್ಲಾ ಸೌಲಭ್ಯಗಳನ್ನು ಕಲ್ಪಿಸಿ ಅವರ ಏಳಿಗೆಗಾಗಿ ಶ್ರಮಿಸಿದರು ಎಂದು ವಿವರಿಸಿರುವುದನ್ನು ಇಲ್ಲಿ ಗಮನಿಸಬಹುದು. ೧೯೪೩ರಲ್ಲಿ ಸಿವಿಲ್

ಡಿಸೇಬಿಲಿಟಿ ಆ್ಯಕ್ಟನ್ನು ಜಾರಿಗೆ ತರಲಾಯಿತು. ಎಲ್ಲಾ ಜಾತಿಗಳ ಪ್ರಜೆಗಳನ್ನು ಸಮಾನವಾಗಿ ನೋಡಬೇಕು ಎಂಬುದನ್ನು ವಿವರಿಸಿದ್ದಾರೆ(ಪು.೧೩೫). ಅನಂತರ ದೇವಾಲಯ ಪ್ರವೇಶ ವಿಧೇಯಕವನ್ನು ಜಾರಿಗೆ ತಂದು, ಅಸ್ಪೃಶ್ಯರು ಇತರ ಜಾತಿಗಳಂತೆ ದೇವಾಲಯದ ಪ್ರವೇಶವನ್ನು ಮಾಡಬಹುದು ಎಂಬ ಅಂಶಗಳನ್ನು ತಿಳಿಸಿದ್ದಾರೆ. ಆದರೆ ಇಂದಿಗೂ ಅಸ್ಪೃಶ್ಯರು ದೇವಾಲಯ ಪ್ರವೇಶ ಮಾಡಬಾರದು ಎಂಬ ನಿಯಮ ಮೇಲ್ವರ್ಗದವರದಾಗಿದೆ. ಇದು ಜನರ ನಂಬಿಕೆಯೋ ಅಥವಾ ಬದುಕಿನ ಅನಿವಾರ್ಯತೆಯೋ ಅಸ್ಪೃಶ್ಯರು ದೇವಾಲಯವನ್ನು ಪ್ರವೇಶಿಸುವುದಿಲ್ಲ. ಅಸ್ಪೃಶ್ಯರಿಗಾಗಿಯೇ ಕೆಲವು ಸಂಘಗಳನ್ನು ಸ್ಥಾಪಿಸಲಾಯಿತು. ಆದಿ ಕರ್ನಾಟಕ ಸಂಘ, ಆದಿ ಜಾಂಬವ ಸಂಘ, ಕಣಿಯರ ಸಂಘ, ಕೆಂಗೇರಿಯಲ್ಲಿ ಗುರುಕುಲ, ಬೆಂಗಳೂರಿನಲ್ಲಿ ದೀನ ಸೇವಾ ಸಂಘಗಳು ಸ್ಥಾಪನೆಯಾಗಿ, ಶಿಕ್ಷಣದ ಪ್ರಸಾರ ಇನ್ನೂ ಮುಂತಾದ ಕಾರ್ಯಗಳನ್ನು ಕೈಗೊಂಡರು ಎಂಬುದು ಇಲ್ಲಿ ಗಮನಿಸಬೇಕಾದ ವಿಷಯ. ಇಂದಿಗೂ ದೀನ ಸೇವಾ ಸಂಘವು ಬೆಂಗಳೂರಿನಲ್ಲಿ ಶಾಲೆಯನ್ನು ನಡೆಸುತ್ತಿರುವುದನ್ನು ಗಮನಿಸಬಹುದು. ದೆಹಲಿಯಲ್ಲಿಯೂ ಆಲ್-ಇಂಡಿಯಾ ಹರಿಜನ ಸೇವಾ ಸಂಘವನ್ನು ಸ್ಥಾಪಿಸಲಾಯಿತು(ಪು.೧೮೮-೧೮೯). ಇವತ್ತಿನ ಸಂದರ್ಭದಲ್ಲಿ ದಲಿತ ಸಂಘರ್ಷ ಸಮಿತಿಯು ದಲಿತರ ಸಮಸ್ಯೆಗಳಿಗೆ ಹೇಗೆ ಸ್ಪಂದಿಸುತ್ತಿದೆ ಎಂಬುದು ಮುಖ್ಯ.

ಮೈಸೂರು ಸಂಸ್ಥಾನದಲ್ಲಿ ಅನಿಷ್ಟ ಪದ್ಧತಿಗಳಾದ ದೇವದಾಸಿ ಪದ್ಧತಿ, ಜೀತ ಪದ್ಧತಿ ಇವೇ ಮೊದಲಾದವುಗಳನ್ನು ಹೋಗಲಾಡಿಸಲು ಕಾಯ್ದೆಗಳನ್ನು ಜಾರಿಗೆ ತಂದು ಸಾಮಾಜಿಕವಾಗಿ ಬದಲಾವಣೆ ಮಾಡುವಂತೆ ಮಾಡಿದರು ಎಂಬುದನ್ನು ವಿವರಿಸಿದ್ದಾರೆ. ಅಸ್ಪೃಶ್ಯರ ಏಳಿಗೆಗಾಗಿ ಶ್ರಮಿಸಿದ ಕ್ರೈಸ್ತ ಮಿಷನರಿಗಳ ಪಾತ್ರ ಮುಖ್ಯವಾದುದು. ಅನೇಕ ಶಾಲೆಗಳನ್ನು ತೆರೆದು ಅಸ್ಪೃಶ್ಯರಿಗೆ ಶಿಕ್ಷಣವನ್ನು ನೀಡಿದರು. ಊಟ, ವಸತಿ ಇವೇ ಮೊದಲಾದ ಮೂಲಭೂತ ಸೌಲಭ್ಯವನ್ನು ಒದಗಿಸಿದರು. ಹೀಗೆ ಕ್ರೈಸ್ತ ಮಿಷನರಿಗಳು ನಿಮ್ನವರ್ಗಗಳ ಅಭಿವೃದ್ಧಿಗೆ ಅನೇಕ ಕೊಡುಗೆಗಳನ್ನು ನೀಡಿದ್ದಾರೆ. ಅಸ್ಪೃಶ್ಯರ ಏಳಿಗೆಯಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರವನ್ನು ವಿವರಿಸದೇ ಇದ್ದರೆ ಅದು ಪೂರ್ಣವಾಗಲಾರದು. ಎಸ್.ಚಂದ್ರಶೇಖರ್ ಅವರು ತಮ್ಮ 'ಡೈಮೆನ್ಷನ್ ಆಫ್ ಸೋಶಿಯೋ ಪೊಲಿಟಿಕಲ್ ಚೇಂಜ್ ಇನ್ ಮೈಸೂರು ೧೯೧೮-೧೯೪೦' ಎಂಬ ಪಿಎಚ್.ಡಿ ಮಹಾಪ್ರಬಂಧದಲ್ಲಿ ನಿಮ್ನವರ್ಗಗಳ ಏಳಿಗೆಯನ್ನು ವಿವರಿಸುವಾಗ ಈ ಕ್ರೈಸ್ತ ಮಿಷನರಿಗಳ ಪಾತ್ರವನ್ನು ಪರಿಗಣಿಸಿಲ್ಲ. ಆದರೆ ಓ.ಅನಂತರಾಮಯ್ಯ ಅವರ ಈ ಮಹಾಪ್ರಬಂಧವು ಆ ಮಿತಿಯನ್ನು ತುಂಬುತ್ತದೆ.

ಮೈಸೂರಿನಲ್ಲಿ ಹಿಂದುಳಿದ ವರ್ಗಗಳ ಚಳವಳಿ ಆರಂಭವಾಯಿತು. ಅದರಲ್ಲೂ ಲಿಂಗಾಯತರು, ಒಕ್ಕಲಿಗರು ಮತ್ತು ಮುಸ್ಲಿಂ ಸಮುದಾಯಗಳು ಮುಖ್ಯವಾಗಿ ಗುರುತಿಸಿಕೊಂಡು, ಸರಕಾರದ ಸವಲತ್ತುಗಳನ್ನು ಕೇವಲ ಪ್ರಬಲಜಾತಿಗಳು ಮಾತ್ರ ತಮ್ಮದಾಗಿಸಿಕೊಂಡವು ಎನ್ನುವುದನ್ನು ವಿಶ್ಲೇಷಿಸಿದ್ದಾರೆ. ಗಾಂಧೀಜಿ ಅವರು ಮೈಸೂರಿಗೆ ಭೇಟಿ ನೀಡಿದಾಗ ಹರಿಜನರ ಆರ್ಥಿಕ ಕಲ್ಯಾಣಕ್ಕಾಗಿ ಕಾರ್ಯಗಳನ್ನು ರೂಪಿಸಿದರು ಎಂಬುದು ಮುಖ್ಯ. ಆರ್.ಗೋಪಾಲಸ್ವಾಮಿ ಅಯ್ಯರ್, ಹೆಚ್.ಸಿ.ದಾಸಪ್ಪ ಮತ್ತು ಶ್ರೀಮತಿ ಯಶೋಧರಮ್ಮ ದಾಸಪ್ಪ ಮೊದಲಾದವರು

ಹರಿಜನರ ಅಭಿವೃದ್ಧಿಗೆ ಕಾರ್ಯಕ್ರಮಗಳನ್ನು ಕೈಗೊಂಡರು. ಹಾಸ್ಟೆಲ್, ವಿದ್ಯಾರ್ಥಿವೇತನ ಮೊದಲಾದ ಸೌಲಭ್ಯಗಳನ್ನು ಒದಗಿಸಿದರು. ಹೀಗೆ ಖಾಸಗೀ ಸಂಸ್ಥೆಗಳು, ವ್ಯಕ್ತಿಗಳು ಹಾಗೂ ಸರಕಾರದ ಪಾತ್ರವನ್ನು ವಿಶ್ಲೇಷಿಸಿದ್ದಾರೆ. ಒಟ್ಟಾರೆ ಈ ಮಹಾಪ್ರಬಂಧವು ಮೈಸೂರು ರಾಜ್ಯದಲ್ಲಿ ಸಾಮಾಜಿಕ ಚಲನಶೀಲತೆ ಮತ್ತು ಆರ್ಥಿಕ ಬದಲಾವಣೆಯನ್ನು ನಿಮ್ನವರ್ಗಗಳು ಪಡೆದುಕೊಂಡವು ಎಂಬ ಅಂಶಗಳನ್ನು ವಿಸ್ತೃತವಾಗಿ ಕಟ್ಟಿಕೊಡುತ್ತದೆ. ಆಕರಗಳನ್ನು ಸಮರ್ಥವಾಗಿ ದುಡಿಸಿ ಕೊಂಡಿದ್ದಾರೆ.

ಜಮುನ ಎಂ. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಸೋಷಿಲ್ ಚೇಂಜ್ ಇನ್ ಮೈಸೂರು ವಿತ್ ಸ್ಪೆಷಲ್ ರೆಫರೆನ್ಸ್ ಟು ವುಮೆನ್** ೧೮೮೦-೧೯೪೭'(೧೯೯೦)[೧೩] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ಮಹಿಳೆಗೆ ಸಂಬಂಧಿಸಿದಂತೆ ಸಾಮಾಜಿಕವಾಗಿ ಯಾವ ರೀತಿ ಬದಲಾವಣೆಗಳಾದವು ಎಂಬುದನ್ನು ಈ ಮಹಾಪ್ರಬಂಧದಲ್ಲಿ ಸಂಶೋಧಕರು ಚರ್ಚಿಸುತ್ತಾ ಹೋಗುತ್ತಾರೆ.

ಮಹಿಳಾ ಅಭಿವೃದ್ಧಿಗೆ ಸಂಬಂಧಿಸಿದಂತೆ ಮೊದಲು ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದರು. ಕಮೀಷನರುಗಳ ಆಳ್ವಿಕೆಯಲ್ಲಿ ಅನೇಕ ಶಿಕ್ಷಣದ ಕೇಂದ್ರಗಳನ್ನು ಸ್ಥಾಪಿಸಲು ನೆರವಾದರು. ೧೮೪೦ರಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಮೊದಲು ಪ್ರೋತ್ಸಾಹ ನೀಡಿದರು. ಲಂಡನ್ ಮಿಷನ್ ಅನೇಕ ವರ್ನಾಕ್ಯುಲರ್ ಶಾಲೆಗಳನ್ನು ಪ್ರಾರಂಭಿಸಿದ ವಿವರಗಳನ್ನು ತಿಳಿಸಿದ್ದಾರೆ(ಪು.೨೨). ಇಲ್ಲಿ ಮಹಿಳೆಯರ ಸಾಮಾಜಿಕ ಬದಲಾವಣೆಯಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರವನ್ನು ವಿವರಿಸಿದ್ದಾರೆ. ಬ್ರಾಹ್ಮಣ ಮಹಿಳೆಯರು ಸಮಾಜದಲ್ಲಿ ಉನ್ನತ ಸ್ಥಾನ ಪಡೆದಿದ್ದು, ಮೊದಲು ಶಿಕ್ಷಣವನ್ನು ಪಡೆದರು. ಬ್ರಾಹ್ಮಣೇತರರಲ್ಲಿ ಬರುವ ಒಕ್ಕಲಿಗ, ಲಿಂಗಾಯತರು ಬಲಿಷ್ಠರಾಗಿದ್ದು ಸಮಾಜದಲ್ಲಿ ಪ್ರಮುಖರಾಗಿ ಗುರುತಿಸಿಕೊಂಡಿದ್ದರು ಎಂಬುದನ್ನು ಇಲ್ಲಿ ನೋಡಬಹುದು. ದಿವಾನರಾದ ಶೇಷಾದ್ರಿ ಅಯ್ಯರ್ ಮತ್ತು ಸಿ.ರಂಗಾಚಾರ್ಲು ಅವರು ಮಹಿಳೆಯರ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಅಲ್ಲದೇ ಇವರ ಅಭಿವೃದ್ಧಿ ಕಾರ್ಯಗಳಿಂದ ಮೈಸೂರು ಸಂಸ್ಥಾನ 'ಮಾದರಿ ಸಂಸ್ಥಾನ' ಎಂಬ ಹೆಸರು ಪಡೆಯಿತು ಎಂದು ಚರ್ಚಿಸಿದ್ದಾರೆ.

ಇಂಗ್ಲಿಷ್ ಶಿಕ್ಷಣದಿಂದ ಮಹಿಳೆಯರಲ್ಲಿ ಹಲವು ಬದಲಾವಣೆಗಳಾದವು. ಬಾಲ್ಯವಿವಾಹವು ಮೊದಲು ಜಾರಿಯಲ್ಲಿತ್ತು. ಇದರ ವಿರುದ್ಧ ಹೋರಾಟಗಳು ಪ್ರಾರಂಭವಾದವು. ವಿಧವಾ ಪುನರ್ ವಿವಾಹಕ್ಕೆ ಪೋತ್ಸಾಹ ನೀಡಲು ೧೮೫೬ರಲ್ಲಿ ವಿದ್ಯಾಸಾಗರ್ ಅವರು ಕಾಯ್ದೆಯನ್ನು ಜಾರಿಗೆ ತಂದರು. ೧೮೬೬ರಲ್ಲಿ ವಿಧವಾ ಪುನರ್‌ವಿವಾಹದ ಅಸೋಷಿಯನ್ನನ್ನು ಪ್ರಾರಂಭಿಸಿದ ವಿವರಗಳನ್ನು ನೋಡಬಹುದು(ಪು.೪೯). ರಾನಡೆ, ರಾಜಾರಾಮ ಮೋಹನರಾಯ್ ಅವರ ಸಾಮಾಜಿಕ ಅಭಿವೃದ್ಧಿ ಕಾರ್ಯಗಳನ್ನು ಇಲ್ಲಿ ವಿವರಿಸಿದ್ದಾರೆ. ಸತಿಪದ್ಧತಿಯ ರದ್ದು, ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಲಾಯಿತು. ಕ್ರಿಶ್ಚಿಯನ್ ಮಿಷನರಿಗಳು ವಿಧವಾವಿವಾಹಕ್ಕೆ ಬೆಂಬಲ ನೀಡಿದವು. ಬಾಲ್ಯವಿವಾಹವನ್ನು ತಡೆಯಲು ಶಾರದ ಕಾಯ್ದೆಯನ್ನು ಜಾರಿಗೆ ತಂದು, ವಿವಾಹದ ವಯಸ್ಸನ್ನು ನಿಗದಿಗೊಳಿಸಲಾಯಿತು. ಹೀಗೆ ವಿವಿಧೆಡೆಗಳಲ್ಲಿ ನಡೆದ ಬಾಲ್ಯವಿವಾಹ

ಗಳನ್ನು ಉದಾಹರಿಸಿ ಚರ್ಚಿಸಿದ್ದಾರೆ(ಪು.೧೩೯). ಕಾಯ್ದೆಗಳನ್ನು ಹಿಂದೂ, ಮುಸ್ಲಿಂ, ಜೈನ, ಬೌದ್ಧ ಎಲ್ಲಾ ಧರ್ಮೀಯರಿಗೂ ಅನ್ವಯಿಸುವಂತೆ ಮಾಡಲಾಯಿತು. ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿ ಶಾಲೆಗಳನ್ನು ಪ್ರಾರಂಭಿಸಲಾಯಿತು. ಎಲಿಮೆಂಟರಿ ಎಜುಕೇಷನ್ ಆ್ಯಕ್ಟನ್ನು ಜಾರಿಗೆ ತಂದು, ಕೋಲಾರ, ಬೆಂಗಳೂರು, ಮೈಸೂರು ಕಡೆಗಳಲ್ಲಿ ಶಾಲೆಗಳನ್ನು ತೆರೆಯಲಾಯಿತು. ಮುಖ್ಯವಾಗಿ ಪಂಚಮ, ರಾತ್ರಿ ಶಾಲೆಗಳು ಪ್ರಾರಂಭವಾದವು ಎಂಬ ಅಂಶಗಳನ್ನು ಇಲ್ಲಿ ಗುರುತಿಸಬಹುದು(ಪು.೧೮೪).

ಮಹಿಳೆಯ ಸಾಮಾಜಿಕ ಸ್ಥಾನಮಾನಕ್ಕೆ ಅನುಗುಣವಾಗಿ ಸಂವಿಧಾನಾತ್ಮಕವಾಗಿ ಸ್ಥಾನವನ್ನು ಪಡೆದರು. ಕಮಲಮ್ಮ ದಾಸಪ್ಪ ಮತ್ತು ಸಾಕಮ್ಮ ಅಸೆಂಬ್ಲಿಯಲ್ಲಿ ಸ್ಥಾನ ಪಡೆದರು. ಹೀಗೆ ಹಂತಹಂತವಾಗಿ ಮಹಿಳೆಯರು ಸಂವಿಧಾನದ ಸ್ಥಾನಗಳಲ್ಲಿ ಅವಕಾಶ ಪಡೆದರು ಎಂಬುದನ್ನು ವಿಶ್ಲೇಷಿಸಿದ್ದಾರೆ(ಪು.೨೧೦). ಮುಖ್ಯವಾಗಿ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಗೌರಮ್ಮ, ಕಾವೇರಮ್ಮ, ದುಗ್ಗಮ್ಮ ಮತ್ತು ಭಗೀರಥಮ್ಮ, ಲಕ್ಷ್ಮಮ್ಮ ಮೊದಲಾದವರ ವಿವರಗಳನ್ನು ತಿಳಿಸಿದ್ದಾರೆ(ಪು.೨೩೯). ಯಶೋಧರಮ್ಮ ದಾಸಪ್ಪ, ಸುಬ್ಬಮ್ಮ, ಬಳ್ಳಾರಿ ಸಿದ್ಧಮ್ಮ, ವೆಂಕಟಮ್ಮ, ಸುಂದರಮ್ಮ ಮೊದಲಾದವರು ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರ ವಿವರಗಳು ಮುಖ್ಯ ಇಲ್ಲಿ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ ಮಹಿಳೆಯರ ಒಂದು ಐಡೆಂಟಿಟಿಯನ್ನು ತಿಳಿಸಿದ್ದಾರೆ.

ಚರಿತ್ರೆ ಮತ್ತು ಸಾಹಿತ್ಯಕ್ಕೆ ಪರಸ್ಪರ ಸಂಬಂಧವಿದೆ ಎನ್ನುವ ನವಚಾರಿತ್ರಿಕವಾದದ ಹಿನ್ನೆಲೆಯಲ್ಲಿ ಸಾಹಿತ್ಯ ಕೃತಿಗಳಲ್ಲಿ ಮಹಿಳೆಯರ ಸ್ಥಾನಮಾನವನ್ನು ಯಾವ ರೀತಿ ಚಿತ್ರಿಸಿದ್ದಾರೆ ಎಂಬುದನ್ನು ಇಲ್ಲಿ ಚರ್ಚಿಸಲಾಗಿದೆ. ನವೋದಯ ಸಾಹಿತ್ಯದಲ್ಲಿ ಹೊರಬಂದ ಹಲವು ಕೃತಿಗಳಲ್ಲಿ ಮಹಿಳೆಯರ ಸಾಮಾಜಿಕ ಸ್ಥಾನಮಾನದ ಬಗೆಗೆ ವಿವರಿಸಿರುವುದನ್ನು ನೋಡಬಹುದು. ಈ ವಿಚಾರವನ್ನು ಕುವೆಂಪು, ಮಾಸ್ತಿ ವೆಂಕಟೇಶ್ ಅಯ್ಯಂಗಾರ್ ಅವರ ಕೃತಿಗಳಲ್ಲಿ ಹೆಚ್ಚಾಗಿ ಕಾಣಬಹುದು. ಕುವೆಂಪು ಅವರ ಮಲೆಗಳಲ್ಲಿ ಮದುಮಗಳು, ಕಾನೂರು ಹೆಗ್ಗಡಿತಿ ಕೃತಿಯಲ್ಲಿ ಮಲೆನಾಡಿನ ಗ್ರಾಮೀಣ ಸಮಾಜ ಹೇಗೆ ಮೂಡಿಬಂದಿದೆ ಎಂಬುದನ್ನು ಚರ್ಚಿಸಿದ್ದಾರೆ. ಮೇಲ್ವರ್ಗದ ಮಹಿಳೆಯರು ಯಾವ ರೀತಿ ತಮ್ಮ 'ಅಸ್ಮಿತೆ'ಯನ್ನು ಪಡೆದರು ಎಂಬುದು ಇಲ್ಲಿ ಮುಖ್ಯ. ಒಕ್ಕಲಿಗ ಜನಾಂಗದ ಚಿನ್ನಮ್ಮ, ಸೀತೆ ಇವರೆಲ್ಲರೂ ಸ್ತ್ರೀ ಜಾತಿಯ ದಮನದ ವಿರುದ್ಧ ಪ್ರತಿಭಟಿಸಿ ಹೋರಾಡಿದ ಕ್ರಾಂತಿಕಾರಿಗಳು. ಅನಿಷ್ಟ ಸಂಪ್ರದಾಯಗಳನ್ನು ಧಿಕ್ಕರಿಸಿ ತಮ್ಮದೇ ರೀತಿಯಲ್ಲಿ ಹೊರಬಂದು ಚರಿತ್ರೆಯನ್ನು ಸೃಷ್ಟಿಸುವ ಪಾತ್ರಗಳು ಎಂದು ವಿವರಿಸಿದ್ದಾರೆ. 'ಮಲೆಗಳಲ್ಲಿ ಮದುಮಗಳು' ಕೃತಿಯು ಸಮಾಜದ ಸಾಮಾಜಿಕ ಚಿತ್ರಣವನ್ನು ನೀಡುತ್ತದೆ. ಸೇಸಿಯ ಮಗಳು ತಿಮ್ಮಿಯನ್ನು ಗುತ್ತಿಗೆ ಮದುವೆ ಮಾಡಿಕೊಡಲು ನಿರ್ಧಾರವಾಗಿತ್ತು. ಆದರೆ ಜಮೀನ್ದಾರರು ಒಂದು ಆಳನ್ನು ಕಳೆದುಕೊಳ್ಳಲು ಇಷ್ಟಪಡುವುದಿಲ್ಲ. ಮದುವೆಯನ್ನು ತಪ್ಪಿಸಲು ಏನಾದರೂ ಮಾಡಲು ತಯಾರು ಮಾಡುತ್ತಾನೆ. ಇವನ ಆಳು ಬಚ್ಚನಿಗೆ ಮದುವೆ ಮಾಡಲು ತಂತ್ರ ರೂಪಿಸುತ್ತಾನೆ. ಆದರೆ ಸೇಸಿಯು ಗುತ್ತಿಯು ತಿಮ್ಮಿಯನ್ನು ಹಾರಿಸಿಕೊಂಡು ಹೋಗುವ ಹುನ್ನಾರ ಮಾಡುತ್ತಾರೆ. ಇದರಿಂದ ಎಲ್ಲಾ ಪ್ರತಿರೋಧಗಳನ್ನು ಮೀರಿ ಗುತ್ತಿ–ತಿಮ್ಮಿ ಹೊಸದೊಂದು

ಜಾಗವನ್ನು ಹೊಸದೊಂದು ಜೀವನಕ್ರಮವನ್ನು ಹುಡುಕಿ ಹೋಗುವುದು ಅಸ್ಪೃಶ್ಯರ, ಶೋಷಿತರ ಬಿಡುಗಡೆಗೆ ನಾಂದಿ ಎನ್ನಬಹುದು ಎಂದು ಚರ್ಚಿಸಿದ್ದಾರೆ(ಪು.೧೨೯). ಗೊರೂರು ರಾಮಸ್ವಾಮಿ ಅಯ್ಯಂಗಾರರ ಕೃತಿಗಳ ಮಹಿಳೆಯರ ಸ್ಥಾನಮಾನದ ಬಗ್ಗೆ ಚರ್ಚಿಸಿದ್ದಾರೆ. ವೆಂಕಟನ ಹೆಂಡತಿ ಕೃತಿಯು ಪ್ರಮುಖವಾದುದು. ಕ್ಷೌರಿಕ ಜಾತಿಯ ಹುಡುಗ ಮತ್ತು ಡೊಂಬರ ಹುಡುಗಿಯ ಪ್ರೀತಿಯ ವಿಷಯಗಳನ್ನು ಚರ್ಚಿಸಿದ್ದಾರೆ. ಹಾಗೆಯೇ ತಮ್ಮ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಆಕರ ಸಾಮಗ್ರಿಗಳಲ್ಲಿ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಸಂಶೋಧಕರು ದುಡಿಸಿಕೊಂಡಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಮುಖ್ಯವಾಗಿ ಮಹಿಳೆಯರ ಸಾಮಾಜಿಕ ಬದಲಾವಣೆಯ ಒಳನೋಟವನ್ನು ನೀಡುತ್ತಾರೆ.

ವಿಜಯಲಕ್ಷ್ಮಿ ಕೆ.ಎಸ್. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಇರಿಗೇಷನ್ ಪಾಲಿಸಿ ಇನ್ ಪ್ರಿನ್ಸ್ಲಿ ಮೈಸೂರು ೧೮೮೧-೧೯೪೭(೧೯೯೦)**[೧೪] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಮೈಸೂರು ಸಂಸ್ಥಾನದ ಅಭಿವೃದ್ಧಿಯಲ್ಲಿ ನೀರಾವರಿಯ ಯೋಜನೆಗಳು ಪ್ರಮುಖ ಪಾತ್ರ ವಹಿಸಿವೆ. ನೀರಾವರಿ ಯೋಜನೆಗೆ ಯಾವ ಯಾವ ರೀತಿಯ ಷರತ್ತುಗಳನ್ನು ಪಾಲಿಸಬೇಕು ಎಂಬುದರ ಬಗೆಗೆ ನೀರಾವರಿ ನೀತಿಯು ಉಲ್ಲೇಖಿಸಿರುವುದನ್ನು ಇಲ್ಲಿ ಮುಖ್ಯವಾಗಿ ಕಾಣಬಹುದಾಗಿದೆ. ೧೮೮೧ರಲ್ಲಿ ಕಮೀಷನರ್‌ಗಳ ಆಳ್ವಿಕೆಯಲ್ಲಿ ನೀರಾವರಿಗೆ ಯಾವ ರೀತಿಯ ಕಾರ್ಯ ಕೈಗೊಂಡರು ಎಂಬುದನ್ನು ವಿವರಿಸಿದ್ದಾರೆ. ಮಾರ್ಕ್ ಕಬ್ಬನ್‌ನ ಕಾಲದಲ್ಲಿ ನೀರಾವರಿಗೆ ಸಂಬಂಧಿಸಿದಂತೆ ಕೆರೆ ಮತ್ತು ಕಾಲುವೆಗಳ ದುರಸ್ತಿ ಕಾರ್ಯವನ್ನು ಕೈಗೊಂಡು ಕೃಷಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು ಎಂಬುದನ್ನು ಇಲ್ಲಿ ವಿವರಿಸಿದ್ದಾರೆ. ಸ್ಥಳೀಯವಾಗಿ ಚಿಕ್ಕಚಿಕ್ಕ ಟ್ಯಾಂಕ್‌ಗಳ ಮೂಲಕ ನೀರು ಸರಬರಾಜನ್ನು ಪ್ರಾರಂಭಿಸಿದರು. ಟ್ಯಾಂಕ್ ಪಂಚಾಯಿತಿ ಆ್ಯಕ್ಟನ್ನು ಜಾರಿಗೆ ತಂದರು. ಹಳ್ಳಿಗಳಲ್ಲಿ ನೀರಾವರಿ ಯೋಜನೆಗಳನ್ನು ಕೈಗೊಂಡರು ಎಂಬ ಮಾಹಿತಿ ವಿಚಾರಗಳು ಪ್ರಮುಖವಾಗಿವೆ.

ಮಾರಿಕಣಿವೆ ಯೋಜನೆಯು ದೊಡ್ಡ ನೀರಾವರಿ ಯೋಜನೆ ಆಗಿತ್ತು. ಚಿತ್ರದುರ್ಗ ಜಿಲ್ಲೆಯ ಸುತ್ತಮುತ್ತಲಿನ ಪ್ರದೇಶಗಳಿಗೆ ಅನುಕೂಲವಾಗುವಂತೆ ಈ ನೀರಾವರಿ ಯೋಜನೆಯನ್ನು ಕೈಗೊಂಡರು. ೧೮೯೨ರಲ್ಲಿ ಮದ್ರಾಸ್ ಸರ್ಕಾರವು ಇದಕ್ಕೆ ಅನುಮೋದನೆ ನೀಡಿದ ವಿವರಗಳು ಇಲ್ಲಿ ಮುಖ್ಯ(ಪು.೮೬). ನಾಲ್ವಡಿ ಕೃಷ್ಣರಾಜ ಒಡೆಯರ್ ಅವರ ಕಾಲದಲ್ಲಿ ದಿವಾನರಾದ ಮಿರ್ಜಾ ಇಸ್ಮಾಯಿಲ್ ಅವರು ಈ ಸಾಗರಕ್ಕೆ ನಾಲ್ವಡಿ ಅವರ ತಾಯಿಯ ನೆನಪಿಗಾಗಿ 'ವಾಣಿವಿಲಾಸ ಸಾಗರ' ಎಂದು ಕರೆದರು ಎಂಬುದನ್ನು ತಿಳಿಯಬಹುದು. ವಿಶ್ವೇಶ್ವರಯ್ಯ ಅವರು ಮಾರಿಕಣಿವೆ ಯೋಜನೆಯಲ್ಲಿ ಬ್ಲಾಕ್ ಪದ್ಧತಿಯನ್ನು ಅಳವಡಿಸಿದರು(ಪು.೧೦೨). ಯಾವಯಾವ ಬೆಳೆಗೆ ಎಷ್ಟು ಅಗತ್ಯವೋ ಅಷ್ಟು ನೀರನ್ನು ಹಾಯಿಸುವ ಪದ್ಧತಿ ಇದಾಗಿದೆ. ಇದರಿಂದ ರೈತರಿಗೆ ಕೃಷಿ ಮಾಡಲು ಅನುಕೂಲವಾಯಿತು. ವಿಶ್ವೇಶ್ವರಯ್ಯ ಅವರು ಕಾವೇರಿ ನದಿಗೆ ಶ್ರೀರಂಗಪಟ್ಟಣದ ಸಮೀಪವಿರುವ ಕನ್ನಂಬಾಡಿ ಎಂಬ ಹಳ್ಳಿಯ ಹತ್ತಿರ ಅಣೆಕಟ್ಟೊಂದನ್ನು ನಿರ್ಮಿಸಿದರು. ಕನ್ನಂಬಾಡಿ ಅಣೆಕಟ್ಟು ನೀರಿನಿಂದ ಮಂಡ್ಯ-ಮಳವಳ್ಳಿ ಸುತ್ತಮುತ್ತಲಿನ ಪ್ರದೇಶಗಳಿಗೆ ನೀರನ್ನು ಒದಗಿಸಿ ಕೃಷಿಯನ್ನು ಅಭಿವೃದ್ಧಿಗೊಳಿಸಲಾಯಿತು. ಸ್ವಯಂಚಾಲಿತ ಕವಾಟಗಳನ್ನು

ಅಳವಡಿಸಿರುವುದು ಮಹತ್ವದ್ದಾಗಿದೆ. ಶಿವನಸಮುದ್ರದಿಂದ ವಿದ್ಯುಚ್ಛಕ್ತಿ ಸರಬರಾಜು ಮಾಡಲಾಯಿತು. ಮದ್ರಾಸ್ ಮತ್ತು ಮೈಸೂರು ಸರ್ಕಾರಗಳೆರಡು ಯಾವ ರೀತಿ ನೀರಾವರಿ ಯೋಜನೆಯ ನೀತಿಯನ್ನು ಅನುಸರಿಸಿದರು ಎಂಬುದು ಮುಖ್ಯ.

ಇರ್ವಿನ್ ನಾಲೆ ಕಾಲುವೆಯ ನೀರಾವರಿ ಯೋಜನೆಯು ಪ್ರಮುಖವಾದುದು. ಏಕೆಂದರೆ ಕಾವೇರಿ ನದಿಗೆ ಈ ನಾಲೆಯನ್ನು ನಿರ್ಮಿಸಿದ್ದು ರೈತರ ಕೃಷಿಗೆ ಅನುಕೂಲವಾಗುತ್ತದೆ ಎಂದು ಭಾವಿಸಿದರು. ಆದರೆ ರೈತರಿಗೆ ಈ ನಾಲೆಯಿಂದ ತೊಂದರೆಯಾಯಿತು. ರೈತರಿಂದ ಇರ್ವಿನ್ ನಾಲೆ ಚಳವಳಿ ಆರಂಭವಾಯಿತು. ಹೆಚ್.ಕೆ.ವೀರಣ್ಣಗೌಡರು ರೈತರ ಪರ ಚಳವಳಿಗೆ ಬೆಂಬಲವಾಗಿ ನಿಂತರು. ಇಲ್ಲಿ ಈ ನೀರಾವರಿಯಿಂದ ಸ್ಥಳೀಯ ರೈತರಿಗೆ ಯಾವ ರೀತಿ ಸಹಾಯಕವಾಯಿತು ಎಂಬುದರ ಚರ್ಚೆ ಮುಖ್ಯ. ಕೊನೆಗೆ ಈ ಚಳವಳಿಯಿಂದ ರೈತರಿಗೆ ಸಹಾಯಕವಾಯಿತು. ಆದರೆ ಸಂಶೋಧಕರು ಬ್ರಿಟಿಷ್ ಸರ್ಕಾರದಿಂದ ನೀರಾವರಿ ಯೋಜನೆ ನೀತಿಯಲ್ಲಿ ಯಾವ ಷರತ್ತುಗಳು ಇದ್ದವು ಎಂಬುದನ್ನು ಗಮನಿಸಬೇಕಾಗಿತ್ತು. ಇಲ್ಲಿ ಬಳಸಿಕೊಂಡಿರುವ ಆಕರಗಳು ಮುಖ್ಯವಾಗಿವೆ.

ದೇವದಾಸ್ ಜಯದೇವ್ ಅವರು **ಕ್ರಿಶ್ಚಿಯನ್ ಮಿಷನರಿ ವರ್ಕ್ ಇನ್ ಮೈಸೂರು (೧೬೪೮–೧೯೪೭)**[೧೫] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಮೈಸೂರು ಸಂಸ್ಥಾನಕ್ಕೆ ಕ್ರಿಶ್ಚಿಯನ್ ಮಿಷನರಿಗಳ ಪ್ರವೇಶ ಹೇಗೆ ಆಯಿತು ಮತ್ತು ಅದರ ಕಾರ್ಯಗಳನ್ನು ಚರ್ಚಿಸಲಾಗಿದೆ. ಕ್ರಿಶ್ಚಿಯನ್ ಧರ್ಮದ ಪ್ರಚಾರದಲ್ಲಿ ಯುರೋಪಿಯನ್ನರ ಪಾತ್ರ, ಇಲ್ಲಿನ ಸ್ಥಳೀಯರಿಗೆ ಕೆಲವು ಸೌಲಭ್ಯ ನೀಡಿದ್ದರ ವಿವರಗಳನ್ನು ತಿಳಿಸಿದ್ದಾರೆ. ಕ್ರಿಶ್ಚಿಯನ್ನರು ಇಲ್ಲಿನ ಕೆಲವು ಭಾಗಗಳಿಗೆ ವಲಸೆ ಬಂದು, ವ್ಯಾಪಾರ, ಕೃಷಿಯಲ್ಲಿ ತೊಡಗುತ್ತಾರೆ. ಅನಂತರ ರಾಜರ ಆಶ್ರಯ ದೊರಕುತ್ತದೆ. ಮೈಸೂರು ಸಂಸ್ಥಾನದಲ್ಲಿ ಮೊದಲ ಬಾರಿಗೆ ಲಿಯಾನಾರ್ದೊ ಸಿನ್ನಾಮಿ(ಕ್ರಿ.ಶ.೧೬೪೯–೧೬೭೬) ಎಂಬ ಪಾದ್ರಿ ಭೇಟಿ ನೀಡುತ್ತಾನೆ. ಈತನು ಮೊದಲು ಗೋವಾಗೆ ಬಂದು ಅನಂತರ ಕೆನರಾಗೆ ಬರುತ್ತಾನೆ. ಅಲ್ಲಿ ಯಶಸ್ಸು ಕಾಣದೆ ಹಿಂದೂ ಸನ್ಯಾಸಿಯ ವೇಷ ಧರಿಸಿ ಮೈಸೂರು ಸಂಸ್ಥಾನಕ್ಕೆ ಬಂದನು. ಅಲ್ಲಿ ಕ್ರೈಸ್ತ ಮಿಷನರಿಯನ್ನು ಸ್ಥಾಪಿಸಿ ಮತಪ್ರಚಾರ ಕೈಗೊಂಡನು. ವೈದ್ಯಕೀಯ ಚಿಕಿತ್ಸೆ ಸ್ವಲ್ಪ ಗೊತ್ತಿದ್ದರಿಂದ ಜನತೆಯೊಂದಿಗೆ ಬೇಗ ಬೆರೆತನು. ಈತನು ಕನ್ನಡದಲ್ಲಿ ಕೃತಿಗಳನ್ನು ರಚಿಸಿದ್ದಾನೆ. ಮೈಸೂರು ದೇಶದ ಹಿಂದೂಗಳ ಜಾತಿಭೇದ, ಮೂಢನಂಬಿಕೆಗಳನ್ನು ಖಂಡಿಸುವ ಪುಸ್ತಕಗಳನ್ನು ಬರೆದಿದ್ದಾನೆ. ಕನ್ನಡ ವ್ಯಾಕರಣ, ಕನ್ನಡ ಕೋಶ ಮೊದಲಾದ ಕೃತಿಗಳನ್ನು ರಚಿಸಿರುವುದನ್ನು ತಿಳಿಯಬಹುದು.

ಮೈಸೂರು ಸಂಸ್ಥಾನದಲ್ಲಿ ಕ್ಯಾಥೋಲಿಕ್ ಮತ್ತು ಪ್ರೊಟೆಸ್ಟೆಂಟ್ ಪಂಗಡದ ಎರಡೂ ಕ್ರೈಸ್ತ ಮಿಷನರಿಗಳ ಪ್ರವೇಶ ಆಯಿತು. ಮೈಸೂರಿನಲ್ಲಿ ಒಡೆಯರು ಮತಪ್ರಚಾರಕ್ಕೆ ಪ್ರೋತ್ಸಾಹ ನೀಡಿದರು. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಸಾಕಷ್ಟು ಬದಲಾವಣೆಯಾದವು. ಹೈದರಾಲಿ ಕ್ರೈಸ್ತರನ್ನು ತನ್ನ ಸೈನ್ಯದಲ್ಲಿ ಸೇರಿಸಿಕೊಂಡನು. ಟಿಪ್ಪು ಸುಲ್ತಾನ್ ಮಂಗಳೂರು ಭಾಗದ ಕ್ರೈಸ್ತರನ್ನು ಸೆರೆಹಿಡಿದು ಸೆರೆಯಿಟ್ಟನು. ಬ್ರಿಟಿಷರಿಗೆ ಸಹಾಯ ಮಾಡಿದ್ದೇ ಕಾರಣ

ವಿರಬಹುದು. ಟಿಪ್ಪು ಮರಣದ ನಂತರ ಬಿಡುಗಡೆಯಾದ ಕ್ರೈಸ್ತರು ಕೃಷಿ ಭೂಮಿಯಿಲ್ಲದೇ ಬೇರೆ ವೃತ್ತಿಗಳಲ್ಲಿ ತೊಡಗುವಂತಾಯಿತು. ಬಳ್ಳಾರಿ(೧೮೧೦), ಬೆಂಗಳೂರು(೧೮೨೦), ಮೈಸೂರು (೧೮೩೯), ಚಿಕ್ಕಬಳ್ಳಾಪುರ(೧೯೯೧) ಮುಂತಾದ ಕಡೆಗಳಲ್ಲಿ ಮಿಷನರಿ ಕೇಂದ್ರಗಳು ಸ್ಥಾಪನೆಯಾದ ವಿವರಗಳನ್ನು ಇಲ್ಲಿ ಕ್ರೋಡೀಕರಿಸಿದ್ದಾರೆ. ಭಾರತಕ್ಕೆ ಬಂದ ಕ್ರಿಶ್ಚಿಯನ್ ಪಾದ್ರಿ ಅಬ್ಬೆದುಬ್ಬೆಯು ಇಲ್ಲಿನ ಆಚಾರ-ವಿಚಾರಗಳ ಬಗೆಗೆ ಜನರಿಗೆ ತಿಳಿಸಿಕೊಟ್ಟನು ಎಂಬುದು ಪ್ರಮುಖವಾದುದು. ಹೀಗೆ ಅನೇಕರು ಭೇಟಿ ನೀಡಿದ ವಿವರಗಳನ್ನು ಗಮನಿಸಬಹುದು. ಲಂಡನ್ ಮಿಷನ್, ಮೆಥಾಡಿಸ್ಟ್ ಮಿಷನ್, ಬಾಸೆಲ್ ಮಿಷನ್ ಮೊದಲಾದವು ತಮ್ಮ ಕಾರ್ಯ ಚಟುವಟಿಕೆಗಳನ್ನು ಆರಂಭಿಸಿದವು(ಪು.೨೫೨). ಈ ಮಿಷನರಿಗಳು ಅನೇಕ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ಇಲ್ಲಿ ತಿಳಿಯಬಹುದು. ಇವರು ಶಿಕ್ಷಣಕ್ಕೆ ಹೆಚ್ಚು ಒತ್ತು ನೀಡಿದರು. ಸಮಾಜದ ಎಲ್ಲಾ ಕ್ಷೇತ್ರದಲ್ಲಿ ಪ್ರಗತಿ ಉಂಟಾಗಿ ಅನೇಕ ಕೃತಿಗಳು ಪ್ರಕಟವಾದವು. ಹೀಗೆ ವಿವಿಧ ಕ್ಷೇತ್ರಗಳಲ್ಲಿನ ಸಾಧನೆಗಳ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ವೈದ್ಯಕೀಯ ಕ್ಷೇತ್ರದಲ್ಲಿ ಅಪಾರ ಸೇವೆ ಸಲ್ಲಿಸಿರುವ ವಿವರಗಳನ್ನು ನೋಡಬಹುದು. ಪ್ಲೇಗ್, ಕಾಲರಾ, ಕುಷ್ಠರೋಗಕ್ಕೆ ಒಳಗಾದವರನ್ನು ಯಾರೂ ಸಹ ಶುಶ್ರೂಷೆ ಮಾಡುತ್ತಿರಲಿಲ್ಲ. ಈ ಸಮಯದಲ್ಲಿ ಕ್ರೈಸ್ತ ಮಿಷನರಿಗಳು ಸಹಾಯ ಮಾಡಿದರು. ಬರಗಾಲ ಮತ್ತು ಕ್ಷಾಮದ ಸಂದರ್ಭದಲ್ಲಿ ಜನರಿಗೆ ಆಹಾರ, ಬಟ್ಟೆ, ವಸತಿ ಸೌಕರ್ಯಗಳನ್ನು ಒದಗಿಸಿದರು. ಅನಾಥಾಲಯಗಳನ್ನು ಸ್ಥಾಪಿಸಿ ಅನಾಥರಿಗೆ ಆಸರೆ ನೀಡಿದರು. ದೀನ-ದಲಿತರು, ಶೋಷಿತರಿಗೆ ಉತ್ತಮ ಜೀವನ ನಡೆಸಲು ಕೃಷಿಗೆ ಭೂಮಿ ಇತರ ಸೌಲಭ್ಯಗಳನ್ನು ಒದಗಿಸಿದರು ಎಂಬ ವಿವರಗಳಿವೆ(ಪು.೩೩೮). ಈ ಮಹಾಪ್ರಬಂಧದಲ್ಲಿ ಕ್ರೈಸ್ತ ಮಿಷನರಿಗಳ ಕಾರ್ಯಗಳ ಜೊತೆ ಮತಾಂತರದ ಪ್ರಕ್ರಿಯೆಯನ್ನು ಚರ್ಚಿಸಬೇಕಾಗಿತ್ತು. ಏಕೆಂದರೆ ಜನಪರ ಕಾಳಜಿಯ ಕಾರ್ಯಗಳು ಹೇಗೆ ಸಾಗಿದವು ಎಂಬುದು ತಿಳಿಯುತ್ತಿತ್ತು. ಜನರಿಗೆ ಒಂದು ಹೊತ್ತಿನ ಊಟ ನೀಡಿದರೂ ಮತಾಂತರ ಆದ ಪ್ರಕ್ರಿಯೆಯನ್ನು ಗಮನಿಸಿರಬೇಕಾಗಿತ್ತು. ಮೂಲಭೂತ ಸೌಕರ್ಯಗಳನ್ನು ನೀಡಿ ಜನರ ಮನಸ್ಸಿಗೆ ಹತ್ತಿರವಾಗಿ ಕ್ರೈಸ್ತ ಮತಕ್ಕೆ ಮತಾಂತರ ಆದ ವಿಚಾರಗಳನ್ನು ಚರ್ಚಿಸಬೇಕಾಗಿತ್ತು. ೧೯೩೦ರಲ್ಲಿ ಶಿವರಾಮ ಕಾರಂತರ 'ಚೋಮನ ದುಡಿ' ಕೃತಿಯಲ್ಲಿ ದಲಿತನೊಬ್ಬ ಭೂಮಿಯ ಒಕ್ಕಲುತನಕ್ಕಾಗಿ ಮತಾಂತರ ಆದ ವಿಚಾರವನ್ನು ಗಮನಿಸಬಹುದು. ಈ ನೆಲೆಯಲ್ಲಿ ವಿಚಾರಲಹರಿ ಮೂಡಿ ಬರಬೇಕಾಗಿತ್ತು.

ಕೇಶವಮೂರ್ತಿ ಬಿ.ಆರ್. ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ **ಲೈಫ್ ಅಂಡ್ ಟೈಮ್ಸ್ ಆಫ್ ಕೃಷ್ಣರಾಜ ಒಡೆಯರ್ III(೧೭೯೪-೧೮೬೮)**[೧೬] ಎಂಬ ಪಿಎಚ್.ಡಿ. ಮಹಾ ಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಪೂರ್ತಿಯಾಗಿ ಮುಮ್ಮಡಿ ಕೃಷ್ಣರಾಜ ಒಡೆಯರ ಜೀವನ ಸಾಧನೆಗಳು ವ್ಯಕ್ತಿಕೇಂದ್ರಿತವಾಗಿ ಮೂಡಿಬಂದಿದೆ. ತಾಂತ್ರಿಕ ಪರಿಣತಿ ಇಲ್ಲದ ಸಂದರ್ಭದಲ್ಲಿ ಮಾಹಿತಿ ಕಲೆ ಹಾಕುವ ಕೆಲಸವನ್ನು ಇಲ್ಲಿ ಮಾಡಲಾಗಿದೆ. ಹೈದರಾಲಿ ಮತ್ತು ಟಿಪ್ಪು ಪತನದ ನಂತರ ಮುಮ್ಮಡಿ ಕೃಷ್ಣರಾಜ ಒಡೆಯರು ಅಧಿಕಾರ ಸ್ವೀಕರಿಸುವುದು ಮುಖ್ಯ ಸಂಗತಿ. ಆದರೆ ಮಹಾರಾಣಿ ಲಕ್ಷ್ಮಿ ಅಮ್ಮಣ್ಣಿ ಅವರು ಒಡೆಯರ ಅಧಿಕಾರವನ್ನು ಮರಳಿ ಪಡೆಯಲು ಬ್ರಿಟಿಷರ ಜೊತೆ ಹೈದರಾಲಿ ಮತ್ತು ಟಿಪ್ಪು ವಿರುದ್ಧ ಕೈ ಜೋಡಿಸಿದ

ಸಂದರ್ಭಗಳನ್ನು ಇಲ್ಲಿ ವಿವರಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ದತ್ತು ಸ್ವೀಕಾರ, ಅವರ ಶಿಕ್ಷಣದ ವಿಚಾರಗಳು ಇಲ್ಲಿ ಮಿಳಿತವಾಗಿವೆ. ಟಿಪ್ಪು ಮರಣದ ನಂತರ ಬ್ರಿಟಿಷರು ತಮ್ಮ ಅಧೀನಕ್ಕೆ ತಕ್ಕಂತೆ ಒಡೆಯರ ಅಧಿಕಾರವನ್ನು ಮರಳಿ ನೀಡಿದ್ದು, ರಾಜಮಾತೆ ಲಕ್ಷ್ಮಮ್ಮಣ್ಣಿ ಅವರು ಅಧಿಕಾರವನ್ನು ಮುನ್ನಡೆಸಿದರು ಎಂಬ ವಿವರಗಳನ್ನು ಮೊದಲು ವಿವರಿಸುತ್ತಾರೆ. ಬ್ರಿಟಿಷರು ತಮ್ಮ ಆಡಳಿತದ ಹಿತಾಸಕ್ತಿಯನ್ನು ಕಾಪಾಡಿಕೊಳ್ಳುವ ಹಿನ್ನೆಲೆಯಲ್ಲಿಯೇ ಅಧಿಕಾರವನ್ನು ಒಡೆಯರಿಗೆ ನೀಡಿದರು ಎಂಬುದು ಮುಖ್ಯ ಸಂಗತಿ. ಬ್ರಿಟಿಷರು ಪೂರ್ಣಯ್ಯನನ್ನೇ ದಿವಾನನನ್ನಾಗಿ ನೇಮಿಸಿದರು. ಆದರೆ ದಿವಾನ್ ಪೂರ್ಣಯ್ಯ ಅಧಿಕಾರ ವಹಿಸಿಕೊಂಡ ನಂತರ ಬ್ರಿಟಿಷರ ಆಡಳಿತವನ್ನು ವಿರೋಧಿಸಿ ನಡೆದ ಧೋಂಡಿಯ ವಾಘನ ಬಂಡಾಯ, ಐಗೂರು ಪಾಳೇಗಾರನ ದಂಗೆ, ಬೈನಾಡು, ಚಿತ್ತೂರು, ಬೆಲ್ಲೂರು ದಂಗೆಗಳ ಮಾಹಿತಿಗಳಿಲ್ಲ. ದಿವಾನ್ ಪೂರ್ಣಯ್ಯ ಅವರ ಕಂದಾಯ, ವಾಣಿಜ್ಯ, ನೀರಾವರಿ ಮುಂತಾದವುಗಳ ಅಭಿವೃದ್ಧಿ ಕಾರ್ಯಗಳನ್ನು ಹೊಗಳಿದ್ದಾರೆ(ಪು.೭೫). ಪೂರ್ಣಯ್ಯ ಅವರಲ್ಲಿ ಇರುವ ಜಾತಿವಾದ, ಸಮಯಸಾಧಕತನ, ಸ್ವಜನ ಪಕ್ಷಪಾತ ಮತ್ತು ಸ್ವಕೇಂದ್ರಿತ ಆಡಳಿತದ ಬಗೆಗೆ ಯಾರೂ ಪತ್ತೆ ಹಚ್ಚುವುದಿಲ್ಲ. ಪೂರ್ಣಯ್ಯ ಬ್ರಿಟಿಷರ ಮನವೊಲಿಸಿ ಟಿಪ್ಪು ಮಕ್ಕಳನ್ನು ಅಧಿಕಾರಕ್ಕೆ ತರುವ ಹುನ್ನಾರ ಹೊಂದಿದ್ದರು. ಯಾವ ರೀತಿ ಅಧಿಕಾರ ಇರುತ್ತದೆಯೇ ಹಾಗೆಯೇ ಜಾರಿಕೊಳ್ಳುವ ಬುದ್ಧಿ ಹೊಂದಿದ್ದರು ಎಂಬುದು ಮುಖ್ಯ.

ಮುಮ್ಮಡಿ ಕೃಷ್ಣರಾಜ ಒಡೆಯರು ನೇರವಾಗಿ ಅಧಿಕಾರ ವಹಿಸಿಕೊಂಡರು. ವ್ಯಾಪಾರ–ವಾಣಿಜ್ಯ, ನ್ಯಾಯಾಡಳಿತ, ಸೈನ್ಯಾಡಳಿತ ಹೀಗೆ ಆಡಳಿತದಲ್ಲಿ ಸುಧಾರಣೆಗಳನ್ನು ಜಾರಿಗೊಳಿಸಿದರು ಎಂಬ ವಿವರಗಳಿವೆ. ಸ್ವತಃ ಮುಮ್ಮಡಿ ಕೃಷ್ಣರಾಜ ಒಡೆಯರೇ ಕೃಷ್ಣಕಥಾ ಪುಷ್ಪಮಂಜು, ರಾಮಾಯಣ ಕಥಾಮಂಜರಿ, ಚಾಮುಂಡೀ ಮಂಗಳ, ಶ್ರೀತತ್ವನಿಧಿ ಎಂಬ ಕೃತಿಗಳನ್ನು ರಚಿಸಿದರು. ಹೀಗೆ ಸಾಹಿತ್ಯ ಕ್ಷೇತ್ರದಲ್ಲಿ ಗುರುತಿಸಿಕೊಂಡ ಬಗೆಯು ಮುಖ್ಯ. ಇವರ ಕಾಲದಲ್ಲಿ ಪ್ರಮುಖವಾಗಿ ನಗರ ಅಥವಾ ಬಿದನೂರಿನಲ್ಲಿ ದಂಗೆ ಪ್ರಾರಂಭವಾಯಿತು. ಕ್ರಮಬದ್ಧವಾಗಿ ತೆರಿಗೆಯನ್ನು ಪಾವತಿಸುತ್ತಿರಲಿಲ್ಲ ಎಂಬುದಕ್ಕೆ ಬೇರೆ ಫೌಜುದಾರರನ್ನು ನೇಮಿಸಿದರು. ಆದರೂ ಕುಂಸಿಯ ರೈತನೊಬ್ಬನ ಮಗನಾದ ಸದರ್‌ಮಲ್ಲನು ಬೂದಿಬಸಪ್ಪನ ಹೆಸರಿನಲ್ಲಿ ಬಂಡಾಯವನ್ನು ಆಯೋಜಿಸಿದನು. ಈ ಹಿನ್ನೆಲೆಯಲ್ಲಿ ರೈತದಂಗೆ ಉಲ್ಬಣಗೊಂಡಿತು. ರೈತರ ಸಮಸ್ಯೆಗಳಿಗೆ ನೇರವಾಗಿ ಕಾರ್ಯ ಕೈಗೊಳ್ಳಲು ಪ್ರಯತ್ನಿಸಿದರೂ ಸಫಲವಾಗಲಿಲ್ಲ. ಈ ಹಿನ್ನೆಲೆಯಲ್ಲಿ ಬ್ರಿಟಿಷ್ ಆಳ್ವಿಕೆಯಲ್ಲಿ ಕಮೀಷನರ್‌ಗಳ ಆಡಳಿತಕ್ಕೆ ಮೈಸೂರು ಸಂಸ್ಥಾನ ಸೇರಿತು. ಇಲ್ಲಿ ಬ್ರಿಟಿಷರು ಮೈಸೂರು ಸಂಸ್ಥಾನವನ್ನು ಪುನಃ ತಮ್ಮ ವಶಕ್ಕೆ ತೆಗೆದುಕೊಂಡರು ಎಂಬ ವಿಚಾರಗಳನ್ನು ತಿಳಿಸುತ್ತಾರೆ. ಕೊನೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಅವಿರತ ಪರಿಶ್ರಮದಿಂದ ಮೈಸೂರು ಸಂಸ್ಥಾನವನ್ನು ಪುನಃ ಪಡೆಯಲಾಯಿತು ಎಂದು ತಿಳಿಸಿದ್ದಾರೆ. ಆದರೆ 'ಮುಮ್ಮಡಿ ಕೃಷ್ಣರಾಜ ಒಡೆಯರ ಬಗೆಗೆ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ತಮ್ಮ ಕೃತಿಗಳಲ್ಲಿ ನಗರದಂಗೆಗೆ ಕಾರಣವಾದ ಅಧಿಕಾರಿಗಳ ಹೆಸರುಗಳನ್ನು ತಿಳಿಸಿಲ್ಲ. ದಂಗೆಯ ನಾಯಕತ್ವ ವಹಿಸಿದ ನಾಯಕನ ಜಾತಿಯನ್ನು ತಿಳಿಸಿಲ್ಲ. ಹೀಗೆ ಚಾರಿತ್ರಿಕ ಒಳನೋಟಗಳತ್ತ ಗಮನ

ಹರಿಸಬೇಕಾಗಿತ್ತು. ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕೇಂದ್ರೀಕರಿಸಿಕೊಂಡು ರಾಜಕೀಯ ಹಿನ್ನೆಲೆಯಲ್ಲಿಯೇ ಸಂಶೋಧನೆ ಕಂಡುಬಂದಿದೆ.

ಶಿವಣ್ಣ ಸಿ. ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **ಮೈಸೂರ್ ಅಂಡರ್ ಕೃಷ್ಣರಾಜ ಒಡೆಯರ್ IV(೧೯೦೨-೧೯೪೦)**[೨೦] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದ ಮೈಸೂರು ಸಂಸ್ಥಾನವನ್ನು ಕುರಿತು ವಿವರಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರು ಪೌರ್ವಾತ್ಯ ಹಾಗೂ ಪಾಶ್ಚಿಮಾತ್ಯ ಸಂಸ್ಕೃತಿಗಳ ಪ್ರಭಾವದಿಂದ ರೂಪುಗೊಂಡವರಾಗಿದ್ದರು. ಈ ಹಿನ್ನೆಲೆಯಲ್ಲಿ ವಿವಿಧ ಕ್ಷೇತ್ರಗಳಲ್ಲಿ ಪ್ರಾಯೋಗಿಕವಾಗಿ ತಮ್ಮ ಯೋಜನೆಗಳನ್ನು ಜಾರಿಗೊಳಿಸಿ 'ಆಧುನಿಕ ಮೈಸೂರು' ಎಂಬುದಕ್ಕೆ ಅಡಿಪಾಯ ಹಾಕಿದರು ಎಂಬುದನ್ನು ಚರ್ಚಿಸಿದ್ದಾರೆ. ಕೃಷಿ, ಕೈಗಾರಿಕೆ, ನೀರಾವರಿ, ಸಾರಿಗೆ, ಶಿಕ್ಷಣ ಮೊದಲಾದ ಯೋಜನೆಗಳ ವಿವರಗಳನ್ನು ಗಮನಿಸಬಹುದು. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ದಿವಾನರಾದ ಪಿ.ಎನ್.ಕೃಷ್ಣಮೂರ್ತಿ, ವಿ.ಪಿ. ಮಾಧವರಾಯ, ಟಿ.ಆನಂದರಾಯ, ಸರ್.ಎಂ.ವಿಶ್ವೇಶ್ವರಯ್ಯ, ಎಂ.ಕಾಂತರಾಜ ಅರಸರು, ಎ.ಆರ್.ಬ್ಯಾನರ್ಜಿ ಮತ್ತು ಮಿರ್ಜಾ ಇಸ್ಮಾಯಿಲ್ ಅವರು ಮೈಸೂರಿನ ಪ್ರಗತಿಗಾಗಿ ಕೈಗೊಂಡ ವಿವರಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಗ್ರಾಮೀಣಾಭಿವೃದ್ಧಿಗಾಗಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿದ ವಿವರಗಳು ಮುಖ್ಯ. ಸಾಮಾಜಿಕವಾಗಿ ಜಾತಿಪದ್ಧತಿಯು ಬೇರು ಬಿಟ್ಟಿದ್ದು, ಅಸ್ಪೃಶ್ಯರು ಕೆಳಮಟ್ಟದಲ್ಲಿದ್ದು ಅವರಿಗೆ ಶಿಕ್ಷಣ, ಸ್ಕಾಲರ್‌ಶಿಪ್, ಹಾಸ್ಟೆಲ್, ಉದ್ಯೋಗ ಮೊದಲಾದ ಸೌಲಭ್ಯಗಳನ್ನು ಒದಗಿಸಿದ್ದು, ಸ್ತ್ರೀಯರ ಅಭಿವೃದ್ಧಿಗಾಗಿಯೂ ಸೌಲಭ್ಯಗಳನ್ನು ಒದಗಿಸಲಾಯಿತು. ಇವರ ಕಾಲದಲ್ಲಿ ಸ್ವಾತಂತ್ರ್ಯ ಹೋರಾಟ ತ್ವರಿತಗತಿಯಲ್ಲಿ ನಡೆಯುತ್ತಿದ್ದು ಗಾಂಧೀಜಿ ಅವರ ರಾಜಕೀಯ ತತ್ವಗಳು ಪ್ರಭಾವ ಬೀರಿವೆ ಎಂಬುದು ಮುಖ್ಯ. ಹರಿಜನರ ಉದ್ಧಾರಕ್ಕಾಗಿ ಕೆಲವು ಕಾರ್ಯಕ್ರಮಗಳು ರೂಪಿತವಾದವು. ಅನಿಷ್ಟ ಪದ್ಧತಿಗಳಾದ ದೇವದಾಸಿ ನಿಷೇಧ, ಮೈಸೂರು ವಿಡೋ ರೀ ಮ್ಯಾರೇಜ್ ಆಕ್ಟ್, ದಿ ಹಿಂದೂ ಲಾ ವುಮೆನ್ಸ್ ರೈಟ್ಸ್ ಆಕ್ಟ್ ಮೊದಲಾದ ಕಾಯ್ದೆಗಳನ್ನು ಜಾರಿಗೆ ತರಲಾಗಿದೆ. ಕಾಂತರಾಜ ಅರಸರು ಹಿಂದುಳಿದ ವರ್ಗಗಳ ಏಳಿಗೆಗಾಗಿ ಶ್ರಮಿಸಿದ್ದಾರೆ. ಆದರೆ ಈ ಮಹಾ ಪ್ರಬಂಧದಲ್ಲಿ ದಿವಾನರಾದ ಮಿರ್ಜಾ ಇಸ್ಮಾಯಿಲ್ ಅವರ ಕಾಲದಲ್ಲಿ ನಡೆದ ಸುಲ್ತಾನ್ ಪೇಟೆಯ ಗಣಪತಿ ಗಲಾಟೆಯ ಬಗ್ಗೆ ಪ್ರಸ್ತಾಪವಿಲ್ಲ. ನಾಲ್ವಡಿ ಅವರ ಕಾಲದಲ್ಲಿ ದಲಿತರ ಏಳಿಗೆಗಾಗಿ ಅನೇಕ ಕಾರ್ಯಗಳು ರೂಪಿತವಾದವು. ದಲಿತರಿಗೆ ಅರಮನೆ ಪ್ರವೇಶ, ಶಿಕ್ಷಣ, ವಿದ್ಯಾರ್ಥಿವೇತನ, ಹಾಸ್ಟೆಲ್, ಉದ್ಯೋಗ ಮೊದಲಾದವು ಗಳಲ್ಲಿ ನೀಡಿದ ಮೀಸಲಾತಿಯ ವಿವರಗಳನ್ನು ಗಮನಿಸಬಹುದು. ಒಟ್ಟಾರೆಯಾಗಿ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿನ ಮೈಸೂರು ಸಂಸ್ಥಾನ ಆಡಳಿತಾತ್ಮಕವಾಗಿ ಮುಂದುವರಿದು 'ಮಾದರಿ ಸಂಸ್ಥಾನ' ಎಂಬ ಕೀರ್ತಿಗೆ ಪಾತ್ರವಾಯಿತು. ರಾಜಕೀಯ ಹಿನ್ನೆಲೆಯಲ್ಲಿಯೇ ಮುಂದುವರಿಯಿತು. ಆಕರಗಳನ್ನು ಸಾಕಷ್ಟು ಮಟ್ಟಿಗೆ ದುಡಿಸಿಕೊಂಡಿದ್ದಾರೆ.

ಅಶ್ವತ್ಥ ನಾರಾಯಣ ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಸೋಷಿಯಲ್ ರಿಫಾರ್ಮ್ ಮೂವ್‌ಮೆಂಟ್ಸ್ ಇನ್ ಪ್ರಿನ್ಸ್ಲಿ ಮೈಸೂರು** ೧೮೬೦-೧೯೪೦(೧೯೯೪)[೧೮] ಎಂಬ ಪಿಎಚ್.ಡಿ.

ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಮೈಸೂರು ಸಂಸ್ಥಾನದ ಸಾಮಾಜಿಕ ಚಳವಳಿಯನ್ನು ಚರ್ಚಿಸುತ್ತಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ್, ಕಮೀಷನರ್‌ಗಳ ಆಳ್ವಿಕೆ, ೧೦ನೇ ಚಾಮರಾಜ ಒಡೆಯರ ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದ ಸಾಮಾಜಿಕ ಸುಧಾರಣೆಯ ಕಾಲಘಟ್ಟವನ್ನು ಇಲ್ಲಿ ಗಣನೆಗೆ ತೆಗೆದುಕೊಂಡಿರುವುದು ಪ್ರಮುಖ. ಮೊದಲು ಕ್ರೈಸ್ತ ಮಿಷನರಿಗಳು ಯಾವ ರೀತಿಯ ಸಾಮಾಜಿಕ ಸುಧಾರಣಾ ಕಾರ್ಯಗಳನ್ನು ಕೈಗೊಂಡರು ಎಂಬುದು ಮುಖ್ಯ. ಶಾಲೆಗಳಲ್ಲಿ ಶೂದ್ರರನ್ನು ಸೇರಿಸದೇ ಇರುವ ಸಂದರ್ಭದಲ್ಲಿ ಅವರನ್ನು ಕ್ರೈಸ್ತ ಮಿಷನರಿಗಳು ತಮ್ಮ ಶಾಲೆಗಳಿಗೆ ಸೇರಿಸಿಕೊಂಡು ಶಿಕ್ಷಣ ನೀಡಿದರು ಎಂಬುದನ್ನು ವಿವರಿಸಿದ್ದಾರೆ. ಹೀಗೆ ಸಾಮಾಜಿಕವಾಗಿ ಕೆಳವರ್ಗದವರು ಶಿಕ್ಷಣ ಪಡೆಯುವಂತಾದರು ಎಂಬುದು ಮುಖ್ಯ. ಮದ್ರಾಸ್ ಮತ್ತು ಮೈಸೂರು ಬ್ರಾಹ್ಮಣರ ಅಧಿಕಾರದ ಗೊಂದಲ ಮತ್ತೊಂದು ತೊಂದರೆಗೆ ಕಾರಣವಾಯಿತು. ಆನಂತರ ಬ್ರಾಹ್ಮಣೇತರ ಚಳವಳಿ ಪ್ರಾರಂಭವಾಯಿತು. ಇಲ್ಲಿ ಡಾಮಿನೆಂಟ್ ವರ್ಗ ಯಾವ ರೀತಿ ಅಧಿಕಾರಕ್ಕಾಗಿ ಪೈಪೋಟಿ ಪ್ರಾರಂಭವಾಯಿತು ಎಂಬುದನ್ನು ಚರ್ಚಿಸಿದ್ದಾರೆ. ಜಾತಿ ಸಂಘಟನೆಗಳು ಹುಟ್ಟಿಕೊಂಡು ಕೆಲಸ ಪ್ರಾರಂಭಿಸಿದವು ಎಂಬುದು ಗಮನಾರ್ಹ. ಇಲ್ಲಿ ಬಹಳ ಮುಖ್ಯವಾಗಿ ಕ್ರೈಸ್ತ ಮಿಷನರಿಗಳು ದೊಡ್ಡ ಪ್ರಮಾಣದಲ್ಲಿ ಸಾಮಾಜಿಕ ಪ್ರಶ್ನೆಗಳನ್ನು ಇಟ್ಟುಕೊಂಡೇ ಚಳವಳಿಗಳನ್ನು ರೂಪಿಸುವ ಪ್ರಯತ್ನ ಮಾಡಿದವು ಎಂಬುದನ್ನು ನೋಡಬಹುದು. ಮೂಮೆಂಟ್ಸ್ ಆಫ್ ಎನವಲಂಪ್ ಸಿವಿಲ್ ಡಿಸಬಿಲಿಟಿ ಆಫ್ ಕನವಸರ್ಟ್‌ಷನ್ ಎಂಬ ಮುಖ್ಯ ಚಳವಳಿಯು ೧೮೫೦ರಿಂದ ಪ್ರಾರಂಭವಾಗಿ ೧೯೧೯ರ ವರೆಗೂ ಮುಂದುವರಿಯುತ್ತದೆ. ಅದು ಮುಖ್ಯವಾಗಿ ದಲಿತರ ಪ್ರಶ್ನೆಗಳನ್ನು ಎತ್ತಿಕೊಂಡರೂ ಸಹ, ಅದು ಒಟ್ಟು ಸಾಮಾಜಿಕ ಪರಿಸರದ ಸಂಬಂಧಪಟ್ಟಂತಹ ಅನೇಕ ಪ್ರಶ್ನೆಗಳನ್ನು ಎತ್ತಿಕೊಂಡು ಆ ಪ್ರಶ್ನೆಗಳಿಗೆ ಮುಖಾಮುಖಿ ಆದದ್ದು ಕೂಡ ಈ ಚಳವಳಿಯಲ್ಲಿ ನೋಡಬಹುದು ಎಂಬುದನ್ನು ಚರ್ಚಿಸಿದ್ದಾರೆ.

ಆಂಜನಪ್ಪ ಎಂ. ಅವರು **ಹಿಸ್ಟರಿ ಆಫ್ ಮೈಸೂರು ಎಜುಕೇಷನ್ ಇನ್ ಆನ್ ಇಂಡಿಯನ್ ಸ್ಟೇಟ್ ಮೈಸೂರು ೧೮೫೪-೧೯೪೦(೧೯೯೫)**[೧೯] ಎಂಬ ಪಿಎಚ್.ಡಿ.ಮಹಾ ಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಮೈಸೂರು ಸಂಸ್ಥಾನದಲ್ಲಿ ಬೆಳೆದು ಬಂದ ಶಿಕ್ಷಣದ ವ್ಯವಸ್ಥೆಯನ್ನು ಚರ್ಚಿಸಿದ್ದಾರೆ. ಮೊದಲು ಶಿಕ್ಷಣವನ್ನು ಯಾವ ರೀತಿ ಜಾರಿಗೊಳಿಸಿದರು ಎಂಬುದನ್ನು ವಿವರಿಸಿದ್ದಾರೆ. ೧೮೧೩ರಲ್ಲಿ ಥಾಮಸ್ ಮನ್ರೋ ಅವರು ಪ್ರತಿ ಹಳ್ಳಿಗಳಲ್ಲಿ ಶಾಲೆಗಳನ್ನು ತೆರೆಯಲು ಆದೇಶ ಹೊರಡಿಸಿದರು. ಈ ಅವಧಿಯಲ್ಲಿ ಇಂಗ್ಲಿಷ್ ಶಿಕ್ಷಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ದೊರೆಯಿತು. ಮೊದಲು ಕ್ರೈಸ್ತ ಮಿಷನರಿಗಳು ಶಾಲೆಗಳನ್ನು ತೆರೆದರು. ಮೊದಲು ೧೮೨೭ರ ವೇಳೆಗೆ ಬೆಂಗಳೂರಿನಲ್ಲಿ ಶಾಲೆಗಳು ಪ್ರಾರಂಭವಾದವು ಎಂಬ ವಿವರಗಳನ್ನು ತಿಳಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಇಂಗ್ಲಿಷ್ ಶಾಲೆಗಳನ್ನು ಪ್ರಾರಂಭಿಸಿದರು ಎಂಬುದು ಮುಖ್ಯ. ಕ್ರೈಸ್ತ ಮಿಷನರಿಗಳು ಮೊದಲು ಪಂಚಮರಿಗೆ ಶಿಕ್ಷಣ ನೀಡಿದವು ಎಂಬುದನ್ನು ಮಾಹಿತಿ ರೂಪದಲ್ಲಿ ತಿಳಿಸಿದ್ದಾರೆ. ೧೯೦೦ರ ನಂತರ ಹೋಬಳಿ ಮತ್ತು ವಿಲೇಜ್ ಎಲಿಮೆಂಟರಿ

ಶಾಲೆಗಳು ಆರಂಭವಾದವು. ೧೯೧೩ರಲ್ಲಿ ಕಡ್ಡಾಯ ಶಿಕ್ಷಣನೀತಿಯನ್ನು ಜಾರಿಗೊಳಿಸಿದರು. ಇದರಿಂದ ಪ್ರತಿ ಹಳ್ಳಿಯಲ್ಲಿಯೂ ಶಾಲೆಗಳು ಆರಂಭವಾದವು ಎಂಬ ವಿಚಾರಗಳು ಪ್ರಮುಖವಾದವು(ಪು.೨೧-೪೦). ೧೯೨೧ರಿಂದ ೧೯೩೧ರವರೆಗೆ ಶಿಕ್ಷಣಕ್ಕೆ ಹೆಚ್ಚಿನ ಮಹತ್ವ ನೀಡಿದ್ದರಿಂದ ಬಹಳಷ್ಟು ಶಾಲೆಗಳು ಆರಂಭವಾದವು. ಮಹಿಳಾ ಶಿಕ್ಷಣಕ್ಕೂ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದರು ಎಂಬುದನ್ನು ವಿವರಿಸುತ್ತಾರೆ. ಸಿ.ಆರ್.ರೆಡ್ಡಿ ಅವರು ಕೆಲವು ಬದಲಾವಣೆಗಳನ್ನು ಜಾರಿಗೆ ತಂದು ಜನಸಂಖ್ಯೆಗೆ ಅನುಗುಣವಾಗಿ ಪ್ರಾಥಮಿಕ ಶಾಲೆಗಳನ್ನು ತೆರೆದರು ಎಂಬುದು ಮುಖ್ಯ(ಪು.೧೧೩-೧೧೪). ಶಿಕ್ಷಣದ ಆಡಳಿತಾತ್ಮಕ ಕಾರ್ಯಗಳನ್ನು ವಿಭಾಗ ಮಾಡಿದ್ದರ ವಿವರಗಳನ್ನು ನೋಡಬಹುದು.

ಮೊದಲು ಸ್ಥಳೀಯವಾಗಿ ಹೋಬಳಿ ಶಾಲೆಗಳ ನಿರ್ವಹಣೆಯನ್ನು ಪಂಚಾಯಿತಿ ನೋಡಿಕೊಳ್ಳುತ್ತಿತ್ತು. ಹಳ್ಳಿಗಳ ಶಾಲಾ ಕಮಿಟಿಯಲ್ಲಿ ಅಮಲ್ದಾರರು ಶಾಲೆಗಳ ನಿರ್ವಹಣೆಯ ಹೊಣೆ ಹೊತ್ತಿದ್ದರು. ಈ ನಿಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿ ಜಾರಿಗೆ ತಂದ ಶಿಕ್ಷಣ ವ್ಯವಸ್ಥೆಯನ್ನು ವಿವರಿಸಿದ್ದಾರೆ. ಆದರೆ ಪ್ರತ್ಯೇಕವಾಗಿ ಚರ್ಚಿಸಿಲ್ಲ. ಕ್ರೈಸ್ತ ಮಿಷನರಿಗಳ ಶಿಕ್ಷಣ ವ್ಯವಸ್ಥೆಯಲ್ಲಿ ಹೇಗೆ ಕೆಳವರ್ಗದವರಿಗೆ ಶಿಕ್ಷಣ ನೀಡಿದರು ಎಂಬುದನ್ನು ವಿವರಿಸಬೇಕಾಗಿತ್ತು. ಅಲ್ಲದೇ ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಆದಂತಹ ದಲಿತರ ಶಿಕ್ಷಣದ ಅಭಿವೃದ್ಧಿಯ ವಿಚಾರಗಳನ್ನು ತಿಳಿಸಬೇಕಾಗಿತ್ತು. ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ದಲಿತರ ಶಿಕ್ಷಣಕ್ಕೆ ಕೈಗೊಂಡ ಕಾರ್ಯಕ್ರಮಗಳನ್ನು ಚರ್ಚಿಸಬೇಕಾಗಿತ್ತು. ಆದರೆ ಈ ವಿಚಾರಗಳೆಲ್ಲವೂ ಗೌಣವಾಗಿವೆ. ದಲಿತರಿಗೆ ಶಿಕ್ಷಣ, ವಿದ್ಯಾರ್ಥಿವೇತನ, ಹಾಸ್ಟೆಲ್ ಮತ್ತು ಉದ್ಯೋಗ ಹೀಗೆ ಎಲ್ಲಾ ರೀತಿಯ ಸೌಲಭ್ಯಗಳನ್ನು ಒದಗಿಸಿ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಎಂದೇ ಗುರುತಿಸಿಕೊಂಡರು. ಈ ವಿಚಾರಗಳನ್ನು ಕೈಬಿಟ್ಟಿರುವುದು ವಿಷಾದನೀಯ ಸಂಗತಿ. ಶಿಕ್ಷಣದಲ್ಲಿ ಮಹಿಳೆಯರ ಸ್ಥಾನ ಏನು ಸ್ತ್ರೀಯರ ಶಿಕ್ಷಣಕ್ಕಾಗಿ ಯಾವ ಶಾಲೆಗಳು ಪ್ರಾರಂಭವಾದವು ಎಂಬ ವಿಚಾರಗಳು ಮುಖ್ಯ. ವಿವಿಧ ಸಂಘ-ಸಂಸ್ಥೆಗಳು, ಖಾಸಗಿ ವ್ಯಕ್ತಿಗಳು ಯಾವ ಶಾಲೆಗಳನ್ನು ತೆರೆದು ಶಿಕ್ಷಣ ನೀಡಿದರು ಎಂಬುದರ ಚರ್ಚೆ ಅಗತ್ಯವಾಗಿತ್ತು. ಸಬಾಲ್ಟರ್ನ್ ನೆಲೆಯ ಅಧ್ಯಯನ ಬೇಕಾಗಿತ್ತು ಎನ್ನುವುದು ಮುಖ್ಯ. ಈ ಮಹಾಪ್ರಬಂಧದಲ್ಲಿ ಬಳಸಿಕೊಂಡ ಆಕರಗಳ ಕೊರತೆ ಎದ್ದು ಕಾಣುತ್ತದೆ. ರಾಜ್ಯಪತ್ರಾಗಾರ ಇಲಾಖೆಯಲ್ಲಿರುವ ಪ್ರಾಥಮಿಕ ಆಕರಗಳನ್ನು ಇನ್ನಷ್ಟು ದುಡಿಸಿಕೊಳ್ಳಬೇಕಾಗಿತ್ತು. ಮೇಲ್ನೋಟಕ್ಕೆ ಇರುವ ಮೈಸೂರು ಸಂಸ್ಥಾನದ ಶಿಕ್ಷಣದ ವ್ಯವಸ್ಥೆಯನ್ನು ಇಲ್ಲಿ ವಿವರಿಸಲಾಗಿದೆ.

ಶಶಿಧರಮೂರ್ತಿ ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ **ಅಗ್ರೇರಿಯನ್ ಕಂಡೀಷನ್ಸ್ ಆಫ್ ಮೈಸೂರು ಸ್ಟೇಟ್ ಡ್ಯೂರಿಂಗ್ ದಿ ಡಿಕೇಡ್ ಆಫ್ಟರ್ ದಿ ಫೆಮೈನ್ ಆಫ್ ೧೮೭೬-೭೭(೧೯೯೭)**[೧೯] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ೧೮೭೬-೭೭ರ ಅವಧಿಯಲ್ಲಿ ಉಂಟಾದ ಕ್ಷಾಮವು ಕೃಷಿಯ ಮೇಲೆ ಯಾವ ರೀತಿಯ ಪರಿಣಾಮವನ್ನು ಬೀರಿತು ಎಂಬುದು ಈ ಮಹಾಪ್ರಬಂಧದ ಚರ್ಚೆ ಆಗಿದೆ. ಈ ಅವಧಿಯಲ್ಲಿ ಕಮೀಷನರ್‌ಗಳ ಆಳ್ವಿಕೆ ಮೈಸೂರು ಸಂಸ್ಥಾನದಲ್ಲಿ ಇತ್ತು. ಅಂದರೆ ಮೈಸೂರು ಸಂಸ್ಥಾನದ

ಆಡಳಿತವು ಬ್ರಿಟಿಷ್ ಕಮೀಷನರುಗಳ ಕೈಕೆಳಗೆ ನಡೆಯುತ್ತಿತ್ತು. ಈ ಕ್ಷಾಮದಿಂದ ಕೃಷಿಯು ಯಾವ ಸ್ಥಿತಿಗೆ ತಲುಪಿತು ಎಂಬುದು ಪ್ರಮುಖವಾದುದು. ಕ್ಷಾಮವು ಹೆಚ್ಚಾಗಿ ಕಂಡುಬಂದದ್ದು ತುಮಕೂರು ಜಿಲ್ಲೆಯಲ್ಲಿ. ಕ್ಷಾಮವು ನಾಗಮಂಡಲ, ಅತ್ತಿಕುಪ್ಪೆ ಮತ್ತು ಚನ್ನರಾಯಪಟ್ಟಣ, ಹಾಸನ, ಕೋಲಾರ, ಬೆಂಗಳೂರು ಮತ್ತು ಚಿತ್ರದುರ್ಗ ಜಿಲ್ಲೆಗಳನ್ನು ಆವರಿಸಿಕೊಂಡಿತ್ತು. ಈ ಸ್ಥಳಗಳಲ್ಲಿ ಕ್ಷಾಮವು ಕಂಡುಬಂದರೂ ಅದರ ಪರಿಣಾಮವು ಇಡೀ ದೇಶಾದ್ಯಂತ ಹೆಚ್ಚಿನ ಪ್ರಮಾಣದಲ್ಲಿ ಆಗಿತ್ತು ಎಂಬುದನ್ನು ಇಲ್ಲಿ ವಿವರಿಸಿದ್ದಾರೆ.

ತುಮಕೂರು, ಕೋಲಾರ, ಬೆಂಗಳೂರು, ಮೈಸೂರು ಮತ್ತು ಚಿತ್ರದುರ್ಗ ಜಿಲ್ಲೆಯಲ್ಲಿ ಕೃಷಿಗೆ ಬೇಕಾದ ವಾತಾವರಣ ಹೇಗಿದೆ ಎಂಬುದನ್ನು ನೋಡಲಾಗಿದೆ. ೧೯೭೦ರ ಅವಧಿಗೆ ಬೆಂಗಳೂರು ಮತ್ತು ಕೋಲಾರಗಳಲ್ಲಿ ಕ್ಷಾಮವು ಮೊದಲು ಕಾಣಿಸಿಕೊಂಡಿತು. ರಾಗಿ ಬೆಳೆಗಳ ಹೊಲಗಳಿಗೆ ನೀರು ನುಗ್ಗಿ ಬೆಳೆ ಹಾಳಾಯಿತು. ಈ ಸಮಯಕ್ಕಾಗಲೇ ರೈತರು ಭಾರಿ ಪ್ರಮಾಣದ ರಾಗಿಯನ್ನು ಬೇರೆ ಸ್ಥಳಗಳಿಗೆ ರಫ್ತು ಮಾಡಿಬಿಟ್ಟಿದ್ದರು. ಇದರಿಂದ ಜನರು ಹೇಗೆ ಸಂಕಷ್ಟಕ್ಕೆ ಒಳಗಾದರು ಎಂಬುದನ್ನು ತಿಳಿಯಬಹುದು. ಕ್ಷಾಮದಿಂದಾಗಿ ದನ-ಕರುಗಳು ಮೇವು, ನೀರಿನ ಅಭಾವದಿಂದ ಸತ್ತುಹೋದವು. ಈ ಜಾನುವಾರುಗಳ ಮರಣದಿಂದಾಗಿ ಜಮೀನಿನಲ್ಲಿ ಕೃಷಿ ನಡೆಯದಂತಾಯಿತು.

ಕಮೀಷನರ್ ಆದ ಜೆ.ಡಿ.ಗೋರ್ಡನ್‌ನು ಕ್ಷಾಮದ ಬಗೆಗೆ ಕಮಿಟಿಯನ್ನು ರಚಿಸಿದನು. ಹಳ್ಳಿಗಳಲ್ಲಿ ಕ್ಷಾಮದ ಜನರಿಗೆ ಮೊದಲು ಮನೆಗಳನ್ನು ನಿರ್ಮಿಸಿದರು. ಹಳ್ಳಿಗಳಲ್ಲಿ ಪಟೇಲರು ಮತ್ತು ಶಾನುಭೋಗರು ಆಡಳಿತವನ್ನು ನೋಡಿಕೊಳ್ಳುತ್ತಿದ್ದರು. ಜನರ ಹತ್ತಿರ ತೆರಿಗೆಯನ್ನು ವಸೂಲಿ ಮಾಡುವ ಕಾರ್ಯದಲ್ಲಿ ನಿರತರಾಗಿದ್ದರು. ಇಲ್ಲಿ ಮೇಲ್ವರ್ಗದ ಜನ ಕ್ಷಾಮದ ಪರಿಸ್ಥಿತಿಯಲ್ಲೂ ಜನರಿಂದ ತೆರಿಗೆ ವಸೂಲಿ ಮಾಡುತ್ತಿದ್ದರು ಎಂಬುದು ಇಲ್ಲಿ ಮುಖ್ಯ. ಕ್ಷಾಮದ ಪರಿಸ್ಥಿತಿಯಲ್ಲಿ ಕೃಷಿಯ ಅಭಿವೃದ್ಧಿಗಾಗಿ ತಕಾವಿ ಸಾಲಗಳನ್ನು ನೀಡಲಾಯಿತು. ಜನರಿಗೆ ಆಹಾರ-ಧಾನ್ಯಗಳನ್ನು ಒದಗಿಸಿದರು. ಆದರೂ ಕ್ಷಾಮದ ಪರಿಣಾಮವನ್ನು ವಿವಿಧ ಕ್ಷೇತ್ರಗಳ ಮೂಲಕ ತಿಳಿಯಬಹುದು. ಕ್ಷಾಮದಿಂದ ಅಪಾರ ಸಂಖ್ಯೆಯ ಜನರು ಮತ್ತು ಜಾನುವಾರುಗಳು ಬಲಿಯಾದರು. ಇಲ್ಲಿ ಜಾನುವಾರುಗಳ ಮರಣದಿಂದಾಗಿ ಬಹುತೇಕವಾಗಿ ಜಮೀನುಗಳಲ್ಲಿ ಕೃಷಿ ನಡೆಯದಂತಾಯಿತು. ಕೃಷಿಗೆ ಅಪಾರ ಹಾನಿ ಉಂಟಾಯಿತು ಎಂಬುದು ಮುಖ್ಯವಾಗಿ ಗಮನಿಸಬೇಕಾದ ಅಂಶ. ವ್ಯಾಪಾರ ವಹಿವಾಟು ಕಡಿಮೆಯಾಯಿತು. ಉತ್ಪಾದನೆಯಲ್ಲಿ ಕುಸಿತ ಕಂಡುಬಂದಿತು. ಭೂಕಂದಾಯದ ಸಂಗ್ರಹವು ಅಷ್ಟಾಗಿ ಬರಲಿಲ್ಲ. ಅಪರಾಧಗಳ ಸಂಖ್ಯೆಯು ಹೆಚ್ಚಿತು. ಕ್ಷಾಮವು ನೇರವಾಗಿ ಕೃಷಿಯ ಮೇಲೆ ಪರಿಣಾಮವನ್ನು ಬೀರಿತು. ಕೃಷಿಗೊಂಡ ಜಮೀನಿನ ವಿಸ್ತೀರ್ಣವು ಕಡಿಮೆಯಾಯಿತು. ಇದರಿಂದ ಆಹಾರ ಧಾನ್ಯಗಳ ಪ್ರಮಾಣ ಕಡಿಮೆ ಆಯಿತು. ಹಳ್ಳಿಗಳಲ್ಲಿ ರೈತರು ಕೃಷಿಗೆ ಅಗತ್ಯವಾದಷ್ಟು ನೀರು ಇಲ್ಲದಿರುವಾಗ ತಮ್ಮ ಜಮೀನನನ್ನೇ ತೊರೆದು, ಕಾಫಿ ತೋಟಗಳಲ್ಲಿ ನೌಕರಿಯ ಹುಡುಕಾಟದಲ್ಲಿ ತೊಡಗಿದರು. ಈ ಅವಧಿಯಲ್ಲಿ ಬ್ರಿಟಿಷ್ ಕಮೀಷನರ್‌ಗಳು ರೈಲ್ವೆ ಅಥವಾ ನೀರಾವರಿಗಾಗಿ ಹಣ ಖರ್ಚು ಮಾಡಬೇಕೆ ಎಂಬ ಗೊಂದಲ ಉಂಟಾಗುತ್ತದೆ. ಹೀಗೆ ಕ್ಷಾಮದಿಂದಲೇ ಕೃಷಿಯ ಬೆಳವಣಿಗೆ

ಕುಂಠಿತವಾಯಿತೇ ಎಂಬ ಪ್ರಶ್ನೆಗೆ ಉತ್ತರ ಹುಡುಕಬೇಕಾಗಿರುವುದು ಅನಿವಾರ್ಯವಾಗಿದೆ. ರೈತರು ಮತ್ತು ಬ್ರಿಟಿಷ್ ಆಡಳಿತ ಹೇಗೆ ಮುಖಾಮುಖಿಯಾದರು ಎಂಬುದು ಮುಖ್ಯವಾಗಿ ಗಮನಿಸಬೇಕಾದ ಅಂಶ. ಅಂದರೆ ಉಷಾ ಎಂ.ವಿ. ಅವರು 'ದಿ ಹಿಸ್ಟರಿ ಆಫ್ ಫೆಮಿನಿಸ್ ಆ್ಯಂಡ್ ಫೆಮ್ಮೈನ್ ಪಾಲಿಸೀಸ್ ಇನ್ ಪ್ರಿನ್ಸ್ಲಿ ಮೈಸೂರು ೧೮೭೫-೧೯೧೮' ಎಂಬ ಪಿಎಚ್.ಡಿ ಮಹಾಪ್ರಬಂಧದಲ್ಲಿ ಕ್ಷಾಮ ಮತ್ತು ಕ್ಷಾಮದ ನೀತಿಯ ಚರ್ಚೆಯನ್ನು ನೋಡಬಹುದು. ಕ್ಷಾಮದಿಂದ ಉಂಟಾದ ಪರಿಣಾಮಗಳಿಗೆ ಪರಿಹಾರ ನೀಡಲು ಕ್ಷಾಮದ ನೀತಿಯನ್ನು ಜಾರಿಗೆ ತಂದು ಅನೇಕ ಸುಧಾರಣೆಗಳು ಜಾರಿಯಾದವು ಎಂಬುದನ್ನು ಗಮನಿಸಬಹುದು. ಇದರ ಲಾಭವನ್ನು ಪಡೆದುಕೊಂಡವರು ಜನಸಾಮಾನ್ಯರೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮೇಲ್ವರ್ಗದ ಶಾನುಭೋಗದ, ಪಟೇಲರು ಜನರನ್ನು ಇನ್ನಷ್ಟು ಶೋಷಣೆಗೆ ಒಳಪಡಿಸಿದರು.

ಆದರೆ ಶಶಿಧರ ಮೂರ್ತಿ ಅವರ 'ಅಗ್ರೇರಿಯನ್ ಕಂಡೀಷನ್ಸ್ ಆಫ್ ಮೈಸೂರು ಸ್ಟೇಟ್ ಡೂರಿಂಗ್ ದಿ ಡಿಕೇಡ್ ಆಫ್ಟರ್ ದಿ ಪೆಮೈನ್ ಆಫ್ ೧೮೭೬-೭೭' ಎಂಬ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡ ಕೃಷಿಯ ರೈತರು ಕ್ಷಾಮದಿಂದ ಹೇಗೆ ತತ್ತರಿಸಿದರು. ಅಲ್ಲಿನ ವ್ಯವಸ್ಥೆ ಹೇಗೆ ಪ್ರತಿಕ್ರಿಯೆ ನೀಡಿತು ಎಂಬುದು ಮುಖ್ಯ. ಇವರು ಬಳಸಿಕೊಂಡಿರುವ ಪತ್ರಾಗಾರ ಇಲಾಖೆಯ ಆಕರಗಳನ್ನು ಇನ್ನಷ್ಟು ದುಡಿಸಿಕೊಳ್ಳಬೇಕಾಗಿತ್ತು.

ಉಷಾದೇವಿ ಎಂ.ವಿ. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ದಿ ಹಿಸ್ಟರಿ ಆಫ್ ಫೆಮಿನಿಸ್ ಅಂಡ್ ಫೆಮ್ಮೈನ್ ಫಾಲಿಸೀಸ್ ಇನ್ ಪ್ರಿನ್ಸ್ಲಿ ಮೈಸೂರು ೧೮೭೫-೧೯೧೮'** (೨೦೦೦)[೨೧] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಉಂಟಾದ ಕ್ಷಾಮ, ಅದನ್ನು ತಡೆಗಟ್ಟಲು ಜಾರಿಗೆ ತಂದ ಕ್ಷಾಮದ ನೀತಿಯನ್ನು ಕುರಿತು ಸಂಶೋಧನೆ ಕೈಗೊಂಡಿರುವುದು ವಿಶೇಷವಾಗಿದೆ. ಮೊದಲು ಸಂಶೋಧಕರು ಬ್ರಿಟಿಷ್ ಕಮೀಷನರ್‌ಗಳ ನೇರ ಆಡಳಿತದಲ್ಲಿ ಅನೇಕ ಪ್ರಗತಿ ಕಾರ್ಯಗಳನ್ನು ವಿವರಿಸುತ್ತಾ ಹೋಗುತ್ತಾರೆ. ಯಾವ ಯಾವ ಸಂದರ್ಭದಲ್ಲಿ ಕ್ಷಾಮಗಳು ತಲೆದೋರಿವೆ ಎಂಬುದನ್ನು ತಿಳಿಸಿರುವುದು ಸಮಂಜಸವಾಗಿದೆ. ಕಮೀಷನರ್ ಆದ ಮಾರ್ಕ್ ಕಬ್ಬನ್‌ನು ಕಂದಾಯದ ಆದಾಯವನ್ನು ಹೆಚ್ಚಿಸಿದನು ಎಂಬ ಸ್ಥೂಲ ಚಿತ್ರಣವನ್ನು ನೀಡುತ್ತಾರೆ. ವಸಾಹತುಶಾಹಿಯು ಮೈಸೂರು ಸಂಸ್ಥಾನದ ಕೃಷಿ ಕ್ಷೇತ್ರದಲ್ಲಿ ಅರ್ಧ ಶತಮಾನ ಕಾಲ ನಡೆಸಿದ ಪ್ರಯೋಗಗಳು, ೧೮೭೬ರಲ್ಲಿ ಹರಡಿದ ಕ್ಷಾಮದಿಂದಾಗಿ ಅಪಾರ ನಷ್ಟಗಳು ಉಂಟಾದವು. ಮೊದಲು ಹರಡಿದ ಕ್ಷಾಮವು ಮೂರು ವರ್ಷ ತಾಂಡವವಾಡಿತು. ಈ ಕ್ಷಾಮಕ್ಕೆ ಅಪಾರ ಸಂಖ್ಯೆಯಲ್ಲಿ ಜನರು ಮತ್ತು ಜಾನುವಾರುಗಳು ಬಲಿಯಾದರು. ಈ ಸಮಯದಲ್ಲಿ ಮೈಸೂರು ಸಂಸ್ಥಾನದ ಆಡಳಿತವು ಬ್ರಿಟಿಷ್ ಕಮೀಷನರುಗಳ ಆಳ್ವಿಕೆಗೆ ಒಳಪಟ್ಟಿತು. ಇಲ್ಲಿ ಸ್ಥಳೀಯ ಜನರ ಜೊತೆ ಸ್ಪಂದಿಸಿದ ರೀತಿಯನ್ನು ತಿಳಿಯಬಹುದು.

ಕ್ಷಾಮದಿಂದಾಗಿ ಉಂಟಾದ ಬಾರೀ ಸಾವು-ನೋವುಗಳ ವಿವರಗಳನ್ನು ಅಂಕಿ-ಅಂಶಗಳ ಮೂಲಕ ಕ್ರೋಢೀಕರಿಸಿರುವುದನ್ನು ಗಮನಿಸಬಹುದು. ಕ್ಷಾಮದ ಪರಿಣಾಮವಾಗಿ ಕಾಲರಾ,

ಸಿಡುಬು ಮತ್ತು ವಿಷಮಜ್ವರದಂತಹ ಸಾಂಕ್ರಾಮಿಕ ರೋಗಗಳು ಹರಡಿ ಭಾರಿ ಪ್ರಮಾಣದಲ್ಲಿ ಮರಣಗಳು ಸಂಭವಿಸಿದವು. ಜಾನುವಾರುಗಳು ಸತ್ತ ಪ್ರಮಾಣ ಏರಿಕೆ ಆಗುತ್ತಲೇ ಹೋಯಿತು. ಇದರ ಪರಿಣಾಮವಾಗಿ ಕೃಷಿಕರಿಗೆ ಜಮೀನುಗಳಲ್ಲಿ ಕೃಷಿ ಮಾಡಲು ಆಗದೇ ಭಾರೀ ನಷ್ಟ ಉಂಟಾಯಿತು. ಈ ರೀತಿಯಾಗಿ ಕ್ಷಾಮದಿಂದ ಅನೇಕ ತೊಂದರೆಗಳು ಉಂಟಾದ ವಿವರಗಳನ್ನು ಸಂಶೋಧಕರು ನೀಡುತ್ತಾರೆ.

ಕ್ಷಾಮದ ಪರಿಹಾರಕ್ಕೆ ಆಡಳಿತಗಾರರ ನಿರ್ಲಕ್ಷ್ಯವನ್ನು ಇಲ್ಲಿ ಚರ್ಚಿಸಿದ್ದಾರೆ. ಕ್ಷಾಮವನ್ನು ಕುರಿತು ವಿವರಣೆ ನೀಡಲು ಕರ್ನಲ್ ಕ್ಯಾಂಪ್‌ಬೆಲ್‌ನನ್ನು ಕ್ಷಾಮದ ಪ್ರದೇಶಗಳಿಗೆ ಕಳುಹಿಸಲಾಯಿತು. ಒಂದೊಂದು ರೀತಿಯಲ್ಲಿ ಕ್ಷಾಮ ಇದ್ದು, ಪರಿಹಾರಕ್ಕಾಗಿ ತೆರಿಗೆ ಮನ್ನಾ, ಕೆರೆಗಳು ಮತ್ತು ಬಾವಿಗಳ ದುರಸ್ತಿಗಾಗಿ ಸಲಹೆ ನೀಡಿದನು. ಆದರೂ ಬ್ರಿಟಿಷರು ತೆರಿಗೆ ವಸೂಲಿ ಮಾಡುತ್ತಿದ್ದರು. ಇದರಿಂದಾಗಿ ಜನರು ಮತ್ತಷ್ಟು ಸಂಕಷ್ಟಕ್ಕೆ ಒಳಗಾದರು. ವಿವಿಧ ಉದ್ಯೋಗದಲ್ಲಿ ತೊಡಗಿರುವವರು ನಗರಗಳಲ್ಲಿ ಹೆಚ್ಚಾಗಿ ವಾಸಿಸುತ್ತಿದ್ದರು. ಹಳ್ಳಿಗಳಲ್ಲಿನ ರೈತರು ತಮ್ಮಲ್ಲಿದ್ದ ಆಹಾರಧಾನ್ಯಗಳನ್ನು ನಗರದ ಜನರಿಗೆ ಹೆಚ್ಚಿನ ಬೆಲೆಯಲ್ಲಿ ಮಾರಿದರು. ಇದರಿಂದಾಗಿ ಹಳ್ಳಿಗಳ ರೈತರಿಗೆ ಏನೂ ಉಳಿಯಲಿಲ್ಲ. ಹೀಗೆ ಕ್ಷಾಮವು ಜನರನ್ನು ಸಂಕಷ್ಟಕ್ಕೆ ಗುರಿ ಮಾಡಿತು.

ಕೆಲವು ಕ್ರೈಸ್ತ ಮಿಷನರಿಗಳು ಕೂಡ ಕ್ಷಾಮದಿಂದ ತತ್ತರಿಸಿದ ಜನರಿಗೆ ಊಟ, ವಸತಿ, ಇನ್ನೂ ಕೆಲವು ಸೌಲಭ್ಯಗಳನ್ನು ಒದಗಿಸಿದರು ಎಂಬುದು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಸಂಗತಿ. ಕ್ಷಾಮದ ಕಮೀಷನ್ ಕೃಷಿ, ಕೈಗಾರಿಕೆಯ ಮೇಲೆ ಯಾವ ರೀತಿಯ ಪರಿಣಾಮ ಬೀರಿದೆ ಎಂಬುದರ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ನಷ್ಟ ಪರಿಹಾರ ನೀತಿಯು ಜನರಿಗೆ ಆಹಾರ, ಬಟ್ಟೆ ಇನ್ನಿತರ ಸೌಲಭ್ಯಗಳನ್ನು ಒದಗಿಸಿತು. ಹಾಗೆಯೇ ಕೃಷಿ, ಕೈಗಾರಿಕೆ, ನೀರಾವರಿ ಇನ್ನೂ ಮುಂತಾದ ಕ್ಷೇತ್ರಗಳಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿತು ಎಂಬುದರ ವಿಚಾರಗಳು ಮುಖ್ಯ.

ಜಾಗತಿಕ ಯುದ್ಧ ನಡೆಯುವಾಗ ಮೈಸೂರು ಸಂಸ್ಥಾನ ಹೇಗೆ ಪ್ರತಿಕ್ರಿಯಿಸಿತು ಎಂಬುದು ಇಲ್ಲಿ ಮುಖ್ಯ. ಈ ಯುದ್ಧದಲ್ಲಿ ಭಾಗವಹಿಸಲು ಮೈಸೂರು ಸಂಸ್ಥಾನದ ಸೈನಿಕ ತುಕಡಿಗಳನ್ನು ಕಳುಹಿಸಲಾಯಿತು. ಈ ಯುದ್ಧದ ಸೈನಿಕರಿಗೆ ಆಹಾರ ಪದಾರ್ಥಗಳನ್ನು ಪೂರೈಸುವುದಕ್ಕಾಗಿ ಹೆಚ್ಚು ಆಹಾರಪದಾರ್ಥಗಳನ್ನು ಬೆಳೆಯಲು ರೈತರಿಗೆ ಉತ್ತೇಜನ ನೀಡಿದರು. ಈ ಕಡೆ ಬರಗಾಲದಿಂದ ಆಹಾರಕ್ಕೆ ಅಭಾವ ಉಂಟಾಯಿತು. ಇದರಿಂದ ಆಹಾರಪದಾರ್ಥಗಳ ಬೆಲೆ ಏರಿಕೆಯು ಕಂಡುಬಂದಿತು. ಬೆಲೆ ಏರಿಕೆಯಿಂದ ಜನರು ಆಹಾರಪದಾರ್ಥಗಳನ್ನು ಕೊಂಡು ಕೊಳ್ಳುವ ಸಾಮರ್ಥ್ಯ ಇರಲಿಲ್ಲ. ಬಹುತೇಕ ಜನರು ಹಸಿವಿನಿಂದ ಅಪೌಷ್ಟಿಕತೆಯಿಂದಾಗಿ ರೋಗ ರುಜಿನಗಳಿಗೆ ತುತ್ತಾದರು. ಇದನ್ನು ಪರಿಹರಿಸದೇ ರಾಜ್ಯಾಡಳಿತವು ಯುದ್ಧಕ್ಕೆ ಮಾತ್ರ ಅಗತ್ಯವಾದ ಹಲವು ವಸ್ತುಗಳ ಉತ್ಪಾದನೆಗೆ ಎಲ್ಲಾ ಪ್ರದೇಶಗಳಲ್ಲಿಯೂ ಸ್ಥಳೀಯವಾಗಿ ಪ್ರೋತ್ಸಾಹಿಸಲಾಯಿತು. ಕೃಷಿ ಅಭಿವೃದ್ಧಿಗಾಗಿ ನೀರಾವರಿಯು ಅಗತ್ಯವಾಗಿದ್ದು, ಬಾವಿಗಳ ನಿರ್ಮಾಣ, ಕೆರೆಗಳ ದುರಸ್ತಿ ಕಾರ್ಯಗಳು ನಡೆದವು. ನೀರಾವರಿ ಯೋಜನೆದಿಂದಾಗಿ ಸ್ವಲ್ಪ

ಕೃಷಿ ಉತ್ಪಾದನೆ ಹೆಚ್ಚಾಯಿತು. ಈ ನಿಟ್ಟಿನಲ್ಲಿ ಯುದ್ಧ ಕಾಲದಲ್ಲಿ ಬೆಲೆ ಏರಿಕೆಯು ಸಾಮಾನ್ಯವಾದ ವಿಷಯವಾಗಿದ್ದಿತು. ಜೊತೆಗೆ ಆಹಾರದ ಅಭಾವ, ಆಹಾರ ಪದಾರ್ಥಗಳು ಮತ್ತು ಇತರೆ ಅಗತ್ಯತೆಗಳ ಕೊರತೆ ಉಂಟಾಯಿತು. ಮೊದಲು ಬ್ರಿಟಿಷ್ ಭಾರತದ ವಸಾಹತು ಸರ್ಕಾರವು ಮಹಾಯುದ್ಧದಿಂದಾಗಿ ಐರೋಪ್ಯ ರಾಷ್ಟ್ರಗಳಿಗಾಗಿ ಆಹಾರಧಾನ್ಯಗಳನ್ನು ರಫ್ತು ಮಾಡಬೇಕಾದ್ದ ರಿಂದಲೂ ಆಹಾರ ಸಮಸ್ಯೆ ಗಂಭೀರವಾಯಿತು. ಬ್ರಿಟಿಷ್ ಸರ್ಕಾರ, ಒಡೆಯರು, ದಿವಾನರು ಯುದ್ಧಕ್ಕೆ ಬೇಕಾಗುವ ಆಹಾರಪದಾರ್ಥಗಳನ್ನು ಪೂರೈಕೆ ಮಾಡುವುದರಲ್ಲಿಯೇ ಕಾಲ ಕಳೆದರು. ಯುದ್ಧದ ಸಮಯದಲ್ಲಿ ಸಾಮಾನ್ಯ ಜನರ ಜೀವನಕ್ಕೆ ಬೇಕಾಗುವ ಅಗತ್ಯತೆಗಳನ್ನು ಪೂರೈಸುವಲ್ಲಿ ವಿಫಲರಾದರು ಎಂಬುದನ್ನು ನೋಡಬಹುದು. ಕ್ಷಾಮವು ಮೈಸೂರು ಸಂಸ್ಥಾನದಲ್ಲಿ ಯಾವ ರೀತಿ ಉಂಟಾಯಿತು. ಕ್ಷಾಮದ ನಿವಾರಣೆಗಾಗಿ ಕ್ಷಾಮದ ನೀತಿಯನ್ನು ಯಾವ ರೀತಿ ಅಳವಡಿಸಿದರು ಎಂಬುದರ ಚರ್ಚೆ ಇಲ್ಲಿ ಮುಖ್ಯವಾಗಿದೆ. ಸಂಶೋಧಕರು ಆಕರಗಳನ್ನು ಸಾಕಷ್ಟು ಮಟ್ಟಿಗೆ ಬಳಸಿಕೊಂಡಿದ್ದಾರೆ.

ಚೆನ್ನಸ್ವಾಮಿ ಸೋಸಲೆ ಎನ್. ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ **ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣಾಭಿವೃದ್ಧಿ: ಒಂದು ಸಮೀಕ್ಷೆ(೧೮೮೧ ರಿಂದ ೧೯೪೭)'**(೨೦೦೧)[೨೨] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಕಮೀಷನರ್‌ಗಳ ಆಳ್ವಿಕೆಯಿಂದ ಗ್ರಾಮೀಣಾಭಿವೃದ್ಧಿ ಹೇಗೆ ಸಾಧಿಸಲಾಯಿತು ಎಂಬುದನ್ನು ಮೊದಲು ಚರ್ಚಿಸುತ್ತಾರೆ. ಕೃಷಿ, ಕೈಗಾರಿಕೆ, ನೀರಾವರಿ, ಸಾರಿಗೆ–ಸಂಪರ್ಕ ಮುಂತಾದ ಕ್ಷೇತ್ರಗಳಲ್ಲಿ ಅಭಿವೃದ್ಧಿಯನ್ನು ಸಾಧಿಸಲು ಯೋಜನೆಗಳನ್ನು ರೂಪಿಸಿದರ ವಿವರಗಳನ್ನು ತಿಳಿಸಿದ್ದಾರೆ. ಕೃಷಿಗಾಗಿ ಭೂಮಿಯ ವಿತರಣೆ, ನೀರಾವರಿಗೆ ಮಾರಿಕಣಿವೆ ಯೋಜನೆ, ಶಿಂಷಾ ಯೋಜನೆ, ಕಾವೇರಿ ನದಿ ಯೋಜನೆ ಇವೇ ಮೊದಲಾದ ಯೋಜನೆಗಳ ವಿವರಗಳನ್ನು ಚರ್ಚಿಸಿರುತ್ತಾರೆ. ೧೦ನೇ ಚಾಮರಾಜ ಒಡೆಯರಿಗೆ ಪುನಃ ಅಧಿಕಾರವನ್ನು ನೀಡಲಾಯಿತು. ದಿವಾನರಾದ ರಂಗಾಚಾರ್ಲು ಅವರು ಪ್ರಜಾಪ್ರತಿನಿಧಿ ಸಭೆಯನ್ನು ಆರಂಭಿಸಿದರು. ಮೊದಲು ಗ್ರಾಮೀಣಾಭಿವೃದ್ಧಿಗೆ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ನೋಡಬಹುದು. ಗ್ರಾಮ ಪಂಚಾಯಿತಿಯು ರೈತರ ವ್ಯವಹಾರ, ತೀರ್ಮಾನ ಮತ್ತು ಇತರ ಪುರೋಭಿವೃದ್ಧಿ ಕೆಲಸಗಳನ್ನು ಮಾಡುತ್ತಿದ್ದವು. ಅನಂತರ ಮಾದರಿ ಗ್ರಾಮಗಳಾಗಿ ಪರಿವರ್ತಿಸಲು ಕ್ರಮಗಳನ್ನು ಕೈಗೊಳ್ಳಲಾಯಿತು. ಗ್ರಾಮಗಳಲ್ಲಿ ಕೈಮಗ್ಗಗಳಿಗೆ ಪ್ರೋತ್ಸಾಹ ನೀಡಲಾಯಿತು. ಇಲ್ಲಿ ಗಾಂಧೀಜಿ ಅವರ ಆದರ್ಶ ತತ್ವಗಳನ್ನು ಅಳವಡಿಸಿದ್ದರ ವಿವರಗಳು ಮುಖ್ಯ. ಗ್ರಾಮ ಸ್ವರಾಜ್ಯ ಎಂಬ ತತ್ವದ ಎಂಬ ತತ್ವದ ಮೇಲೆ ಗ್ರಾಮಗಳು ಸ್ವಾವಲಂಬಿಗಳಾಗಬೇಕು. ಗ್ರಾಮ ಪಂಚಾಯಿತಿಗಳು ಗ್ರಾಮಸ್ಥರಿಂದಲೇ ಚುನಾಯಿತವಾಗಬೇಕು. ಪ್ರತಿಯೊಂದು ಪಂಚಾಯಿತಿಯೂ ಗ್ರಾಮ ವಿದ್ಯಾಭ್ಯಾಸ, ನೈರ್ಮಲ್ಯ, ವೈದ್ಯಕೀಯ, ಹರಿಜನೋದ್ಧಾರ ಮುಂತಾದ ಅಭಿವೃದ್ಧಿ ಕಾರ್ಯಗಳಿಗೆ ಚಾಲನೆ ನೀಡಿದ್ದು ಪ್ರಮುಖ ಎಂಬುದನ್ನು ಚರ್ಚಿಸಿರುತ್ತಾರೆ.

ಮಾಲತಿ ಎಸ್. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಲೀಗಲ್ ಸ್ಟೇಟಸ್ ಆಫ್ ವುಮೆನ್ ಇನ್ ಪ್ರಿನ್ಸ್ಲಿ ಮೈಸೂರು** ೧೮೮೧–೧೯೪೭(೨೦೦೨)[೨೩] ಎಂಬ ಪಿಎಚ್.ಡಿ

ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಕಾನೂನಾತ್ಮಕವಾಗಿ ಸ್ತ್ರೀಯರ ಸ್ಥಾನಮಾನವನ್ನು ಮೈಸೂರು ಸಂಸ್ಥಾನದಲ್ಲಿ ಹೇಗೆ ಉನ್ನತೀಕರಿಸಿದರು ಎಂಬುದನ್ನು ಚರ್ಚಿಸಿದ್ದಾರೆ. ಸಂಶೋಧಕರು ಇಲ್ಲಿ ಮನು ಸ್ತ್ರೀಯರ ಬಗೆಗೆ ಹೊಂದಿದ ನಿಲುವುಗಳನ್ನು ವಿವರಿಸುತ್ತಾ ಹೋಗುತ್ತಾರೆ. ಮಾರ್ಕ್ ಕಬ್ಬನ್‌ನು ನ್ಯಾಯಾಂಗ ವ್ಯವಸ್ಥೆಯಲ್ಲಿ ಹಲವಾರು ಕಾಯ್ದೆಗಳನ್ನು ಜಾರಿಗೆ ತಂದನು. ಇಲ್ಲಿ ಮಹಿಳೆಯರಿಗೆ ಮೈಸೂರು ಸಂಸ್ಥಾನವು ಆರ್ಥಿಕ, ರಾಜಕೀಯ, ಸಾಮಾಜಿಕವಾಗಿ ಉನ್ನತ ಸ್ಥಾನ ದೊರಕಿಸಿ ಕೊಡಲು ಮುಂದಾಯಿತು. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿರುವ ಮಹಿಳೆಗೆ ಯಾವ ಕಾನೂನಾತ್ಮಕ ಸ್ಥಾನಮಾನ ದೊರಕಿತು ಎಂಬುದನ್ನು ಈ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ.

ಮಹಿಳೆಯರ ಅಭಿವೃದ್ಧಿಗೆ ಶಿಕ್ಷಣ ಮೂಲ ಕಾರಣ ಎಂದು ಹೇಳುತ್ತಾ ಬ್ರಿಟಿಷರು ಇಂಗ್ಲಿಷ್ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು ಎಂಬ ವಿಚಾರಗಳು ಮುಖ್ಯವಾದವು. ಮೊದಲು ಮೇಲ್ವರ್ಗದ ಮಹಿಳೆಯರು ಶಿಕ್ಷಣವಂತರಾದರು. ಅನಂತರ ಇತರ ಎಲ್ಲಾ ಮಹಿಳೆಯರು ಶಿಕ್ಷಣವನ್ನು ಪಡೆದರು ಎಂಬುದನ್ನು ವಿವರಿಸುತ್ತಾರೆ. ಎಲಿಮೆಂಟರಿ ಶಿಕ್ಷಣ ಕಾಯ್ದೆಯ ಮೂಲಕ ಕಡ್ಡಾಯ ಶಿಕ್ಷಣವನ್ನು ಜಾರಿಗೆ ತಂದು ಅನೇಕ ಶಾಲೆಗಳನ್ನು ಪ್ರಾರಂಭಿಸಿದರು. ಮೊದಲು ಜ್ಯೋತಿರಾವ್ ಫುಲೆ ಅವರು ಸ್ವತಃ ಶಾಲೆಗಳನ್ನು ಪ್ರಾರಂಭಿಸಿ ಶೂದ್ರ ಬಾಲಕ ಮತ್ತು ಬಾಲಕಿಯರಿಗೆ ಶಿಕ್ಷಣ ನೀಡಲು ಮುಂದಾದರು. ತನ್ನ ಹೆಂಡತಿಯಾದ ಸಾವಿತ್ರಿಬಾಯಿ ಫುಲೆ ಅವರಿಗೆ ಮೊದಲು ಶಿಕ್ಷಣವನ್ನು ನೀಡಿ ಶೂದ್ರ ಹೆಣ್ಣುಮಕ್ಕಳಿಗೆ ಪಾಠ ಹೇಳಿಕೊಡಲು ನೇಮಿಸಿದರು ಎಂಬುದು ಮುಖ್ಯ. ಬ್ರಹ್ಮಸಮಾಜ, ಆರ್ಯ ಸಮಾಜ, ಥಿಯೋಸಾಫಿಕಲ್ ಸೊಸೈಟಿ, ಮಹಿಳಾ ಸೇವಾ ಸಮಾಜ ಹಾಗೂ ಇತರ ಸಂಸ್ಥೆಗಳು ಸ್ತ್ರೀಯರ ಅಭಿವೃದ್ಧಿಗೆ ಕೈಗೊಂಡ ಕಾರ್ಯಗಳ ಚರ್ಚೆ ಮೂಡಿಬಂದಿದೆ. ಇದರ ಪ್ರೇರಣೆಯಾಗಿ ಮೈಸೂರಿನಲ್ಲಿ ವಾಣಿವಿಲಾಸ ಮಹಿಳಾ ಕ್ಲಬ್, ಶಾರದ ಸ್ತ್ರೀ ಸಮಾಜ ಟ್ರಸ್ಟ್, ಚಿಲ್ಡ್ರನ್ ಬುಕ್ ಕೌನ್ಸಿಲ್ ಮೊದಲಾದ ಸಂಘ-ಸಂಸ್ಥೆಗಳು, ಸ್ತ್ರೀಯರ ಅಭಿವೃದ್ಧಿಗೆ ಕಾರ್ಯಗಳನ್ನು ಕೈಗೊಂಡ ವಿಚಾರಗಳನ್ನು ತಿಳಿಸಿದ್ದಾರೆ. ಮೈಸೂರಿನ ಇತರ ಖಾಸಗಿ ಸಂಸ್ಥೆಗಳು ಮಹಿಳೆಯ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹ ನೀಡಿದ ವಿವರಗಳು ಪ್ರಮುಖವಾಗಿವೆ. ಎ.ನರಸಿಂಹ ಅಯ್ಯಂಗಾರ್, ಕಲ್ಯಾಣಮ್ಮ, ದಾಸಪ್ಪ, ಯಶೋಧರಮ್ಮ ದಾಸಪ್ಪ, ನಂಜನಗೂಡು ತಿರುಮಲಾಂಭ ಮೊದಲಾದವರು ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದ್ದರ ವಿಚಾರಗಳನ್ನು ಇಲ್ಲಿ ತಿಳಿಯಬಹುದು. ಕೆ.ಡಿ.ರುಕ್ಮಿಣಿಯಮ್ಮ, ವೆಂಕಮ್ಮ, ಶ್ರೀರಂಗಮ್ಮ, ಡಿ.ಸುಬ್ಬಮ್ಮ, ಶೇಷಮ್ಮ ಮತ್ತು ಲಕ್ಷ್ಮೀದೇವಮ್ಮ ಮೊದಲಾದವರು ಶಿಕ್ಷಣ ಪಡೆದು ಶಿಕ್ಷಕಿಯರಾಗಿ ಕಾರ್ಯ ನಿರ್ವಹಿಸಿರುವುದನ್ನು ಗಮನಿಸಬಹುದು.

ಸಾಮಾನ್ಯವಾಗಿ ಬಾಲ್ಯವಿವಾಹ ಪದ್ಧತಿಯು ಒಂದು ಸಾಮಾಜಿಕ ಪಿಡುಗಾಗಿ ಪರಿಣಮಿಸಿತ್ತು. ೧೮೯೪ರಲ್ಲಿ ಬಾಲ್ಯವಿವಾಹ ನಿಷೇಧ ಕಾಯ್ದೆಯನ್ನು ಜಾರಿಗೆ ತರಲಾಯಿತು. ಸಾಮಾಜಿಕ ಪಿಡುಗು ಆಗಿರುವ ದೇವದಾಸಿ ಪದ್ಧತಿಯನ್ನು ನಿರ್ಮೂಲನೆ ಮಾಡಲು ೧೯೦೯ರಲ್ಲಿ ದೇವದಾಸಿ ನಿಷೇಧ ಆಜ್ಞೆ ಕಾನೂನನ್ನು ಜಾರಿಗೆ ತರಲಾಯಿತು ಎಂಬುದಾಗಿ ವಿವರಿಸಿದ್ದಾರೆ(ಪು.೧೨೩-೧೨೪). ಸ್ತ್ರೀಯರು ರಾಜಕೀಯವಾಗಿಯೂ ಗುರುತಿಸಿಕೊಂಡಿರುವುದನ್ನು ಇಲ್ಲಿ ತಿಳಿಸಿದ್ದಾರೆ.

೧೯೨೭ರಲ್ಲಿ ಸ್ತ್ರೀಯರಿಗೆ ಮತದಾನದ ಹಕ್ಕನ್ನು ನೀಡಲಾಯಿತು. ಅಂದರೆ ಮಹಿಳೆಯು ಪ್ರಜಾಪ್ರತಿನಿಧಿ ಸಭೆ ಇತ್ಯಾದಿಗಳಿಗೆ ಸದಸ್ಯರನ್ನು ಚುನಾಯಿಸುವುದಕ್ಕೆ, ಮತ ಚಲಾಯಿಸುವ ಮತ್ತು ಉಮೇದುವಾರರಾಗಿ ಸ್ಪರ್ಧಿಸುವ ಹಕ್ಕನ್ನು ನೀಡಲಾಯಿತು. ಪೌರಸಮಿತಿಗೆ ಸದಸ್ಯರಾಗಲು, ಜಿಲ್ಲಾ ಮಂಡಳಿ, ವಿಶ್ವವಿದ್ಯಾಲಯದ ಸೆನೇಟ್, ರಾಜ್ಯದ ಶಾಸನಸಭೆ, ಇತ್ಯಾದಿಗಳ ಸದಸ್ಯರಾಗಿ ಸೇವೆ ಸಲ್ಲಿಸಲು ಎಲ್ಲಾ ಅವಕಾಶಗಳನ್ನು ನೀಡಲಾಯಿತು ಎಂಬ ವಿಚಾರಗಳನ್ನು ತಿಳಿಸಿರುತ್ತಾರೆ.

ಸ್ತ್ರೀಯರ ಸ್ಥಾನಮಾನವನ್ನು ಹೆಚ್ಚಿಸಲು ೧೯೩೩ರಲ್ಲಿ 'ದಿ ಹಿಂದೂ ಲಾ ವುಮೆನ್ಸ್ ರೈಟ್ಸ್' ಆ್ಯಕ್ಟನ್ನು ಜಾರಿಗೆ ತಂದರು(ಪು.೨೩೭). ೧೯೩೬ರಲ್ಲಿ ವೇಶ್ಯಾವೃತ್ತಿಯ ನಿಷೇಧಾಜ್ಞೆಯನ್ನು ಜಾರಿಗೆ ತಂದರು. ೧೯೩೮ರಲ್ಲಿ ಹಿಂದೂ ವಿಡೋ ರಿ ಮ್ಯಾರೇಜ್ ಆ್ಯಕ್ಟನ್ನು ಜಾರಿಗೆ ತಂದರು. ಪ್ರಜಾಪ್ರತಿನಿಧಿ ಸಭೆಯು ಹಿಂದೂ ವಿಧವೆಯರ ಪುನರ್ವಿವಾಹಕ್ಕೆ ಸಂಬಂಧಿಸಿದ ಮಸೂದೆಯನ್ನು ಬಹುಮತದಿಂದ ಬೆಂಬಲಿಸಿತು. ಸರ್ಕಾರದ ವತಿಯಿಂದಲೇ ವಿಧವೆಯರಿಗೆ ಶಿಕ್ಷಣವೇತನವನ್ನು ನೀಡಿ ಶೈಕ್ಷಣಿಕ ಬೆಳವಣಿಗೆಗೆ ಸಹಾಯಕವಾಗಲು 'ದೇವರಾಜ ಬಹದ್ದೂರ್ ಫಂಡ್' ಎಂಬುದನ್ನು ಸ್ಥಾಪಿಸಲಾಯಿತು. ಈ ಫಂಡ್‌ನ ಹಣದಿಂದಲೇ ವಿಧವೆಯರಿಗೆ ಸಹಾಯಕವಾಗಲು 'ವಿಡೋ ಹೋಂ'ಗಳನ್ನು ಸ್ಥಾಪಿಸಲಾಯಿತು. ನಂತರ ಈ ವಿಡೋ ಹೋಂಗಳನ್ನು 'ಅಬಲಾಶ್ರಮ' ಎಂದು ಕರೆಯಲಾಯಿತು. ಹೀಗೆ ಕಾನೂನಾತ್ಮಕ ಚೌಕಟ್ಟಿನೊಳಗೆ ಮಹಿಳೆಯರ ಸ್ಥಾನಮಾನವನ್ನು ಉತ್ತಮಪಡಿಸಿದರು ಎಂಬುದು ಮುಖ್ಯ ಈ ಕಾನೂನುಗಳನ್ನು ಜಾರಿಗೆ ತರಲು ಕಮೀಷನರ್‌ಗಳು, ಒಡೆಯರು ಮತ್ತು ದಿವಾನರು ಯಾವ ರೀತಿ ಕ್ರಮಗಳನ್ನು ಕೈಗೊಂಡರು ಎಂಬುದರ ಚರ್ಚೆ ಅಗತ್ಯ. ಬಳಸಿಕೊಂಡಿರುವ ಆಕರಗಳು ಮುಖ್ಯವಾಗಿವೆ. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿರುವ ಮಹಿಳೆಯರಿಗೆ ಈ ಕಾನೂನುಗಳು ಹೇಗೆ ಅವರ ಸ್ಥಾನಮಾನವನ್ನು ಉನ್ನತೀಕರಿಸಿದವು ಎಂಬುದರ ಚರ್ಚೆ ಅಗತ್ಯವಾಗಿ ಕಂಡುಬರುತ್ತದೆ.

ಗೋವಿಂದಪ್ಪ ಎಂ. ಅವರು **ಹಿಸ್ಟರಿ ಆಫ್ ಮೈನಿಂಗ್ ಇನ್ ಪ್ರಿನ್ಸ್ಲಿ ಮೈಸೂರು: ವಿತ್ ಸ್ಪೆಷಲ್ ರೆಫರೆನ್ಸ್ ಟು ಕೋಲಾರ್ ಗೋಲ್ಡ್ ಫೀಲ್ಡ್ಸ್ ೧೮೮೧ ಟು ೧೯೫೬**'(೨೦೦೨)[೨೪] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಮೈಸೂರು ಸಂಸ್ಥಾನದಲ್ಲಿನ ಅದಿರಿನ ನಿಕ್ಷೇಪದ ವ್ಯಾಪಾರದಲ್ಲಿ ಕೋಲಾರದ ಚಿನ್ನದ ನಿಕ್ಷೇಪ ಯಾವ ರೀತಿ ಗುರುತಿಸಿಕೊಂಡಿದ್ದು ಎಂಬುದನ್ನು ಚರ್ಚಿಸಿದ್ದಾರೆ. ಮೈಸೂರು ಸಂಸ್ಥಾನದ ಆಡಳಿತಕ್ಕೆ ಒಳಪಟ್ಟ ಈ ಅದಿರಿನ ನಿಕ್ಷೇಪವು ಬ್ರಿಟಿಷರ ಅಧೀನಕ್ಕೆ ಒಳಪಟ್ಟು ಯಾವ ರೀತಿ ಸಾಗಿತು ಎಂಬುದು ಇಲ್ಲಿಯ ಮುಖ್ಯ ವಿಷಯ. ಮೈಸೂರಿನ ಸರ್ಕಾರವು ತನಗೆ ಅನುಕೂಲವಾಗುತ್ತದೆ ಎಂಬ ಭ್ರಮೆಯೊಂದಿಗೆ ಬ್ರಿಟಿಷ್ ಸರ್ಕಾರಕ್ಕೆ ಈ ನಿಕ್ಷೇಪವನ್ನು ಅಧೀನಗೊಳಿಸಿತು ಎಂಬುದನ್ನು ಇಲ್ಲಿ ಚರ್ಚಿಸುತ್ತಾರೆ. ವಸಾಹತುಶಾಹಿ ಸರ್ಕಾರವು ಮೈಸೂರು ಸಂಸ್ಥಾನದ ಮೇಲೆ ಬಹುತೇಕವಾಗಿ ಎಲ್ಲಾ ವ್ಯಾಪಾರದ ಏಕಸ್ವಾಮ್ಯವನ್ನು ತನ್ನ ಹಿಡಿತದಲ್ಲಿಟ್ಟು ಕೊಂಡಿದ್ದನ್ನು ಮೊದಲು ತಿಳಿಸುತ್ತಾರೆ. ಈ ವಸಾಹತುಶಾಹಿ ಕಾಲದಲ್ಲಿ ಕೆ.ಜಿ.ಎಫ್.ಕಾರ್ಮಿಕರನ್ನು ಆಕರ್ಷಿಸಿತು ಎಂದರೆ ಅತಿಶಯೋಕ್ತಿಯಾಗಲಾರದು. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿರುವ ಈ ಕಾರ್ಮಿಕರು ಯಾವ ರೀತಿ ಶೋಷಣೆಗೆ ಒಳಗಾದರು ಎಂಬುದನ್ನು ಚರ್ಚೆ ಮಾಡಬೇಕಾದ

ಸಂಗತಿಯಾಗಿದೆ. ಕೈಗಾರೀಕರಣ ಮತ್ತು ನಗರೀಕರಣದ ಪ್ರಕ್ರಿಯೆಯಲ್ಲಿ ಕಾರ್ಮಿಕರು ಭಾಗಿಯಾದ ಬಗೆಯನ್ನು ತಿಳಿಸುತ್ತಾರೆ. ಈ ಕಾರ್ಮಿಕರು ಕೆಳಸ್ತರದ ಸಾಮಾಜಿಕ ಶ್ರೇಣಿಯ ಹಿನ್ನೆಲೆಯನ್ನು ಇಲ್ಲಿ ಗುರುತಿಸಿರುವುದನ್ನು ನೋಡಬಹುದು. ಕೆಳವರ್ಗದ ಕಾರ್ಮಿಕರು ಅನೇಕ ಆಮಿಷಗಳಿಗೆ ಒಳಗಾಗಿ ಗುತ್ತಿಗೆ ಆಧಾರಿತ ಕಾರ್ಮಿಕರು ಹೆಚ್ಚುವರಿಯಾಗಿ ಕೆಲಸ ಮಾಡತೊಡಗಿದರು. ಯುರೋಪಿನಲ್ಲಿ ಚಿನ್ನದ ಅದಿರಿನ ಭಾರಿ ವ್ಯಾಪಾರ ವಹಿವಾಟು ಅಧಿಕ ಲಾಭ ತಂದಿತು. ಈ ಹಿನ್ನೆಲೆಯಲ್ಲಿ ಅದಿರಿನ ನಿಕ್ಷೇಪದ ಅನ್ವೇಷಣೆ ಹೆಚ್ಚಾಗತೊಡಗಿತು. ಮುಖ್ಯವಾಗಿ ಕಾರ್ಮಿಕರ ಸಾಮಾಜಿಕ ಶ್ರೇಣಿಯು ಯಾವ ರೀತಿ ಇತ್ತು ಎಂಬುದನ್ನು ವಿವರಿಸುತ್ತಾರೆ. ಕೆಳವರ್ಗಗಳಿಂದ ಬಂದ ಕಾರ್ಮಿಕರೇ ಹೆಚ್ಚಾಗಿದ್ದು, ಅನೇಕ ತೊಂದರೆಗಳಿಗೆ ಒಳಗಾದರು. ಒಂದು ರೀತಿಯ ಸಾಮಾಜಿಕ ಸ್ಥಿತ್ಯಂತರಕ್ಕೆ ಒಳಗಾದ ಸನ್ನಿವೇಶವನ್ನು ವಿವರಿಸುತ್ತಾರೆ.

ಕಾರ್ಮಿಕರ ಹಿತಾಸಕ್ತಿಗಳನ್ನು ಕಾಯಲು ಪ್ರಾರಂಭವಾದ ಕಾಯ್ದೆಗಳು, ಸಂಘಗಳು ಮುಖ್ಯ. ೧೯೩೦ರ ಅವಧಿಯಲ್ಲಿ ಬ್ರಿಟಿಷರ ಆರ್ಥಿಕತೆಯು ಒಂದು ಹಂತ ತಲುಪಿದ್ದರೆ, ೧೯೪೫ರ ವೇಳೆಗೆ ಎರಡನೇ ಮಹಾಯುದ್ಧದಿಂದಾಗಿ ಆರ್ಥಿಕತೆಯು ಕುಸಿಯತೊಡಗಿತು ಎಂಬುದರ ವಿವರಗಳನ್ನು ನಿರೂಪಿಸಿದ್ದಾರೆ. ಬ್ರಿಟಿಷರು ಮತ್ತು ಮೈಸೂರು ಸರಕಾರಕ್ಕೆ ಘರ್ಷಣೆ ನಡೆಯುತ್ತಿತ್ತು. ಈ ಕೆ.ಜಿ.ಎಫ್.ನಲ್ಲಿ ಅಪರಾಧಗಳ ಸಂಖ್ಯೆ ಹೆಚ್ಚಿತು. ಇಲ್ಲಿ ವೇಶ್ಯಾವಾಟಿಕೆ, ಮದ್ಯಪಾನದ ವ್ಯಸನ, ದಲಿತರು ಕ್ರೈಸ್ತಮತಕ್ಕೆ ಮತಾಂತರ ಇವೇ ಮೊದಲಾದ ವಿಷಯಗಳನ್ನು ಚರ್ಚಿಸಿದ್ದಾರೆ. ಇಲ್ಲಿ ಬಳಸಿರುವ ಆಕರಗಳನ್ನು ಮತ್ತಷ್ಟು ದುಡಿಸಿಕೊಳ್ಳಬೇಕಾಗಿತ್ತು. ನಗರೀಕರಣದ ಪ್ರಕ್ರಿಯೆಯ ಪ್ರಭಾವವನ್ನು ವಿವರಿಸಿರುವುದು ಇಲ್ಲಿ ಮುಖ್ಯವಾಗಿದೆ. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿರುವ ಕಾರ್ಮಿಕರ ಚಲನಶೀಲತೆಯನ್ನು ಪತ್ತೆ ಹಚ್ಚಿರುವುದನ್ನು ಇಲ್ಲಿ ಗಮನಿಸಬಹುದು.

ಸುಪ್ರಭಾ ಹೆಚ್.ಕೆ. ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **ಸ್ಪ್ರೆಡ್ ಆಫ್ ವುಮೆನ್ಸ್ ಎಜುಕೇಷನ್ ಇನ್ ಪ್ರಿನ್ಸ್ಲಿ ಮೈಸೂರು (೧೮೮೧-೧೯೪೭)**'(೨೦೦೫)[೨೫] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಸಬಾಲ್ಟರ್ನ್ ಪಂಥದ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಪ್ರಮುಖವಾಗಿ ಈ ಮಹಾಪ್ರಬಂಧವು ಮೈಸೂರು ಸಂಸ್ಥಾನದಲ್ಲಿ ಮಹಿಳಾ ಶಿಕ್ಷಣವು ನಡೆದುಬಂದ ದಾರಿಯನ್ನು ಚರ್ಚಿಸುತ್ತದೆ. ಇಲ್ಲಿ ಸಂಶೋಧಕರು ಮೊದಲು ಕ್ರೈಸ್ತ ಮಿಷನರಿಗಳು ಸ್ತ್ರೀಯರಿಗೆ ನೀಡಿದ ಶಿಕ್ಷಣದ ವಿವರಗಳನ್ನು ನೀಡಿದ್ದಾರೆ. ಬಾಸೆಲ್ ಮಿಷನ್, ರೋಮನ್ ಕ್ಯಾಥೋಲಿಕ್ ಮಿಷನ್ ಕೈಗೊಂಡ ಶಿಕ್ಷಣದ ಕಾರ್ಯಗಳು ಇಲ್ಲಿ ಮುಖ್ಯವಾಗಿವೆ. ಈ ಕ್ರೈಸ್ತ ಮಿಷನರಿಗಳ ಕಾರ್ಯಗಳಿಗೆ ಜನರು ಪ್ರತಿಸ್ಪಂದಿಸಿದ ರೀತಿ ಪ್ರಮುಖವಾಗಿದ್ದು, ಜನರು ಮೂಲಭೂತ ಸೌಕರ್ಯಗಳಿಗೆ ಮತಾಂತರ ಆದ ಪ್ರಕ್ರಿಯೆಯನ್ನು ತಿಳಿಸಿರುವುದಿಲ್ಲ. ಮುಖ್ಯವಾಗಿ ೧೮೮೧ರಿಂದ ೧೯೪೭ರ ಕಾಲಾವಧಿಯಲ್ಲಿ ಮೈಸೂರು ಸಂಸ್ಥಾನದ ಮಹಿಳಾ ಶಿಕ್ಷಣದ ಬಗೆಗೆ ಚರ್ಚಿಸುತ್ತಾ, ಮೊದಲಿಗೆ ಕಮೀಷನರ್‌ಗಳ ಕಾಲಾವಧಿಯಲ್ಲಿ ಜಾರಿಗೆ ತಂದ ಶಿಕ್ಷಣದ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ. ಕಮೀಷನರ್ ಆದ ಮಾರ್ಕ್ ಕಬ್ಬನ್‌ನು ಇಂಗ್ಲಿಷ್

ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡದನು ಎಂಬ ವಿವರಗಳನ್ನು ನೋಡಬಹುದು.

೧೦ನೇ ಚಾಮರಾಜ ಒಡೆಯರ ಕಾಲದಲ್ಲಿ ದಿವಾನರಾದ ಸಿ.ರಂಗಾಚಾರ್ಲು ಮತ್ತು ಕೆ.ಶೇಷಾದ್ರಿ ಅಯ್ಯರ್ ಅವರು ಶಿಕ್ಷಣಕ್ಕೆ ಸಂಬಂಧಿಸಿದಂತೆ ಶಾಲೆಗಳನ್ನು ಹೆಚ್ಚಾಗಿ ಸ್ಥಾಪಿಸಿದ್ದು, ಎಲಿಮೆಂಟರಿ ಎಜುಕೇಷನ್ ಕಾಯ್ದೆಯನ್ನು ಜಾರಿಗೆ ತಂದು ಶಿಕ್ಷಣವನ್ನು ಕಡ್ಡಾಯಗೊಳಿಸಿದರು. ಬೆಂಗಳೂರು, ಹಾಸನ, ಮೇಲುಕೋಟೆ ಮೊದಲಾದ ಕಡೆಗಳಲ್ಲಿ ಶಾಲೆಗಳನ್ನು ಸ್ಥಾಪಿಸಿದರು. ಆದರೆ ಇಲ್ಲಿ ಲಿಂಗಾಯತ ಮಹಿಳೆಯರು ಮಾತ್ರ ಶಿಕ್ಷಣ ಪಡೆಯಲು ಅವಕಾಶ ಇತ್ತು. ಆದರೆ ವೆಲ್ಲೆಸ್ಲಿಯನ್ ಮಿಷನ್ ಸ್ಕೂಲ್‌ನಲ್ಲಿ ಶೂದ್ರ ಮಹಿಳೆಯರು ಶಿಕ್ಷಣ ಪಡೆಯಲು ಅವಕಾಶ ಇತ್ತು(ಪು.೪೭). ಅಂದರೆ ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ ಎಂದಾಗ ಯಾವ ಮಹಿಳೆ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮೇಲ್ವರ್ಗ ಅಥವಾ ಕೆಳವರ್ಗದ ಮಹಿಳೆಯೇ ಎಂಬುದು ಖಚಿತವಾಗಿ ಗೊತ್ತಾಗಬೇಕು. ಮೊದಲು ಮೇಲ್ವರ್ಗ ಮಹಿಳೆಯರಿಗೆ ಶಿಕ್ಷಣ ದೊರೆಯಿತು. ಅನಂತರ ಕೆಳವರ್ಗದ ಮಹಿಳೆಯರಿಗೆ ಶಿಕ್ಷಣ ದೊರೆಕುವಂತಾಯಿತು. ಇಲ್ಲಿ ವೆಂಕಮ್ಮ, ಶ್ರೀರಂಗಮ್ಮ, ಡಿ.ಸುಬ್ಬಮ್ಮ, ಶೇಷಮ್ಮ, ಲಕ್ಷ್ಮೀದೇವಮ್ಮ ಮೊದಲಾದವರು ಶಿಕ್ಷಣ ಪಡೆದು ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸಿರುವುದನ್ನು ಗಮನಿಸಬಹುದು.

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಕೂಡ ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದರು. ಮಹಾರಾಣಿ ಕಾಲೇಜಿನಲ್ಲಿ ಎಫ್.ಎ. ಪರೀಕ್ಷೆಯನ್ನು ಪಾಸು ಮಾಡಿದ ಪ್ರಥಮ ಮಹಿಳೆ ಎಂದರೆ ರುಕ್ಮಿಣಿಯಮ್ಮ. ಅನಂತರ ಇವರು ಆಂಗ್ಲೋ ವರ್ನಾಕ್ಯುಲರ್ ಆಂಗ್ಲ ಶಾಲೆಯಲ್ಲಿ ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸಿರುವುದನ್ನು ನೋಡಬಹುದು. ಮುಸ್ಲಿಂ ಮತ್ತು ನಿಮ್ನವರ್ಗಗಳ ಸ್ತ್ರೀಯರಿಗೆ ಯಾವ ರೀತಿಯ ಶಿಕ್ಷಣವನ್ನು ನೀಡಿದರು ಎಂಬುದು ಇಲ್ಲಿ ಮುಖ್ಯ. ಮುಸ್ಲಿಂ ಮಹಿಳೆಯರಿಗೆ ಮಹಮ್ಮಡನ್ ಶಿಕ್ಷಣದ ವಿವರಗಳನ್ನು ತಿಳಿಸಿದ್ದಾರೆ. ಸಾಮಾನ್ಯವಾಗಿ ಮುಸ್ಲಿಂ ಹೆಣ್ಣುಮಕ್ಕಳು ಶಾಲೆಗಳಿಗೆ ಸಮಾನವಾಗಿ ದಾಖಲಾಗಲು ಅವಕಾಶ ನೀಡಲಾಯಿತು. ಹೊಲೆಯರಿಗಾಗಿ ಶಾಲೆಯನ್ನು ಹುಸ್ಕೂರು, ನರಸೀಪುರದಲ್ಲಿ ಪ್ರಾರಂಭಿಸಲಾಯಿತು(ಪು.೧೫೭). ಮೈಸೂರಿನ ದೊಡ್ಡ ಹೊಲಗೇರಿಯಲ್ಲಿ ಆರು ಪಂಚಮರ ಶಾಲೆಗಳನ್ನು ತೆರೆದರು ಎಂಬ ವಿವರಗಳನ್ನು ತಿಳಿಸಿದ್ದಾರೆ. ಇಲ್ಲಿ ಮುಖ್ಯವಾಗಿ ಪಂಚಮರ ಉದ್ಧಾರಕ್ಕಾಗಿ ದುಡಿದ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಅವರ ಕಾರ್ಯಗಳನ್ನು ವಿವರಿಸಿರುವುದಿಲ್ಲ. ಪಂಚಮರ ಶಿಕ್ಷಣದ ಅಭಿವೃದ್ಧಿಗೆ ಇವರು ಪ್ರಮುಖವಾದ ಪಾತ್ರ ವಹಿಸಿರುವುದನ್ನು ಗಮನಿಸಬೇಕಾಗಿದೆ.

ಪ್ರತ್ಯೇಕವಾಗಿ ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ಶ್ರಮಿಸಿದ ಮಹನೀಯರನ್ನು ಇಲ್ಲಿ ಪರಿಚಯಿಸಿದ್ದಾರೆ. ಎ.ನರಸಿಂಹ ಅಯ್ಯಂಗಾರ್ ಅವರು ೧೮೮೧ರಲ್ಲಿ ಮಹಾರಾಣಿ ಬಾಲಕಿಯರ ಶಾಲೆ ತೆರೆದರು. ಶಿಕ್ಷಕರ ತರಬೇತಿ ಕೇಂದ್ರ, ಮರಿಮಲ್ಲಪ್ಪ, ಭಾಷೋಜ್ಜೀವಿನಿ ಕಾಲೇಜು, ಮಹಿಳಾ ಅಬಲಾಶ್ರಮಗಳನ್ನು ಸ್ಥಾಪಿಸಿ ಶಿಕ್ಷಣ ನೀಡಿದ ವಿವರಗಳನ್ನು ತಿಳಿಸಿದ್ದಾರೆ. ಸೇವಾಸದನ, ಮಹಿಳಾ ಸೇವಾ ಸಮಾಜ ಇವೇ ಮೊದಲಾದವು ಮಹಿಳಾ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ

ನೀಡಿದವು. ಕಲ್ಯಾಣಮ್ಮ, ದಾಸಪ್ಪ, ಯಶೋಧರಮ್ಮ ದಾಸಪ್ಪ, ನಂಜನಗೂಡು ತಿರುಮಲಾಂಭ ಮೊದಲಾದವರು ಮಹಿಳಾ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಒಟ್ಟಾರೆಯಾಗಿ ಈ ಮಹಾಪ್ರಬಂಧವು ಸಬಾಲ್ಟರ್ನ್ ಪಂಥದಲ್ಲಿ ಗುರುತಿಸಿಕೊಂಡ ಮಹಿಳೆಯರನ್ನು ಕೇಂದ್ರೀಕರಿಸಿಕೊಂಡು ರಚಿಸಿದ ಮಹಾಪ್ರಬಂಧವಾಗಿದೆ. ಮಹಿಳಾ ಅಭಿವೃದ್ಧಿಗೆ ಶಿಕ್ಷಣವು ಪ್ರಮುಖ ಅಸ್ತ್ರವಾಗಿರುವುದರಿಂದ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹದ ಅಂಶಗಳನ್ನು ಗುರುತಿಸಿದ್ದಾರೆ. ಕಮೀಷನರುಗಳು, ಒಡೆಯರು, ದಿವಾನರು ಮತ್ತು ಇತರ ಸಂಘ-ಸಂಸ್ಥೆಗಳು ಮಹಿಳಾ ಶಿಕ್ಷಣದ ಅಭಿವೃದ್ಧಿಗೆ ಕೈಗೊಂಡ ಕಾರ್ಯಗಳನ್ನು ಚರ್ಚಿಸಿದ್ದಾರೆ. ತಮ್ಮ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಪ್ರಾಥಮಿಕ ಹಾಗೂ ಆನುಷಂಗಿಕ ಆಧಾರಗಳನ್ನು ದುಡಿಸಿಕೊಂಡಿದ್ದಾರೆ.

ಪಂಡಿತ್ ಬಿ.ಆರ್.ವಿ. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಹಿಸ್ಟರಿ ಆಫ್ ಪಬ್ಲಿಕ್ ಹೆಲ್ತ್ ಅಂಡ್ ಸಾನಿಟೆಟನ್ ಇನ್ ಪ್ರಿನ್ಸ್ಲಿ ಮೈಸೂರು**(೧೮೩೧–೧೯೪೭)(೨೦೦೬)[೨೬] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ಕಮೀಷನರ್‌ಗಳ ನೇರ ಆಳ್ವಿಕೆಯಲ್ಲಿ ಸಾರ್ವಜನಿಕರ ಆರೋಗ್ಯದ ಬಗೆಗೆ ಹೆಚ್ಚಿನ ಗಮನ ಹರಿಸಲಾಯಿತು ಎಂಬುದು ಮುಖ್ಯ. ಮೈಸೂರು ಮತ್ತು ಬೆಂಗಳೂರು ನಗರಗಳಲ್ಲಿ ಇದ್ದಂತಹ ನೀರಾವರಿ ವ್ಯವಸ್ಥೆಯ ವಿವರಗಳನ್ನು ನೀಡುತ್ತಾ ನೀರಿನಿಂದ ಬರುವ ಕಾಯಿಲೆಗಳ ಮಾಹಿತಿಯನ್ನು ತಿಳಿಸುತ್ತಾ ಜ್ವರದಿಂದ ಸತ್ತವರ ಅಂಕಿ-ಅಂಶಗಳನ್ನು ತಿಳಿಸಿದ್ದಾರೆ. ಬೆಂಗಳೂರು ಕಂಟೋನ್ಮೆಂಟ್‌ಗಳಲ್ಲಿ ಆರೋಗ್ಯದ ನೈರ್ಮಲ್ಯ ಕಾರ್ಯಗಳನ್ನು ರೂಪಿಸಿದ್ದರ ವಿವರ, ಔಷಧಿಗಳ ಸರಬರಾಜು ಇವೇ ಮೊದಲಾದ ಮಾಹಿತಿಗಳನ್ನು ಕ್ರೋಡೀಕರಿಸಿದ್ದಾರೆ. ಅಂದಿನ ಪ್ರಮುಖ ರೋಗವಾದ ಪ್ಲೇಗನ್ನು ತಡೆಗಟ್ಟಲು ಪ್ರತ್ಯೇಕ ಕಮೀಷನ್ನನ್ನು ನೇಮಿಸಲಾಯಿತು. ಈ ರೋಗಗಳು ಮಾನವ ಸಮಾಜವನ್ನು ತಲ್ಲಣಗೊಳಿಸಿದ್ದವು ಎಂಬುದನ್ನು ತಿಳಿಯಬಹುದು. ರೋಗಗಳನ್ನು ತಡೆಗಟ್ಟಲು ಮುಂಜಾಗ್ರತೆ ಕ್ರಮಗಳನ್ನು ತಿಳಿಸಲಾಗಿದೆ. ವೈದ್ಯರ ನೇಮಕ, ಅವರಿಗೆ ತರಬೇತಿ ನೀಡಿದ್ದರ ವಿವರಗಳು ಮುಖ್ಯವಾಗಿವೆ (ಪು.೬೪).

ನಗರೀಕರಣದ ಹಿನ್ನೆಲೆಯಲ್ಲಿ ಉಂಟಾದ ರೋಗರುಜಿನಗಳಿಗೆ ಯಾವ ರೀತಿ ಕಾರ್ಯಗಳನ್ನು ಕೈಗೊಂಡರು ಎಂಬುದು ಮುಖ್ಯ. ಗ್ರಾಮೀಣ ಪ್ರದೇಶಗಳಲ್ಲಿಯೂ ಕೆಲವೊಂದು ರೆಗ್ಯುಲೇಷನ್ ಗಳನ್ನು ಜಾರಿಗೆ ತಂದು ರೋಗಗಳ ತಡೆಗಟ್ಟುವಿಕೆಗೆ ಮುಂದಾದರು ಎಂದು ವಿವರಿಸಿದ್ದಾರೆ. ಮಲೇರಿಯಾ ರೋಗವನ್ನು ತಡೆಗಟ್ಟಲು ಮೈಸೂರು ಮತ್ತು ಬೆಂಗಳೂರಿನಲ್ಲಿ ರಾಕ್‌ಫೆಲ್ಲರ್ ಫೌಂಡೆಷನ್ ಕ್ರಮ ಕೈಗೊಂಡಿದ್ದರ ವಿವರಗಳನ್ನು ಇಲ್ಲಿ ಕ್ರೋಡೀಕರಿಸಿದ್ದಾರೆ(ಪು.೧೬೦). ರೋಗಗಳು ಹರಡುವ ಸಾಧ್ಯತೆ ಹೆಚ್ಚಾಗಿದ್ದರಿಂದ ಜನರಿಗೆ ಜಾಗೃತಿ ಮೂಡಿಸುವ ಕೆಲಸವನ್ನು ಹಲವು ಸಂಘ-ಸಂಸ್ಥೆಗಳು ಮಾಡಿವೆ ಎಂಬುದನ್ನು ಗಮನಿಸಿದ್ದಾರೆ. ನಗರೀಕರಣದ ಹಿನ್ನೆಲೆಯಲ್ಲಿ ಸಾರ್ವಜನಿಕ ಆರೋಗ್ಯಕ್ಕಾಗಿ ಆರೋಗ್ಯ ಕೇಂದ್ರಗಳನ್ನು ತೆರೆದ ಅಂಶಗಳನ್ನು ಚರ್ಚಿಸಿದ್ದಾರೆ (ಪು.೨೧೩). ೧೯೪೪ರ ಮೈಸೂರು ಪಬ್ಲಿಕ್ ಹೆಲ್ತ್ ಆ್ಯಕ್ಟ್ ಜಾರಿಯಾಯಿತು. ಪ್ಲೇಗ್, ಕಾಲರಾ ಇನ್ನೂ ಅನೇಕ ರೋಗಗಳು ಹರಡದಂತೆ ಎಚ್ಚರ ವಹಿಸಲಾಯಿತು ಎಂಬುದರ ವಿವರಗಳನ್ನು ಗಮನಿಸಲಾಯಿತು. ಸಾರ್ವಜನಿಕರ ಆರೋಗ್ಯಕ್ಕಾಗಿ ಕೆಲವು ಕಾಯ್ದೆಗಳ ಮೂಲಕ ಕ್ರಮಗಳನ್ನು ಕೈಗೊಳ್ಳಲಾಯಿತು ಎನ್ನಬಹುದು. ಒಟ್ಟಿನಲ್ಲಿ ಮೈಸೂರು ಸಂಸ್ಥಾನವು ಆರೋಗ್ಯದ ಕ್ಷೇತ್ರದಲ್ಲಿಯೂ

ಪ್ರಗತಿ ಸಾಧಿಸಿತು ಎಂಬುದನ್ನು ಈ ಮಹಾಪ್ರಬಂಧದಲ್ಲಿ ವಿವರಿಸಿದ್ದಾರೆ. ಇಲ್ಲಿ ಬಳಸಿರುವ ಆಕರಗಳು ಪ್ರಾಥಮಿಕವಾಗಿ ವರದಿ, ಕಡತ, ದಾಖಲೆಗಳು ಮುಖ್ಯವಾದವುಗಳು ಎನ್ನಬಹುದು. ಆದರೆ ಸಾರ್ವಜನಿಕರ ಆರೋಗ್ಯದ ದೃಷ್ಟಿಯಿಂದ ಸ್ಥಾಪನೆಯಾದ ಕೆಲವು ಆಸ್ಪತ್ರೆಗಳ ಪಾತ್ರವನ್ನು ಚರ್ಚಿಸಬಹುದಾಗಿತ್ತು.

ರಂಗಪ್ಪ ಎಂ. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ **ಮೈಸೂರು ಒಡೆಯರ ಕಾಲದ ಕೋಟೆಗಳು ಮತ್ತು ಅರಮನೆಗಳ ಒಂದು ಅಧ್ಯಯನ(೨೦೦೬)**[೨೭] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವ ಆನುಷಂಗಿಕ ಆಕರಗಳಲ್ಲಿನ ಸ್ಮಾರಕಗಳ ಪಾತ್ರವನ್ನು ತಿಳಿಸುವ ಒಂದು ಪ್ರಯತ್ನ. ಈ ನಿಟ್ಟಿನಲ್ಲಿ ಮೈಸೂರು ಒಡೆಯರ ಕಾಲದ ಕೋಟೆಗಳು ಮತ್ತು ಅರಮನೆಗಳು ನಿರ್ವಹಿಸಿದ ಪಾತ್ರವನ್ನು ಅವಲೋಕಿಸಲಾಗಿದೆ. ಮೈಸೂರು ಒಡೆಯರ ಮೂಲದ ಬಗೆಗೆ ವಿಚಾರಗಳನ್ನು ತಿಳಿಸಿದ್ದಾರೆ. ಯಾದವ ವಂಶವು ಕುರುಬರ ಮೂಲವನ್ನು ಕುರಿತದ್ದೇ ಆಗಿದೆ ಎಂದಿದ್ದಾರೆ. ಹಾಗೆಯೇ ಆಡಳಿತ ನಡೆಸಿದ ಒಡೆಯರು ಮತ್ತು ಅವರು ನೀಡಿದ ಸಾಂಸ್ಕೃತಿಕ ಕೊಡುಗೆಗಳತ್ತ ಗಮನ ಹರಿಸಿದ್ದಾರೆ.

ಕೋಟೆಗಳು ಮತ್ತು ಅರಮನೆಗಳು ಪ್ರಾಚೀನತೆ, ಅವುಗಳ ಮಹತ್ವವನ್ನು ವಿವರಿಸಿದ್ದಾರೆ. ರಾಜ್ಯಾಡಳಿತದಲ್ಲಿ ಕೋಟೆಗಳ ಮಹತ್ವವನ್ನು ವಿವರಿಸುತ್ತಾ ರಾಜ್ಯದ ಸಪ್ತಾಂಗಗಳಲ್ಲಿ ದುರ್ಗವೂ ಒಂದು ಎಂದು ರಾಜನೀತಿ ಹೇಳುತ್ತದೆ ಎಂಬುದನ್ನು ತಿಳಿಸಿದ್ದಾರೆ. ಪ್ರಭುತ್ವಕೇಂದ್ರಿತವಾಗಿ ಕೋಟೆಗಳು ಮತ್ತು ಅರಮನೆಗಳು ಗುರುತಿಸಿಕೊಂಡಿವೆ. ಆದರೆ ಇಲ್ಲಿ ಜನವರ್ಗದ ಸ್ಥಿತಿಯನ್ನು ಈ ಸ್ಮಾರಕಗಳು ಹೇಗೆ ಹೇಳಿವೆ ಎಂಬುದು ಮುಖ್ಯ. ನಗರಗಳ ವಿಸ್ತರಣೆಗೆ ಮತ್ತು ಬೆಳವಣಿಗೆಯಲ್ಲಿ ಕೋಟೆಗಳು ಪ್ರಮುಖ ಪಾತ್ರ ವಹಿಸಿವೆ. ಆದರೆ ಭಾರತಕ್ಕೆ ಬ್ರಿಟಿಷರ ಆಗಮನದ ನಂತರ ಕೋಟೆಗಳಿಗೆ ಹೆಚ್ಚು ಆಧುನಿಕ ತಂತ್ರಜ್ಞಾನವನ್ನು ಅಳವಡಿಸಲಾಯಿತು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಬ್ರಿಟಿಷರನ್ನು ಎದುರಿಸಲು ಕೋಟೆಗಳ ನಿರ್ಮಾಣದಲ್ಲಿ ಫ್ರೆಂಚ್ ತಂತ್ರಜ್ಞಾನವನ್ನು ಅಳವಡಿಸಿಕೊಂಡರು. ಹಾಗೆಯೇ ಮೈಸೂರಿನ ಒಡೆಯರು ಇದನ್ನು ಮುಂದುವರಿಸಿದರು. ಕಂಠೀರವ ನರಸರಾಜ ಒಡೆಯರು ಮತ್ತು ಚಿಕ್ಕದೇವರಾಜ ಒಡೆಯರು ಮಾಗಡಿ, ಮಧುಗಿರಿ, ಹುಲಿಯೂರುದುರ್ಗ, ಸಾವನದುರ್ಗ, ದೇವನಹಳ್ಳಿ, ಬೆಂಗಳೂರು ಮುಂತಾದ ಕಡೆಗಳಲ್ಲಿ ಕೋಟೆಗಳನ್ನು ಗೆದ್ದು ರಾಜ್ಯವನ್ನು ವಿಸ್ತರಿಸಿದ್ದರು ಎಂಬುದನ್ನು ತಿಳಿಸಿದ್ದಾರೆ(ಪು.೬೭).

ಕೌಟಿಲ್ಯನ ಅರ್ಥಶಾಸ್ತ್ರ, ಶುಕ್ರನೀತಿಸಾರ, ಸಮರಾಂಗಣ ಸೂತ್ರಧಾರ ಮೊದಲಾದ ಶಾಸ್ತ್ರ ಗ್ರಂಥಗಳು ವಿವರಿಸುವ ರೀತಿಯಲ್ಲೇ ಜಲದುರ್ಗ, ವನದುರ್ಗ, ಗಿರಿದುರ್ಗಗಳು ಇಲ್ಲಿ ಪ್ರಧಾನವಾಗಿ ನಿರ್ಮಾಣವಾಗಿವೆ. ಮೈಸೂರು ಒಡೆಯರ ಕಾಲದಲ್ಲಿ ಕೋಟೆಗಳ ಸುತ್ತ 'ಕಂದಕಗಳ' ನಿರ್ಮಾಣ ಸಾಮಾನ್ಯವಾಗಿತ್ತು ಎಂಬುದನ್ನು ವಿವರಿಸಿದ್ದಾರೆ. ಮೈಸೂರು, ಮಧುಗಿರಿ, ರಾಮಗಿರಿ, ನಂದಿದುರ್ಗ, ಹುಲಿದುರ್ಗ, ಶ್ರೀರಂಗಪಟ್ಟಣ, ಸಾವನದುರ್ಗ ಕೋಟೆಗಳ ವಿವರಗಳನ್ನು

ತಿಳಿಸಿದ್ದಾರೆ. ಒಂದೊಂದು ಕೋಟೆಯು ಒಂದೊಂದು ವಿಶೇಷತೆಯನ್ನು ಹೊಂದಿವೆ ಎಂಬುದು ಮುಖ್ಯ(ಪು.೧೩೦-೧೩೫). ಸೈನಿಕರು ಯುದ್ಧ ಮಾಡಲು ಬಳಸುತ್ತಿದ್ದ ವಿಧಾನಗಳು, ಕೋಟೆಗಳನ್ನು ಸೈನಿಕರು ಹಾಗೂ ಅಧಿಕಾರಿಗಳು ಯಾವ ರೀತಿ ನಿರ್ವಹಣೆ ಮಾಡುತ್ತಿದ್ದರು ಎಂಬುದನ್ನು ವಿವರಿಸಿರುತ್ತಾರೆ (ಪು.೨೪೫-೨೬೫). ಹೀಗೆ ಕೋಟೆಗಳ ಭದ್ರತೆ ಮತ್ತು ತಾಂತ್ರಿಕತೆಯ ಹಿನ್ನೆಲೆಯನ್ನು ಇಲ್ಲಿ ಗಮನಿಸಬಹುದು. ಅರಮನೆಗಳು ಕೂಡ ಪ್ರಮುಖ ಪಾತ್ರ ವಹಿಸಿರುವುದನ್ನು ಇಲ್ಲಿ ಗಮನಿಸಬಹುದು. ಇವು ಒಡೆಯರ ಜೀವನ ಶೈಲಿ ಹಾಗೂ ವೈಭವದ ಸಂಕೇತವಾಗಿದೆ ಎಂಬುದು ಮುಖ್ಯ. ಮೈಸೂರನ್ನು ಅರಮನೆಗಳ ನಗರ ಎಂದೇ ಹೆಸರಿಸಲಾಗಿದೆ. ಮೈಸೂರು ಒಡೆಯರ ಪ್ರಮುಖ ಅರಮನೆಗಳ ಬಗ್ಗೆ ವಿವರಣೆಯನ್ನು ನೋಡಬಹುದು. ಅರಮನೆಗಳ ನಿರ್ಮಾಣದಲ್ಲಿ ವೈಜ್ಞಾನಿಕತೆ ಹಾಗೂ ತಾಂತ್ರಿಕತೆಯನ್ನು ಬಳಸಿ ಆಧುನಿಕ ಇಂಜಿನಿಯರ್‌ಗಳ ಸಲಹೆಯಂತೆ ವಿವಿಧ ಶೈಲಿಯಲ್ಲಿ ವೈಭವಯುತವಾಗಿ ನಿರ್ಮಿಸಿದ್ದಾರೆ. ಮೈಸೂರು ಅರಮನೆಗಳಿಗೂ ಮತ್ತು ಬೆಂಗಳೂರು ಅರಮನೆಗಳಿಗೂ ವ್ಯತ್ಯಾಸಗಳನ್ನು ಇಲ್ಲಿ ಗುರುತಿಸಬಹುದಾಗಿದೆ(ಪು.೩೦೩).

ಹೈದರಾಲಿ ಮತ್ತು ಟಿಪ್ಪು ನಿರ್ಮಿಸಿದ ಕೋಟೆಗಳು ಹಾಗೂ ಅರಮನೆಗಳು, ಮೈಸೂರು ಒಡೆಯರ ಜಗನ್ಮೋಹನ ಅರಮನೆ, ಇನ್ನಿತರ ಅರಮನೆಗಳ ವಾಸ್ತುರಚನೆಯು ಮುಖ್ಯವಾಗಿದೆ. ಅರಮನೆ ಸಾಂಸ್ಕೃತಿಕ ಮಹತ್ವದಲ್ಲಿ ವಾಸ್ತುಶಿಲ್ಪ, ಕಲೆ, ಚಿತ್ರಕಲೆ, ಸಂಗೀತ, ಸಾಹಿತ್ಯ ಪರಂಪರೆಯು ಪ್ರಮುಖವಾಗಿದೆ. ಇವು ಆಯಾಯ ಸಂದರ್ಭದ ವಾಸ್ತುರಚನೆಯನ್ನು ಪರಿಚಯಿಸುವುದರೊಂದಿಗೆ ಅಧಿಕಾರ ಮತ್ತು ಸವಲತ್ತುಗಳ ಮೂಲಕ ಕಟ್ಟಿಕೊಂಡ ಯಜಮಾನಿಕೆಯನ್ನು ಸಂಕೇತಿಸುತ್ತದೆ. ರಾಜಪ್ರಭುತ್ವ ರೂಪುಗೊಂಡು ರಾಜಕೀಯ ವೈರತ್ವದ ಹಿನ್ನೆಲೆಯಲ್ಲಿ ಈ ಕೋಟೆಗಳು ನಿರ್ಮಾಣವಾಗಿವೆ ಎಂಬುದನ್ನು ಗಮನಿಸಬೇಕು. ಆದರೆ ಇಲ್ಲಿ ಪ್ರಜೆಗಳ ಮಹತ್ವಾಕಾಂಕ್ಷೆಯು ಗೌಣವಾಗಿದೆ. ಅವು ಪ್ರತಿನಿಧಿಸುತ್ತಿದ್ದುದು ಕೇವಲ ರಾಜರನ್ನು ಮಾತ್ರ, ಅಲ್ಲಿ ಕೋಟೆಗಳು ಮತ್ತು ಅರಮನೆಗಳು ರಾಜಪ್ರಭುತ್ವದ ಅನಿವಾರ್ಯತೆಗಳಾಗಿದ್ದವೇ ಹೊರತು ಪ್ರಜೆಗಳದ್ದಲ್ಲ ಎಂಬುದನ್ನು ಚರ್ಚಿಸುವ ಅಗತ್ಯವಿತ್ತು. ಒಟ್ಟಿನಲ್ಲಿ ಮೈಸೂರು ಒಡೆಯರ ಚರಿತ್ರೆಯಲ್ಲಿ ಕೋಟೆಗಳು ಮತ್ತು ಅರಮನೆಗಳು ಸಾಂಸ್ಕೃತಿಕ ಪರಂಪರೆಯನ್ನು ಉಳಿಸಿವೆ. ಇವುಗಳ ರಕ್ಷಣೆ ಜನರ ಜವಾಬ್ದಾರಿ ಎಂಬುದು ಮನವರಿಕೆ ಆಗಬೇಕಾಗಿದೆ. ಮೈಸೂರು ಒಡೆಯರ ಚರಿತ್ರೆ ಸಾರುವಲ್ಲಿ ಕೋಟೆಗಳು ಮತ್ತು ಅರಮನೆಗಳು ಪ್ರಮುಖ ಪಾತ್ರ ವಹಿಸಿವೆ ಎಂಬುದನ್ನು ಈ ಮಹಾಪ್ರಬಂಧದಲ್ಲಿ ತಿಳಿಸಿದ್ದಾರೆ.

ಪ್ರಶಾಂತ್ ಕೆ.ಸಿ. ಅವರು ಮಂಗಳೂರು ವಿಶ್ವವಿದ್ಯಾಲಯಕ್ಕೆ **ಕನ್‌ಸ್ಟ್ರಕ್ಷನ್ ಆಫ್ ಕರ್ನಾಟಕ: ದಿ ಯೂಸ್ ಆಫ್ ಹಿಸ್ಟರಿ(೨೦೦೭)**[೨೮] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಕರ್ನಾಟಕದ ಚರಿತ್ರೆಯನ್ನು ಕೃತಿಗಳ ಮೂಲಕ ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಕರ್ನಾಟಕ ಚರಿತ್ರೆಯು ಒಂದು ಭಾಗವಾಗಿರುವ ಮೈಸೂರು ಒಡೆಯರ ಚರಿತ್ರೆಯನ್ನು ಗುರುತಿಸಿರುವ ಕೃತಿಗಳ ವಿಶ್ಲೇಷಣೆ ಮಾಡಿರುವುದು ಗಮನಾರ್ಹವಾದುದು. ಮೊದಲು ಮೈಸೂರು ಒಡೆಯರ ಚರಿತ್ರೆಯಲ್ಲಿ ಬ್ರಿಟಿಷ್ ಅಧಿಕಾರಿಗಳ ಸರ್ವೇ ಕಾರ್ಯಗಳನ್ನು ತಮ್ಮ ಕೃತಿಗಳ ಮೂಲಕ ತಿಳಿಸಿದ್ದಾರೆ. ಕಾಲಿನ್ ಮೆಕೆಂಝಿ, ಬುಕಾನನ್, ಮಾರ್ಕ್ ವಿಲ್ಕ್ಸ್,

ಬಿ.ಎಲ್.ರೈಸ್ ಮುಂತಾದವರು ತಮ್ಮ ಕೃತಿಗಳ ಮೂಲಕ ಮೈಸೂರಿನ ಒಡೆಯರ ಚರಿತ್ರೆಯನ್ನು ಕಟ್ಟಿದ್ದಾರೆ. ದೇಶಿ ಆಡಳಿತಗಾರರು, ಚರಿತ್ರೆಕಾರರಾದ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ತಮ್ಮ ಕೃತಿಗಳ ಮೂಲಕ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿದ್ದಾರೆ ಎಂಬುದನ್ನು ಚರ್ಚಿಸಿದ್ದಾರೆ. ಮೆಕೆಂಝಿಯು ಸರ್ವೆ ಕಾಲದಲ್ಲಿ ಶಾಸನ, ಹಸ್ತಪ್ರತಿ, ಪುರಾತತ್ವ ವಸ್ತುಗಳು, ಸ್ಥಳಪುರಾಣಗಳು, ಐತಿಹ್ಯಗಳು ಮೊದಲಾದವುಗಳನ್ನು ಕಲೆ ಹಾಕಿದನು. ಬುಕಾನನ್ 'ಎ ಜರ್ನಿ ಫ್ರಮ್ ಮಡ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್' ಎಂಬ ಕೃತಿಯ ಮೂಲಕ ಮೈಸೂರಿನ ಚರಿತ್ರೆಯನ್ನು ಕಟ್ಟಿಕೊಡುವ ಮಾಹಿತಿಗಳನ್ನು ಕಲೆ ಹಾಕಿದನು. ಬೆಂಜಮಿನ್ ಹೈನೆ, ಜಾನ್ ಲೆಡನ್ ಅವರು ಚಾರಿತ್ರಿಕ ಅಂಶಗಳನ್ನು ಕ್ರೋಡೀಕರಿಸಿದರು. ಮಾರ್ಕ್ ವಿಲ್ಕ್ಸ್‌ನ 'ಹಿಸ್ಟಾರಿಕಲ್ ಸ್ಕೆಚಸ್ ಆಫ್ ಸೌತ್ ಇಂಡಿಯಾ – ಮೂರು ಸಂಪುಟಗಳು, ಸೆಲೆಕ್ಷನ್ ಫ್ರಮ್ ದಿ ರೆಕಾರ್ಡ್ಸ್ ಜನರಲ್ ಮೆಮೊರಂಡಮ್, ಅಡ್ಮಿನಿಸ್ಟ್ರೇಷನ್ ರಿಪೋರ್ಟ್ಸ್, ಲೇಡಿ ಬೌರಿಂಗ್ ಅವರ ಈಸ್ಟರ್ನ್ ಎಕ್ಸ್‌ಪೀರಿಯನ್ಸ್, ಸೆನ್ಸಸ್ ರೀಪೋರ್ಟ್, ಬಿ.ಎಲ್.ರೈಸ್ ಅವರ ಮೈಸೂರು ಗ್ಯಾಸೆಟಿಯರ್ ಎರಡು ಸಂಪುಟಗಳು, ಆನಲ್ಸ್ ಆಫ್ ಮೈಸೂರ್ ರಾಯಲ್ ಫ್ಯಾಮಿಲಿ, ಪ್ಯಾಲೆಸ್ ಹಿಸ್ಟರಿ, 'ಚಾಮರಾಜೇಂದ್ರ ಒಡೆಯರ್ ವಂಶಾರತ್ನಾಕರ' ಮೊದಲಾದ ಕೃತಿಗಳು ಮೈಸೂರು ಒಡೆಯರ ಚರಿತ್ರೆಯನ್ನು ಗುರುತಿಸಿವೆ ಎಂಬುದನ್ನು ವಿವರಿಸಿದ್ದಾರೆ(ಪು.೧೮೧).

ಈ ಮಹಾಪ್ರಬಂಧದಲ್ಲಿ ಸಂಶೋಧಕರು ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ತಮ್ಮ ಕೃತಿಗಳ ಮೂಲಕ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿರುವುದನ್ನು ಚರ್ಚಿಸುತ್ತಾ ಹೋಗುತ್ತಾರೆ. ಮುಖ್ಯವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗೆ ತಿಳಿಸುತ್ತಾ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು 'ಆಕ್ರಮಣಕಾರರು' ಎಂದು ಹೇಳಿರುವ ವಿಲ್ಕ್ಸ್‌ರ ಹೇಳಿಕೆಯನ್ನು ಒಪ್ಪಿಕೊಳ್ಳುತ್ತಾರೆ ಎಂಬುದನ್ನು ವಿವರಿಸಿದ್ದಾರೆ. ಟಿಪ್ಪು ಬಗೆಗೆ ಬರೆಯುತ್ತಾ ಸಿ.ಹಯವದನರಾವ್ ತಮ್ಮ ಅಭಿಪ್ರಾಯವನ್ನು ಹೀಗೆ ವ್ಯಕ್ತಪಡಿಸಿದ್ದಾರೆ. "ಯುದ್ಧ ಒಂದರ ಮೇಲೆ ಮಾತ್ರ ಸಂಪೂರ್ಣವಾಗಿ ಅವಲಂಬಿಸಿದ್ದರೆ ಅವನು ತನ್ನ ಉದ್ದೇಶವನ್ನು(ಮೈಸೂರು ಸಾಮ್ರಾಜ್ಯವನ್ನು ವಿಸ್ತರಿಸುವ ಉದ್ದೇಶ) ಸಾಧಿಸುತ್ತಿದ್ದ. ತನ್ನ ಅಕ್ಕ-ಪಕ್ಕದವರೊಡನೆ ಲಾಭದಾಯಕವಾಗಿ ಸಂಬಂಧ ಬೆಳೆಸಬೇಕಾಗಿತ್ತು." 'ರಾಜನೀತಿ'ಯನ್ನು ಬಿಟ್ಟು 'ಯುದ್ಧ' ಒಂದನ್ನೇ ಅವಲಂಬಿಸಿದ್ದರಿಂದ ಹೈದರ್ ತನ್ನ ಉದ್ದೇಶಗಳನ್ನು ಸಂಪೂರ್ಣವಾಗಿ ಸಾಧಿಸದೇ ಹೋದ ಎಂದಿದ್ದಾರೆ(ಪು.೨೪೯). ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಒಡೆಯರ ಅಧಿಕಾರವನ್ನು ಕಿತ್ತುಕೊಂಡು ಮುಸ್ಲಿಂ ಅಧಿಕಾರವನ್ನು ಸ್ಥಾಪಿಸಿದರು ಎಂದು ವಿವರಿಸಿರುವುದನ್ನು ತಿಳಿಸಿದ್ದಾರೆ. ಒಟ್ಟಿನಲ್ಲಿ ಮೈಸೂರಿನ ಆಡಳಿತದ ಸಂದರ್ಭದಲ್ಲಿ ಸಿ.ಹಯವದನರಾವ್ ಮತ್ತು ಎಂ.ಶಾಮರಾವ್ ಅವರು ಮೈಸೂರನ್ನು ರಾಜಕೀಯವಾಗಿ ಮತ್ತು ಸಾಂಸ್ಕೃತಿಕವಾಗಿ ವಿಜಯನಗರದ ವಾರಸುದಾರ ರಾಜ್ಯವಾಗಿ ಪರಿಗಣಿಸುತ್ತಾರೆ. ಅದರಂತೆ ತಮ್ಮ ಕೃತಿಗಳ ಮೂಲಕ ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟಿದರು ಎಂಬುದನ್ನು ಈ ಮಹಾಪ್ರಬಂಧದಲ್ಲಿ ಚರ್ಚಿಸಿದ್ದಾರೆ. ಆಶ್ಚರ್ಯವೆಂದರೇ ೨೦ನೇ

ಶತಮಾನದ ಪ್ರಮುಖ ಚಳವಳಿಯಾದ ಬ್ರಾಹ್ಮಣೇತರ ಚಳವಳಿಯ ಬಗೆಗೆ ಎಲ್ಲಿಯೂ ಪ್ರಸ್ತಾಪವೇ ಇಲ್ಲದಿರುವುದನ್ನು ಗಮನಿಸಬಹುದಿತ್ತು.

ಪುಷ್ಪಕುಮಾರಿ ಬಿ.ಎಸ್. ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **ಕಲೋನಿಸಂ ಅಂಡ್ ದಿ ಪಟ್ರಿಸಿಯನ್ಸ್ ಆಫ್ ಮೈಸೂರು(೧೮೮೧-೧೯೪೭)**[೨೯] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ವಸಾಹತುಶಾಹಿ ಆಡಳಿತದಲ್ಲಿ ಇಲ್ಲಿನ ಸ್ಥಳೀಯ ಶ್ರೀಮಂತ ವರ್ಗದವರು ಪ್ರಗತಿಪರ ಕಾರ್ಯ ಚಟುವಟಿಕೆಗಳ ಮೂಲಕ ಜನರ ಅಭಿವೃದ್ಧಿ ಕಾರ್ಯಗಳನ್ನು ಯಾವ ರೀತಿ ಕೈಗೊಂಡರು ಎಂಬುದನ್ನು ಚರ್ಚಿಸುತ್ತಾರೆ. ವಸಾಹತುಶಾಹಿ ಆಡಳಿತದಲ್ಲಿ ಸ್ಥಳೀಯ ವರ್ತಕರು ಪ್ರಮುಖ ಪಾತ್ರ ವಹಿಸಿದ್ದಾರೆ. ಸಮಾಜದಲ್ಲಿನ ವರ್ಗಗಳಿಗೆ ಅಗತ್ಯ ಸೌಲಭ್ಯಗಳನ್ನು ಒದಗಿಸುವ ಕಾರ್ಯಗಳನ್ನು ಕೈಗೊಂಡ ವಿಚಾರಗಳು ಮಿಳಿತವಾಗಿವೆ. ಅನೇಕ ಶಾಲೆ, ಕಾಲೇಜುಗಳನ್ನು ಸ್ಥಾಪಿಸಿದರು. ಒಕ್ಕಲಿಗರ ಸಂಘ, ಮೈಸೂರು ಲಿಂಗಾಯತ್ ಎಜುಕೇಷನ್ ಫಂಡ್ ಡೆವಲಪ್ ಮೆಂಟ್ ಆಫ್ ಗಾರ್ಡೆನ್ಸ್ ಮೊದಲಾದ ಸಂಘ-ಸಂಸ್ಥೆಗಳು ಕಾರ್ಯ ನಿರ್ವಹಿಸಿವೆ. ರಾಷ್ಟ್ರೀಯ ಹೋರಾಟ, ೧೮೮೫ರಲ್ಲಿ ರಾಷ್ಟ್ರೀಯ ಕಾಂಗ್ರೆಸ್‌ನ ಉದಯ, ಗಾಂಧೀಜಿ ಅವರ ಆಗಮನ, ಅವರ ಸ್ವಾತಂತ್ರ್ಯ ಚಳವಳಿ, ನಾಲ್ವಡಿ ಕೃಷ್ಣರಾಜ ಒಡೆಯರ್ ಮತ್ತು ದಿವಾನರ ಆಡಳಿತದ ಅವಧಿ ಆಗಿದೆ. ಈ ಅವಧಿಯಲ್ಲಿ ಸ್ಥಳೀಯ ಶ್ರೀಮಂತರು ಯಾವ ರೀತಿ ಅಭಿವೃದ್ಧಿ ಕಾರ್ಯಗಳನ್ನು ಜಾರಿಗೆ ತಂದು ಸರ್ಕಾರಕ್ಕೆ ಸ್ಪಂದಿಸಿದರು ಎಂಬುದು ಮುಖ್ಯ.

ಪುಟ್ಟಣ್ಣಚೆಟ್ಟಿ, ಹೆಚ್.ಸಿ.ಚನ್ನಯ್ಯ, ಹೆಚ್.ಸಿ.ಜವರಯ್ಯ, ಕೆ.ಎಚ್.ರಾಮಯ್ಯ, ಎಂ.ಎ. ಶ್ರೀನಿವಾಸನ್ ಮತ್ತು ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಕಾರ್ಯಚಟುವಟಿಕೆಗಳನ್ನು ಗಮನಿಸಬಹುದು. ಚನ್ನಯ್ಯ ಅವರು ಲೆಜಿಸ್ಲಿಟೀವ್ ಕೌನ್ಸಿಲ್, ಬೆಂಗಳೂರು ಡಿಸ್ಟ್ರಿಕ್ಟ್ ಬೋರ್ಡ್, ಬೆಂಗಳೂರು ಸಿಟಿ ಮುನ್ಸಿಪಲ್ ಕೌನ್ಸಿಲ್, ಮಿಲ್ಲರ್ ಕಮಿಟಿಯಲ್ಲಿ ಸೇವೆ ಸಲ್ಲಿಸವರಾಗಿದ್ದರು. ಕೆ.ಪಿ.ಪುಟ್ಟಣ್ಣಚೆಟ್ಟಿ ಅವರು ಮೈಸೂರಿನ ಯುದ್ಧ ಪರಿಹಾರದ ಬೋರ್ಡ್, ಮಹಾರಾಜ ಸೆಂಟ್ರಲ್ ಆ್ಯಂಡ್ ಎಕ್ಸಿಕ್ಯುಟೀವ್ ಸಿಲ್ವರ್ ಜುಬ್ಲಿ ಕಮಿಟಿ, ವಿಕ್ಟೋರಿಯಾ ಮತ್ತು ಮಿಂಟೋ ಆಸ್ಪತ್ರೆಯ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಹೆಚ್.ಸಿ.ಜವರಯ್ಯ ಮತ್ತು ಎಂ.ಎ.ಶ್ರೀನಿವಾಸ್ ಅವರು ಕೆಲವೊಂದು ಇಲಾಖೆಗಳಲ್ಲಿ ಕಾರ್ಯ ನಿರ್ವಹಿಸಿರುವುದನ್ನು ಇಲ್ಲಿ ಗಮನಿಸಬಹುದು.

ಪುಟ್ಟಣ್ಣಚೆಟ್ಟಿ ಅವರು ಇಂಜನಿರಿಂಗ್, ರೈಲ್ವೆ, ರೆವಿನ್ಯೂ ಪೋಲೀಸ್, ಅಸಿಸ್ಟೆಂಟ್ ಮತ್ತು ಡಿಸ್ಟ್ರಿಕ್ಟ್ ಕಮೀಷನರ್ ಆಗಿ ಕಾರ್ಯ ನಿರ್ವಹಿಸಿದರು. ಬೆಂಗಳೂರಿನಲ್ಲಿ ಪ್ಲೇಗ್ ರೋಗ ಬಂದಾಗ ತಾವೇ ಮುಂದಾಳತ್ವ ವಹಿಸಿ ಸೂಕ್ತ ಕ್ರಮಗಳನ್ನು ಕೈಗೊಂಡರು. ಸರ್.ಎಂ.ವಿಶ್ವೇಶ್ವರಯ್ಯ ಮತ್ತು ಪುಟ್ಟಣ್ಣಶೆಟ್ಟಿ ಅವರು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದರು. ಬೆಂಗಳೂರು ಸಿಟಿ ಅಭಿವೃದ್ಧಿಗಾಗಿ ಕಮಿಟಿಯನ್ನು ಟೌನ್ ಹಾಲ್ ಪ್ರದೇಶದಲ್ಲಿ ರಚಿಸಿ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ಚರ್ಚಿಸಿದ್ದಾರೆ(ಪು.೩೮-೪೦). ಪುಟ್ಟಣ್ಣಚೆಟ್ಟಿ ಅವರು ಟೌನ್‌ಹಾಲ್, ವಿಕ್ಟೋರಿಯಾ ಆಸ್ಪತ್ರೆಯ ಕೆಲ ಭಾಗಗಳಲ್ಲಿ ಹಾಸ್ಟೆಲ್‌ಗಳನ್ನು ನಿರ್ಮಿಸಿದರು. ವೀರಶೈವ, ಬ್ರಾಹ್ಮಣರಿಗೆ ಇತರ ವರ್ಗಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕ ಹಾಸ್ಟೆಲ್‌ಗಳು ನಿರ್ಮಾಣ ಮಾಡಿದರು. ಚನ್ನಯ್ಯ ಅವರು ಗಾಂಧೀಜಿ ಅವರ ಖಾದಿ ಗ್ರಾಮೋದ್ಯೋಗ ಅಡಿಯಲ್ಲಿ

ಹರಿಜನರಿಗೆ ಅನೇಕ ಸೌಲಭ್ಯಗಳನ್ನು ಒದಗಿಸಿದರು. ಚಾಮುಂಡಿ ಬೆಟ್ಟ, ಲಲಿತಮಹಲ್ ಮುಂತಾದ ಕಡೆ ಉದ್ಯಾನಗಳನ್ನು ಸ್ಥಾಪಿಸಿದರು. ಕೆ.ಹೆಚ್.ರಾಮಯ್ಯ ಅವರು ಹಿಂದುಳಿದ ವರ್ಗಗಳ ಕಮಿಟಿಗೆ ಆಯ್ಕೆ ಆದರು. ಇವರು ಮಹಿಳೆಯರ ಅಭಿವೃದ್ಧಿಗೆ ಕಸ್ತೂರ ಬಾ ವಿಲೇಜ್‌ನಲ್ಲಿ ತರಬೇತಿ ನೀಡಿದರು. ಎಂ.ಎ. ಶ್ರೀನಿವಾಸನ್ ಅವರು ಕೂಡ ವ್ಯಾಪಾರದ ಅಭಿವೃದ್ಧಿಗೆ ಶ್ರಮಿಸಿದರು. ಕೆ.ಜಿ.ಎಫ್.ನ ಕಾರ್ಮಿಕರಿಗೆ ಅಗತ್ಯ ಸೌಲಭ್ಯಗಳನ್ನು ಒದಗಿಸಿದರು. ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಅಸಿಸ್ಟೆಂಟ್ ಕಮೀಷನರ್ ಆಗಿ ನೇಮಕವಾದರು. ಸಾರ್ವಜನಿಕರಿಗೆ ಆಸ್ಪತ್ರೆಗಳನ್ನು ಸ್ಥಾಪಿಸಿದರು. ಹೀಗೆ ಸಮಾಜದಲ್ಲಿನ ಉನ್ನತ ವರ್ಗದವರು ಜನರಿಗೆ ಅಗತ್ಯ ಸೌಲಭ್ಯಗಳನ್ನು ಒದಗಿಸಿದರು. ವರ್ತಕ ಸಮುದಾಯಗಳು ಕೂಡ ಅನೇಕ ಹಾಸ್ಟೆಲ್, ಆಸ್ಪತ್ರೆ, ಸ್ಕೂಲ್ ಮತ್ತು ಕ್ಲಬ್‌ಗಳನ್ನು ಸ್ಥಾಪಿಸಿದರು. ಗುಬ್ಬಿ ತೋಟದಪ್ಪ, ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್, ಸಜ್ಜನ್‌ರಾವ್, ಡಿ.ಬನುಮಯ್ಯ, ಗಂಜಾಂ ನಾಗಪ್ಪ ಅವರ ಕುಟುಂಬ, ರಾಜನಹಳ್ಳಿ ಕುಟುಂಬ, ನೆಟ್ಟಕಲ್ಲಪ್ಪ ಮತ್ತು ಸಾಹುಕಾರ್ ಚೆನ್ನಯ್ಯ ಅವರ ಕಾರ್ಯಗಳನ್ನು ವಿವರಿಸಿದ್ದಾರೆ.

ಗುಬ್ಬಿ ತೋಟದಪ್ಪ ಅವರು ನಾಲ್ವಡಿ ಕೃಷ್ಣರಾಜ ಒಡೆಯರಿಂದ ಛತ್ರ ಮತ್ತು ಹಾಸ್ಟೆಲ್‌ಗಳನ್ನು ಉದ್ಘಾಟನೆ ಮಾಡಿಸಿದರು. ಸಾರ್ವಜನಿಕರಿಗೆ ಅನ್ನದ ಛತ್ರ, ಶಿಕ್ಷಣ ಪಡೆಯುವ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಒದಗಿಸಿದ್ದರಿಂದ 'ಧರ್ಮ ಪ್ರವರ್ತಕ' ಎಂಬ ಬಿರುದನ್ನು ಪಡೆದರು. ಆರ್ಕಾಟ್ ನಾರಾಯಣ ಸ್ವಾಮಿ ಮೊದಲಿಯಾರ್ ಇಂಗ್ಲಿಷ್ ಶಾಲೆಯನ್ನು ಪ್ರಾರಂಭಿಸಿದರು. ನೆಟ್ಟಕಲ್ಲಪ್ಪ ಅವರು ಅನೇಕ ಹಾಸ್ಟೆಲ್‌ಗಳನ್ನು ತೆರೆದು ಶಿಕ್ಷಣವನ್ನು ಪ್ರೋತ್ಸಾಹಿಸಿದರು. ಆಸ್ಪತ್ರೆ, ಮೂಕ ಮತ್ತು ಕಿವುಡರ ಶಾಲೆಗಳನ್ನು ಸ್ಥಾಪಿಸಿದರು. ಇವರ ಕಾರ್ಯದಿಂದಾಗಿ ಬಸವನಗುಡಿಯ ಒಂದು ರಸ್ತೆ ನೆಟ್ಟಕಲ್ಲಪ್ಪ ವೃತ್ತ ಎಂದು ಹೆಸರಿಸಿರುವುದನ್ನು ಗಮನಿಸಬಹುದು. ಹೀಗೆ ಅನೇಕ ಶಾಲೆಗಳು, ಆಸ್ಪತ್ರೆಗಳು, ಹಾಸ್ಟೆಲ್‌ಗಳನ್ನು ಸ್ಥಾಪಿಸಿದರು ಎಂಬ ವಿವರಗಳನ್ನು ತಿಳಿಸಿದ್ದಾರೆ.

ಎಸ್.ಚೆನ್ನಯ್ಯ, ವೀರಣ್ಣಗೌಡ ಇವರ ಸಾಮಾಜಿಕ ಕಾರ್ಯಗಳನ್ನು ಗುರುತಿಸಿದ್ದಾರೆ. ಎಸ್.ಸಿ.ಮಲ್ಲಯ್ಯ ಅವರು ಶಿಂಷಾ ನದಿಯ ಬಯಲಿನಲ್ಲಿರುವ ರೈತರಿಗೆ ನೀರು ಒದಗಿಸಿದರು. ಬ್ರಾಹ್ಮಣೇತರ ಚಳವಳಿಯಿಂದ ಬ್ರಾಹ್ಮಣೇತರರಿಗೆ ವೈದ್ಯಕೀಯ, ಇಂಜಿನಿಯರಿಂಗ್ ಶಿಕ್ಷಣದಲ್ಲಿ ಮೀಸಲಾತಿ ಕೊಟ್ಟ ವಿವರ ಮತ್ತು ಪಂಚಮರಿಗೆ ನೀಡಿದ ವಿವರಗಳು ಮುಖ್ಯ. ಸಿ.ಆರ್.ರೆಡ್ಡಿ ಅವರು ಹಿಂದುಳಿದ ವರ್ಗಗಳ ಸಮಿತಿ ರಚಿಸಿ ಸರ್ಕಾರಿ ಶಾಲೆ, ಇತರ ಶಾಲೆಗಳಲ್ಲಿ ಅಸ್ಪೃಶ್ಯರಿಗೆ ಪ್ರವೇಶ ದೊರಕಿಸಿಕೊಟ್ಟರು. ಉಚಿತ ಶಿಕ್ಷಣ, ಹಾಸ್ಟೆಲ್ ಸೌಲಭ್ಯಗಳನ್ನು ಒದಗಿಸಿದ ವಿವರಗಳನ್ನು ಗಮನಿಸಬಹುದು.

ಪುರಾತತ್ವ ಅಧ್ಯಯನಕಾರರು, ಸಂಗೀತ ನೃತ್ಯ ಕಲಾವಿದರು, ಚಿತ್ರಕಲೆ ಕಲಾವಿದರು, ದಿವಾನರು ಇವರ ಎಲ್ಲಾ ಕಾರ್ಯ ಚಟುವಟಿಕೆಗಳತ್ತ ಗಮನ ಹರಿಸಿದ್ದಾರೆ. ಕೊನೆಯದಾಗಿ ನಾಲ್ವಡಿ ಅವರ ಕಾರ್ಯಸಾಧನೆಗಳನ್ನು ಚರ್ಚಿಸಿದ್ದಾರೆ. ಹೀಗೆ ವಸಾಹತುಶಾಹಿ ಕಾಲಘಟ್ಟದಲ್ಲಿ ಮೈಸೂರು ಸಂಸ್ಥಾನದ ಉನ್ನತವರ್ಗದವರು ಆಡಳಿತದ ಅಭಿವೃದ್ಧಿ ಕಾರ್ಯಗಳಲ್ಲಿ ಮುಖಾಮುಖಿ ಆದರು ಎಂಬುದನ್ನು ಚರ್ಚಿಸುತ್ತಾರೆ. ಈ ಮಹಾಪ್ರಬಂಧವು ಸಬಾಲ್ಟರ್ನ್ ನೆಲೆಯಲ್ಲಿ ಅಧ್ಯಯನ

ಕೈಗೊಂಡಿರುವುದಾಗಿದೆ. ಜನಸಾಮಾನ್ಯರ ಸೌಲಭ್ಯಗಳನ್ನು ಒದಗಿಸಿದ ವಿವರಗಳನ್ನು ಸಂಶೋಧಕರು ಚರ್ಚಿಸಿದ್ದಾರೆ. ಇಲ್ಲಿ ಬಳಸಿಕೊಂಡಿರುವ ಆಕರಗಳನ್ನು ಸಾಕಷ್ಟು ಮಟ್ಟಿಗೆ ದುಡಿಸಿಕೊಂಡಿದ್ದಾರೆ.

ರಮೇಶ ವಿ.ಎಂ. ಅವರು **ಟ್ರೇಡ್ ಆ್ಯಂಡ್ ಅರ್ಬನೈಜೇಷನ್ ಇನ್ ಮೈಸೂರು(೧೬೭೩-೧೭೯೯ ಎ.ಡಿ)(೨೦೦೭)**[೩೦] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ಮೈಸೂರು ಸಂಸ್ಥಾನದಲ್ಲಿ ವ್ಯಾಪಾರ ಮತ್ತು ನಗರೀಕರಣದ ಪ್ರಕ್ರಿಯೆಯನ್ನು ಚರ್ಚಿಸಿದ್ದಾರೆ. ಮೊದಲಿನಿಂದಲೂ ವ್ಯಾಪಾರ ವಹಿವಾಟು ಹೇಗೆ ನಡೆಯುತ್ತಿತ್ತು ಎಂಬುದನ್ನು ವಿವರಿಸಿದ್ದಾರೆ. ಹೊಯ್ಸಳರ ಕಾಲದಲ್ಲಿನ ವ್ಯಾಪಾರಿ ಸಂಘಗಳನ್ನು ತಿಳಿಸುತ್ತಾ ಐಯ್ಯಾಳೆ ೫೦೦ ಪ್ರಮುಖ ವ್ಯಾಪಾರ ಸಂಘವಾಗಿತ್ತು ಎಂಬುದನ್ನು ಚರ್ಚಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಊಳಿಗಮಾನ್ಯ ಪದ್ಧತಿಯನ್ನು ಗಮನಿಸ ಬಹುದು. ಇದು ಹೈದರಾಲಿ ಮತ್ತು ಟಿಪ್ಪು ಕಾಲದಲ್ಲಿ ಹಾಗೆಯೇ ಮುಂದುವರಿಯಿತು. ಟಿಪ್ಪು ವ್ಯಾಪಾರ-ವಾಣಿಜ್ಯದಲ್ಲಿ ಸರಕಾರದ ಏಕಸ್ವಾಮ್ಯ ಸ್ಥಾಪಿಸಿದನು. ವ್ಯಾಪಾರದ ಮುಂಗಡವನ್ನು ಜಾರಿಗೆ ತಂದನು. ಫ್ರಾನ್ಸ್, ಇರಾನ್, ತುರ್ಕಿ, ಚೀನಾ ಮತ್ತು ಅಪಘಾನಿಸ್ತಾನಗಳ ಜೊತೆ ವ್ಯಾಪಾರ ಸಂಪರ್ಕ ಹೊಂದಿದ್ದನು ಎಂಬುದರ ವಿವರವನ್ನು ಇಲ್ಲಿ ಗಮನಿಸಬಹುದು.

ಚಿಕ್ಕದೇವರಾಜ ಒಡೆಯರು ಅನೇಕ ವಾಣಿಜ್ಯ ಕೃಷಿ ಬೆಳೆಗಳನ್ನು ಬೆಳೆಯಲು ಪ್ರೋತ್ಸಾಹ ನೀಡಿದರು. ಟಿಪ್ಪುವಿನ ಕಾಲದಲ್ಲಿಯೂ ಹಲವು ರೀತಿಯ ಮರಗಳನ್ನು ವಿವಿಧ ದೇಶಗಳಿಂದ ತರಿಸಿ ಮೈಸೂರು ಮತ್ತು ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ಬೆಳೆಸಿದನು ಎಂಬ ವಿವರಗಳನ್ನು ತಿಳಿಸಿದ್ದಾರೆ. ಲಾಲ್‌ಬಾಗನ್ನು ಹೈದರ್ ನಿರ್ಮಿಸಿದನಾದರೂ ಅದನ್ನು ಅಭಿವೃದ್ಧಿಪಡಿಸುವ ಕಾರ್ಯವನ್ನು ಟಿಪ್ಪು ಕೈಗೊಂಡಿದ್ದ ಎಂಬ ಅಂಶ ಮುಖ್ಯ. ಇಲ್ಲಿ ವಿವಿಧ ರೀತಿಯ ಹೂ ಹಣ್ಣು, ಗಿಡ, ಮರಗಳನ್ನು ಪ್ರಯೋಗಾತ್ಮಕವಾಗಿ ಬೆಳೆಸುವ ಪ್ರಯೋಗಾಲಯ ಆಗಿತ್ತು ಎಂಬುದನ್ನು ನಾವು ಇಲ್ಲಿ ತಿಳಿಯಬಹುದಾಗಿದೆ. ಟಿಪ್ಪು ನೀರಾವರಿ ವ್ಯವಸ್ಥೆಯನ್ನು ಉತ್ತಮಪಡಿಸಲು ಕ್ರಮಗಳನ್ನು ಕೈಗೊಂಡ ವಿವರಗಳನ್ನು ನೋಡಬಹುದು(ಪು.೭೨).

ಇಲ್ಲಿ ಕೃಷಿಯ ಮೇಲೆ ಹೆಚ್ಚಿನ ತೆರಿಗೆ ವಿಧಿಸಿದ್ದರ ವಿರುದ್ಧ ರೈತರನ್ನು ಸಂಘಟಿಸುತ್ತಿದ್ದ ಜಂಗಮರನ್ನು ಕೊಲ್ಲಿಸಿದ ಕ್ರೌರ್ಯದ ಬಗ್ಗೆ ಗಮನ ಹರಿಸಿಲ್ಲ. ಹೈದರಾಲಿಯು ನೇರವಾಗಿ ಸರ್ಕಾರಕ್ಕೆ ತೆರಿಗೆಯನ್ನು ಕಟ್ಟುವ ವ್ಯವಸ್ಥೆ ಮಾಡಿದನು. ಆ ಮೂಲಕ ರೈತರ ಶೋಷಣೆಯು ತಪ್ಪಿತು. ಟಿಪ್ಪು ವಾಣಿಜ್ಯನೀತಿಯನ್ನು ಕಟ್ಟುನಿಟ್ಟಾಗಿ ಪಾಲಿಸಿದನು. ಏಲಕ್ಕಿ, ಶ್ರೀಗಂಧ, ತೆಂಗು, ಅಡಿಕೆ, ರೇಷ್ಮೆ, ಆಭರಣ ಮೊದಲಾದವುಗಳನ್ನು ಇಲ್ಲಿಯ ವಿದೇಶಿ ವರ್ತಕರು ಕೊಳ್ಳಲು ಅವಕಾಶ ಇರಲಿಲ್ಲ. ಬದಲಾಗಿ ರಾಜ್ಯ ಹತೋಟಿಯ ವಾಣಿಜ್ಯ ಇಲಾಖೆ ಆ ಕಾರ್ಯವನ್ನು ನಿರ್ವಹಿಸುತ್ತಿದ್ದಿತು. ಈ ನಿಟ್ಟಿನಲ್ಲಿ ಟಿಪ್ಪು ಕಟ್ಟುನಿಟ್ಟಾದ ವಾಣಿಜ್ಯ ನೀತಿಯನ್ನು ಅನುಸರಿಸಿದನು ಎಂಬ ವಿವರಗಳನ್ನು ನೋಡಬಹುದು(ಪು.೯೦).

ಕೃಷಿಯ ವಾಣಿಜ್ಯೀಕರಣದಿಂದಾಗಿ ಸಾರಿಗೆ ವ್ಯವಸ್ಥೆಯು ಉತ್ತಮಗೊಂಡಿತು. ರಸ್ತೆಗಳ ನಿರ್ಮಾಣ, ರೈಲ್ವೆಯ ಅಭಿವೃದ್ಧಿ, ಬಂದರು ಪಟ್ಟಣಗಳ ಮೂಲಕ ವ್ಯಾಪಾರ-ವಾಣಿಜ್ಯವು

ಅಭಿವೃದ್ಧಿಗೊಂಡಿತು. ಹಾಗೆಯೇ ವ್ಯಾಪಾರ-ವಾಣಿಜ್ಯದ ಮಾಧ್ಯಮವಾಗಿ ನಾಣ್ಯಗಳು, ನೋಟುಗಳು ಪ್ರಮುಖವಾದವು.

ಸಮಾಜದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂಬ ಚತುರ್ವರ್ಣಗಳು ಇವೆ. ಬ್ರಾಹ್ಮಣರು ವೇದ್ಯಾಯನ, ಕ್ಷತ್ರಿಯರು ರಾಜ್ಯ ರಕ್ಷಣೆ, ವೈಶ್ಯರು ವ್ಯಾಪಾರ ಮತ್ತು ಶೂದ್ರರು ಕೆಳಮಟ್ಟದ ಕೆಲಸ ಮಾಡುತ್ತಿದ್ದರು ಎಂಬುದನ್ನು ತಿಳಿಸುತ್ತಾ, ಇಲ್ಲಿ ಜೈನರು, ಬಣಜಿಗರು ಮೊದಲಾದ ವ್ಯಾಪಾರಸ್ಥರು ತಮ್ಮದೇ ಆದ ಸಂಘಗಳನ್ನು ಹೊಂದಿದ್ದರು. ಹೀಗೆ ವ್ಯಾಪಾರದ ಉದ್ದೇಶ ಹೊಂದಿದ್ದು, ಅನಂತರ ನಗರೀಕರಣ ಪ್ರಕ್ರಿಯೆಗೆ ದಾಪುಗಾಲನ್ನು ಹಾಕಲು ಕಾರಣವಾಯಿತು ಎಂಬುದನ್ನು ಸಂಶೋಧಕರು ಈ ಮಹಾಪ್ರಬಂಧದಲ್ಲಿ ಚರ್ಚಿಸುತ್ತಾ ಹೋಗುತ್ತಾರೆ.

ಗೌರಿ ನಾಯ್ಡು ಎಚ್. ಅವರು **ಇಂಪ್ಯಾಕ್ಟ್ ಆಫ್ ಅರ್ಬನೈಜೇಷನ ಆನ್ ಪಬ್ಲಿಕ್ ಹೆಲ್ತ್ ಇನ್ ಪ್ರಿನ್ಸ್ಲಿ ಮೈಸೂರು ೧೮೩೧-೧೯೪೭(೨೦೦೭)**[೩೧] ಎಂಬ ಪಿಎಚ್.ಡಿ ಮಹಾಪ್ರಬಂಧವನ್ನು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ್ದಾರೆ. ನಗರೀಕರಣದ ಪ್ರಕ್ರಿಯೆಯಲ್ಲಿ ಸಾರ್ವಜನಿಕ ಆರೋಗ್ಯದ ಚರ್ಚೆಯನ್ನು ಈ ಮಹಾಪ್ರಬಂಧದಲ್ಲಿ ನೋಡಬಹುದು. ವಸಾಹತುಶಾಹಿ ಆಡಳಿತದ ಕಾಲದಲ್ಲಿ ಮೈಸೂರು, ಬೆಂಗಳೂರು ಮತ್ತು ಕೆ.ಜಿ.ಎಫ್.(ಕೋಲಾರ) ಹೇಗೆ ನಗರೀಕರಣಕ್ಕೆ ಒಳಗಾದವು ಎಂಬುದನ್ನು ಚಿತ್ರಿಸುತ್ತಾರೆ. ಬ್ರಿಟಿಷರು ಇಲ್ಲಿನ ಜನರ ಮೇಲೆ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಪ್ರಭಾವ ಬೀರಿದರು. ನಗರಗಳಲ್ಲಿ ವ್ಯಾಪಾರ, ವಹಿವಾಟು ಚೆನ್ನಾಗಿ ನಡೆಯುತ್ತಿತ್ತು. ಕೆ.ಜಿ.ಎಫ್. ಗಣಿಗಾರಿಕೆಯು ಕಾರ್ಮಿಕರನ್ನು ಆಕರ್ಷಿಸಿತು. ಮಿಲಿಟರಿ ವ್ಯವಸ್ಥೆಯಲ್ಲಿ ಬೆಂಗಳೂರಿನ ರೈಲ್ವೆ ನಿಲ್ದಾಣದ ಹತ್ತಿರ ಬ್ರಿಟಿಷ್ ಸೈನ್ಯದ ದಂಡು ಬೀಡು ಬಿಟ್ಟಿತ್ತು. ಇವರ ಜೀವನಕ್ಕೆ ಬೇಕಾದ ಅಗತ್ಯತೆಗಳನ್ನು ಒದಗಿಸುವ ತುರ್ತು ಉಂಟಾಯಿತು. ವ್ಯಾಪಾರದ ದೃಷ್ಟಿಯಲ್ಲಿ ಬೆಂಗಳೂರಿನ ಪೇಟೆಗಳು ಪ್ರಮುಖ ಪಾತ್ರ ವಹಿಸಿವೆ. ದೊಡ್ಡಪೇಟೆ, ಚಿಕ್ಕಪೇಟೆ, ತರಗುಪೇಟೆ, ಅರಳೆಪೇಟೆ ಮತ್ತು ನಗರ್ತಪೇಟೆ ಮುಂತಾದವು ವ್ಯಾಪಾರದ ಮುಖ್ಯ ಪೇಟೆಗಳಾಗಿದ್ದವು. ಬೆಂಗಳೂರಿನಲ್ಲಿ ಮಾರ್ಕ್ ಕಬ್ಬನ್‌ನು ಅಂಚೆ, ಪೊಲೀಸ್, ಔಷಧಿಗಳ ಮಳಿಗೆ, ಕಾನೂನು, ಶಿಕ್ಷಣ ಮುಂತಾದ ಸೌಲಭ್ಯಗಳನ್ನು ಒದಗಿಸಿದನು ಎಂಬ ವಿಚಾರಗಳನ್ನು ವಿವರಿಸಿದ್ದಾರೆ(ಪು.೩೮-೪೫). ವ್ಯಾಪಾರದ ಸಂಪರ್ಕದಿಂದಾಗಿ ಜನರ ವಾಸ್ತವ್ಯ ಹೆಚ್ಚಾಗಿ ಬೆಂಗಳೂರು ಮತ್ತು ಮೈಸೂರುಗಳಲ್ಲಿ ಜನಸಂಖ್ಯೆ ಏರುತ್ತಾ ಹೋಯಿತು. ಇದರಿಂದ ಜನರಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ಪ್ರಕ್ರಿಯೆ ಆರಂಭವಾಯಿತು. ಈ ಹಿನ್ನೆಲೆಯಲ್ಲಿ ನಗರೀಕರಣದ ಪ್ರಕ್ರಿಯೆಯ ಕಾರ್ಯ ಮುಂದುವರಿಯಿತು ಎಂಬ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ.

ಹಾಗೆಯೇ ಕೆ.ಜಿ.ಎಫ್.ನಲ್ಲಿ ಯಾವ ರೀತಿ ನಗರೀಕರಣ ಪ್ರಾರಂಭವಾಯಿತು ಎಂಬುದನ್ನು ತಿಳಿಸುತ್ತಾ ಹೋಗುತ್ತಾರೆ. ಇಲ್ಲಿ ಹೇಗೆ ಚಿನ್ನವನ್ನು ಹೊರತೆಗೆಯುತ್ತಿದ್ದರು ಎಂಬ ವಿಚಾರಗಳು ಮುಖ್ಯ. ಇಲ್ಲಿನ ಕಾರ್ಮಿಕರು ರೆಡ್ಡಿ, ಒಕ್ಕಲಿಗರು, ಕುಂಬಾರರು, ಅಗಸರು, ಬಡಗಿಗಳು, ಬಣಜಿಗರು, ತಿಗಳರು, ವಡ್ಡರು, ಕುಂಬಾರರು, ಗೊಲ್ಲರು, ಬ್ರಾಹ್ಮಣರು, ಅಕ್ಕಸಾಲಿಗರು,

ಕಮ್ಮಾರರು, ಕೋಮಟಿಗರು, ಮಾದಿಗರು ಮತ್ತು ಹೊಲೆಯರು ಇನ್ನೂ ಮುಂತಾದ ಜಾತಿಗಳಿಗೆ ಸೇರಿದವರಾಗಿದ್ದರು. ಈ ಗಣಿಗಾರಿಕೆಯು ಪ್ರಾರಂಭವಾದ ನಂತರ ಜನಸಂಖ್ಯೆ ಇಲ್ಲಿ ಹೆಚ್ಚಾಗುತ್ತಾ ಹೋಯಿತು. ಇದಕ್ಕೆ ಅನುಗುಣವಾಗಿ ಹೊಸ ಬಡಾವಣೆಗಳನ್ನು ನಿರ್ಮಿಸಿದರು. ಈ ಬಡಾವಣೆಗಳಿಗಾಗಿ ರಸ್ತೆ, ನೀರು ಮುಂತಾದ ಮೂಲಭೂತ ಸೌಲಭ್ಯಗಳನ್ನು ಒದಗಿಸಿದರು. ಈ ಹಿನ್ನೆಲೆಯಲ್ಲಿ ನಗರೀಕರಣ ಪ್ರಕ್ರಿಯೆ ಪ್ರಾರಂಭವಾಯಿತು ಎಂಬುದನ್ನು ಚರ್ಚಿಸಿದ್ದಾರೆ.

ಬೆಂಗಳೂರು, ತುಮಕೂರು ಮತ್ತು ಕೋಲಾರ ಪ್ರದೇಶಗಳಲ್ಲಿ ಹೆಚ್ಚು ಗಣಿಗಾರಿಕೆ ಕಾರ್ಖಾನೆ, ಮಿಲ್‌ಗಳು ಸ್ಥಾಪನೆ ಆಗಿ ಜನಸಂಖ್ಯೆ ಏರುತ್ತಾ ಹೋಯಿತು. ಜನಸಂಖ್ಯೆಗೆ ಅನುಗುಣವಾಗಿ ವಸತಿ ಕಲ್ಪಿಸಲು ಕಾಲೋನಿಗಳು ಸ್ಥಾಪನೆಯಾದವು. ಆದರೆ ಕೆಲವು ಮೂಲಭೂತ ಸೌಕರ್ಯಗಳ ಕೊರತೆಯಿಂದ ನೈರ್ಮಲ್ಯದ ಕಡೆಗೆ ಗಮನ ಹರಿಸಲು ಸಾದ್ಯವಾಗದೇ ಕಾಲರಾ ರೋಗವು ಹೇಗೆ ಉಲ್ಬಣಗೊಂಡಿತು ಎಂಬುದನ್ನು ವಿವರಿಸಿದ್ದಾರೆ(ಪು.೨೩೧). ಹಾಗೆಯೇ ಪ್ಲೇಗ್ ರೋಗವನ್ನು ತಡೆಗಟ್ಟಲು ಪ್ರತ್ಯೇಕವಾದ ಇಲಾಖೆಯನ್ನು ಸ್ಥಾಪಿಸಿ ಕಮೀಷನರ್‌ಗಳನ್ನು ನೇಮಿಸಲಾಯಿತು. ಹೀಗೆ ಹಂತ ಹಂತವಾಗಿ ಮೈಸೂರು ಸಂಸ್ಥಾನ ಅಭಿವೃದ್ಧಿಯತ್ತ ದಾಪುಗಾಲು ಹಾಕುತ್ತಿರುವಾಗ ಪ್ರಾರಂಭವಾದ ಗಣಿಗಾರಿಕೆ, ಕಾರ್ಖಾನೆಗಳಿಂದಾಗಿ ಕೆಲಸಕ್ಕಾಗಿ ಆಕರ್ಷಿತ ಜನರು ಇಲ್ಲಿಗೆ ಬಂದು ನೆಲೆಸಿದರು. ರಕ್ಷಣೆಯ ನೆಪದಲ್ಲಿ ಸೈನಿಕರ ದಂಡು ಕೆಲವೊಂದು ಸ್ಥಳಗಳಲ್ಲಿ ಬೀಡು ಬಿಟ್ಟಿತು. ಈ ಹಿನ್ನೆಲೆಯಲ್ಲಿ ಜನರಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಲು ನಗರೀಕರಣ ಪ್ರಾರಂಭವಾಯಿತು. ಹಾಗೆಯೇ ಸಾರ್ವಜನಿಕರಿಗೆ ತಗಲುವ ರೋಗಗಳನ್ನು ತಡೆಗಟ್ಟಲು ಯಾವ ಕ್ರಮಗಳನ್ನು ಕೈಗೊಳ್ಳಲಾಯಿತು ಎಂಬುದರ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಜನಮುಖಿ ಅಧ್ಯಯನಕ್ಕೆ ಹೆಚ್ಚು ಒತ್ತುಕೊಟ್ಟು ಸಮಾಜದಲ್ಲಿನ ಸಾರ್ವಜನಿಕರ ಆರೋಗ್ಯದತ್ತ ಗಮನ ಹರಿಸಿರುವುದು ಸೂಕ್ತವಾಗಿದೆ. ಇಲ್ಲಿ ಬಳಸಿಕೊಂಡಿರುವ ಆಕರಗಳಲ್ಲಿ ಪ್ರಾಥಮಿಕ ಆಕರಗಳು ಮುಖ್ಯವಾದವು. ರಾಜ್ಯ ಪತ್ರಾಗಾರ ಇಲಾಖೆಯಲ್ಲಿ ದಾಖಲೆ, ಕಡತಗಳನ್ನು ಬಳಸಿಕೊಂಡಿರುವುದು ಮುಖ್ಯವಾಗಿದೆ.

**ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣ: ಒಂದು ಅಧ್ಯಯನ ೧೮೮೧–೧೯೪೭(೨೦೦೭)**[೨] ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಿ.ಸುಶೀಲಮ್ಮ ಅವರು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧವು ಮೈಸೂರು ಸಂಸ್ಥಾನದಲ್ಲಿ ಸ್ತ್ರೀಯರ ವಿಮೋಚನೆ ಮತ್ತು ಸ್ತ್ರೀಯರನ್ನು ಪ್ರಗತಿ ಪಥದಲ್ಲಿ ಒಯ್ಯಲು ಮೈಸೂರು ಮಹಾರಾಜರು ಹಾಗೂ ದಿವಾನರು ಕಾಲಕಾಲಕ್ಕೆ ಕೈಗೊಂಡ ಅನೇಕ ಗಣನೀಯ ಕಾರ್ಯಕ್ರಮಗಳು, ಯೋಜನೆಗಳು, ಸುಧಾರಣೆಗಳು ಮತ್ತು ಅವರು ಜಾರಿಗೆ ತಂದ ಕಾನೂನುಗಳು ಅತ್ಯಂತ ಶ್ಲಾಘನೀಯವಾಗಿವೆ ಎಂಬ ವಿಚಾರವನ್ನು ತಿಳಿಸುತ್ತದೆ. ಈ ಕಾನೂನುಗಳಿಗೆ ಜನರ ಪ್ರತಿಕ್ರಿಯೆ ಮತ್ತು ವಿರೋಧ, ವಿಶೇಷವಾಗಿ ಸನಾತನ ಧರ್ಮ ಹಾಗೂ ಜಾತೀಯತೆಯ ಮತಸಂಬಂಧದ ಕಟ್ಟುಪಾಡುಗಳು ಅಂದಿನ ಸಾಮಾಜಿಕ ವ್ಯವಸ್ಥೆ, ಸ್ತ್ರೀಯರ ಸ್ಥಾನಮಾನ, ಪಾಶ್ಚಿಮಾತ್ಯರ ಸಂಸ್ಕೃತಿ ಮತ್ತು ಶಿಕ್ಷಣದ ಪ್ರಭಾವ ಮತ್ತು ಅಂದಿನ ಸಮಾಜ ಸುಧಾರಕರು ಸ್ತ್ರೀಯರ ಪುರೋಭಿವೃದ್ಧಿಗಾಗಿ

ವಹಿಸಿದಂತಹ ಪಾತ್ರ, ಅವರು ಕೈಗೊಂಡ ಕ್ರಮಗಳ ವಿವರಗಳನ್ನು ಈ ಮಹಾಪ್ರಬಂಧದಲ್ಲಿ ತಿಳಿಸಲಾಗಿದೆ.

ಮೈಸೂರು ಸಂಸ್ಥಾನವು ೧೮೮೧-೧೯೪೭ರವರೆಗೆ ಒಡೆಯರ ಆಳ್ವಿಕೆ ಮತ್ತು ಪ್ರಜಾಪ್ರಭುತ್ವ ಸರ್ಕಾರದ ಅಡಿಯಲ್ಲಿ ಕೈಗೊಂಡ ಮಹಿಳಾ ಕಾರ್ಯಗಳನ್ನು ಇಲ್ಲಿ ಚರ್ಚಿಸಲಾಗಿದೆ. ಸಬಾಲ್ಟರ್ನ್ ಪಂಥದ ನೆಲೆಯಲ್ಲಿ ಮೂಡಿಬಂದಿರುವ ಈ ಮಹಾಪ್ರಬಂಧವು ಮಹಿಳಾ ಕಲ್ಯಾಣದ ಬಗೆಗೆ ಚರ್ಚಿಸಲಾಗುತ್ತದೆ. ಹಳೇ ಮೈಸೂರು ಸಂಸ್ಥಾನವು ಆಧುನಿಕ ಮೈಸೂರು ಸಂಸ್ಥಾನ ಎಂದು ಪಲ್ಲಟಗೊಳ್ಳುವಾಗ ಆದ ಸಾಮಾಜಿಕ ಬದಲಾವಣೆಗಳನ್ನು ಮಹಿಳಾ ದೃಷ್ಟಿಯಿಂದ ನೋಡಿದಾಗ ಈ ಬದಲಾವಣೆಗಳು ಬ್ರಿಟಿಷರ ಸಾಮ್ರಾಜ್ಯಶಾಹಿ ನೀತಿಯ ಒತ್ತಡಗಳಿಂದಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ ಕಂಡುಬಂದವು ಎಂದರೆ ತಪ್ಪಾಗಲಾರದು.

ಶೂದ್ರರು ಕೆಳಮಟ್ಟದಲ್ಲಿ ಇರಲು ಅವರ ಅನಕ್ಷರತೆಯೇ ಕಾರಣವೆಂದು ತಿಳಿದು ಜ್ಯೋತಿರಾವ್ ಫುಲೆ ಅವರು ಸ್ವತಃ ಶಾಲೆಗಳನ್ನು ಪ್ರಾರಂಭಿಸಿ, ಶೂದ್ರ ಹುಡುಗ ಮತ್ತು ಹುಡುಗಿಯರಿಗೆ ಶಿಕ್ಷಣ ನೀಡಲು ಮುಂದಾದರು. ತನ್ನ ಹೆಂಡತಿಯಾದ ಸಾವಿತ್ರಿಬಾಯಿ ಫುಲೆ ಅವರಿಗೆ ಮೊದಲು ಶಿಕ್ಷಣವನ್ನು ನೀಡಿ ಶೂದ್ರ ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಹೇಳಿ ಕೊಡಲು ನೇಮಿಸಿದರು. ಆದರೆ ಸನಾತನಿಗಳು ಇದನ್ನು ವಿರೋಧಿಸಿದರು. ಆದರೂ ಶೂದ್ರರಿಗೆ ಶಿಕ್ಷಣದ ಸೌಲಭ್ಯಗಳನ್ನು ಒದಗಿಸಿದರು. ಇವರಿಬ್ಬರ ಫಲದಿಂದಲೇ ಭಾರತಕ್ಕೆ ಡಾ.ಬಿ.ಆರ್.ಅಂಬೇಡ್ಕರ್ ಅವರು ಲಭ್ಯವಾಗಿದ್ದಾರೆ ಎನ್ನಬಹುದು. ಇಲ್ಲಿ ಮಹಿಳಾ ಅಭಿವೃದ್ಧಿಗೆ ಫುಲೆ ಅವರ ಪಾತ್ರ ಮುಖ್ಯವಾದುದು ಎಂಬುದನ್ನು ಇಲ್ಲಿ ಗಮನಿಸಬಹುದು.

ವಸಾಹತುಶಾಹಿ ಸಂದರ್ಭದಲ್ಲಿ ಅನೇಕ ಸಾಮಾಜಿಕ ಬದಲಾವಣೆಗಳಾದವು ಎಂಬುದು ಮುಖ್ಯ ಮೊದಲು ಸ್ತ್ರೀಯರು ಶಿಕ್ಷಣಕ್ಕೆ ಅನರ್ಹರು ಎಂಬುದಿತ್ತು. ಆದರೆ ಮೊದಲು ಪಾಶ್ಚಿಮಾತ್ಯರ ಪ್ರಭಾವದಿಂದ ಸ್ತ್ರೀಯರು ಶಿಕ್ಷಣ ಪಡೆಯುವಂತಾಯಿತು. ಸ್ತ್ರೀ ಶಿಕ್ಷಣಕ್ಕೆ ಸಂಬಂಧಿಸಿದಂತೆ ವಾಣಿವಿಲಾಸ ಕಾಲೇಜು, ಮಹಾರಾಣಿ ಕಾಲೇಜುಗಳು, ಇತರ ಶಿಕ್ಷಣ ಸಂಸ್ಥೆಗಳು ಪ್ರಾರಂಭವಾದವು. ಅನಂತರ ಮೈಸೂರಿನಲ್ಲಿ ಸುಧಾರಣಾ ಚಳವಳಿಗಳು ಪ್ರಾರಂಭವಾದ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ. ವಿಧವಾವಿವಾಹ, ಸತಿಪದ್ಧತಿ ಹಾಗೂ ಬಾಲ್ಯವಿವಾಹ ನಿರ್ಮೂಲನ, ಸ್ತ್ರೀ-ಶಿಕ್ಷಣ ಮುಂತಾದ ವಿಚಾರಗಳಿಗೆ ಸುಧಾರಣಾ ಚಳವಳಿಗಳು ಪ್ರಾರಂಭವಾದವು.

೧೯ನೇ ಶತಮಾನದ ಅಂತ್ಯದಲ್ಲಿ ಪ್ರಾರಂಭವಾದ ಬ್ರಾಹ್ಮಣೇತರ ಚಳವಳಿ ಈ ವರ್ಣ ಪದ್ಧತಿಯನ್ನು ಬ್ರಾಹ್ಮಣರು ಸ್ವಲಾಭಕ್ಕಾಗಿ ಹುಟ್ಟು ಹಾಕಿದರು ಎಂಬುದು ಮುಖ್ಯ(ಪು.೮೮). ಸ್ತ್ರೀಯರ ಏಳ್ಗೆಗಾಗಿ ದುಡಿದಂತಹ ಸಾಮಾಜಿಕ ಸಂಸ್ಥೆಗಳು, ಪೌರ ಮತ್ತು ಸಾಮಾಜಿಕ ಪ್ರಗತಿ ಸಂಸ್ಥೆಗಳು, ಬ್ರಹ್ಮಸಮಾಜ, ಆರ್ಯಸಮಾಜ, ಥಿಯೋಸಾಫಿಕಲ್ ಸೊಸೈಟಿ, ಮಹಿಳಾ ಸೇವಾ ಸಮಾಜಗಳು ಹಾಗೂ ಇತರ ಸಂಸ್ಥೆಗಳ ವಿವರಗಳನ್ನು ವಿವರಿಸಿದ್ದಾರೆ. ಕ್ರೈಸ್ತ ಮಿಷನರಿಗಳು ಕೈಗೊಂಡ ಕಾರ್ಯಗಳು ಪ್ರಮುಖವಾದವು. ಬಾಸೆಲ್ ಮಿಷನರಿಯು ಸ್ತ್ರೀ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿರುವುದನ್ನು ಗಮನಿಸಬಹುದು. ಮೈಸೂರಿನಲ್ಲಿ ಸ್ತ್ರೀಯರ ಕಲ್ಯಾಣಕ್ಕಾಗಿ ಸ್ಥಾಪನೆಯಾದ

ಭಗಿನಿ ಸೇವಾ ಸಮಾಜವು ಸ್ತ್ರೀಯರ ಶಿಕ್ಷಣದ ಜೊತೆಗೆ ವೃತ್ತಿ ತರಬೇತಿಯನ್ನು ನೀಡುತ್ತಿತ್ತು. ವಾಣಿವಿಲಾಸ ಮಹಿಳಾ ಕ್ಲಬ್, ಶಾರದ ಸ್ತ್ರೀಸಮಾಜ ಟ್ರಸ್ಟ್, ಚಿಲ್ಡ್ರನ್ಸ್ ಬುಕ್ ಕೌನ್ಸಿಲ್ ಇನ್ನೂ ಮುಂತಾದ ಸಂಘ-ಸಂಸ್ಥೆಗಳ ಮಹಿಳಾ ಅಭಿವೃದ್ಧಿ ಕಾರ್ಯಗಳನ್ನು ಕ್ರೋಡೀಕರಿಸಿದ್ದಾರೆ. ಇಂದಿಗೂ ಕೆಲವೊಂದು ಟ್ರಸ್ಟ್‌ಗಳು ಮಹಿಳಾ ಅಭಿವೃದ್ಧಿಗೆ ಕಾರ್ಯಗಳನ್ನು ರೂಪಿಸುತ್ತಿವೆ ಎಂಬುದು ಮುಖ್ಯ.

ಮಹಿಳಾ ಸ್ಥಾನಮಾನದಲ್ಲಿ ಸುಧಾರಣೆಗಾಗಿ ಅನೇಕ ಕಾನೂನುಗಳನ್ನು ಜಾರಿಗೊಳಿಸಿದರು. ೧೮೨೯ರಲ್ಲಿ ಸತಿಸಹಗಮನ ಪದ್ಧತಿಯನ್ನು ರದ್ದುಗೊಳಿಸಿದರು. ೧೮೫೬ರಲ್ಲಿ ವಿಧವಾ ಪುನರ್ ವಿವಾಹ ಕಾಯಿದೆ, ೧೮೭೨ರ ಅಂತರ್‌ಜಾತಿ ವಿವಾಹ ಕಾಯ್ದೆ, ೧೯೩೭ರ ಹಿಂದೂ ಉತ್ತಾರಾಧಿಕಾರಿ ಕಾಯಿದೆ, ೧೯೪೫ರ ಹಿಂದೂ ವಿವಾಹ ದೌರ್ಬಲ್ಯಗಳ ನಿರ್ಮೂಲನಾ ಕಾಯಿದೆ, ೧೯೪೬ರ ಹಿಂದೂ ವಿವಾಹ ಸಿಂಧೂತ್ವ ಕಾಯಿದೆ, ೧೯೫೬ರ ಹಿಂದೂ ದತ್ತು ಸ್ವೀಕಾರ ಮತ್ತು ಜೀವನಾಂಶದ ಕಾಯಿದೆ, ೧೯೫೬ರಲ್ಲಿ ಸ್ತ್ರೀಯರು ಮತ್ತು ಹುಡುಗಿಯರನ್ನು ಅನೈತಿಕವಾಗಿ ಸಾಗಾಣಿಕೆ ಮಾಡುವುದನ್ನು ನಿಗ್ರಹಿಸುವ ಕಾಯಿದೆ ಹೀಗೆ ಅನೇಕ ಕಾಯ್ದೆಗಳನ್ನು ಜಾರಿಗೆ ತಂದು ಮಹಿಳೆಯ ಸ್ಥಾನಮಾನವನ್ನು ಉನ್ನತೀಕರಿಸಿದ ವಿವರಗಳನ್ನು ಇಲ್ಲಿ ತಿಳಿಸಿದ್ದಾರೆ. ಈ ನಿಟ್ಟಿನಲ್ಲಿ ಸ್ವಾತಂತ್ರ್ಯ ಬರುವ ಮೊದಲು ಮತ್ತು ಸ್ವಾತಂತ್ರ್ಯ ಬಂದ ನಂತರವೂ ಸಂವಿಧಾನಾತ್ಮಕವಾಗಿ ಕೆಲವೊಂದು ಮಸೂದೆಗಳ ಮೂಲಕ ಸುಧಾರಣೆಗಳನ್ನು ಕೈಗೊಂಡ ವಿವರಗಳನ್ನು ಕಾಣಬಹುದು.

ಈ ಮಹಾಪ್ರಬಂಧದಲ್ಲಿ ಮೊದಲಿಗೆ ಶಿಕ್ಷಣ ಪಡೆದ ಮಹಿಳೆಯರು ಯಾರು, ಅವರು ಮಹಿಳಾ ಅಭಿವೃದ್ಧಿಗೆ ಯಾವ ರೀತಿಯ ಕಾರ್ಯಕ್ರಮಗಳನ್ನು ಕೈಗೊಂಡರು ಎಂಬುದರ ಕಡೆಗೆ ಗಮನ ಹರಿಸಬೇಕಾಗಿತ್ತು. ಕೆ.ಡಿ.ರುಕ್ಮಿಣಿಯಮ್ಮ, ಶ್ರೀರಂಗಮ್ಮ, ಸುಬ್ಬಮ್ಮ ಎಂಬ ಮೂವರು ಪ್ರಥಮ ಭಾರಿಗೆ ಬಿ.ಎ. ಪದವಿಯನ್ನು ಪಡೆದವರಾಗಿದ್ದಾರೆ. ಅಲ್ಲದೇ ಮಹಿಳೆಯರಿಗೆ ನೀಡಿದ ಮತದಾನದ ಹಕ್ಕು, ರಾಜ್ಯದ ಶಾಸನಸಭೆ ಇತ್ಯಾದಿಗಳ ಸದಸ್ಯರಾಗಿ ಸೇವೆ ಸಲ್ಲಿಸಲು ಅವಕಾಶವನ್ನು ನೀಡಲಾಯಿತು. ಆಸ್ತಿ ವಿಚಾರದಲ್ಲಿ ಅವರಿಗೆ ಸಮಾನ ಹಕ್ಕು-ಬಾಧ್ಯತೆಗಳನ್ನು ನೀಡಲು, ಸ್ವಂತ ಆಸ್ತಿ ಹೊಂದಲು, ದತ್ತು ಸ್ವೀಕಾರದ ಹಕ್ಕನ್ನು ಪಡೆದುಕೊಳ್ಳಲು ಮತ್ತು ಇನ್ನೂ ಹೆಚ್ಚಿನ ಅಧಿಕಾರವನ್ನು ಚಲಾಯಿಸಲು ಸಹಾಯಕವಾಗುವಂತೆ ಹಿಂದೂ ಕಾನೂನಿನ ತಿದ್ದುಪಡಿ ಮಾಡಲಾಯಿತು. ಇದರ ಕರಡುಪ್ರತಿಯನ್ನು ತಯಾರಿಸುವುದಕ್ಕಾಗಿ ರಚಿಸಲಾಗಿದ್ದ ಸಮಿತಿಯಲ್ಲಿ ಕೆ.ಡಿ.ರುಕ್ಮಿಣಿಯಮ್ಮನವರೂ ಸದಸ್ಯರಲ್ಲಿ ಒಬ್ಬರಾಗಿದ್ದರೆಂಬುದು ಮತ್ತು ಈ ಮಸೂದೆಯ ಬಗ್ಗೆ ಪ್ರತಿನಿಧಿ ಸಭೆಯಲ್ಲಿ ನಡೆದ ಚರ್ಚೆಯಲ್ಲಿ ಕಮಲಮ್ಮ ದಾಸಪ್ಪ ಮತ್ತು ಸಾಕಮ್ಮ ಎಂಬ ಮಹಿಳಾ ಸದಸ್ಯರು ಅತ್ಯಂತ ಪರಿಣಾಮಕಾರಿ ಬಗೆಯಲ್ಲಿ ವಾದಗಳನ್ನು ಮಂಡಿಸಿದರು. ಒಟ್ಟಾರೆಯಾಗಿ ಈ ಸಮಾಜದಲ್ಲಿ ಸ್ತ್ರೀಯರ ಸ್ಥಿತಿಗತಿಗಳು ಎಷ್ಟು ಉತ್ತಮವಾಗಿದ್ದವು, ಅಸೂಯೆ ಹುಟ್ಟಿಸುವಂತವಾಗಿದ್ದವು ಎಂಬುದು ತಿಳಿಯಬೇಕು. ಹೀಗೆ ಶಿಕ್ಷಣ ಪಡೆದ ಪ್ರಥಮ ತಲೆಮಾರಿನ ಮಹಿಳೆಯರು ತಮ್ಮದೇ ಆದ ಕಾರ್ಯಕ್ರಮಗಳ ಮೂಲಕ ಸ್ತ್ರೀಯರ ಅಭಿವೃದ್ಧಿಯ ಕಡೆಗೆ ಗಮನ ಹರಿಸಿದ್ದರ ವಿವರಗಳನ್ನು ತಿಳಿಸದೇ ಇರುವುದು ಈ ಮಹಾಪ್ರಬಂಧದ ಮಿತಿ

ಎನ್ನಬಹುದು. ತಮ್ಮ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಆಕರಗಳನ್ನು ಸಂಶೋಧಕರು ಬಳಸಿಕೊಂಡಿದ್ದಾರೆ.

ತಾರಾ ಉಳ್ಳಾಲ್ ಅವರು ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯಕ್ಕೆ **ಮೈಸೂರು ಒಡೆಯರ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು(ಕ್ರಿ.ಶ.೧೬೧೦–೧೭೬೧)(೨೦೦೭)**[೩೩] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಪ್ರಮುಖವಾಗಿ ರಾಜ ಒಡೆಯರ ಕಾಲಾವಧಿಯಿಂದ ಹೈದರ್‌ನ ಏಳಿಗೆಯ ಕಾಲಾವಧಿಯವರೆಗೆ ವಿವರಗಳಿವೆ. ಇಲ್ಲಿ ಸ್ತ್ರೀಯರ ಸ್ಥಾನಮಾನಗಳು ಯಾವ ರೀತಿ ಇದ್ದವು ಎಂಬುದರ ಚಿಂತನೆಯಾಗಿದೆ. ಒಡೆಯರ ಅರಮನೆಯಲ್ಲಿ ಇದ್ದ ಸ್ತ್ರೀಯರ ಸ್ಥಾನಮಾನ ಮತ್ತು ಸಾಮಾನ್ಯ ಸ್ತ್ರೀಯರ ಸ್ಥಾನಮಾನ ಏನು ಎಂಬುದನ್ನು ಪತ್ತೆ ಮಾಡುವುದಾಗಿದೆ. ಸ್ತ್ರೀಯರ ಅಸ್ಮಿತೆಯ ಪ್ರಶ್ನೆ ಇಲ್ಲಿ ಉದ್ಭವಿಸುತ್ತದೆ. ಒಡೆಯರ ಕಾಲದ ಸ್ತ್ರೀಯರ ಜೀವನವು ಸಾಂಪ್ರದಾಯಿಕತೆಯನ್ನು ಉಳಿಸಿಕೊಂಡು ಪರಿವರ್ತನೆಯತ್ತ ಸಾಗಿತು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಸ್ತ್ರೀಯು ಯೋಧಳಾಗಿ ಮತ್ತು ಗುಮಾಸ್ತೆಯಾಗಿ ಕಾರ್ಯಗಳನ್ನು ಕೈಗೊಂಡಿದ್ದಾರೆ ಎಂದಿದ್ದಾರೆ. ಆದರೆ ಇಲ್ಲಿ ಯಾವ ಸ್ತ್ರೀಯರು ಎಂಬುದು ಮುಖ್ಯ(ಪು.೫೪). ಕೃಷಿ ಮತ್ತು ಪಶುಪಾಲನೆಯಲ್ಲಿ ಸ್ತ್ರೀಯು ಪ್ರಮುಖ ಪಾತ್ರ ವಹಿಸಿದ್ದಾಳೆ ಎಂಬುದನ್ನು ವಿವರಿಸಿದ್ದಾರೆ. ರಣಧೀರ ಕಂಠೀರವ ನರಸರಾಜ ಒಡೆಯರ ನೆನಪಿಗಾಗಿ ರಾಣಿ ದೇವಾಜಮ್ಮ ಆಗ ಶ್ರೀರಂಗಪಟ್ಟಣವನ್ನು ಆಳುತ್ತಿದ್ದ ದೇವರಾಜ ಒಡೆಯರ ಅಪ್ಪಣೆ ಪಡೆದು ಉಪ್ಪಿನಹಳ್ಳಿ ಎಂಬ ಕೃಷಿ ಭೂಮಿಗಳನ್ನೊಳಗೊಂಡ ಗ್ರಾಮವನ್ನು ವೀರಶೈವ ಮಠಕ್ಕೆ ದಾನ ನೀಡಿದ್ದ ವಿವರವನ್ನು ಶಾಸನ ದಾಖಲಿಸಿದೆ ಎಂದಿದ್ದಾರೆ. ಶಾಸನಗಳನ್ನು ಉದಾಹರಿಸುತ್ತಾ ಒಡೆಯರ ರಾಣಿಯರು ಯಾವಯಾವ ದಾನಗಳನ್ನು ನೀಡಿದ್ದಾರೆ ಎಂಬುದನ್ನು ವಿವರಿಸುತ್ತಾರೆ. ಆದರೆ ಮೈಸೂರು ಸಂಸ್ಥಾನದ ಸ್ತ್ರೀಯರನ್ನು ಕುರಿತು ಮಾತನಾಡುವಾಗ ಸಂಶೋಧಕರು ಕೇವಲ ರಾಜಸ್ತ್ರೀಯರನ್ನು ಕೇಂದ್ರೀಕರಿಸಿದಂತೆ ಕಂಡುಬರುತ್ತದೆ. ಗ್ರಾಮೀಣ ಪ್ರದೇಶದ ಸಾಮಾಜಿಕ ಸ್ಥಿತಿಗತಿಗಳನ್ನು ಇಂದಿಗೂ ಗಮನಿಸಿದರೆ ಮೊದಲಿನ ರೀತಿಯೇ ಇರುವುದನ್ನು ನೋಡಬಹುದು. ಚರಿತ್ರೆ ಪುನರ್‌ಮೌಲೀಕರಣಗೊಳ್ಳುತ್ತಿರುವ ಸಂದರ್ಭದಲ್ಲಿ ಚರಿತ್ರೆಯನ್ನು ಇಂದು ಪ್ರಸ್ತುತದಿಂದ ಪ್ರಾಚೀನವನ್ನು ನೋಡಬೇಕೇ ಹೊರತು ಪ್ರಾಚೀನದಿಂದ ಇಂದಿನ ಚರಿತ್ರೆಯನ್ನು ನೋಡುವುದು ಸರಿಯಾದ ಕ್ರಮವಲ್ಲ. ಏಕೆಂದರೆ ಇದಕ್ಕೆ ಅನೇಕ ಮೌಖಿಕ ಆಕರಗಳು ದೊರಕುತ್ತವೆ. ಗಾದೆಗಳು, ಕೆರೆಗೆ ಹಾರದಂತಹ ಕಥೆಗಳು, ಅಸ್ಪೃಶ್ಯತೆ ಹಾಗೂ ಸಾಮಾಜಿಕ ಬಹಿಷ್ಕಾರದಂತಹ ಶಿಕ್ಷೆಯನ್ನು ನೋಡಬಹುದು. ಗ್ರಾಮಗಳಲ್ಲಿ ಇಂದಿಗೂ ಬಹಿಷ್ಕಾರದಂತಹ ಶಿಕ್ಷೆಗಳು ಚಾಲ್ತಿಯಲ್ಲಿವೆ.

೧೮ನೇ ಶತಮಾನದ ಒಡೆಯರ ಕಾಲದ ಸಾಹಿತ್ಯ ಕೃತಿಗಳ ಆಂತರ್ಯವನ್ನು ಒಳಹೊಕ್ಕು ನೋಡಿದಾಗ ಹೆಣ್ಣಿನ ಬಗೆಗಿನ ನೋವು–ನಲಿವು–ಸಂಕಷ್ಟಗಳ ಹಲವು ಮುಖಗಳ ಪ್ರತಿಬಿಂಬವನ್ನು ಚಿತ್ರಿಸಿದ್ದಾರೆ. ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿದ್ದ ಶೃಂಗಾರಮ್ಮ, ಸಂಚಿಯ ಹೊನ್ನಮ್ಮ ಮತ್ತು ದೊಡ್ಡಕೃಷ್ಣರಾಜ ಒಡೆಯರ ಧರ್ಮಪತ್ನಿ ಮತ್ತು ಪಟ್ಟದರಾಣಿ ಚೆಲುವಾಂಬೆಯರು ಹೆಣ್ಣಿನ ಬಗೆಗಿನ ಕೀಳುಭಾವನೆಯನ್ನು ಬಿಡುವಂತೆ 'ಹದಿಬದೆಯ ಧರ್ಮ' ಕೃತಿಯಲ್ಲಿ ಹೇಳು ತ್ತಾರೆ. ಹೆಣ್ಣೆ ಅಲ್ಲವೇ ನಿಮ್ಮನ್ನೆಲ್ಲ ಹೆತ್ತವಳು, ಬೆಳೆಸಿದವಳು ಎನ್ನುತ್ತಾರೆ. ಅಂದಿನ ಸಮಾಜದಲ್ಲಿನ

ಬಸವಿಪದ್ಧತಿ, ವೇಶ್ಯಾವಾಟಿಕೆ ಸೂಕ್ಷ್ಮ ವಿಷಯಕ್ಕೆ ಸಂಬಂಧಿಸಿದ್ದಾಗಿದ್ದು, ಸಮಾಜದಲ್ಲಿ ಕಳಂಕಪ್ರಾಯ ಎನ್ನುತ್ತಾರೆ(ಪು.೯೭).

ಮೈಸೂರು ಒಡೆಯರ ರಾಣಿಯರು ಶಿಕ್ಷಣವನ್ನು ಪಡೆದು ವಿದ್ಯಾವಂತರಾಗಿದ್ದರು. ಸಮಾಜದ ಆಗು–ಹೋಗುಗಳಲ್ಲಿ ಅವರು ಭಾಗಿಗಳಾಗಿರುತ್ತಿದ್ದರು. ಜ್ಯೋತಿಷ್ಯ, ಕಾವ್ಯ, ನಾಟಕ ಶಾಸ್ತ್ರ, ಸಂಗೀತ ಮೊದಲಾದ ವಿದ್ಯೆಗಳಲ್ಲಿ ಅವರು ನೈಪುಣ್ಯತೆ ಪಡೆದಿದ್ದರು. ಕೆಳಜಾತಿಯ ಹೆಂಗಸರು ಜೀವನಕ್ಕಾಗಿ ದುಡಿಯುತ್ತಿದ್ದರು. ವ್ಯಾಪಾರ, ವಹಿವಾಟು, ಗೃಹಿಣಿಯಾಗಿ ಕೆಲಸಗಳನ್ನು ಮಾಡುತ್ತಿದ್ದರು ಎನ್ನುತ್ತಾರೆ.

ಧರ್ಮದ ಹೆಸರಿನಲ್ಲಿ ದಾನ ಮಾಡುವ ಸಂಪ್ರದಾಯವನ್ನು ರಾಣಿಯರು ಮತ್ತು ರಾಜನ ಅಧಿಕಾರಿಗಳು ಮುಂದುವರಿಸಿಕೊಂಡು ಬಂದರು ಎಂದು ಅನೇಕ ಶಾಸನಗಳ ಮೂಲಕ ತಿಳಿಸುತ್ತಾರೆ. ಸಾಹಿತ್ಯದಲ್ಲಿ ಸ್ತ್ರೀಯರ ಪಾತ್ರ ಪ್ರಮುಖವಾದುದು. ಚಿಕ್ಕದೇವರಾಜ ಒಡೆಯರ ಆಸ್ಥಾನದಲ್ಲಿದ್ದ ಸಂಚಿ ಹೊನ್ನಮ್ಮಳು 'ಹದಿಬದೆಯ ಧರ್ಮ' ಕೃತಿಯಲ್ಲಿ ಸ್ತ್ರೀಯರ ಸ್ಥಾನಮಾನವನ್ನು ತಿಳಿಸುತ್ತಾಳೆ. ಶೃಂಗಾರಮ್ಮ 'ಪದ್ಮಿನಿ ಕಲ್ಯಾಣ', ಚೆಲುವಾಂಬೆಯು 'ವರನಂದೀ ಕಲ್ಯಾಣ', ಹೆಳವನಕಟ್ಟೆ ಗಿರಿಯಮ್ಮ 'ಚಂದ್ರಹಾಸನ ಕಥೆ', 'ಉದ್ದಾಲೀಕನ ಕಥೆ', 'ಬ್ರಹ್ಮ ಕೊರವಂಜಿ', 'ಲವಕುಶರ ಕಾಳಗ' ಮೊದಲಾದ ಕೃತಿಗಳನ್ನು ರಚಿಸಿದ್ದರ ವಿವರಗಳನ್ನು ತಿಳಿಸುತ್ತಾ ಸ್ತ್ರೀಯರ ಶಿಕ್ಷಣದ ಪ್ರಗತಿಯನ್ನು ಗುರುತಿಸುತ್ತಾರೆ. ಅಂದಿನ ಕಾಲಘಟ್ಟದಲ್ಲಿ ಸ್ತ್ರೀಯರು ಸಂಗೀತ, ನೃತ್ಯ ಮತ್ತು ನಾಟಕ ಕಲೆಗಳನ್ನು ಪ್ರದರ್ಶಿಸುವ ಮೂಲಕ ಪ್ರಭಾವ ಬೀರುತ್ತಿದ್ದರು ಎಂದು ಸಾಂಸ್ಕೃತಿಕ ವಿಚಾರಗಳನ್ನು ವಿವರಿಸುತ್ತಾರೆ. ಆದಾಯದ ಮೂಲಗಳಲ್ಲಿ ಸ್ತ್ರೀಯರದೂ ಸಮಪಾಲು ಇದೆ. ಒಟ್ಟಿನಲ್ಲಿ ಈ ಮಹಾಪ್ರಬಂಧವು ಮಹಾರಾಣಿಯರೇ ಸರ್ವಸ್ವಾತಂತ್ರ್ಯ ಎನ್ನುವ ಭಾವನೆಯನ್ನು ರೂಪಿಸುತ್ತದೆ. ರಾಜಮಹಿಳೆಯರು, ಕವಯಿತ್ರಿಯರು, ಸಾಮಾನ್ಯ ಸ್ತ್ರೀಯರ ವಿಶ್ಲೇಷಣಾತ್ಮಕ ಅಧ್ಯಯನ ಬೇಕಾಗಿತ್ತು. ಹೈದರಾಲಿಯ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನವನ್ನು ಗೌಣಗೊಳಿಸಲಾಗಿದೆ. ದೃಷ್ಟಿಕೋನದ ಕೊರತೆ ಎದ್ದು ಕಾಣುತ್ತದೆ. ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡಿರುವ ಸ್ತ್ರೀಯು ಯಾವ ರೀತಿ ಸ್ಥಾನಮಾನ ಹೊಂದಿದ್ದಾಳೆ ಎನ್ನುವುದನ್ನು ಚರ್ಚಿಸಬೇಕಾಗಿತ್ತು. ಬಳಸಿಕೊಂಡಿರುವ ಆಕರಗಳ ಕೊರತೆ ಎದ್ದು ಕಾಣುತ್ತದೆ.

ಮೈಸೂರು ಒಡೆಯರ ಚರಿತ್ರೆಯಲ್ಲಿ ಚರಿತ್ರೆಕಾರರನ್ನು ಎಂಗೇಜ್ ಮಾಡಿದವರಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಪ್ರಮುಖರು. ಇವರಿಬ್ಬರ ಬಗೆಗೆ ಅನೇಕ ಸಂಶೋಧನ ಮಹಾಪ್ರಬಂಧಗಳು ಹೊರಬಂದಿವೆ. ಮುಜೀದ್ ಖಾನ್ ಎಸ್. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಮಂಡಿಸಿರುವ **ಆನ್ ಅಡ್ಮಿನಿಸ್ಟ್ರೇಟಿವ್ ಹಿಸ್ಟರಿ ಆಫ್ ಮೈಸೂರು ಅಂಡರ್ ಹೈದರಾಲಿ ಆ್ಯಂಡ್ ಟಿಪ್ಪು ಸುಲ್ತಾನ್ ಫ್ರಮ್ ೧೭೬೧ ಟು ೧೭೯೯ ಎ.ಡಿ(ವಿತ್ ಸ್ಪೆಷಲ್ ಎಂಫಸಿಸ್ ಆನ್ ಮಿಲಿಟರಿ ಆಡ್ಮಿನಿಸ್ಟ್ರೇಷನ್)'** (೨೦೦೭)[೩೪] ಎಂಬ ಪಿಎಚ್.ಡಿ.ಮಹಾಪ್ರಬಂಧವು ಪ್ರಮುಖವಾದುದು. ಇದರಲ್ಲಿ ಮುಖ್ಯವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಮಿಲಿಟರಿ ಆಡಳಿತವನ್ನು ಚರ್ಚಿಸಲಾಗಿದೆ. ಹೈದರಾಲಿಯು ಏಳಿಗೆಗೆ ಬಂದ ವೈಖರಿಯನ್ನು ತಿಳಿಸುತ್ತಾ ಮೊದಲು ಹೈದರ್‌ನು ದೇವನಹಳ್ಳಿ ಮುತ್ತಿಗೆಯಲ್ಲಿ ಹೋರಾಡಿ ದಳವಾಯಿ ನಂಜರಾಜಯ್ಯನಿಗೆ

ಆಕರ್ಷಿತನಾದನು. ಹೈದರಾಬಾದ್ ನಿಜಾಮನೊಂದಿಗೆ ಯುದ್ಧಗಳು, ಮರಾಠರ ಯುದ್ಧಗಳನ್ನು ತಡೆದು ಮೈಸೂರು ಸಂಸ್ಥಾನದ ರಕ್ಷಣೆ ಕಾರ್ಯ ಮುಂದುವರಿಸಿದನು. ಹೀಗೆ ಹೈದರಾಲಿಯು ಹಂತಹಂತವಾಗಿ ಸೈನಿಕ ಸಾಧನೆಗಳ ಮೂಲಕ ಇಡೀ ಮೈಸೂರಿನ ಅಧಿಕಾರವನ್ನು ತನ್ನ ವಶಕ್ಕೆ ತೆಗೆದುಕೊಂಡ ವಿಚಾರಗಳನ್ನು ಅನಾವರಣಗೊಳಿಸಲಾಗಿದೆ.

ಬ್ರಿಟಿಷರ ಸಾಮ್ರಾಜ್ಯಶಾಹಿ ಶಕ್ತಿಯನ್ನು ವಿರೋಧಿಸುವ ನೆಲೆಯಲ್ಲಿ ಆಂಗ್ಲೋ-ಮೈಸೂರು ಯುದ್ಧಗಳು ಪ್ರಾರಂಭವಾದವು. ಹೈದರಾಲಿಯು ಬ್ರಿಟಿಷರನ್ನು ಸೋಲಿಸಿದ ಮೊದಲ ಭಾರತೀಯ ಎಂಬ ಹೆಸರನ್ನು ಪಡೆದುಕೊಂಡನು ಎಂಬುದು ಮುಖ್ಯ. ಸಾಮ್ರಾಜ್ಯಶಾಹಿ ಶಕ್ತಿಯನ್ನು ಕುಗ್ಗಿಸುವ ನೆಲೆಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಡಳಿತ ಮತ್ತು ಮಿಲಿಟರಿ ಆಡಳಿತದ ಕಾರ್ಯಗಳನ್ನು ಹೆಣೆದಿರುವುದನ್ನು ಗಮನಿಸಬೇಕಾಗಿದೆ. ಬ್ರಿಟಿಷರನ್ನು ಭಾರತದಿಂದ ಓಡಿಸಲು ಪಣ ತೊಟ್ಟು, ನೆಪೋಲಿಯನ್‌ನೊಂದಿಗೆ ಸಂಧಾನ ನಡೆಸಿದ ವಿವರಗಳನ್ನು ಇಲ್ಲಿ ನೋಡಬಹುದು. ಯುದ್ಧದಲ್ಲಿ ಹೊಸಹೊಸ ಆವಿಷ್ಕಾರಗಳನ್ನು ಮಾಡಿರುವ ವಿವರಗಳನ್ನು ತಿಳಿಸಿದ್ದಾರೆ. ಶ್ರೀರಂಗಪಟ್ಟಣ, ಬೆಂಗಳೂರು, ಶಿರಾ, ನಗರ, ಚಿತ್ರದುರ್ಗ, ಚಿಕ್ಕಬಳ್ಳಾಪುರ, ದೊಡ್ಡಬಳ್ಳಾಪುರ, ಕೋಲಾರ, ದಿಂಡಿಗಲ್ಲು ಮುಂತಾದ ಕಡೆಗಳಲ್ಲಿ ಕೋಟೆಗಳನ್ನು ಹೊಂದಿದ್ದು, ಸೈನ್ಯವನ್ನು ಬಲಗೊಳಿಸಿದ ವಿಚಾರಗಳು ಮಿಳಿತವಾಗಿವೆ.

ಪಾಶ್ಚಾತ್ಯ ಮಾದರಿಯ ಮಿಲಿಟರಿ ವ್ಯವಸ್ಥೆಯನ್ನು ಅಳವಡಿಸಿಕೊಳ್ಳಲು ಫ್ರೆಂಚ್ ಇಂಜಿನಿಯರ್‌ಗಳ ಸಹಾಯವನ್ನು ಪಡೆದುಕೊಂಡ ವಿವರಗಳನ್ನು ಗಮನಿಸಬಹುದು(ಪು.೭೩-೯೪). ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕಾರ್ಖಾನೆಯು ಶ್ರೀರಂಗಪಟ್ಟಣದಲ್ಲಿ ದೊಡ್ಡದಾಗಿದ್ದು, ಸ್ವತಃ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕಾರ್ಖಾನೆ ಹೊಂದಿರುವುದು ವಿಶೇಷವಾಗಿದೆ. ಯುದ್ಧದಲ್ಲಿ ಬಳಸುವ ಗನ್‌ಗಳನ್ನು ಸಂರಕ್ಷಣೆಗಾಗಿ ಗನ್‌ಪೌಡರ್‌ನ ಬಗೆಗೂ ಗಮನ ಹರಿಸಿದ್ದು ಅವನ ಸೂಕ್ಷ್ಮತೆ ಜ್ಞಾನವನ್ನು ತಿಳಿಸುವಂತಹದ್ದು. ಸೈನಿಕ ಸಾಮಗ್ರಿಗಳನ್ನು ಕಳುಹಿಸುವಂತೆ ಫ್ರಾನ್ಸಿನ ೧೬ನೇ ಲೂಯಿಯನ್ನು ಕೋರಿದ್ದರ ವಿವರಗಳನ್ನು ಇಲ್ಲಿ ಕ್ರೋಡೀಕರಿಸಿದ್ದಾರೆ. ಯುದ್ಧದಲ್ಲಿ ಮೊದಲ ಬಾರಿಗೆ ರಾಕೆಟ್‌ಗಳನ್ನು ಬಳಸಿದ ಕೀರ್ತಿ ಟಿಪ್ಪು ಸುಲ್ತಾನನಿಗೆ ಸಲ್ಲುತ್ತದೆ.

ಸಾಮ್ರಾಜ್ಯಶಾಹಿಯನ್ನು ವಿರೋಧಿಸುವ ನೆಲೆಯಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನನು ಯಾವ ರೀತಿಯ ಮಿಲಿಟರಿ ಆಡಳಿತವನ್ನು ಹೊಂದಿದ್ದರು ಎಂಬುದನ್ನು ಈ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ. ಆಡಳಿತವನ್ನು ವಿಭಾಗೀಯ ಮಟ್ಟದಲ್ಲಿ ಪಟೇಲ, ಶಾನುಭೋಗ, ತಳವಾರರು, ನೋಡಿಕೊಳ್ಳುತ್ತಿದ್ದರು. ಕೃಷಿಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಜಾರಿಗೆ ತಂದ ವಿವರಗಳೂ ಸೇರಿವೆ. ಮುಖ್ಯವಾಗಿ ಶತ್ರುವಾಗಿದ್ದ ಬ್ರಿಟಿಷರನ್ನು ಭಾರತದಿಂದ ಓಡಿಸಲು ಯುದ್ಧಗಳಲ್ಲಿ ಹೊಸಹೊಸ ಆವಿಷ್ಕಾರಗಳನ್ನು ಜಾರಿಗೆ ತಂದ ವಿವರಗಳನ್ನು ತಿಳಿಸಿದ್ದಾರೆ. ಸೈನ್ಯದಲ್ಲಿ ಬಳಸುತ್ತಿದ್ದ ಆಯುಧಗಳನ್ನು ತಯಾರಿಸುವ ಕಾರ್ಖಾನೆಗಳಿದ್ದವು ಎಂಬುದು ಮುಖ್ಯ. ಸೈನ್ಯದಲ್ಲಿ ಬಳಸುತ್ತಿದ್ದ ಆಯುಧಗಳು, ವಸ್ತ್ರಗಳ ವಿವರಗಳನ್ನು ಇಲ್ಲಿ ಗಮನಿಸಬಹುದು. ಯುದ್ಧದಲ್ಲಿ ರಾಕೆಟ್‌ಗಳ ಬಳಕೆ ವಿಶೇಷವಾಗಿದೆ. ಈ ನಿಟ್ಟಿನಲ್ಲಿ ಸಂಶೋಧಕರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರು

ಉತ್ತಮವಾದ ಮಿಲಿಟರಿ ಆಡಳಿತವನ್ನು ಹೊಂದಿದ್ದರು ಎಂಬುದನ್ನು ವಿಸ್ತೃತವಾಗಿ ವಿವರಿಸುತ್ತಾ ಹೋಗುತ್ತಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಈ ಮಿಲಿಟರಿ ವ್ಯವಸ್ಥೆಯಿಂದ ಯಶಸ್ಸು ಕಂಡು ಬ್ರಿಟಿಷರನ್ನು ಅಂದು ಓಡಿಸಿದ್ದರೆ ಭಾರತ ಒಂದು ಶತಮಾನ ಅವರ ಅಧೀನದಲ್ಲಿ ಇರುತ್ತಿರಲಿಲ್ಲ ಎನ್ನಬಹುದು. ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ನಿರಂಕುಶ, ಮತಾಂಧ ಎನ್ನುವ ನೆಲೆಯಲ್ಲಿಯೇ ಚಿತ್ರಿಸಿದ್ದನ್ನೂ ಕೆಲವು ಬರಹಗಳಲ್ಲಿ ನೋಡಬಹುದು. ಆದರೆ ಈ ಮಹಾಪ್ರಬಂಧದಲ್ಲಿ ಹೈದರಾಲಿ ಮತ್ತು ಟಿಪ್ಪುಸುಲ್ತಾನ ಅವರನ್ನು ಮಿಲಿಟರಿ ವ್ಯವಸ್ಥೆಯಲ್ಲಿ ಹೊಸ ಹೊಸ ಆವಿಷ್ಕಾರಗಳ ಅನ್ವೇಷಕ ಎಂದು ತಿಳಿಸಿರುವುದು ವಿಶೇಷವಾಗಿದೆ. ಆದರೆ ಆಕರಗಳ ಕೊರತೆ ಎದ್ದು ಕಾಣುತ್ತದೆ. ರಾಜ್ಯ ಪತ್ರಾಗಾರ ಇಲಾಖೆಯ ಮೂಲ ದಾಖಲೆಗಳನ್ನು ಗಮನಿಸಬಹುದು.

ಬಸವೇಗೌಡ ಎಚ್.ಎಸ್. ಅವರು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಎ **ಸೋಷಿಯೋ-ಎಕಾನಮಿಕ್ ಆ್ಯಂಡ್ ಪೊಲಿಟಿಕಲ್ ಹಿಸ್ಟರಿ ಆಫ್ ದಿ ಸ್ಟೇಟ್ ಆಫ್ ಮೈಸೂರ್ ಆ್ಯಸ್ ವಿವೆಡ್ ಬೈ ಫ್ರಾನ್ಸಿಸ್ ಬುಕಾನನ್-ಎ ಕಂಪ್ಯಾರಿಟೀವ್ ಅಂಡ್ ಕ್ರಿಟಿಕಲ್ ಅನಾಲಿಸಿಸ್**'(೨೦೦೭)[೩೫] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮಂಡಿಸಿದ್ದಾರೆ. ಫ್ರಾನ್ಸಿಸ್ ಬುಕಾನನ್‌ನು ಮೈಸೂರು ಸಂಸ್ಥಾನದಲ್ಲಿನ ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯದ ಚರಿತ್ರೆಯನ್ನು ಯಾವ ರೀತಿ ಕಟ್ಟಿಕೊಟ್ಟಿದ್ದಾನೆ ಎಂಬುದನ್ನು ವಿಮರ್ಶಾತ್ಮಕವಾಗಿ ನೋಡಿರುವುದೇ ಈ ಮಹಾಪ್ರಬಂಧದ ಆಶಯ. ಬುಕಾನನ್ ದಕ್ಷಿಣ ಭಾರತದ ಸರ್ವೆ ಕಾರ್ಯವನ್ನು ಆರಂಭಿಸಿದನು. ಈತನು ವರದಿ ಮಾಡಬೇಕಾದದ್ದು ಕೃಷಿ ಪದ್ಧತಿಯನ್ನು. ಇದರ ಜೊತೆಗೆ ಜನತೆಯ ಧಾರ್ಮಿಕ, ಸಾಮಾಜಿಕ ಹಾಗೂ ಆರ್ಥಿಕ ಜೀವನದ ಬಗೆಯನ್ನು ತನ್ನ ದಿನಚರಿಯಲ್ಲಿ ಬರೆಯುತ್ತಾ ಹೋದನು. ಈ ವರದಿಯನ್ನು 'ಎ ಜರ್ನಿ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್(೧೮೧೦, ಲಂಡನ್) ಎಂಬ ಮೂರು ಸಂಪುಟಗಳಲ್ಲಿ ವಿವರಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಮೈಸೂರು ಸಂಸ್ಥಾನದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಚರಿತ್ರೆಯ ಅಂಶಗಳನ್ನು ತೌಲನಿಕ ಹಾಗೂ ವಿಮರ್ಶಾತ್ಮಕ ರೀತಿಯಲ್ಲಿ ಸಂಶೋಧನೆ ಮಾಡಿದ್ದಾರೆ. ಮೊದಲು ಸಾಮಾಜಿಕ ವ್ಯವಸ್ಥೆಯ ಬಗೆಗೆ ಚರ್ಚಿಸುತ್ತಾ ಜನರ ವೇಷ-ಭೂಷಣಗಳ ಅಂಶಗಳನ್ನು ವಿವರಿಸುತ್ತಾರೆ. ಜನರ ಜೀವನದತ್ತ ಗಮನ ಹರಿಸಿ ಅಲ್ಲಿ ಬರುವ ಜಾತಿಗಳನ್ನು ಗುರುತಿಸಿದ್ದಾರೆ. ಬ್ರಾಹ್ಮಣರು, ಬ್ರಾಹ್ಮಣರಲ್ಲಿ ಇರುವ ಒಳಪಂಗಡಗಳನ್ನು ವಿವಿಧ ಭಿನ್ನತೆಗಳನ್ನು ಗುರುತಿಸಿದ್ದಾರೆ. ವೈಷ್ಣವ ಬ್ರಾಹ್ಮಣರು ಇಲ್ಲಿ ನೆಲೆಸಿದ್ದು, ರಾಮಾನುಜಾಚಾರ್ಯರ ಕೆಲವು ತತ್ವಗಳನ್ನು ವಿವರಿಸಿದ್ದಾರೆ. ಹೊಲೆಯ ಮತ್ತು ಮಾದಿಗ ಜಾತಿಯಲ್ಲಿ ಬಲಗೈ ಮತ್ತು ಎಡಗೈ ಎಂದು ಎರಡು ವರ್ಗಗಳಾಗಿ ಮಾಡಿ, ಬಲಗೈನಲ್ಲಿ ೧೮ ಜಾತಿಗಳಿದ್ದರೆ, ಎಡಗೈಯಲ್ಲಿ ೯ ಜಾತಿ, ಗೋತ್ರಗಳ ವಿವರ, ವೃತ್ತಿ ಆಧಾರಿತ ಜಾತಿಗಳನ್ನು ಹೆಸರಿಸಿದ್ದಾರೆ. ಅವರ ನಂಬಿಕೆ, ಆಚಾರಗಳನ್ನು ವಿವರಿಸಿದ್ದಾರೆ. ಅಂದಿನ ಸಂದರ್ಭದಲ್ಲಿ ಜಾತಿಯ ಬೇರು ಯಾವ ರೀತಿ ಆಳವಾಗಿತ್ತು ಎಂಬುದು ತಿಳಿಯುತ್ತದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಬಗೆಗಿನ ಬುಕಾನನ್ ದೇವಾಲಯಗಳನ್ನು ನಾಶ

ಮಾಡಿದರು ಎಂದು ವಿವರಿಸಿದ್ದಾರೆ. ಆದರೆ ಶ್ರೀರಂಗಪಟ್ಟಣದ ಶ್ರೀರಂಗನಾಥ ದೇವಾಲಯಕ್ಕೆ ದಾನ-ದತ್ತಿಗಳನ್ನು ನೀಡಿರುವುದನ್ನು ಗಮನಿಸಬಹುದು ಎಂದಿದ್ದಾರೆ.

ಬ್ರಾಹ್ಮಣರು ಅಕ್ಷರ ಬಲ್ಲವರಾಗಿದ್ದು, ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಕಲೆ ಮತ್ತು ವಾಸ್ತುಶಿಲ್ಪದ ವಿವರಗಳು, ಹಳ್ಳಿಯ ಮನೆಗಳ ರೂಪುರೇಷೆಗಳನ್ನು ಚಿತ್ರಿಸಿದ್ದಾರೆ. ಭೂ ಒಡೆಯರು ಭೂಮಿ ಉಳುಮೆಗೆ ಕೂಲಿಗಳನ್ನು ಕೆಳವರ್ಗದವರಿಂದ ಆಯ್ಕೆ ಮಾಡುತ್ತಿದ್ದುದು ಮುಖ್ಯ. ಭೂ ಒಡೆತನ ಡಾಮಿನೆಂಟ್ ಗುಂಪುಗಳಿಗೆ ಸೇರಿತ್ತು ಎಂಬುದು ತಿಳಿಯುತ್ತದೆ. ಕೃಷಿಯು ಪ್ರಾಮುಖ್ಯತೆ ಪಡೆದಿದ್ದು, ಹಳ್ಳಿಗಳಲ್ಲಿ ಗೌಡ ಅಧಿಕಾರ ನಡೆಸುತ್ತಿದ್ದನು. ತೆರಿಗೆ ವಸೂಲಾತಿಗೆ ಶಾನುಭೋಗರು, ಅಮಲ್ದಾರರು ಸಹಾಯಕರಾಗಿದ್ದರು. ವಸಾಹತುಶಾಹಿ ವ್ಯವಸ್ಥೆಯು ಮೈಸೂರಿನ ಆರ್ಥಿಕ ವ್ಯವಸ್ಥೆಯನ್ನು ತನ್ನ ವಶಕ್ಕೆ ತೆಗೆದುಕೊಳ್ಳುವ ಹುನ್ನಾರ ಮುಂದುವರಿಯಿತು ಎಂಬ ವಿವರಗಳನ್ನು ಇಲ್ಲಿ ಸೂಕ್ಷ್ಮವಾಗಿ ತಿಳಿಯಬಹುದು. ವ್ಯಾಪಾರ ಉದ್ಯಮವು ಉನ್ನತ ಮಟ್ಟದಲ್ಲಿತ್ತು. ಬೆಂಗಳೂರು ಪ್ರಮುಖ ವ್ಯಾಪಾರ ಕೇಂದ್ರವಾಗಿತ್ತು. ವಸ್ತುಗಳು ರವಾನೆ ಆಗುತ್ತಿದ್ದ ಮಾಹಿತಿಯನ್ನು ಗಮನಿಸಬಹುದು(ಪು.೩೬೩). ಮಹಿಳೆಯರು ಕೂಡ ವ್ಯಾಪಾರದಲ್ಲಿ ತೊಡಗಿದ್ದ ಮಾಹಿತಿಯನ್ನು ತಿಳಿಸಿದ್ದಾರೆ. ಬುಕಾನನ್ ಜನರೊಂದಿಗೆ ಹೇಗೆ ಮಾಹಿತಿಗಳನ್ನು ಕ್ರೋಢೀಕರಿಸಿದನು ಎಂಬುದು ಇಲ್ಲಿ ಮುಖ್ಯ

ರಾಜಕೀಯವಾಗಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರು ಹೇಗೆ ಗುರುತಿಸಿಕೊಂಡಿದ್ದರು ಎಂಬುದನ್ನು ತಿಳಿಸಿದ್ದಾರೆ. ಮೈಸೂರು ಒಡೆಯರನ್ನು ಮೂಲೆಗೊತ್ತಿ ಹೈದರ್ ತನ್ನಲ್ಲೇ ಅಧಿಕಾರವನ್ನು ಕೇಂದ್ರೀಕರಿಸಿಕೊಂಡನು ಎಂಬುದನ್ನು ವಿವರಿಸುತ್ತಾ ಹೋಗುತ್ತಾರೆ. ಹೈದರಾಲಿ ಮತ್ತು ಬ್ರಿಟಿಷರ ನಡುವೆ ನಡೆದ ಆಂಗ್ಲೋ-ಮೈಸೂರು ಯುದ್ಧಗಳು, ಹೈದರಾಲಿಯ ಏಳಿಗೆ, ಟಿಪ್ಪು ಸುಲ್ತಾನ ಮತ್ತು ಬ್ರಿಟಿಷರ ನಡುವಿನ ಆಂಗ್ಲೋ-ಮೈಸೂರು ಯುದ್ಧಗಳು, ಸೈನಿಕ ವ್ಯವಸ್ಥೆಯ ಅಂಶಗಳನ್ನು ಕ್ರೋಢೀಕರಿಸಿದ್ದಾರೆ. ಟಿಪ್ಪುವನ್ನು ಮತಾಂಧ ಎಂದು ಕರೆಯಲಾಗಿದ್ದು, ಅನೇಕ ಜನರನ್ನು ಇಸ್ಲಾಂ ಧರ್ಮಕ್ಕೆ ಮತಾಂತರಗೊಳಿಸಿದನು ಎಂಬ ವಿವಾದಗಳನ್ನು ಗುರುತಿಸುತ್ತಾ ರಾಜಕೀಯ ತುರ್ತು ಅನಿವಾರ್ಯವಾಗಿತ್ತು ಎಂದಿದ್ದಾರೆ. ಆದರೆ ಶ್ರೀರಂಗಪಟ್ಟಣ, ರಂಗನಾಥ ದೇವಾಲಯ, ಮೇಲುಕೋಟೆಯ ನರಸಿಂಹ ದೇವಾಲಯ, ಕಳಲೆಯ ಲಕ್ಷ್ಮೀಕಾಂತ ದೇವಾಲಯಗಳಿಗೆ ದಾನ ದತ್ತಿಗಳನ್ನು ನೀಡಿದ್ದರ ವಿವರಗಳನ್ನೂ ಗಮನಿಸಬಹುದು(ಪು.೫೫೨). ಒಟ್ಟಾರೆಯಾಗಿ ಈ ಮಹಾಪ್ರಬಂಧದಲ್ಲಿ ಮೈಸೂರು ಸಂಸ್ಥಾನದ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ವಿಚಾರಗಳನ್ನು ಬುಕಾನನ್ ಯಾವ ರೀತಿ ಗ್ರಹಿಸಿ ಮಾಹಿತಿ ನೀಡಿದ್ದಾನೆ ಎಂಬುದನ್ನು ತೌಲನಿಕ ಮತ್ತು ವಿಮರ್ಶೆ ರೂಪದಲ್ಲಿ ನೋಡಿರುವುದು ಗಮನಾರ್ಹವಾಗಿದೆ.

ರವಿಕುಮಾರ್ ಅವರು **ಆಧುನಿಕ ಮೈಸೂರು ಸಂಸ್ಥಾನದಲ್ಲಿ ಅಬಕಾರಿ ಆಡಳಿತದ ಬೆಳವಣಿಗೆ ಮತ್ತು ನೀತಿಗಳು: ಒಂದು ಅಧ್ಯಯನ**(೨೦೦೮)[೩೬] ಎಂಬ ಪಿಎಚ್.ಡಿ.ಮಹಾಪ್ರಬಂಧ ವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಮುಖ್ಯವಾಗಿ ಮದ್ಯಪಾನ, ಇತರ ಮಾದಕ ದ್ರವ್ಯಗಳ ಮೇಲೆ ವಿಧಿಸುವ ತೆರಿಗೆಯನ್ನು ಈ ಅಬಕಾರಿಯಲ್ಲಿ ಗುರುತಿಸುತ್ತೇವೆ. ಪ್ರಮುಖವಾಗಿ

ಮೈಸೂರು ಸಂಸ್ಥಾನದಲ್ಲಿ ಮದ್ಯಪಾನ ಸಂಸ್ಕೃತಿಯು ಪ್ರಾಚೀನ ಕಾಲದಿಂದಲೂ ಜಾರಿಯಲ್ಲಿತ್ತು. ಬ್ರಿಟಿಷರ ಆಗಮನದಿಂದ ಅಬಕಾರಿ ಚಟುವಟಿಕೆಗಳ ಕಡೆಗೆ ಗಮನ ಹರಿಸಲಾಯಿತು. ಅನಂತರ ಕಮೀಷನರ್‌ಗಳ ಕಾಲದಲ್ಲಿ ನೇರವಾಗಿ ಚಾಲನೆ ದೊರಕಿತು. ಟಿಪ್ಪು ಸುಲ್ತಾನನು ಪಾನವಿರೋಧ ನೀತಿಯನ್ನು ಜಾರಿಗೆ ತಂದಿದ್ದನು. ಇದನ್ನು ಕಮೀಷನರ್‌ಗಳು ವಿರೋಧಿಸಿ ಪಾಶ್ಚಾತ್ಯ ಸಂಸ್ಕೃತಿ ಮತ್ತು ವಸಾಹತುಶಾಹಿ ನೀತಿಗೆ ಚಾಲನೆ ನೀಡಿದರು ಎಂಬುದು ಮುಖ್ಯ. ಈ ರೀತಿಯಾಗಿ ಮದ್ಯಪಾನ ಇನ್ನಿತರ ಮಾದಕ ವಸ್ತುಗಳ ಮೇಲೆ ವಿಧಿಸುವ ತೆರಿಗೆ ರಾಜ್ಯದ ಆದಾಯದಲ್ಲಿ ಪ್ರಮುಖ ಪಾತ್ರ ವಹಿಸಿರುವುದನ್ನು ಸಂಶೋಧಕರು ಚರ್ಚಿಸಿದ್ದಾರೆ. ಮೈಸೂರನ್ನು ಆಧುನೀಕರಣ ಗೊಳಿಸುವಲ್ಲಿ ಮತ್ತು ಸರ್ವತೋಮುಖ ಅಭಿವೃದ್ಧಿಯಲ್ಲಿ ಅಬಕಾರಿ ಬಾಬ್ತಿನ ಹಣವು ಯಾವ ರೀತಿ ಕೆಲಸ ಮಾಡಿತು ಎಂಬುದನ್ನು ತಿಳಿಸಿದ್ದಾರೆ. ಜನರ ಆರೋಗ್ಯ ಮತ್ತು ನೈತಿಕ ದೃಷ್ಟಿಕೋನ ದಿಂದ ಮದ್ಯಪಾನವನ್ನು ಸರ್ಕಾರ ಯಾವ ರೀತಿ ನಿಯಂತ್ರಿಸುತ್ತಿತ್ತು ಹಾಗೆಯೇ ಅಬಕಾರಿ ನೀತಿಯನ್ನು ಹೇಗೆ ಜಾರಿಗೊಳಿಸಲಾಯಿತು ಎಂಬುದನ್ನು ವಿಶ್ಲೇಷಿಸಿದ್ದಾರೆ. ವಸಾಹತು ಶಾಹಿ ನೆಲೆಯಲ್ಲಿಯೇ ಈ ಮಹಾಪ್ರಬಂಧವು ವಿಷಯಗಳನ್ನು ತಿರುವಿ ಹಾಕುತ್ತದೆ.

ಬ್ರಿಟಿಷರು ಅಧಿಕಾರ ಚುಕ್ಕಾಣಿ ಹಿಡಿದ ಮೇಲೆ ಅವರ ಅನುಕೂಲಕ್ಕೆ ತಕ್ಕಂತೆ ಭಾರತದಲ್ಲಿ ಎಲ್ಲ ಸೌಕರ್ಯಗಳನ್ನು ನಿರ್ಮಿಸಿಕೊಳ್ಳಲಾರಂಭಿಸಿದರು. ಆಚಾರ–ವಿಚಾರಗಳೆಲ್ಲವೂ ಪಶ್ಚಿಮ ದೇಶಗಳ ಮಾದರಿಯಲ್ಲಿಯೇ ಸ್ಥಳೀಯ ಜನತೆಯಲ್ಲಿ ಬೇರೂರಿತು. ಇಲ್ಲಿನ ಜನತೆಗೆ ಒಂದು ಅಂತಸ್ತಿನ, ಗೌರವದ ಸಂಕೇತ ಎಂಬಂತೆ ಮದ್ಯಪಾನದ ವ್ಯಸನವನ್ನು ಕಲ್ಪಿಸಿಕೊಟ್ಟರು. ಈ ಮಧ್ಯೆ ಕಳ್ಳಭಟ್ಟಿ ಮದ್ಯ ತಯಾರಿಕೆಯು ಹೆಚ್ಚಾಯಿತು. ಇದರಿಂದ ಸರ್ಕಾರಕ್ಕೆ ತೆರಿಗೆಯ ಮೂಲಕ ಬರುವ ಆದಾಯ ಕಡಿಮೆ ಆಯಿತು. ತೆರಿಗೆ ನಿರ್ವಹಣೆಗೆ ಅಬಕಾರಿ ಇಲಾಖೆಯನ್ನು ಪ್ರಾರಂಭಿಸಲಾಯಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸೇಂದಿ ಅಂಗಡಿಗಳ ಮೇಲೆ ತೆರಿಗೆಯನ್ನು ಹಾಕುತಿದ್ದುದನ್ನು ವಿವರಿಸಿದ್ದಾರೆ. ಸುವ್ಯವಸ್ಥಿತ ತೆರಿಗೆ ವಸೂಲಿಗಾಗಿ ನೀತಿಗಳನ್ನು ಜಾರಿಗೊಳಿಸಿದ್ದನ್ನು ಇಲ್ಲಿ ತಿಳಿಸಿದ್ದಾರೆ. ಮದ್ಯ ಬಳಕೆಯ ಹೆಚ್ಚಳದಿಂದ ಸಮಾಜದ ಮೇಲೆ ಉಂಟಾದ ತಲ್ಲಣಗಳನ್ನು ಕಟ್ಟಿಕೊಡುತ್ತಾರೆ. ಮೈಸೂರು ಪ್ರಾಂತ್ಯಕ್ಕೆ ವಲಸೆ ಬಂದ ಕೂಲಿಕಾರರ ತಂಡಗಳು, ಕುಶಲಕರ್ಮಿಗಳು, ಚಿನ್ನದ ಗಣಿಗಳು, ಕಾರ್ಖಾನೆಗಳು, ಸಾರ್ವಜನಿಕ ಕೆಲಸಗಳಲ್ಲಿನ ಮತ್ತು ಕಾಫಿ ತೋಟಗಳ ಉದ್ಯೋಗದಲ್ಲಿ ಇರುವ ವ್ಯಕ್ತಿಗಳಿಂದ ಮದ್ಯಪಾನ ಹೆಚ್ಚಾಯಿತು. ಕೃಷಿ, ಕಾರ್ಖಾನೆ, ವ್ಯಾಪಾರದ ಚಟುವಟಿಕೆಗಳು ಮಂದಗತಿಯಲ್ಲಿ ಸಾಗಿದವು ಎಂಬುದು ಮುಖ್ಯ(ಪು.೧೨೩–೧೯೩). ಗಾಂಧೀಜಿ ಅವರ ಪಾನನಿರೋಧ ಚಳವಳಿಯು ಯಶಸ್ವಿಯಾಗಲಿಲ್ಲ. ಆರ್ಥಿಕಾಭಿವೃದ್ಧಿಗೆ ಈ ಅಬಕಾರಿ ತೆರಿಗೆ ಪ್ರಮುಖವಾದುದು. ಈ ಮದ್ಯವ್ಯಸನಿಗಳು ಸಮಾಜವಿರೋಧಿ ಚಟುವಟಿಕೆಗಳಲ್ಲಿ ತೊಡಗುತ್ತಾರೆ. ಈ ಮದ್ಯಪಾನವನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವಿಲ್ಲ. ಜನತೆಗೆ ಅರಿವಿನ ಮೂಲಕ ಮದ್ಯಪಾನದ ಬಳಕೆಯನ್ನು ಕಡಿಮೆಗೊಳಿಸಬಹುದು ಎಂಬುದು ಪ್ರಮುಖವಾದುದು.

ಸೋಮಶೇಖರ್ ಜಿ.ಟಿ. ಅವರು ಮೈಸೂರು ವಿಶ್ವವಿದ್ಯಾಲಯಕ್ಕೆ **ಬಿ.ಎಲ್.ರೈಸ್: ಒಂದು ಅಧ್ಯಯನ(೨೦೦೯)**[೩೭] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ

ಮಹಾಪ್ರಬಂಧದಲ್ಲಿ ಮೈಸೂರಿನ ಲೇಖನ ಪರಂಪರೆಯ ದೃಷ್ಟಿಯಿಂದ ಬಿ.ಎಲ್.ರೈಸ್ ಅವರ ಪಾತ್ರ ಅನನ್ಯವಾದುದು ಎಂಬುದನ್ನು ಚರ್ಚಿಸಿದ್ದಾರೆ. ಬೆಂಗಳೂರಿನಲ್ಲಿಯೇ ಹುಟ್ಟಿ ಬೆಳೆದು, ಪ್ರಾಥಮಿಕ ಶಿಕ್ಷಣ ಪಡೆದು, ವಸಾಹತುಶಾಹಿ ಸರ್ಕಾರದ ನೆರಳಿನಲ್ಲಿ ಕೆಲವು ಹುದ್ದೆಗಳನ್ನು ಪಡೆದು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುವ ಕಾರ್ಯ ಮಾಡಿದರು ಎಂಬುದು ಗಮನಾರ್ಹವಾದುದು. ಬಿ.ಎಲ್.ರೈಸ್ ಅವರು ಮುಖ್ಯೋಪಾಧ್ಯಾಯರಾಗಿ, ಪರಿವೀಕ್ಷಣಾಧಿಕಾರಿಯಾಗಿ, ಡೈರೆಕ್ಟರ್ ಆಫ್ ಪಬ್ಲಿಕ್ ಇನ್‌ಸ್ಟ್ರಕ್ಷನ್, ಶಿಕ್ಷಣ ಇಲಾಖೆ ಕಾರ್ಯದರ್ಶಿ ಹಾಗೂ ಪುರಾತತ್ವ ಸಂಶೋಧನ ಸಂಸ್ಥೆಯ ನಿರ್ದೇಶಕರಾಗಿ ಕೆಲಸ ಮಾಡಿದರು. ಮೈಸೂರು ಒಡೆಯರ ಚರಿತ್ರೆಯನ್ನು ತಮ್ಮ ಕೃತಿಗಳ ಮೂಲಕ ಕಟ್ಟಿದ್ದಾರೆ ಎಂಬುದನ್ನು ನೋಡಬಹುದು. ಬಿ.ಎಲ್.ರೈಸ್ ಅವರು ಹೊರತಂದ 'ಮೈಸೂರು ಇನ್‌ಸ್ಕ್ರಿಪ್ಷನ್ಸ್' ಎಂಬ ಕೃತಿಯ ಸಂಪುಟಗಳಲ್ಲಿ ಶಾಸನಗಳ ನೆರವಿನಿಂದ ಹಳೆಯ ಮೈಸೂರು ಭಾಗದ ಗತ ಇತಿಹಾಸದ ಎಳೆಗಳನ್ನು ಒಂದೊಂದಾಗಿ ಬಿಡಿಸಿಕೊಂಡು ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸವನ್ನು ರೂಪಿಸುವುದು ಅಸಾಮಾನ್ಯ ಕಾರ್ಯವಾದರೂ ಈ ನಿಟ್ಟಿನಲ್ಲಿ ವಿಷಯವಾರು ಸ್ಥಳೀಯ ಇತಿಹಾಸವನ್ನು ರಚಿಸುವ ಕಾರ್ಯವನ್ನು ಕೈಗೆತ್ತಿಕೊಂಡಿರುವುದನ್ನು ಗಮನಿಸಲಾಗಿದೆ ಎಂದು ವಿವರಿಸಿದ್ದಾರೆ.

ಗ್ಯಾಸೆಟಿಯರ್ ಸಂಪುಟಗಳ ಸಂಪಾದಕರಾಗಿ ಗುರುತಿಸಿಕೊಂಡ ರೈಸ್ ಅವರು ಈ ಗ್ಯಾಸೆಟಿಯರ್ ಸಂಪುಟಗಳಲ್ಲಿ ಮೈಸೂರು ಸಂಸ್ಥಾನದ ಒಟ್ಟು ಚಿತ್ರಣವನ್ನು ನೀಡಿದೆ ಎಂಬುದನ್ನು ಗುರುತಿಸಿದ್ದಾರೆ. ವಸಾಹತುಶಾಹಿ ಗ್ರಹಿಕೆಯ ಹಿನ್ನೆಲೆಯು ಈ ಗ್ಯಾಸೆಟಿಯರ್‌ಗಳಲ್ಲಿ ರೈಸ್ ಅವರು ಮೈಸೂರು ಒಡೆಯರ ಚರಿತ್ರೆಯನ್ನು ವಿವರಣೆ ರೂಪದಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಒಡೆಯರ ಚರಿತ್ರೆಯಲ್ಲಿ ಒಡೆಯರಿಗೂ, ಹೈದರಾಲಿ ಮತ್ತು ಟಿಪ್ಪು ಸುಲ್ತಾನರಿಗೂ ವಿಚಾರಗಳನ್ನು ತಿಳಿಸಿದ್ದಾರೆ. ಆದರೆ ಸಿಂಹಾಸನದ ವಂಶಪಾರಂಪರ್ಯದಲ್ಲಿ ಹೇಗೆ ಒಡೆಯರು ಅಧಿಕಾರವನ್ನು ಪಡೆದರೆಂಬುದನ್ನು ಗಮನಿಸಬೇಕು. ಹಾಗೆಯೇ ಹಿಂದೂಗಳಾಗಲಿ, ಮುಸಲ್ಮಾನರಾಗಲೀ ಸಿಂಹಾಸನಕ್ಕಾಗಿ ನಡೆಸಿದ ಷಡ್ಯಂತ್ರಗಳು ಚಿಂತನೆಗೆ ಒಳಗಾಗಿವೆ ಎಂಬುದನ್ನು ರೈಸ್ ತಿಳಿಸಿರುವುದನ್ನು ಇಲ್ಲಿ ಚರ್ಚಿಸಬೇಕಾಗಿತ್ತು. ಈ ಸಂಪುಟಗಳಲ್ಲಿ ಮೈಸೂರು ಒಡೆಯರ ಚರಿತ್ರೆಯನ್ನು ಸಮಗ್ರವಾಗಿ ಕಟ್ಟಿದ್ದಾರೆ ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಭೌಗೋಳಿಕ ಲಕ್ಷಣ, ಆಡಳಿತ, ಮೊದಲಿನಿಂದಲೂ ನಡೆದುಬಂದ ಅಧಿಕಾರ, ರಾಜ ಒಡೆಯರಿಂದ ಪ್ರಖ್ಯಾತಿಗೆ ಬಂದ ಸಂಸ್ಥಾನ, ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಬದಲಾವಣೆಗಳನ್ನು ಗುರುತಿಸಿದ್ದಾರೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಆಳ್ವಿಕೆಯಲ್ಲಿ ಬ್ರಿಟಿಷರ ಆಡಳಿತ ಕ್ರಮವನ್ನು ತಿಳಿಸಿದ್ದಾರೆ. ದಿವಾನರ ಬಗೆಗೆ ಇರುವ ಹೇಳಿಕೆಯಲ್ಲಿ ಪೂರ್ಣಯ್ಯ ಅವರ ಸಮಯಸಾಧಕತನವನ್ನು ತಿಳಿಸುವುದು ಮುಖ್ಯವಾಗಿತ್ತು. ಗ್ಯಾಸೆಟಿಯರ್‌ಗಳ ವಿಚಾರಗಳನ್ನು ಇಲ್ಲಿ ಸಮಗ್ರವಾಗಿ ಸಂಶೋಧಕರು ಕಟ್ಟಿಕೊಟ್ಟಿದ್ದಾರೆ. ವಸಾಹತುಶಾಹಿಯ ಆಡಳಿತದ ಭಾಗವಾದರೂ, ಸ್ಥಳೀಯ ಚರಿತ್ರೆ ರಚನೆಗೆ ಸಹಾಯಕವಾಯಿತು ಎಂಬುದನ್ನು ಇಲ್ಲಿ ಗಮನಿಸಿದ್ದಾರೆ. ಆಕರಗಳನ್ನು ಸಾಕಷ್ಟು ಬಳಸಿಕೊಂಡಿದ್ದಾರೆ. ವಸಾಹತುಶಾಹಿ ವ್ಯವಸ್ಥೆಯಲ್ಲಿಯೇ ಚಿತ್ರಿಸಿದ್ದರೂ ಸ್ಥಳೀಯ ಇತಿಹಾಸ ರಚನೆಗೆ ಅನುಕೂಲವಾಗಿದೆ ಎಂಬುದನ್ನು ಚರ್ಚಿಸಿದ್ದಾರೆ.

ಮಹದೇವಸ್ವಾಮಿ ಎನ್. ಅವರು **ಮೈಸೂರು ಒಡೆಯರ ಕಾಲದ ಸಂಸ್ಕೃತಿ: ಒಂದು ಅಧ್ಯಯನ(ಕ್ರಿ.ಶ.೧೩೯೯–೧೮೬೮)(೨೦೦೯)**[೩೮] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಒಡೆಯರ ಆಡಳಿತ ವ್ಯವಸ್ಥೆ ಮೂಡಿಬಂದಿದೆ. ಅಲ್ಲದೇ ಪರಂಪರಾಗತವಾಗಿ ಬೆಳೆದುಬಂದ ಆಡಳಿತ ವ್ಯವಸ್ಥೆಯನ್ನು ಬ್ರಿಟಿಷರು ವಸಾಹತು ಸಂಘರ್ಷದ ನಡುವೆ ಬೆಳೆಸಿದರು ಎಂಬುದು ಮುಖ್ಯ. ಸನಾತನ ಧರ್ಮ ಪರಂಪರೆಯ ರಕ್ಷಣೆಯಲ್ಲಿ ಒಡೆಯರ ಪಾತ್ರ ಏನು ಎಂಬ ವಿಚಾರ ಕುರಿತು ಚರ್ಚೆಗೆ ಎಡೆ ಮಾಡಿಕೊಡುತ್ತಾರೆ. ಮೈಸೂರು ಒಡೆಯರ ಕಾಲದ ಸಂಸ್ಕೃತಿ ಎಂದರೆ ಅದು ಕೇವಲ ಒಡೆಯರ ರಾಜಮನೆತನಕ್ಕೆ ಸೀಮಿತವಾಗಿರದೇ ಸಂಪೂರ್ಣವಾಗಿ ಜನಸಾಮಾನ್ಯರ ಜೀವನಶೈಲಿಯನ್ನು ಪ್ರತಿಬಿಂಬಿಸುತ್ತದೆ ಎನ್ನುವುದು ಪ್ರಮುಖವಾಗಿದೆ. ಬ್ರಿಟಿಷರ ಅಧಿಕಾರದ ಹಿಡಿತದಲ್ಲಿ ಸಂಸ್ಕೃತಿ ಯಾವ ರೀತಿ ಪಲ್ಲಟವಾಯಿತು ಎನ್ನುವುದನ್ನು ಗಮನಿಸುವುದು ಸೂಕ್ತವಾಗಿದೆ.

ಈ ಮಹಾಪ್ರಬಂಧದಲ್ಲಿ ಮೊದಲು ಒಡೆಯರ ಆಡಳಿತದ ಸಂಸ್ಕೃತಿಯನ್ನು ಬಿಂಬಿಸಿದ್ದಾರೆ. ಮುಖ್ಯವಾಗಿ ರಾಜ್ಯ ಸ್ಥಾಪನೆ, ಯುದ್ಧಗಳು, ಸೇನಾಡಳಿತ, ನ್ಯಾಯಾಡಳಿತ ಇವೇ ಮೊದಲಾದವುಗಳಲ್ಲಿನ ಸಂಸ್ಕೃತಿಗಳನ್ನು ಚಿತ್ರಿಸಿದ್ದಾರೆ. ಸೇನಾಡಳಿತದಲ್ಲಿ ನಾಯಕರು ದೇವಿಯ ಮುಂದೆ ರಾಜ್ಯದ ರಕ್ಷಣೆಗಾಗಿ ಬೇಡಿಕೊಳ್ಳುವ ಸಂಸ್ಕೃತಿ, ಯುದ್ಧದಲ್ಲಿ ಶತ್ರುಗಳಿಗೆ ವಿಚಿತ್ರ ಶಿಕ್ಷೆ ನೀಡುವ ಸಂಸ್ಕೃತಿ ಹೀಗೆ ಹಲವಾರು ಅಂಶಗಳನ್ನು ಗುರುತಿಸಿದ್ದಾರೆ. ದೇವಾಲಯಗಳ ನಿರ್ವಹಣೆಗಾಗಿ ಬ್ರಾಹ್ಮಣರಿಗೆ ಬ್ರಹ್ಮದಾಯ ಮತ್ತು ದೇವದಾಯ ಎಂಬುದಾಗಿ ಭೂಮಿಯನ್ನು ದಾನ ಕೊಡುವ ಸಂಸ್ಕೃತಿ ಇತ್ತು ಎಂಬುದನ್ನು ವಿವರಿಸಿದ್ದಾರೆ. ಹೀಗೆ ಪ್ರತಿಯೊಂದು ವ್ಯವಸ್ಥೆಯಲ್ಲಿಯೂ ಒಂದೊಂದು ರೀತಿ ನೀತಿಯ ಸಂಸ್ಕೃತಿ ಇದೆ ಎಂಬುದನ್ನು ಚರ್ಚಿಸಿದ್ದಾರೆ. ಸಾಮಾಜಿಕ ವ್ಯವಸ್ಥೆಯಲ್ಲಿ ಜಾತಿ ಎಷ್ಟು ಮುಖ್ಯವಾಗಿದೆ ಎಂದರೆ ಸಮಾಜದ ಅವಿಭಾಜ್ಯ ಅಂಗವಾಗಿದ್ದ ಪ್ರತಿಯೊಬ್ಬರೂ ತಮ್ಮ ಜಾತಿಯ ನಿಬಂಧನೆಗಳನ್ನು ಮೀರದಂತೆ ತಿಳಿಸಲಾಗುತ್ತಿತ್ತು. ಜಾತಿ ಕಟ್ಟುಪಾಡುಗಳನ್ನು ಮೀರಿದವರು ಆಯಾಯ ಜಾತಿಗಳ ಸಾಮಾಜಿಕ ಬಹಿಷ್ಕಾರಕ್ಕೆ ಒಳಗಾಗುತ್ತಿದ್ದರು. ಉಪಜಾತಿಗಳು ಮತ್ತು ಆಧಾರದ ಮೇಲೆ ರೂಪಿತವಾಗಿದ್ದವು ಎನ್ನುತ್ತಾರೆ. ಎಡಗೈ ಗುಂಪಿನಲ್ಲಿ ಒಂಬತ್ತು ಜಾತಿಗಳು, ಬಲಗೈ ಗುಂಪಿನಲ್ಲಿ ಹದಿನೆಂಟು ಜಾತಿಗಳಿದ್ದವು ಎಂಬುದನ್ನು ತಿಳಿಸಿದ್ದಾರೆ(ಪು.೧೦೫). ಇವುಗಳ ನಡುವೆ ಜಾತಿ ಸಂಘರ್ಷಗಳು ಪ್ರಮುಖವಾದವು.

ಸ್ತ್ರೀಯರ ಸ್ಥಾನಮಾನದಲ್ಲಿನ ಬದಲಾವಣೆಗಳನ್ನು ಗಮನಿಸಬಹುದು. ಮಹಿಳೆಯರ ವಿವಾಹಪದ್ಧತಿ, ಸತಿಸಹಗಮನ ಪದ್ಧತಿಯ ಆಚರಣೆ ವಿಭಿನ್ನವಾಗಿತ್ತು ಎಂಬ ಅಂಶಗಳನ್ನು ಕ್ರೋಢೀಕರಿಸಿದ್ದಾರೆ. ಜನರ ಆಹಾರ, ಉಡುಪು ಮತ್ತು ಆಭರಣಗಳು ತೊಡುವ ಸಂಸ್ಕೃತಿ ಹೇಗಿತ್ತು ಎಂಬುದನ್ನು ಇಲ್ಲಿ ವಿವರಿಸಿದ್ದಾರೆ. ಇವು ಪ್ರತಿಷ್ಠೆ ಮತ್ತು ಸಂಸ್ಕೃತಿಯ ಪ್ರತೀಕ ಎನ್ನುವುದು ಮುಖ್ಯ. ಮೈಸೂರು ಒಡೆಯರ ಕಾಲದಲ್ಲಿ ಧರ್ಮ ಸಮನ್ವಯತೆಯನ್ನು ಎತ್ತಿ ಹಿಡಿದು ಎಲ್ಲಾ ಧರ್ಮೀಯರನ್ನು ಒಂದು ಧಾರ್ಮಿಕ ನೆಲೆಗಟ್ಟಿನ ಮೇಲೆ ಮುನ್ನಡೆಸಿದರು. ಉತ್ಸವಗಳು, ಜಾತ್ರೆಗಳಲ್ಲಿ ಎಲ್ಲಾ ಜಾತಿಯ ಜನರು ಭಾಗವಹಿಸುತ್ತಿದ್ದರು. ರಾಜ ಒಡೆಯರ ಕಾಲದಿಂದ ಪ್ರಾರಂಭವಾಗಿ ಇಂದಿಗೂ ಈ ನವರಾತ್ರಿ ಉತ್ಸವ ನಡೆದುಕೊಂಡು ಬರುತ್ತಿದೆ.

ಇದರ ವಿವಿಧ ಆಚರಣೆಗಳು, ವಿಶಿಷ್ಟವಾಗಿವೆ ಎಂಬುದನ್ನು ಹೇಳುತ್ತಾರೆ(ಪು.೧೮೨-೧೮೪). ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮೈಸೂರು ಒಡೆಯರ ಕಾಲದಲ್ಲಿ ಸಾಕಷ್ಟು ಪ್ರಗತಿ ಆದುದನ್ನು ನೋಡಬಹುದು. ಪ್ರಮುಖವಾಗಿ ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ತಿರುಮಲಾರ್ಯನ 'ಚಿಕ್ಕದೇವರಾಜ ವಂಶಾವಳಿ' ಮತ್ತು 'ಚಿಕ್ಕದೇವರಾಜ ವಿಜಯ' ಎಂಬ ಎರಡು ಐತಿಹಾಸಿಕ ಗ್ರಂಥಗಳು ಮೈಸೂರು ರಾಜ್ಯದ ಬೆಳವಣಿಗೆಯನ್ನು ತಿಳಿಸಿವೆ. ಹಾಗೆಯೇ ಸ್ತ್ರೀಯರು ಕೂಡ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡಿರುವುದನ್ನು ಗಮನಿಸಬಹುದು. ಸುರಚಿ ಹೊನ್ನಮ್ಮನ 'ಹದಿಬದೆಯ ಧರ್ಮ' ಕೃತಿಯು ಪ್ರಮುಖವಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಹೆಚ್ಚಿನ ಮಟ್ಟದಲ್ಲಿ ಸಾಹಿತ್ಯ ರಚನೆ ಆಯಿತು. ದೇವಚಂದ್ರನ 'ರಾಜಾವಳೀ ಕಥೆ' ಮತ್ತು 'ಪಾರಿಜಾತ ಪರಿಣಯ' ಈ ಕೃತಿಗಳು ಚಾರಿತ್ರಿಕ ಮಹತ್ವವುಳ್ಳ ಕೃತಿಯಾಗಿವೆ ಎಂಬುದನ್ನು ಚರ್ಚಿಸಿದ್ದಾರೆ. ಈ ಕಾಲಾವಧಿಯಲ್ಲಿನ ಕರ್ನಲ್ ಮೆಕೆಂಝಿ, ಬುಕಾನನ್, ಮಾರ್ಕ್‌ವಿಲ್ಕ್ಸ್ ಅವರ ಕೃತಿಗಳ ವಿವರಗಳು ಗೌಣವಾಗಿವೆ.

ಮೈಸೂರಿನ ಸ್ಮಾರಕ, ಅರಮನೆಗಳ ಚಿತ್ರಗಳು ಪ್ರಸಿದ್ಧಿ ಪಡೆದಿವೆ. ವಿಭಿನ್ನ ಚಿತ್ರಕಲೆ ಒಳಗೊಂಡಂತೆ 'ಮೈಸೂರು ಚಿತ್ರಕಲೆ' ಎಂದೇ ಕರೆಯಲಾಗಿದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಕಾಲದ ಚಿತ್ರಗಳು ಹೆಚ್ಚಾಗಿ ಶ್ರೀರಂಗಪಟ್ಟಣದಲ್ಲಿ ದೊರೆತಿವೆ. ಕಲೆ ಮತ್ತು ವಾಸ್ತುಶಿಲ್ಪ, ಸಂಗೀತ ಹೀಗೆ ಎಲ್ಲಾ ಕ್ಷೇತ್ರಗಳ ವಿವರಗಳನ್ನು ವಿವರಣಾತ್ಮಕ ರೀತಿಯಲ್ಲಿ ತಿಳಿಸಿದ್ದಾರೆ. ಒಟ್ಟಾರೆಯಾಗಿ ಪ್ರಾರಂಭದ ಒಡೆಯರ ಆಡಳಿತದವರೆಗೆ ಬರುವ ಸಂಸ್ಕೃತಿಯ ವಿಚಾರಗಳನ್ನು ಕ್ರೋಢೀಕರಿಸಿದ್ದಾರೆ. ಇಲ್ಲಿ ಬಳಸಿಕೊಂಡಿರುವ ಆಕರಗಳು ನೇರವಾದ ವಿಚಾರಗಳನ್ನು ತಿಳಿಸು ವಂತಹವುಗಳಾಗಿವೆ.

**ಚರಿತಾ** ಅವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ವಿಭಾಗಕ್ಕೆ **ಕರ್ನಾಟಕದ ಚಿತ್ರಕಲಾ ಪರಂಪರೆಯಲ್ಲಿ ಮೈಸೂರು ಸಾಂಪ್ರದಾಯಿಕ ಕಲಾವಿದರ ಪಾತ್ರ ಒಂದು ಅಧ್ಯಯನ**[೩] ಎಂಬ ಪಿಎಚ್.ಡಿ.ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಮೈಸೂರು ಸಂಸ್ಥಾನದಲ್ಲಿನ ಚಿತ್ರಕಲಾವಿದರ ವಿವರಗಳನ್ನು ತಿಳಿಸಿದ್ದಾರೆ. ಮೈಸೂರು ಸಂಸ್ಥಾನದ ಸಾಂಸ್ಕೃತಿಕ ಪರಂಪರೆಯಲ್ಲಿ ಚಿತ್ರಕಲೆ ಪ್ರಮುಖವಾದುದಾಗಿದೆ ಎಂಬುದನ್ನು ಚರ್ಚಿಸಿದ್ದಾರೆ. ರಾಜ ಒಡೆಯರು, ರಣಧೀರ ಕಂಠೀರವ ನರಸರಾಜ ಒಡೆಯರ್, ಚಿಕ್ಕದೇವರಾಜ ಒಡೆಯರ್, ಕಂಠೀರವ ರಾಜ ಒಡೆಯರ್, ದೊಡ್ಡ ಕೃಷ್ಣರಾಜ ಒಡೆಯರ್ ಚಿತ್ರಕಲಾವಿದರಿಗೆ ಆಶ್ರಯ ನೀಡಿದ ವಿವರಗಳಿವೆ. ಸಾಂಪ್ರದಾಯಿಕ ಕಲಾವಿದರು ಅನೇಕ ಭಿತ್ತಿಚಿತ್ರಗಳನ್ನು ದೇವಾಲಯ, ಅರಮನೆಗಳ ಮೇಲೆ ಚಿತ್ರಿಸಿದ್ದಾರೆ. ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿಯೂ ಚಿತ್ರಕಲೆಗೆ ಪ್ರೋತ್ಸಾಹ ನೀಡಿದ್ದಾರೆ. ಇದಕ್ಕೆ ಶ್ರೀರಂಗಪಟ್ಟಣದ ದರಿಯಾದೌಲತ್ ಭಿತ್ತಿಚಿತ್ರಗಳೇ ಸಾಕ್ಷಿ. ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ ಶ್ರೀತತ್ವನಿಧಿ ಕೃತಿಗೆ ತಿಪ್ಪಾಜಿ ಎಂಬ ಚಿತ್ರ ಕಲಾವಿದರು ಚಿತ್ರಗಳನ್ನು ಬಿಡಿಸಿರುವುದನ್ನು ಗಮನಿಸಬಹುದು. ಮುಖ್ಯವಾಗಿ ರವಿವರ್ಮ ಅವರ ಚಿತ್ರಗಳು ಜನಪ್ರಿಯವಾಗಿವೆ. ಕ್ರಿ.ಶ.೧೮೮೫ರಲ್ಲಿ ಮೈಸೂರಿನ ಮಹಾರಾಜ ಚಾಮರಾಜ ಒಡೆಯರ್ ಅವರ ಆಹ್ವಾನದ ಮೇರೆಗೆ ಮೈಸೂರಿಗೆ ಬಂದು ಮೂರು ತಿಂಗಳು ತಂಗಿದ್ದು,

ಒಡೆಯರ್ ಅವರ ಪರಿವಾರದ ಚಿತ್ರಗಳನ್ನು ರಚಿಸಿಕೊಟ್ಟರು. ಈ ಚಿತ್ರಗಳನ್ನು ಇಂದಿಗೂ ಮೈಸೂರು ಅರಮನೆಯ ಸಂಗ್ರಹದಲ್ಲಿ ಕಾಣಬಹುದು. ಜಾವಗಲ್ಲು ನರಸಿಂಹಯ್ಯ, ನಗುವಿನಹಳ್ಳಿ ನಾರಾಯಣಪ್ಪ, ಯಲ್ಲಯ್ಯ, ವೀರಣ್ಣ, ಅಳಸಿಂಗ್ರಯ್ಯ, ಸುಂದರಯ್ಯ, ನೆಲಮಂಗಲದ ರಂಗಪ್ಪ, ದುರ್ಗದ ಕೃಷ್ಣಪ್ಪ, ಗುರಿಕಾರ ತಿಪ್ಪಣ್ಣ, ತಂಜಾವೂರು ಕೊಂಡಯ್ಯ, ವೆಂಕಟಸುಬ್ಬು ಮೊದಲಾದ ಚಿತ್ರಕಾರರ ವಿವರಗಳನ್ನು ಕ್ರೋಡೀಕರಿಸಿದ್ದಾರೆ.

ಹಾಗೆಯೇ ರವಿವರ್ಮ ಕಲಾವಿದರನ್ನು ವಿಮರ್ಶೆಗೆ ಒಳಪಡಿಸಿರುವ ವಿವರಗಳನ್ನು ತಿಳಿಸಿದ್ದಾರೆ. ಸ್ವದೇಶಿ ಚಳವಳಿಯ ನೇತಾರರಾದ ಅಬನೀಂದ್ರನಾಥ ಠಾಕೂರ್, ನಂದಲಾಲ್ ಬೋಸ್ ಮೊದಲಾದವರು ರವಿವರ್ಮನನ್ನು ರಾಷ್ಟ್ರವಿರೋಧಿ ಎಂದು ಟೀಕಿಸುವ ವಿವರಗಳನ್ನು ಕ್ರೋಡೀಕರಿಸಿದ್ದಾರೆ. ಪಾಶ್ಚಾತ್ಯ ಜೀವನಶೈಲಿ, ಆಚಾರ ವಿಚಾರಗಳ ಬಲವಂತ ಹೇರಿಕೆಯನ್ನು ತೀವ್ರವಾಗಿ ವಿರೋಧಿಸಿದ ಸ್ವದೇಶಿ ಚಳವಳಿಯ ಬಗ್ಗೆ ವಿರೋಧ ವ್ಯಕ್ತವಾಯಿತು. ರವಿವರ್ಮನು ಪಾಶ್ಚಾತ್ಯ ಸಂಸ್ಕೃತಿಗೆ ಮಾರು ಹೋಗಿದ್ದು, ತೀವ್ರ ಟೀಕೆಗೆ ಒಳಗಾಗಬೇಕಾಯಿತು ಎಂಬುದನ್ನು ಚರ್ಚಿಸಿದ್ದಾರೆ. ಈ ನಿಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿ ಚಿತ್ರಕಲೆಯ ಕಲಾವಿದರು ಸಾಂಸ್ಕೃತಿಕವಾಗಿ ತಮ್ಮದೇ ಆದ ಛಾಪು ಮೂಡಿಸಿದ್ದಾರೆ ಎಂಬುದನ್ನು ಈ ಮಹಾಪ್ರಬಂಧದಿಂದ ತಿಳಿಯಬಹುದು.

**ಹನುಮಂತರಾಜು ಎಂ.ಜಿ.** ಅವರು ಮೈಸೂರು ವಿಶ್ವವಿದ್ಯಾನಿಲಯದ ಗಾಂಧಿ ಅಧ್ಯಯನ ವಿಭಾಗಕ್ಕೆ **'ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿಯವರ ರಾಜಕೀಯ ಚಿಂತನೆಗಳ ಪ್ರಭಾವ(೧೯೨೦–೧೯೪೭)'**(೨೦೧೦)[೪೦] ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಪ್ರಸ್ತುತ ಈ ಮಹಾಪ್ರಬಂಧದಲ್ಲಿ ೧೯೨೦–೧೯೪೭ರ ಕಾಲಾವಧಿಯ ಚೌಕಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿನ ಗಾಂಧೀಜಿ ಅವರ ನೇತೃತ್ವದಲ್ಲಿ ಜರುಗಿದ ಸ್ವಾತಂತ್ರ್ಯ ಚಳವಳಿ ಮತ್ತು ಆ ಸಂದರ್ಭದಲ್ಲಿ ಕಂಡುಬರುವ ರಾಜಕೀಯ ಮತ್ತು ಆಡಳಿತಾತ್ಮಕ ನೀತಿಗಳ ಪುನಶ್ಚೇತನವನ್ನು ಕುರಿತು ಪರಿಶೀಲಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ರಾಜಕೀಯ ಬದಲಾವಣೆಗಳ ಜೊತೆಗೆ ಆರ್ಥಿಕ ಹಾಗೂ ಸಾಮಾಜಿಕ ಬದಲಾವಣೆಗಳು ಸಂಭವಿಸಿದವು ಎಂಬುದನ್ನು ಚರ್ಚಿಸಿದ್ದಾರೆ. ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಆಡಳಿತಾವಧಿಯಲ್ಲಿ ಕೈಗೊಂಡ ಪ್ರಗತಿದಾಯಕ ಯೋಜನೆಗಳ ವಿಚಾರಗಳನ್ನು ಕ್ರೋಡೀಕರಿಸಿದ್ದಾರೆ. ಈ ಪ್ರಗತಿಯ ಕಾರ್ಯಗಳಲ್ಲಿ ವಸಾಹತುಶಾಹಿ ಆಡಳಿತ ಯಾವ ರೀತಿ ಸ್ಪಂದಿಸಿತು ಎಂಬುದನ್ನು ತಿಳಿಸಿರುವುದನ್ನು ನೋಡಬಹುದು.

ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿ ಅವರ ರಾಜಕೀಯ ಚಿಂತನೆಗಳ ಪ್ರಭಾವ ಯಾವ ರೀತಿ ಬೀರಿತು ಎಂಬುದು ಇಲ್ಲಿ ಮುಖ್ಯ. ಕರ್ನಾಟಕದಾದ್ಯಂತ ಗಾಂಧೀಜಿ ಅವರು ಹಲವಾರು ಸಂದರ್ಭಗಳಲ್ಲಿ ಪ್ರವಾಸ ಮಾಡಿದ್ದರು. ಅಲ್ಲದೇ ೧೯೨೪ರ ಬೆಳಗಾವಿಯಲ್ಲಿ ನಡೆದ ಅಖಿಲ ಭಾರತ ರಾಷ್ಟ್ರೀಯ ಕಾಂಗ್ರೆಸ್‌ನ ಮಹಾ ಅಧಿವೇಶನಕ್ಕೆ ಗಾಂಧೀಜಿ ಅವರೇ ಅಧ್ಯಕ್ಷರಾಗಿದ್ದದ್ದು ಕರ್ನಾಟಕ ಹಿರಿಮೆಗೆ ಸಾಕ್ಷಿ ಎನ್ನುತ್ತಾರೆ. ಕರ್ನಾಟಕದಲ್ಲಿ ನಡೆದ ಸತ್ಯಾಗ್ರಹ, ಸ್ವದೇಶಿ, ಹರತಾಳ, ಪಿಕೆಟಿಂಗ್ ಮುಂತಾದ ಸ್ವಾತಂತ್ರ್ಯ ಹೋರಾಟದ ಚಳವಳಿಗಳು ಗಾಂಧೀಜಿ ಅವರ ಬಳುವಳಿಯಾಗಿದ್ದವು. ಇವು ಸತ್ಯ, ಅಹಿಂಸೆ ಮತ್ತು ತ್ಯಾಗದಿಂದ ಕೂಡಿರುತ್ತಿದ್ದವು.

ನಾಲ್ವಡಿ ಕೃಷ್ಣರಾಜ ಒಡೆಯರು, ಜಯಚಾಮರಾಜ ಒಡೆಯರ್, ದಿವಾನರಾದ ಸರ್.ಎಂ. ವಿಶ್ವೇಶ್ವರಯ್ಯ, ಮಿರ್ಜಾ ಇಸ್ಮಾಯಿಲ್ ಮೊದಲಾದವರು ಗಾಂಧೀಜಿ ಅವರಲ್ಲಿ ಗೌರವ ಇಟ್ಟುಕೊಂಡಿದ್ದರು. ಅಲ್ಲದೇ ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿ ಅವರ ಸ್ವದೇಶಿ, ಸರ್ವೋದಯ, ಖಾದಿ ಪ್ರಚಾರ, ಚರಕದ ಬಳಕೆ, ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ ಹಾಗೂ ಹರಿಜನೋದ್ಧಾರ, ಸ್ತ್ರೀಯರ ಸಮಾನತೆ ಮತ್ತು ಸಬಲೀಕರಣ ಮುಂತಾದ ಕಾರ್ಯಕ್ರಮಗಳನ್ನು ಸರ್ಕಾರದ ಅಧಿಕೃತ ಕಾರ್ಯಕ್ರಮಗಳನ್ನಾಗಿ ಕೈಗೊಂಡು ಪ್ರೋತ್ಸಾಹಿಸಿದ್ದರು ಎಂಬುದನ್ನು ತಿಳಿಸಿದ್ದಾರೆ(ಪು.೧೧೬). ೧೯೨೭ರಲ್ಲಿ ದೇಶದಾದ್ಯಂತ ಖಾದಿ ಪ್ರಚಾರ ಕೈಗೊಂಡಾಗ ಅನಾರೋಗ್ಯ ಉಂಟಾಯಿತು. ಅವರು ವಿಶ್ರಾಂತಿಗಾಗಿ ಬೆಂಗಳೂರು ಸಮೀಪದ ನಂದಿಬೆಟ್ಟದ ವಿಶ್ರಾಂತಿಧಾಮದಲ್ಲಿ ತಂಗಿದ್ದರು. ಆ ಸಮಯದಲ್ಲಿ ಗಾಂಧೀಜಿ ಅವರು ಮೈಸೂರು ಸಂಸ್ಥಾನದ ಅನೇಕ ಊರು-ಕೇರಿಗಳಿಗೆ ಭೇಟಿ ಕೊಟ್ಟು ಹೆಚ್ಚಾಗಿ ಸ್ವದೇಶಿ, ಖಾದಿ ಬಳಕೆ ಮುಂತಾದವುಗಳ ಬಗ್ಗೆ ಪ್ರಚಾರ ಮಾಡಿದರು ಎಂಬುದು ಇಲ್ಲಿ ಮುಖ್ಯ. ಗಾಂಧೀಜಿ ಅವರು ಸುತ್ತಮುತ್ತಲಿನ ಪ್ರದೇಶಗಳಾದ ತುಮಕೂರು, ಕೊರಟಗೆರೆ, ಚಿಕ್ಕಬಳ್ಳಾಪುರ, ಶಿಡ್ಲಘಟ್ಟ, ಚಿಂತಾಮಣಿ, ಕೋಲಾರ ಮುಂತಾದ ಕಡೆಗಳಲ್ಲಿ ಕೈಗೊಂಡ ಕಾರ್ಯಕ್ರಮಗಳನ್ನು ತಿಳಿಸಿದ್ದಾರೆ. ಗಾಂಧೀಜಿ ಅವರು ಸ್ವದೇಶಿ ಉತ್ಪಾದನೆಗಳ ಬಗ್ಗೆ ತಿಳುವಳಿಕೆ ನೀಡಿ ಪ್ರೋತ್ಸಾಹ ನೀಡಬೇಕೆಂದು ಜನರಿಗೆ ಮನವಿ ಮಾಡಿಕೊಂಡ ವಿವರಗಳನ್ನು ಕ್ರೋಢೀಕರಿಸಿದ್ದಾರೆ.

ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿ ಅವರ ಸ್ವದೇಶಿ ಚಳವಳಿ ಪ್ರಾರಂಭವಾಗಿ ನಶಿಸಿ ಹೋಗುತ್ತಿದ್ದ ಕೃಷಿ ಮತ್ತು ವೃತ್ತಿಪರ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸುವ ಮತ್ತು ವೃತ್ತಿಪರ ಕೈಗಾರಿಕೆಗಳನ್ನು ಪುನಶ್ಚೇತನಗೊಳಿಸುವ ಸಲುವಾಗಿ ಈ ಚಳವಳಿ ಪ್ರಾರಂಭಿಸಲಾಯಿತು ಎಂಬುದು ಮುಖ್ಯ. ಎಂ.ವೆಂಕಟಕೃಷ್ಣಯ್ಯ, ತಾತಯ್ಯ, ಎಂ.ಎನ್.ಜೋಯಿಸ್, ಸೀತಾರಾಮಯ್ಯಂಗಾರ್, ಹೆಚ್.ಎಸ್.ದೊರೆಸ್ವಾಮಿ, ಎ.ರಾಮಣ್ಣ, ತಗಡೂರು ರಾಮಚಂದ್ರರಾಯರು ಇನ್ನೂ ಮುಂತಾದವರು ಸ್ವಾತಂತ್ರ್ಯ ಹೋರಾಟದಲ್ಲಿ ಗುರುತಿಸಿಕೊಂಡರು. ಮಹಿಳೆಯರಾದ ಯಶೋಧರಮ್ಮ ದಾಸಪ್ಪ, ವಿಶಾಲಾಕ್ಷಮ್ಮ, ಬಳ್ಳಾರಿ ಸಿದ್ದಮ್ಮ, ಟಿ.ಸುನಂದಮ್ಮ, ಕೆ.ಭಗೀರಥಮ್ಮ ಮೊದಲಾದವರು ಅಸ್ಪೃಶ್ಯತಾ ನಿವಾರಣೆ, ಹರಿಜನೋದ್ಧಾರ, ಸ್ತ್ರೀಯರ ಸಮಸ್ಯೆಗಳ ಪರಿಹಾರ ಮತ್ತು ಅಭಿವೃದ್ಧಿಗೆ ಶ್ರಮಿಸಿದರು ಎಂಬ ವಿಚಾರಗಳನ್ನು ಚರ್ಚಿಸಿದ್ದಾರೆ. ಧ್ವಜ ಹಾರಿಸುವ ಕಾರ್ಯಕ್ರಮದಲ್ಲಿ ನಡೆದ ವಿದುರಾಶ್ವತ್ಥ, ಗೋಲಿಬಾರ್ ಘಟನೆ ಪ್ರಮುಖವಾದುದು. ಮೈಸೂರು ಸಂಸ್ಥಾನದಲ್ಲಿ ಜವಾಬ್ದಾರಿ ಸರ್ಕಾರದ ಸ್ಥಾಪನೆಗಾಗಿ 'ಮೈಸೂರು ಚಲೋ' ಅಥವಾ 'ಅರಮನೆ ಸತ್ಯಾಗ್ರಹ' ಚಳವಳಿಯನ್ನು ನಡೆಸಲಾಯಿತು. ಕೊನೆಗೆ ಪ್ರಜಾಪ್ರಭುತ್ವ ಸರ್ಕಾರ ಅಸ್ತಿತ್ವಕ್ಕೆ ಬಂದಿತು. ಈ ನಿಟ್ಟಿನಲ್ಲಿ ಗಾಂಧೀಜಿ ಅವರ ರಾಜಕೀಯ ಚಿಂತನೆಗಳು ಮೈಸೂರು ಸಂಸ್ಥಾನದ ಮೇಲೆ ಸಾಕಷ್ಟು ಪ್ರಭಾವ ಬೀರಿವೆ. ಆದರೆ ಬಿ.ಆರ್.ಅಂಬೇಡ್ಕರ್ ಅವರ ಪ್ರಭಾವ ಮೈಸೂರು ಸಂಸ್ಥಾನದ ಮೇಲೆ ಏಕೆ ಬೀರಲಿಲ್ಲ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣೇತರ ಚಳವಳಿ ಆದ ಮೇಲೆ ಬ್ರಾಹ್ಮಣೇತರರು ಒಂದು ಐಡೆಂಟಿಟಿಯನ್ನು ಪಡೆದುಕೊಂಡರು ಎನ್ನುವುದಾದರೆ ಬ್ರಾಹ್ಮಣರು ಹೇಗೆ ಇತರ ಹಿಂದುಳಿದ ವರ್ಗಗಳನ್ನು ತಮ್ಮ ಅಸ್ತಿತ್ವವನ್ನು

ಉಳಿಸಿಕೊಳ್ಳಲು ಬಳಸಿಕೊಂಡರು ಎಂಬುದು ಮುಖ್ಯ. ಈ ಹಿನ್ನೆಲೆಯಲ್ಲಿಯೇ ಗಾಂಧೀಜಿ ಅವರ ರಾಜಕೀಯ ತತ್ವಗಳು ಪ್ರಭಾವ ಬೀರಿವೆ ಎನ್ನಬಹುದು. ಮೇಲ್ವರ್ಗ ಮತ್ತು ರಾಜಕೀಯವಾಗಿ ಮುಂಚೂಣಿಯಲ್ಲಿರುವವರು ತಮ್ಮ ಮೂಲತತ್ವಗಳನ್ನು ಜನರ ಮೇಲೆ ಏರಿ ಜನರ ಮನವೊಲಿಸುವಿಕೆಯು ಆಗಿತ್ತು. ದಲಿತ ವರ್ಗಗಳಿಗೆ ಬೇಕಾಗುವ ಶಿಕ್ಷಣ, ಉದ್ಯೋಗ ಮುಂತಾದ ಸೌಲಭ್ಯಗಳನ್ನು ನೀಡಿದರು. ಈ ನಿಟ್ಟಿನಲ್ಲಿ ಗಾಂಧೀಜಿ ಅವರು ನಾಲ್ವಡಿ ಕೃಷ್ಣರಾಜ ಒಡೆಯರನ್ನು 'ರಾಜರ್ಷಿ' ಎಂತಲೂ ಅವರ ರಾಜ್ಯವನ್ನು 'ರಾಮರಾಜ್ಯ' ಎಂದು ಕರೆದರು. ಕೆಳವರ್ಗಗಳ ಬೆಂಬಲವು ಇಲ್ಲಿ ಅಗತ್ಯ ಎಂಬುದನ್ನು ಮನಗಾಣಬಹುದು.

ಪ್ರಮುಖವಾಗಿ ಗಾಂಧೀಜಿ ಅವರ ಸರ್ವೋದಯ ಪರಿಕಲ್ಪನೆಯು ಶೋಷಣಾರಹಿತ ಸಾಮಾಜಿಕ ಜೀವನ ರೂಪಿಸುವುದಾಗಿದೆ(ಪು.೯೩). ಇದರಲ್ಲಿ ಉಚ್ಚ-ನೀಚ, ಕರಿಯ-ಬಿಳಿಯ, ಬಡವ-ಬಲ್ಲಿದ, ಸುಶಿಕ್ಷಿತ-ಅಶಿಕ್ಷಿತ, ಬ್ರಾಹ್ಮಣ-ಶೂದ್ರ, ಸ್ತ್ರೀ-ಪುರುಷ ಭೇದಭಾವವಿರಲಿಲ್ಲ. ಪ್ರತಿಯೊಬ್ಬರೂ ಶರೀರಶ್ರಮವನ್ನು ಗೌರವಿಸಬೇಕು. ಪ್ರತಿಯೊಬ್ಬನೂ ತನ್ನ ಕಲ್ಯಾಣಕ್ಕಾಗಿ ದುಡಿಯುವುದರ ಜೊತೆಗೆ ಇಡೀ ಸಮಾಜದ ಹಿತಕ್ಕಾಗಿ ಶ್ರಮಿಸಬೇಕು ಎಂದಿದ್ದಾರೆ. ಪ್ರಧಾನ ಮಂತ್ರಿಯಾದ ನರೇಂದ್ರ ಮೋದಿ ಸರ್ಕಾರವು 'ಸ್ವಚ್ಛ ಭಾರತ' ಎನ್ನುವ ಪರಿಕಲ್ಪನೆಯನ್ನು ಜಾರಿಗೆ ತಂದ ವಿಚಾರವನ್ನು ಇಲ್ಲಿ ಅರ್ಥ ಮಾಡಿಕೊಳ್ಳಬಹುದು. ಗಾಂಧೀಜಿ ಅವರ ಗ್ರಾಮಸ್ವರಾಜ್ಯ ಪರಿಕಲ್ಪನೆಯು ಹಳ್ಳಿಗಳ ಮೂಲಕ ಅಭಿವೃದ್ಧಿ ಸಾಧ್ಯ ಎನ್ನುವುದನ್ನು ಚರ್ಚಿಸಿದ್ದಾರೆ. ಇಂದು ನಮ್ಮ ಹಳ್ಳಿಗಳ ಸ್ಥಿತಿ ಏನಾಗಿದೆ? ಗ್ರಾಮ ಪಂಚಾಯಿತಿ ಚುನಾವಣೆಗಳು ಪಕ್ಷ ರಾಜಕಾರಣ ಆಗುತ್ತಿವೆ. ಈ ನಿಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿ ಅವರ ರಾಜಕೀಯ ಚಿಂತನೆಗಳ ಪ್ರಭಾವ ಅಗಾಧವಾಗಿದ್ದು, ಜನಸಾಮಾನ್ಯರ ಮೇಲೆ ನೇರವಾಗಿ ಬೀರಿತು ಎಂಬುದನ್ನು ಇಲ್ಲಿ ಸಂಶೋಧಕರು ವಿಶ್ಲೇಷಿಸಿದ್ದಾರೆ. ಇಲ್ಲಿ ಆಕರಗಳನ್ನು ಸಾಕಷ್ಟು ದುಡಿಸಿಕೊಂಡಿದ್ದಾರೆ.

**ತ್ರಿವೇಣಿ ಅರಸ್** ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **'ವೆಲ್‌ಫೇರ್ ಮೇಜರ್ಸ್ ಆನ್ ಪಬ್ಲಿಕ್ ಹೆಲ್ತ್ ಇನ್ ಪ್ರಿನ್ಸ್ಲಿ ಮೈಸೂರ್ ೧೮೮೧-೧೯೪೭'**(೨೦೧೦)[೮೧] ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಮೊದಲು ಕಮೀಷನರ್‌ಗಳ ಆಳ್ವಿಕೆಯಲ್ಲಿ ಸಾರ್ವಜನಿಕ ಆರೋಗ್ಯದ ಕಲ್ಯಾಣವು ಯಾವ ರೀತಿ ಪ್ರಾರಂಭವಾಯಿತು ಎಂಬುದರ ಮೂಲಕ ವಿವರಗಳನ್ನು ತಿಳಿಸುತ್ತಾ ಹೋಗುತ್ತಾರೆ. ಆಧುನಿಕ ಚಿಕಿತ್ಸಾವಿಧಾನಗಳು ಯಾವ ರೀತಿ ಇವೆ ಎಂಬುದನ್ನು ತಿಳಿಸಿದ್ದಾರೆ. ಕಾಲರಾ, ಪ್ಲೇಗ್ ಮುಂತಾದ ರೋಗಗಳಿಗೆ ಯಾವ ಚಿಕಿತ್ಸಾವಿಧಾನಗಳು ಇದ್ದವು ಎಂಬುದು ಮುಖ್ಯ. ಕಮೀಷನರ್ ಆದ ಮಾರ್ಕ್ ಕಬ್ಬನ್‌ನು ಮೊದಲ ಬಾರಿಗೆ ಸಾರ್ವಜನಿಕ ಔಷಧಾಲಯವನ್ನು ಬೆಂಗಳೂರಿನ ಕೋಟೆ ಪ್ರದೇಶದಲ್ಲಿ ತೆರೆಸಿದನು. ನಂತರ ಇತರ ಆಸ್ಪತ್ರೆಗಳು ಪ್ರಾರಂಭವಾದವು ಎಂಬ ವಿವರಗಳು ಮಿಳಿತವಾಗಿವೆ. ಸಾರ್ವಜನಿಕರ ಆರೋಗ್ಯ ದೃಷ್ಟಿಯಲ್ಲಿಯೇ ಮೈಸೂರಿನಲ್ಲಿ ಮಹಾರಾಜ ಆಸ್ಪತ್ರೆ, ಕೆ.ಆರ್.ಆಸ್ಪತ್ರೆ, ವಾಣಿವಿಲಾಸ ಆಸ್ಪತ್ರೆ, ಮಾನಸಿಕ ಆಸ್ಪತ್ರೆ ಪ್ರಾರಂಭವಾದ ವಿವರಗಳನ್ನು ಚರ್ಚಿಸಿದ್ದಾರೆ.

ಮಲೇರಿಯಾ ರೋಗಕ್ಕೆ ಅಗತ್ಯ ಚಿಕಿತ್ಸೆಯನ್ನು ನೀಡಲು ಆಸ್ಪತ್ರೆಯಲ್ಲಿ ಅವಕಾಶ ಕಲ್ಪಿಸಲಾಯಿತು. ವಿಶೇಷ ಅಧಿಕಾರಿಗಳನ್ನು ನೇಮಿಸಲಾಯಿತು. ಪ್ಲೇಗನ್ನು ತಡೆಗಟ್ಟಲು ಹೆಚ್ಚಿನ ಕ್ರಮ ಕೈಗೊಂಡು ವಿವರಗಳನ್ನು ನೋಡಬಹುದು(ಪು.೧೬೧-೧೬೩). ಗ್ರಾಮೀಣ ಪ್ರದೇಶಗಳಲ್ಲಿ ನೀರಿನ ಸ್ವಚ್ಛತೆ ಇಲ್ಲದೇ ಜನತೆಯ ಆರೋಗ್ಯ ಹದಗೆಡುತ್ತಿತ್ತು. ಆದುದರಿಂದ ತಿಪ್ಪಗೊಂಡನಹಳ್ಳಿ ಅಣೆಕಟ್ಟೆಯಿಂದ ಬೆಂಗಳೂರಿಗೆ ನೀರು ಸರಬರಾಜು ಮಾಡಲಾಯಿತು. ಹೀಗೆ ನೀರಿನ ಪೂರೈಕೆ, ಆರೋಗ್ಯ ಕೇಂದ್ರಗಳ ಸ್ಥಾಪನೆ ಇವೇ ಮೊದಲಾದ ಅಂಶಗಳನ್ನು ಚರ್ಚಿಸಿದ್ದಾರೆ.

ಗ್ರಾಮೀಣ ಆರೋಗ್ಯ ತರಬೇತಿ ಕೇಂದ್ರವನ್ನು ಕ್ಲೋಸ್‌ಪೇಟೆಯಲ್ಲಿ ಸ್ಥಾಪಿಸಲಾಯಿತು. ಹಾಗೆಯೇ ಹಿಂದೂ ಮೆಡಿಸಿನ್ ಕಾಲೇಜುಗಳು ಸ್ಥಾಪನೆಯಾದ ವಿವರಗಳನ್ನು ತಿಳಿಯಬಹುದು (ಪು.೧೯೯). ಜನರಿಗೆ ಆರೋಗ್ಯದ ಬಗೆಗೆ ಅರಿವು ಮೂಡಿಸಲು ರಾತ್ರಿ ಶಾಲೆಗಳನ್ನು ಪ್ರಾರಂಭಿಸಿದರು. ಜೀವವಿಮೆಯ ಸೌಲಭ್ಯಗಳನ್ನು ಒದಗಿಸಿದರು ಎಂಬುದು ಮುಖ್ಯ. ಈ ನಿಟ್ಟಿನಲ್ಲಿ ಮೈಸೂರು ಸಂಸ್ಥಾನದಲ್ಲಿನ ಸಾರ್ವಜನಿಕ ಆರೋಗ್ಯದ ಕಲ್ಯಾಣವಾಯಿತು ಎಂಬುದನ್ನು ವಿವರಿಸಿದ್ದಾರೆ. ಆದರೆ ಇಲ್ಲಿ ಸಾರ್ವಜನಿಕ ಆರೋಗ್ಯಕ್ಕಾಗಿ ದುಡಿದ ಖಾಸಗೀ ವ್ಯಕ್ತಿಗಳು, ಆಸ್ಪತ್ರೆಗಳು, ಸಂಘ-ಸಂಸ್ಥೆಗಳ ವಿವರಗಳನ್ನು ತಿಳಿಸಬಹುದಿತ್ತು. ಈ ಎಲ್ಲಾ ಸೌಲಭ್ಯಗಳು ಜನರಿಗೆ ಎಷ್ಟರಮಟ್ಟಿಗೆ ತಲುಪಿದವು ಎಂಬುದನ್ನು ಚರ್ಚಿಸಬೇಕಾಗಿತ್ತು. ಈ ಆಸ್ಪತ್ರೆಗಳು ಈಗಲೂ ಕಾರ್ಯ ನಿರ್ವಹಿಸುತ್ತಿದ್ದು ಅಂಕಿ-ಅಂಶಗಳ ವಿವರಗಳನ್ನು ತಿಳಿಸಿದ್ದಾರೆ. ಈ ಮಹಾಪ್ರಬಂಧದಲ್ಲಿ ಸಂಶೋಧಕರು ರಾಜ್ಯ ಪತ್ರಾಗಾರ ಇಲಾಖೆಯ ದಾಖಲೆ, ಕಡತಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ.

**ನೈಮೂರ್ ರಹಮಾನ್** ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **'ಮುಸ್ಲಿಂ ರೆಸ್ಪಾನ್ಸ್ ಟು ಸೋಷಿಯೋ-ಪೊಲಿಟಿಕಲ್ ಚೇಂಜ್ ಇನ್ ಪ್ರಿನ್ಸ್ಲಿ ಮೈಸೂರು, ೧೮೮೧-೧೯೪೭'(೨೦೧೦)**[೮೨] ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಮೈಸೂರು ಸಂಸ್ಥಾನದಲ್ಲಿ ಹೈದರಾಲಿ ಮತ್ತು ಟಿಪ್ಪು ಸುಲ್ತಾನರ ಅವನತಿಯ ನಂತರ ಮುಸ್ಲಿಂ ಸಮುದಾಯವು ತನ್ನ ಪ್ರಾಬಲ್ಯವನ್ನು ಕಳೆದುಕೊಳ್ಳುವಂತಾಯಿತು. ಮುಸ್ಲಿಂ ಸಮುದಾಯದ ಬಗೆಗೆ ತಿರಸ್ಕಾರದ ಮನೋಭಾವ ಬೆಳೆಯುತ್ತಾ ಹೋಯಿತು. ಮೊದಲೇ ಬ್ರಿಟಿಷರು ಹಿಂದೂ ಮತ್ತು ಮುಸ್ಲಿಮರಲ್ಲಿ ಕೋಮುಭಾವನೆಗಳು ಮೂಡುವಂತೆ ಮಾಡಿದ್ದರು. ಮೊದಲು ಕಮೀಷನರುಗಳ ಆಳ್ವಿಕೆಯಲ್ಲಿ ಭಾರತದ ಶಿಕ್ಷಣವ್ಯವಸ್ಥೆ ಪಾಶ್ಚಿಮಾತ್ಯ ಮಾದರಿಯನ್ನು ಅನುಸರಿಸುವಂತೆ ಮಾಡಲಾಯಿತು. ಮುಸ್ಲಿಂ ಶಾಲೆಗಳನ್ನು ಪ್ರತ್ಯೇಕವಾಗಿ ತೆರೆದರು. ಶಿಕ್ಷಣವ್ಯವಸ್ಥೆಯಲ್ಲಿ ಮುಸ್ಲಿಮರಿಗೆ ಮೀಸಲಾತಿ ಒದಗಿಸಿದ ವಿವರಗಳನ್ನು ತಿಳಿಸಿದ್ದಾರೆ. ಬಂಡವಾಳ ವ್ಯವಸ್ಥೆಯಲ್ಲಿ ಮುಸ್ಲಿಮರ ಸಾಮಾಜಿಕ ರಾಜಕೀಯ ಬದಲಾವಣೆಗಳನ್ನು ಯಾವ ರೀತಿ ಗುರುತಿಸಿದ್ದಾರೆ ಎಂಬುದು ಮುಖ್ಯ. ೧೮೮೧ರಲ್ಲಿ ಒಡೆಯರು ಪುನಃ ಅಧಿಕಾರವನ್ನು ತೆಗೆದುಕೊಂಡರು. ಈ ಅವಧಿಯಲ್ಲಿ ರಾಜಕೀಯವಾಗಿ ಬ್ರಾಹ್ಮಣರು ಎಲ್ಲಾ ಹುದ್ದೆಗಳನ್ನು ಪಡೆದು ಡಾಮಿನೆಂಟ್ ಆಗಿದ್ದರು. ಮುಸ್ಲಿಮರು ವ್ಯಾಪಾರದ ವೃತ್ತಿಯನ್ನು ಹೆಚ್ಚಾಗಿ ಅವಲಂಬಿಸಿದ್ದರು. ತನ್ನದೇ ಆದ ವ್ಯಾಪಾರ ಸಂಘಗಳನ್ನು ಹೊಂದಿದ್ದರು. ಅನಂತರ ಬ್ರಾಹ್ಮಣೇತರ ಚಳವಳಿಯಿಂದ ಮುಸ್ಲಿಮರು

ರಾಜಕೀಯವಾಗಿ ಗುರುತಿಸಿಕೊಂಡರು ಎಂಬ ವಿಚಾರಗಳನ್ನು ತಿಳಿಸಿದ್ದಾರೆ. ಅಲ್ಲದೇ ಮೊದಲ ರಾಜಕೀಯ ಪಕ್ಷ ಪ್ರಜಾಮಿತ್ರ ಮಂಡಳಿಯಲ್ಲಿ ಮುಸ್ಲಿಮರು ಹೆಚ್ಚಾಗಿ ಗುರುತಿಸಿಕೊಂಡ ಬಗೆಯನ್ನು ವಿವರಿಸಿದ್ದಾರೆ. ಅಬ್ಬಾಸ್ ಖಾನ್ ಖಾಯಂ ಲೀಡರ್ ಆಗಿ 'ಸೆಂಟ್ರಲ್ ಮುಸ್ಲಿಂ ಆಸೋಸಿಯೇಶನ್‌ಗೆ ಆಯ್ಕೆಯಾದರು. ಹೀಗೆ ಮುಸ್ಲಿಮರು ತಮ್ಮದೇ ಆದ ಐಡೆಂಟಿಟಿಯನ್ನು ಕಂಡುಕೊಂಡರು.

ಬೆಂಗಳೂರಿನಲ್ಲಿ ನಡೆದ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆಯು ಹಿಂದೂ ಮತ್ತು ಮುಸ್ಲಿಂ ಸಮುದಾಯಗಳಲ್ಲಿ ದ್ವೇಷದ ಬೀಜ ಬೆಳೆಯುವಂತೆ ಮಾಡಿತು ಎಂಬುದು ಪ್ರಮುಖ ವಾದುದು. ಮಿರ್ಜಾ ಇಸ್ಮಾಯಿಲ್ ಅವರು ಬ್ರಾಹ್ಮಣೇತರರನ್ನು ಒಂದುಗೂಡಿಸಲು ಪ್ರಯತ್ನಪಟ್ಟರು. ಆದರೆ ೧೯೪೦ರಲ್ಲಿ ಮುಸ್ಲಿಂ ಲೀಗ್ ಸ್ಥಾಪನೆ ಆಯಿತು. ಅನಂತರ ಹಿಂದೂ ಮತ್ತು ಮುಸ್ಲಿಮರು ರಾಜಕೀಯವಾಗಿ ಬೇರೆಬೇರೆ ಆಗುವಂತೆಯೂ ಪ್ರೇರೇಪಿಸಲಾಗಿದೆ ಎಂಬುದನ್ನು ತಿಳಿಯಬಹುದು.

ಮುಸ್ಲಿಂ ಸಮುದಾಯದ ಅಭಿವೃದ್ಧಿಗಾಗಿ ಸೈಯದ್ ಅಬ್ದುರ್ ರೆಹಮಾನ್ ಮತ್ತು ನವಾಬ್ ಶೇರ್‌ಖಾನ್ ಅವರ ಸಾಮಾಜಿಕ ಕಾರ್ಯಗಳನ್ನು ಗುರುತಿಸಬಹುದು. ಕ್ರೈಸ್ತ ಮಿಷನರಿಗಳು ಮುಸ್ಲಿಂ ಸಮುದಾಯದ ಶಿಕ್ಷಣದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡ ವಿವರಗಳನ್ನು ನೋಡಬಹುದು. ಎಲಿಮೆಂಟರಿ ಎಜುಕೇಷನ್ ಆ್ಯಕ್ಟ್‌ನ ಮೂಲಕ ಶಿಕ್ಷಣವನ್ನು ಕಡ್ಡಾಯಗೊಳಿಸಿದರು. ಈ ನಿಟ್ಟಿನಲ್ಲಿ ಮುಸ್ಲಿಂ ಸಮುದಾಯಗಳು ಹೆಚ್ಚಿನ ಶಿಕ್ಷಣ ಪಡೆದವು ಎಂಬುದು ಸ್ವಾಗತಾರ್ಹ.

ಏಳನೆಯ ಅಧ್ಯಾಯದಲ್ಲಿ ರಾಜಕೀಯವಾಗಿ ತನ್ನದೇ ಆದ ಸಂಘ, ಅಧಿಕಾರದ ಐಡೆಂಟಿಟಿಯನ್ನು ಮುಸ್ಲಿಂ ಸಮುದಾಯಗಳು ಪಡೆದವು ಎಂಬುದು ಮುಖ್ಯವಾದ ಚರ್ಚೆಯ ವಿಷಯವಾಗಿದೆ. ವಸಾಹತುಶಾಹಿ ನೆಲೆಯಲ್ಲಿ ಬ್ರಿಟಿಷರು ಡಾಮಿನೆಂಟ್ ಆಗಿ ರಾಜಕೀಯ ಅಜೆಂಡಾವನ್ನು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಹಿಂದೂ ಮತ್ತು ಮುಸ್ಲಿಮರಲ್ಲಿ 'ಒಡೆದು ಆಳುವ ನೀತಿ'ಯನ್ನು ಜಾರಿಗೆ ತಂದರು. ರಾಷ್ಟ್ರೀಯ ಚಳುವಳಿಯಲ್ಲಿ ಉಂಟಾದ ಭಿನ್ನಾಭಿಪ್ರಾಯ ವನ್ನು ಗಮನಿಸಬಹುದು. ಆ್ಯಂಟಿ–ಪಾರ್ಟಿಸಿಪೇಷನ್ ಚಳವಳಿ, ಸ್ವದೇಶಿ ಚಳವಳಿಯಲ್ಲಿ ಬ್ರಿಟಿಷರ ಆಡಳಿತವನ್ನು ವಿರೋಧಿಸಲಾಯಿತು. ಈ ನಿಟ್ಟಿನಲ್ಲಿ ಬ್ರಿಟಿಷರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು 'ಹಿಂದೂ ಮತ್ತು ಮುಸ್ಲಿಂ' ಸಮುದಾಯಗಳಲ್ಲಿ ಒಡಕು ಉಂಟುಮಾಡಿದರು.

ಪ್ರಮುಖವಾಗಿ ೧೯೨೮ರಲ್ಲಿ ನಡೆದ ಸುಲ್ತಾನ್‌ಪೇಟೆಯ ಗಣಪತಿ ಗಲಾಟೆಯು ಹಿಂದೂ ಮತ್ತು ಮುಸ್ಲಿಮರ ನಡುವೆ ಉಂಟಾದ ಕೋಮುಭಾವನೆಗಳ ತಿಕ್ಕಾಟಕ್ಕೆ ಸಿಲುಕುವಂತೆ ಮಾಡಿತು. ಇದು ಕಾಲಾಂತರದಲ್ಲಿ ಹಾಗೆಯೇ ಮುಂದುವರಿದುಕೊಂಡು ಹೋಯಿತು. ಮಿರ್ಜಾ ಇಸ್ಮಾಯಿಲ್ ಅವರು ದಿವಾನರಾಗಿದ್ದು, ಅಬ್ಬಾಸ್ ಖಾನ್ ಸ್ಥಳೀಯ ರಾಜಕೀಯದಲ್ಲಿ ಗುರುತಿಸಿಕೊಂಡಿದ್ದರಿಂದ ಬೇರೆ ರೀತಿಯ ಅನುಮಾನಕ್ಕೆ ಕಾರಣವಾಯಿತು. ಸ್ಥಳಿಯ ಸಂಸ್ಥೆಗಳಲ್ಲಿ ಮುಸ್ಲಿಂ ನಾಯಕರು ಗುರುತಿಸಿಕೊಂಡಿದ್ದು ಮುಖ್ಯವಾದುದು. ರಾಷ್ಟ್ರೀಯ ಹೋರಾಟದಲ್ಲಿ

ಖಿಲಾಪತ್ ಚಳವಳಿ, ಮೈಸೂರು ಸಂಸ್ಥಾನದಲ್ಲಿ ನಡೆದ ನಾನ್-ಬ್ರಾಹ್ಮಿನ್ ಚಳವಳಿಯಲ್ಲಿ ಮುಸ್ಲಿಮರು ವಹಿಸಿದ ಪಾತ್ರವನ್ನು ಗಮನಿಸಬಹುದು. ಪ್ರಜಾಮಿತ್ರ ಮಂಡಳಿ, ಪ್ರಜಾಪಕ್ಷ, ಪ್ರಜಾಸಂಯುಕ್ತ ಪಕ್ಷಗಳಲ್ಲಿ ಮುಸ್ಲಿಂರ ಪ್ರಾತಿನಿಧ್ಯವನ್ನು ನೋಡಬಹುದು. ಈ ಮಹಾಪ್ರಬಂಧವು ಪ್ರಿನ್ಸ್ಲಿ ಮೈಸೂರಿನಲ್ಲಿ ಮುಸ್ಲಿಂ ಸಮುದಾಯವು ಸಾಮಾಜಿಕ-ರಾಜಕೀಯವಾಗಿ ಯಾವ ರೀತಿ ಬದಲಾವಣೆಗೆ ಪ್ರತಿಕ್ರಿಯೆ ನೀಡಿತು ಎಂಬುದನ್ನು ಮುಖ್ಯವಾಗಿ ತಿಳಿಸುತ್ತದೆ. ಇಲ್ಲಿ ಪ್ರಾಥಮಿಕ ಆಕರಗಳಾಗಿ ಕಡತ ಮತ್ತು ದಾಖಲೆಗಳನ್ನು ಹೆಚ್ಚಾಗಿ ಬಳಸಿಕೊಂಡಿದ್ದಾರೆ.

**ಗುರುಸ್ವಾಮಿ ಕೆ.** ಅವರು ಮೈಸೂರು ವಿಶ್ವವಿದ್ಯಾನಿಲಯಕ್ಕೆ **'ಕರ್ನಾಟಕದಲ್ಲಿ ದಲಿತ ಚಳವಳಿ-ಮೈಸೂರು ಜಿಲ್ಲೆ ಒಂದು ಐತಿಹಾಸಿಕ ಅಧ್ಯಯನ(೧೯೭೦-೨೦೦೦)'**(೨೦೧೧)[೪೩] ಎಂಬ ಪಿಎಚ್.ಡಿ. ಮಹಾಪ್ರಬಂಧವನ್ನು ಸಲ್ಲಿಸಿದ್ದಾರೆ. ಮೈಸೂರು ಸಂಸ್ಥಾನವು ದಲಿತ ಚಳವಳಿಯಲ್ಲಿ ಪ್ರಮುಖ ಪಾತ್ರ ವಹಿಸಿರುವುದನ್ನು ಸಂಶೋಧಕರು ಚರ್ಚಿಸಿದ್ದಾರೆ. ಈ ಮಹಾಪ್ರಬಂಧದ ವಿಷಯದ ಕಾಲಾವಧಿಯು ಅನೇಕ ಚಳವಳಿಗಳನ್ನು ಕಂಡ ಕಾಲವಾಗಿದೆ. ರೈತ ಚಳವಳಿಗಳು, ಸಮಾಜವಾದಿ ಚಳವಳಿ, ಜೆ.ಪಿ. ಅವರ ಕ್ರಾಂತಿ, ಭೂ ಸುಧಾರಣೆಗಳು, ಜಾತಿವಿನಾಶ ಸಮಾವೇಶಗಳು ನಡೆದ ಕಾಲಾವಧಿಯಾಗಿದೆ. ಈ ಹಿನ್ನೆಲೆಯಲ್ಲಿ ದಲಿತ ಚಳವಳಿ ಒಂದು ಐಡೆಂಟಿಟಿಯನ್ನು ಕಂಡುಕೊಂಡಿತು. ಸಂಶೋಧಕರು ಮೊದಲು ಈ ಮಹಾಪ್ರಬಂಧದಲ್ಲಿ ಸ್ವಾತಂತ್ರ್ಯಪೂರ್ವ ಮತ್ತು ನಂತರದ ದಲಿತ ಚಳವಳಿಯ ಏಳಿಗೆಯಲ್ಲಿ ತಾತ್ವಿಕಚಿಂತನೆ ಹೇಗೆ ಮೂಡಿಬಂದಿದೆ ಎಂಬುದನ್ನು ವಿವರಿಸಿದ್ದಾರೆ. ಕುದ್ಮುಲ್ ರಂಗರಾವ್, ಆರ್.ಗೋಪಾಲಸ್ವಾಮಿ ಅಯ್ಯರ್, ಕರ್ನಾಡ್ ಸದಾಶಿವರಾಯ, ಹರ್ಡೇಕರ್ ಮಂಜಪ್ಪ, ತಗಡೂರು ರಾಮಚಂದ್ರರಾಯರು ಪ್ರವೀಣರು. ಇವರು ಪಂಚಮರಿಗೆ ಶಿಕ್ಷಣ, ಅಸ್ಪೃಶ್ಯತಾ, ನಿವಾರಣಾ ಚಳವಳಿ, ಶಿಕ್ಷಣಕ್ಕಾಗಿ ಸ್ಕಾಲರ್‌ಶಿಪ್, ಕುಡಿಯುವ ನೀರು ಮತ್ತು ದೇವಾಲಯ ಪ್ರವೇಶಕ್ಕೆ ಅನುಮತಿ, ದಲಿತರ ಅಭಿವೃದ್ಧಿಗಾಗಿ ಆದಿ ಕರ್ನಾಟಕ ಸಂಘದ ಸ್ಥಾಪನೆ, ಹಿಂದುಳಿದ ವರ್ಗಗಳ ವಯಸ್ಕರಿಗೆ ರಾತ್ರಿ ಶಾಲೆಗಳು, ಹೆಣ್ಣು ಮಕ್ಕಳಿಗೆ ಶಾಲೆ ಇವೇ ಮೊದಲಾದ ಕಾರ್ಯಗಳನ್ನು ಜಾರಿಗೆ ತರುವಲ್ಲಿ ಶ್ರಮಿಸಿದ್ದಾರೆ ಎಂಬುದನ್ನು ವಿವರಿಸಿದ್ದಾರೆ(ಪು.೭೪-೮೬). ನಾಲ್ವಡಿ ಕೃಷ್ಣರಾಜ ಒಡೆಯರು ದಲಿತರ ಉದ್ಧಾರಕ್ಕಾಗಿ ಕಾರ್ಯಗಳನ್ನು ರೂಪಿಸಿದರು ಎಂಬುದು ಇಲ್ಲಿ ಮುಖ್ಯ. ಪಂಚಮರಿಗೆ ಶಿಕ್ಷಣ, ವಿದ್ಯಾರ್ಥಿವೇತನ, ವೃತ್ತಿನಿರತ ಶಾಲೆಗಳ ಸ್ಥಾಪನೆ, ಅರಮನೆ ಪ್ರವೇಶ, ಹಿಂದೂ ವಿಧವಾ ಪುನರ್ವಿವಾಹ ಮಸೂದೆ, ದೇವದಾಸಿ ನಿಷೇಧ, ಧೂಮಪಾನ, ವೇಶ್ಯಾವೃತ್ತಿಗಳ ನಿಷೇಧ ಮಸೂದೆಗಳನ್ನು ಜಾರಿಗೊಳಿಸಿದರು. ಬ್ರಾಹ್ಮಣೇತರ ಚಳವಳಿಯಿಂದ ಲಿಂಗಾಯಿತ, ಒಕ್ಕಲಿಗ, ಮುಸ್ಲಿಂ, ಹೊಲೆಯ, ಮಾದಿಗ, ಕುರುಬ, ಕುಂಬಾರ, ಬಂಜಾರ, ಬಣಜಿಗ ಮುಂತಾದ ಜಾತಿಗಳು ಮುಖ್ಯವಾಹಿನಿಗೆ ಬರುವಂತಾಯಿತು. ಪ್ರಜಾಮಿತ್ರ ಮಂಡಳಿ, ಮಿಲ್ಲರ್ ಸಮಿತಿಯು ಕೆಲವು ಸುಧಾರಣೆಗಳನ್ನು ಜಾರಿಗೆ ತಂದಿತು. ಬ್ರಾಹ್ಮಣೇತರ ಚಳವಳಿಯಿಂದ ಹಿಂದುಳಿದ ವರ್ಗಗಳಿಗೆ ಮೀಸಲಾತಿ ಪ್ರಕ್ರಿಯೆ ಆರಂಭವಾಯಿತು. ಇದನ್ನು ವಿರೋಧಿಸಿದ ವಿಶ್ವೇಶ್ವರಯ್ಯ ಅವರು ರಾಜೀನಾಮೆ ನೀಡಿದರು. ದಿವಾನರಾಗಿ ಕಾಂತರಾಜ ಅರಸು ಅವರು ಹಿಂದುಳಿದ ವರ್ಗಗಳಿಗೆ ಶಾಲೆಗಳಲ್ಲಿ ಉಚಿತ ಪ್ರವೇಶ, ವಿದ್ಯಾರ್ಥಿವೇತನ ಇವೇ ಮೊದಲಾದ

ಸೌಲಭ್ಯಗಳನ್ನು ಒದಗಿಸಿದರು ಎಂಬುದನ್ನು ವಿವರಿಸಿದ್ದಾರೆ(ಪು.೮೭-೧೦೦). ವಸಾಹತುಶಾಹಿ ನೆಲೆಯಲ್ಲಿ ದಲಿತ ಚಳವಳಿ ಮೊದಲು ಗುರುತಿಸಿಕೊಂಡಿದ್ದನ್ನು ಇಲ್ಲಿ ಗಮನಿಸಬಹುದು. ವಸಾಹತುಶಾಹಿ ನೆಲೆಯಲ್ಲಿ ಡಾಮಿನೆಂಟ್ ಗುಂಪುಗಳ ಮೂಲಕವೇ ತನ್ನ ಅಸ್ತಿತ್ವವನ್ನು ದಲಿತರು ಗುರುತಿಸಿಕೊಂಡರು ಎನ್ನುವುದು ಮುಖ್ಯ. ಬ್ರಾಹ್ಮಣೇತರರು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ನೆಪದಲ್ಲಿ ದಲಿತರಿಗೆ ಕೆಲವೊಂದು ಸೌಲಭ್ಯಗಳನ್ನು ನೀಡುವುದರ ಮೂಲಕ ತಮ್ಮ ಕಡೆ ಒಲಿಸಿಕೊಂಡರು ಎನ್ನುವುದು ಇಲ್ಲಿ ಮುಖ್ಯ.

ಸ್ವಾತಂತ್ರ್ಯ ನಂತರ ದಲಿತ ಚಳವಳಿಯು ತನ್ನದೇ ಆದ ಪಾತ್ರವನ್ನು ಕಂಡುಕೊಂಡಿತು. ಬೂಸಾ ಪ್ರಕರಣ ಇದಕ್ಕೆ ಅಡಿಪಾಯ ಹಾಕಿತು. ಸಮಾಜವಾದಿ ಯುವಜನ ಸಭಾ ಪ್ರಾರಂಭ ವಾಯಿತು. ಇದರಲ್ಲಿ ಕೆ.ರಾಮದಾಸ್, ಪ.ಮಲ್ಲೇಶ್, ಎಂ.ಡಿ.ನಂಜುಂಡಸ್ವಾಮಿ, ಪೂರ್ಣಚಂದ್ರ ತೇಜಸ್ವಿ, ರಾಜಶೇಖರ ಕೋಟಿ, ದೇವನೂರ ಮಹಾದೇವ, ಬಿ.ಕೃಷ್ಣಪ್ಪ, ದೇವಯ್ಯ ಹರವೆ, ಹೆಚ್.ಗೋವಿಂದಯ್ಯ, ಇಂದೂಧರ ಹೊನ್ನಾಪುರ, ರಾಮದೇವ ರಾಕೆ, ಶಿವಾಜಿ ಗಣೇಶನ್ ಮುಂತಾದವರು ಪ್ರಮುಖವಾಗಿ ಗುರುತಿಸಿಕೊಂಡಿದ್ದಾರೆ. ಇವರು ಲೋಹಿಯಾ, ಅಂಬೇಡ್ಕರ್ ಅವರ ಚಿಂತನೆಗಳನ್ನು ಮೈಗೂಡಿಸಿಕೊಂಡಿದ್ದರು ಎಂಬುದು ಮುಖ್ಯ.

ಈ ಹಿನ್ನೆಲೆಯಲ್ಲಿ ದಲಿತ ಚಳವಳಿ ಮುಂದುವರಿದುಕೊಂಡು ಹೋಯಿತು. ಜಾತಿವ್ಯವಸ್ಥೆ ಯನ್ನು ನಾಶ ಮಾಡಬೇಕೆಂದು 'ಜಾತಿವಿನಾಶ ಸಮ್ಮೇಳನ'ವನ್ನು ಆಯೋಜಿಸಿದರು. ಶೂದ್ರ ಚಳವಳಿ ಆರಂಭವಾಯಿತು. ಜೆ.ಪಿ.ಚಳುವಳಿಯಿಂದ ಜನಪರ ಹೋರಾಟಗಳು ನಡೆದವು. ಅಖಿಲ ಕರ್ನಾಟಕ ದಲಿತ ಸಂಘ ಸಭೆಗಳನ್ನು ಕರೆದು ಕರ್ನಾಟಕ ದಲಿತ ಬರಹಗಾರ ಮತ್ತು ಕಲಾವಿದರ ಒಕ್ಕೂಟವನ್ನು ಸ್ಥಾಪಿಸಿದರು. ರಾಜ್ಯ, ನಗರ, ಹಳ್ಳಿಗಳ ದಲಿತರನ್ನು ಒಗ್ಗೂಡಿಸುವ ಕಾರ್ಯ ಆರಂಭವಾಯಿತು. ಬಿ.ಕೃಷ್ಣಪ್ಪ ಅವರ ನೇತೃತ್ವದಲ್ಲಿ 'ದಲಿತ ಸಂಘರ್ಷ ಸಮಿತಿ'ಯು ರಚನೆಯಾಗಿ ರಾಜ್ಯಸಂಘಟನೆಯಾಗಿ ಒಪ್ಪಿಕೊಂಡರು. ಈ ಸಂಘಟನೆಯು ಇಂದಿಗೂ ಕಾರ್ಯಾಚರಣೆಯಲ್ಲಿ ತೊಡಗಿದೆ. ಭೂ ಒಡೆತನ, ಜಾತಿನಿಂದನೆ, ದಬ್ಬಾಳಿಕೆ ಇವೇ ಮೊದಲಾದ ಸಮಸ್ಯೆಗಳನ್ನು ಬಗೆಹರಿಸುವುದಾಗಿದೆ. ಹೀಗೆ ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಂಡ ದಲಿತ ಎನ್ನುವ ಪರಿಭಾಷೆ ಹೇಗೆ ವಿವಿಧ ಹಂತಗಳಲ್ಲಿ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಚಳವಳಿ ಆಗಿ ರೂಪುಗೊಂಡಿತು ಎಂಬುದನ್ನು ಚರ್ಚಿಸಿದ್ದಾರೆ. ಇಡಿಯಾಗಿ ಕರ್ನಾಟಕ ದಲಿತ ಚಳವಳಿಯಲ್ಲಿ ಕೈಗೊಂಡ ಕಾರ್ಯಗಳನ್ನು ಗಮನಿಸಬಹುದು. ಕ್ಷೇತ್ರಕಾರ್ಯದ ಮೂಲಕ ಸಂಶೋಧನೆ ಸಾಗಿರುವುದು ಸಮಂಜಸವಾಗಿದೆ.

ಒಟ್ಟಾರೆಯಾಗಿ ಸಂಶೋಧನಾತ್ಮಕ ಮಹಾಪ್ರಬಂಧಗಳು ಮೈಸೂರು ಒಡೆಯರ ಚರಿತ್ರೆಯನ್ನು ಕಟ್ಟುತ್ತವೆ. ಮೊದಲು ಸಂಶೋಧನೆಗೆ ಒಳಗಾದ ಮಹಾಪ್ರಬಂಧಗಳು ಸಾಂಪ್ರದಾಯಿಕ ಮಾದರಿಯನ್ನು ಹೊಂದಿವೆ. ವಿವರಣಾತ್ಮಕವಾಗಿ ಈ ಮಹಾಪ್ರಬಂಧಗಳು ಹೊರಬಂದಿದ್ದು, ವಿಚಾರಗಳನ್ನು ಚರ್ಚೆಗೆ ಒಳಮಾಡುವುದಿಲ್ಲ. ತಾಂತ್ರಿಕ ಪರಿಣತಿ ಇಲ್ಲದ ಕಾಲದಲ್ಲಿ ಹೊರಬಂದಿರುವ ಎಂ.ಫಿಲ್. ಮತ್ತು ಪಿಎಚ್.ಡಿ. ಮಹಾಪ್ರಬಂಧಗಳು ವಿವರಗಳನ್ನು ತಿಳಿಸುವಂತವು. ರಾಜಕೀಯ ವಿಚಾರಗಳನ್ನು ಕೇಂದ್ರೀಕರಿಸಿ ಸಂಶೋಧನೆ ಕೈಗೊಂಡು

ಸಂಶೋಧನಾತ್ಮಕ ಮಹಾಪ್ರಬಂಧಗಳನ್ನು ಹೊರತಂದಿರುವುದನ್ನು ಗಮನಿಸಬಹುದು. ೧೯೭೦ರ ದಶಕದಲ್ಲಿ ಪ್ರಕಟಗೊಂಡ ಮಹಾಪ್ರಬಂಧಗಳು ಸಾಮಾಜಿಕ-ರಾಜಕೀಯ ಸಂಘರ್ಷಗಳನ್ನು ತೀವ್ರವಾಗಿ ಚರ್ಚಿಸುತ್ತದೆ. ಭಾರತದ ೭೦ರ ದಶಕವು ಅನೇಕ ಚಳವಳಿಗಳನ್ನು ಕಂಡ ಕಾಲ. ರೈತ ಚಳವಳಿಗಳು, ಸಮಾಜವಾದಿ ಚಳವಳಿ, ಜೆ.ಪಿ. ಅವರ ಸಂಪೂರ್ಣ ಕ್ರಾಂತಿ, ಭೂ ಸುಧಾರಣೆಗಳು, ಜಾತಿವಿನಾಶ ಸಮಾವೇಶಗಳು ಹೀಗೆ ಅನೇಕ ಚಳವಳಿಗಳು ಚರಿತ್ರೆಯ ಜೊತೆ ಸಂವಾದ ನಡೆಸಿವೆ. ಈ ಹಿನ್ನೆಲೆಯಲ್ಲಿ ೧೯೭೦ ಮತ್ತು ೧೯೮೦ರ ದಶಕದಲ್ಲಿ ಸಂಶೋಧನೆಯಾದ ಮಹಾಪ್ರಬಂಧಗಳು ಸಾಮಾಜಿಕ ಚರಿತ್ರೆಗೆ ಮುಖಾಮುಖಿಯಾಗಿ ಭಿನ್ನ ಧಾರೆಗಳಲ್ಲಿ ಒಟ್ಟು ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿವೆ. ಪ್ರಸ್ತುತ ಸಂಶೋಧನಾ ಮಹಾಪ್ರಬಂಧಗಳು ಸಬಾಲ್ಟರ್ನ್ ನೆಲೆಯಲ್ಲಿ ಗುರುತಿಸಿಕೊಳ್ಳುತ್ತವೆ.

**ಅಡಿಟಿಪ್ಪಣಿಗಳು**

೧. ಅನಂತರಾಮಯ್ಯ ಓ., ೧೯೮೧, ಸ್ಟ್ರೆಡ್ ಆಫ್ ಎಜುಕೇಷನ್ ಆ್ಯಂಡ್ ಸೋಷಿಯಲ್ ವೆಲ್‌ಫೇರ್ ಮೇಜರ್ಸ್ ಇನ್ ಪ್ರಿನ್ಸ್ಲಿ, ಮೈಸೂರು ೧೯೦೦-೧೯೫೮(ಎಂ.ಫಿಲ್. ನಿಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨. ಸ್ವಾಮಿ ಕೆ.ಎಸ್., ೨೦೦೮, ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್: ಒಂದು ಅಧ್ಯಯನ(ಎಂ.ಫಿಲ್. ನಿಬಂಧ), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಸವಿತ ಕೆ.ಎಸ್., ೨೦೦೯, ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣದ ಒಂದು ಅಧ್ಯಯನ ೧೮೮೧-೧೯೫೬(ಎಂ.ಫಿಲ್. ನಿಬಂಧ), ಕನ್ನಡ ವಿಶ್ವವಿದ್ಯಾಲಯ. ಹಂಪಿ.

೪. ಪ್ರಶಾಂತ್ ಕೆ.ಸಿ., ೧೯೯೯, ಹಿಸ್ಟೋರೀಜಿಂಗ್ ಎ ರೀಜನ್: ಮೈಸೂರು ೧೫೬೫-೧೯೪೭ ಇನ್ ದಿ ರೈಟಿಂಗ್ಸ್ ಆಫ್ ಸಿ.ಹಯವದನರಾವ್ ಅಂಡ್ ಎಂ.ಶಾಮರಾವ್(ಎಂ.ಫಿಲ್. ನಿಬಂಧ), ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೫. ವೇದವಲ್ಲಿ, ೧೯೫೬, ಅಡ್ಮಿನಿಸ್ಟ್ರೇಟಿವ್ ಹಿಸ್ಟರಿ ಆಫ್ ಮೈಸೂರು(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೬. ಅಚ್ಯುತರಾವ್ ಡಿ.ಎಸ್., ೧೯೬೪, ಅಡ್ಮಿನಿಸ್ಟ್ರೇಟಿವ್ ಆ್ಯಂಡ್ ಸೋಷಿಯಲ್ ಹಿಸ್ಟರಿ ಆಫ್ ಮೈಸೂರು(೧೬೦೦-೧೮೦೦), (ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೭. ಗಸ್ಟೇವ್‌ಸನ್ ಡಿ.ಆರ್., ೧೯೬೮, ಮೈಸೂರು ೧೮೮೧-೧೯೦೨: ದ ಮೇಕಿಂಗ್ ಆಫ್ ಎ ಮಾಡೆಲ್ ಸ್ಟೇಟ್(ಪಿಎಚ್.ಡಿ. ಮಹಾಪ್ರಬಂಧ), ವಿಸ್‌ಕಾನ್‌ಸಿನ್ ವಿಶ್ವವಿದ್ಯಾಲಯ, ಅಮೆರಿಕ.

೮. ಲೀಲಾ ಡಶ್ಕಿನ್, ೧೯೭೪, ನಾನ್ ಬ್ರಾಹ್ಮಿನ್ ಮೂವ್‌ಮೆಂಟ್ ಇನ್ ಪ್ರಿನ್ಸ್ಲಿ ಮೈಸೂರ್ (ಪಿಎಚ್.ಡಿ. ಮಹಾಪ್ರಬಂಧ), ಪೆನ್ಸಿಲ್‌ವೇನಿಯಾ ವಿಶ್ವವಿದ್ಯಾಲಯ.

೯. ಸುಗೀತ ಸುವರ್ಣ, ೧೯೮೨, ದಿವಾನ್‌ಶಿಪ್ ಆಫ್ ಸರ್ ಮಿರ್ಜಾ ಇಸ್ಮಾಯಿಲ್ ಇನ್

ಮೈಸೂರು ಸ್ಟೇಟ್(೧೯೨೬–೧೯೪೧)(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೦. ವೀರಾ ಸೆಬಾಸ್ಟಿಯನ್, ೧೯೮೨, ಬ್ರಿಟಿಷ್ ಕಲೋನಿಯಲ್ ಪಾಲಿಸೀಸ್ ಇನ್ ಪ್ರಿನ್ಸ್ಲಿ ಮೈಸೂರ್(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೧. ತಿಮ್ಮಯ್ಯ ನಾಯ್ಡು, ೧೯೮೪, ದಿ ಏಜ್ ಆಫ್ ಚಿಕ್ಕದೇವರಾಜ ಒಡೆಯರ್ ಆಫ್ ಚಿಕ್ಕದೇವರಾಜ ಒಡೆಯರ್ ಆಫ್ ಮೈಸೂರು(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೨. ಅನಂತರಾಮಯ್ಯ ಓ., ೧೯೮೮, ಸೋಷಿಯೋ–ಎಕಾನಮಿಕ್ ಚೇಂಜ್ ಡಿಪ್ರೆಸ್ಡ್ ಕ್ಲಾಸಸ್ ಇನ್ ಮೈಸೂರು ಸ್ಟೇಟ್ ೧೯೦೨–೧೯೫೨(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೩. ಜಮುನ ಎಂ., ೧೯೯೦, ಸೋಷಿಯಲ್ ಚೇಂಜ್ ಇನ್ ಮೈಸೂರು ವಿತ್ ಸ್ಪೆಷಲ್ ರೆಫರೆನ್ಸ್ ಟು ವುಮೆನ್ ೧೮೮೦–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೪. ವಿಜಯಲಕ್ಷ್ಮಿ ಕೆ.ಎಸ್., ೧೯೯೦, ಇರಿಗೇಷನ್ ಪಾಲಿಸಿ ಇನ್ ಪ್ರಿನ್ಸ್ಲಿ ಮೈಸೂರು ೧೮೮೧–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೫. ದೇವರಾಜ್ ಜಯದೇವ್, ಕ್ರಿಶ್ಚಿಯನ್ ಮಿಷನರಿ ವರ್ಕ್ ಇನ್ ಮೈಸೂರು(೧೬೪೮–೧೯೪೭) (ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೬. ಕೇಶವಮೂರ್ತಿ ಬಿ.ಆರ್., ಲೈಫ್ ಆ್ಯಂಡ್ ಟೈಮ್ಸ್ ಆಫ್ ಕೃಷ್ಣರಾಜ ಒಡೆಯರ್ III (೧೭೯೪–೧೮೬೮) (ಪಿಎಚ್.ಡಿ. ಮಹಾಪ್ರಬಂಧ) ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೭. ಶಿವಣ್ಣ ಸಿ., ಮೈಸೂರ್ ಅಂಡರ್ ಕೃಷ್ಣರಾಜ ಒಡೆಯರ್ IV(೧೯೦೨–೧೯೪೦) (ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೮. ಅಶ್ವತ್ಥ ನಾರಾಯಣ, ೧೯೯೪, ಸೋಷಿಯಲ್ ರೀಫಾರ್ಮ್ ಮೂಮೆಂಟ್ಸ್ ಇನ್ ಪ್ರಿನ್ಸ್ಲಿ ಮೈಸೂರು ೧೮೬೦–೧೯೪೦(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೧೯. ಆಂಜನಪ್ಪ ಎಂ., ೧೯೯೫, ಹಿಸ್ಟರಿ ಆಫ್ ಮೈಸೂರು ಎಜುಕೇಷನ್ ಇನ್ ಇಂಡಿಯನ್ ಸ್ಟೇಟ್ ಮೈಸೂರು ೧೮೫೪–೧೯೪೦(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೦. ಶಶಿಧರಮೂರ್ತಿ, ೧೯೯೭, ಅಗ್ರೇರಿಯನ್ ಕಂಡೀಷನ್ಸ್ ಆಫ್ ಮೈಸೂರು ಸ್ಟೇಟ್ ಡ್ಯೂರಿಂಗ್ ದಿ ಡಿಕೇಡ್ ಆಪ್ಟರ್ ದಿ ಫೆಮೈನ್ ಆಫ್ ೧೮೭೬–೧೭೭(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೧. ಉಷಾದೇವಿ ಎಂ.ವಿ., ೨೦೦೦, ದಿ ಹಿಸ್ಟರಿ ಆಫ್ ಫೆಮಿನಿಸ್ ಅಂಡ್ ಫೆಮೈನ್ ಫಾಲಿಸೀಸ್

ಇನ್ ಪ್ರಿನ್ಸ್ಲಿ ಮೈಸೂರು ೧೮೭೫–೧೯೧೮(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೨. ಚಿನ್ನಸ್ವಾಮಿ ಸೋಸಲೆ ಎನ್., ೨೦೦೧, ಮೈಸೂರು ಸಂಸ್ಥಾನದಲ್ಲಿ ಗ್ರಾಮೀಣಾಭಿವೃದ್ಧಿ: ಒಂದು ಸಮೀಕ್ಷೆ(೧೮೮೧ರಿಂದ ೧೯೪೭) (ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೩. ಮಾಲತಿ ಎಸ್. ೨೦೦೨, ಲೀಗಲ್ ಸ್ಟೇಟಸ್ ಆಫ್ ವುಮೆನ್ ಇನ್ ಪ್ರಿನ್ಸ್ಲಿ ಮೈಸೂರು ೧೮೮೧–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೪. ಗೋವಿಂದಪ್ಪ ಎಂ., ೨೦೦೨, ಹಿಸ್ಟರಿ ಆಫ್ ಮೈನಿಂಗ್ ಇನ್ ಪ್ರಿನ್ಸ್ಲಿ ಮೈಸೂರು: ವಿತ್ ಸ್ಪೆಷಲ್ ರಿಫರೆನ್ಸ್ ಟು ಕೋಲಾರ್ ಗೋಲ್ಡ್ ಫಿಲ್ಡ್ಸ್ ೧೮೮೧ ಟು ೧೯೫೬(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೫. ಸುಪ್ರಭಾ ಹೆಚ್.ಕೆ., ೨೦೦೫, ಸ್ಪ್ರೆಡ್ ಆಫ್ ವುಮೆನ್ಸ್ ಎಜುಕೇಷನ್ ಇನ್ ಪ್ರಿನ್ಸ್ಲಿ ಮೈಸೂರು ೧೮೮೧–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೬. ಪಂಡಿತ್ ಬಿ.ಆರ್.ವಿ., ೨೦೦೬, ಹಿಸ್ಟರಿ ಆಫ್ ಪಬ್ಲಿಕ್ ಹೆಲ್ತ್ ಅಂಡ್ ಸಾನಿಟೇಶಟನ್ ಇನ್ ಪ್ರಿನ್ಸ್ಲಿ ಮೈಸೂರು(೧೮೩೧–೧೯೪೭) (ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೭. ರಂಗಪ್ಪ ಎಂ., ೨೦೦೬, ಮೈಸೂರು ಒಡೆಯರ ಕಾಲದ ಕೋಟೆಗಳು ಮತ್ತು ಅರಮನೆಗಳ ಒಂದು ಅಧ್ಯಯನ(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೨೮. ಪ್ರಶಾಂತ್ ಕೆ.ಸಿ., ೨೦೦೭, ಕನ್ಸ್ಟ್ರಕ್ಷನ್ ಆಫ್ ಕರ್ನಾಟಕ: ದಿ ಯೂಸ್ ಆಫ್ ಹಿಸ್ಟರಿ (ಪಿಎಚ್.ಡಿ. ಮಹಾಪ್ರಬಂಧ), ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೨೯. ಪುಷ್ಪಕುಮಾರಿ ಬಿ.ಎಸ್., ಕಲೋನಿಸಂ ಆ್ಯಂಡ್ ದಿ ಪಟ್ರಿಸಿಯನ್ಸ್ ಆಫ್ ಮೈಸೂರು ೧೮೮೧–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೦. ರಮೇಶ ವಿ.ಎಂ., ೨೦೦೭, ಟ್ರೇಡ್ ಅಂಡ್ ಅರ್ಬನೈಜೇಷನ್ ಇನ್ ಮೈಸೂರು(೧೬೭೩–೧೭೯೯ ಎ.ಡಿ) (ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೧. ಗೌರಿ ನಾಯ್ಡು ಎಚ್., ೨೦೦೭, ಇಂಪ್ಯಾಕ್ಟ್ ಆಫ್ ಅರ್ಬನೈಜೇಷನ್ ಆನ್ ಪಬ್ಲಿಕ್ ಹೆಲ್ತ್ ಇನ್ ಪ್ರಿನ್ಸ್ಲಿ ಮೈಸೂರು ೧೮೩೧–೧೯೪೭(ಪಿಎಚ್.ಡಿ ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೨. ಸುಶೀಲಮ್ಮ ಸಿ., ೨೦೦೭, ಮೈಸೂರು ರಾಜ್ಯದಲ್ಲಿ ಮಹಿಳಾ ಕಲ್ಯಾಣ: ಒಂದು ಅಧ್ಯಯನ ೧೮೮೧–೧೯೫೬(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೩. ತಾರಾ ಉಳ್ಳಾಲ್, ೨೦೦೭, ಮೈಸೂರು ಒಡೆಯರ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು (ಕ್ರಿ.ಶ.೧೬೧೦–೧೭೬೧), (ಪಿಎಚ್.ಡಿ. ಮಹಾಪ್ರಬಂಧ), ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾಲಯ, ಮೈಸೂರು.

೩೪. ಮುಜೀದ್ ಖಾನ್ ಎಸ್., ೨೦೦೭, ಆ್ಯನ್ ಅಡ್ಮಿನಿಸ್ಟ್ರೇಟಿವ್ ಹಿಸ್ಟರಿ ಆಫ್ ಮೈಸೂರು ಅಂಡರ್ ಹೈದರಾಲಿ ಆ್ಯಂಡ್ ಟಿಪ್ಪುಸುಲ್ತಾನ್ ಫ್ರಮ್ ೧೭೬೧ ಟು ೧೭೯೯ ಎ.ಡಿ(ವಿತ್ ಸ್ಪೆಷಲ್ ಎಂಫಸಿಸ್ ಆನ್ ಮಿಲಿಟರಿ ಆಡ್ಮಿನಿಷ್ಟ್ರೇಷನ್) (ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೫. ಬಸವೇಗೌಡ ಎಚ್.ಎನ್., ೨೦೦೭, ಎ ಸೋಷಿಯೋ–ಎಕಾನಮಿಕ್ ಆ್ಯಂಡ್ ಪೊಲಿಟಿಕಲ್ ಹಿಸ್ಟರಿ ಆಫ್ ದಿ ಸ್ಟೇಟ್ ಆಫ್ ಮೈಸೂರ್ ಆಫ್ ವಿವೆಡ್ ಬೈ ಫ್ರಾನ್ಸಿಸ್ ಬುಕಾನನ್–ಎ ಕಂಪ್ಯಾರಟೀವ್ ಅಂಡ್ ಕ್ರಿಟಿಕಲ್ ಅನಾಲಿಸಿಸ್(ಪಿಎಚ್.ಡಿ. ಮಹಾಪ್ರಬಂಧ), ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

೩೬. ರವಿಕುಮಾರ್, ೨೦೦೮, ಆಧುನಿಕ ಮೈಸೂರು ಸಂಸ್ಥಾನದಲ್ಲಿ ಅಬಕಾರಿ ಆಡಳಿತದ ಬೆಳವಣಿಗೆ ಮತ್ತು ನೀತಿಗಳು: ಒಂದು ಅಧ್ಯಯನ(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೭. ಸೋಮಶೇಖರ್ ಜೆ.ಟಿ., ೨೦೦೯, ಬಿ.ಎಲ್.ರೈಸ್: ಒಂದು ಅಧ್ಯಯನ(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೮. ಮಹದೇವಸ್ವಾಮಿ ಎನ್., ೨೦೦೯, ಮೈಸೂರು ಒಡೆಯರ ಕಾಲದ ಸಂಸ್ಕೃತಿ: ಒಂದು ಅಧ್ಯಯನ(ಕ್ರಿ.ಶ.೧೭೯೯–೧೮೬೮) (ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೩೯. ಚರಿತಾ, ಕರ್ನಾಟಕದ ಚಿತ್ರಕಲಾ ಪರಂಪರೆಯಲ್ಲಿ ಮೈಸೂರು ಸಾಂಪ್ರದಾಯಿಕ ಕಲಾವಿದರ ಪಾತ್ರ–ಒಂದು ಅಧ್ಯಯನ(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೦. ಹನುಮಂತರಾಜು ಎಂ.ಜೆ., ೨೦೧೦, ಮೈಸೂರು ಸಂಸ್ಥಾನದಲ್ಲಿ ಗಾಂಧೀಜಿಯವರ ರಾಜಕೀಯ ಚಿಂತನೆಗಳ ಪ್ರಭಾವ(೧೯೨೦–೧೯೪೭) (ಪಿಎಚ್.ಡಿ. ಮಹಾಪ್ರಬಂಧ), ಗಾಂಧಿ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೧. ತ್ರಿವೇಣಿ ಅರಸ್, ೨೦೧೦, ವೆಲ್‌ಫೇರ್ ಮೇಜರ್ಸ್ ಆನ್ ಪಬ್ಲಿಕ್ ಹೆಲ್ತ್ ಇನ್ ಪ್ರಿನ್ಸ್ಲಿ ಮೈಸೂರ್ ೧೮೮೧–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೨. ನೈಮೂರ್ ರಹಮಾನ್, ೨೦೧೦, ಮುಸ್ಲಿಂ ರೆಸ್ಪಾನ್ಸ್ ಟು ಸೋಷಿಯೋ–ಪೊಲಿಟಿಕಲ್ ಚೇಂಜ್ ಇನ್ ಪ್ರಿನ್ಸ್ಲಿ ಮೈಸೂರು ೧೮೮೧–೧೯೪೭(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೪೩. ಗುರುಸ್ವಾಮಿ ಕೆ., ೨೦೧೧, ಕರ್ನಾಟಕದಲ್ಲಿ ದಲಿತ ಚಳವಳಿ–ಮೈಸೂರು ಜಿಲ್ಲೆ: ಒಂದು ಐತಿಹಾಸಿಕ ಅಧ್ಯಯನ(೧೯೭೦–೨೦೦೦)(ಪಿಎಚ್.ಡಿ. ಮಹಾಪ್ರಬಂಧ), ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

# ಅಧ್ಯಾಯ ಏಳು

# ಉಪಸಂಹಾರ

ಸಾಹಿತ್ಯಕ್ಕೆ ಒಂದು ಮೀಮಾಂಸೆ ಇದೆ. ಕಾವ್ಯಕ್ಕೂ ಒಂದು ಮೀಮಾಂಸೆ ಇದೆ ಎನ್ನುವುದಾದರೆ ಚರಿತ್ರೆಗೆ ಒಂದು ಮೀಮಾಂಸೆ ಇರಲೇಬೇಕು. ಇದನ್ನೇ ಚರಿತ್ರಲೇಖನಶಾಸ್ತ್ರ ಎಂದೂ ಕರೆಯಬಹುದು. ಇದು ವಿವಿಧ ದೃಷ್ಟಿಕೋನದಿಂದ ಚರಿತ್ರೆಯನ್ನು ಅಧ್ಯಯನ ನಡೆಸುವ ಒಂದು ಕ್ರಮವೂ ಹೌದು. ಚರಿತ್ರೆಯನ್ನು ಕಾಲಕಾಲಕ್ಕೆ ಅನುಗುಣವಾಗಿ ಸಮಾಜದ ಆಶೋತ್ತರಗಳಿಗೆ ಸ್ಪಂದಿಸುವ ರೀತಿಯಲ್ಲಿ ಶಿಸ್ತುಬದ್ಧವಾಗಿ ಅಧ್ಯಯನ ನಡೆಸಲಾಗುತ್ತದೆ. ಏಕೆಂದರೆ ಸಮಾಜ ಹೇಗಿರುತ್ತದೆಯೋ ಅದೇ ರೀತಿ ಚರಿತ್ರೆ ನಿರ್ಮಾಣವಾಗುತ್ತಿರುತ್ತದೆ. ಚರಿತ್ರಕಾರರು ಸ್ವಂತಿಕೆಯ ಸಾಮಾನ್ಯ ಪ್ರಜ್ಞೆ ಮತ್ತು ಸಮಕಾಲೀನ ಸಂದರ್ಭ ಹಾಗೂ ಆ ವಿಷಯದ ಮೇಲೆ ತಮ್ಮದೇ ಆದ ಜ್ಞಾನವನ್ನು ಹೊಂದಿರಬೇಕು. ಇಲ್ಲಿ ಚರಿತ್ರಕಾರರು ಆಕರಗಳ ಮೂಲಕ ತಮಗೆ ದಕ್ಕಿದ ಅರಿವನ್ನು ತಮ್ಮ ಬರವಣಿಗೆಯ ಮೂಲಕ ಪ್ರಚುರಪಡಿಸುತ್ತಾರೆ. ಈ ಹಿನ್ನೆಲೆಯಲ್ಲಿ ಚರಿತ್ರೆ ವಿವಿಧ ಕಾಲಘಟ್ಟಗಳಲ್ಲಿ ಹೇಗೆ ರೂಪುಗೊಂಡಿತು ಎಂಬುದರ ಬಗೆಗೆ ಚರಿತ್ರಕಾರರು ಹೊಸ ನೋಟಗಳನ್ನು ನೀಡಲು ಪರಾಮರ್ಶೆಯನ್ನು ಕೈಗೊಳ್ಳಬೇಕು. ಆಯಾಯ ವಿಷಯದ ಬಗೆಗೆ ಇದುವರೆಗೆ ಏನು ಸಂಶೋಧನೆ ನಡೆದಿದೆ? ಹೇಗೆ ನಡೆದಿದೆ? ಇನ್ನೂ ಆಗಬೇಕಾದ ಸಂಶೋಧನೆಗಳೇನು? ಇವೇ ಮುಂತಾದ ಪರಾಮರ್ಶೆಯನ್ನು ಕೈಗೊಳ್ಳುವುದು ಅಗತ್ಯವಾಗಿದೆ. ವರ್ತಮಾನದ ನೆಲೆಯಲ್ಲಿ ಹಿಂದಿನ ಅಧ್ಯಯನಗಳನ್ನು ಸಮಸ್ಯೆ ಮತ್ತು ಸಾಧ್ಯತೆಗಳ ಮೂಲಕ ಮರುಚಿಂತನೆಗೆ ಒಳಪಡಿಸುವುದು ಮುಖ್ಯ ಹಾಗೂ ವಿಧಿ–ವಿಧಾನಗಳ ಮೂಲಕ ಹೊಸಹೊಸ ಆಲೋಚನೆಗಳ ಮೂಲಕ ವಿಮರ್ಶೆ, ವಿಶ್ಲೇಷಣೆಗೆ ಒಳಪಡಿಸಿರುವುದು ಸಹ ಚರಿತ್ರೆ ಅಧ್ಯಯನದ ದೃಷ್ಟಿಯಿಂದ ಪ್ರಸ್ತುತವಾಗಿದೆ. ಇಲ್ಲಿ ಗ್ರಹಿಕೆ, ತಾತ್ವಿಕತೆ, ದೃಷ್ಟಿಕೋನ ಮುಂತಾದ ಸೈದ್ಧಾಂತಿಕತೆಯ ನಿಲುವುಗಳನ್ನು ತಳೆಯಲಾಗಿದೆ. ಮರು ಓದಿನ ಮೂಲಕ ವಿಷಯವನ್ನು ಹೊಸ ಪರಿಪ್ರೇಕ್ಷ್ಯದಲ್ಲಿ ಕಟ್ಟಲಾಗಿದೆ. ಹಿಂದಿನ ಬರಹವನ್ನು ಪ್ರಶ್ನಿಸುವುದರ ಮೂಲಕ ಪುನಾರಚನೆ ಮಾಡಿರುವುದು ಸೂಕ್ತ.

ಚರಿತ್ರೆಯಲ್ಲಿ ರಚನೆ, ನಿರಚನೆ ಮತ್ತು ಪುನಾರಚನೆಗಳು ಮುಖ್ಯವಾಗಿವೆ. ಇವುಗಳ ಮೂಲಕ ಚರಿತ್ರೆಯ ವಿಭಿನ್ನ ಚಹರೆಗಳನ್ನು ಗ್ರಹಿಸಲು ಸಾಧ್ಯವಾಗಿದೆ. ಚರಿತ್ರಕಾರರ ಅಧ್ಯಯನದ ವಿಷಯ ಮನೋಕೇಂದ್ರಿತ ನೆಲೆಯಲ್ಲಿ ರೂಪುಗೊಳ್ಳುವ ಚರಿತ್ರೆ ಮತ್ತು ಚಿಂತನೆ ಇಲ್ಲಿ ಪ್ರಮುಖವಾಗಿದೆ. ಚರಿತ್ರಕಾರರು ಕೃತಿಗಳ ಮೂಲಕ ಮೂಡಿಸಿದ ಸಂಶೋಧನೆಯ ಮೌಲ್ಯವನ್ನು ಮರುಚಿಂತನೆಗೆ

ಒಳಪಡಿಸಿದಾಗ ಹೊಸಹೊಸ ವಿಚಾರಗಳು ಹೊರಬರುತ್ತವೆ. ಚರಿತ್ರೆ ಬರವಣಿಗೆಯಲ್ಲಿ ಸತ್ಯ ಮತ್ತು ವಸ್ತುನಿಷ್ಠತೆಯ ಪ್ರಮಾಣ ಹೇಗಿರಬೇಕು ಎಂಬುದು ಮುಖ್ಯ. ಮೈಸೂರು ಒಡೆಯರ ಕುರಿತು ರಚನೆಯಾದ ಬಹುತೇಕ ಕೃತಿಗಳು ಸಾಂಪ್ರದಾಯಿಕ ಚರಿತ್ರೆಯಿಂದ ಸೈದ್ಧಾಂತಿಕ ಚರಿತ್ರೆಯ ಕಡೆಗೆ ಸಾಗಿವೆ ಎನ್ನಬಹುದು. ಈ ಹಿನ್ನೆಲೆಯಲ್ಲಿ ಇವುಗಳನ್ನು ಮರುಚಿಂತನೆಯಲ್ಲಿ ಗುರುತಿಸಲಾಗಿದೆ.

ಭಾರತದಲ್ಲಿ ನಾವು ಇಂದು ಕಲಿಯುತ್ತಿರುವ ಹಾಗೂ ಸಂಶೋಧಿಸುತ್ತಿರುವ ಚರಿತ್ರೆ ಲೇಖನಶಾಸ್ತ್ರಕ್ಕೆ ದೀರ್ಘ ಇತಿಹಾಸವಿದೆ. ಇದು ವಸಾಹತುಯುಗದಲ್ಲಿ ಪ್ರಾರಂಭವಾಯಿತು ಎಂಬುದು ಕೆಲವರ ವಾದ. ಆಧುನಿಕ ಕಾಲದಲ್ಲಿ ವಸಾಹತುಶಾಹಿ ಚರಿತ್ರೆಲೇಖನ, ರಾಷ್ಟ್ರೀಯವಾದಿ ಚರಿತ್ರೆ ಲೇಖನ, ಮಾರ್ಕ್ಸ್ ಅಥವಾ ಎಡಪಂಥೀಯ ಹಾಗೂ ಸಬಾಲ್ಟರ್ನ್ ಚರಿತ್ರೆಲೇಖನಗಳು ಎಂಬ ವಿಭಾಗಗಳನ್ನು ಮಾಡಲಾಗಿದ್ದು, ಅನಂತರ ಆಧುನಿಕೋತ್ತರ ಮತ್ತು ವಸಾಹತೋತ್ತರ ಚಿಂತನೆಗಳು ಬೆಳೆದುಬಂದವು. ಈ ಸಂದರ್ಭದ ಕೃತಿಯಲ್ಲಿ ಅಧಿಚರಿತ್ರೆ ಮತ್ತು ನವಚಾರಿತ್ರಿಕ ವಾದದ ಬೇರುಗಳನ್ನು ಗಮನಿಸಬಹುದು. ಈ ಪಂಥಗಳು ಒಂದನ್ನೊಂದು ಪಂಥವನ್ನು ಪ್ರಶ್ನಿಸುತ್ತಲೇ ಬಂದಿವೆ. ಪ್ರಭುತ್ವಮುಖಿಯಾದ ಚರಿತ್ರೆ ಇಂದು ಜನಮುಖಿ ಚರಿತ್ರೆಯಾಗಿ ಗುರುತಿಸಿಕೊಳ್ಳುತ್ತಿದೆ. ಸಿದ್ಧ ಮಾದರಿಗಳನ್ನು ಹೊಡೆಯುವುದು ಮುಖ್ಯ. ಗ್ರಹಿಕೆಯ ನೆಲೆಯಲ್ಲಿ ಚರಿತ್ರೆ, ಚರಿತ್ರೆಗಳು ಎಂದು ಅಧ್ಯಯನದಲ್ಲಿ ವ್ಯಾಖ್ಯಾನ ಮಾಡಲಾಗುತ್ತಿದೆ.

ಕರ್ನಾಟಕದ ಚರಿತ್ರೆಯಲ್ಲಿ ಮಾತ್ರವಲ್ಲ, ಭಾರತದ ಚರಿತ್ರೆಯಲ್ಲೂ ಮೈಸೂರು ಸಂಸ್ಥಾನ ಬೇರೆ ಬೇರೆ ಕಾರಣಗಳಿಂದ ಒಂದು ವಿಶಿಷ್ಟ ಸ್ಥಾನವನ್ನು ಪಡೆದಿದೆ. ಇದರ ರಾಜಕೀಯ, ಆರ್ಥಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಪರಂಪರೆ ಬಹುಮುಖಿ ವಿಚಾರಧಾರೆಗಳಲ್ಲಿ ಅನನ್ಯತೆಯನ್ನು ಮೆರೆದಿದೆ. ಇದು ಒಟ್ಟು ಭಾರತೀಯ ಸಂಸ್ಕೃತಿಯ ಭಾಗವಾಗಿ ಅಂತರ್ಗತಗೊಂಡಿದೆ. ಈ ಕಾರಣದಿಂದಲೇ ಮೈಸೂರು ಸಂಸ್ಥಾನ ಇಂದಿಗೂ ಸಂಶೋಧಕರ ಆಸಕ್ತಿಯನ್ನು ತನ್ನೆಡೆಗೆ ಉಳಿಸಿಕೊಂಡಿರುವುದು. ಕ್ರಿ.ಶ.೧೩೯೯ರಲ್ಲಿ ಸ್ಥಾಪನೆಯಾದ ಮೈಸೂರು ಸಂಸ್ಥಾನವು ವಿಜಯನಗರ ಅರಸರ ಸಮಕಾಲೀನರಾಗಿ, ಸಾಮಂತರಾಗಿ ವಸಾಹತುಶಾಹಿ ನೆಲೆಯಲ್ಲಿ ಅನೇಕ ಸ್ಥಿತ್ಯಂತರಗಳಿಗೆ ಒಳಗಾಯಿತು. ಅನಂತರ ಭಾರತದ ಪ್ರಜಾತಾಂತ್ರಿಕ ನೆಲೆಯಲ್ಲಿ ತನ್ನ ಅಸ್ತಿತ್ವವನ್ನು ಪಡೆಯಿತು ಎಂಬುದು ಮುಖ್ಯ. ಮೈಸೂರು ಸಂಸ್ಥಾನವನ್ನು ೨೫ ಒಡೆಯರು ಆಳ್ವಿಕೆ ನಡೆಸಿದ್ದಾರೆ. ಇವರ ಆಡಳಿತದಲ್ಲಿ ಆದ ಪ್ರಗತಿಯ ಕಾರ್ಯಗಳು ಪ್ರಮುಖವಾದವು. ಇದಕ್ಕೆ ದಿವಾನರ ಉತ್ತಮ ಆಡಳಿತ ಹಾಗೂ ಜನಸ್ಪಂದನೆಯ ಕೆಲಸಕಾರ್ಯಗಳೇ ಕಾರಣ. ಈ ಎಲ್ಲಾ ಪ್ರಗತಿಯ ಕಾರ್ಯಗಳಿಗೆ ಸಂಬಂಧಿಸಿದಂತೆ ರಚನೆಗೊಂಡ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳ ಸಮಗ್ರ ಅಧ್ಯಯನದ ಜೊತೆಗೆ ಸಮಕಾಲೀನವಾಗಿ ಅಧ್ಯಯನ ನಡೆಸಲಾಗಿದೆ.

ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಪೌರಸ್ತ್ಯವಾದ, ವಸಾಹತುಶಾಹಿ, ರಾಷ್ಟ್ರೀಯವಾದಿ, ಮಾರ್ಕ್ಸ್‌ವಾದಿ ಮತ್ತು ಸಬಾಲ್ಟರ್ನ್ ಮಾದರಿಯ ಅಧ್ಯಯನದ ಕೃತಿಗಳನ್ನು ಚರ್ಚೆಗೆ ಒಳಪಡಿಸಲಾಗಿದೆ. ಮೊದಲು ಪೌರಸ್ತ್ಯ ಚಿಂತನೆಯಲ್ಲಿ ಭಾಷೆ ಮತ್ತು ಗ್ರಂಥಗಳ ಅಧ್ಯಯನದ ಪ್ರಯತ್ನಗಳನ್ನು ತಿಳಿಸಲಾಗಿದೆ. ಒಡೆಯರನ್ನು ಕೇಂದ್ರಿತವಾಗಿರಿಸಿಕೊಂಡ ಕೃತಿಗಳು

ಹೆಚ್ಚಾಗಿ ಹೊರಬಂದಿದ್ದು, ಅವರ ಆಡಳಿತಾತ್ಮಕ ವಿಚಾರಗಳನ್ನೇ ತಿಳಿಸುವಂತಹವು. ಒಡೆಯರು ಜನರ ಕಲ್ಯಾಣಕ್ಕಾಗಿ ಕೈಗೊಂಡ ಕಾರ್ಯಗಳನ್ನು ಚರ್ಚಿಸುವ ಕೃತಿಗಳು ಪ್ರಾರಂಭದಲ್ಲಿ ಹೊರ ಬರದೇ ಇರುವುದು ಮುಖ್ಯ. ಪ್ರಮುಖವಾಗಿ ಹೋರಾಟ, ಚಳವಳಿಯ ವಿಚಾರಗಳು ಇರಲಿಲ್ಲ. ಪುರೋಹಿತಶಾಹಿಯು ಇಲ್ಲಿ ಮುಖ್ಯ ಪಾತ್ರ ವಹಿಸಿದ್ದು, ಈ ನೆಲೆಯಲ್ಲಿ ಗುರುತಿಸಿಕೊಂಡ ಕೃತಿಗಳನ್ನು ಮೊದಲು ಹೆಚ್ಚಿನ ಮಟ್ಟದಲ್ಲಿ ಗಮನಿಸಬಹುದು. ಅನಂತರ ಪ್ರತಿರೋಧದ ನೆಲೆಯಲ್ಲಿ ಇತರ ವರ್ಗಗಳನ್ನು ಗುರುತಿಸುವ ಕೃತಿಗಳು ಹೊರಬರಲಾರಂಭಿಸಿದವು. ವಸಾಹತುಶಾಹಿ ನೆಲೆಯಲ್ಲಿ ತಮ್ಮ ಅನುಕೂಲಕ್ಕಾಗಿ ಸ್ಥಳೀಯರ ಜ್ಞಾನವನ್ನು ಬಳಸಿಕೊಂಡರು ಎಂಬುದು ಮುಖ್ಯ. ಮೊದಲು ಸಮಕಾಲೀನವಾಗಿ ಪ್ರಾಥಮಿಕ ಆಕರಗಳಾದ ಶಾಸನಗಳು, ನಾಣ್ಯಗಳು, ಸ್ಮಾರಕಗಳು, ಕೈಫಿಯತ್ತುಗಳು, ಸಾಹಿತ್ಯ ಕೃತಿಗಳು ವಾಸ್ತವಿಕತೆಯ ವಿಚಾರಗಳನ್ನು ತಿಳಿಸುವಂತಹವು. ಆಯಾಯ ಸಂದರ್ಭದ ವಿಚಾರಗಳನ್ನು ತಿಳಿಯಲು ಮುಖ್ಯವಾದವುಗಳು. ಅಲ್ಲದೇ ಕಾಲಕಾಲಕ್ಕೆ ರಚನೆ ಮಾಡಿದ ಕಡತ ಮತ್ತು ದಾಖಲೆಗಳು ಪ್ರಮುಖವಾದವು. ಇವುಗಳಿಂದ ವಿಚಾರಗಳನ್ನು ನೇರವಾಗಿ ತಿಳಿಯಲು ಸಹಕಾರಿಯಾಗಿವೆ.

ಮೊದಲು ಮಾಹಿತಿಯ ರೂಪದಲ್ಲಿ ರಚನೆಯಾದ ಕೃತಿಗಳನ್ನು ನೋಡಬಹುದು. ಸಾಂಪ್ರದಾಯಿಕ ಮಾದರಿಯಲ್ಲಿಯೇ ಕೃತಿಗಳು ರಚನೆಯಾಗಿವೆ. ಅನಂತರ ಬಂದ ಕೃತಿಗಳು ಚರಿತ್ರೆಯ ಶಿಸ್ತು ಅಪೇಕ್ಷಿಸುವ ರೀತಿಯಲ್ಲಿ ರಚನೆಯಾದವು. ಮೊದಲು ರಾಜಕೀಯ ವಿಚಾರಗಳಿಗಷ್ಟೇ ಸೀಮಿತವಾಗಿದ್ದು, ನಂತರ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳತ್ತ ಗಮನ ಹರಿಸಿ ಹೊರಬಂದ ಕೃತಿಗಳನ್ನು ಗುರುತಿಸಬಹುದು. ಪ್ರಭುತ್ವಕೇಂದ್ರಿತವಾಗಿದ್ದ ಕೃತಿಗಳು ಹೊರಬಂದು, ಅನಂತರ ಜನಮುಖಿಯಾದ ಕೃತಿಗಳು ಹೊರಬಂದಿರುವುದನ್ನು ತಿಳಿಯಬಹುದು. ವಸಾಹತುಶಾಹಿ ನೆಲೆಯಲ್ಲಿ ತಮ್ಮ ರಾಜಕೀಯ ಜರೂರುಗಳಿಗೆ ಅನುಗುಣವಾಗಿ ಇಲ್ಲಿನ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಕಥನಗಳನ್ನು ಅರಿಯುವುದು ಅವರಿಗೆ ಅನಿವಾರ್ಯವಾಗಿತ್ತು. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿಯನ್ನು ಕಲೆ ಹಾಕುವ ಸಂದರ್ಭದಲ್ಲಿ ಕೃತಿಗಳು ಹೊರಬಂದವು. ಪ್ರಸ್ತಾವನೆಯಲ್ಲಿ ಹೇಳಿರುವಂತೆ ಮೈಸೂರು ಒಡೆಯರ ಚರಿತ್ರೆಯ ಕೃತಿಗಳಲ್ಲಿ ೧೯೩೦, ೧೯೪೦ ಮತ್ತು ೧೯೭೦ರ ದಶಕ ಪ್ರಮುಖವಾದುದು. ಅನಂತರ ೧೯೯೦, ೨೦೦೦, ಮತ್ತು ೨೦೧೦ರ ಕಾಲಾವಧಿಯು ಮುಖ್ಯವಾದುದಾಗಿದೆ. ೧೯೩೦ ಮತ್ತು ೧೯೪೦ರಲ್ಲಿ ಹೊರಬಂದ ಕೃತಿಗಳು ಡಿಸ್ಕ್ರಿಪ್ಟೀವ್(ವಿವರಣಾತ್ಮಕ) ಮಾದರಿಯ ಕೃತಿಗಳು. ಈ ಕಾಲಘಟ್ಟದಲ್ಲಿ ಬರಹಗಾರರು ತಮ್ಮ ಕೃತಿಗಳನ್ನು ಮಾಹಿತಿಯ ಮೂಲಕ ಕಟ್ಟಿ ಕೊಡುತ್ತಾರೆ. ವಿಶ್ಲೇಷಣೆಯ ವ್ಯಾಪ್ತಿಗೆ ಹೋಗುವುದಿಲ್ಲ. ಇವು ವಸಾಹತುಶಾಹಿ ನೆಲೆಗೆ ಮುಖಾಮುಖಿಯಾಗಿವೆ. ಸಾಮ್ರಾಜ್ಯಶಾಹಿ ವ್ಯವಸ್ಥೆಯನ್ನು ಬಲಗೊಳಿಸಲುಬೇಕಾದ 'ಮಾಹಿತಿ'ಯನ್ನು ಚರಿತ್ರೆ ಬರವಣಿಗೆಯ ವಿವರಗಳ ರೂಪದಲ್ಲಿ ಕಟ್ಟಿಕೊಡುತ್ತಾರೆ. ಅನಂತರ ಬ್ರಿಟಿಷ್ ವಸಾಹತುಶಾಹಿ ಹಾಗೂ ಒಡೆಯರ ಭಾಗವಾದ ಅಧಿಕಾರಿಗಳು ಅಧಿಕಾರ ಕೇಂದ್ರಕ್ಕೆ ಇದ್ದ ತಮ್ಮ ನಿಷ್ಠೆಯ ಸಂಕೇತವಾಗಿ ಮೈಸೂರಿನ ಚರಿತ್ರೆಯನ್ನು ವಿವರಣಾತ್ಮಕ ಮಾದರಿಯಲ್ಲಿ ಕಟ್ಟಿಕೊಟ್ಟರು.

ವಸಾಹತುಶಾಹಿ ಕಾಲಘಟ್ಟದಲ್ಲಿ ಆಡಳಿತದ ಅನುಕೂಲಕ್ಕಾಗಿ ಸ್ಥಳೀಯ ಪ್ರದೇಶಗಳ ಜ್ಞಾನವನ್ನು ಪಡೆಯಲು ವಸಾಹತುಶಾಹಿ ಬರಹಗಾರರು ಮಾಹಿತಿಗಳನ್ನು ಕ್ರೋಡೀಕರಿಸಿದರು. ಈ ನೆಲೆಯಲ್ಲಿಯೇ

ಬರಹಗಾರರು ಕ್ಷೇತ್ರಕಾರ್ಯದ ಮೂಲಕ ಜನರನ್ನು ಭೇಟಿ ಮಾಡಿ, ಜನರು ನೀಡಿದ ಮಾಹಿತಿಗಳನ್ನು ಕಲೆ ಹಾಕಿ ರಚಿಸಿದ್ದಾರೆ. ಆದರೆ ಅವರ ನಂಬಿಕೆಗಳಿಗೆ ಕೈ ಹಾಕದೇ ಎಚ್ಚರದಿಂದ ಅವರು ನೀಡಿದ ವಿವರಗಳನ್ನು ಸಂಗ್ರಹಿಸಿದರು. ಈ ಮಾಹಿತಿಗಳ ಸಂಗ್ರಹಕ್ಕಾಗಿ ಆಯಾಯ ಪ್ರದೇಶಗಳ ಸ್ಥಳೀಯರ ಸಹಾಯ ಪಡೆದರು. ಸ್ಥಳೀಯರು ಎಂದರೆ ಅಕ್ಷರಜ್ಞಾನ ಹೊಂದಿದ ಬ್ರಾಹ್ಮಣರು. ಇವರು ಆಡಳಿತದಲ್ಲಿ ಹಲವು ಹುದ್ದೆಗಳನ್ನು ಹೊಂದಿದ್ದು, ತಮ್ಮ ಅನುಕೂಲಕ್ಕೆ ತಕ್ಕಂತೆ ಯಾವುದೇ ಅಧಿಕಾರವನ್ನು ಪ್ರಶ್ನಿಸದೇ ಮಾಹಿತಿಗಳನ್ನು ಒದಗಿಸಿದರು. ಅಲ್ಲದೇ ವಸಾಹತುಶಾಹಿ ಮತ್ತು ವಿದೇಶಿ ಬರಹಗಾರರು ತಮ್ಮ ಸಾಮ್ರಾಜ್ಯಶಾಹಿ ನೆಲೆಯ ಅಧಿಕಾರ ಉಳಿಸಿಕೊಳ್ಳಲು ತಮ್ಮ ಶತ್ರುಗಳ ಬಗೆಗೆ ಮಾಹಿತಿಗಳನ್ನು ಯಾವ ರೀತಿ ಸಂಗ್ರಹಿಸಿದರು ಎಂಬುದು ಮುಖ್ಯ. ತಮ್ಮ ಅನುಕೂಲಕ್ಕಾಗಿಯೇ ಒಡೆಯರ ಚರಿತ್ರೆಯಲ್ಲಿನ ಮರೆಮಾಚಿದ ವಿಷಯಗಳು ಮತ್ತು ಹೈದರಾಲಿ, ಟಿಪ್ಪುವಿನ ಬಗೆಗೆ ನೀಡಿರುವ ಹೇಳಿಕೆಗಳು ಇಂದಿಗೂ ಚರ್ಚೆಗೆ ಒಳಗಾಗುತ್ತಲೇ ಇವೆ. ಸಂಶೋಧನೆಗೆ ಒಳಪಟ್ಟು ಹೊಸ ವಿಚಾರಗಳು ಕೂಡ ಹೊರಬಂದಿವೆ. ಇತ್ತೀಚಿಗೆ ಟಿಪ್ಪು ವಿಶ್ವವಿದ್ಯಾಲಯ ಸ್ಥಾಪಿಸಬೇಕು ಎನ್ನುವ ಸರ್ಕಾರದ ನಿಯಮಕ್ಕೆ ಹಲವು ಪರ-ವಿರೋಧಗಳ ನಡುವೆ ಇಲ್ಲಿನ ಹೇಳಿಕೆಗಳು ಚರ್ಚೆಗೆ ಒಳಗಾಗುತ್ತಿವೆ. ದೇಶಿ ಚರಿತ್ರೆಕಾರರು ತಮ್ಮ ಪ್ರಭುತ್ವದ ವಿರುದ್ಧದ ಹೇಳಿಕೆಗಳನ್ನು ಮರೆಮಾಚುತ್ತಾರೆ. ಅಲ್ಲದೇ ಬ್ರಿಟಿಷರು ತಂದ ಒಡೆದು ಆಳುವ ನೀತಿಯ ಫಲವಾಗಿ ಬಂದ ಹೇಳಿಕೆಗಳ ಮಾಹಿತಿಯನ್ನು ಕೃತಿಗಳಲ್ಲಿ ನೋಡಬಹುದು. ಧರ್ಮದ ನೆಲೆಯಲ್ಲಿ ಕ್ರೋಡೀಕರಿಸಿದ ಮಾಹಿತಿಗಳು ಕೋಮುವಾದದ ನೆರಳಿನಲ್ಲಿ ಇಂದಿಗೂ ಮೊಳಕೆಯೊಡೆಯುತ್ತಲೇ ಇವೆ. ಶತ್ರುವನ್ನು ಧರ್ಮದ ನೆರಳಿನಲ್ಲಿ ನೋಡಿರುವುದೇ ಇದಕ್ಕೆ ಕಾರಣವೇ ಎನಿಸುತ್ತದೆ. ದೇಶಿಯ ಬರಹಗಾರರಲ್ಲಿ ಸ್ಥಳೀಯವಾಗಿ ಜ್ಞಾನ ಪಡೆದವರು ಬ್ರಾಹ್ಮಣ ವರ್ಗವಾಗಿದ್ದು, ಪ್ರಭುತ್ವದಲ್ಲಿ ತಮ್ಮ ಜಾತಿಯವರು ಯಾವುದೇ ಅಧಿಕಾರವನ್ನು ದುರುಪಯೋಗಪಡಿಸಿಕೊಂಡರೂ ಅದನ್ನು ಬೆಳಕಿಗೆ ತರದೇ ಮರೆ ಮಾಚುತ್ತಾರೆ. ಸ್ವಜನ ಪಕ್ಷಪಾತವನ್ನು ಇಲ್ಲಿ ಗಮನಿಸಬಹುದು. ತಮ್ಮ ಕೃತಿಗಳಲ್ಲಿ ಮಾಹಿತಿಗಳೆಲ್ಲ ತಮ್ಮ ಆಡಳಿತದ ಅನುಕೂಲಕ್ಕಾಗಿಯೇ ಕ್ರೋಡೀಕರಿಸಿದ್ದಾರೆ. ದೇಶಿ ಚರಿತ್ರೆಕಾರರೂ ಕೂಡ ಹೈದರಾಲಿ ಮತ್ತು ಟಿಪ್ಪುವಿನ ಬಗೆಗೆ ನೀಡಿರುವ ಹೇಳಿಕೆಗಳು ಚರ್ಚೆಗೆ ಒಳಗಾಗಿವೆ. ಈ ಹಿನ್ನೆಲೆಯಲ್ಲಿ ಟಿಪ್ಪು ಕನ್ನಡ ದ್ರೋಹಿಯೇ? ಎಂಬುದರ ಚರ್ಚೆಯು ಮುಖ್ಯ. ಇಲ್ಲಿ ಮೈಸೂರು ಒಡೆಯರ ಚರಿತ್ರೆ ಬರವಣಿಗೆ ಹಿಂದೂ-ಮುಸ್ಲಿಂ ಎನ್ನುವ ಮತೀಯ ವಿಚಾರಗಳಿಗೆ, ದೇಶಾಭಿಮಾನ, ರಾಷ್ಟ್ರೀಯತೆಯ ವಾದಕ್ಕೆ ಬಳಕೆಯಾಗಿದೆ ಎಂಬುದು ಮುಖ್ಯವಾದ ಸಂಗತಿ. ಮೈಸೂರು ಒಡೆಯರ ಚರಿತ್ರೆ ಬರವಣಿಗೆಯನ್ನು ಬ್ರಿಟಿಷ್ ಆಳ್ವಿಕೆಯ ಸಂದರ್ಭದಲ್ಲಿ ಹುಟ್ಟಿಕೊಂಡ ವಸಾಹತುಶಾಹಿ ಮತ್ತು ರಾಷ್ಟ್ರೀಯವಾದಿ ಧೋರಣೆಗಳಿಗೆ ನೇರವಾಗಿ ಬರಹಗಾರರು ಬಳಸಿಕೊಂಡರು. ಅನಂತರ ಬರಹಗಾರರು ಈ ಸಿದ್ಧಾಂತದ ಧೋರಣೆಗಳಿಗಿಂತ ಭಿನ್ನವಾದಂತಹ ಆರ್ಥಿಕ, ಸಾಮಾಜಿಕ ನೆಲೆಯಲ್ಲಿ ಮಾರ್ಕ್ಸ್‌ವಾದ ಮತ್ತು ಸಬಾಲ್ಟರ್ನ್ ವಾದಗಳಿಗೆ ಮುಖಾಮುಖಿ ಆದರು. ಮುಖ್ಯವಾಗಿ ಯಾವ ವಾದದ ಕಡೆ ಅವರ ನಿಲುವು ಇದೆ ಎಂಬುದು ತಿಳಿಯುತ್ತದೆ.

ಕೆಲವು ಕೃತಿಗಳಲ್ಲಿ ಅರಮನೆಯ ಪ್ರಭುತ್ವದಲ್ಲಿ ರಾಜಕೀಯದ ಒಳನೋಟದಲ್ಲಿಯೇ ಗಿರಕಿ ಹೊಡೆಯುತ್ತಾ, ಸಾಮಾಜಿಕವಾಗಿ ಜನಸಾಮಾನ್ಯರ ಜೀವನಚಿತ್ರಣಕ್ಕೆ ಗಮನ ಹರಿಸಲೇ ಇಲ್ಲ. ಬರಹಗಾರನ ಗ್ರಹಿಕೆ ಮತ್ತು ವ್ಯಾಖ್ಯಾನ ಮುಖ್ಯ. ಹೊಸ ಹೊಸ ವಿಚಾರಗಳಿಗೆ ಮುಖಾಮುಖಿಯಾಗಿ

ಒಪ್ಪಿತ ಚರಿತ್ರೆಯನ್ನು ಮರು ಓದಿನ ಮೂಲಕ ಮರುವ್ಯಾಖ್ಯಾನಕ್ಕೆ ಒಳಪಡಿಸಿರುವುದು ಬರಹಗಾರರ ವೈಚಾರಿಕ ಮೌಲ್ಯಗಳನ್ನು ಗುರುತಿಸುವುದು ಸೂಕ್ತ.

ಈ ಹಿನ್ನೆಲೆಯಲ್ಲಿ ಸಮಗ್ರವಾಗಿ ತಿಳಿಯುವುದೆಂದರೆ ಮೇಲ್ವರ್ಗದ ಹಿತಾಸಕ್ತಿಗೆ ಅನುಗುಣವಾಗಿ ಕೃತಿಗಳನ್ನು ರಚಿಸಿದರು ಎಂಬುದು. ಆದರೆ ಅವರು ಸಂಘರ್ಷದ ಸಂದರ್ಭಗಳನ್ನು ಈ ಕೃತಿಗಳಲ್ಲಿ ಬರೆಯಲಿಲ್ಲ. ಅನಂತರ ೧೯೭೦ರ ದಶಕದಲ್ಲಿ ಸಾಂಸ್ಕೃತಿಕವಾಗಿ ಒಂದು ಬದಲಾವಣೆ ಕಾಣುತ್ತೇವೆ. ಭಾರತದ ೧೯೭೦ರ ದಶಕವು ಅನೇಕ ಚಳವಳಿಗಳನ್ನು ಕಂಡ ಕಾಲ. ರೈತ ಚಳವಳಿಗಳು, ಸಮಾಜವಾದಿ ಚಳವಳಿ, ಜೆ.ಪಿ.ಚಳವಳಿ, ಭೂಸುಧಾರಣೆಗಳು, ಜಾತಿವಿನಾಶ ಸಮಾವೇಶಗಳು ಚರಿತ್ರೆಯ ಸಂವಾದಕ್ಕೆ ರೂಪಿಸಿಕೊಂಡ ಕಾಲ. ಹೀಗಾಗಿ ೧೯೭೦ರ ಮತ್ತು ೧೯೮೦ರ ದಶಕದಲ್ಲಿ ಬಂದ ಕೃತಿಗಳು ಸಾಮಾಜಿಕ ಚರಿತ್ರೆಗೆ ವಿಶೇಷವಾಗಿ ಮುಖಾಮುಖಿಯಾಗಿ ಭಿನ್ನ ಧಾರೆಗಳಲ್ಲಿ ಒಟ್ಟು ಸಾಂಸ್ಕೃತಿಕ ಬದುಕಿನ ಚಲನಶೀಲತೆಯ ಗತಿಯನ್ನು ಕಟ್ಟಿಕೊಡಲು ಪ್ರಯತ್ನಿಸಿ, ಬಹುಮಟ್ಟಿಗೆ ಸಫಲವಾಗಿದೆ. ಒಟ್ಟಾರೆ ಕೆಲವೇ ಕೆಲವು ವಿದೇಶಿ ಮತ್ತು ದೇಶಿ ಸಂಶೋಧಕರು ಮೈಸೂರು ಚರಿತ್ರೆಗೆ ಹೊಸ ಭಾಷೆಯ ಆಯಾಮವನ್ನು ತಂದುಕೊಟ್ಟು, ವಿಶ್ಲೇಷಣಾತ್ಮಕ ಆಲೋಚನೆಗಳನ್ನು ಕಟ್ಟಿಕೊಟ್ಟರು. ೧೯೯೦, ೨೦೦೦ ಮತ್ತು ೨೦೧೦ರ ಅವಧಿಯಲ್ಲಿ ಈ ವಿಷಯಕ್ಕೆ ಪೂರಕವಾಗಿ ಬಿಡಿ ಬಿಡಿಯಾದ ವಿಚಾರಗಳ ಕೃತಿಗಳು ಹೊರ ಬಂದವು. ಸಾಮಾಜಿಕ ಸುಧಾರಣೆಯಲ್ಲಿ ಗುರುತಿಸಿಕೊಂಡ ಕೃತಿಗಳು, ಸಮುದಾಯದ ಐಡೆಂಟಿಟಿಯ ನೆಲೆಯಲ್ಲಿ ಪ್ರಕಟವಾದ ಕೃತಿಗಳು ಇಲ್ಲಿ ಮುಖ್ಯ. ಈ ಹಿನ್ನೆಲೆಯಲ್ಲಿ ಕ್ಷೇತ್ರಕಾರ್ಯದ ಮೂಲಕ ಜನರೊಂದಿಗೆ ಮುಖಾಮುಖಿಯಾಗಿ ವಿಚಾರಗಳನ್ನು ಚರ್ಚಿಸುವ ಕೃತಿಗಳನ್ನು ನೋಡಬಹುದು. ಹಾಗೆಯೇ ಮುಖ್ಯವಾಹಿನಿಗೆ ಬಾರದ ಎಷ್ಟೋ ಸಮುದಾಯಗಳ ಅಸ್ಮಿತೆಯನ್ನು ತಿಳಿಸುವ ಕೃತಿಗಳು ಹೊರಬಂದಿರುವುದನ್ನು ಮಹಾಪ್ರಬಂಧದಲ್ಲಿ ಗಮನಿಸಲಾಗಿದೆ. ಜನರ ಜೀವನಾಧಾರದಿಂದ ನೋಡುವ ಕೃತಿಗಳು ಇಂದು ಹೆಚ್ಚಾಗಿ ಬರುತ್ತಿವೆ. ಒಂದು ಕೃತಿಯ ರಚನೆ ಸಮಕಾಲೀನ ಚಾರಿತ್ರಿಕ ಅಗತ್ಯ ಎಂಬಂತೆ ಬರಹಗಾರರು ವಿಶ್ಲೇಷಣೆಗೆ ಒಳಪಡಿಸುವುದು ಮುಖ್ಯ.

ಮೈಸೂರು ಒಡೆಯರ ಚರಿತ್ರೆಯನ್ನು ಮೌಖಿಕ ಆಕರಗಳ ಚೌಕಟ್ಟಿನಲ್ಲಿ ನಿರ್ಮಿಸುವ ಪ್ರಯತ್ನ ಅಷ್ಟಾಗಿ ನಡೆಯಲಿಲ್ಲ. ಚರಿತ್ರೆ ಬರವಣಿಗೆಯಲ್ಲಿ ಮೌಖಿಕ ಆಕರಗಳು ಲಿಖಿತ ಆಕರಗಳಷ್ಟೇ ಮಹತ್ವದ್ದಾಗಿವೆ. ಆದರೆ ಚರಿತ್ರೆಕಾರರು ಜನರ ನಡುವೆ ಇರುವ ಮೌಖಿಕ ರೂಪದ ಆಕರಗಳನ್ನು ನಿರ್ಲಕ್ಷಿಸಿರುವುದನ್ನು ಗಮನಿಸಬಹುದು. ಅಲ್ಲದೇ ಜಾನಪದೀಯ ವಿಚಾರಗಳನ್ನು ನಿರ್ಲಕ್ಷಿಸಿರುವುದನ್ನು ನೋಡಬಹುದು. ವಸಾಹತುಶಾಹಿ ಬರಹಗಾರರು ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿದಾಗ ಜನರ ನಂಬಿಕೆಗೆ ಕೈ ಹಾಕದೇ ಇಲ್ಲಿನ ಜಾನಪದೀಯ ವಿಚಾರಗಳನ್ನು ಸಂಗ್ರಹಿಸಿದರು ಎಂಬುದು ಪ್ರಮುಖ. ಜಾನಪದೀಯ ವಿಚಾರವಾದ 'ಕೃಷ್ಣರಾಯಭೂಪ ಮನೆ ಮನೆಗೆ ದೀಪ' ಎನ್ನುವುದು ಮುಖ್ಯ. ಈ ಹಿನ್ನೆಲೆಯಲ್ಲಿ ಸಂಶೋಧನೆ ಕೈಗೊಳ್ಳುವುದು ಅಗತ್ಯವಾಗಿದೆ. ಹಾಗೆಯೇ ಒಡೆಯರು, ದಿವಾನರು ತಮ್ಮ ಆಡಳಿತಾವಧಿಯಲ್ಲಿ ಕೈಗೊಂಡ ನಿರ್ಣಯಗಳು, ಸಮ್ಮೇಳನ, ಸಮಾವೇಶದಲ್ಲಿ ಮಾತನಾಡಿದ ವಿವರಗಳನ್ನು ರೆಕಾರ್ಡ್ ರೂಪದಲ್ಲಿ ಸಂಗ್ರಹಿಸಲಾಗಿದೆ. ಈ ಮಾದರಿಯಲ್ಲಿ ಸ್ಥಳೀಯ ಚರಿತ್ರೆಯ ಬಗೆಗೆ ಸಂಶೋಧನೆ ನಡೆಯಬೇಕಾಗಿದೆ. ಪ್ರಮುಖವಾಗಿ

ಬಿಡಿ ಬಿಡಿಯಾದ ತಾಲೂಕು ಗ್ಯಾಸೆಟಿಯರ್‌ಗಳ ರಚನೆಯಲ್ಲಿ ಆ ಪ್ರದೇಶಗಳ ಸ್ಥಳೀಯ ಜ್ಞಾನವನ್ನು ಪಡೆದ ಬರಹಗಾರರಿಗೆ ಅವಕಾಶ ನೀಡಿದರೆ ಹೆಚ್ಚಿನ ಮಾಹಿತಿಗಳು ದೊರೆಯುತ್ತವೆ. ಹಾಗೆಯೇ ಕೃತಿಗಳ ರಚನೆಯಲ್ಲಿ ಸ್ಥಳೀಯವಾಗಿ ಸಂಶೋಧನೆ ಆಗಬೇಕಾಗಿದೆ. ಅಧಿಕಾರದ ನೆರಳಿನಲ್ಲಿ ಆ ಪ್ರದೇಶಗಳ ಜ್ಞಾನವೇ ಇಲ್ಲದ ಬರಹಗಾರರಿಗೆ ಅವಕಾಶ ನೀಡಿದರೆ ಮಾಹಿತಿಗಳು ಕಣ್ಮರೆಯಾಗುತ್ತವೆ. ಇದರಿಂದ ತನ್ನ ಅಸ್ಮಿತೆಯನ್ನೇ ಕಳೆದುಕೊಳ್ಳುವಂತಾಗುತ್ತದೆ. ಈ ನಿಟ್ಟಿನಲ್ಲಿ ಸ್ಥಳೀಯ ಚರಿತ್ರೆಗೆ ಹೆಚ್ಚು ಒತ್ತನ್ನು ನೀಡಬೇಕು. ಈ ಮೌಖಿಕ ಆಕರಗಳ ಅಧ್ಯಯನದ ಮೂಲಕ ಚರಿತ್ರೆಯನ್ನು ಪುನರ್ ನಿರ್ಮಿಸುವ ಅನಿವಾರ್ಯತೆ ಪ್ರಸ್ತುತ ಸಂದರ್ಭದಲ್ಲಿದೆ. ಜನರ ಅಧ್ಯಯನದ ಮೂಲಕ ಚರಿತ್ರೆ ಕಟ್ಟುವಿಕೆಯ ಕಾರ್ಯ ಸಾಗಿ ವೈಭವೀಕೃತ ಚರಿತ್ರೆಯಲ್ಲಿ ಮರೆಯಾದ ಸಬಾಲ್ಟರ್ನ್ ಅಧ್ಯಯನದ ವಿಚಾರಗಳನ್ನು ಚರಿತ್ರೆಯ ಪುಟಗಳಲ್ಲಿ ದಾಖಲಿಸುವ ಪ್ರಯತ್ನಗಳಾಗಬೇಕು.

ಕುಶಲಕರ್ಮಿಗಳು, ವ್ಯಾಪಾರ ಚಟುವಟಿಕೆಗಳು, ಮಾರುಕಟ್ಟೆ ವ್ಯವಸ್ಥೆ ಮುಂತಾದವು ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದವು. ಈ ನೆಲೆಯಲ್ಲಿ ಅಧ್ಯಯನ ಸಾಗಬೇಕಾಗಿದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಜ್ಞಾನ ಮತ್ತು ಅಧಿಕಾರ ಯಾರ ಕೈಯಲ್ಲಿ ಇತ್ತು, ಹೇಗೆ ಬಳಸಿಕೊಂಡರು ಎಂಬುದು ಸಹ ಈ ಮಾದರಿಯ ಅಧ್ಯಯನದಲ್ಲಿ ಬಹುಮುಖ್ಯ

**ಫಲಿತಗಳು**

ಚರಿತ್ರೆ ಪುನಾರಚನೆಗೊಳ್ಳುತ್ತಿರುವ ಇಂದಿನ ಸಂದರ್ಭದ ಹಿನ್ನೆಲೆಯಲ್ಲಿ ಮೈಸೂರು ಒಡೆಯರ ಒಪ್ಪಿತ ಚರಿತ್ರೆ ಹೇಗೆ ಪ್ರಶ್ನೆಗೆ ಜನಮುಖಿಯಾದ ವಾದಕ್ಕೆ ಎಡೆ ಮಾಡಿಕೊಟ್ಟಿದೆ ಎಂಬುದನ್ನು ಗಂಭೀರವಾಗಿ ಗಮನಿಸಲಾಗಿದೆ.

ಮಾಹಿತಿ ಪ್ರಧಾನವಾಗಿ ಹಲವಾರು ಪ್ರಕಾರಗಳಲ್ಲಿ ರಚನೆಯಾದ ಸಿದ್ಧ ಮಾದರಿಯ ಕೃತಿಗಳು ಎಪ್ಪತ್ತರ ದಶಕದಿಂದ ಮೊದಲುಗೊಂಡು ಹೇಗೆ ಜನಮುಖಿಯಾಗುವ ಕೃತಿಗಳ ರಚನೆಗೆ ಪೂರಕವಾದವುಎಂಬ ವಿಷಯವನ್ನು ನಿಬಂಧದಲ್ಲಿ ಬಹು ಗಂಭೀರವಾಗಿಯೇ ಚರ್ಚೆಗೆ ಒಳಪಡಿಸಲಾಗಿದೆ ಹಾಗೂ ಚಾರಿತ್ರಿಕ ವಿಶ್ಲೇಷಣೆಯನ್ನು ಸೂಕ್ಷ್ಮವಾಗಿ ಗಮನಿಸುವಲ್ಲಿ ಸಫಲವಾಗಿದೆ.

ಮಾಹಿತಿ ಸಂಗ್ರಹಿಸುವುದರ ಜೊತೆಗೆ ಮೈಸೂರು ಒಡೆಯರ ಚರಿತ್ರೆಯನ್ನು ಜನಮುಖಿ ಯಾಗಿಸುವಲ್ಲಿ ಹೇಗೆ ಸಫಲವಾಗಿವೆ ಎಂಬುದರ ಮಾರ್ಗಸೂಚಿಯನ್ನು ಕಂಡುಕೊಳ್ಳಲಾಗಿದೆ. ವಸಾಹತುಶಾಹಿ ಆಡಳಿತದಲ್ಲಿ ಬ್ರಿಟಿಷರು ಪ್ರಭುತ್ವ ಸಾಧಿಸಿದ್ದು ಹಾಗೂ ದೌರ್ಜನ್ಯ ನಡೆಸಿದ್ದು ದೇಶಿ ದೌರ್ಬಲ್ಯಗಳಿಂದಾಗಿ ಎಂಬುದನ್ನು ಅನೇಕ ಕೃತಿಗಳಲ್ಲಿ ಗಮನಿಸಿರುವುದು ವಿಶೇಷವಾಗಿದೆ. ವಸಾಹತುಶಾಹಿ ಮತ್ತು ಪ್ರಭುತ್ವದ ಆಡಳಿತದ ಧೋರಣೆಗಳಿಗೆ ನೇರ ಪ್ರತಿಭಟನೆ ಮತ್ತು ಹೋರಾಟಗಳ ಹಲವು ಮಾದರಿಗಳನ್ನು ಇಲ್ಲಿನ ಅನೇಕ ಕೃತಿಗಳಲ್ಲಿ ಕಾಣಬಹುದಾಗಿದ್ದು, ಜನಮುಖಿ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಬ್ರಾಹ್ಮಣಕೇಂದ್ರಿತ ಅಧ್ಯಯನವೇ ನಡೆದ ಸಂದರ್ಭದಲ್ಲಿ ಸ್ವತಃ ಮಹಾರಾಜರನ್ನು ಸಂಪೂರ್ಣ ಕಡೆಗಣಿಸಿದ್ದ ಚಾರಿತ್ರಿಕ ಕೃತಿಗಳನ್ನು ಸಮಕಾಲೀನ ಸಂದರ್ಭದಲ್ಲಿ ಶಿಕ್ಷಣ ಪಡೆದ ದಲಿತ ಮತ್ತು

ಹಿಂದುಳಿದ ವರ್ಗಗಳು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಹಾಗೂ ಬ್ರಾಹ್ಮಣೇತರ ದಿವಾನರಾದ ಕಾಂತರಾಜ ಅರಸು, ಮಿರ್ಜಾ ಇಸ್ಮಾಯಿಲ್ ಅವರ ಸಮಾಜಮುಖಿ ಕೆಲಸ ಕಾರ್ಯಗಳ ಚಾರಿತ್ರಿಕ ಘಟನೆಗಳನ್ನು ವಿಶ್ಲೇಷಣಾತ್ಮಕ ಅಧ್ಯಯನಕ್ಕೆ ಒಳಪಡಿಸಿ ಎರಡಕ್ಕೂ ಒರೆ ಹಚ್ಚಿ ವಿಶ್ಲೇಷಣೆ ಮಾಡಲಾಗಿದೆ(ದಲಿತ ಶಿಕ್ಷಣಕ್ಕೆ ಒತ್ತು, ಮಿಲ್ಲರ್ ಕಮಿಟಿ ರಚನೆ, ಅರಮನೆ ಪ್ರವೇಶ, ಅಸ್ಪೃಶತಾ ನಿವಾರಣೆ, ಸಾಮಾಜಿಕ ಕಾನೂನುಗಳು ಇತ್ಯಾದಿ).

ಮೈಸೂರು ಸಂಸ್ಥಾನದಲ್ಲಿ ಪ್ರಮುಖ ಬದಲಾವಣೆಯ ಘಟ್ಟ ಬ್ರಾಹ್ಮಣೇತರ ಚಳವಳಿ. ಈ ಬ್ರಾಹ್ಮಣೇತರ ಚಳವಳಿಯ ಸಾಧಕ-ಬಾಧಕಗಳನ್ನು ಕುರಿತು ಸಂಶೋಧನಾತ್ಮಕವಾಗಿ ಹೊರಬಂದ ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಾಗೆಯೇ ಈ ಎಲ್ಲಾ ಅಧ್ಯಯನಗಳನ್ನು ಸಬಾಲ್ಟರ್ನ್ ದೃಷ್ಟಿಕೋನದ ಹಿನ್ನೆಲೆಯಲ್ಲಿ ಅಧ್ಯಯನಕ್ಕೆ ಒಳಪಡಿಸಲು ಮುಂದಾಗಿದೆ. ಅಂದರೆ ಮೈಸೂರು ಸಂಸ್ಥಾನದಲ್ಲಿ ಬ್ರಾಹ್ಮಣ ಸಮುದಾಯ ಬ್ರಾಹ್ಮಣೇತರ ಚಳವಳಿಯ ನಂತರ ನೇರವಾಗಿ ಹೋರಾಡಲು ಆಗದೇ ಪ್ರಭುತ್ವದ ವಿಶ್ವಾಸ ಗಳಿಸಲು ಮತ್ತು ಆಡಳಿತಾತ್ಮಕವಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ದಲಿತರ ಪ್ರಗತಿ ಕಾರ್ಯಗಳಿಗೆ ಮುಂದಾದುದ್ದನ್ನು ವಿಶ್ಲೇಷಣಾತ್ಮಕವಾಗಿ ತಿಳಿಸಲು ಪ್ರಯತ್ನಿಸಲಾಗಿದೆ(ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಕಾರ್ಯಗಳು). ಮುಖ್ಯವಾಗಿ ದಲಿತರಿಗೆ ಶಿಕ್ಷಣ ನೀಡಲು ಮುಂದಾದ ಕಾಲದಲ್ಲಿ ದಲಿತ ಶಿಕ್ಷಣದ ಪರ್ವಕಾಲವನ್ನು ಈ ಮಹಾಪ್ರಬಂಧದ ಫಲಿತಗಳಲ್ಲಿ ಗಮನಿಸಲಾಗಿದೆ.

ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಮೈಸೂರು ಸಂಸ್ಥಾನಕ್ಕೆ ಮಹಾತ್ಮ ಗಾಂಧೀಜಿ, ರಾಜಗೋಪಾಲಾಚಾರಿ, ಜವಹರಲಾಲ್ ನೆಹರು, ಸರ್ದಾರ ವಲ್ಲಭಬಾಯಿ ಪಟೇಲ್, ಖಾನ್ ಅಬ್ದುಲ್ ಗಫಾರ್‌ಖಾನ್ ಮುಂತಾದ ರಾಷ್ಟ್ರೀಯವಾದಿ ಮುಖಂಡರು ಮೈಸೂರು ಸಂಸ್ಥಾನದಲ್ಲಿ ಬಂದು ಪ್ರಚಾರ ಮಾಡಿದರು. ಗಾಂಧಿ ಅವರು ಪೂನಾ ಒಪ್ಪಂದದ ನಂತರ ಹರಿಜನರ ಉದ್ಧಾರಕ್ಕೆ ಸಂಪೂರ್ಣವಾಗಿ ತೊಡಗಿಸಿಕೊಂಡು ರಾಷ್ಟ್ರೀಯ ಚಳವಳಿಯ ಹಿನ್ನೆಲೆಯಲ್ಲಿ ಹೋರಾಟಕ್ಕೆ ಮುಂದಾದರು. ಆದರೆ ಅದಕ್ಕೂ ಮೊದಲೇ ಅಸ್ಪೃಶ್ಯರ ಉದ್ಧಾರಕ್ಕೆ ಹೋರಾಡುತ್ತಿದ್ದ ಡಾ.ಬಿ.ಆರ್. ಅಂಬೇಡ್ಕರ್ ಅವರನ್ನು ಯಾವ ಸಂದರ್ಭದಲ್ಲಿಯೂ ಮೈಸೂರು ಸಂಸ್ಥಾನಕ್ಕೆ ಪ್ರವೇಶ ಮಾಡಿಸಿಕೊಳ್ಳದೆ ಕೇವಲ ಗಾಂಧಿವಾದದ ಹಿನ್ನೆಲೆಯಲ್ಲಿಯೇ ದಲಿತ ಉದ್ಧಾರಕ್ಕೆ ಕಂಕಣ ತೊಟ್ಟಿದ್ದೇವೆ ಎಂದು ಹೇಳಿಕೊಂಡಿದ್ದ ಬ್ರಾಹ್ಮಣ ಹಾಗೂ ಬ್ರಾಹ್ಮಣೇತರರು ಸಾಮಾಜಿಕ, ಧಾರ್ಮಿಕ ಉದ್ದೇಶಗಳ ಸಾಧಕ-ಬಾಧಕಗಳನ್ನು ವಿಮರ್ಶಾತ್ಮಕವಾಗಿ ಈ ಮಹಾಪ್ರಬಂಧದಲ್ಲಿ ಅಧ್ಯಯನ ಮಾಡಲಾಗಿದೆ. ಒಟ್ಟಾರೆಯಾಗಿ ಮೈಸೂರು ಒಡೆಯರ ಚರಿತ್ರೆಲೇಖನಶಾಸ್ತ್ರದ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವಾಗ ಈ ಅಧ್ಯಯನದ ಮಿತಿಯಲ್ಲಿ ಗಮನಿಸಿದಂತೆ ಕೃತಿಗಳನ್ನು ಚರಿತ್ರೆಲೇಖನಶಾಸ್ತ್ರದ ಹಿನ್ನೆಲೆಯ ಚೌಕಟ್ಟಿನಲ್ಲಿ ವಿಮರ್ಶೆಗೆ ಒಳಪಡಿಸಿ ಫಲಿತಗಳನ್ನು ಗುರುತಿಸಲಾಗಿದೆ.

ಇಲ್ಲಿ ಸೂಕ್ಷ್ಮವಾಗಿ ಗಮನಿಸಿದಾಗ ಯಾರ ಪರವಾಗಿ ಬರೆದರೋ ಅವರಿಗೆ ಅಕ್ಷರ ಗೊತ್ತಿರುವುದಿಲ್ಲ. ಅದಕ್ಕಾಗಿ ಅವರು ಓದುವುದಿಲ್ಲ. ಯಾರ ವಿರುದ್ಧವಾಗಿ ಬರೆದರೋ ಅವರಿಗೆ ಅಕ್ಷರ ಗೊತ್ತಿದ್ದರೂ ಓದುವುದಕ್ಕೆ ಹೋಗುವುದಿಲ್ಲ. ಈ ಹಿನ್ನೆಲೆಯಲ್ಲಿ ಇಲ್ಲಿ ಮೇಲ್ವರ್ಗ ಮತ್ತು

ತಳಸಮುದಾಯಗಳ ಅಸ್ಮಿತೆಯ ಕೃತಿಗಳ ಭಿನ್ನತೆಯನ್ನು ಗುರುತಿಸಬಹುದು. ಅಂದರೆ ಕೃತಿಗಳಿಗೆ ಒಂದು ಚರಿತ್ರೆಯನ್ನು ಕಟ್ಟುವುದು ಯಾವಾಗಲೂ ತಮ್ಮ ಸಮಕಾಲೀನ ಅಪೇಕ್ಷೆ ಮತ್ತು ಸಾಮಾಜಿಕ ಒತ್ತಡಗಳ ಫಲವಾಗಿಯೇ. ಈ ಹಿನ್ನೆಲೆಯಲ್ಲಿ ಮೈಸೂರು ಒಡೆಯರ ಚರಿತ್ರೆಗೆ ಸಂಬಂಧಿಸಿದಂತೆ ಬರಹಗಾರರು ರಚಿಸಿದ ಅನೇಕ ರಾಷ್ಟ್ರೀಯವಾದಿ ಹಾಗೂ ಪ್ರಭುತ್ವ ಕೇಂದ್ರಿತ ಕೃತಿಗಳನ್ನು ಸಾಂದರ್ಭಿಕವಾಗಿ ವಿಶ್ಲೇಷಣೆಗೆ ಒಳಪಡಿಸಿ ಹೊಸದಾಗಿ ದೊರೆತ ಆಕರಗಳೊಂದಿಗೆ ಸ್ವಯಂ ಮೌಲ್ಯಮಾಪನ ಮತ್ತು ಮರುಚಿಂತನೆಗೆ ಒಳಪಡಿಸಿ ಕೃತಿಗಳನ್ನು ಹೊರ ತರುವುದು ಅಗತ್ಯವಾಗಿದೆ ಎಂಬ ಅಂಶವನ್ನು ಪ್ರಧಾನವಾಗಿಸಿಕೊಂಡು ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ.

# ಪರಾಮರ್ಶನ ಗ್ರಂಥಗಳು


**ಆಕರಗಳು**

**ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನದ ಕೃತಿಗಳು**

೧. ಅಲನ್ ನೆವಿಸ್, ೧೯೬೧, **ದಿ ಗೇಟ್ ವೇ ಟು ಹಿಸ್ಟರಿ**, ನ್ಯೂಯಾರ್ಕ್.

೨. ಎಡ್ವರ್ಡ್ ಸೈದ್, ೧೯೭೭, **ಓರಿಯಂಟಲಿಸಂ**, ಲಂಡನ್, ಪೆಂಗ್ವಿನ್.

೩. ಐಜಾಝ್ ಅಹ್ಮದ್(ಮೂಲ), ಪ್ರಕಾಶ್ ಕೆ.(ಕನ್ನಡಕ್ಕೆ), ೨೦೧೨, **ಆಧುನಿಕೋತ್ತರ ವಾದ(ಪೋಸ್ಟ್ ಮಾಡರ್ನಿಸಂ)**, ಚಿಂತನ ಪುಸ್ತಕ, ಬೆಂಗಳೂರು.

೪. ಕಾರ್ ಇ.ಎಚ್., ೧೯೬೧(ಮರುಮುದ್ರಣ ೨೦೦೧), **ವಾಟ್ ಈಸ್ ಹಿಸ್ಟರಿ**, ಮ್ಯಾಕ್ ಮಿಲನ್, ಲಂಡನ್.

೫. ಕಾಲಿಂಗ್‌ವುಡ್ ಆರ್.ಜಿ., ೧೯೯೩, **ದಿ ಐಡಿಯಾ ಆಫ್ ಹಿಸ್ಟರಿ**, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಯಾರ್ಕ್.

೬. ಕಿರಿತ್ ಕೆ. ಶಾಹ ಮೆಹರ್ ಜ್ಯೋತಿ ಸಾಂಗಲೆ(ಸಂ), ಸಿ.ಆರ್.ದಾಸ್(ಲೇ), ೨೦೦೫, **ಹಿಸ್ಟೋರಿಯೋಗ್ರಫಿ ಪಾಸ್ಟ್ ಅಂಡ್ ಪ್ರೆಸೆಂಟ್**, ಪೋಸ್ಟ್ ಮಾಡರ್ನಿಸಂ ಆ್ಯಂಡ್ ಹಿಸ್ಟ್ರಿ, ರಾಮ್ ಪಬ್ಲಿಕೇಷನ್ಸ್, ಜೈಪುರ.

೭. ಕೀತ್ ಜೆಂಕಿನ್ಸ್, ೧೯೯೧(ಮರುಮುದ್ರಣ ೨೦೦೩), **ರೀ-ಥಿಂಕಿಂಗ್ ಹಿಸ್ಟರಿ**, ರೂಟ್ಲೆಡ್ಜ್, ಲಂಡನ್.

೮. ಕುಪ್ಪಮ್ ಜಿ., ಕುಮುದಾಮಿನಿ ಕೆ., ೨೦೦೨, **ಮೆಥಡ್ಸ್ ಆಫ್ ಹಿಸ್ಟಾರಿಕಲ್ ರಿಸರ್ಚ್**, ಸಂದೀಪ್ ಪ್ರಕಾಶನ, ನ್ಯೂಡೆಲ್ಲಿ.

೯. ಕೊಸಾಂಬಿ ಡಿ.ಡಿ., ೧೯೬೨(ಮರುಮುದ್ರಣ ೨೦೦೮), **ಮಿಥ್ ಆ್ಯಂಡ್ ರಿಯಾಲಿಟಿ**, ಪಾಪ್ಯುಲರ್ ಪ್ರಕಾಶನ ಪ್ರೈ.ಲಿ. ಬಾಂಬೆ.

೧೦. ಕೊಸಾಂಬಿ ಡಿ.ಡಿ., ೧೯೭೫, **ಆ್ಯನ್ ಇನ್‌ಟ್ರಡಕ್ಷನ್ ಟು ದಿ ಸ್ಟಡೀ ಆಫ್ ಇಂಡಿಯನ್ ಹಿಸ್ಟರಿ**, ಪಾಪ್ಯುಲರ್ ಪ್ರಕಾಶನ, ಬಾಂಬೆ.

೧೧. ಕೊಸಾಂಬಿ ಡಿ.ಡಿ.(ಮೂಲ), ವೇಣುಗೋಪಾಲ್ ಟಿ.ಎಸ್., ಶೈಲಜಾ(ಕನ್ನಡಕ್ಕೆ), ೨೦೦೩ (ಪರಿಷ್ಕೃತ ಮುದ್ರಣ ೨೦೧೩), **ಪುರಾಣ ಮತ್ತು ವಾಸ್ತವ**, ಚಿಂತನ ಪುಸ್ತಕ, ಬೆಂಗಳೂರು.

೧೨. ಗಾಟಲಾಬ್ ಮೈಕಲ್(ಸಂ), ೨೦೦೩, **ಹಿಸ್ಟಾರಿಕಲ್ ಥಿಂಕಿಂಗ್ ಇನ್ ಸೌತ್ ಏಷಿಯಾ**, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ.

೧೩. ಗೋಪಾಲ ಬಾ.ರಾ., ೧೯೯೫, **ಇತಿಹಾಸಶಾಸ್ತ್ರ ಮತ್ತು ಸಿದ್ಧಾಂತ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೪. ಗೋಪಾಲ್ ಎಸ್. ಮತ್ತು ರೋಮಿಲಾ ಥಾಪರ್(ಸಂ), ೧೯೬೩, **ಪ್ರಾಬ್ಲಮ್ಸ್ ಆಫ್ ಹಿಸ್ಟಾರಿಕಲ್ ರೈಟಿಂಗ್ ಇನ್ ಇಂಡಿಯಾ**, ಇಂಡಿಯಾ ಇಂಟರ್ ನ್ಯಾಷನಲ್ ಸೆಂಟರ್, ನ್ಯೂಡೆಲ್ಲಿ.

೧೫. ಗೋವಿಂದರಾಜು ಸಿ.ಆರ್., ೨೦೦೯, **ನವಚಾರಿತ್ರಿಕವಾದ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೬. ಜೊನಾಥನ್ ಕುಲ್ಲರ್, ೧೯೮೨, **ಆನ್ ಡಿ–ಕನ್‌ಸ್ಟ್ರಕ್ಷನ್**, ರೂಟ್ಲೆಡ್ಜ್, ಲಂಡನ್.

೧೭. ಡೇವಿಡ್ ವುಡ್, ೧೯೭೯, **ಆನ್ ಇನ್‌ಟ್ರೊಡಕ್ಷನ್ ಟು ಡೆರಿಡಾ**, ರೆಡಿಕಲ್ ಫಿಲಾಸಫಿ ನಂ.೨೧, ಲಂಡನ್.

೧೮. ದೀಪೇಶ್ ಚಕ್ರವರ್ತಿ, ೨೦೦೬, **ಹೆಬಿಟೇಶನ್ಸ್ ಆಫ್ ಮಾಡರ್ನಿಟಿ–ಎಸ್ಸೇಸ್ ಇನ್ ದಿ ವೀಕ್ ಆಫ್ ಸಬಾಲ್ಟರ್ನ್ ಸ್ಟಡೀಸ್**, ಪರ್ಮನೆಂಟ್ ಬ್ಲ್ಯಾಕ್, ದೆಹಲಿ.

೧೯. ದೇಸಾಯಿ ಎ.ಆರ್., ೧೯೭೯, **ಪ್ರೆಸೆಂಟ್ ಸ್ಟ್ರಗಲ್ಸ್ ಇನ್ ಇಂಡಿಯಾ**, ನ್ಯೂ ಡೆಲ್ಲಿ.

೨೦. ಪಾಮೆದತ್ ಆರ್., ೧೯೪೧, **ಇಂಡಿಯಾ ಟುಡೆ**, ಮನಿಶ ಗ್ರಂಥಾಲಯ ಪ್ರೈ. ಲಿ. ಕಲ್ಕತ್ತಾ.

೨೧. ಫಣಿರಾಜ್ ಕೆ., ೨೦೦೩, **ಅಂಟೋನಿಯೋ ಗ್ರಾಮ್ಷಿ**, ಜಿ., ರಾಜಶೇಖರ್(ಪ್ರಧಾನ ಸಂಪಾದಕರು), ಬೆಂಗಳೂರು: ಶತಮಾನ ಚಿಂತನೆ.

೨೨. ಬರ್ಕ್ ಪೀಟರ್ಸ್, ೧೯೯೨(ಮರುಮುದ್ರಣ ೨೦೦೦), **ಹಿಸ್ಟರಿ ಆ್ಯಂಡ್ ಸೋಶಿಯಲ್ ಥಿಯರಿ**, ಪಾಲಿಟಿ ಪ್ರೆಸ್, ಕೇಂಬ್ರಿಡ್ಜ್, ಯು.ಕೆ.

೨೩. ಬಾರ್ಕೂರು ಉದಯ, ೨೦೧೦, **ಸಾಮ್ರಾಜ್ಯಶಾಹಿ: ಚಿಂತನೆಗಳು ಮತ್ತು ಸಿದ್ಧಾಂತಗಳು**, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳೂರು.

೨೪. ಬಾರ್ಕೂರು ಉದಯ, ೨೦೧೨, **ವಾಸ್ತವದ ಒಡಕುಗಳು, ಇತಿಹಾಸ ತೊಡಕುಗಳು**, ಚಿಂತನ ಪುಸ್ತಕ, ಬೆಂಗಳೂರು.

೨೫. ಬಾಲಗೋಪಾಲ್ ಕೆ.(ಮೂಲ), ಶ್ರೀಮತಿ ಎಚ್.ಎಸ್.(ಕನ್ನಡಕ್ಕೆ) ೧೯೮೮(ಎರಡನೇ ಮುದ್ರಣ ೨೦೧೨), **ಪ್ರಾಚೀನ ಭಾರತದ ಚರಿತ್ರೆ ಡಿ.ಡಿ.ಕೊಸಾಂಬಿಯವರ ಚಿಂತನೆಗಳು**, ಪ್ರಗತಿ ಗ್ರಾಫಿಕ್ಸ್, ಬೆಂಗಳೂರು.

೨೬. ಬಿಪನ್ ಚಂದ್ರ, ೧೯೭೧, **ಮಾಡರ್ನ್ ಇಂಡಿಯಾ: ಎ ಟೆಕ್ಸಟ್ ಬುಕ್ ಆಫ್ ಹಿಸ್ಟರಿ ಫಾರ್ ಸೆಂಕೆಡರಿ ಸ್ಕೂಲ್ಸ್**, ನ್ಯೂ ಡೆಲ್ಲಿ.

೨೭. ಬಿಪನ್ ಚಂದ್ರ, ೧೯೮೮೪, **ಕಮ್ಯುನಲಿಸಂ ಇನ್ ಮಾಡರ್ನ್ ಇಂಡಿಯಾ**, ವಿಕಾಸ್ ಪಬ್ಲಿಷಿಂಗ್ ಹೌಸ್, ನ್ಯೂಡೆಲ್ಲಿ.

೨೮. ಬಿಪನ್ ಚಂದ್ರ, ೧೯೮೯, **ಇಂಡಿಯಾಸ್ ಸ್ಟ್ರಗಲ್ ಫಾರ್ ಇಂಡಿಪೆಂಡೆನ್ಸ್**, ಪೆಂಗ್ವಿನ್, ನ್ಯೂಡೆಲ್ಲಿ.

೨೯. ಬಿಪನ್ ಚಂದ್ರ, ೧೯೯೯, **ಇಂಡಿಯಾ ಆಫ್ಟರ್ ಇಂಡಿಪೆಂಡೆಯನ್ಸ್**, ವೈಕಿಂಗ್ ಪಬ್ಲಿಷಿಂಗ್, ನ್ಯೂಡೆಲ್ಲಿ.

೩೦. ಬಿಪನ್ ಚಂದ್ರ (ಮೂಲ), ಗೋಪಾಲರಾವ್ ಎಚ್.ಎಸ್.(ಕನ್ನಡಕ್ಕೆ), ೨೦೧೨, **ಆಧುನಿಕ ಭಾರತದ ಇತಿಹಾಸ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೩೧. ಜೆಂಕಿನ್ಸ್ ರೇಥ್, ೧೯೯೫, **ಅನ್ ವಾಟ್ ಈಸ್ ಹಿಸ್ಟರಿ? ಫ್ರಮ್ ಕಾರ್ ಆ್ಯಂಡ್ ಎಲ್ಟನ್ ಟು ರೋರ್ಟಿ ಆ್ಯಂಡ್ ವೈಟ್**, ರೂಟ್‌ಲೆಡ್ಜ್, ಲಂಡನ್.

೩೨. ಜೆಂಕಿನ್ಸ್ ರೇಥ್, ೧೯೯೯, **ವೈ ಹಿಸ್ಟರಿ? ಎಥಿಕ್ಸ್ ಆ್ಯಂಡ್ ಪೋಸ್ಟ್ ಮಾಡರ್ನ್‌ನಿಟಿ**, ರೂಟ್‌ಲೆಡ್ಜ್, ಲಂಡನ್.

೩೩. ಮಜುಂದಾರ್ ಆರ್,ಸಿ. ೧೯೬೯, **ದಿ ಹಿಸ್ಟರಿ ಆ್ಯಂಡ್ ಕಲ್ಚರ್ ಆಫ್ ದಿ ಇಂಡಿಯನ್ ಪೀಪಲ್; ಸ್ಟ್ರಗಲ್ ಪಾರ್ ಫ್ರೀಡಂ**, ಬಾಂಬೆ.

೩೪. ಮಜುಂದಾರ್ ಆರ್.ಸಿ., ೧೯೭೦, ಹಿಸ್ಟೋರಿಯೋಗ್ರಫಿ ಇನ್ ಮಾಡರ್ನ್ ಇಂಡಿಯಾ, ಏಶಿಯಾ ಪಬ್ಲಿಷಿಂಗ್ ಹೌಸ್, ಬಾಂಬೆ.

೩೫. ಮಾಧವ ಪೆರಾಜೆ, ೨೦೦೩, **ಡೆರಿಡಾ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೩೬. ಮೂರ್ವಿಕ್ ಆರ್ಥರ್, ೧೯೭೧, **ದಿ ನೇಚರ್ ಆಫ್ ಹಿಸ್ಟರಿ**, ಮ್ಯಾಕ್‌ಮಿಲನ್, ಲಂಡನ್.

೩೭. ಮೊಗಳ್ಳಿ ಗಣೇಶ್, ೨೦೦೯, **ಅವ್ಯಕ್ತ ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೮. ಮೋಹನ್‌ಕೃಷ್ಣ ರೈ ಕೆ., ೨೦೦೪, **ಪ್ರಭುತ್ವ ಮತ್ತು ಜನತೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩೯. ಮೋಹನ್‌ಕೃಷ್ಣ ರೈ ಕೆ., ೨೦೦೯, **ಚರಿತ್ರೆ ಕಥನ**, ಪಲ್ಲವ ಪ್ರಕಾಶನ, ಬಳ್ಳಾರಿ.

೪೦. ರೇಮಂಡ್ ವಿಲಿಯಮ್ಸ್, ೧೯೯೨, **ಮಾಡರ್ನ್ ಟ್ರಾಜಿಡೆ**, ದಿ ಹೊರಗತ್ ಪ್ರೆಸ್, ಲಂಡನ್.

೪೧. ರಣಜಿತ್ ಗುಹಾ(ಸಂ), ೧೯೮೧, **ಸಬಾಲ್ಟರ್ನ್ ಸ್ಟಡೀಸ್ ಸಂಪುಟ-೧**, ರೈಟಿಂಗ್ ಆನ್ ಸೌತ್ ಏಶಿಯನ್ ಹಿಸ್ಟರಿ, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ.

೪೨. ರಣಜಿತ್ ಗುಹಾ, ೧೯೮೩, **ಎಲಿಮೆಂಟರಿ ಆಸ್ಪೆಕ್ಟ್ಸ್ ಆಫ್ ಪೆಸೆಂಟ್ ಇನಸರ್‌ಜೆನ್ಸಿ ಇನ್ ಕಲೋನಿಯಲ್ ಇಂಡಿಯಾ**, ಆಕ್ಸಫರ್ಡ್ ಯೂನಿವರ್ಸಿಟಿ ಪ್ರೆಸ್, ನ್ಯೂಡೆಲ್ಲಿ.

೪೩. ರಣಜಿತ್ ಗುಹಾ, ೧೯೮೮, **ಆನ್ ಇಂಡಿಯನ್ ಹಿಸ್ಟೋರಿಯೋಗ್ರಫಿ ಆಫ್ ಇಂಡಿಯಾ: ಎ ನೈಂಟೀನ್ತ್-ಸೆಂಚುರಿ ಅಜೆಂಡಾ ಆ್ಯಂಡ್ ಇಟ್ಸ್ ಇಂಪ್ಲಿಕೇಷನ್ಸ್**, ಕೆ.ಪಿ.ಬಾಗ್ಚಿ ಆ್ಯಂಡ್ ಕಂಪನಿ, ನವದೆಹಲಿ.

೪೪. ರಾಜಾರಾಮ ಹೆಗಡೆ, ೨೦೦೪, **ಭಾರತೀಯ ಇತಿಹಾಸ, ಸಮಾಜ ಮತ್ತು ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೫. ರಾಬರ್ಟ್ ಜೋನ್ಸ್ ಶೇಫರ್(ಸಂ), ೧೯೬೧, **ಎ ಗೈಡ್ ಟು ಹಿಸ್ಟಾರಿಕಲ್ ಮೆಥೆಡ್**, **ದಿ ಡೋರ್‌ಸೆ ಪ್ರೆಸ್**, ಇಲಿನಾಯ್ಸ್.

೪೬. ರಾಮಚಂದ್ರನ್ ಸಿ.ಎನ್., ೨೦೦೨, **ವಸಾಹತೋತ್ತರ ಚಿಂತನೆ**, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪೭. ರಾಮಚಂದ್ರನ್ ಸಿ.ಎನ್. ೨೦೦೩, **ಎಡ್ವರ್ಡ್ ಸೈದ್**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪೮. ರೋಮಿಲಾ ಥಾಪರ್, ಹರ್ಬನ್ಸ್ ಮುಖಿಯಾ, ಬಿಪನ್ ಚಂದ್ರ(ಸಂ), **ಕಮ್ಯುನಲಿಸಂ ಆ್ಯಂಡ್ ದ ರೈಟಿಂಗ್ ಆಫ್ ಇಂಡಿಯನ್ ಹಿಸ್ಟರಿ**, ನ್ಯೂಡೆಲ್ಲಿ.

೪೯. ರೋಮಿಲಾ ಥಾಪರ್, ಹರ್ಬನ್ಸ್ ಮುಖಿಯ ಮತ್ತು ಬಿಪನ್ ಚಂದ್ರ(ಮೂಲ), ಗೋಪಾಲಕೃಷ್ಣ ರಾವ್ ಕೆ.ಎಲ್.(ಕನ್ನಡಕ್ಕೆ), ೧೯೯೫ (ಮೂರನೇ ಮುದ್ರಣ ೨೦೧೦), **ಕೋಮುವಾದ ಹಾಗೂ ಭಾರತೀಯ ಇತಿಹಾಸ ಲೇಖನ**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೦. ರೋಮಿಲಾ ಥಾಪರ್, ೧೯೯೭, **ಟೈಮ್ ಆ್ಯಸ್ ಎ ಮೆಟಾಫರ್ ಆಫ್ ಹಿಸ್ಟರಿ-ಅರ್ಲಿ ಇಂಡಿಯಾ**, ಆಕ್ಸ್‌ಫರ್ಡ್ ಇಂಡಿಯಾ ಪ್ರೆಸ್, ದೆಹಲಿ.

೫೧. ವಸಂತರಾಜ ಎನ್.ಕೆ., ೨೦೧೦, **ಡಿ.ಡಿ.ಕೊಸಾಂಬಿ ನಿಮಗೆ ತಿಳಿದಿರಲಿ**, ಚಿಂತನ ಪುಸ್ತಕ, ಬೆಂಗಳೂರು.

೫೨. ವಿಜಯ್ ಪೂಣಚ್ಚ ತಂಬಂಡ, ೨೦೦೪, **ಪಳಮೆ: ಮೌಖಿಕ ಆಕರಗಳು ಕಟ್ಟಿಕೊಡುವ ಕನ್ನಡ-ಕೊಡಗು-ತುಳುನಾಡಿನ ಅಧ್ಯಯನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೩. ವಿಜಯ್ ಪೂಣಚ್ಚ ತಂಬಂಡ(ಪ್ರ.ಸಂ.), ವಿಜಯ್ ಪೂಣಚ್ಚ ತಂಬಂಡ, ವಿರೂಪಾಕ್ಷಿ ಪೂಜಾರಹಳ್ಳಿ(ಸಂ.ಸಂ.), ೨೦೧೦, **ಚರಿತ್ರೆ ಬರವಣಿಗೆ ಕ್ರಮಗಳು ಮತ್ತು ಸಂಶೋಧನಾ ವಿಧಾನ**, ಚರಿತ್ರೆ ಸಂಪುಟ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೫೪. ವೆಂಕಟರತ್ನಂ ಎ.ವಿ., ಪದ್ಮ ಎಂ.ಬಿ., ೧೯೮೫(ಮರುಮುದ್ರಣ ೨೦೦೩), **ಇತಿಹಾಸ ಸಂಶೋಧನಾ ಮಾರ್ಗ**, ಬೆಂಗಳೂರು ಪ್ರೆಸ್, ಬೆಂಗಳೂರು.

೫೫. ಶರ್ಮ ಆರ್.ಎಸ್.(ಮೂಲ), ಶ್ರೀನಿವಾಸಮೂರ್ತಿ ಜೆ., ಶೋಭ ಆರ್., ಗುರುದತ್ ಎಸ್., ರಾಮಕೃಷ್ಣ ಜಿ.(ಅನು), ೨೦೦೪, (ನಾಲ್ಕನೇ ಮುದ್ರಣ-೨೦೧೨), **ಪ್ರಾಚೀನ ಭಾರತದಲ್ಲಿ ಶೂದ್ರರು**, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೫೬. ಶ್ರೀಧರನ್ ಈ., ೨೦೦೪, **ಎ ಟೆಕ್ಸ್ಟ್ ಬುಕ್ ಆಫ್ ಹಿಸ್ಟೋರಿಯೋಗ್ರಫಿ**(ಕ್ರಿ.ಪೂ.೫೦೦ ರಿಂದ ಕ್ರಿ.ಶ.೨೦೦೦), ಓರಿಯಂಟ್ ಲಾಂಗ್‌ಮನ್, ನ್ಯೂಡೆಲ್ಲಿ.

೫೭. ಶ್ರೀನಿವಾಸಮೂರ್ತಿ ಎಚ್.ವಿ., ೨೦೦೦, **ಇತಿಹಾಸ ಸಂಶೋಧನಾ ಸಮೀಕ್ಷೆ**, ಪದ್ಮ ಪ್ರಕಾಶನ, ಬೆಂಗಳೂರು.

೫೮. ಶೆಲ್ಲಿ ವಾಲಿಯಾ, ೨೦೦೧, **ಎಡ್ವರ್ಡ್ ಸೈದ್: ಆ್ಯಂಡ್ ದಿ ರೈಟಿಂಗ್ ಆಫ್ ಹಿಸ್ಟರಿ**, ರೂಟ್ಲೆಡ್ಜ್, ಲಂಡನ್.

೫೯. ಶೆಲ್ಲಿ ವಾಲಿಯಾ(ಮೂಲ), ರಾಮಲಿಂಗಪ್ಪ ಟಿ.ಬೇಗೂರು(ಕನ್ನಡಕ್ಕೆ), ೨೦೦೯, **ಎಡ್ವರ್ಡ್ ಡಬ್ಲ್ಯು ಸೈದ್–ಎಡ್ವರ್ಡ್ ಸೈದ್ ಮತ್ತು ಆತನ ಇತಿಹಾಸದ ಬರವಣಿಗೆ**, ಚಂದ್ರಗಿರಿ ಪ್ರತಿಷ್ಠಾನ, ಬೆಂಗಳೂರು.

೬೦. ಷೇಕ್ ಅಲಿ ಬಿ., ೧೯೭೮(ಎರಡನೇ ಆವೃತ್ತಿ, ಮರುಮುದ್ರಣ ೨೦೦೧), **ಹಿಸ್ಟರಿ: ಇಟ್ಸ್ ಥಿಯರಿ ಆ್ಯಂಡ್ ಮೆಥೆಡ್**, ಮ್ಯಾಕ್‌ಮಿಲನ್, ನವದೆಹಲಿ.

೬೧. ಸುಮಿತ್ ಸರ್ಕಾರ್, ೧೯೮೩, **ಮಾಡರ್ನ್ ಇಂಡಿಯಾ ೧೮೮೫–೧೯೪೭**, ನ್ಯೂ ಡೆಲ್ಲಿ.

೬೨. ಸುಮಿತ್ ಸರ್ಕಾರ್, ೧೯೮೯, **ಮಾಡರ್ನ್ ಇಂಡಿಯಾ**, ೧೮೮೫–೧೯೪೭, ಮ್ಯಾಕ್‌ಮಿಲನ್, ಲಂಡನ್.

೬೩. ಸುರೇಂದ್ರರಾವ್ ಬಿ., ೨೦೦೫, **ಸಮಾಜ ಮತ್ತು ಚರಿತ್ರೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬೪. ಸುರೇಂದ್ರರಾವ್ ಬಿ., ೨೦೧೦, **ಹಿಸ್ಟರಿ ಆ್ಯಸ್ ಹಿಸ್ಟೋರಿಯೋಗ್ರಫಿ**, ಐ.ಸಿ.ಎಚ್.ಆರ್. ಪ್ರಾದೇಶಿಕ ಕಚೇರಿ, ಬೆಂಗಳೂರು.

೬೫. ಸೂರ್ಯನಾಥ ಯು. ಕಾಮತ್(ಸಂ), ೧೯೯೧, **ಹಿಸ್ಟೋರಿಯೋಗ್ರಫಿ ಆಫ್ ಕರ್ನಾಟಕ**, ಮಿಥಿಕ್ ಸೊಸೈಟಿ, ಬೆಂಗಳೂರು.

೬೬. ಸ್ಟೀಫನ್ ಗ್ರೀನ್ ಬ್ಲಾಟ್, ೧೯೯೦, **ಲರ್ನಿಂಗ್ ಟು ಕರ್ಸ್: ಎಸ್ಸೇಸ್ ಇನ್ ಅರ್ಲಿ ಮಾಡರ್ನ್ ಕಲ್ಚರ್**, ರೂಟ್ಲೆಡ್ಜ್, ಲಂಡನ್.

೬೭. ಹೈಡೆನ್ ವೈಟ್, ೧೯೭೩(ಮರುಮುದ್ರಣ ೧೯೮೭), **ಮೆಟಾ ಹಿಸ್ಟರಿ: ದಿ ಹಿಸ್ಟಾರಿಕಲ್ ಇಮಾಜಿನೇಷನ್ ಇನ್ ನೈಂಟೀನ್ತ್ ಸೆಂಚುರಿ**, ಯೂರೋಪ್, ಬ್ಲಾಟಿಮೋರ್.

೬೮. ಹೋಮರ್ ಸಿ. ಹಾಕೆಟ್, ೧೯೫೫, **ದಿ ಕ್ರಿಟಿಕಲ್ ಮೆಥಡ್ ಇನ್ ಹಿಸ್ಟಾರಿಕಲ್ ರಿಸರ್ಚ್ ಆ್ಯಂಡ್ ರೈಟಿಂಗ್**, ನ್ಯೂಯಾರ್ಕ್.

**ಪ್ರಾಥಮಿಕ ಆಕರಗಳು**

**ಕಡತಗಳು**

೬೯. ಅರಮನೆ ಕಂಟ್ರೋಲರ್ಸ್ ಆಫೀಸ್ ಮತ್ತು ಪ್ಯಾಲೇಸ್ ಆಫೀಸ್ ಕಡತಗಳು(೧೮೬೮–೧೯೬೦).

೭೦. ಆನರ್ಸ್ ಇಲಾಖೆ ಕಡತಗಳು (೧೮೫೦–೧೯೫೬).

೭೧. ಕರೋಹಟ್ಟಿ ಇಲಾಖೆ ಕಡತಗಳು (೧೯೦೬–೧೯೨೨).

೭೨. ಗೇಮ್ಸ್ ಅಂಡ್ ಟೈಗರ್ಸ್ ಪ್ರಿಸರ್ವ್ಸ್ ಇಲಾಖೆ ಕಡತಗಳು (೧೯೨೦–೧೯೫೪).

೭೩. ಚಾಮುಂಡಿ ತೊಟ್ಟಿ ಇಲಾಖೆ ಕಡತಗಳು (೧೮೬೪–೧೯೫೨).

೭೪. ಟೂರ್ಸ್ ಇಲಾಖೆ ಕಡತಗಳು.

೭೫. ಡೊನೇಷನ್ಸ್ ಇಲಾಖೆ ಕಡತಗಳು(೧೮೫೦–೧೯೫೬).

೭೬. ಪ್ಯಾಲೇಸ್ ಎಸ್ಟೇಟ್ಸ್ ಆ್ಯಂಡ್ ಗಾರ್ಡನ್ ಇಲಾಖೆ ಕಡತಗಳು(೧೯೦೪–೧೯೫೬).

೭೭. ಪ್ಯಾಲೇಸ್ ಮರಾಮತ್ ಇಲಾಖೆ ಕಡತಗಳು(೧೮೭೬–೧೯೬೧).

೭೮. ಲೆಜಿಸ್ಲೆಟೀವ್ ಅಸೆಂಬ್ಲಿ ಕಡತಗಳು.

೭೯. ಸ್ಕೀಮ್ ಫಾರ್ ಎನ್‌ಕರೇಜಿಂಗ್ ಎಜುಕೇಷನ್ ಅಮಾಂಗ್ ದಿ ಡಿಪ್ರೆಸ್ಡ್ ಕ್ಲಾಸಸ್‌ಗೆ ಸಂಬಂಧಿಸಿದ ಕಡತಗಳು.

೮೦. ಹೋಬಳಿ ಆಡಳಿತ ಇಲಾಖೆ ಕಡತಗಳು(೧೮೭೯–೧೯೫೭).

೮೧. ಅಗ್ರಿಕಲ್ಚರ್ ಅಂಡ್ ಇಂಡಸ್ಟ್ರೀ–ಫೈಲ್ ಎನ್‌ಒಸ್. ೫೬: ಎಸ್‌ಎಲ್.ನಂ.೧. ೩. ೭. ೨೨. ೨೯–೩೫–೧೯೧೫.

೮೨. ಅಗ್ರಿಕಲ್ಚರ್, ಅಡ್ಮಿನಿಷ್ಟ್ರೇಷನ್ ಆಫ್ ಲ್ಯಾಂಡ್ಸ್, ವಿಲೇಜ್ ಪಂಚಾಯಿತಿ, ಪಬ್ಲಿಕ್ ಇನ್‌ಸ್ಟ್ರಕ್ಷನ್ ಕಡತಗಳು.

೮೩. ಇಂಡಸ್ಟ್ರಿ ಆ್ಯಂಡ್ ಕಾಮರ್ಸ್–ಫೈಲ್ ನಂ. ೧೨೮ ಎಸ್‌ಎಲ್.ನಂ. ೧೪. ೧೬. ೧೯.–೨೧–೧೯೧೮.

೮೪. ಎಜುಕೇಷನ್–ಫೈಲ್–ನಂ. ೪೫೪–೧೩–ಎನ್‌ಒಸ್ ೧ ಟು ೭ ೧೯೧೩–೧೪.

೮೫. ಎಜುಕೇಷನ್–ಫೈಲ್–ನಂ.೧೦೬–ಎಸ್‌ಎಲ್.ಎನ್‌ಒಸ್ ೧ ಟು ೪: ೯ ಟು ೧೦.೧೯೧೭.

೮೬ ಎಜುಕೇಷನ್–ಫೈಲ್–ನಂ.೨೯೪–೧೮. ಎಸ್‌ಎಲ್.ಎನ್‌ಒಸ್. ೩೦. ೩೩. ೩೮. ೮೬–೧೯೧೮.

೮೭ ದಿವಾನ್ ಅಫೀಸ್ ಫೈಲ್ ೧೯೧೭–ಎಸ್‌ಎಲ್.ಎನ್‌ಒಸ್ ೧೨೮.

೮೮. ಮುನ್ಸಿಪಾಲ್ ಫೈಲ್ ನಂ. ೮೩–೧೬ ಎಸ್‌ಎಲ್.ಎನ್‌ಒಸ್. ೧ ಎನ್‌ಒಸ್. ೧ ಟು ೬.೧೯೧೬

**ದಾಖಲೆಗಳು(ವರದಿ)**

೮೯. ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರು ರಿಪೋರ್ಟ್ಸ್ ೧೮೬೨–೧೯೫೬.

೯೦. ಎ ಗೈಡ್ ಟು ದಿ ರೆಕಾರ್ಡ್ಸ್ ಇನ್ ದಿ ಡಿವಿಜನಲ್ ಅರ್ಕೈವ್ಸ್.

೯೧. ಗೆಜೆಟ್ಸ್‌ಗಳು.

